# ಶ್ರೀ ಪಂಜೆಯವರ ನೆನಪಿಗಾಗಿ

ಸಂಪಾದಕರು:-

ಎಮ್. ಗೋವಿಂದ ಪೈ.
ವೀ. ಸೀತಾರಾಮಯ್ಯ.
ಶಿವರಾಮ ಕಾರಂತ.

೧೯೫೨

ಪ್ರಕಾಶಕರು:-

[ಪಂಜೆ ಸ್ಮಾರಕಗ್ರಂಥ ಸಮಿತಿಗಾಗಿ]

ಹರ್ಷ ಮುದ್ರಣ, ಪ್ರಕಟಣಾಲಯ, ಪುತ್ತೂರು. ದ. ಕ.

# ಅಳಿಲ ಭಕ್ತಿ

ನಮ್ಮೆಲ್ಲರಿಗೆ ಹಿರಿಯರೂ, ಪೂಜ್ಯರೂ, ದಕ್ಷಿಣ ಕನ್ನಡ ಜಿಲ್ಲೆಯ ಸಾಹಿತ್ಯಕ್ಷೇತ್ರದಲ್ಲಿ ಮಾರ್ಗದರ್ಶಕರೂ ಆದ ಶ್ರೀಮಾನ್ ಪಂಜೆ ಮಂಗೇಶರಾಯರ ನೆನಪನ್ನು ಒಂದು ಗ್ರಂಥರೂಪದಲ್ಲಿ ಉಳಿಸಬೇಕೆಂಬ ನಮ್ಮ ಆಕಾಂಕ್ಷೆ ಇಂದು ಸಫಲ ವಾಯಿತು. ಅವರು ನಿಧನರಾಗಿ ಹದಿನಾಲ್ಕು ವರ್ಷಗಳೇ ಸಂದಿವೆ. ಎಂದೋ ಅರ್ಪಿಸಬೇಕಾಗಿದ್ದ ಈ ಕಾಣಿಕೆಯನ್ನು ಇಂದು ಸಲಿಸುತ್ತಿದ್ದೇವೆ. ಹಿಂದೆ ಎರಡೆರಡು ಬಾರಿ ಇಂಥೊಂದು ಸ್ಮಾರಕ ಗ್ರಂಥವನ್ನು ತರುವ ಪ್ರಯತ್ನವು ವಿಫಲವಾಗಿ, ಬರಿಯ ಆಸೆಯೊಂದೇ ಉಳಿದಿತ್ತು. ನಮ್ಮ ಆಸೆಗೆ ಶ್ರೀ ಪಂಜೆಯವರ ಸುಪುತ್ರರಾದ ಶ್ರೀ ಗೋಪಾಲರಾಯರೂ, ಶ್ರೀ ರಾಮರಾಯರೂ ಬೆಂಬಲಕೊಡಲು ಮುಂದಾದರೂ, ಸಮನಾದ ಕಾಲ ಒದಗದೆಯೆ ಆ ಕನಸು ದೂರವಾಗಿಯೆ ಉಳಿಯಿತು. ಅಂತು ಕಳೆದ 1950ರ ಸಪ್ಟಂಬರದಲ್ಲಿ ನಾವು ಮೂವರು ಧೈರ್ಯವಾಗಿ ಈ ಸಾಹಸಕ್ಕೆ ತೊಡಗಿದೆವು. ಒಂದು ವರ್ಷವೇ ಸಂದಿತು. ಕರ್ಣಾಟಕದ ಅನೇಕ ಸಾಹಿತಿಗಳಲ್ಲಿ, ಶ್ರೀಮಾನರ ಶಿಷ್ಯರಲ್ಲಿ, ಗೆಳೆಯರಲ್ಲಿ ಸಹಕಾರವನ್ನು ಬೇಡಿದೆವು. ಕಾಲ ಸರಿಯಿತೇ ಹೊರತು ಬೇಕಾದ ಸಹಾಯ ಸಾಕಷ್ಟು ಒದಗಲಿಲ್ಲ. ಕೆಲವಾರು ಅಡಚಣೆ, ನಿರುತ್ಸಾಹದ ಮಾತುಗಳೂ ಬಂದುವು. ಆದರೂ ನಾವು ಕೈಕೊಂಡ ಕೆಲಸವನ್ನು ನಡೆಸುತ್ತೇವೆಂದೇ ಹೊರಟೆವು. ಅವರ ಮಿತ್ರರೂ ಅಭಿಮಾನಿಗಳೂ ಆದ ಹಲವು ಮಹನೀಯರು ನಮ್ಮ ಹಲವಾರು ಪತ್ರಗಳನ್ನು ಉತ್ತರಿಸದೆಯೂ ಹೋದರು. ಅನೇಕರಿಂದ ಬರಿಯ ವಚನ ಸಹಾನುಭೂತಿ ಮಾತ್ರ ದೊರಕಿತು. ಆ ಬಗೆಯ ಔದಾಸೀನ್ಯ ನಮ್ಮೆಲ್ಲರಿಗೂ ಪ್ರಿಯರಾದೊಬ್ಬ ವ್ಯಕ್ತಿಗಳ ವಿಚಾರದಲ್ಲಿ ಬಂದೀತೆಂದು ನಾವೆಣಿಸಿರ ಲಿಲ್ಲ. ಕಣ್ಣಿಂದ ದೂರಾದುದು ಮನದಿಂದಲೂ ದೂರವೇ ಎಂಬ ನಾಣ್ಣುಡಿಯ ನೆನಪಾಗುವಂತಾಯಿತು.

ಆದರೆ ಎಷ್ಟು ಸಹಕಾರ ಬಂದಿತೋ ಅಷ್ಟರಿಂದಲೇ ತೃಪ್ತರಾಗಿ ಮುದ್ರಣದ ಕೆಲಸವನ್ನು ತೊಡಗಿದೆವು. ನಮ್ಮ ಮಿತ್ರರಾದ ಶ್ರೀ ಹುರುಳಿ ಭೀಮರಾಯರು ತಮ್ಮ ಸಂಗ್ರಹದಲ್ಲಿದ್ದ ಅನೇಕ ಲೇಖನಗಳನ್ನು ಒದಗಿಸಿದರು. ಶ್ರೀ ಬಿ. ಶಂಕರ ಭಟ್ಟರು ಅನೇಕ ಲೇಖನ, ಕವನಗಳನ್ನಾರಿಸಿ, ಪ್ರತಿ ತೆಗೆದುಕೊಟ್ಟು ಇಲ್ಲಿ ಪ್ರಕಟವಾದ ಪಂಜೆಯವರ ಬರವಣಿಗೆಗಳ ಸಂಗ್ರಹಕ್ಕೆ ನೆರವಾದರು. ಮಂಗಳೂರಿನ ಬಾಸೆಲ್ ಮಿಷನ್ ಪುಸ್ತಕಾಲಯದವರು ಬಹು ಹಿಂದಿನಿಂದಲೂ ಪಂಜೆಯವರ ಸಾಹಿತ್ಯ ಸೇವೆಗೆ ನೆರವಾದವರು. ಈ ಸಂಗ್ರಹದಲ್ಲಿ ಅವರ ಅನುಮತಿಯಿಂದ ಪ್ರಕಟವಾದ ನಾಲ್ಕಾರು ಕವನಗಳನ್ನು ಉಪಯೋಗಕ್ಕೆ ಕೊಟ್ಟ ಅವರ ಮತ್ತು ಈ ಸಂಸ್ಥೆಯ ಮೆನೇಜರರಾದ ಶ್ರೀ ಹೆರಿಯವರ ಔದಾರ್ಯವನ್ನು ನಾವಿಲ್ಲಿ ಸ್ಮರಿಸಲೇಬೇಕಾಗಿದೆ.

ಗ್ರಂಥವನ್ನು ಮೂರು ವಿಭಾಗಗಳಾಗಿ ವಿಂಗಡಿಸಿದ್ದೇವೆ. ಮೊದಲನೆಯ ವಿಭಾಗದಲ್ಲಿ ಅವರ ಹಲವು ಮಿತ್ರರ, ಬಂಧುಗಳ, ಆಪ್ತರ ಸ್ಮರಣೆಯ ಮಾತುಗಳಿವೆ. ಅವುಗಳ ಕಳೆಯನ್ನು, ಸುಂದರವಾದ ಜೀವನ ಚರಿತ್ರೆಯನ್ನು ಬರೆದುಕೊಟ್ಟ ಶ್ರೀಮಾನ್ ಪಂಜೆ ರಾಮರಾಯರು ಕಂಡಿತವಾಗಿಯೂ ಹೆಚ್ಚಿಸಿದ್ದಾರೆ.

ಎರಡನೆಯ ಭಾಗವೆಲ್ಲ ಶ್ರೀ ಪಂಜೆಯವರ ಸ್ವಂತ ಬರವಣಿಗೆಗಳಿಂದ ಕೂಡಿದ್ದು. ಅವು ವಿವಿಧ ಪತ್ರಿಕೆಗಳಲ್ಲಿ, ಸ್ವತಂತ್ರವಾಗಿ ಪ್ರಕಟವಾದುವು; ಅಚ್ಚು ಕಂಡವು; ಅದರ ಶ್ರೇಯಸ್ಸಂತು ಅವರದೇ ಅಷ್ಟೆ.

ಮೂರನೆಯ ಕಾಣಿಕೆಯ ಭಾಗ; ಇನ್ನಷ್ಟು ಪುಷ್ಟವಾಗಬಹುದಿತ್ತು. ಅದು ಇಷ್ಟು ಬಡವಾಗಲು ಕನ್ನಡ ಜಗತ್ತಿನ ಆಲಸ್ಯವೇ ಕಾರಣವೆಂದು ನೋವಿನಿಂದ ಹೇಳಬೇಕಾಗಿದೆ.

ಇಲ್ಲಿನ ಚಿತ್ರಸಂಗ್ರಹ–ಪಂಜೆಯವರ ಭಾವ ಚಿತ್ರಗಳು, ಸಂಸಾರದ ಚಿತ್ರಗಳು. ಅವುಗಳಲ್ಲಿ ಹೆಚ್ಚಿನವನ್ನು ಅವರ ಪುತ್ರರಾದ ಶ್ರೀ ಗೋಪಾಲರಾಯರು ಒದಗಿಸಿಕೊಟ್ಟರು. ಇದರ ಸುಂದರ ಮುಖಚಿತ್ರ ಶ್ರೀ ಪಂಜೆಯವರ ಸೊಸೆ ಶ್ರೀಮತಿ ಮೀರಾಬಾಯಿ ಗೋಪಾಲರಾಯರು ತೈಲಚಿತ್ರವಾಗಿ ಬರೆದುದು.

ದಕ್ಷಿಣಕನ್ನಡದ, ಮತ್ತಿತರ ಕರ್ಣಾಟಕದ ಜನತೆ, ಲೇಖಕರು, ಅಭಿಮಾನಿಗಳು ನೀಡಿದ ನೆರವಿಂದಾಗಿ ಇಂದು ಈ ಸ್ಮಾರಕ ಗ್ರಂಥವನ್ನು ಹೊರಡಿಸಿದ್ದೇವೆ. ಅದನ್ನೋದಿದವರಿಗೆ ಶ್ರೀ ಪಂಜೆಯವರ ಇಹಜೀವನ ಸಾರ್ಥಕವಾಗಿತ್ತೆಂದು ಸ್ಪಷ್ಟ ವಾಗದಿರದು. ನಾವಾದರೂ ನಮ್ಮೆಲ್ಲರನ್ನು ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಬಂದು ದುಡಿಯುವಂತೆ ಹರಸಿದ, ಪ್ರೋತ್ಸಾಹಿಸಿದ ಈ ಮಾರ್ಗದರ್ಶಕರಿಗೆ, ನಮ್ಮ ಅಲ್ಪಮತಿಗೆ ತೋಚಿದ ಕಾಣಿಕೆಯನ್ನು ಸಲ್ಲಿಸಿದ್ದೇವೆ.

ಕನ್ನಡನಾಡು ಒಂದಾಗಿ ಬೆಳೆಯಲಿ–ಎಂದು ಶ್ರೀ ಪಂಜೆಯವರು ಬಯಸಿದಂತೆ, ನಾವಾದರೂ ಬಯಸಿ, ಆ ದಾರಿಯಲ್ಲಿ ನಮ್ಮಿಂದ ಸಾಧ್ಯವಾದ ಸೇವೆ ಸಲ್ಲಿಸುವಂತಾದರೆ, ಅವರಿಗೆ, ಅವರ ನೆನಪಿಗೆ ತಕ್ಕ ಮನ್ನಣೆ ಸಲ್ಲಿಸಿದಂತೆ.

ಇತಿ,

31—3—1952

ಎಮ್. ಗೋವಿಂದ ಪೈ.
ವೀ. ಸೀತಾರಾಮಯ್ಯ.
ಶಿವರಾಮ ಕಾರಂತ.

## ೧. ಸ್ಮರಣೆಗಳು, ಚರಿತ್ರೆ.


೧. ಕಚ್ಚಿದರೆ ಕಬ್ಬು! ಹಿಂಡಿದರೆ ಜೇನು!! - - [ಶ್ರೀ ಕೆ. ವಿ. ಪುಟ್ಟಪ್ಪ.] ೩
೨. ಜ್ಞಾನಾಮೃತದಿ ತೀವಿ ಸೂಸುತಿಹ ಹೊಂಗಲಶ. - [ಶ್ರೀ ಪ್ರಾಣೇಶಾಚಾರ್ಯ. ಹೈದರಾಬಾದು] ೪
೩. ಹಿರಿಯ ಸಾಹಿತಿ. - - - - [ಸಾಹಿತ್ಯ ಪರಿಷತ್ಪತ್ರಿಕೆ–೧೯೩೭] ೫
೪. ಕನ್ನಡ ಕಥೆಗಳ ವಿಧಾತೃ. - - - [ಶ್ರೀ ಗೋವಿಂದ ಪೈಯವರ ಭಾಷಣದಿಂದ. ತಾ ೩೧–೧೦–೩೭] ೭
೫. ಉಚಿತ ಸಮ್ಮಾನ. - - - - [ದಿ। ಶ್ರೀ ಎಮ್. ಎನ್. ಕಾಮತರು. ಮಂಗಳೂರು] ೧೦
೬. ಕೊಡಗರ ಚಿರಸ್ಮರಣೀಯ ಕವಿಗಳು. - - [ಶ್ರೀ ಬಿ. ಎಸ್. ಕುಶಾಲಪ್ಪನವರು. ಮಡಿಕೇರಿ.] ೧೩
೭. ತನ್ನನ್ನು ಬಿಟ್ಟಿಲ್ಲದ ಹಾಸ್ಯಗಾರ. - - - [ಶ್ರೀ ಎಮ್. ಸಂಜೀವ ರಾವ್. ಜೀವನ ಮಾಸ ಪತ್ರಿಕೆಯಿಂದ.] ೧೬
೮. ಪಂಜೆ ಮಂಗೇಶರಾಯರು. - - - [ಶ್ರೀ ಎಂ. ಎಸ್. ಅನಂತ ಪದ್ಮನಾಭ ರಾವ್. ಮಡಿಕೇರಿ.] ೧೮
೯. ರಸಿಕ ಶಿಖಾಮಣಿ, ಶಿಕ್ಷಣ ತಜ್ಞ. - - - [ಶ್ರೀ ಪಾಂಡೇಶ್ವರ ಗಣಪತಿ ರಾವ್.] ೨೨
೧೦. ದಿವಂಗತ ಪಂಜೆ ಮಂಗೇಶರಾಯರು - - [ದಿ। ಶ್ರೀ ಉಳ್ಳಾಲ ಮಂಗೇಶರಾಯರು. ೧೯೩೮] ೨೪
೧೧. ಶ್ರೀ. ಪಂಜೆ ಮಂಗೇಶರಾಯರು. - - [ಶ್ರೀ ಉಗ್ರಾಣ ಮಂಗೇಶರಾಯರು. ಪುತ್ತೂರು.] ೨೭
೧೨. ದಿವಂಗತ ಪಂಜೆಯವರ ಸ್ಮರಣೆಗಳು. - - [ಶ್ರೀ ಯಚ್. ಸುಂದರರಾಯರು. ಎಂ. ಎ.] ೨೯
೧೩. ಕೆಲವು ನೆನಪುಗಳು. - - - - [ಶ್ರೀ ಶಿವರಾಮ ಕಾರಂತರು. ೧೯೩೮] ೩೨
೧೪. ಪಂಜೆಯವರ ನೆನವರಿಕೆಗಳು. - - [ಶ್ರೀ ಆರ್. ಹರಿ ಶೆಣೈ. ಬಿ. ಎ; ಎಲ್. ಟಿ. ಉಜ್ರೆ.] ೩೫
೧೫. ಒಂದು ವ್ಯಕ್ತಿ ಚಿತ್ರ. - - - - [ಶ್ರೀ ಡಿ. ವಿ. ಜಿ. ಇವರಿಂದ.] ೪೧
೧೬. ಸ್ವರ್ಗೀಯ ಪಂಜೆ ಮಂಗೇಶರಾಯರು - [ಶ್ರೀ ಬೈಂದೂರ ಆನಂದರಾವ್.] ೪೬
೧೭. ತಂದೆ ಶಿಕ್ಷಕರಾಗಿ. - - - - [ಶ್ರೀಮತಿ ಶಾಂತಾ.] ೪೮
೧೮. ಶ್ರೀ ಪಂಜೆಯವರ ಸ್ನೇಹ ಪರತೆ. - - [ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು.] ೫೧
೧೯. ಗುರುಗಳಾದ ಪಂಜೆಯವರು. - - [ಶ್ರೀ ನರ್ಕಳ ಮಾರಪ್ಪ ಶೆಟ್ಟರು.] ೫೪
೨೦. ನಮ್ಮ ತಂದೆ. - - - - - [ಶ್ರೀ ಪಂಜೆ ರಾಮರಾವ್.] ೬೩
೨೧. ನಮ್ಮ ತಂದೆ ಶಿಕ್ಷಕರಾಗಿ, ಮಾನವರಾಗಿ. - [ಶ್ರೀ ರಾಮರಾಯರು. ಪಂಜೆ.] ೮೫
೨೨. ಕನಸಾದ ನನಸು. - - - - [ಶ್ರೀ ಎಮ್. ಗೋವಿಂದ ಪೈ.] ೯೫


## ೨. ಕೃತಿಗಳು


೧. ಮೂಡಬಿದಿರೆಯ ಹೊಸ ಬಸದಿಯ ಶಿಲಾ ಶಾಸನಗಳು. [೧೯೨೭ನೇ ಇಸವಿಯ ಸಾಹಿತ್ಯ ಸಮ್ಮೇಳನದ ಕಾಲದಲ್ಲಿ ಪ್ರಕಟವಾದ ಪಂಚಕಜ್ಜಾಯದಿಂದ.] 3
೨. ಬಿಳಿಗಿಯ ಕೆಲವು ಶಾಸನಗಳು. . . . [೧೯೨೯ನೇ ಇಸವಿಯ ರಾಷ್ಟ್ರಬಂಧು ಯುಗಾದಿಯ ಕಾಣಿಕೆಯಿಂದ.] 15

| | | | |
|---|---|---|---|
| ೩. | ಪದಾರ್ಥವೇನು? . . . . . . | [ ಕಂಠೀರವ, ೧೯೩೫-೩೬ ] | 23 |
| ೪. | ಸ್ಥಳನಾಮ. . . . . . . | [ ಸ್ವದೇಶಾಭಿಮಾನಿ, ೧೯೩೧. ] | 48 |
| ೫. | ಕುಮಾರ ವ್ಯಾಸನ ಹೆಗ್ಗಳಿಕೆ. . . . . | [ತಾ ೧೪-೮-೩೬ರಲ್ಲಿ ಹೈದರಾಬಾದಿನಲ್ಲಿ ಮಾಡಿದ ಉಪನ್ಯಾಸದಿಂದ. ] | 56 |
| ೬. | ಹೊಸದಾರಿ. . . . . . . | [ ಮಂಗಳೂರು ಮಿತ್ರಮಂಡಳಿಯ ಸಾಹಿತ್ಯೋತ್ಸವದ ಅಧ್ಯಕ್ಷ ಭಾಷಣದಿಂದ. ರಾಷ್ಟ್ರಬಂಧು ೨೬-೧೨-೧೯೩೨ ] | 57 |
| ೭. | ಬಾಲಸಾಹಿತ್ಯ. . . . . . . | [ ಹೈದರಾಬಾದಿನ ನಾಡಹಬ್ಬದ ಭಾಷಣದಿಂದ ಕಂಠೀರವ ೨೯-೧೦-೩೫ ] | 59 |
| ೮. | ಕನ್ನಡದಲ್ಲಿ ಸುಧಾರಣೆಗಳು. . . . . | [ ರಾಯಚೂರಿನ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ ೨೮-೧೨-೩೪ ] | 62 |
| ೯. | ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು. . . | [ ಪ್ರಬುದ್ಧ ಕರ್ಣಾಟಕ ೧೯೨೬ ] | 75 |
| ೧೦. | ಸರ್ವಜ್ಞನ ಓನಾಮ ಪದ್ಧತಿ. . . . . | [ ಕಂಠೀರವ. ] | 83 |
| ೧೧. | ಹಳೆಯ ಸಬ್ ಎಸಿಸ್ಟಾಂಟನ ಸುಳ್ಳು ಡೈರಿಯಿಂದ. | [ ಕಂಠೀರವ. ೧೯೩೫ ] | 87 |
| ೧೨. | ಭಾರತ ಶ್ರವಣ. . . . . . . | [ ಸುವಾಸಿನಿ. ೧೯೦೨. ] | 96 |
| ೧೩. | ಕಮಲಪುರದ ಹೊಟ್ಲಿನಲ್ಲಿ. . . . . | [ ಸುವಾಸಿನಿ. ಅಂದಾಜು ೧೯೦೨-೩ ] | 99 |
| ೧೪. | ವೈದ್ಯರ ಒಗ್ಗರಣೆ. . . . . . | [ " " ] | 104 |
| ೧೫. | ಹಲ್ಲಿ. . . . . . . . | [ ಸತ್ಯದೀಪಿಕೆ. " ] | 109 |
| ೧೬. | ಅಮ್ ನಹಿಂ ಗದ್ಧಾ! (ನಾನು ಕತ್ತೆಯಲ್ಲವೆ.) . | [ ಸುವಾಸಿನಿ. ೧೯೦೨ ] | 111 |
| ೧೭. | ನನ್ನ ಚಿಕ್ಕತಾಯಿ. . . . . . | [ " ೧೯೦೦ ] | 112 |
| ೧೮. | ನನ್ನ ಚಿಕ್ಕತಂದೆ. . . . . . | [ " ೧೯೦೨ ] | 118 |
| ೧೯. | ನನ್ನ ಚಿಕ್ಕತಂದೆಯವರ 'ಉಯಿಲ್' . . | [ " ೧೯೦೩ ] | 124 |
| ೨೦. | ನನ್ನ ಹೆಂಡತಿ. . . . . . . | [ " " ] | 131 |
| ೨೧. | ಹರಟೆಮಲ್ಲ . . . . . . . | [ ಸತ್ಯದೀಪಿಕೆ. ೧೯೦೫-೬ ] | 136 |
| ೨೨. | ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ? | | 148 |
| ೨೩. | ಸತ್ಯ ಸೀಮೆಗೆ ತಾಯೆ ನಡಿಸೆನ್ನ. . . . | | 150 |
| ೨೪. | ಹಾವಿನ ಹಾಡು. . . . . . . | [ಪದ್ಯ ಪುಸ್ತಕ ೧೯೧೪] | 152 |
| ೨೫. | ತೆಂಕಣ ಗಾಳಿಯಾಟ. . . . . . | [ " ೧೯೧೪] | 153 |
| ೨೬. | ಹುತ್ತರಿ ಹಾಡು. . . . . . . | [ " ೧೯೧೯] | 155 |
| ೨೭. | ಭೀಷ್ಮ ನಿರ್ಯಾಣ. . . . . . | [ ಸುವಾಸಿನಿಯಿಂದ. ೧೯೦೨ ] | 156 |
| ೨೮. | ಅಣ್ಣನ ವಿಲಾಪ. . . . . . . | [ಪದ್ಯ ಪುಸ್ತಕ ೧೯೧೯] | 157 |
| ೨೯. | ಡೊಂಬರ ಚೆನ್ನಿ. . . . . . . | [ " " ] | I59 |
| ೩೦. | ಕಡೆಕಂಜಿ. . . . . . . . | [ " " ] | 162 |

೩೧. ಪರೀಕ್ಷೆಯಲ್ಲಿ ಪರಾಜಿತನಾದ ವಿದ್ಯಾರ್ಥಿಯ ಪ್ರಲಾಪ. [ಸುವಾಸಿನಿ. ೧೯೦೧] 165
೩೨. ಕಬ್ಬಿಣದ ಬುದ್ಧಿವಾದ . . . . . [ " ೧೯೦೨] 166
೩೩. ಕಮಲ. . . . . . . [ " " ] 171
೩೪. ಪಾಣಿಪತ. . . . . . . [ಭಕ್ತಿಸಂದೇಶ. ರೌದ್ರಿ ಸಂವತ್ಸರ.] 172
೩೫. ಚಂದ್ರೋದಯ . . . . . [ಸುವಾಸಿನಿ. ೧೯೦೨] 175
೩೬. ಲಕ್ಷ್ಮೀಶ ಕವಿ. . . . . . . [ " ೧೯೦೩] 176
೩೭. ಶೋಕಗೀತೆ. . . . . . . [ಕಂಠೀರವ. ೧೯೩೫] 177


## ೩. ಕಾಣಿಕೆ


೧. ಕುಳದ ಕಲಿಗೆ. - - - - [ಶ್ರೀ ಕೆ. ವಿ. ಪುಟ್ಟಪ್ಪನವರು.] 181
೨. ಕನ್ನಡ ಕವಿ ಲಕ್ಷ್ಮೀಶನ ಕಾಲದ ಮರು ವಿಚಾರ. [ಶ್ರೀ ಗೋವಿಂದ ಪೈ.] 182
೩. 'ಧವಳ'ವೆಂಬ ಹಾಡಿನ ಸ್ವರೂಪ. - - [ಶ್ರೀ ಡಿ. ಎಲ್. ನರಸಿಂಹಾಚಾರ್] 190
೪. ಕೆಲವು ಗಾದೆಗಳು. - - - - [ಶ್ರೀ ಕೆ. ವಿ. ರಾಘವಾಚಾರ್ಯರು.] 195
೫. ರಾಜ್ಯಾಭಿಯೋಗಿ ಕಲ್ಯಾಣಸ್ವಾಮಿ ಅಥವಾ ಅಮರ ಸುಳ್ಯದ ಕಾಟಕಾಯಿ. - - - 197
[ಶ್ರೀ ಡಿ. ಯನ್. ಕೃಷ್ಣಯ್ಯ. M. A., B. Ed. ಮಡಿಕೇರಿ, ಕೊಡಗು.]
೬. ಭಾಷೆಯ ಬೆಳವಣಿಗೆ. - - - - [ಶ್ರೀ ಶಿವರಾಮ ಕಾರಂತ.] 206
೭. ಪ್ರಕೃತಿದರ್ಶನ: ಕವಿಯ ದೃಷ್ಟಿಯಲ್ಲಿ. - - [ಶ್ರೀ ಕೆ. ವಿ. ಪುಟ್ಟಪ್ಪನವರು.] 210
೮. ಕವಿಶಿಷ್ಯರ ಬಾಲಸಾಹಿತ್ಯ. - - - [ಶ್ರೀ ಬಿ. ಶಂಕರ ಭಟ್ಟ ಮತ್ತು ಶ್ರೀ ಬಿ. ಯಮ್. ಶರ್ಮ.] 214



ಅಧ್ಯಾಪಕ ವೃತ್ತಿಯ ಪ್ರಾರಂಭದಲ್ಲಿ



ನಿಂತವರು:- 1. ಶ್ರೀ. ಮುಕುಂದರಾಯರು (ಹಿರಿಯ ಮಗ). 2. ಶ್ರೀ. ರಾಮರಾಯರು (ಮೂರನೆಯ ಮಗ) 3. ಶಾಂತಾ (ಕೊನೆಯ ಮಗಳು). 4. ಅನುಸೂಯಾ (ಹಿರಿಯ ಮಗಳು). 5. ಗೋಪಾಲರಾಯರು (ಎರಡನೆಯ ಮಗ). ಕುಳಿತವರು:- 1. ಲೀಲಾ ಬಾಯಿ (ಹಿರಿಯ ಸೊಸೆ). 2. ಗಿರಿಜಾ ಬಾಯಿ (ಪತ್ನಿ) 3. ಶ್ರೀ. ಪಂಜೆಯವರು. 4. ಮೀರಾ ಬಾಯಿ (ನಡುವಣ ಸೊಸೆ).



**ಗೆಳೆಯರೊಂದಿಗೆ**

ಶ್ರೀ ಡಿ. ವಿ. ಗುಂಡಪ್ಪನವರು. ಶ್ರೀ ಪಂಜೆಯವರು. ಶ್ರೀ ಮಾಸ್ತಿಯವರು.

ಶ್ರೀ ಮಂಗೇಶರಾಯರು ತಮ್ಮ ಷಷ್ಟ್ಯಬ್ಧಿ ಪೂರ್ತಿಯ ವೇಳೆಗೆ ಮಗನಿಗೆ ಬರೆದೊಂದು ಪತ್ರ.






ಶ್ರೀ ಮಂಗೇಶರಾಯರು ತಮ್ಮ ಷಷ್ಟ್ಯಬ್ಧಿ ಪೂರ್ತಿಯ ವೇಳೆಗೆ ಮಗನಿಗೆ ಬರೆದೊಂದು ಪತ್ರ.

## ಕಚ್ಚಿದರೆ ಕಬ್ಬು! ಹಿಂಡಿದರೆ ಜೇನು !!

ಹಾಲು ಸಕ್ಕರೆ ಸೇರಿ ನೀವಾದಿರಾಚಾರ್ಯ
ನಡೆಯ ಮಡಿಯಲಿ ನುಡಿಯ ಸವಿಯಲ್ಲಿ. ನಿಮ್ಮ ಬಗೆ
ಹಸುಳೆ ನಗೆ; ನಿಮ್ಮ ಕೆಳೆಯೊಲುಮೆ ಹಗೆತನಕೆ ಹಗೆ.
ಕಪ್ಪುರಕೆ ಕಿಡಿ ಮತ್ತೆ ಸತ್ಯಕ್ಕೆ ಸೌಂದರ್ಯ
ಸಂಗಮಿಸಿದಂತೆ ರಂಜಿಸಿದೆ ಜೀವನ ಸೂರ್ಯ
ನಿಮ್ಮದೆಮ್ಮಯ ನುಡಿಯ ಗುಡಿಗೆ ಮಂಗಳಕಾಂತಿ
ಪರಿಮಳಂಗಳನಿತ್ತು. ನಿಮ್ಮ ಬಾಳಿನ ಶಾಂತಿ
ಮತ್ತೆಸ್ವರಸಕಾರ್ಯಗಳಿಗುಪಮೆ: ವೀಣಾತೂರ್ಯ!
ಕಚ್ಚಿದರೆ ಕಬ್ಬಾಗಿ, ಹಿಂಡಿದರೆ ಜೇನಾಗಿ
ನಿಮ್ಮುತ್ತಮಿಕೆಯನೆ ಮೆರೆದಿರಯ್ಯ: ಚಪ್ಪಾಳೆ
ಮೂಗುದಾರವನಿಕ್ಕಿ ನಡೆಯಿಸಿದರದು ಬಾಳೆ
ಹಿರಿಯ ಸಿರಿಚೇತನಕೆ ಕೀರ್ತಿಲೋಭಕೆ ಬಾಗಿ
ಬಾಳ್ಬಂಡಿ ನೊಗಕೆ ಹೆಗಲಿತ್ತವರು ನೀವಲ್ಲ
ತೇರ್ಮಣಿಯ ಸೆಳೆದಿರಲ್ಲದೆ ಮತ್ತೆ ಮಣಿದಿಲ್ಲ—

ಕೆ. ವಿ ಪುಟ್ಟಪ್ಪ.

---

# ಜ್ಞಾನಾಮೃತದಿ ತೀವಿ ಸೂಸುತಿಹ ಹೊಂಗಲಶ

ಕನ್ನಡಕೆ ಕಳೆಯುಸಿರ್ದ ನಗೆಗಾರ ಮಂಗೇಶ,
ಭಾರತಕೆ ಬಣ್ಣಬರೆದೆತ್ತಿ ಹಿಡಿದಾಚಾರ್ಯ
ಮುದ್ದಣನ ಮುದ್ದು ಮೊಗ ಕತ್ತಲಲಿ ತೊಳಲುತಿರೆ
ಅರುಣ ಕಿರಣದ ತಂಪಿನೊಡನೆ ತೋರಿದ ಭಾನು
ಚಿಣ್ಣರಿಗೆ ನೀ ಬೆಣ್ಣೆ, ತರುಣರಿಗೆ ಉತ್ಸಾಹ,
ಶ್ರೋತೃವಿಗೆ ಉಯ್ಯಾಲೆ, ಭಕ್ತರಿಗೆ ಆನಂದ
ಅರಿ ಜೀವಿಯಾದಂಗೆ ನವಜೀವನವಸಾರ
ಸಿನ್ನೊಲುಮೆ ಗಂಗೆಯಲಿ ಮಿಂದವಗದುವೆ ಮೋಕ್ಷ
ಮನುಜ ಧರ್ಮವನೊದೆದು ಹೊಸತನಕೆ ಎದೆದೆರೆದು
ನಿಂತ ವೀರನಕಂಡು ಮುನಿದು ಕಸಿದನೆ ಬಿದಿಯು
"ಜ್ಞಾನಾಮೃತದಿ ತೀವಿ ಸೂಸುತಿಹ ಹೊಂಗಲಶ
ಬುವಿಗೇಕೆ–ಬಾರಯ್ಯ, ನಿನಗದುವೆ ಚಿರ ತಾಣ"
ಎಂದಾದರಿಸಿ ಸ್ವರ್ಗಧಾಮಕೆಳೆದೊಯ್ದನೇ?
ಎಂತು ಒಪ್ಪಿದೆ ಗುರುವೆ ನೀನೆಂತು ಮನದಂದೆ?

ಶ್ರೀ. ಪ್ರಾಣೇಶಾಚಾರ್ಯ.
(ಹೈದರಾಬಾದು)

# ಹಿರಿಯ ಸಾಹಿತಿ.

ಕಳೆದ ಒಂದು ವರ್ಷದಿಂದೀಚೆಗೆ ಮೂವರು ಪ್ರಸಿದ್ಧ ಸಾಹಿತಿಗಳನ್ನು ಕಳೆದುಕೊಳ್ಳುವ ದೌರ್ಭಾಗ್ಯವು ಕನ್ನಡಿಗರಿಗೆ ಪ್ರಾಪ್ತವಾದುದು ಅತ್ಯಂತ ಶೋಚನೀಯವಾದ ಸಂಗತಿಯೆಂತಲೇ ಹೇಳಬೇಕು. ೧೯೩೬ನೆಯ ಡಿಸೆಂಬರ್ ತಿಂಗಳ ೬ನೆಯ ತಾರೀಖಿನಲ್ಲಿ ಕರ್ಣಾಟಕ ವಿದ್ವನ್ಮಂಡಲಿಯಲ್ಲಿ ಅಗ್ರಗಣ್ಯರೂ, ಪ್ರಸಿದ್ಧ ಕನ್ನಡ ಲೇಖಕರೂ, ಪರಿಷತ್ತಿನ ಪ್ರತಿಷ್ಠಾಪಕರಲ್ಲಿ ಒಬ್ಬರೂ ಆಗಿದ್ದು ನಾನಾ ವಿಧವಾದ ಭಾಷಾಸೇವೆಯನ್ನು ಮಾಡಿ ಪ್ರಖ್ಯಾತರಾಗಿದ್ದ ಶ್ರೀಮಾನ್ ಆರ್. ನರಸಿಂಹಾಚಾರ್ಯರು ಕಾಲಾಧೀನರಾದುದರಿಂದ ಕನ್ನಡದ ಒಂದು ದೊಡ್ಡ ಕಲಶವು ಬಿದ್ದುಹೋದಂತಾಯಿತು. ಈ ದುರ್ಘಟನೆಯು ಪ್ರಾಪ್ತವಾದ ಅತ್ಯಲ್ಪ ಕಾಲದೊಳಗಾಗಿಯೇ ಎಂದರೆ ೧೯೩೭ನೆಯ ಜೂನ್ ತಿಂಗಳ ೨೭ನೆಯ ತಾರೀಖಿನಲ್ಲಿ ಪ್ರಾಚೀನ ಕನ್ನಡ ಕಾವ್ಯಗಳನ್ನು ಉದ್ಧರಿಸುವುದೇ ಮೊದಲಾದ ಸಾಹಿತ್ಯ ವಿಚಾರಗಳಲ್ಲಿ ತಮ್ಮ ಜೀವನವನ್ನೇ ಧಾರೆಎರೆಯುತ್ತಿದ್ದ ಶ್ರೀಮಾನ್ ಎಂ. ಎ. ರಾಮಾನುಜಯ್ಯಂಗಾರ್ಯರು ಮೃತ್ಯುವಶರಾದುದರಿಂದ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಮತ್ತೊಂದು ಭಾರಿ ನಷ್ಟಪ್ರಾಪ್ತಿಯಾಯಿತು. ಈ ಎರಡು ಅಪಾರವಾದ ನಷ್ಟಗಳಿಂದುಂಟಾದ ಪರಿತಾಪವು ಇನ್ನೂ ಆರುವುದಕ್ಕೆ ಮುಂಚೆಯೇ ೧೯೩೭ನೆಯ ಅಕ್ಟೋಬರ್ ತಿಂಗಳ ೨೪ನೆಯ ತಾರೀಖಿನಲ್ಲಿ ಹಿರಿಯ ಕನ್ನಡ ಸಾಹಿತಿಗಳಲ್ಲಿ ಗಣ್ಯಸ್ಥಾನವನ್ನು ಪಡೆದಿದ್ದ ಶ್ರೀಮಾನ್ ಪಂಜೆ ಮಂಗೇಶರಾವ್, ಬಿ. ಎ., ಎಲ್. ಟಿ. ಅವರು ನಮ್ಮ ಕಣ್ಮರೆಯಾಗಿ ನಮ್ಮನ್ನು ದುಃಖ ಸಾಗರದಲ್ಲಿ ಮುಳುಗಿಸಿಬಿಟ್ಟಿದ್ದಾರೆ.

ಶ್ರೀಮಾನ್ ಮಂಗೇಶರಾಯರು ಪರಿಷತ್ತಿನ ಅಜೀವ ಸದಸ್ಯರೂ, ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರೂ, ಮಂಗಳೂರಿನ ಪ್ರಸಿದ್ಧ ಕನ್ನಡ ವಿದ್ವನ್ಮಣಿಗಳೂ, ಕನ್ನಡನಾಡಿನಲ್ಲೆಲ್ಲಾ ಸನ್ಮಾನ್ಯರೂ ಆಗಿದ್ದರು. ಈ ಮೂರು ವರ್ಷಗಳ ಹಿಂದೆ ರಾಯಚೂರಿನಲ್ಲಿ ನಡೆದ ೨೦ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನವನ್ನಲಂಕರಿಸಿ ಕನ್ನಡ ಭಾಷೋದ್ಧರಣದಲ್ಲಿ ತಮಗಿರುವ ನಿಕಟಪ್ರೇಮವನ್ನು ವ್ಯಕ್ತಪಡಿಸಿದ್ದರು. ಅಲ್ಲದೆ ಕಳೆದ ವರ್ಷದ ಮೇ ತಿಂಗಳಲ್ಲಿ ಬೆಂಗಳೂರು ನಗರದಲ್ಲಿ ನಡೆದ ವಿಶೇಷ ಸಾಹಿತ್ಯೋತ್ಸವದಲ್ಲಿ ಉತ್ಸಾಹಪೂರಿತವಾದ ಭಾಗವನ್ನು ವಹಿಸಿ ಎಲ್ಲರ ಮೆಚ್ಚಿಗೆಗೂ ಪಾತ್ರರಾಗಿದ್ದರು. ಇದೇ ಸಮಯದಲ್ಲಿ ಇಲ್ಲಿಯ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷಪೀಠವನ್ನಲಂಕರಿಸಿ ತಮ್ಮ ಅಮೋಘವಾದ ಭಾಷಣದಿಂದ ವಿದ್ಯಾರ್ಥಿಗಳ ಪ್ರೀತಿಗೌರವಗಳನ್ನು ಸಂಪಾದಿಸಿದ್ದರು. ಇವರ ಜೀವನ ಚರಿತ್ರೆಯ ವಿಚಾರವಾಗಿ ತಿಳಿಯಬಂದ ಕೆಲವು ವಿಚಾರಗಳನ್ನು ಈ ಕೆಳಗೆ ಸಂಗ್ರಹವಾಗಿ ಕೊಟ್ಟಿದೆ.

ಇವರು ಹುಟ್ಟಿದ್ದು ೧೭—೨-೧೮೭೪ರಲ್ಲಿ; ದೈವಾಧೀನರಾದದ್ದು ೨೪—೧೦-೧೯೩೭ರಲ್ಲಿ; ಎಂದರೆ ತಮ್ಮ ೬೪ನೆಯ ವಯಸ್ಸಿನಲ್ಲಿ. ಇವರು ಬಿ. ಎ., ಎಲ್. ಟಿ. ಪರೀಕ್ಷೆಗಳನ್ನು ಕೊಟ್ಟಿದ್ದರು. ಇವರು ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಕೂಡಲೆ ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿ ನೇಮಕವಾದರು. ಅನಂತರ ಕೆಲಕಾಲದ ಮೇಲೆ ವಿದ್ಯಾಶಾಖೆಯ ಇನ್‌ಸ್ಪೆಕ್ಟರಾಗಿ ಆ ಮೇಲೆ ಟ್ರೈನಿಂಗ್ ಕಾಲೇಜಿನ ಮುಖ್ಯ ಅಧ್ಯಾಪಕರಾಗಿದ್ದು ಕೆಲಸದಿಂದ ನಿವೃತ್ತರಾಗುವ ಸಮಯದಲ್ಲಿ ಮಡಿಕೇರಿ ಹೈಸ್ಕೂಲಿನ ಹೆಡ್ಮಾಸ್ಟರಾಗಿದ್ದರು.

ಅಂತು ಇವರು ಶಿಕ್ಷಣಕಾರ್ಯದಲ್ಲಿಯೇ ತಮ್ಮ ಆಯುಷ್ಯದ ಹೆಚ್ಚು ಭಾಗವನ್ನು ಕಳೆದರೆಂದು ಹೇಳಬಹುದು. ಮಕ್ಕಳ ಶಿಕ್ಷಣದ ವಿಚಾರದಲ್ಲಿ ಇವರ ದೃಷ್ಟಿಯು ಆಧುನಿಕ ರೀತಿಯದಾಗಿದ್ದಿತು. ಮಕ್ಕಳಿಗೆ ವಿದ್ಯೆ ಕಲಿಸಬೇಕಾದರೆ ಆಟ-ಪಾಟ, ಕವನ-ಕುಣಿತ, ಚಿತ್ರ-ಸಂಗೀತ ಇವುಗಳ ಸಹಾಯದಿಂದ ಕಲಿಸುವುದೇ ಉತ್ತಮ ಮಾರ್ಗವೆಂದು ಭಾವಿಸಿ, ಅದರಂತೆ ಇವರು ಕಾರ್ಯತಃ ನಡೆಸುತ್ತಿದ್ದರು. ಅಲ್ಲದೆ ಇವರು ಇನ್‌ಸ್ಪೆಕ್ಟರ್ ಕೆಲಸದಲ್ಲಿದ್ದಾಗ ಇತರ ಶಿಕ್ಷಕರೂ ಇದೇ ರೀತಿ ನಡೆಸುವಂತೆ ನೋಡಿಕೊಳ್ಳುತ್ತಿದ್ದರು. ಶಿಶುಹೃದಯವನ್ನು ಚೆನ್ನಾಗಿ ಅರಿತವರಾದ ಇವರ ಶಿಶುಗೀತೆಗಳು ಕನ್ನಡ ಸಾಹಿತ್ಯದಲ್ಲಿ ಮನ್ನಣೆಯ ಸ್ಥಾನವನ್ನು ಪಡೆದಿರುವುವು. ಇವರ ಭಾವಗೀತೆಗಳು ಲಾಲಿತ್ಯದಿಂದ ಕೂಡಿ ಚಿಕ್ಕಮಕ್ಕಳು ಹಾಡಿ ನಲಿಯಲು ಅನುಕೂಲಿಸುವಂತಿರುವುವು. ಸಣ್ಣ ಮಕ್ಕಳಿಗೆ ಉಪಯೋಗಕರವಾದ ಸಾಹಿತ್ಯವನ್ನು ಪ್ರಚಾರಕ್ಕೆ ತರುವ ಉದ್ದೇಶದೊಡನೆ ಮಂಗಳೂರಿನಲ್ಲಿ 'ಬಾಲ ಸಾಹಿತ್ಯ ಮಂಡಲ'ವೆಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದ ಕೀರ್ತಿಯು ಇವರಿಗೆ ಸಲ್ಲತಕ್ಕದ್ದಾಗಿದೆ.

'ಸತ್ಯದೀಪಿಕೆ' ಎಂಬ ಮಂಗಳೂರಿನ ಮಾಸಪತ್ರಿಕೆಯಲ್ಲಿ ಅನೇಕ ವರ್ಷಗಳ ಹಿಂದೆಯೇ ಇವರ ಹಲವು ಕವಿತೆಗಳು ಪ್ರಕಟವಾಗಿದ್ದುವು. ಇದೇ ಪತ್ರಿಕೆಯಲ್ಲಿ ಗೂಢನಾಮದಿಂದ ಇವರು ಬರೆಯುತ್ತಿದ್ದ ನಿತ್ಯನೈಮಿತ್ತಿಕ ವಿಚಾರವಾದ ಲೇಖನಗಳು ಲಘುಹಾಸ್ಯದಿಂದಲೂ, ಕಟುವಾದ ಟೀಕೆ

ಯಿಂದಲೂ ಕೂಡಿದವುಗಳಾಗಿದ್ದು ಎಲ್ಲರ ಮೆಚ್ಚಿಗೆಗೂ ಪಾತ್ರವಾಗಿದ್ದುವು. ಒಂದು ದೃಷ್ಟಿಯಿಂದ ಇವರನ್ನು ಕನ್ನಡದ 'ಸಣ್ಣ ಕತೆಗಳ ಜನಕರು' ಎಂದು ಧಾರಾಳವಾಗಿ ಕರೆಯಬಹುದು. ಏಕೆಂದರೆ, ಇವರ ಉತ್ಕೃಷ್ಟವಾದ ಸಣ್ಣ ಕತೆಗಳು ಈಗ್ಗೆ ಸುಮಾರು ನಾಲ್ವತ್ತು ವರ್ಷಗಳ ಹಿಂದೆಯೇ ಮಂಗಳೂರಿನ 'ಸುವಾಸಿನಿ' ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾಗಿ ಪ್ರಖ್ಯಾತಿಗೆ ಬಂದಿದ್ದುವು.

ಶಿಶುಸಾಹಿತ್ಯ, ಸಣ್ಣ ಕತೆ, ಲಘುಹಾಸ್ಯ–ಇವುಗಳಲ್ಲಿ ಮಾತ್ರವೇ ಅಲ್ಲದೆ ಸಾಹಿತ್ಯ ಸಂಶೋಧನ ವಿಚಾರವಾಗಿಯೂ, ಪ್ರೌಢ ಸಾಹಿತ್ಯದ ವಿಚಾರವಾಗಿಯೂ ಸಹ ಇವರಿಗೆ ವಿಶೇಷ ಆದರವೂ, ನೈಪುಣ್ಯವೂ ಇದ್ದುವು. ಪ್ರೌಢ ಸಾಹಿತ್ಯದಲ್ಲಿ ಇವರಿಗಿದ್ದ ಅನುಭವವನ್ನು ಉಪಯೋಗಪಡಿಸಿಕೊಳ್ಳುವ ಉದ್ದೇಶದೊಡನೆ ಮೈಸೂರು ವಿಶ್ವವಿದ್ಯಾನಿಲಯದವರು ತಮ್ಮ ಆಶ್ರಯದಲ್ಲಿ ಪ್ರಕಟವಾಗುವ ಗ್ರಂಥಮಾಲೆಗಾಗಿ 'ಕುಮಾರ ವ್ಯಾಸ ಭಾರತ'ವನ್ನು ಸಂಗ್ರಹಿಸಿ ವಿಮರ್ಶಾತ್ಮಕವಾದ ಮುನ್ನುಡಿಯನ್ನು ಬರೆದುಕೊಡುವ ಕಾರ್ಯವನ್ನು ಕೆಲವು ಕಾಲದ ಹಿಂದೆ ಇವರಿಗೆ ವಹಿಸಿದ್ದರು. ಇವರ ಜೀವಿತಕಾಲದಲ್ಲಿಯೇ ಈ ಗ್ರಂಥವು ಪ್ರಕಟವಾಗದೆಹೋದರೂ ಇದು ಇವರ ಕೊನೆಯ ಕನ್ನಡದ ಸೇವೆಯ ಕುರುಹಾಗಿ ಉಳಿಯುವುದೆಂದು ಹೇಳಬಹುದು. ಇಷ್ಟೇ ಅಲ್ಲದೆ ಮೈಸೂರು ವಿಶ್ವವಿದ್ಯಾನಿಲಯದವರ ಆಶ್ರಯದಲ್ಲಿ ತಯಾರಾಗುತ್ತಿರುವ ಇಂಗ್ಲಿಷ್-ಕನ್ನಡ ನಿಘಂಟುವಿನ ರಚನೆಯಲ್ಲಿ ಮಂಗಳೂರು ಪ್ರಾಂತದವರ ಪರವಾಗಿ ಸಲಹೆಗಳನ್ನು ಕೊಡುವುದಕ್ಕಾಗಿ ಈ ಭಾಗದಲ್ಲಿ ವಿಶೇಷ ಅನುಭವವನ್ನು ಪಡೆದಿದ್ದ ಇವರನ್ನು ನೇಮಿಸಿಕೊಳ್ಳಬೇಕೆಂಬ ಸಲಹೆಯು ಮೈಸೂರು ಸರಕಾರದವರ ಪರ್ಯಾಲೋಚನೆಯಲ್ಲಿತ್ತು. ಆದರೆ ಇದು ಕಾರ್ಯಕಾರಿಯಾಗುವುದಕ್ಕೆ ಮುಂಚೆಯೇ ಇವರು ಕಾಲಾಧೀನರಾದ ಪ್ರಯುಕ್ತ ಇಂತಹ ಅನುಭವಸ್ಥರ ಸಹಾಯವು ನಿಘಂಟಿನ ರಚನೆಗೆ ದೊರಿಯದೆ ಹೋದಂತಾಯಿತು.

ಶ್ರೀಮಾನ್ ಮಂಗೇಶರಾಯರು ಕೆಲವು ದಿವಸಗಳು ಮಾತ್ರವೇ ವ್ಯಾಧಿಗ್ರಸ್ತರಾಗಿದ್ದು ಹೈದರಾಬಾದಿನಲ್ಲಿ ತಮ್ಮ ಮಕ್ಕಳ ಮನೆಯಲ್ಲಿ ಇಹಲೋಕವ್ಯಾಪಾರವನ್ನು ತ್ಯಜಿಸಿದರು. ಇವರು ತಮ್ಮ ಮರಣಕಾಲದಲ್ಲಿ ತಮ್ಮ ಬಂಧುಮಿತ್ರರನ್ನು ಮಾತ್ರವೇ ಅಲ್ಲದೆ ಕನ್ನಡ ತಾಯಿಯನ್ನೂ, ಪರಿಷತ್ತನ್ನೂ ಸ್ಮರಿಸಿಕೊಂಡರಂತೆ. ಇವರ ಕಡೆಯ ಕೋರಿಕೆಯ ಗುರುತಾಗಿ ಇವರ ಪರವಾಗಿ ಇವರ ಮಕ್ಕಳು ಪರಿಷತ್ತಿಗೆ ಐವತ್ತು ರೂಪಾಯಿಗಳನ್ನು ಕಳುಹಿಸಿಕೊಟ್ಟರು. ಅನ್ಯಾದೃಶವಾದ ಇವರ ಭಾಷಾ ಪ್ರೇಮಕ್ಕೆ ಇದಕ್ಕಿಂತಲೂ ಹೆಚ್ಚಿನ ನಿದರ್ಶನವಿನ್ನೇಕೆ?

(ಸಾಹಿತ್ಯ ಪರಿಷತ್ಪತ್ರಿಕೆ-೧೯೩೭)

# ಕನ್ನಡ ಕಥೆಗಳ ವಿಧಾತೃ.

ಪೂರ್ವಕಾಲದಲ್ಲಿ ವನಪ್ರಸ್ಥನಾಗುವ ಅರಸನಿಗೆ ಆತನವರು ಸುತ್ತು ನೆರೆದು ಕಣ್ಣೀರಿಡುತ್ತ ಸೇಸೆ ಇಕ್ಕುತ್ತಿದ್ದಂತೆ ಈಗಣ ಕನ್ನಡ ಸಾಹಿತ್ಯದಲ್ಲಿ ಆಚಾರ್ಯ ಪುರುಷರಾಗಿರುವ ನಮ್ಮ ಪಂಜೆ ಮಂಗೇಶರಾಯರನ್ನು ಕಳಕೊಂಡ ಸಂತಾಪ ನಮ್ಮ ಕಣ್ಮನಗಳು ಮಿಡಿವ ದುಃಖಾಶ್ರುಗಳ ಸೇಸೆಯನ್ನು ಅವರ ನೆನಪಿಗೆ ಕಾಣಿಕೆಯಾಗಿ ತಳಿಯಲೆಂದು ನಾವಿಲ್ಲಿ ನೆರೆದಿರುತ್ತೇವೆ. ಅವರ ಮರಣದಿಂದ ನಮ್ಮ ತುಳುನಾಡಿನ ಕನ್ನಡ ಸಾಹಿತ್ಯದ ಬಲತೋಳು ಕುಸಿದಂತಾಯಿತು; ನಮ್ಮ ತುಳುನಾಡಿನ ಕನ್ನಡ ಶಾರದೆಯ ಸಾಹಿತ್ಯಮಾಲೆಯ ಶಿಖಾಮಣಿ ಜಗುಳಿದಂತಾಯಿತು. ಈ ಹುಲುಸಾದ ಮೆದುಳು, ನಿರಾಳವಾದ ನುಡಿತ, ಆಳವಾದ ಭಾವನೆ, ವಿಶಾಲವಾದ ಕಾಣಿಕೆ, ಹದನಾದ ಜಕ್ಕುಲಿಕೆ—ಇವನ್ನು ನಾವಿನ್ನು ಎಲ್ಲಿ ತಾನೆ ಒಮ್ಮೆಯ್ಯಾಗಿ ನೋಡಬಹುದು? ಎಂಬ ಪ್ರಶ್ನೆಯೇ ಈಗ ನಮ್ಮೆಲ್ಲರ ಬಗೆಗಳಲ್ಲಿ ಹಾವಿನಂತಿರುವ ತನ್ನ ಚಿಹ್ನೆಯಲ್ಲಿ ಹೆಡೆ ಎತ್ತಿ ಮುಸುಗುಟ್ಟುತ್ತಿದೆ. ಹೋದವರ ಹೋದ ಹೆಜ್ಜೆಗಳಲ್ಲದೆ ಮರಳಿದ ಹೆಜ್ಜೆಗಳಿಲ್ಲ. ಈ ಸಂಸಾರ ಯಾತ್ರೆಯಲ್ಲಿ ಅವರು ಮುಂದೆ ನಾವು ಹಿಂದೆಯಷ್ಟೇ ಹೊರತು ಕಾಲನು ತೇಲಿಬಿಟ್ಟ ಯಾವ ನಾವೆಯಾದರೂ ತನ್ನ ಗತಿಗನುಸಾರವಾಗಿ ಇಂದೊ ಮುಂದೊ ಆಚೆಗೆ ಮುಟ್ಟಲೇಬೇಕು, ಒಮ್ಮೆ ಆಕರೆಗಾದ ಮೇಲೆ ಅದೇರೂಪದಿಂದ ಅದು ಹಿಂತಿರುಗಲಾರದು ಎಂದು ಬಲ್ಲೆವಾದರೂ ನಮ್ಮ ನಮ್ಮವರನ್ನು ಕಳಕೊಳ್ಳುತ್ತಲೇ ಒದಗತಕ್ಕ ಎದೆಯ ಬಡವಿನಲ್ಲಿ ಈ ಜ್ಞಾನವು ಚಿಕ್ಕಾಸಿಗೆ ಬಾರದು. ಆದರೆ ಪಶುಪಕ್ಷಿಗಳಾದರೂ ತಮ್ಮ ವಿಯೋಗದುಃಖವನ್ನು ಕ್ರಮೇಣ ನೀಗುತ್ತಿರುವಲ್ಲಿ, ಮನುಷ್ಯರಾದ ನಾವಾದರೊ ನಮ್ಮಿಂದ ಅಗಲಿ ಹೋದವರ ನೆನಪಿಗೇ ಜೀವಕಲೆಯನ್ನಿತ್ತು ಅದನ್ನು ಅಳಿಯಗೊಡದಂತೆ ಸಪ್ರಾಣಿಸಿ ಅದನ್ನೇ ಅವರೆಂದು ಭಾವಿಸಿ ಅವರೊಂದಿಗೆ ನಡೆದುಕೊಳ್ಳಬೇಕಲ್ಲದೆ, ಹಿಳಿದ ಕಿತ್ತಳೆಯಂತೆ ಮನಸ್ಸನ್ನು ಕ್ರಮೇಣ ನೀರಸವಾಗಿಸುವ ಮಿಡುಕನ್ನೇ ಕಟ್ಟಿಕೊಂಡಿರಲಾಗದು. ಆದಕಾರಣ ನಮ್ಮ ಪಂಜೆಯವರ ವಿಷಯವಾಗಿ ಅವರವರು ಬಲ್ಲ ವಿಷಯಗಳನ್ನು ಎಲ್ಲವರಿಗೆ ತಿಳಿಯಪಡಿಸಿ, ಅವರನ್ನು ಕುರಿತು ತಮ್ಮಷ್ಟು ಅರಿತಿಲ್ಲದವರಿಗೆ ತಿಳಿಯಲೀವುದೂ ಸ್ವಯಮೇವ ಅಮ್ಲಾನವಾಗಿ ಉಳಿಯಬಲ್ಲ, ಅವರ ಹೆಸರು ಹಾಗೆ ಬಾಳುವಲ್ಲಿ ತಕ್ಕಷ್ಟಾದರೂ ನೆರವಾಗುವುದು ನಮ್ಮ ಹೊಣೆ ಎಂಬುದನ್ನು ದೃಢವಾಗಿ ಬಗೆತಂದು ಆ ತಕ್ಕಂತೆ ನಾವು ಕೈಯ್ಗೊಡಲಾಪೆವಾದರೆ ಹೇಗೆ ಎಂದು ನಿರ್ಣಯಿಸುವುದೂ ಇಂದು ಇಲ್ಲಿ ಕೂಡಿರುವ ನಮ್ಮ ಹೊಣೆ.

ಅವರ ಪರಿಚಯವು ನನಗೆ ಮೊದಲಾದುದು 1893 ರಲ್ಲಿ. ಆಗ್ಗೆ ನಾನು ಕೆಳಸಾಲೆಯ ಹುಡುಗನಷ್ಟೇ. ಅವರಾಗ್ಗೆ ಬಿ. ಎ. ಗೆ ಓದುತ್ತಿದ್ದರೆಂದು ಕಾಣುತ್ತದೆ. ಇಲ್ಲಿ ಕಲಿಯುತ್ತಿದ್ದ ಪರ ಊರಿನ ನಮ್ಮ ನೆಂಟರ ಬಿಡಾರಕ್ಕೆ ಅವರು ಆಗಾಗ್ಗೆ ಬಂದು ಕನ್ನಡ ಹಾಗೂ ಮರಾಠೀ ಗೀತಗಳನ್ನು ಮಧುರವಾಗಿ ಹಾಡುತ್ತಿದ್ದರು. ಆಗಳಿಂದ ನಮ್ಮೊಳಗೆ ತುಂಬ ಸಲುಗೆ ಇತ್ತು. ಅದೇ ವರ್ಷ ನಾನು ಮಿಶನ್ ಶಾಲೆಗೆ ಹೋಗುತ್ತಿದ್ದಾಗ ಅವರನ್ನು ಆ ಶಾಲೆಯ ಬೀದಿಯಲ್ಲಿ ಕಂಡು, ಅಲ್ಲಿಯೇ ತಡಸಿ ಅವರಿಂದ, 'ಮೆಚ್ಚಿದೆನು ಗಾನಲೋಲೆ' ಎಂಬೊಂದು ಕನ್ನಡ ಹಾಡನ್ನೂ 'ತ್ವಂ ರಾಮಚಂದ್ರ' ಎಂಬ ಒಂದೊಂದು ಭಾಷೆಯ ಒಂದೊಂದು ಬಂತಿಯಂತೆ ಏಳು ಭಾಷೆಗಳ ಇನ್ನೊಂದು ಹಾಡನ್ನೂ ಬಿಳಿಯ ಹಾಳೆ ದೊರೆಯದೆ ಗೂಡು ಬೆಳಕಿನ ಬಗ್ಗೆ ಮಾರಲಿಕ್ಕೆ ಇಟ್ಟಿದ್ದ ಕೆಂಪು ಕಾಗದವನ್ನು ಅವರ ಕಾಸುಗಳಿಂದಲೆ ಪಡಕೊಂಡು ಒಂದು ಅಂಗಡಿಯ ಹೊರಹಲಗೆಯಲ್ಲಿ ಅದನ್ನಿಟ್ಟು ಬರಿಸಿಕೊಂಡುದು ಈಗಲೂ ನೆನಪಿದೆ. ಆ ಬೀದಿಯಿಂದ ಹಾದುಹೋಗುತ್ತಿರುವಂದು ಅಂದಿನ ಆ ದೃಶ್ಯವು ಈಗಲೂ ನನಗೆ ಅಚ್ಚಳಿಯದೆ ಗೋಚರಿಸುತ್ತಿದೆ.

ನಾನು ನೆನವರಿಸ ಬಲ್ಲಷ್ಟರ ಮಟ್ಟಿಗೆ ಅವರು ಮೊತ್ತ ಮೊದಲು ಬರೆದುದು 1896ರಲ್ಲಿ ತೊಡಗಿದ 'ಸತ್ಯದೀಪಿಕೆ' ಎಂಬ ಬಲ್ಮಠದ ಪತ್ರಿಕೆಯಲ್ಲಿ. 'O Call My brother back to me!" ಎಂಬುದನ್ನು ಅವರು ಅನುವಾದಿಸಿದ 'ಮರಳಿ ನೀ ತಮ್ಮನ ಕರೆಯಪ್ಪಾ' ಎಂಬ ಹಾಡೂ, 'The Better Land' ಎಂಬುದನ್ನು ಅನುವಾದಿಸಿದ 'ಉತ್ತಮ ರಾಜ್ಯ' ಎಂಬುದೂ 'ಸತ್ಯದೀಪಿಕೆ'ಯಲ್ಲಿ ಪ್ರಕಟವಾದುವು. ಆಗ್ಗೆ ಅವರು ತಮ್ಮ ಕವಿತೆಗಳ ಕೆಳಗಡೆ 'ರಾವ್ ಮಂಗೇಶ ಪಂಜೆ' ಎಂಬ ಅರ್ಥದಲ್ಲೇನೋ 'ರಾ. ಮ. ಪಂ.' ಎಂಬ ಸಂಕೇತಾಕ್ಷರಗಳನ್ನು ಕೂಡಿಸುತ್ತಿದ್ದರು.

'ಸತ್ಯದೀಪಿಕೆ'ಯಲ್ಲಿ ಇವರು ಬರೆದ ಕವಿತೆಗಳು ಕೆಲವೇ. ಅದರಲ್ಲಿ ಇವರು 'ಹರಟೆಮಲ್ಲ' ಎಂಬ ಗೂಢನಾಮದಿಂದ ನಿತ್ಯನೈಮಿತ್ತಿಕ ವಿಷಯಗಳನ್ನು ಕುರಿತು ಬರೆಯುತ್ತಿದ್ದ ನಗೆಯ ಹಾಗೂ ಮೂದಲೆಯ ಲೇಖಗಳು ಬಹಳ ಸೊಗಸಾಗಿದ್ದು ಎಲ್ಲಾ ಬಗೆಯ ಓದುಗರ ಮೆಚ್ಚುಗೆಗೆ ಪಾತ್ರವಾಗಿದ್ದುವು. ಅದರಲ್ಲಿಯೇ ಇವರು ಬರೆದ 'ಹಳ್ಳಿ' ಹಾಗೂ 'ಬಂದಣಿಕೆ' ಎಂಬಾ ಎರಡು ಗದ್ಯಲೇಖಗಳು (ಇನ್ನೂ ಇದ್ದು

ವೇನೋ ನೆನಪಿಗೆ ಬಾರದು) ಉತ್ತಮವಾಗಿದ್ದುವು. ಅವುಗಳ ಪ್ರತಿಯನ್ನು ಮಿಶ್ಯನ್ ಛಾಪಖಾನೆಯಿಂದ ದೊರಕೊಳ್ಳಲಾದರೆ ಅವು ಮರಳಿ ಪ್ರಕಟಿಸತಕ್ಕವೇ.

ಆ ಮೇಲೆ ೧೯೦೦ರಿಂದ ಪ್ರಕಟವಾದ 'ಸುವಾಸಿನಿ' ಯಲ್ಲಿ ಪಂಜೆಯವರ ಅನೇಕ ಲೇಖಗಳಿವೆ. ಅವಲ್ಲಿ ಹೆಚ್ಚಿನವು ಚಿಕ್ಕ ಕಥೆಗಳು. ಇವಲ್ಲಿ 'ನನ್ನ ಚಿಕ್ಕತಂದೆ,' 'ನನ್ನ ಚಿಕ್ಕತಾಯಿ,' 'ನನ್ನ ಹೆಂಡತಿ,' 'ಭಾರತ ಶ್ರವಣ,' 'ಹೊಟ್ಲಿನಲ್ಲಿ' ಮೊದಲಾದುವಲ್ಲಿ ಅವರ ನೈಸರ್ಗಿಕವಾದ ಹಾಸ್ಯರಸವು ಹುಟ್ಟಿನಿಂದ ಜೇನಂತೆ ಸೂಸುತ್ತದೆ. ಮಿಕ್ಕ 'ದುರ್ಗಾವತಿ,' 'ವೀರಮತಿ,' 'ಪೃಥುಲಾ,' 'ಶೈಲಿನಿ' ಎಂಬುವು ಐತಿಹಾಸಿಕ ಕಥೆಗಳು. ಇವಲ್ಲಿಯ ಕೊನೆಯ ಎರಡೂ, ಅದರ ಎಷ್ಟೋ ಬಳಿಕ ಬರೆದ 'ಕೋಟಿ–ಚೆನ್ನಯ' ಎಂಬಾ ಉತ್ಕೃಷ್ಟ ಕಥೆಯೂ ಕನ್ನಡ ಕಥೆಗಳ ಮೊದಲ ಬಂತಿಯಲ್ಲಿ ಎಂದಿಗೂ ಬಾಳತಕ್ಕುವು. ಇವರ ಕಥೆಗಳನ್ನೆಲ್ಲ ಪುಸ್ತಕ ರೂಪದಲ್ಲಿ ಪ್ರಕಟಿಸಲಿಕ್ಕೆ ಕೈಗೊಂಡಿರುವ ಶ್ರೀ. ಭೀಮರಾಯರಿಗೆ ಪೃಥುಲೆಯ ಒಂದು ಪತ್ರವೇನೋ ಇನ್ನೂ ದೊರೆತಿಲ್ಲದಿರುವುದು ಶೋಚನೀಯವೇ. ಪೃಥುಲೆಯ ಕೊನೆಯಲ್ಲಿ'ಸಾರಿ ಹೇಳುವೆ ನಾನು' ಎಂದು ಪೃಥುಲೆ ಸಾವಂದು ಹಾಡುವ ಅದೊಂದು ಎದೆಕರಗುವ ಹಾಡು ಇದೆ.

೧೯೦೦ರ ವರೆಗೆ ಕನ್ನಡದಲ್ಲಿ ಸಾಹಿತ್ಯದ ಅಂಗವೆನಿಸತಕ್ಕ ಚಿಕ್ಕ ಕಥೆಗಳಿಲ್ಲದುದರಿಂದ, ಅದೊಂದು ನೂತನತೆಯನ್ನು ಸೃಜಿಸಿ ಅದನ್ನು ನಮ್ಮ ಸಾಹಿತ್ಯಕ್ಕೆ ಮೊತ್ತಮೊದಲು ದೊರಕಿಸಿಕೊಟ್ಟ ಪಂಜೆಯವರೇ ಕನ್ನಡ ಕಥೆಗಳ ವಿಧಾತೃರೆಂಬ ಸ್ವಯಂವ್ಯಕ್ತವಾದ ಸತ್ಯಕ್ಕೆ ಬೇರೊಂದು ಸತ್ಯಾಪನವು ಬೇಕೆಂದಿಲ್ಲ.

ಸುವಾಸಿನಿಯಲ್ಲಿ ಇವರು ಬರೆದ ಕವಿತೆಗಳ ಅಡಿಯಲ್ಲಿ ತನ್ನನ್ನು 'ಕವಿಶಿಷ್ಯ'ನೆಂದು ಅಂತುಕೊಂಡಾ ಹೆಸರನ್ನು ಇವರು ಕೊನೆಯ ವರೆಗೂ ಕಾವ್ಯರಚನೆಯ ಮಟ್ಟಿಗೆ ಬಿಟ್ಟಿರಲಿಲ್ಲ. ಇವುಗಳಲ್ಲಿ 'ಕಮಲ,' 'ಭೀಷ್ಮನಿರ್ಯಾಣ,' 'ಲಕ್ಷ್ಮೀಶ,' 'ಹರಿಶ್ಚಂದ್ರ ರಾಜ್ಯವಿಯೋಗ' ಎಂಬಿವು ವೃತ್ತಬದ್ಧವಾಗಿವೆ. ಇವನ್ನು ಬಿಟ್ಟರೆ ಅವರ ವೃತ್ತಬದ್ಧವಾದ ಬೇರೆ ಕೃತಿಗಳಿಲ್ಲ. 'ಪರೀಕ್ಷೆಯಲ್ಲಿ ಪರಾಜಿತನಾದ ವಿದ್ಯಾರ್ಥಿಯ ಪ್ರಲಾಪ' ಎಂಬೊಂದು ಚೌಪದಿಯ ಚಿಕ್ಕ ಕವಿತೆಯೂ 'ಸುವಾಸಿನಿ' ಯಲ್ಲಿ ಪ್ರಕಟವಾಗಿತ್ತು; ಅದನ್ನವರು ಮರಳಿ ಪ್ರಕಟಿಸಲಿಲ್ಲವೇಕೋ. (ಅದರ ೪ ಪದ್ಯಗಳನ್ನು ಶ್ರೀ. ಭೀಮರಾಯರ 'ಹಾಸನ್ ಟೋಪಿ'ಯಲ್ಲಿ ಕಾಣಬಹುದು ) ಅವರ 'ಜೇಡನೂ ನೊಳವೂ,' 'ಅಣ್ಣನ ವಿಲಾಪ' ಮುಂತಾದ ಕೆಲವು ಕವಿತೆಗಳು 'ಸ್ವದೇಶಾಭಿಮಾನಿ'ಯಲ್ಲಿ ಪ್ರಕಟವಾದುವು. ಆ ಬಳಿಕ ಇತರ ಕನ್ನಡ ಕವಿಗಳ ರಚನೆಗಳನ್ನೂ ತನ್ನವನ್ನೂ ಕೂಡಿಸಿ ಇವರು 'ಕನ್ನಡ ಪದ್ಯ ಪುಸ್ತಕ' ಗಳೆಂಬ ಮೂರು ಭಾಗಗಳನ್ನು ಹೊರಡಿಸಿದರು. ಶ್ರೀ. ಎಸ್. ಜಿ. ನರಸಿಂಹಾಚಾರ್ಯರು ವೈಕುಂಠವಾಸಿಯಾದ ಬಳಿಕ ಪಂಜೆಯವರು ಮೆಕ್ಮಿಲನರ ಕನ್ನಡ ಪಠ್ಯಪುಸ್ತಕಗಳಲ್ಲಿ ಎಷ್ಟೋ ಪಾಠಗಳನ್ನೂ ಬಾಸೆಲ್ ಮಿಶ್ಯನಿನವರ ಮೂಲವ್ಯಾಕರಣ, ಭೂಗೋಲಶಾಸ್ತ್ರವೇ ಮೊದಲಾದ ಮಕ್ಕಳ ಪುಸ್ತಕಗಳನ್ನೂ ಬರೆದುದಷ್ಟೇ ಅಲ್ಲ, ಆ ಮಿಶ್ಯನಿನವರು ಪ್ರಕಟಿಸಿದ ಬಾಲಕಥಾವಳಿಯಲ್ಲಿ 'ಕಾಗೆ ಮತ್ತು ಗುಬ್ಬಿ' ಮತ್ತು 'ಅಲೀಬಾಬನ ಕಥೆ'ಗಳನ್ನೂ ಬಾಲಸಾಹಿತ್ಯದವರು ಪ್ರಕಟಿಸಿದ ಎಷ್ಟೋ ಮಕ್ಕಳ ಕಥೆಗಳ ಪುಸ್ತಕಗಳಲ್ಲಿ ಹಲವು ಕನ್ನಡ ಹಾಗೂ ಕೆಲವು ಇಂಗ್ಲೀಷು ಪುಸ್ತಕಗಳನ್ನೂ ಬರೆದು ಆ ಬಗೆಯ ಬಾಲಸಾಹಿತ್ಯದಲ್ಲಿಯೂ ತಾವೇ ನೇತಾರರಾಗಿರುತ್ತಾರೆ.

ಇವರು ಕವಿಯೂ ಕತೆಗಾರರೂ ಅಷ್ಟೇ ಅಲ್ಲ. ಇವರ 'ಶಬ್ದಮಣಿದರ್ಪಣ'ದ ಮೂರನೆಯ ಆವೃತ್ತಿಯ ಯೋಗ್ಯತೆಯನ್ನು ಕುರಿತು ಬಲ್ಲವರಲ್ಲಿ ಎರಡು ಮಾತಿಲ್ಲ. ಸಂಶೋಧನ ವಿಷಯದಲ್ಲಿ ಕೂಡ ಇವರಿಗೆ ತುಂಬ ಆದರವೂ ನೈಪುಣ್ಯವೂ ಇತ್ತೆಂಬುದು ಮಂಗಳೂರಲ್ಲಿ 1927ರಲ್ಲಿ ನೆರೆದ ಸಾಹಿತ್ಯ ಪರಿಷತ್ತಿನ ಅಧಿವೇಶನಕ್ಕೆ ಒಪ್ಪಿಸಿದ 'ಪಂಚಕಜ್ಜಾಯ'ದಲ್ಲಿ ಅವರು ಬರೆದ ಮೂಡುಬಿದರೆಯ ಹೊಸ ಬಸದಿಯ ಶಾಸನಗಳಿಂದಲೂ 'ರಾಷ್ಟ್ರಬಂಧು' ವಿನ 1929ನೆಯ ಯುಗಾದಿಯ ಕಾಣಿಕೆಯಲ್ಲಿ ಬರೆದ ಬಿಳಗಿಯ ಅರಸರ ವಂಶಾವಳಿಯಿಂದಲೂ ಸ್ವದೇಶಾಭಿಮಾನಿಯ 1931 ನೆಯ 'ರಜತೋತ್ಸವ ಸಂಚಿಕೆ,' ಯಲ್ಲಿ ಬರೆದ ಸ್ಥಳನಾಮಗಳೆಂಬ ಲೇಖದಿಂದಲೂ 'ಕಂಠೀರವ'ದ ಕೆಲವು ಸಂಚಿಕೆಗಳಲ್ಲಷ್ಟೆ ತೋರಿ ಇನ್ನೂ ಮುಗಿಯದಿರುವ 'ಪದಾರ್ಥವೇನು?' ಎಂಬ ಸೊಗಸಾದ ಲೇಖದಿಂದಲೂ ಪ್ರತ್ಯಕ್ಷವಿದೆ.

೧೮೯೯–೧೯೦೧ರಲ್ಲಿ ನಾನು ಗವರ್ನಮೆಂಟ್ ಕಾಲೇಜಿನಲ್ಲಿ ಎಫ್. ಎ. ಕ್ಲಾಸಿನಲ್ಲಿ ಓದುತ್ತಿದ್ದಾಗ ಅವರು ನಮ್ಮ ಕನ್ನಡ ಉಪಾಧ್ಯಾಯರಾಗಿದ್ದರು. ಮಧುರವಾದ ಕಂಠದಿಂದ ಹಾಡಿ ಹಾಡಿ ಅವರು ಕಾವ್ಯಗಳನ್ನು ಕಲಿಸುತ್ತಿದ್ದರು. ಹಲವು ವರ್ಷ ಅವರು ಶಾಲೆಗಳ ಇನ್ಸ್‌ಪೆಕ್ಟರ್‌ರಾಗಿದ್ದರು. ಆಗ್ಗೆ ಹಳ್ಳಿಯ ಸಾಲೆಗಳ ಉಪಾಧ್ಯಾಯರನ್ನು ಅವರು ಎಷ್ಟು ಮಮತೆಯಿಂದ ಕಾಣುತ್ತಿದ್ದರೆಂಬುದನ್ನು ಹಳ್ಳಿಹಳ್ಳಿಗಳಲ್ಲಿ ಅವರಿಗಿರುವ ಹೊಗಳಿಕೆಯಿಂದ ತಿಳಿಯಬಹುದು. ಅವರು ಚಲೋ ನಟರೂ ಆಗಿದ್ದರೆಂಬುದಾದರೊ ಈಗಣ ಅನೇಕರಿಗೆ ಗೊತ್ತಿಲ್ಲದ ವಿಷಯ. ಹೆಚ್ಚು ನಾಟಕಗಳಲ್ಲಿ ಅವರು ಪಾತ್ರಗಳನ್ನುವಹಿಸಿದ್ದುದನ್ನು ನಾನು ಕಂಡಿಲ್ಲವಾದರೂ ಇಂಗ್ಲೀಷ್ 'ಚಂದ್ರಹಾಸ' ನಾಟಕದಲ್ಲಿ ದುಷ್ಟಬುದ್ಧಿಯ ಭೂಮಿಕೆಯಿಂದ ಇವರು ಪ್ರೇಕ್ಷಕರನ್ನು ಬೆರಗಾಗಿರಿಸುತ್ತಾರೆಂಬುದನ್ನು ನಾನೇ

ಕಂಡುಬಲ್ಲೆ.

ಇವರ ಕವಿತೆಗಳಲ್ಲಿ ಅದೊಂದು ಬಗೆಯ ದ್ರವಣ (fluidity) ವಿದೆ, ಮನೆವಳಿಕೆ (homeliness) ಇದೆ; ಕಥೆಗಳಲ್ಲಿ ತುಳುಕುವ ಹಾಸ್ಯವಿದೆ, ಬಿರಿವ ಕರುಣವೂ ಇದೆ. ಬೆಲೆಗೊಟ್ಟರೂ ಬಾರದ ಇಂತಹ ವಿಶಿಷ್ಟ ಗುಣಗಳನ್ನು ಹೇಗೆ ತಾನೆ ಮೆಚ್ಚದಿರಬಹುದು?

ಲೇಖಕರನ್ನು ನೈಮಿತ್ತಿಕರು ಹಾಗೂ ನೈತ್ಯಿಕರೆಂದು ಎರಡು ಬಗೆಯಾಗಿ ವಿಂಗಡಿಸಬಹುದು. ನೈಮಿತ್ತಿಕರೆಂದರೆ ತಾತ್ಕಾಲಿಕ ವಿಷಯಗಳನ್ನು ಟೀಕಿಸುವವರು. ನೈತ್ಯಿಕರು ಯಾವತ್ಕಾಲಿಕಗಳನ್ನು ಕುರಿತು ಬರೆವವರು; ಇವರು ಪದ್ಯದಲ್ಲಿ ಬರೆಯಲಿ ಗದ್ಯದಲ್ಲಿ ಬರೆಯಲಿ, ಇವರನ್ನೇ ಕವಿಗೆ ವೇದಗಳಲ್ಲಿ ಹೇಳಿರುವ ದೃಷ್ಟಾರನೆಂಬ ಅರ್ಥದಿಂದ ಕವಿಗಳೆನ್ನುವುದು. ಪಂಜೆಯವರು ಈ ತರಗತಿಗೆ ಸೇರಿದವರು. ಕವಿಗಳೆಂದರೆ ಆನೆಗಳಂತೆ. ಬದುಕಿರುವಂದು ಆನೆಗಳಿಗೆ ಹೊರುವ ಹಾಗೂ ಹೋರುವ ಕೆಲಸವಷ್ಟೇ; ಆಗ್ಗೆ ಅವಕ್ಕೆ ಅಂಕುಶಗಳ ಚುಚ್ಚುಗಳೂ ಆಗಾಗ್ಗೆ ಇವೆ. ಅವಕ್ಕೆ ಬದುಕಿರುವಂದು ಬರುವುದಕ್ಕಿಂತ ಸತ್ತಮೇಲೆ ಬರುವ ಬೆಲೆಯೆಂದರೆ ಅವುಗಳ ತಿರುಳಿನ ಬೆಲೆ.

ಪಂಜೆಯವರ ವಿವಿಧ ಬಗೆಯ ಅನೇಕ ಲೇಖಗಳ ವಿಮರ್ಶೆಗಾದರೊ ಇಂದಿನ ಸಭೆ ಅಭೂಮಿಯೇ. ಆದರೂ ಇವರ ಕವಿತೆಗಳಲ್ಲಿ 'ಹಾವಿನಹಾಡು,' 'ಕಡೆಕಂಜಿ,' 'ಅಣ್ಣನ ವಿಲಾಪ,' 'ಹುತ್ತರಿಹಾಡು' 1923ನೆಯ ಮಾರ್ಚಿಯ 'ಸಹಕಾರಿ'ಯಲ್ಲಿ ಪ್ರಕಟವಾದ 'ಸಲ್ಲಲಿತ ಸಮ ಸತ್ಯ ಸೀಮೆಗೆ ತಾಯೆ ನಡಿಸೆನ್ನ' ಮುಂತಾದುವನ್ನೂ 'ಕಂಠೀರವ'ದ ದಸರಾ ಸಂಚಿಕೆಯಲ್ಲಿ ಪ್ರಕಟವಾದ 'ಹಳೆಯ ಸಬ್ ಎಸಿಸ್ಟೆಂಟನ ಡೈರಿಯಿಂದ' ಹಾಗೂ 'ಪೃಥುಲಾ,' 'ಶೈಲಿನಿ', 'ಕೋಟಿ ಚೆನ್ನಯ' ಎಂಬ ಕಥೆಗಳನ್ನೂ, ಮೂಡಬಿದಿರೆಯ ಶಾಸನಗಳ ವಿಚಾರವನ್ನೂ ಬರೆದಾತನು ಅವುಗಳೊಂದಿಗೆ ಕನ್ನಡ ಸಾಹಿತ್ಯದಲ್ಲಿ ತನ್ನ ಚಿರಂಜೀವಿತೆಗೆ ಸಂಚಕಾರವಿತ್ತಿರುವನೆಂದು ಭಾವಿಸಬಹುದು ಎಂದು ಅಷ್ಟಾದರೂ ಹೇಳದಿರಲಾಗುವುದಿಲ್ಲ.

ತಮ್ಮೊಂದಿಗೆಯ ಇತರ ಲೇಖಕರಲ್ಲಿ ಅವರಿಗೆ ನಿಷ್ಕಳಂಕವಾದ ಸೌಹಾರ್ದವಿತ್ತಲ್ಲದೆ, ಕೇಶಿರಾಜನೆಂದಂತೆ 'ಕವಿಗೆ ಕವಿ ಮುನಿವಂ' ಎಂಬ ಪ್ರಾಯಶಃ ಸಾರ್ವಕಾಲಿಕವೆಂದು ತೋರುವ ಆ ಭಾವವಿರಲಿಲ್ಲ. ಯುವಕರಿಗೆ ಇವರಿತ್ತ ಪ್ರೋತ್ಸಾಹ ಎಷ್ಟೆಂಬುದನ್ನು ನಾನೇ ಅಲ್ಲ ಅವರಿಂದ ಕಲಿತ, ಅವರೊಡನೆ ಕಲೆತ ಅವರೆಲ್ಲರೂ ಬಲ್ಲರು. ಏವಂಚ ಅವರು ಕನ್ನಡದಲ್ಲಿ ಅಭಿರುಚಿಯುಳ್ಳ ನಮ್ಮ ತುಳುನಾಡಿನ ಯುವಕರಿಗೂ ಇತರ ಸಾಹಿತಿಗಳಿಗೂ ಉದಾರ ಕಟಕೋಪಾಧ್ಯಾಯ ನಂತಿದ್ದರು.

ತನ್ನ ಕೃತಿಗಳಿಂದ ಅವರೀಗ ಇಡೀ ಕನ್ನಡನಾಡಿನ ಬದುಕಾದರೂ ಅವರು ಮೊದಲು ನಮ್ಮ ತುಳುನಾಡಿನವರು, ಆ ಮೇಲೆ ತಾನೆ ಸಮಗ್ರ ಕನ್ನಡದವರು ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಆದುದರಿಂದ ಅವರ ಕೃತಿಗಳೆಲ್ಲವನ್ನು ಕೂಡಹಾಕಿ ಅವನ್ನು ಕಮೇಣ ಪ್ರಕಟಿಸುವುದಷ್ಟೇ ಅಲ್ಲ, ವಿವಿಧ ಲೇಖಕರ ಇತರೇತರ ಲೇಖನಗಳುಳ್ಳ ಒಂದು ಸ್ಮಾರಕ ಸಂಪುಟವನ್ನು ಬೇಗನೆ ಅವರ ನೆನಪಿಗೆ ಕಾಣಿಕೆಯಾಗಿ ನೀಡುವುದೂ ನಮ್ಮ ಕರ್ತವ್ಯ.

ಅವರ ನೆನವಾಗುವಂದಂದು ಅದರೊಂದಿಗೆ ನನ್ನ ನೆನವಿಗೆ ಬರುವ ರನ್ನನ ಅಜಿತ ಪುರಾಣದ ಇದೊಂದು ಪದ್ಯವನ್ನೋದಿ ಮುಗಿಸುತ್ತೇನೆ.—

ಮುತ್ತಿಕೋಶಂ ಪದವಿದ್ಯೆ ಕಂಠಿಕೆ ಜಸಂ ಶ್ವೇತಾತಪತ್ರಂ ಸರ
ಸ್ವತಿ ಮಾದೇವಿ ಪದೋಕ್ತಿ ಭೇರಿಕಳಿತಂ ಸಿಂಹಾಸನಂ ಸಂದಲಂ।
ಕೃತಿ ಚಂಚಚ್ಚ ಮರೀಜಮಾಗೆ ಕವಿತಾ ಸಾಮ್ರಾಜ್ಯಮಂತಾಳ್ದ ದು
ನ್ನತಿಯಿಂದಂ ಕವಿಚಕ್ರವರ್ತಿವೆಸರೀಂ ರನ್ನಂಗೆ ಮೆಯ್ವೆತ್ತುದೋ॥

ತಾ ೩೧-೧೦-೩೭ರಂದು ಮಂಗಳೂರು ಮಿತ್ರಮಂಡಳಿಯ ಆಶ್ರಯದಲ್ಲಿ ನಡೆದ ಸಂತಾಪಸೂಚಕ ಸಭೆಯಲ್ಲಿ ಅಧ್ಯಕ್ಷತೆಯನ್ನು ವಹಿಸಿದ ಶ್ರೀ ಮಂಜೇಶ್ವರ ಗೋವಿಂದ ಪೈಯವರು ಮಾಡಿದ ಭಾಷಣ.

# ಉಚಿತ ಸಮ್ಮಾನ

(ದಿವಂಗತ **ಎಂ. ಎಸ್. ಕಾಮತರು.** ಮಂಗಳೂರು.)

ಸಾಹಿತ್ಯಕ್ಷೇತ್ರದಲ್ಲಿ ಧೀರರಾಗಿ ನವವಿಧಾನಾದಿಗಳ ಮೂಲಕ ಉತ್ತಮ ದರ್ಶನಗಳನ್ನು ತೋರಿಸಿಕೊಡುವ ವೈಶಿಷ್ಟ್ಯವುಳ್ಳವರಾಗಿ ಕನ್ನಡಿಗರೆಲ್ಲರ ವಿಶ್ವಾಸವನ್ನೂ ಮೆಚ್ಚುಗೆಯನ್ನೂ ಕಾಣಿಕೆಯಾಗಿ ಪಡೆದವರಿಗೆ ಮಾತ್ರ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸ್ಥಾನವು ಸಲ್ಲುವುದಾಗಿದೆ ಎಂಬುದು ವ್ಯಕ್ತವಾಗಿದೆ. ಈಸಲ ರಾಯಚೂರಲ್ಲಿ ಇದೇ ತಿಂಗಳಲ್ಲಿ ಸೇರುವ ಕರ್ಣಾಟಕ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿ ನಮ್ಮ ಜಿಲ್ಲೆಯವರಾಗಿರುವ ಶ್ರೀಮಾನ್ ಪಂಜೆ ಮಂಗೇಶರಾವ್, ಬಿ. ಎ., ಎಲ್. ಟಿ., ಇವರನ್ನು ಆರಿಸಲಾಗಿದೆ. ಕ್ರಿ. ಶ. ೧೮೭೪ರಲ್ಲಿ ಜನ್ಮವೆತ್ತಿರುವ ಈ ಮಹಾಶಯರ ಷಷ್ಟ್ಯಬ್ದಪೂರ್ತಿ ಉತ್ಸವ ಸಮಾರಂಭದಂತೆ ಈ ಅಧಿವೇಶನವು ನಡೆದಂತಾಗಿದೆ. ಸಾಹಿತ್ಯಕ್ಷೇತ್ರದಲ್ಲಿ ಅತ್ಯಧಿಕವಾದ ಸೇವೆಯನ್ನು ಮಾಡಿದವರಿಗಾದರೂ, ಇಂತಹ ಪದವಿಗಿಂತ ಮತ್ತು ಈ ಸಮಾರಂಭವೂ ಅವರ ಅರುವತ್ತನೆಯ ವರ್ಷದಲ್ಲಿ ನಡೆವ ಸಂದರ್ಭವುಂಟಾಗುವುದಕ್ಕಿಂತ ಹೆಚ್ಚಿನ ಗೌರವವು ದೊರೆವುದು ಅಪರೂಪವೆನ್ನಬಹುದು.

ಬಂಟವಾಳ (ಮಂಗಳೂರಿಂದ ೧೪ಮೈಲು) ವೇ ಇವರ ಜನ್ಮಸ್ಥಾನ. ಬಡತನದಲ್ಲೇ ಬಾಲ್ಯವನ್ನು ಕಳೆದು ಸೋದರರು ಐವರೊಳಗೆ ಅವರು ಎರಡನೆಯವರಾಗಿ ಬೆಳೆಯುತ್ತ ಬಿ. ಎ. ಮುಗಿಯುವುದರೊಳಗೆ ತಮ್ಮ ತಂದೆಯನ್ನು ಕಳೆದುಕೊಂಡು, ಕುಟುಂಬ ಸಂರಕ್ಷಣೆಯ ಮತ್ತು ಕಿರಿಯರಾದ ಮೂವರು ಸೋದರರ ವಿಧ್ಯಾಭ್ಯಾಸದ ಭಾರವನ್ನು ಅವರು ವಹಿಸುವಂತಾಯಿತು.

ಇವರ ಅಣ್ಣಂದಿರು ದಕ್ಷಿಣ ಮಹಾರಾಷ್ಟ್ರದಲ್ಲಿ ಡಿಪ್ಯುಟಿ ಕಮಿಶನರ ಆಫೀಸಿನಲ್ಲಿ ಗುಮಾಸ್ತೆಯಾದರು. ಎಫ್. ಎ. ಪರೀಕ್ಷೆ ಮುಗಿದೊಡನೆ, ಗಣಿತಾಭ್ಯಾಸಮಾಡಿ ಬಿ. ಎ. ಕಲಿಯಬೇಕಾಗಿ ಇವರು ಇಚ್ಛಿಸಿದ್ದರೂ, ಅದಕ್ಕಾಗಿ ಮದ್ರಾಸಿಗೆ ಹೋಗಿ ಅಲ್ಲಿ ಶಿಕ್ಷಣ ಹೊಂದಲು ಅಗತ್ಯವಾಗಿರುವ ಖರ್ಚನ್ನು ನಿರ್ವಹಿಸಲಾರದೆ, ಇತಿಹಾಸವನ್ನೆ ಅಭ್ಯಸಿಸಿ ಇಲ್ಲಿನ ಸೈಂಟ್ ಎಲೋಸಿಯಸ್ ಕಾಲೇಜಿನಲ್ಲಿ ಬಿ.ಎ. ಪರೀಕ್ಷೆಗಾಗಿ ಅಭ್ಯಾಸ ಮಾಡಿದರು. ಪರೀಕ್ಷೆಯಲ್ಲಿ ಇಂಗ್ಲಿಷು ಕನ್ನಡಗಳಲ್ಲಿ ಉತ್ತೀರ್ಣರಾಗುತ್ತಲೇ ಆಗ ತಾನೆ ಮಂಗಳೂರು ಸರಕಾರಿ ಕಾಲೇಜಿನಲ್ಲಿ ಖಾಲಿಬಿದ್ದ ಕನ್ನಡ ಪಂಡಿತ ಸ್ಥಾನಕ್ಕೆ ಮುದ್ದಣ್ಣ ಕವಿಯ ಅರ್ಜಿಯೊಡನೆ ಇವರ ಅರ್ಜಿಯೂ ತಲಪಿರಲು, ಇಂಗ್ಲಿಷ್ ಬಲ್ಲ ಇವರನ್ನೆ ಕನ್ನಡ ಅರಿಯದ ಪ್ರಿನ್ಸಿಪಾಲರು ಕೆಲಸಕ್ಕೆ ನಿಯಮಿಸಿಕೊಂಡರೆಂದು' ಅವರೇ ಟೀಕೆ ಮಾಡುವುದುಂಟು. ಆಗ ಇವರಿಗೆ ಬರೀ ೨೦ ರೂಪಾಯಿ ತಲಬು ದೊರೆಯುತ್ತಿತ್ತು. ಮೊದಲೇ ಹೇಳಿದ ಕುಟುಂಬ ಪೋಷಣಾ ಭಾರವನ್ನು ಕಡಿಮೆ ಮಾಡಲು, ಇವರು ಖಾಸಗಿಯಾಗಿ ವಿದ್ಯಾರ್ಥಿಗಳಿಗೆ ಗಣಿತ ಮೊದಲಾದುವನ್ನು ಕಲಿಸಿ ಹಣ ದುಡಿಯಬೇಕಾಗಿ ಬರಲು, ದಿನಕ್ಕೆ ೧೬ ತಾಸು ದುಡಿದೂ, ಮಧ್ಯೆ ಕನ್ನಡ ಸಾಹಿತ್ಯವನ್ನು ಇಂಗ್ಲೀಷು ಸಾಹಿತ್ಯದೊಡನೆ ಹೋಲಿಸುತ್ತ ನೂತನ ವಿಶೇಷಗಳನ್ನು ಹೇಗೆ ರೂಪಿಸಬಹುದಾಗಿ ಚಿಂತಿಸುತ್ತಲಿದ್ದರು. ಕಾಲೇಜಿನ ಪಾಠಕ್ರಮದಲ್ಲಿ ಹಿಂದಣ ಯಕ್ಷಗಾನ ಅಥವಾ ಗ್ರಂಥ ವಾಚನ ಕ್ರಮದ ರೀತಿಯಲ್ಲಿ ಪದ್ಯಗಳನ್ನು ಓದದೆಯೆ, ಹೊಸ ರೀತಿಯಲ್ಲಿ ಕಿವಿಗೆ ಇಂಪಾಗುವಂತೆ ಇವರು ಓದತೊಡಗಿ, ಇಂಗ್ಲಿಷು ಮಹಾಕಾವ್ಯಗಳಿಗೆ ಟಿಪ್ಪಣಿ ಇರುವ ರೀತಿಯಲ್ಲಿ ಟೀಕೆ ಅನ್ವಯಾದಿಗಳನ್ನು ಕಲಿಸುತ್ತ ಬರಲು, ಇವರ ವಿದ್ಯಾರ್ಥಿಗಳು ಕನ್ನಡ ಕಾವ್ಯವನ್ನು ಹೊಸದೃಷ್ಟಿಯಿಂದ ನೋಡತೊಡಗುವಂತಾಯಿತು.

ಇವರಿಗೆ ವಿದ್ಯಾರ್ಥಿ ದೆಸೆಯಿಂದಲೂ ಕವಿತ್ವಮಾಡುವ ಶಕ್ತಿಯು ಇತ್ತು; ಅದರಲ್ಲೂ ವಿನೋದವಾಗಿ ಬರೆವುದೂ, ಆಡುವುದೂ, ಇವರಿಗೆ ಸುಲಭವೂ ಸಹಜವೂ ಆಗಿದ್ದಿತು. (ಮಾತೃಭಾಷೆಯಾದ) ಕೊಂಕಣಿಯಲ್ಲಿ ಬರೆದ ಕಲವು ಹಾಡುಗಳೂ ಮರಾಠಿ ನಾಟಕಗಳೂ ಜನರಿಗೆ ಮನೋರಂಜನೆ ಮಾಡಿದುವೆಂದು ತಿಳಿದು ಇವರು ಹೊಸರೀತಿಯ ಹಾಡುಗಳನ್ನು ರಚಿಸಬೇಕೆಂದು ಆತುರಪಟ್ಟರು. ಇಷ್ಟರಲ್ಲೇ ಜೈಮಿನಿಭಾರತ, ಗದುಗು ಭಾರತ, ತೊರವೆ ರಾಮಾಯಣ ಮೊದಲಾದುವನ್ನು ಸಂಪೂರ್ಣ ವಿಮರ್ಶೆಯಿಂದ ಓದಿದವರಾಗಿ, ಮೇಧಾಶಕ್ತಿಯ ಬಲದಿಂದ, ಅವುಗಳೊಳಗಣ ಪ್ರಾಮುಖ್ಯ ಭಾಗಗಳನ್ನು ಬಲು ಚೆನ್ನಾಗಿ ಬಾಯಿಪಾಠವಾಗಿ ಹಾಡಿ ಟೀಕಿಸುತ್ತಲಿದ್ದು, ಈಗ ಕಾಲೇಜು ತರಗತಿಗೆ ಪಾಠ ಹೇಳುತ್ತ, ತಮ್ಮಲ್ಲಿದ್ದ ಹಳಗನ್ನಡ ಕಾವ್ಯಗಳ ಜ್ಞಾನವನ್ನು ಹೆಚ್ಚಿಸುತ್ತಲಿದ್ದೂ ಭಾಷಾ ಸಾಹಿತ್ಯದ ಕಡೆಗೆ ತಮಗಿದ್ದ ವಾತ್ಸಲ್ಯವನ್ನೂ ಅಭಿರುಚಿಯನ್ನೂ ಹೆಚ್ಚಿಸಿಕೊಂಡರು. ೧೯೦೨ರಲ್ಲಿ ಬಿ. ಎ. ಮುಗಿಯಿತು; ೧೯೦೫ರಲ್ಲಿ ಮದ್ರಾಸಿನ ಟ್ರೈನಿಂಗ್ ಕಾಲೇಜಿನಲ್ಲಿ ಆರೇ ತಿಂಗಳು ವ್ಯಾಸಂಗಮಾಡಿ ಎಲ್. ಟಿ. ಪರೀಕ್ಷೆ ಪಾರಾಗಿ, ಕೆಲ ತಿಂಗಳಲ್ಲೇ ಮಂಗಳೂರು ರೇಂಜಿನ ಡೆಪ್ಯುಟಿ ಇನ್ಸ್‌ಪೆಕ್ಟರರಾಗಿ ಶಿಕ್ಷಣ ಇಲಾಖೆಯಲ್ಲಿ ನೇಮಕ ಹೊಂದಿದರು. ಮುಂದೆ ನಾಲ್ಕು ವರ್ಷಗಳೊಳಗೆ ಇಲ್ಲಿನ ಇನ್ಸ್

ಪೆಕ್ಟರರಾಗಿ ಬಂದಿದ್ದ ಮೆ॥ ಬ್ರೈತ್‌ವೆಯಿಟ್‌ರವರು ಇವರ ಭಾಷಾಜ್ಞಾನ ಶಿಕ್ಷಣಾನುಭವಗಳನ್ನು ತಿಳಿದು ಮಿ॥ ಮಾರ್ಸ್‌ಡೆನರವರಿಗೆ ತಿಳಿಸಲು, ಅವರು ಅಷ್ಟರಲ್ಲೇ ಇವರು ಮಕ್ಕಳ ಸಲುವಾಗಿ ತಯಾರಿಸಿದ್ದ ಎರಡು ಪುಸ್ತಕ (ರೀಡರು)ಗಳನ್ನು ಕಂಡು, ಮೆಕ್‌ಮಿಲನ್ ಕಂಪೆನಿಯವರಿಗೆ ರೀಡರುಗಳನ್ನು ಬರೆದುಕೊಡುವಂತೆ ಇವರನ್ನು ಪ್ರೋತ್ಸಾಹಿಸಿದರು. ಇದೇ ಇವರ ಮೊದಲನೆ ಪುಸ್ತಕ ಲೇಖನದ ಪ್ರಯತ್ನವೆನ್ನಬೇಕು. ಈ ಕಾಲಕ್ಕೆ ಹಿಂದಣ ಕಾವ್ಯಪುಂಜ, ಹಳೆ ಪಾಠಕಗಳು, ಪದ್ಯಸಾರ ಮೊದಲಾದುವು ಇವೆಲ್ಲಾ ಶಾಲಾ ಪುಸ್ತಕಗಳಾಗಿದ್ದುವು. ಅವನ್ನು ಇವರು ಹಳೇ ಬಗೆಯವುಗಳೆಂದು ತಿಳಿದು, ಹೊಸ ಬಗೆಯ ಪುಸ್ತಕಗಳನ್ನು ಬರೆಯಲೂ ಸಂಗ್ರಹಿಸಲೂ ಪ್ರಯತ್ನಿಸಿದರು. ತಾವೇ ಕೆಲವು ಹಾಡುಗಳನ್ನು ಪದ್ಯಗಳನ್ನು ಬರೆದು ಸೊಗಸಾಗಿ ಆಗಾಗ ಹಾಡುತ್ತಿದ್ದರು. ಆಗ ತಲೆದೋರಿದ 'ಸುವಾಸಿನಿ'ಯಲ್ಲಿ ಇವರು ಹೊಸರೀತಿಯ ಕವನಗಳನ್ನು (ಇವು ಸ್ವತಂತ್ರವೂ ಇವೆ; ಇಂಗ್ಲಿಷಿನ ಭಾಷಾಂತರವಾದವೂ ಇವೆ) ಹಾಸ್ಯಮಯವಾದ ಸಣ್ಣ ಕತೆಗಳನ್ನು (ನನ್ನ ಚಿಕ್ಕತಾಯಿ; ಚಿಕ್ಕಪ್ಪ; ಭಾರತ ಶ್ರವಣ ಇತ್ಯಾದಿ) ಭಾರತ ಸ್ತ್ರೀರತ್ನಗಳನ್ನು ಕುರಿತಾದ ಉತ್ತಮ ರೀತಿಯ ಕಾದಂಬರಿಗಳನ್ನು (ದುರ್ಗಾವತಿ, ಶೈಲಿನಿ) ಇವರು ಆ ಪತ್ರಿಕೆಯ ಪ್ರಮುಖ ಲೇಖಕರಲ್ಲೊಬ್ಬರಾಗಿ ಬರೆದಿರುವುವನ್ನು ಈಗಲೂ ಜನರು ಹುಡುಕಾಡಿ ಬೇಡಿ ಓದಿಕೊಳ್ಳುವುದುಂಟು. 'ಸುವಾಸಿನಿ'ಯೂ ಅದರ ನಂತರ ದಕ್ಷಿಣ ಮಹಾರಾಷ್ಟ್ರದಲ್ಲಿ ಹೊರಟ ಮತ್ತೊಂದು ಅದರಂತಿದ್ದ ಪತ್ರಿಕೆಯೂ ಬಿದ್ದುಹೋದುವು. ಆದರೂ ಇವರು ಈ ರೀತಿಯ ನವ ಕನ್ನಡದಲ್ಲಿ ಪದ್ಯ, ಸಣ್ಣ ಕತೆ, ಕಾದಂಬರಿಗಳನ್ನು ಸ್ವತಂತ್ರ ರೀತಿಯಲ್ಲಿ ಬರೆದಾಗ, ಕರ್ಣಾಟಕದಲ್ಲೆಲ್ಲಿಯೂ ಇಂತಹ ಸಾಹಿತ್ಯ ಪ್ರಯತ್ನಗಳು ನಡೆದಂತೆ ತೋರುವುದಿಲ್ಲ. ಆಗ ವಿದ್ಯಾರ್ಥಿಗಳಾಗಿದ್ದು ಈ ಬಗೆಯ ಹೊಸ ಸಾಹಿತ್ಯವನ್ನು ಓದಿಕೊಂಡು, ತಾವೂ ಪ್ರಯತ್ನಿಸಿ, ಈಚೆಗೆ ಉತ್ತಮವಾದ ಅದೇ ತರಗತಿಯ ಸಾಹಿತ್ಯವನ್ನು ಬರೆದು ಕೀರ್ತಿ ಸಂಪಾದಿಸಿದವರೆಷ್ಟೋ ಇರುವರು. ನಮ್ಮ ಜಿಲ್ಲೆಗೆ ಇದೊಂದು ಅನಾಕ್ಷೇಪಕರವಾದ ಹೆಗ್ಗಳಿಕೆಯ ಮಾತಾಗಿದೆ. ಅದಕ್ಕಾಗಿ ಮೊನ್ನೆತಾನೆ ಅವರನ್ನು ರಾಯಚೂರಿಗೆ ಕಳುಹಿಸಿಕೊಡುವ ಸಮಾರಂಭದಲ್ಲಿ ಮಂಗಳೂರು ಮಿತ್ರ ಮಂಡಲಿಯವರು ಅವರ ಉಪಕಾರ ಸ್ಮರಣೆ ಮಾಡಿದ್ದುದು ಕಾಲೋಚಿತವಾಗಿದೆ.

ಇವರಿಂದ ರಚಿತವಾದ ಮತ್ತು 'ಕವಿಶಿಷ್ಯ' ಎಂಬ ಅಂಕಿತದಿಂದ ಪ್ರಕಟವಾಗಿರುವಂಥ ಪದ್ಯಗಳು ಕನ್ನಡ ಮೊದಲನೆಯ, ಎರಡನೆಯ ಪದ್ಯಪುಸ್ತಕಗಳಲ್ಲಿವೆ. ಎಳೆಮಕ್ಕಳ ಮನೋಭಾವಗಳನ್ನು ಸಂಪೂರ್ಣವಾಗಿ ತಿಳಿದುಕೊಂಡು ಅವರಲ್ಲಿಉತ್ತಮ ಹೊಸ ಸಾಹಿತ್ಯದ ಅಥವಾ ಹೊಸ ಸಾಹಿತ್ಯದಲ್ಲಿ ಉತ್ತಮವಾದುದರ ಕಡೆಗೆ ಅವರ ಮನಸ್ಸು ಹರಿಯುವ ಹಾಗೆ ಮಾಡುವ ಈ ಪದ್ಯಗಳನ್ನು ಬರೆದವರೇ ಶಾಲೆಗಳಲ್ಲಿ ಪ್ರಚಾರಗೊಳಿಸುವುದು ಬಹಳ ಅನುಚಿತವಾಗಿ ಶ್ರೀಯುತರಿಗೆ ಕಂಡುಬಂದರೂ, ಆ ಪದ್ಯಗಳು ತಾವಾಗಿ ಗುಣಜ್ಞರಿಂದ ಪ್ರಚಾರಕ್ಕೆ ಬಂದುವು. ಈ ಸಂಗ್ರಹದ ತರುವಾಯದಲ್ಲಿ ಎಷ್ಟೋ ಇತರ ಪದ್ಯ ಸಂಗ್ರಹಗಳು ಹೊರಟು ಪ್ರಚಾರಕ್ಕೆ ಬಂದರೂ, ಇವುಗಳ ಸ್ಥಾನದಲ್ಲಿ ಇನ್ನೂ ನಿಂತಿಲ್ಲವೆನ್ನಬೇಕು. ಮಕ್ಕಳ ಮನಸ್ಸಿನ ಪರಿಚಯವೇ ಇಲ್ಲದ ಮಹಾ ಪಂಡಿತರೂ ಕವಿಶಿಷ್ಯರ ಪದ್ಯಗಳನ್ನು ಹೀಯ್ಯಾಳಿಸಿ ನುಡಿದುದುಂಟು; ಇವರ ವಿಮರ್ಶೆಗೆ ಉತ್ತರವನ್ನು ಆ ಪದ್ಯಗಳನ್ನು ಓದಿ ಬೆಳೆದ ವಿದ್ಯಾರ್ಥಿಗಳೇ ಕೊಡುತ್ತಿರುವುದೂ ತತ್ಪದ್ಯ ಪ್ರಕಾಶದಿಂದ ಉಂಟಾಗಿರುವ ಹೊಸಭಾವನೆಗಳ ಉಪಕಾರ ಪರಿಣಾಮಗಳನ್ನು ತೋರ್ಪಡಿಸುತ್ತಿದೆ. ಮಹಾಕಾವ್ಯಗಳನ್ನು ಬರೆಯಲು ವ್ಯಯವಾಗುವ ಸಮಯವನ್ನು ಸದುಪಯೋಗಕ್ಕೆ ಬೀಳುವ ಹಾಗೆ ಚಿಕ್ಕ ಹೊಸ ಪದ್ಯಗಳಲ್ಲೇ ವಿನಿಯೋಗಿಸಿ, ಶ್ರೀಯುತರು ಇಂತಹ ಪರಿಣಾಮವನ್ನು ಉಂಟುಮಾಡಿರುವರು.

ಇದೇ ರೀತಿಯಾಗಿ ದೊಡ್ಡ ಕಾದಂಬರಿಗಳ ಕಡೆ ಗಮನ ಕೊಡದೆ, ಮಕ್ಕಳಲ್ಲಿ ವಾಚನಾಭಿರುಚಿಯನ್ನು ಉಂಟುಮಾಡಲೂ, ಚಿಕ್ಕ ಅಜ್ಜಿಕಥೆಗಳನ್ನೂ, ಮಕ್ಕಳ ಕಥೆಗಳನ್ನೂ ಇವರು ಬರೆದರು. ಈ ಭಾಗದಲ್ಲೂ ಇವರೇ ಮೊದಲನೆಯವರು. ಕನ್ನಡವೇನೂ ಮಾತೃಭಾಷೆಯಲ್ಲವಿದ್ದರೂ, ಜನರಲ್ಲಿ ಕನ್ನಡದ ವಿಷಯವಾಗಿ ಅಭಿಮಾನ ಹುಟ್ಟುವಂತೆ ಹಳ್ಳಿಹಳ್ಳಿಗಳಲ್ಲೂ ಈ ಬಗೆಯ ಕಥೆ, ಪದ್ಯಗಳನ್ನು ಹರಡಿಸಿ, ಹಳ್ಳಿಗರನ್ನು ತಮ್ಮ ಸರ್ಕೀಟು ಕಾಲದಲ್ಲಿ ಕರೆಯಿಸಿ, ಅವರಲ್ಲಿ ಯಕ್ಷಗಾನ ಗ್ರಂಥವಾಚನ, ಸ್ಥಳ ಪುರಾಣ, ತುಂಡು ಪದ್ಯಗಳು, ದಂತ ಕಥೆಗಳು ಇತ್ಯಾದಿಗಳನ್ನು ತಾವು ಸಂಗ್ರಹಿಸಿ ಅವುಗಳ ಸ್ವಾರಸ್ಯವು ಅವರಿಗೂ ತಿಳಿಯುವ ಹಾಗೆ ಕನ್ನಡದ ಕಡೆಗೆ ಅವರ ಮನಸ್ಸನ್ನು ಸೆಳೆದು ತಂದ ಅಧಿಕಾರೀವರ್ಗದವರಲ್ಲಿ ಇವರು ಅಪ್ರತಿಮರೆನ್ನಬೇಕು. ಹಳೆಯ ಮಹಾಕಾವ್ಯಗಳ ಸ್ಥಾನ ಮತ್ತು ಕಾಲ ಮರ್ಯಾದೆಯನ್ನು ಈ ಕಾಲಕ್ಕೆ ಬೇಕಾಗಿರುವ ಸಾಹಿತ್ಯದ ಪ್ರಕಾರವನ್ನೂ, ಚಿರಕಾಲಕ್ಕೆ ಉಳಿಯಬಹುದಾದ ಸಾಹಿತ್ಯದ ಲಕ್ಷಣಗಳನ್ನೂ ವಿವರಿಸಿ, ಅಂಧ ಭಕ್ತಿಯನ್ನು ಕಡಿಮೆ ಮಾಡಿ, ನಿಜವಾದ ಶ್ರದ್ಧೆಯು ಸಾಹಿತ್ಯಕ್ಕೆ ಸಲ್ಲುವ ಹಾಗೆ ಪ್ರಯತ್ನಿಸಿ, ಪ್ರಾಚೀನ ಕವಿಗಳನ್ನು ವಂದಿಸುತ್ತಲೂ, ಹೊಸಬರನ್ನು ನಿಂದಿಸದೆಯೂ ಸಂಸ್ಕೃತ ಜ್ಞಾನವೇ ಮಾತ್ರವಲ್ಲದೆ ಈ ಯುಗದ ಸಂಸ್ಕೃತಿಯ ಬೆಂಬಲವನ್ನು ಸಾಹಿತ್ಯದ ಪೋಷಣೆ ಬೆಳವಣಿಗೆಗಳಿಗೆ ಪಡೆದು, ಈ ಕಾರ್ಯಕ್ಷೇತ್ರದಲ್ಲಿ ಕೆಲಸಮಾಡುತ್ತಿರುವವರಲ್ಲಿ

ಶ್ರೀಯುತ ಪಂಜೆಯವರಿಗೆ ಧಾರಾಳವಾಗಿ ಬಹುಮಾನವು ಸಲ್ಲಬೇಕಾಗಿದೆ.

ಅಖಿಲ ಕರ್ನಾಟಕದಲ್ಲಿ ಇವರ ಸ್ಥಾನಕ್ಕೆ ಸರಿಯಾದ ಮಾನವು ಇಂದು ಇವರಿಗೆ ಸೇರಿರುವುದು. ಸಾಹಿತ್ಯದ ಅಭಿಮಾನ ಶಿಕ್ಷಣ ಶಾಸ್ತ್ರದ ಜ್ಞಾನ, ಸರ್ವರಲ್ಲಿ ಸಮಭಾವದಿಂದ ವರ್ತಿಸುವ ನಗುಸ್ವಭಾವ, ಮೆಲ್ಲ ಮೆಲ್ಲನೆ ತಾವು ಮುಂದಡಿಯಿಟ್ಟಂತೆ ಹಲವರನ್ನು ಅದೇ ದಾರಿಯಲ್ಲಿ ಹೆಜ್ಜೆಯಿಟ್ಟು ಬರಲು ಕೈಯೆತ್ತಿ ಹಿಡಿದು ಬೆಂಬಲವಾಗಿ ನಿಂತು ಪ್ರೋತ್ಸಾಹ ಕೊಡುವ ಸಲ್ಲಕ್ಷಣಗಳು ಇವರಲ್ಲಿ ಇದ್ದುದರಿಂದಲೇ ನಮ್ಮ ಜಿಲ್ಲೆಯಲ್ಲಿ ಕನ್ನಡ ಭಾಷಾ ಸಾಹಿತ್ಯಗಳ ಕಡೆಗೆ ಹೆಚ್ಚಿನ ಪ್ರಯತ್ನಗಳು ನಡೆದೂ, ನಡೆಯುತ್ತಲೂ ಇವೆ. ಇನ್ನೂ ವೃದ್ಧರೆಂದು ಇವರನ್ನು ಕರೆಯಲಾಗುವುದಿಲ್ಲ; ಬಹುಕಾಲ ಬಾಳುತ್ತ ಇನ್ನಷ್ಟು ಸಾಂಗವಾಗಿ ಕನ್ನಡ ಭಾಷೆಯ ಅಭಿವೃದ್ಧಿ ಪ್ರಯತ್ನಗಳನ್ನು ಇವರೂ, ಇವರ ಅನುಯಾಯಿಗಳೂ ಮಾಡುತ್ತ, ನಮ್ಮ ಕನಡ ಜಿಲ್ಲೆಯು ಹಿಂದೆ ಉಳಿಯುವ ಭಾಗವಲ್ಲವೆಂದು ಕರ್ಣಾಟಕವು ತಿಳಿಯುವಂತಾಗಲೆಂದು ಹಾರೈಸುತ್ತೇವೆ. ಕನ್ನಡ ಸಾಹಿತ್ಯದ ಚರಿತ್ರೆಯನ್ನು ಬರೆವಂದು ಅವರ ಹೆಸರು ಅದರಲ್ಲಿ ಉಜ್ವಲವಾಗಿ ನಿಲ್ಲಲಿ!

(ಶ್ರೀಯುವರನ್ನು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆರಿಸಿದ ವೇಳೆಯಲ್ಲಿ ಬರೆದುದು—ವಿಶ್ವಭಾರತಿ. ಡಿಸೆಂಬರ್ ೧೯೪೪)

---

# ಕೊಡಗರ ಚಿರಸ್ಮರಣೀಯ ಕವಿಗಳು.

(ಶ್ರೀ. ಬಿ. ಎಸ್. ಕುಶಾಲಪ್ಪನವರು, ಪ್ರಿನ್ಸಿಪಾಲ್, ಗವರ್ನಮೆಂಟ್ ಸೆಂಟ್ರಲ್ ಕಾಲೇಜು; ಮಡಿಕೇರಿ)

ಅಲ್ಲಿ ಆ ಕಡೆ ನೋಡಲಾ ! ।
ಅಲ್ಲಿ ಕೊಡಗರ ನಾಡಲಾ ! ।
ಅಲ್ಲಿ ಕೊಡಗರ ಬೀಡಲಾ ! ।

ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿಮ್ಮನೆ ಬಂದಳೋ ?
ಎಲ್ಲಿ ಮೋಹನ ಗಿರಿಯ ಬೆರಗಿನ ರೂಪಿನಿಂದಲಿ ನಿಂದಳೋ ? ।
ಎಲ್ಲಿ ಮುಗಿಲಲಿ ಮಿಂಚಿನೋಲ್ ಕಾವೇರಿ ಹೊಳೆ ಹೊಳೆ ಹೊಳೆವಳೋ ? ।
ಎಲ್ಲಿ ನೆಲವನು ತಣಿಸಿ ಜನಮನ ಹೊಲದ ಕಳೆ ಕಳೆ ಕಳೆವಳೋ ? ।

ಕೊಡಗಿನ ಪ್ರಕೃತಿ ಸೌಂದರ್ಯವು ಯಾರನ್ನು ತಾನೆ ವಿಸ್ಮಯಗೊಳಿಸಿಲ್ಲ! ಆದರೆ ಅದರ ಆಳವನ್ನು ತಿಳಿದು ಕವನ ಕಟ್ಟಿದವರಲ್ಲಿ ಪ್ರಥಮರು ಪಂಜೆಯವರು ಎಂಬುದರಲ್ಲಿ ಸಂಶಯವಿಲ್ಲ. ಅವರ 'ಹುತ್ತರಿ ಹಾಡು' ಓದಿದವರಿಗೇ ಅದರ ಸವಿಯು ತಿಳಿದಿರುವುದು. ಕೊಡಗರಿಗೆ ಪ್ರತ್ಯೇಕ ಭಾಷೆ ಇದ್ದರೂ ಅದಕ್ಕೆ ಲಿಪಿ ಇಲ್ಲ. ಆದರೂ ಕೊಡಗರ ಪೂರ್ವಿಕರಿಗೆ ತಮ್ಮ ದೇಶದ ಸೊಬಗು ಕಣ್ಮರೆಯಾಗಿರಲಿಲ್ಲ. ತಮ್ಮ ಜೀವನದ ಸಾಹಿತ್ಯದಲ್ಲಿ ತಮ್ಮ ಸೌಂದರ್ಯಾನುಭವ ವನ್ನು ಪ್ರಕಟಿಸಿದ್ದಾರೆ. ಪಾಶ್ಚಾತ್ಯರನೇಕರು ಕೊಡಗನ್ನು ವಿಧ ವಿಧವಾಗಿ ಕರೆದಿದ್ದಾರೆ, ಬಣ್ಣಿಸಿದ್ದಾರೆ. ಶ್ರೀ. ಡಿ. ವಿ. ಗುಂಡಪ್ಪನವರು ತಾವು ನಡೆದು ನೋಡಿದ ಕೊಡಗಿನ ಬೆಡಗನ್ನು, ಇಲ್ಲಿಯ ಪಕೃತಿ ಸೌಂದರ್ಯವನ್ನು, ತಮ್ಮ 'ಕೊಡಗಿನ ಬೆಡಗು' ಎಂಬ ಕವನದಲ್ಲಿ ಕೊರೆದಿದ್ದಾರೆ. ಆದರೆ ಕೊಡಗಿನ ಸೌಂದರ್ಯ, ಇತಿಹಾಸ, ಸ್ಥಳಪುರಾಣ, ಜನರ ಧೈರ್ಯ, ಶೌರ್ಯ, ಔದಾರ್ಯ, ದೇಶಾಭಿಮಾನ, ಇವೆಲ್ಲವನ್ನೂ ಸಂಕ್ಷಿಪ್ತವಾಗಿ ವಿವರಿಸಿ, ಹಾಡಿದವರು ಮಂಗೇಶರಾಯರು ಮಾತ್ರವೇ.

ಪಂಜೆ ಮಂಗೇಶರಾಯರ ನೆನಪು ಕೊಡಗಿನ ಮನೆ ಮಾತು. ಅವರ ಪರಿಚಯ, ಅವರ ಸ್ಮರಣೆ, ಇಲ್ಲದವರು ವಿದ್ಯೆ ಇಲ್ಲದವರು; ಕನ್ನಡ ಸಾಹಿತ್ಯದಲ್ಲಿ ಅಭಿರುಚಿ ಇಲ್ಲದವರು. ಅವರು ಕೊಡಗಿನ ವಿದ್ಯಾ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದು ಊರೂರು ಸುಳಿದಿರುವರು. ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನ ಮುಖ್ಯ ಅಧ್ಯಾಪಕರಾಗಿದ್ದುದರಿಂದ ಅವರ ಶಿಷ್ಯ ವೃಂದ ಬಹು ದೊಡ್ಡದು. ಕೊಡಗಿಗೆ ಅವರು ಸಲ್ಲಿಸಿದ ಸೇವೆಯು ಬರೀ ಸರ್ಕಾರಿ ನೌಕರರಾಗಿದ್ದು ಮಾತ್ರವಲ್ಲ. ಅವರು ರಚಿಸಿದ ಪಠ್ಯ ಪುಸ್ತಕಗಳು— ಮುಖ್ಯವಾಗಿ ಬಾಲ ಸಾಹಿತ್ಯ, ಚಿಕ್ಕ ಮಕ್ಕಳಿಗಾಗಿ ಕಲ್ಪಿಸಿದ ಚೊಕ್ಕ ಕತೆ, ಹಾಡು, ಇವುಗಳನ್ನು ಓದಿ, ಹಾಡಿ, ಕುಣಿದು, ಅಭಿನಯಿಸಿ, ನಲಿದಾಡದ ಮಕ್ಕಳಿಲ್ಲ. ಚಿಕ್ಕ ಮಕ್ಕಳಿಗೆ ಬೋಧಿಸುವಲ್ಲಿ ಅವರ ಶಕ್ತಿ ಅಸಾಧಾರಣ. ಉಪಾಧ್ಯಾಯರಿಗೆ ಮಾದರಿ ಪಾಠ ಕೊಡುವುದರಲ್ಲಿ ನಿಪುಣರು. ಅವರ ನೆನಪು, ಸ್ಮರಣೆ ಹೇಗೆ ತಾನೆ ಮಾಯವಾದೀತು?

ಅವರ ಪರಿಚಯ ನನಗಾದುದು ಮಡಿಕೇರಿ ಹೈಸ್ಕೂಲಿನ ಮುಖ್ಯ ಅಧ್ಯಾಪಕರಾಗಿ ಬಂದ ನಂತರ. ನಾನು ಆಗ ತಾನೆ ಒಬ್ಬ ಸಹಾಯಕ ಉಪಾಧ್ಯಾಯನಾಗಿ ಆ ಶಾಲೆಯಲ್ಲಿ ಸೇರಿದ್ದೆನು. ಮಂಗೇಶರಾಯರ ಆಗಮನವು ನಮ್ಮಲ್ಲನೇಕರಿಗೆ ಸರಿಬೀಳಲಿಲ್ಲ. 'ಅದುವರೆಗೂ ಯುರೋಪಿಯನರೇ ಮುಖ್ಯಾಧ್ಯಾಪಕರಾಗಿದ್ದು, ಫಕ್ಕನೆ, ಪಂಚೆ ಉಟ್ಟ ವ್ಯಕ್ತಿಯು ಆ ಅಧಿಕಾರದ ಪೀಠಕ್ಕೇರುವುದೆಂದರೇನು? ಶಾಲೆಯ ಶಿಸ್ತನ್ನು ಇವರು ಉಳಿಸಲಾಪರೇ? ಪೀಠದ ದರ್ಪವನ್ನು ರಕ್ಷಿಸುವರೇ?' ಎಂಬ ಸಂಶಯ ಪೀಡೆಯು ನಮ್ಮಲ್ಲಿ ಹಲವರಲ್ಲಿ ಅಂಕುರಿಸಿತು. ಒಳಸಂಚಿನ ಪಿಸುಗುಟ್ಟಾಟವು ಸಹಾಯಕ ಉಪಾಧ್ಯಾಯರಲ್ಲಿ ಬಿರುಸಾಗಿ ಎದ್ದಿತು. ಆ ಕಾಲದಲ್ಲಿ ಸ್ವದೇಶಾಭಿಮಾನದ ಚಿಹ್ನೆಗಳು ವಿರಳವಾಗಿದ್ದುವು. 'ತೊಲಗಿ ಇಂಡಿಯದಿಂದ' ಎಂಬ ಗಾಂಧೀಮಂತ್ರವು ಪ್ರತಿಧ್ವನಿಸುವ ಕಾಲವು ಇನ್ನೂ ಇಪ್ಪತ್ತು ವರ್ಷಗಳ ದೂರದಲ್ಲಿತ್ತು. ಪಂಚತಂತ್ರದ ದಮನಕನು ಎಲ್ಲೆಲ್ಲೂ ಇರುವಂತೆ ನಮ್ಮಲ್ಲೂ ಇದ್ದಿರಬೇಕು. ಒಂದು ದಿನ ಮಂಗೇಶರಾಯರು ತಮ್ಮ ಆಫೀಸು ಕೋಣೆಯಲ್ಲಿ ನನ್ನೊಡನೆ ಪ್ರಸ್ತಾಪಿಸುತ್ತಾ ಹೀಗೆಂದರು—'ನಾನು ಈ ಶಾಲೆಯ ಮುಖ್ಯಾಧ್ಯಾಪಕನಾಗಿ ಬಂದಿರುವುದು ನಿಮ್ಮಲ್ಲಿ ಕೆಲವರಿಗೆ ಅಸಮಾಧಾನ. ನನ್ನಲ್ಲಿರುವ ಲೋಪದೋಷಗಳು ನನಗೆ ತಿಳಿಯದು.' ಅದಕ್ಕೆ ನಾನು ಸ್ವಲ್ಪವೂ ಹಿಂಜರಿಯದೆ,

"ಹೌದು, ನಿಮ್ಮ ಆಗಮನದಿಂದ ನನಗೂ ಸಂತೋಷವಿಲ್ಲ"- ಎಂದೆನು. ಕೆಲವು ದಿವಸಗಳು ಕಳೆದವು. ಒಂದು ದಿನ ಅವರು ಉಪಾಧ್ಯಾಯರ ಕೋಣೆಗೆ ಬಂದು, 'ನಾನು ನಿಮ್ಮ ಮುಖ್ಯಾಧ್ಯಾಪಕನಾಗಿ ಬಂದುದು ಕೆಲವರಿಗೆ ಅತೃಪ್ತಿ. ಆದರೆ ಅದು ಹೌದು ಎಂದು ಒಪ್ಪಿಕೊಂಡಿರುವವರು ಕುಶಾಲಪ್ಪನವರು ಮಾತ್ರ' ಎಂದು ಹೇಳಿಯೇ ಬಿಟ್ಟರು. ಕೋಣೆಯಲ್ಲಿ ನಿಶ್ಶಬ್ದ. ನನ್ನ ಮನಸ್ಸಿನಲ್ಲಿ ಮಾತ್ರ ಯಾವ ಚಾಂಚಲ್ಯವೂ ತೋರಲಿಲ್ಲ. ಪ್ರಪಂಚದ ಕುತಂತ್ರ ತಿಳಿಯದ ಯಾರ ಕಟಾಕ್ಷಾಪೇಕ್ಷೆಯೂ ಇಲ್ಲದ ಯೌವನ ಕಾಲ. 'ಬಂದುದು ಬರಲಿ' ಎಂದು ಸಂಪೂರ್ಣ ಸ್ಥೈರ್ಯದಿಂದಲೇ ಕುಳಿತಿದ್ದೆನು. ಆದರೆ ಅಂತಹ ಸಂದರ್ಭಗಳಲ್ಲಿ ಪರಿಣಾಮವು ಸಾಧಾರಣವಾಗಿ ಹೇಗಾಗಬೇಕಿತ್ತೋ ಹಾಗಾಗಲಿಲ್ಲ. ನನ್ನನ್ನು ದ್ವೇಷದಿಂದಾಗಲಿ, ವಕ್ರದೃಷ್ಟಿಯಿಂದಾಗಲಿ ಅವರು ನೋಡಲಿಲ್ಲ. ಶಾಲೆಯಲ್ಲಿ ನನಗೆ ಖಾಯಂ ಸ್ಥಳವಿರಲಿಲ್ಲ. ನನಗಂತೂ ನೌಕರಿ ಬಿಟ್ಟು 'ಸರ್ವೆಂಟ್ಸ್ ಆಫ್ ಇಂಡಿಯಾ' ಸಂಸ್ಥೆಗೆ ಸೇರಬೇಕೆಂಬ ಮಹತ್ವಾಕಾಂಕ್ಷೆ. ಆದರೆ ಪಂಜೆಯವರು ಹ್ಯಾಗೋ ಒಂದು ಸ್ಥಳವನ್ನು ನನಗಾಗಿ ಒದಗಿಸಿದರು. ವಿದ್ಯಾ ಇಲಾಖೆಯಲ್ಲಿ ನಾನೀಗ ದುಡಿಯುತ್ತಿರುವುದಾದರೆ ಅದಕ್ಕೆ ಕರ್ತೃ ಅವರು. ಅನಂತರ ನಾನು ಇಂಗ್ಲಾಂಡಿಗೆ ತರಬೇತಿಗೆ ಹೋಗುವಾಗ ಏರ್ಪಡಿಸಿದ್ದ ಸತ್ಕಾರಕೂಟದಲ್ಲಿ ಬಹಳವಾಗಿ ನೊಂದುಕೊಂಡು, ಕಣ್ಣೀರು ಸುರಿಸುತ್ತಾ ಭಾಷಣಮಾಡಿ, ನನ್ನನ್ನು ಬೀಳ್ಕೊಟ್ಟರು. ಅವರಿಗೆ ನನ್ನಲ್ಲಿ ಅಷ್ಟೊಂದು ವಾತ್ಸಲ್ಯವು ಅಂಕುರಿಸಿತ್ತು.

ಕೊಡಗಿನಲ್ಲಿ ಪಂಜೆಯವರ ಸ್ಮರಣೆಯು ಚಿರಸ್ಥಾಯಿಯಾಗಿ ನಿಲ್ಲಲು ಮಹತ್ವಾದ ಕಾರಣವಿದೆ. ಇದು ಅವರು ವಿದ್ಯಾ ಇಲಾಖೆಯಲ್ಲಿ ಮಾಡಿದ ಸೇವೆ ಮಾತ್ರವೇ ಅಲ್ಲ. ಅವರ ಬಾಲಸಾಹಿತ್ಯದ ಸಂಪಾದನೆಯೂ ಮಾತ್ರವಲ್ಲ. ಅವೆಲ್ಲವೂ ಕಾಲಚಕ್ರದ ಭ್ರಮಣೆಯಲ್ಲಿ ನಾಶಹೊಂದಲೂಬಹುದು. ಆದರೆ ಅವರು ಮಾಡಿದ ಒಂದು ಕೃತಿ ಅವರ ಹೆಸರನ್ನು ಸರ್ವದಾ ಉಳಿಸುವುದು. ಅದೇ ಅವರ 'ಹುತ್ತರಿ ಹಾಡು.' ಕೊಡಗರ ರಾಷ್ಟ್ರಗೀತೆಯೋ ಎಂಬಂತಿದೆ ಅದು. ಬ್ರಿಟನ್ನಿನವರಿಗೆ 'Rule Brittannia' ಪದ್ಯವು ಹೇಗೋ ಹಾಗೆ ಕೊಡಗರಿಗೆ 'ಹುತ್ತರಿ ಹಾಡು.' ಈ ಕವನವನ್ನು ಬರೆದೊಡನೆ ನನ್ನನ್ನು ಕರೆದು ಅವರ ಮೆತ್ತನೆಯ ಮಧುರ ಧ್ವನಿಯಲ್ಲಿ ಓದಿದರು. ಅದನ್ನು ಕೇಳಿದೊಡನೆ ನನ್ನಲ್ಲೊಂದು ಅಪೂರ್ವ ರೋಮಾಂಚನವುಂಟಾಗಿ ನನ್ನಲ್ಲಿದ್ದ ದೇಶಾಭಿಮಾನವು ಹೊರಬಿದ್ದು ನನಗಾದ ಹೆಮ್ಮೆ, ಸಂತೋಷ, ಸ್ಫೂರ್ತಿ ವರ್ಣಿಸಲಸಾಧ್ಯವಾಯಿತು. ನಾನು ಆಗ ಒಂದು ತ್ರೈಮಾಸಿಕದ ಸಂಪಾದಕನಾಗಿದ್ದೆನು. 'ಕವಿಶಿಷ್ಯ' ಎಂಬ ಗುಪ್ತನಾಮದಿಂದ 'ಹುತ್ತರಿ ಹಾಡು' ಪ್ರಕಟವಾಯಿತು. ಮಂಗೇಶರಾಯರು ಕೆಲವು ವಿದ್ಯಾರ್ಥಿಗಳಿಗೆ ಸ್ವತಃ ಹಾಡಿ ಹೇಳಿ, ಅದನ್ನು ಕಲಿಸಿದರು.

ಆದರೆ ಕೊಡಗಿನ ವಾತಾವರಣವು ಆ ಕಾಲದಲ್ಲಿ ತಳಮಳಗೊಂಡಿತ್ತು. ಕೊಡಗು ನೆರೆಪ್ರಾಂತ್ಯದೊಡನೆ ಸಂಯೋಜನವಾಗಬೇಕೋ ಪ್ರತ್ಯೇಕವಿರಬೇಕೋ ಎಂಬ ವಿಷಯದಲ್ಲಿ ಚಳವಳವು ಈಗ ಇರುವಂತೆ ತೀವ್ರವಾಗಿ ಆಗಲೂ ನಡೆಯುತ್ತಿತ್ತು. ಆದರೆ ಬದಲಾವಣೆ ಇಷ್ಟೆ — ಯಾವ ಪಂಗಡವು ಕೊಡಗನ್ನು ಮದ್ರಾಸಿನೊಡನೆ ಸಂಯೋಜಿಸಬೇಕೆಂದು ಆಗ ವಾದಿಸಿತ್ತೋ ಅದೇ ಈಗ ಪ್ರತ್ಯೇಕವಿರುವುದಕ್ಕಾಗಿ ಹೋರಾಡುತ್ತಿದೆ. ಯಾವ ಪತ್ರಿಕೆಯು ಆಗ ಮದ್ರಾಸಿನೊಡನೆ ಸಂಯೋಜಿಸಲು ವಾದಿಸಿತ್ತೋ ಅದು ಈಗ ಪ್ರತ್ಯೇಕವಾದವನ್ನು ಹೂಡಿದೆ. 'ಹುತ್ತರಿ ಹಾಡು' ಸಂಯೋಜನವಾದಿಗಳಿಗೆ ವಿಷವಾಗಿ ತೋರಿಬಂತು.

ವಿಧಿಯು ಮಾಟದ ಕೊಡಗಿದು! ।
ಮೊದಲೆ ನಮ್ಮದು, ಕಡೆಗಿದು!
ಕದಲದೆಮ್ಮನು; ಬಿಡಗಿದು!

*   *   *   *

ನಮ್ಮ ಕೊಡಗಿದು ಜಮ್ಮದು; ।
ಜಮ್ಮ ಕೊಡಗಿದು ನಮ್ಮದು; ।
ನಮ್ಮೊಡಲ್ ಬಿಡಲಮ್ಮದು!

ಈ ಪ್ರಕಾರದ ಕವಿತೆಯು ಪ್ರತ್ಯೇಕವಾದಿಗಳ ಹಿಕ್ಮತ್ತಿನಿಂದಲೋ ಅಥವಾ ಅವರಿಗೆ ಒತ್ತಾಸೆಯಾಗಿಯೋ ಬರೆದಿರಬೇಕೆಂದು ನೆನಸಿ, ಟೀಕೆ ಟಿಪ್ಪಣಿಗಳು ಧಾರಾಕಾರವಾಗಿ ಪ್ರಕಟವಾದುವು. ಹಾಸ್ಯಪದ್ಯಗಳು (Paradies- ಅಣಕವಾಡುಗಳು) ಸಹ ಹೊರಬಿದ್ದವು. ಇದರಿಂದ ಪಂಜೆಯವರು ನೊಂದುಕೊಂಡರೆಂಬುದರಲ್ಲಿ ಸಂಶಯವಿಲ್ಲ. ಆಶ್ಚರ್ಯವೂ ಇಲ್ಲ. ನಾನು ಹೇಳಬಹುದಾದ ಸಮಾಧಾನವನ್ನು ಅವರಿಗೆ ಹೇಳಿದೆನು. ತಮ್ಮತಮ್ಮ ಜೀವಮಾನ ಕಾಲದಲ್ಲೇ ಮೆಚ್ಚುಗೆ ಪಡೆದ ಕವಿಗಳ ಸಂಖ್ಯೆ ಬಹು ಕಡಿಮೆ. ಕೀಟ್ಸ್ ಕವಿಯ ಕವನಗಳು ಅವನ ಜೀವಿತಕಾಲದಲ್ಲಿ ಮೆಚ್ಚಲ್ಪಡಲಿಲ್ಲ. ಅವನ ಅಕಾಲ ಮೃತ್ಯುವಿಗೆ ಅದೊಂದು ಕಾರಣವೆಂದೂ ಹೇಳುತ್ತಾರೆ.

"Who Killed Keats?
I say the Quarterly
So very Tartarly."

'ಹುತ್ತರಿ ಹಾಡು' ರಾಜಕೀಯ ವಾತಾವರಣದ ಕಾರಣ ಕೊಡಗಿನಲ್ಲಿ ಸನ್ಮಾನಿಸಲ್ಪಡಲಿಲ್ಲ.

ಕೊಡಗಿನ ಭವಿಷ್ಯದ ವಿಷಯದಲ್ಲಿ ಇನ್ನೂ ಕೊನೆಯ ತೀರ್ಮಾನವು ಆಗಿಲ್ಲ. ಇದು ಪ್ರತ್ಯೇಕವೇ ಇರಲಿ, ಸಂಯೋ

ಜನವೇ ಆಗಲಿ, 'ಹುತ್ತರಿ ಹಾಡ'ನ್ನು ಬರೆದ ಕವಿಯು ಅದ್ಭುತ ಕವಿಯು ಮತ್ತು ಅದು ಆವೇಶಪೂರ್ಣವಾಗಿ ಬರೆದ ಕವಿತೆ ಎಂಬ ವಿಷಯ ಎಲ್ಲರೂ ಒಪ್ಪಲೇಬೇಕಾದುದು. ಆ ಪದ್ಯಕ್ಕೆ ದೊರೆಯಬೇಕಾದ ಸ್ಥಾನಮಾನಗಳು ಕೊಡಗಿನಲ್ಲಿ ಇನ್ನೂ ಸಂಪೂರ್ಣವಾಗಿ ದೊರೆತಿಲ್ಲ. ಕಾರಣ ಈ ರಾಜಕೀಯ ಭಿನ್ನಾಭಿಪ್ರಾಯಗಳೇ ಇರಬಹುದು.

ಪ್ರಕೃತದ ರಾಜಕೀಯ ಸುಂಟರಗಾಳಿಯ ಧೂಳಡಗಿ ಪ್ರಶಾಂತತೆ ಎಲ್ಲೆಲ್ಲೂ ನೆಲಸುವ ಕಾಲ ಬಂದೇಬರುತ್ತದೆ. ಕೊಡಗುಜನತೆಯಲ್ಲಿ ಆಗ ನವಜೀವನ, ನವಚೈತ್ಯನ್ಯಗಳನ್ನು ಎದ್ದೇಳಿಸಬೇಕೆಂದರೆ ಪಂಜೆ ಮಂಗೇಶರಾಯರ 'ಹುತ್ತರಿ ಹಾಡ'ನ್ನು ಕಂಠಪೂರ್ತಿಯಾಗಿ ಹಾಡಬೇಕು. ಎಲ್ಲಾ ಜನಾಂಗಕ್ಕೂ, ರಾಷ್ಟ್ರಗೀತೆಯು ಬೇಕು. ಔದಾರ್ಯದ ಆವಿರ್ಭಾವವು ಮನೆಯಲ್ಲಾಗುವುದಂತೆ. ಹಾಗಿದ್ದರೆ ದೇಶ ಪ್ರೇಮದ ಆವಿರ್ಭಾವವೂ ಮನೆಯಲ್ಲೇ ಆಗಬೇಕು. ಸ್ಥಳಿಕ ದೇಶಾಭಿಮಾನವನ್ನು ಹುರಿದುಂಬಿಸಬೇಕಾದರೆ ಕೊಡಗಿಗೆ 'ಹುತ್ತರಿ ಹಾಡು' ಬೇಕು. ಆಗ ಎಲ್ಲರೂ ನೆನಸುವುದು ಪಂಜೆ ಮಂಗೇಶರಾಯರನ್ನು. ಸಾಹಿತ್ಯವು ಸಾಯಬೇಕಾದರೆ ಜನರ ಭಾಷೆ ಸಾಯಬೇಕು. ಹುತ್ತರಿ ಹಾಡು ಮಡಿಯಲು ಕೊಡಗರು ಮಡಿಯಬೇಕು.

# ತನ್ನನ್ನು ಬಿಟ್ಟಿಲ್ಲದ ಹಾಸ್ಯಗಾರ.

ಶ್ರೀ. ಎಚ್. ಸಂಜೀವ ರಾವ್.

ನನಗೆ ಶ್ರೀ ಪಂಜೆ ಮಂಗೇಶರಾಯರ ಪ್ರಥಮ ಸಂದರ್ಶನವಾದುದು ೧೯೦೯ನೇ ಫೆಬ್ರುವರಿ ತಿಂಗಳಲ್ಲಿ ಮಂಗಳೂರಿನ ಗವರ್ನ್ಮೆಂಟು ಕಾಲೇಜಿನ ಜೂನಿಯರ್ ಎಫ್. ಎ. ಕ್ಲಾಸಿಗೆ ಸೇರಿದಾಗ. ಆಗ ಅವರ ಪ್ರಾಯ ಸುಮಾರು ೨೩-೨೪ ವರ್ಷಗಳು. ಇವರು ಬಿ. ಎ. ಡಿಗ್ರಿ ಪಡೆಯುವುದಕ್ಕೆ ಇಂಗ್ಲಿಷು ಒಂದರಲ್ಲಿ ಪಾಸಾಗುವುದು ಉಳಿದಿತ್ತು. ಅವರನ್ನು ಕಾಲೇಜಿನ ಕನ್ನಡ ಪಂಡಿತರನ್ನಾಗಿ ನೇಮಿಸಿ ಆಗ ಸುಮಾರು ೬-೭ ತಿಂಗಳು ಆಗಿದ್ದುವು. ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾದ ಶ್ರೀ॥ ಟಿ. ಶ್ರೀನಿವಾಸ ಅಯ್ಯಂಗಾರರ ಬೋಧನೆಗೆ ಪಳಗಿದ ನನಗೆ ಶ್ರೀ ಪಂಜೆಯವರು ಕನ್ನಡವನ್ನು ಕಲಿಸುವುದು ಬಹಳ ನವೀನ ರೀತಿಯಾಗಿ ತೋರಿತು. ಕ್ಲಾಸಿನಲ್ಲಿ ಕಂದಪದ್ಯ, ವಾರ್ಧಿಕ ಷಟ್ಪದಿ ಮುಂತಾದ ಪದ್ಯಗಳನ್ನು ಅವುಗಳಿಗೆ ಅನುಸಾರವಾದ ಬೇರೆ ಬೇರೆ ರಾಗದಿಂದ ನಿಧಾನವಾಗಿ ಮಧುರ ಸ್ವರದಿಂದ ಹಾಡುವುದು ಇವರ ವಾಡಿಕೆಯಾಗಿತ್ತು. ಪದ್ಯಗಳನ್ನು ಲಕ್ಷಣವಾಗಿ ಹಾಡುವಾಗಲೇ ಆ ಪದ್ಯಗಳ ಅರ್ಥವು ನಮಗೆ ಚೆನ್ನಾಗಿ ತಿಳಿಯುವುದಲ್ಲದೆ ಉದ್ದುದ್ದ ವಾಕ್ಯಗಳನ್ನು ಹೇಗೆ ಪರಿಚ್ಛೇದ ಮಾಡಬೇಕೆಂಬುದೂ ಸೊಗಸಾಗಿ ತಿಳಿಯುತ್ತಿತ್ತು. ಅನಂತರ ಕ್ಲಿಷ್ಟಪದಗಳ ಅರ್ಥವನ್ನು ಹೇಳಿಕೊಡುತ್ತಿದ್ದರು. ಇವರ ಕ್ಲಾಸು ಯಾವಾಗಲೂ ಎಷ್ಟರ ಮಟ್ಟಿಗೆ ಮನೋರಂಜಕವಾಗಿರುತ್ತಿತ್ತೆಂದರೆ ಗಂಟೆಯಾದುದೇ ನಮಗೆ ತಿಳಿಯುತ್ತಿರಲಿಲ್ಲ.

ಕ್ಲಾಸಿನಿಂದ ಹೊರಗೆ ಹೋದಕೂಡಲೇ ತಾನು ಉಪಾಧ್ಯಾಯನೆಂಬ ಗೌರವವನ್ನಿಟ್ಟುಕೊಳ್ಳದೆ ಕಾಲೇಜು ವಿದ್ಯಾರ್ಥಿಗಳೊಡನೆ ಅವರ ಆಟಪಾಟಗಳಲ್ಲಿ ಸೇರಿ ಬಹು ಸ್ನೇಹಭಾವದಿಂದಿರುತ್ತಿದ್ದರು. ಹುಡುಗರೆಲ್ಲರೂ ಇವರ ಬುದ್ಧಿಚಾತುರ್ಯಕ್ಕೂ, ರಸಿಕತೆಗೂ, ಸರಳತೆಗೂ ಇವರನ್ನು ಬಹಳ ಮೆಚ್ಚುತ್ತಿದ್ದರು. ಕ್ಲಾಸಿನ ಹೊರಗೆ ಅವರು ನಮ್ಮಲ್ಲಿ ಅಷ್ಟು ಅನ್ಯೋನ್ಯವಾಗಿದ್ದರೂ, ಕ್ಲಾಸಿನಲ್ಲಿ ಅವರ ಚುಚ್ಚುವ ಪರಿಹಾಸ್ಯಕ್ಕೆ ಎಲ್ಲಾ ಹುಡುಗರು ಬೆದರುತ್ತಿದ್ದರಿಂದ, ಉಪಾಧ್ಯಾಯರಿಗೆ ತೋರಿಸತಕ್ಕ ಗೌರವ ಇವರಿಗೆ ಕೊಟ್ಟು ಬಹು ವಿಧೇಯರಾಗಿರುತ್ತಿದ್ದರು. ಇವರು ಪಂಡಿತರೊಂದಿಗೆ ಪಂಡಿತನಾಗಿಯೂ ಬೇರೆ ಉಪಾಧ್ಯಾಯರೊಡನೆ ಉಪಾಧ್ಯಾಯನಂತೆಯೂ ಹುಡುಗರೊಡನೆ ಹುಡುಗನಂತೆಯೂ ವರ್ತಿಸುತ್ತಿದ್ದರು. ನಮ್ಮ ಜೊತೆಯಲ್ಲಿರುವಾಗ ನಮ್ಮ ಹುಡುಗಾಟಿಕೆಯಲ್ಲಿ ಪಾತ್ರ ಹಿಡಿಸುವುದಕ್ಕೆ ಸ್ವಲ್ಪವೂ ಹಿಂಜರಿಯುತ್ತಿರಲಿಲ್ಲ ಎಂಬುದಕ್ಕೆ ಆಗ ನಡೆದ ಒಂದು ಘಟನೆಯನ್ನು ಇಲ್ಲಿ ವಿಸ್ತರಿಸಿದರೆ ತಪ್ಪಾಗಲಾರದು ಎಂದು ನಾನು ನಂಬುತ್ತೇನೆ.

ಒಂದು ದಿನ ಕೋರ್ಟುಕಚೇರಿಗಳಿಗೆ ರಜವಿಲ್ಲದಿದ್ದರೂ ನಮ್ಮ ಕಾಲೇಜಿಗೆ ರಜ. ಆವತ್ತು ಬೆಳಗ್ಗೆ ನಾವೆಲ್ಲರೂ ಟೆನ್ನಿಸು ಆಡಿ, ಕಾಫಿ ಕ್ಲಬ್ಬಿನಲ್ಲಿ ತಿಂಡಿತಿನ್ನುತ್ತಿರುವಾಗ ಹೊರಗಿನ ಕೋಣೆಯಲ್ಲಿ ಒಬ್ಬ ಧಾಂಡಿಗನಾದ ಗೌಡನನ್ನು ನೋಡಿದೆವು. ಅವನ ಉಡುಪು ಅವನು ಆವತ್ತೇ ಹಳ್ಳಿಯಿಂದ ಪಟ್ಟಣಕ್ಕೆ ಬಂದಿರುವನೆಂದು ಕೂಗಿ ಹೇಳುವಂತಿತ್ತು. ಅವನ ಉಡುಪಿನಲ್ಲಿ ಶುಭ್ರವಾದುದು ಒಂದಿಂಚು ಅಗಲವಾದ ಇಸ್ತ್ರಿಮಾಡಿದ ಜರಿ ಪೇಟಾ ಒಂದೇ. ಅದನ್ನು ಯಾರೋ ಒಬ್ಬರು ಅವನ ತಲೆಗೆ ಸೊಗಸಾಗಿ ಸುತ್ತಿದ್ದರೆಂಬುದನ್ನು ಅವನ ನಟನೆಯೂ, ಪೇಟಾದಲ್ಲಿರುವ ಗುಂಡುಸೂಜಿಗಳೂ (Pins) ಒಂದು ಸೇಫ್ಟಿ ಪಿನ್ನೂ (Safety pin) ಸೂಚಿಸುತ್ತಿದ್ದುವು. ಗೌಡನ ಉಡುಪನ್ನು ಟೀಕಿಸಿ, ಹೇಗಾದರೂ ಮಾಡಿ ಅವನ ಪೇಟಾವನ್ನು ಕೆಳಗೆ ಉರುಳಿಸಿದರೆ ಬಹಳ ತಮಾಷೆಯಾಗಿರುವುದೆಂದು ನಾವೆಲ್ಲರೂ ನುಡಿಯುತ್ತಿರುವಾಗ ಶ್ರೀ ಪಂಜೆಯವರ ಸವಾರಿಯು ನಾವಿದ್ದಲ್ಲಿಗೆ ಚಿತ್ತೈಸಿತು. "ಎನ್ರಪ್ಪಾ, ನನ್ನ ನೋಡಿ ನೀವೆಲ್ಲರೂ ಏಕೆ ನಗುತ್ತಿರುವಿರಿ?" ಎಂದರು. "ನಾವು ನಗುತ್ತಿದ್ದುದರ ಕಾರಣ ನೀವಲ್ಲ ಸಾರ್. ಆ ಗೌಡನ ರುಮಾಲನ್ನು ಕೆಳಗೆ ಉರುಳಿಸಿ ತಮಾಷೆ ನೋಡಬೇಕೆಂಬ ಉತ್ಸುಕತೆ ನಮ್ಮೆಲ್ಲರಿಗೂ ಇದೆ. ಆದರೆ ಅವನನ್ನು ನೋಡಿದರೆ ಭಯವಾಗುತ್ತೆ" ಎಂದನೊಬ್ಬ. "ಅಷ್ಟೆಯೇ, ಗೌಡನು ಸಿಟ್ಟಾಗದ ಹಾಗೆ ಅವನ ಪೇಟಾ ನೀವು ಯಾರಾದರೂ ಕೆಡಿಸಿ! ನಾನು ನಿಮ್ಮ ಆವತ್ತಿನ ಕಾಫಿ ಖರ್ಚು ಕೊಡುತ್ತೇನೆ. ನಿಮ್ಮಿಂದಾಗದಿದ್ದರೆ ನಾನು ಅದನ್ನು ಕೆಡಿಸುತ್ತೇನೆ, ನನ್ನ ಕಾಫಿಯ ಖರ್ಚು ನೀವು ಕೊಡುತ್ತೀರಾ?" ಎಂದರು ಶ್ರೀ ಪಂಜೆಯವರು. ನಾವೆಲ್ಲರೂ ಒಪ್ಪಿದೆವು. ಅದಲ್ಲದೆ "ಆದಷ್ಟು ಬೇಗನೆ ಅದನ್ನು ಕೆಡಿಸಿ ಸಾರ್" ಎಂದು ನಾವೆಲ್ಲರೂ ಬಲವಂತಮಾಡಿದೆವು. ಇವರು ಕೂಡಲೇ ಗೌಡನಲ್ಲಿಗೆ ಹೋಗಿ, ಅವನಿಗೆ ನಮಸ್ಕರಿಸಿ, ಅವನ ಊರು, ಮಂಗ್ಳೂರಿಗೆ ಬಂದಿರುವ ಕಾರಣ, ಅವನ ಗದ್ದೆ ಹೊಲಗಳ ಬೆಳೆ ಮುಂತಾದುವುಗಳ ವಿಷಯವಾಗಿ ಮಾತನಾಡುತ್ತಿರುವಾಗ "ಸ್ವಾಮಿ-ಕ್ಷಮಿಸಿ, ಚೇಳು, ಚೇಳು" ಎಂದು ಹೇಳುತ್ತಾ ಬಲವಾಗಿ ಕೈಯಿಂದ ಹೊಡೆದು ಪೇಟಾವನ್ನು ಹಾರಿಸಿಯೇ ಬಿಟ್ಟರು. ಸುಮಾರು ಆರು ಅಡಿ ದೂರದಲ್ಲಿ ಧೂಳಿನಲ್ಲಿ ಬಿದ್ದಿರುವ ಪೇಟಾವನ್ನು ಗೌಡನ

ಅಂಜುತ್ತಾ, ಎತ್ತಿ, ಒದರಿ, ಬೆದರಿ, (ಅದು ಬಿಚ್ಚಿ ಹೋದದ್ದಲ್ಲದೇ, ಅದರ ಗುಂಡುಸೂಜಿಗಳೆಲ್ಲಾ ಬಿದ್ದು ಹೋದುವು) "ಸ್ವಾಮಿ, ನೀವು ಬಹಳ ಉಪಕಾರ ಮಾಡಿದಿರಿ. ಕೋರ್ಟಿಗೆ ಹೋಗುವ ಮೊದಲು ಚೇಳು ನನ್ನನ್ನು ಕಚ್ಚಿದ್ದರೆ ನನ್ನ ಕೆಲಸವೆಲ್ಲಾ ಕೆಟ್ಟುಹೋಗುತ್ತಿತ್ತು" ಎಂದು ಹೇಳುತ್ತಾ, ಆ ಪೇಟಾವನ್ನು ಕೈಗೆ ಬಂದ ಹಾಗೆ ತಲೆಗೆ ಸುತ್ತಿಕೊಂಡನು.

ಶ್ರೀ ಪಂಜೆಯವರು ನಾವು ಇದ್ದಲ್ಲಿಗೆ ಹಿಂದಿರುಗಿದೊಡನೆ ನಾವೆಲ್ಲರೂ ಅವರನ್ನು ಅಭಿನಂದಿಸಿದೆವು. ಆಗ ಶ್ರೀ ಪಂಜೆಯವರು "ನಿಮ್ಮಂತಹ ಮಂಗಗಳ ಈಶನಾಗಬಹುದೆಂತಲೇ ನನಗೆ 'ಮಂಗೇಶ' ಎಂದು ನಾಮಕರಣ ಮಾಡಿದ ಹಾಗೆ ಕಾಣುತ್ತೆ" ಎಂದರು.

ಶ್ರೀ ಪಂಜೆಯವರು ಎಫ್. ಎ. ಓದುತ್ತಿರುವಾಗ ತನ್ನ ಕಾಲೇಜಿನ ಒಬ್ಬ ಪ್ರೊಫೆಸರ್ (Professor) ನಡು ಪ್ರಾಯ ದಾಟಿದ ಮೇಲೆ ಒಂದು ಚಿಕ್ಕ ಹುಡುಗಿಯನ್ನು ಎರಡನೇ ಮದುವೆಯಾದಾಗ ಈ ಕನ್ಯಾಬಲಿಯ ವಿಷಯವಾಗಿ ಬಹಳ ವಿನೋದವಾದ ಕವಿತೆಯೊಂದನ್ನು ಕೊಂಕಣಿ ಭಾಷೆಯಲ್ಲಿ ರಚಿಸಿ ತನ್ನ ಸಹಪಾಠಿಗಳಿಗೆ ಕೊಟ್ಟರಂತೆ. ಅದನ್ನು ಅವರ ಸ್ನೇಹಿತನೊಬ್ಬನು ಮುದ್ರಿಸಿ ಮಂಗಳೂರಿನಲ್ಲಿ ಹಂಚಿದರಂತೆ. ನಾನು ಮಂಗಳೂರಿಗೆ ಹೋದಾಗ ನನಗೂ ಒಂದು ಪ್ರತಿ ದೊರಕಿತು. ಇವರು ಕನ್ನಡ ಪ್ರೇಮಿಯಾಗಿದ್ದುದರಿಂದ ಕನ್ನಡದಲ್ಲಿ ಕವನಗಳನ್ನು ಬರೆಯುವುದಕ್ಕೆ ವಿದ್ಯಾರ್ಥಿಯಾಗಿರುವಾಗಲೇ ಪ್ರಾರಂಭಿಸಿದ್ದರು. ಇವರನ್ನು ಕನ್ನಡ ಪಂಡಿತರನ್ನಾಗಿ ನೇಮಿಸಿದ ಒಂದು ವರ್ಷದೊಳಗೆ ಅವರ ಮಿತ್ರರಾದ ಶ್ರೀ ಬೋಳಾರ ವಿಠಲರಾಯರ ಜೊತೆ ಸೇರಿ "ಸುವಾಸಿನಿ" ಎಂಬ ಮಾಸಪತ್ರಿಕೆಯನ್ನು ಪ್ರಕಟಿಸಲು ಆರಂಭಿಸಿದರು. ತನಗೆ ಡಿಗ್ರಿ ಇಲ್ಲದುದರಿಂದ ತನ್ನ ಭಾವಮಯ್ದುನರಾದ ಶ್ರೀ ಬೆನಗಲ್ ರಾಮರಾವ್ ಎಂ. ಎ., ಎಲ್‌ಎಲ್.ಬಿ. ಇವರನ್ನು ಸಂಪಾದಕರನ್ನಾಗಿಟ್ಟುಕೊಂಡು ತಾನೇ ಅದರ ಸಂಪಾದಕೀಯ ಕೆಲಸವನ್ನೆಲ್ಲಾ ಜರುಗಿಸುತ್ತಿದ್ದರು. ಜೂನಿಯರ್, ಸೀನಿಯರ್ ಕ್ಲಾಸಿನ ಕಾಲೇಜು ಹುಡುಗರಿಗೆಲ್ಲಾ ಕವನಗಳನ್ನು ಬರೆಯುವುದಕ್ಕೂ ಬಹಳ ಉತ್ತೇಜನಕೊಡುತ್ತಿದ್ದರು. ನನ್ನ ಸಹಾಧ್ಯಾಯಿ ಆಗಿದ್ದ ಶ್ರೀ ಮ. ಗೋವಿಂದ ಪೈ ಅವರು ವಿದ್ಯಾರ್ಥಿಯಾಗಿರುವಾಗ ಬರೆದ ಕವನಗಳೂ ಇತರ ವಿದ್ಯಾರ್ಥಿಗಳು ಬರೆದ ಸಣ್ಣ ಕತೆಗಳೂ "ಸುವಾಸಿನಿ" ಪತ್ರಿಕೆಯಲ್ಲಿ ಪ್ರಕಟವಾಗಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಣ್ಣ ಕಥೆಗಳನ್ನು ಕನ್ನಡದಲ್ಲಿ ಬರೆಯುವುದಕ್ಕೂ ಬರೆಸುವುದಕ್ಕೂ ಇವರೇ ಪ್ರಾರಂಭಿಸಿದರು ಎಂದು ಹೇಳಿದರೆ ಎಂದಿಗೂ ತಪ್ಪಾಗಲಾರದೆಂದು ನಾನು ನಂಬುತ್ತೇನೆ.

ನಾನು ಸೀನಿಯರ್ ಕ್ಲಾಸಿನಲ್ಲಿರುವಾಗ ಶ್ರೀ ಪಂಜೆಯವರು ರಜೆ ಪಡೆದು ಮದ್ರಾಸಿಗೆ ಹೋಗಿ ಇಂಗ್ಲೀಷಿನಲ್ಲಿ ಪಾಸುಮಾಡಿ ಡಿಗ್ರಿ ಪಡೆದರು. ನಾನು ಮದ್ರಾಸಿನಲ್ಲಿ ಕ್ರಿಶ್ಚಿಯನ್ ಕಾಲೇಜಿನಲ್ಲಿ ಬಿ.ಎ. ಓದುತ್ತಿರುವಾಗ ಇವರು ಸೈದಾಪೇಟೆಯಲ್ಲಿರುವ ಟೀಚರ್ಸ್ ಕಾಲೇಜಿನಲ್ಲಿ ಎಲ್.ಟಿ.ಪರೀಕ್ಷೆಗೆ ಓದುತ್ತಿದ್ದರು. ಇವರು ಎಲ್. ಟಿ. ಆಗಿ, ಮದ್ರಾಸ್ ಬಿಟ್ಟನಂತರ ಇವರನ್ನು ನಾನು ಎರಡೇ ಸಲ ಸಂದರ್ಶಿಸಿದೆ. ಒಂದನೇ ಸಲ, ಇವರನ್ನು ಸೆಂಟ್ರಲ್ ಹೈಸ್ಕೂಲಿನ ಹೆಡ್ಮಾಸ್ಟರಾಗಿರುವಾಗ ಮಡಿಕೇರಿಯಲ್ಲಿಯೂ, ಎರಡನೆಯ ಸಲ, ಇವರು ಉದ್ಯೋಗದಿಂದ ನಿವೃತ್ತಿ ಹೊಂದಿದ ಬಳಿಕ, ಬೊಂಬಾಯಿಯಲ್ಲಿಯೂ ಕಂಡೆನು.

(ಜೀವನ ಮಾಸಪತ್ರಿಕೆಯಿಂದ.)

---

# ಪಂಜೆ ಮಂಗೇಶರಾಯರು

(ಶ್ರೀ ಎಂ. ಎಸ್. ಅನಂತಪದ್ಮನಾಭ ರಾವ್. ಮಡಿಕೇರಿ.)

ಶ್ರೀಯುತ ಪಂಜೆ ಮಂಗೇಶರಾಯರು ೨೫-೨೬ ವರ್ಷಗಳ ಹಿಂದೆ ಕೊಡಗಿನ ಶಾಲಾ ಅಸಿಸ್ಟೆಂಟ್ ಇನ್‌ಸ್ಪೆಕ್ಟರನಾಗಿ ಮಂಗಳೂರಿಂದ ಬಂದರು. ಬಂದ ಒಂದೆರಡು ತಿಂಗಳುಗಳಲ್ಲೇ ಅವರ ಪರಿಚಯವನ್ನು ಮಾಡಿಕೊಳ್ಳುವ ಸುಯೋಗ ನನಗೆ ಒದಗಿತು. ಅದು ವರೆಗೆ ಅವರ ಕವನಗಳು, ಅಜ್ಜಿ ಕಥೆಗಳು, ಮೂಲವ್ಯಾಕರಣ ಇವುಗಳ ಮುಖೇನ ಅವರ ಹೆಸರಿನ ಗುರುತಾಗಿತ್ತು. ಅವರನ್ನು ನೋಡುವ ಆತುರ ಬಹುವಾಗಿದ್ದರೂ ವಿದ್ಯಾರ್ಥಿದೆಸೆಯಲ್ಲಿದ್ದ ನಮಗೆ ಅವರ ದರ್ಶನ ಸುಲಭವೋ ಅಲ್ಲವೋ ಎಂಬ ಸಂಶಯ ಮತ್ತು ಭಯ ಬಾಧಿಸುತ್ತಿದ್ದ ಕಾರಣ ಅವರ ಪರಿಚಯ ಮಾಡಿಕೊಳ್ಳಲು ಸಾವಕಾಶವೇ ಆಯಿತು. ನನಗೂ, ನನ್ನಂತೆಯೇ ನನ್ನ ಮಿತ್ರರು ಕೆಲವರಿಗೂ, ಅವರನ್ನು ಹೋಗಿ ಕಾಣಲು ಏನಾದರೂ ಅವಕಾಶ ಬೇಕಾಗಿತ್ತು. ಅಂತಹ ಸಮಯವೂ ಒದಗಿತು, ಅಥವಾ ಅಂಥಾ ಸುಸಮಯವನ್ನು ಕಲ್ಪಿಸಿಕೊಂಡೆವು. ನಮ್ಮ "ಬಾಲಸಮಾಜ"ದ ವಾರ್ಷಿಕೋತ್ಸವವು ಆಗತಾನೆ ನಡೆಯುವುದಿತ್ತು. ಆ ಸಮಾರಂಭಕ್ಕೆ ನಮ್ಮ ಗುಂಪಿನವರು ಶ್ರೀ॥ ಮಂಗೇಶರಾಯರವರನ್ನು ಅಧ್ಯಕ್ಷಪೀಠಕ್ಕೆ ಆರಿಸಿದರು ಮತ್ತು ಅವರನ್ನುಕಂಡು ಒಪ್ಪಿಸುವ ಭಾರವೂ ನಮ್ಮ ಪಾಲಿಗೇ ಬಿತ್ತು. ನಮಗೆ ಬೇಕಾಗಿದ್ದುದೂ ಅದೇ. ಮರುದಿವಸವೇ ಬೆಳಗ್ಗೆ ನಾವು ನಾಲ್ಕು ಜನ ಸ್ನೇಹಿತರು ಮಂಗೇಶರಾಯರ ಮನೆಗೆ ಹೋದೆವು. ಬಾಗಿಲಲ್ಲೇ ರಾಯರು ಯಾವುದೋ ಪದ್ಯವನ್ನು ಅಸ್ಪಷ್ಟವಾಗಿ ಹಾಡುತ್ತ ನಿಂತಿದ್ದರು. ನಾವೆಲ್ಲರೂ ಕೈಮುಗಿದು ನಮಿಸಿದಾಗ—

"ಓ ಹೊ ಹೊ-ಎಲ್ಲರೂ ದಯಮಾಡಿಸಬೇಕು. ಬಹಳ ಸಂತೋಷ ....... ಬನ್ನಿ. ಕುಳಿತುಕೊಳ್ಳಿ" ಎಂದು ಬಹುವಿಧವಾಗಿ ಹಲವಾರು ದಿವಸಗಳ ಪರಿಚಯದವರಿಗಿಂತ ಮಿಗಿಲಾಗಿ ಮಾತನಾಡಿಸಿ ನಾವು ಬಂದ ಉದ್ದೇಶವೇನೆಂದು ಕೇಳಿದರು. ನಮ್ಮೊಳಗೆ ಆ ದಿವಸ ನಡೆದ ಸಂಭಾಷಣೆಯನ್ನು ಆಗ ನಡೆದ ಮಾತುಗಳಿಂದಲೇ ಜ್ಞಾಪಕವಿದ್ದಷ್ಟು ಬರೆದಿರುತ್ತೇನೆ:-

ಮಂ.—ಏನು, ಇಷ್ಟು ಮಂದಿ ಯಾಕೆ ಬಂದಿರಿ? ವಿಶೇಷವೇನು?

ನಾವು —ನಮ್ಮ ಬಾಲಸಮಾಜದ ವಾರ್ಷಿಕೋತ್ಸವ .....ನೇ ತಾರೀಖು ನಡೆಯುವುದಿದೆ. ತಾವು ಅಗ್ರಾಸನ ವಹಿಸಬೇಕು.

ಮಂ.— ಇರಲಿ, ಏನೇನು ಕಾರ್ಯಕ್ರಮವಿಟ್ಟುಕೊಂಡಿರುವಿರಿ?

ನಾವು.—ಅಧ್ಯಕ್ಷರ ಭಾಷಣ, ನಮ್ಮ ವರದಿ ಓದುವುದು, ಅನಂತರ ಸಭಾಧ್ಯಕ್ಷರ .......

ಮಂ.— ಆ ಕಾರ್ಯಕ್ರಮಗಳೆಲ್ಲಾ ಇರತಕ್ಕದ್ದೇ. ನನಗೂ ಗೊತ್ತು. ಇಷ್ಟೆಯೋ,ಬೇರೆಯೇನಾದರೂ ವಿನೋದ, ಎಂದರೆ.... ಹ್ಞೂ .... ತಿಂಡಿ-ತೀರ್ಥ ಸಿಹಿ ಉಂಟೋ?

ನಾವು. — ಇದೆ.

ಮಂ.—ಸರಿ, ಹಾಗಾದರೆ ಬರುತ್ತೇನೆ.....ಆ ಮೇಲೆ.

ನಾವು.— ಮಧ್ಯಾಹ್ನ ಟೀಪಾರ್ಟಿ. ಸಾಯಂಕಾಲ ಎರಡು ನಾಟಕ.

ಮಂ.—ಕನ್ನಡ ನಾಟಕವೋ, ಇಂಗ್ಲೀಷೋ?

ನಾವು.— ಎರಡೂ.

ಮಂ.—ನಾನೊಂದು ನಾಟಕ ಬರೆದಿದ್ದೇನೆ. ಅದನ್ನೇ ಆಡಿ. ಹಾಗಾದರೆ ನಾನು ಅಧ್ಯಕ್ಷನಾಗುತ್ತೇನೆ.

ನಾವು.- ಯಾವ ನಾಟಕ, ಸರ್?

ಮಂ.—(ಸ್ವಲ್ಪ ಯೋಚಿಸಿ) ಯಾವ ನಾಟಕ ಎಂದರೆ ....."ತಿಮ್ಮನ ಹಿಕ್ಮತ್ತು" ಆಗಬಹುದೋ?

ನಾವು.—(ನಮಗೆ ನಾಟಕದ ಹೆಸರು ಚೆನ್ನಾಗಿ ತೋರಲಿಲ್ಲ.)

ನಮ್ಮ ನಾಟಕ ಈಗಾಗಲೇ ತಯಾರಾಗಿದೆಯಲ್ಲ! ಈ ಹೊಸ ನಾಟಕದ ಅಭ್ಯಾಸಕ್ಕೆ ಸಮಯವೇ ಇಲ್ಲವಲ್ಲ!

ಮಂ.—ಸಮಯವಿಲ್ಲ!! ನೀವೆಂಥ ವಿದ್ಯಾರ್ಥಿಗಳು? ಅಭ್ಯಾಸಕ್ಕೆ ಅರ್ಧ ದಿವಸ ಸಾಕು. ಎಲ್ಲಿ, ನಿಮ್ಮ ಪಾತ್ರಧಾರಿಗಳನ್ನು ಕರೆತನ್ನಿ, ನಾನು ಅಭ್ಯಾಸ ಮಾಡಿಸುತ್ತೇನೆ. ಈ ಸಾಯಂಕಾಲ ರಿಹರ್ಸಲ್— ಏನು, ಆದೀತೋ ?

ನಾವು.— ಈಗಾಗಲೇ ನಾವು ಅಭ್ಯಾಸ ಮಾಡಿದ ನಾಟಕ ?

ಮಂ. - ಅದನ್ನೂ ಆಡಿ, ಇದನ್ನೂ ಆಡಿ, ಜನರು ನೋಡಿ ಆನಂದಪಡಲಿ.

ನಮ್ಮ ಮನಸ್ಸಿನ ಕಳವಳವನ್ನರಿತ ಶ್ರೀ॥ ರಾಯರು ನಮಗೆ ಸಮಾಧಾನವಾಗುವುದಕ್ಕೋ ಏನೋ—"ನಿಮ್ಮ ಬೇರೆ ಸ್ನೇಹಿತರನ್ನೂ ಕೇಳಿ ಈ ಸಂಜೆ ಬಂದು ತಿಳಿಸಿ" ಎಂದರು.

"ತಿಮ್ಮನ ಹಿಕ್ಮತ್ತೆ"ಂಬ ನಾಟಕ ಇನ್ನೂ ಸಿಕ್ಕಿಲ್ಲ. ಬಾಯಿಯಿಂದ ಬಂದದ್ದು ಕೃತಿಯಲ್ಲಿ ಮೂಡಲಿಲ್ಲ. ಅಲ್ಲದೆ ಶ್ರೀ॥ ರಾಯರು ಯಾವುದೋ ಕಾರಣದಿಂದ ಅಧ್ಯಕ್ಷರಾಗಿ

ಬರಲು ಆಗಲಿಲ್ಲ. ಅವರೇ ನಮಗಾಗಿ ಶ್ರಮವಹಿಸಿ ಬೇರೆ ಅಧ್ಯಕ್ಷರನ್ನು ಗೊತ್ತುಮಾಡಿ ನಮ್ಮ ಕಾರ್ಯಕ್ರಮಗಳಾವು ದಕ್ಕೂ ಅನನುಕೂಲವಾಗದ ರೀತಿಯಲ್ಲಿ ಅನುಮಾಡಿ ಕೊಟ್ಟರು.

೧೯೨೨ನೇ ಇಸವಿಯ ಮಧ್ಯಭಾಗದಲ್ಲಿ ಶ್ರೀಮಾನ್ ರಾಯರು ಮಡಿಕೇರಿ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿ ಬಂದರು. ಅದೇ ದಿವಸ ನಮ್ಮ ತರಗತಿಗೇ ಮೊದಲಾಗಿ ಅವರು ದಯಮಾಡಿಸಿದರು. ಶಾಲೆಯ ಕೋಣೆಯನ್ನು ಪ್ರವೇಶಿಸುವಾಗಲೇ, ತಮ್ಮ ದೊಡ್ಡ ರುಮಾಲನ್ನು ಎಡಗೈಯಲ್ಲಿ ಹಿಡಿದು ಬಲಗೈಯಿಂದ, ಅಲ್ಪ ಸ್ವಲ್ಪ ಉಳಿದಿದ್ದ ನರೆನವಿರನ್ನು ಸವರುತ್ತಾ, "My hairs are grey but not with years ..." ಎಂಬ ಶಬ್ದಗಳನ್ನು ಹೇಳುತ್ತಾ ಉಪಾಧ್ಯಾಯರ ಮೇಜನ್ನು ಸಮೀಪಿಸಿ, ಮುಗುಳ್ನಗೆ ನಗುತ್ತಾ, ನಿಂತಿದ್ದ ಎಲ್ಲಾ ವಿದ್ಯಾರ್ಥಿಗಳನ್ನೂ ಕುಳಿತುಕೊಳ್ಳುವಂತೆ ಸಂಜ್ಞೆ ಮಾಡಿದರು.

ಒಬ್ಬೊಬ್ಬರನ್ನಾಗಿ ಕೈಸನ್ನೆಯಿಂದ ಪ್ರಶ್ನಿಸಿದರು. ಈ ಸಂಜ್ಞೆಯ ಅರ್ಥ ಯಾರಿಗೂ ಆಗಲಿಲ್ಲ. ಯಾರೂ ಪುಸ್ತಕವನ್ನು ತೆರೆದಿರಲಿಲ್ಲ. ಆ ದಿವಸದ ಪಾಠ "Prisoner of Chillon" ಎಂಬ ಇಂಗ್ಲಿಷ್ ಪದ್ಯ. ನಾನು ಪುಸ್ತಕ ತೆರೆದು ನೋಡಿದೆ. ರಾಯರು ಗಟ್ಟಿಯಾಗಿ ಹೇಳಿಕೊಂಡು ಬಂದ ಶಬ್ದಗಳು ಅಂದಿನ ಪಾಠದ ಮೊದಲನೆಯ ಸಾಲು. ನನ್ನ ಸರದಿ ಬಂದಾಗ ಮುಂದಿನ ಸಾಲುಗಳನ್ನು ಓದಿದೆ. ಪಾಠ ರಾಯರು ಬಂದಾಗಲೇ ಆರಂಭವಾಯಿತೆಂದು ಆಗ ವಿದ್ಯಾರ್ಥಿಗಳಿಗೆಲ್ಲಾ ಗೋಚರವಾಯಿತು. ಇವರು ಮುಖ್ಯೋಪಾಧ್ಯಾಯರಾಗಿ ಬಂದ ಕೇವಲ ಒಂದೆರಡು ವಾರಗಳಲ್ಲೇ ಪ್ರಾಥಮಿಕ, ಮಾಧ್ಯಮಿಕ ಮತ್ತು ಹೈಸ್ಕೂಲಿನ ವಿದ್ಯಾರ್ಥಿಗಳೆಲ್ಲರೊಡನೆಯೂ ಪರಿಚಯಮಾಡಿಕೊಂಡು ಸಲುಗೆಯಿಂದಿರುತ್ತಿದ್ದರು. ಅವರಿಗೆ ಬಾಲಕರೂ, ವಿದ್ಯಾರ್ಥಿಗಳೂ, ಹೆಣ್ಣುಮಕ್ಕಳೂ, ಹಿರಿಯರೂ ಎಲ್ಲರೂ ಸ್ನೇಹಿತರೇ. ಈ ಕಾರಣದಿಂದ ಎಳೆಯ ಮಕ್ಕಳಿಗೆ ಪಂಜೆಯವರೆಂದರೆ ಭಯವೇ ಇರಲಿಲ್ಲ. ಬೆಳಗ್ಗೆ ಶಾಲೆ ಸೇರುವುದಕ್ಕೆ ಮುಂಚೆ ವ್ಯಾಯಾಮ. ಮೈದಾನದಲ್ಲಿ ಎಳೆಯ ಬಾಲಕರನ್ನು ನಾಲ್ಕು ಸಾಲುಗಳಾಗಿ ನಿಲ್ಲಿಸಿ, ಸಂಗೀತ ಅಧ್ಯಾಪಕರು "ಎಲ್ಲಿರುವೆ ತಂದೆ ಬಾರೋ ಮಾರುತಿ'' ಎಂಬ ಗೀತೆಯನ್ನು ತಾಳಬದ್ಧವಾಗಿ ಪಿಟೀಲಿನಲ್ಲಿ ಬಾರಿಸುತ್ತಿದ್ದರೆ, ಮಕ್ಕಳನ್ನು ಆ ತಾಳಕ್ಕೆ ತಕ್ಕಂತೆ "Left-right" ಮಾಡಿಸಿ ಕವಾಯತು ಮಾಡಿಸುತ್ತಿದ್ದರು.

ಕೈಯಲ್ಲಿ ಯಾವ ಪುಸ್ತಕವೂ ಇಲ್ಲದೆ ಆಟನೋಟಗಳಿಂದಲೇ ಮಕ್ಕಳ ಮನಸ್ಸನ್ನು ಸೆಳೆದುಬಿಡುವ ಶಕ್ತಿ ಅವರದು. ಪ್ರತಿ ಆಟವೂ ನೋಟವೂ ಸಣ್ಣ ಕತೆಯ ಸ್ವರೂಪವನ್ನು ತಾಳಿ, ಅದೇ ಅಂದಿನ ಪಾಠದ ವಿಷಯವಾಗುತ್ತಿತ್ತು. ಕ್ರಿಸ್‌ಮಸ್ ಪರೀಕ್ಷೆಯ ಸಮಯಕ್ಕೆ ಶ್ರೀ॥ ರಾಯರು ಬಂದು ಎರಡು ಮೂರು ತಿಂಗಳುಗಳಾಗಿದ್ದರೂ ಈವರೆಗೂ 'ಒಂದು ಪುಟದ' ಮೇಲೆ ನಮಗೆ ಇಂಗ್ಲಿಷ್ ಪಾಠ ನಡೆದಿರಲಿಲ್ಲ. ಪಠ್ಯಪುಸ್ತಕದ ಇನ್ನೂ ಮುಕ್ಕಾಲುಭಾಗ ಪಾಠವಾಗದೇ ಉಳಿದಿತ್ತು. ಆ ಸಮಯದಲ್ಲಿ ಇಂಗ್ಲಿಷ್ ಪಾಠವನ್ನು ಬೇರೊಬ್ಬ ಅಧ್ಯಾಪಕರಿಗೆ ವಹಿಸಿ ತಾವು ಅಂದಿನಿಂದ ಕನ್ನಡ ಪಾಠವನ್ನು ಇಟ್ಟುಕೊಂಡರು. ಆ ಹೊಸ ಇಂಗ್ಲಿಷ್ ಅಧ್ಯಾಪಕರು ಏನು ಮಾಡಲೂ ತಿಳಿಯದೆ ಪುಸ್ತಕದ ಬಹುಭಾಗವನ್ನು ಒಂದು ವಾರದೊಳಗಾಗಿ, ಯಾವಬಗೆಯ ವಿವರಣೆಯೂ ಇಲ್ಲದೆ, ಓದಿ ಮುಗಿಸಿದರು. ಮರುದಿವಸವೇ ನಮಗೊಂದು ಕ್ಲಾಸ್ ಪರೀಕ್ಷೆಯ ಏರ್ಪಾಡೂ ಆಯಿತು. ಆ ಪರೀಕ್ಷೆಗೆ ವಿದ್ಯಾರ್ಥಿಗಳೆಲ್ಲರೂ ಶರಣು ಹೊಡೆದರು. ಶಾಲೆಗೇ ಯಾರೂ ಬರಲಿಲ್ಲ. ಶ್ರೀ॥ ಪಂಜೆಯವರೂ ರೇಗಿದರು. ಇಂಗ್ಲಿಷ್ ಅಧ್ಯಾಪಕರಂತೂ ಕಿಡಿಕಿಡಿಯಾದರು. ಮರುದಿವಸ ಚರಿತ್ರೆಯ ಗುಂಪಿನವರು ಶರಣಾಗತರಾದರು. ಲೆಖ್ಖದ ಗುಂಪಿನವರು ಸಭೆ ಸೇರಿ ಮುಖ್ಯೋಪಾಧ್ಯಾಯರು ಮಾಡಿದ ಪಾಠದವರೆಗೆ ಮಾತ್ರ ಪರೀಕ್ಷೆ ನಡೆಸುವುದಾದರೆ ಕ್ಷಮೆ ಬೇಡುವುದಾಗಿ ತಿಳಿಸಿದರು. ನಾವು ಕಮರ್ಷಿಯಲ್ ಗುಂಪಿನವರು. ಆ ಕಡೆಯೂ ಇಲ್ಲ, ಈ ಕಡೆಯೂ ಇಲ್ಲವೆನ್ನುವಂತೆ ಉಪಾಯ ಹುಡುಕಿ, ಈ ಸಣ್ಣ ಗುಂಪಿಗೆ ನಾನೇ ಮುಖಂಡನಾಗಿ, ಮುಖ್ಯೋಪಾಧ್ಯಾಯರನ್ನು ಕಂಡು "ಯಾರೂ ಪರೀಕ್ಷೆಗೆ ಬಾರದ ಕಾರಣ ನಾವೂ ಬರಲಿಲ್ಲ. ಬರಬಾರದೆಂಬ ಉದ್ದೇಶ ನಮಗಿರಲಿಲ್ಲ, ಆದರೂ ಇತರ ವಿದ್ಯಾರ್ಥಿಗಳಿಗೆ ನಮ್ಮ ಮೇಲೆ ಆಗ್ರಹವಾಗಬಾರದೆಂಬ ಕಾರಣ ಹಿಂದೆ ನಿಂತೆವು" ಎಂದೆ.

"ನಿಮ್ಮ ಸ್ನೇಹಿತರೆಲ್ಲರನ್ನೂ ಕರೆದುತನ್ನಿ, ಇನ್ನೊಂದು ಪರೀಕ್ಷೆ ಮಾಡುವ" ಎಂದರು ಪಂಜೆಯವರು.

ಆ ಮಧ್ಯಾಹ್ನ ವಿದ್ಯಾರ್ಥಿಗಳೆಲ್ಲರೂ ಶಾಲೆಯ ಇದಿರಿನ ಮೈದಾನದಲ್ಲಿ ಸಾಲಾಗಿ ನಿಂತರು. ಶ್ರೀ॥ ಮಂಗೇಶರಾಯರೂ, ಇಂಗ್ಲಿಷ್ ಅಧ್ಯಾಪಕರೂ ನಮ್ಮ ಇದಿರಿನಲ್ಲಿ ನಿಂತರು. ಪಂಜೆಯವರು ಸ್ವಲ್ಪ ಸಮಯ ಸುಮ್ಮನಿದ್ದು ಆ ಮೇಲೆ ನಕ್ಕರು.

"ನಿಮ್ಮೆಲ್ಲರನ್ನೂ ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಸೆಲೆಕ್ಟ್ ಮಾಡಿರುತ್ತೇನೆ. ನಾಳೆ ಒಂದು ಕ್ಲಾಸ್ ಪರೀಕ್ಷೆ ಆಗಲೇಬೇಕು. 'Prisoner of Chillon' ಪಾಠದವರೆಗೆ. ಇನ್ನು ಹೋಗಿ ನಿಮ್ಮ ತರಗತಿಗೆ" ಎಂದರು. ವಿದ್ಯಾರ್ಥಿಗಳು ಊಹಿಸಿದ್ದ ಮಾತುಗಳು ಒಂದೂ ಅವರ ಬಾಯಿಂದ ಬರಲೇ ಇಲ್ಲ.

ಕನ್ನಡ ಪಾಠದ ಕಾಲದಲ್ಲಿ ವಿದ್ಯಾರ್ಥಿಗಳಿಗೆ "ಪ್ರಸಿದ್ಧ ಕನ್ನಡ ಕವಿಗಳ" ಪರಿಚಯ ಮಾಡಿಕೊಟ್ಟು, ಅವರ ಪದ್ಯ

ಗಳನ್ನು ರಾಗವಾಗಿ ತಾವೇ ಹೇಳಿ, ಇತರರಿಂದ ಹೇಳಿಸಲು ಪ್ರಯತ್ನಪಡುತ್ತಿದ್ದರು. ಇಂಗ್ಲೀಷಿಗಿಂತ ಕನ್ನಡ ಯಾವ ವಿಧದಲ್ಲೂ ಕಡಮೆಯಾದುದಲ್ಲವೆಂಬಂಶವನ್ನು ಸಮರ್ಥಿಸುತ್ತಾ ಲಕ್ಷ್ಮೀಶನ ಕಾವ್ಯದಿಂದ, ಕುಮಾರವ್ಯಾಸ ಭಾರತದಿಂದ ಪದ್ಯಗಳನ್ನು ಹಾಡಿ ತೋರಿಸುತಿದ್ದರು. ಚಂಡಿಯ ಕಥೆಯ ಪಾಠ ಮಾಡುವಾಗ ಜೈಮಿನಿ ಭಾರತದ ಅನೇಕ ಸುಂದರವಾದ ಪದ್ಯಗಳನ್ನು ಹಾಡಿದರು. ದ್ರೌಪದಿಯ ಕೃಷ್ಣಸ್ತುತಿ ಅವರ ಅಚ್ಚುಮೆಚ್ಚು. ಪಾಠ ಹಾಗಿರಲಿ. ಪಂಜೆಯವರ ಬಾಯಿಯಿಂದ ಕನ್ನಡ ಕಾವ್ಯವಾಚನವನ್ನು ಕೇಳುವ ಕುತೂಹಲವೊಂದೇ ನಮ್ಮೆಲ್ಲರಿಗಿದ್ದ ಆತುರ.

ಒಂದಾವರ್ತಿ ಇಲ್ಲಿನ ಬಾಲಸಮಾಜದಲ್ಲಿ "ಕನ್ನಡವು ಸಂಸ್ಕೃತಕ್ಕಿಂತ ಉತ್ಕೃಷ್ಟ"ವಾದುದೆಂಬ ಚರ್ಚೆಯ ಏರ್ಪಾಡಾಯಿತು. ಪಂಜೆಯವರೇ ಅಧ್ಯಕ್ಷರಾಗಿದ್ದರು. ಚರ್ಚೆಯೂ ಸ್ವಾರಸ್ಯವಾಗಿ ನಡೆಯಿತು. ಒಂದೆರಡು ಮತ ಹೆಚ್ಚಾಗಿ ಸಂಸ್ಕೃತವೇ ಉತ್ಕೃಷ್ಟವೆಂದು ತೀರ್ಮಾನವಾಯಿತು. ಅಧ್ಯಕ್ಷರು ಕೊಂಕಣಿ ಭಾಷೆಯ ಸೊಗಸನ್ನೂ ಅದರಲ್ಲಿನ ಮಾಧುರ್ಯವನ್ನೂ ವಿವರಿಸಿ, ಕೊನೆಯಲ್ಲಿ ಇಂಗ್ಲಿಷ್ ಭಾಷೆಯ ಸರಳತೆಯನ್ನು ಕೊಂಡಾಡಿ ಅದೇ ಉತ್ಕೃಷ್ಟವಾದುದೆಂದು ಸಮರ್ಥಿಸಿದರು. ಇಷ್ಟರಲ್ಲಿ ಕನ್ನಡ ಪಕ್ಷವನ್ನು ಹಿಡಿದು ಚರ್ಚಾರಂಭ ಮಾಡಿದ ಬಾಲಕನ ಕಣ್ಣಿನಲ್ಲಿ ನೀರು ಮೂಡಿದ್ದುದನ್ನು ಕಂಡು ಪಂಜೆಯವರು ಬಹು ನೊಂದರು. "ನಾನು ತಮಾಷೆಗೆ ಹೀಗೆ ಹೇಳಿದೆನಷ್ಟೆ, ಕನ್ನಡವೇ ನನ್ನ ಜೀವ" ಎಂದು ಸಮಾಧಾನ ಮಾಡಿ "ಆವಿನದು ನೊರೆಹಾಲ ನೊಲ್ಲೆನು" ಎಂಬ ಪದ್ಯವನ್ನು ಹೇಳಿ ಆತನನ್ನು ನಗಿಸಿದರು.

ಕನ್ನಡದಲ್ಲಿ ಭಾಷಣ ಮಾಡುವಾಗ ಅಥವಾ ಲೇಖನಗಳನ್ನು ಬರೆಯುವಾಗ ಸಂಸ್ಕೃತ ಶಬ್ದಗಳನ್ನು ಮಿಶ್ರಮಾಡುವುದನ್ನು ಕಂಡರೆ ಅವರಿಗಾಗುತ್ತಿರಲಿಲ್ಲ. ಮಕ್ಕಳಿಗೆ ಅವರು ಪ್ರಾತಃಕಾಲ ಕಲಿಸಿದ ನಾಟಕವನ್ನು ಸಾಯಂಕಾಲ ಹತ್ತು ಜನರ ಮುಂದೆ ಯಾರ ಸಹಾಯವೂ ಇಲ್ಲದೆ ಆಡಿ ತೋರಿಸುತ್ತಿದ್ದರು. ಅವರು ಆ ರೀತಿ ಆಡಿಸಿದ ಎಷ್ಟೋ ಕನ್ನಡ ಮತ್ತು ಇಂಗ್ಲಿಷ್ ಏಕಾಂಕ ನಾಟಕಗಳು ಬರವಣಿಗೆಯ ಮುಖವನ್ನೇ ಕಾಣದೆ ವಾತಾವರಣದಲ್ಲಿ ಲಯವಾಗಿ ಹೋಗಿವೆ.

ಇದೇ ಸಮಯದಲ್ಲಿ ನಡೆದ ಇನ್ನೊಂದು ಸನ್ನಿವೇಶ ನನಗೂ ಅವರಿಗೂ ಆದ ನಿಕಟಸಂಬಂಧಕ್ಕೆ ಕಾರಣವಾಯಿತು. ಅವರ ಮಾತುಗಳಿಂದಲೇ ಇಲ್ಲಿ ಅದನ್ನು ಬರೆಯುತ್ತೇನೆ. ನಾನು ಟೈಪ್‌ರೈಟಿಂಗ್ ಪರೀಕ್ಷೆ ಮುಗಿಸಿ ಹೋಗುತ್ತಿರುವಾಗ ಪಂಜೆಯವರು ಬಾಗಿಲ ಬಳಿಯಲ್ಲಿ ಕಾದಿದ್ದು ನನ್ನನ್ನು ಸಮೀಪಕ್ಕೆ ಕರೆದರು.

ಪಂ — ಏನು ಸ್ವಾಮಿ, ನೀವು ಫಿಸಿಕ್ಸ್ ವಿದ್ಯಾರ್ಥಿಗಳು ಹೌದೋ?

ನಾ.— ಅಲ್ಲ.

ಪಂ.— ಪಟ್ಟಿಯಲ್ಲಿ ನಿಮ್ಮ ಹೆಸರು ಇದ್ದ ಹಾಗಿತ್ತು!

ನಾ.— ನಾನಲ್ಲ. ಅದು.......ಎಂಬ ವಿದ್ಯಾರ್ಥಿ.

ಪಂ.— ಹಾಗೋ, ಸರಿ. ಇರಲಿ ಈ ದಿವಸ ಲಿಥೋಗ್ರಾಫ್ ಪೇಪರು ಕಷ್ಟವಿತ್ತು ಅಲ್ಲವೋ.

ನಾ.— ಸಾಧಾರಣವಿತ್ತು.

ಪಂ.— ನೀವು ಟೈಪ್ ಮಾಡುತಿದ್ದುದನ್ನು ನಾನೂ ನೋಡುತ್ತಲೇ ಇದ್ದೆ. ಕಷ್ಟವಿದ್ದರೂ ತಪ್ಪಿಲ್ಲದೆ ಚೊಕ್ಕಟವಾಗಿ ಮಾಡಿರುತ್ತೀರಿ.

ನಾ.— ಸುಮ್ಮನಿದ್ದೆ.

ಪಂ.— ಈ ಪರೀಕ್ಷೆ ಆದಮೇಲೆ ಏನುಮಾಡುತ್ತೀರಿ?

ನಾ.— ಎಲ್ಲಾದರೂ ಕೆಲಸಕ್ಕೆ ಸೇರಿಕೊಳ್ಳಬೇಕು.

ಪಂ.— ಮುಂದಕ್ಕೆ ಕಾಲೇಜಿಗೆ ಹೋದರಾಗದೋ?

ನಾ.— ವ್ಯಾಸಂಗ ಮುಂದುವರಿಸಲವಕಾಶವಿಲ್ಲ. ತಂದೆಯವರು ಮನೋರೋಗದಿಂದ ಬಳಲಿ ಕಂಗಾಲಾಗಿದ್ದಾರೆ. ಗೃಹಕೃತ್ಯದ ಸ್ಥಿತಿಗತಿ ಸಮರ್ಪಕವಾಗಿಲ್ಲ.

ಪಂ.— ತಂದೆಯವರು ಏನುಮಾಡಿಕೊಂಡಿರುತ್ತಾರೆ?

ನಾ.— ಅವರಿಗೆ ಇಪ್ಪತ್ತೆರಡು ರೂಪಾಯಿಗಳ ಪೆನ್ಶನ್ ಬರುತ್ತಿದೆ.

ಪಂ.— ಆಸ್ತಿ ?

ನಾ.— ಆಸ್ತಿ ಪಾಸ್ತಿ ಏನೂ ಇಲ್ಲ.

ಪಂ.— ನೀವು ಎಷ್ಟು ಜನ ಮನೆಯಲ್ಲಿರುವುದು?

ನಾ.— ನಾವೆಲ್ಲರೂ ಒಟ್ಟು ಎಂಟು ಮಂದಿ ಇದ್ದೇವೆ.

ಪಂ.— (ನೀಳವಾದ ಉಸಿರು ಬಿಟ್ಟು) ಹೂಂ...... ಪಾಪ.........ಹಾಗಾದರೆ ಹೇಗಯ್ಯಾ ಇಷ್ಟು ದಿವಸ ನೂಕಿದಿರಿ . . . . . ಒಳ್ಳೇದು. ನಿಮಗೀಗ ಊಟವಾಗಲಿ, ಕಾಫಿಯಾಗಲಿ ಆಗಿದೆಯೋ ?

ನಾ.— ಸುಮ್ಮನಿದ್ದೆ.

ಪಂ.— ಬೇಸರ ಬೇಡ. ನಿಮ್ಮ ಮೋರೆ ನೋಡಿದರೆ ಊಟವಾದಂತಿಲ್ಲ. ಬನ್ನಿ ಆಫೀಸು ರೂಮಿಗೆ.

ಅಲ್ಲಿ ಹತ್ತು ನಿಮಿಷಗಳಲ್ಲೇ ಮಿಠಾಯಿ ಮತ್ತು ಕಾಫಿ ಬಂತು. ಇಬ್ಬರಿಗೂ ಫಲಾಹಾರವಾಯಿತು.

ಪಂ.— ಈಗ ಹೇಳಿ ಏನು ಮಾಡೋಣ? ನಿಮಗಾಗಿ ನಾನು ಏನು ಮಾಡಬಹುದು?

ನಾ.— ಸುಮ್ಮನಿದ್ದೆ.

ಪಂ.— ನನ್ನ ಆಫೀಸಿನಲ್ಲಿ (ಸ್ಕೂಲ್ ಅಸಿಸ್ಟೆಂಟ್ ಇನ್‌ಸ್ಪೆಕ್ಟರವರ) ಒಬ್ಬ ಗುಮಾಸ್ತರ ಕೆಲಸ ಖಾಲಿಯಿದೆ. ಅದನ್ನು ನಿಮಗೆ ಕೊಡುತ್ತೇನೆ. ಆಗಬಹುದೋ?

ನಾ.— ಉಪಕಾರವಾಯಿತು.

ಪಂ.— ನಾಳೆಯೇ ಹೋಗಬೇಕು.

ನಾ.— ನನ್ನ ಪರೀಕ್ಷೆ ಇನ್ನೂ ಮುಗಿದಿಲ್ಲವಲ್ಲ !

ಪಂ.— ಪರೀಕ್ಷೆಗೆ ನಾನು ರಜೆಕೊಡುತ್ತೇನೆ, ಮಹರಾಯಾ!

ಮರುದಿವಸದಿಂದ ನಾನು ಗುಮಾಸ್ತನಾದೆ. ಇದೇ ಸಮಯದಲ್ಲಿ ಶಾಲಾವಾರ್ಷಿಕೋತ್ಸವದ ಏರ್ಪಾಡಾಗಿತ್ತು. ಪಂಜೆಯವರು ತಮ್ಮ ಕಾಗದ ಪತ್ರಗಳನ್ನೂ, ರಿಪೋರ್ಟುಗಳನ್ನೂ ನನ್ನಿಂದಲೇ ಶಾಲೆಯಲ್ಲೇ ಟೈಪು ಮಾಡಿಸುತ್ತಿದ್ದರು. ಹಾಗೆಯೇ ನನ್ನೊಡನೆ ಮಾತನಾಡುತ್ತಿರುವಾಗ "ಏನು ಸ್ವಾಮಿ, ನಿಮಗೆ ಹಾಡುವುದಕ್ಕೆ ಬರುವುದೋ?" ಎಂದರು.

ನನಗೆ ಭಯ ಹೆಚ್ಚಾದುದರಿಂದ "ಇಲ್ಲಾ ಸರ್" ಎಂದೆ.

"ನಿಮ್ಮ ಸ್ನೇಹಿತರ ಪೈಕಿ ಚೆನ್ನಾಗಿ ಹಾಡುವವರು ಯಾರು ?"

"ಗಣಪತಿ ಸೊಗಸಾಗಿ ಹಾಡುತ್ತಾನೆ."

"ನೀವು ಏಕೆ ಹಾಡಲು ಕಲಿಯಲಿಲ್ಲ !"

"ಬರುವುದು, ಆದರೆ ಸಭಾಕಂಪ ಬಹಳ"

"ಹಾಗಾದರೆ ಬೇಡ. ಗಣಪತಿಯನ್ನು ಮಧ್ಯಾಹ್ನ ಕರೆತನ್ನಿ."

ಮಧ್ಯಾಹ್ನ—

ಪಂ.— ಇವರೆಯೋ ಗಣಪತಿ ? ಸರಿ ನೀವು ಫಿಫ್ತ್ ಫಾರಂ ಕ್ಲಾಸು ಅಲ್ಲವೋ ?

ಗ.— ಹೌದು ಸರ್.

ಪಂ.— ನೀವು ಶಾಲಾ ದಿನದ ಸಮಯದಲ್ಲಿ ಕೆಲವು ಪದ್ಯಗಳನ್ನು ಹಾಡಬೇಕು.

ಗ.— ನನಗಾವುದೂ ಚೆನ್ನಾಗಿ ಬರುವುದಿಲ್ಲ, ಸರ್.

ಪಂ.— ನಾನು ಕಲಿಸುತ್ತೇನೆ ಸರ್. ದ್ರೌಪದೀ ದೇವಿಯು ಮಾಡಿದ ಕೃಷ್ಣ ಸ್ತುತಿಯಿಂದ, ಎಲ್ಲಿ, ಒಂದು ಹಾಡಿ, ನೋಡುವ !

ಗಣಪತಿ ಹಾಡಿದ. ಪಂಜೆಯವರು ಬೆನ್ನುತಟ್ಟಿ 'ಭೇಷ್' ಎಂದರು. ಕುಮಾರವ್ಯಾಸ ಭಾರತದಲ್ಲಿನ ದ್ರೌಪದೀ ವಸ್ತ್ರಾಪಹರಣದ ಕೆಲವು ಪದ್ಯಗಳನ್ನು ಕಲಿಸಿಕೊಟ್ಟರು.

ಶಾಲಾ ವಾರ್ಷಿಕೋತ್ಸವದ ದಿವಸ ರಾತ್ರಿ ನಮ್ಮಿಮಾರ್ವರನ್ನು ರಾಜಾ ಸೀಟಿಗೆ ಕರೆದುಕೊಂಡು ಹೋಗಿ ಅಲ್ಲಿ ನಕ್ಷತ್ರಗಳ ಕತೆಗಳನ್ನೂ, ಅವುಗಳ ವಿಷಯ ವಿವರಗಳನ್ನೂ ಹೇಳಿಕೊಟ್ಟದ್ದಲ್ಲದೆ, ಅನೇಕ ನಕ್ಷತ್ರಗಳ ಹೆಸರುಗಳನ್ನು ಹೇಳಿ ಆಯಾಯ ನಕ್ಷತ್ರಗಳನ್ನು ತೋರಿಸಿಕೊಟ್ಟರು.

# ರಸಿಕ ಶಿಖಾಮಣಿ—- ಶಿಕ್ಷಣ ತಜ್ಞ.

(ಶ್ರೀ ಪಾಂಡೇಶ್ವರ ಗಣಪತಿ ರಾವ್.)

ಶ್ರೀಮಾನ್ ಪಂಜೆ ಮಂಗೇಶರಾಯರು ಹೈದರಾಬಾದಿನಲ್ಲಿ ಮೊನ್ನಿನ ದಿನ ನ್ಯೂಮೋನಿಯಾ ಕಾಯಿಲೆಯಿಂದ ವಿಧಿವಶರಾದರೆಂಬ ಸುದ್ದಿ ಸಾಹಿತ್ಯ ಪ್ರೇಮಿಗಳಾದ ಕನ್ನಡಿಗರಿಗೆ ಚಿಂತೆಯನ್ನುಂಟುಮಾಡದೆ ಇಲ್ಲ. ಕನ್ನಡ ನುಡಿಯ ಏಳಿಗೆಗಾಗಿ ಮೊದಲಿನಿಂದ ಕೊನೆಯವರೆಗೂ ಅಳುಕದೆ ದುಡಿದವರಲ್ಲಿ ಶ್ರೀಯುತ ರಾಯರೂ ಒಬ್ಬರು. ಅವರ ಮರಣದಿಂದ ಕನ್ನಡದ ಒಂದು ಅಮೂಲ್ಯ ವ್ಯಕ್ತಿಯು ಮಾಯವಾದಂತಾಯಿತು.

ಶ್ರೀಯುತ ರಾಯರು ಬಹಳ ಬರೆದವರಲ್ಲ; ಆದರೆ ಬಹಳ ಬಲ್ಲವರಾಗಿದ್ದರು. ಅವರು ಗತಶತಮಾನದ ಕೊನೆಯ ಭಾಗದಲ್ಲಿ ಸ್ನಾತಕ (ಬಿ. ಎ.) ಪದವೀಧರರಾದೊಡನೆಯೇ, ಮಂಗಳೂರಿನ ಗವರ್ನ್‌ಮೆಂಟ್ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿ ಸೇರಿಕೊಂಡರು. ಆ ವೇಳೆಯಲ್ಲಿ ಕನ್ನಡದ "ಮುದ್ದಣ್ಣ"ನಾದ ಶ್ರೀಮಾನ್ ನಂದಳಿಕೆ ಲಕ್ಷ್ಮೀನಾರ್ಣಪ್ಪನವರು ಜೀವಿಸಿದ್ದು, ಅವರ ಕನ್ನಡ ಭಾಷಾಭಿಜ್ಞತೆ ಹಾಗೂ ದಿವ್ಯ ಪ್ರತಿಭೆಗಳು 'ಕಡಲಿನಾಳದ ರತ್ನ'ದಂತೆ ಜನಸಾಮಾನ್ಯರ ದೃಷ್ಟಿಗೆ ಅಗೋಚರವಾಗಿದ್ದು ಅವರಿಗೆ 'ಡ್ರಿಲ್ (ಕವಾಯತು) ಮಾಸ್ತರ' ಪದವಿಯೂ, ಶ್ರೀ॥ ಮಂಗೇಶರಾಯರಿಗೆ 'ಕನ್ನಡ ಪಂಡಿತ' ಪದವಿಯೂ ಲಭ್ಯವಾಯಿತು! 'ಬರೆಯುವ ಲೇಖನಿ ಕುಗ್ಗಿ ಕಡ್ಡಿಯಾಯಿತು, ಕಸಪೊರಿಕೆ ಬರೆಯುವ ಕಡ್ಡಿಯಾಯಿತು' ಎಂದು ಶ್ರೀಮಾನ್ ಪಂಜೆಯವರು ತಮ್ಮ ಸಹಜವಾದ ಹಾಸ್ಯೋಕ್ತಿಯಿಂದ ಆಗಿನ ಸನ್ನಿವೇಶವನ್ನು "ಪ್ರಬುದ್ಧ ಕರ್ನಾಟಕ"ದ "ಮುದ್ದಣ ಸಂಚಿಕೆ"ಯಲ್ಲಿ ಬರೆದು, ತಮ್ಮ ಗರ್ವರಾಹಿತ್ಯವನ್ನು ಪ್ರಕಟಪಡಿಸಿ ಸರ್ವತ್ರ ಅಭಿನಂದನೆಗೆ ಪಾತ್ರರಾದರು. ಆ ಒಂದು ಲೇಖವೇ ದಿವಂಗತ ರಾಯರ ಪೂರ್ಣಪ್ರತಿಭೆಗೆ ದ್ಯೋತಕವಾಗಿದೆಯೆಂದು ನಿಖಿಲ ಕನ್ನಡ ನಾಡಿನ ಸಾಹಿತ್ಯ ಪಂಡಿತರು ನಿರ್ಮಾತ್ಸರ್ಯದಿಂದ ಹೊಗಳುತ್ತಾರೆ. "ಮುದ್ದಣ" ಕವಿಯ ಹೃದ್ಯವಾದ ಗದ್ಯ-ಪದ್ಯ ಪ್ರಬಂಧಗಳು ಮೈಸೂರು "ಕಾವ್ಯ ಕಲಾನಿಧಿ"ಯ ಆಶ್ರಯದಿಂದ ಬೆಳಕಿಗೆ ಬಂದು, ಮಂಗಳೂರಿನ ಅಂದಿನ ಸಾಹಿತ್ಯ ಭಕ್ತರನ್ನು ಎಚ್ಚರಿಸಿದಾಗ, ಕನ್ನಡಕ್ಕಾಗಿ ದುಡಿಯುವ ಭೀಷ್ಮ ಪ್ರತಿಜ್ಞೆಯನ್ನು ದಿವಂಗತ ಪಂಜೆಯವರು ಕೈಕೊಂಡರೆಂದು ಹೇಳಬಹುದು. ರಾಯರ ಪ್ರತಿಭಾ ಪ್ರೌಢಿಮೆ ನಿರಾತಂಕವಾಗಿ ಹರಿಯತೊಡಗಿ, ಲೇಖನ ವ್ಯವಸಾಯದಲ್ಲಿ ಅವರು ಭಾಗವಹಿಸಲಾರಂಭಿಸಿದರು.

ಈ ಲೇಖಕನೊಡನೆ ಶ್ರೀಮಾನ್ ಮಂಜೇಶ್ವರ ಗೋವಿಂದ ಪೈಗಳವರು ದಿವಂಗತರಾಯರ ಅಂದಿನ ಸಾಹಿತ್ಯ ದೃಷ್ಟಿಯ ಕುರಿತು ಹೇಳಿದ ಒಂದು ಮಾತನ್ನು ಇಲ್ಲಿ ಬರೆಯದೆ ಇರಲಾಗುವುದಿಲ್ಲ. ಶ್ರೀಮಾನ್ ಪೈಗಳ ಬಹುಮುಖ ಪಾಂಡಿತ್ಯವು ಕನ್ನಡ ವಿದ್ವನ್ಮಣಿಗಳಿಗೆ ಹೊಸದಲ್ಲ. ದಿವಂಗತ ರಾಯರಿಗೂ, ಶ್ರೀಮಾನ್ ಪೈಗಳಿಗೂ ೧೦–೧೨ ವರುಷಗಳ ವಯೋಅಂತರ ಮಾತ್ರವಿದ್ದು, ಆಗಿನ ಕಾಲದಲ್ಲಿ ಮಂಗಳೂರಿನ ಗವರ್ನ್‌ಮೆಂಟ ಕಾಲೇಜಿನಲ್ಲಿ ಶ್ರೀ ಪೈಗಳವರು ದಿವಂಗತರ ಕನ್ನಡ ಶಿಷ್ಯರಾಗಿದ್ದರು. ಸಾಹಿತ್ಯ ಪ್ರಪಂಚದಲ್ಲಿ ಹೊಸ ಹುರುಪಿನ ಹೊಸ ಹೆಜ್ಜೆ ಹಾಕಬೇಕೆಂಬ ಲವಲವಿಕೆಯುಳ್ಳ ಶ್ರೀ॥ ಪೈಗಳವರು ಪ್ರಾಸಬಿಟ್ಟು ಪದ್ಯವೊಂದನ್ನು ರಚಿಸಿ, ಗುರುಗಳಾದ ಪಂಜೆಯವರಿಗೊಪ್ಪಿಸಲು, ಪ್ರಾಸವೇ ಕವಿತ್ವದ ಜೀವಾಳವೆಂದು ದೃಢಭಾವನೆಯುಳ್ಳ ಶ್ರೀಯುತ ರಾಯರು ಪೈಗಳ ಮೇಲೆ ರೇಗಿದರಂತೆ! ಆದರೆ ಕಾಲಗರ್ಭದಲ್ಲಡಗಿದ ಭವಿತವ್ಯವನ್ನು ಕಂಡವರಾರು? ಸಂಪ್ರದಾಯ ಶರಣರಾದ ದಿವಂಗತ ರಾಯರು ಕಳೆದ ಹತ್ತು—ಹದಿನೈದು ವರ್ಷಗಳಿಂದ ಪ್ರಾಸದ ಮೇಲಿನ ತಮ್ಮ ಮಮತೆಯನ್ನು ಬಿಟ್ಟುಬಿಟ್ಟು, "ಆಧುನಿಕ ಕನ್ನಡ ಕವಿತಾಲೋಕ"ಕ್ಕೆ ದೊರೆತ ಆಧಾರಸ್ತಂಭರಲ್ಲೊಬ್ಬರಾದರು. ಅಂದಿನಿಂದಲೂ ಅವರು ಆಧುನಿಕ ಕನ್ನಡ ಸಾಹಿತ್ಯಕ್ಕೆ ಮಾಡಿದ ಸೇವೆಯು ಸರ್ವಶ್ರುತವಾಗಿದೆ.

ರಾಯರು ಶಿಕ್ಷಕರಾಗಿದ್ದುದರಿಂದ ಅವರ ಲಕ್ಷ್ಯವು ಸ್ವಾಭಾವಿಕ ವಾಗಿಯೇ ಮಕ್ಕಳ ಶಿಕ್ಷಣದ ಕಡೆಗೆ ಹೊರಳಿತು. ಅವರು ರಚಿಸಿದ ಕವನಗಳು ಅರ್ಥಸುಲಭವಾದ ಸರಳ ಮಾತುಗಳಿಂದ ಮಕ್ಕಳನ್ನು ಆಹ್ಲಾದಗೊಳಿಸುವ ಕಥಾ ವಸ್ತುಗಳಾಗಿವೆ. ಮಕ್ಕಳ ಶಿಕ್ಷಣ ಪದ್ಧತಿಯಲ್ಲಿ ತಲೆದೋರಿದ್ದ ಈ ಕೊರತೆಯನ್ನು ನಿವಾರಿಸಿದವರಲ್ಲಿ ಶ್ರೀಯುತ ರಾಯರೇ ಮೊತ್ತ ಮೊದಲಿಗರು. ಮಕ್ಕಳಿಗಾಗುವ ಸಣ್ಣ ಕಥೆಗಳ "ಬಾಲ ಸಾಹಿತ್ಯ" ಗ್ರಂಥಮಾಲೆಗೆ ಅವರೇ ಜನಕರಾದರು. ಬರಬರುತ್ತ ಅವರು ಪ್ರೌಢ ಸಾಹಿತ್ಯದಲ್ಲಿ ಕೈ ಹಾಕಿ, ಬರೆದವುಗಳೆಂದರೆ, ಕೆಲವು ವಿಮರ್ಶಾತ್ಮಕ ಲೇಖಗಳು. ಈ ಲೇಖಗಳು ಅವರ ಆಳವಾದ ರಸಜ್ಞತೆಯ ಹೆಗ್ಗುರುತುಗಳಾಗಿವೆ.

ಪಂಜೆ ಮಂಗೇಶರಾಯರ ಕವಿತ್ವಗಳಲ್ಲಿ, ಕೊಡಗಿನ ವೀರರ ವರ್ಣನಾತ್ಮಕವಾದ "ಹುತ್ತರಿ ಹಾಡು" ಎಂಬುದು ಅವರ ಕವಿತ್ವ ಪ್ರೌಢಿಮೆಯ ಸ್ಪಷ್ಟ ದೃಷ್ಟಾಂತವಾಗಿದೆ.

"ಬಾಸೆಲ್ ಮಿಶೆನ್"ನವರಿಂದ ಪ್ರಕಟಿತವಾದ ಒಂದನೆಯ ಎರಡನೆಯ ಹಾಗೂ ಮೂರನೆಯ ಪದ್ಯಪುಸ್ತಕಗಳಲ್ಲಿ "ಕವಿ ಶಿಷ್ಯ" ನಾಮಾಂಕಿತವಾದ ಕವಿತ್ವಗಳೆಲ್ಲಾ ಶ್ರೀಯುತರಾಯ ರದ್ದೇ ಆಗಿದ್ದು ಶಿಶುಸಾಹಿತ್ಯ ಪ್ರಸಾರಣೆಗೆ ಅವರು ಮಾಡಿದ "ಮೊದಲ ಸೇವೆಯು" ಇಂದಿಗೂ ಅತ್ಯಪೂರ್ವವಾಗಿಯೇ ಇದೆಯೆಂದು ಧಾರಳವಾಗಿ ಹೇಳಬಹುದು. ದಕ್ಷಿಣ ಕನ್ನಡ ಜಿಲ್ಲೆಯ ಪಠ್ಯ ಪುಸ್ತಕಗಳ ಪುನರ್ರಚನೆಗೆ ಶ್ರೀಯುತ ಪಂಜೆ ಯವರೇ ಆದ್ಯ ಪುರುಷರು–ಅವರಿಂದಲೇ ಈ "ಸೃಷ್ಟಿ"ಯು ಹೊರಹೊಮ್ಮಿತು. ಆಧುನಿಕ ಕನ್ನಡ ಕವಿಗಳ "ಕಾವ್ಯ ಸಂಗ್ರಹ"ದ ಮಾರ್ಗ ಸೂಚಕರೂ ಶ್ರೀಯುತ ರಾಯರೇ. ಮಂಗಳೂರಿನ ಬಾಸೆಲ್ ಮಿಶನ್ ಪ್ರಕಟನ ಸಂಸ್ಥೆಯಲ್ಲಿ ಶ್ರೀಯುತ ರಾಯರ ಕೈ ಬಹಳ; ಪ್ರಭಾವವೂ ಮಹತ್ವದ್ದೇ. ಶಾಲೋಪಯೋಗಿಯಾದ ಕನ್ನಡ ಇಂಗ್ಲಿಷ್ ನಿಘಂಟು ವೊಂದನ್ನು ಶ್ರೀಯುತ ರಾಯರು ಪ್ರಕಟಿಸಿ, ಈ ಮಾರ್ಗದಲ್ಲಿ ಯೂ ತಲೆದೋರಿದ್ದ ಒಂದು ಕೊರತೆಯನ್ನು ಬಗೆಹರಿಸಿದರು.

ದಿವಂಗತರಾಯರಿಗೆ ಇತಿಹಾಸದ ಮೇಲೆ ಬಹಳ ಪ್ರೇಮ. "ವಿನ್ಸೆಂಟ್ ಸ್ಮಿತ್"ರವರ ಹಿಂದಸ್ತಾನದ ಇತಿಹಾಸ ಪುಸ್ತಕವು ಯಾವಾಗಲೂ ಅವರ ಕೈ ಬಿಡುತ್ತಿದ್ದಿಲ್ಲ!

ಶ್ರೀಯುತರು ಸ್ವಾಭಾವಿಕವಾಗಿಯೇ ಮಿತಭಾಷಿಗಳು; ಹಾಸ್ಯರಸ ಪ್ರಧಾನವಾದ ಅವರ ರಸಿಕತೆಯು ಅವರನ್ನೆಂದೂ ಬಿಟ್ಟಿರುತ್ತಿದ್ದಿಲ್ಲ!

ಈಗ್ಗೆ ಹತ್ತುವರುಷಗಳ ಹಿಂದೆ–ಕಾಲೇಜುವಿದ್ಯಾರ್ಥಿ ಯಾಗಿ ಹೊಸದಾಗಿ ಮಂಗಳೂರ ನಗರಕ್ಕೆ ಕಾಲಿಟ್ಟ ಈ ಲೇಖಕನಿಗೆ ಕನ್ನಡ ಕವಿಗಣ್ಯರಲ್ಲೊಬ್ಬರಾದ ಶ್ರೀಮಾನ್ ಕಂ ಡೆಂಗೋಡ್ಲು ಶಂಕರ ಭಟ್ಟರ ಮುಖಾಂತರವಾಗಿ ದಿವಂಗತ ರಾಯರ ಪ್ರಥಮ ಪರಿಚಯವಾಯಿತು. ಮಳೆಗಾಲದ ಆ ದಿನದ ಸಂಜೆ, ಮಂಗಳೂರ ಟ್ರೈನಿಂಗ್ ಶಾಲೆಯ ಒಂದು ಕೋಣೆಯಲ್ಲಿ ಶ್ರೀಯುತ ರಾಯರು "ವಿನ್ಸೆಂಟ ಸ್ಮಿತ್"ನ ಇತಿಹಾಸ ಪುಸ್ತಕ ಹಸ್ತರಾಗಿ ಸಿಗರೇಟು ಸೇದುತ್ತ ಕೂತಿ ದ್ದರು. ಶ್ರೀಯುತ ಭಟ್ಟರು ನನ್ನ ಹೆಸರನ್ನು ಹೇಳಿದೊಡನೆಯೇ ರಾಯರು ಸಾಹಿತ್ಯಪ್ರೇಮಿಗೆ ಸಹಜವಾದ ಆತ್ಮೀಯತೆಯಿಂದ ನನ್ನನ್ನು ಕೂಡಿಸಿಕೊಂಡು. ಆಗ ತಾನೇ ಪ್ರಕಟಗೊಂಡಿದ್ದ ನನ್ನ "ವಿವೇಕಾನಂದ ಚರಿತಂ" ಮತ್ತು "ಕೊಳಲು ಕೃಷ್ಣ" ವೆಂಬ ಕಾವ್ಯ ಗ್ರಂಥಗಳಿಂದ ಕೆಲವು ಪದ್ಯಗಳನ್ನು ಹೇಳು ವಂತೆ ಆಜ್ಞಾಪಿಸಿದರು. ಅವರ ಕಾವ್ಯಪ್ರೇಮವೂ, ಕಾವ್ಯ ಪ್ರಪಂಚದಲ್ಲಿ ಅಡಿ ಇಡಲಾರಂಭಿಸುತ್ತಿರುವವರ ಮೇಲಣ ಮಮತೆಯೂ ಇಂದೂ ನನ್ನ ಕಣ್ಮುಂದೆ ರೂಪ ತಳೆದು ಬಂ ದಂತೆ ತೋರುತ್ತಿವೆ.

ದಕ್ಷಿಣ ಕನ್ನಡಕ್ಕಂತೂ, ಕನ್ನಡ ಭಾಷೆಗೆ, ಶಿಕ್ಷಣಕ್ಕೆ ಅವರು ಮಾಡಿದ ಸೇವೆಯು ಸರ್ವಥಾ ಚಿರಸ್ಮರಣೀಯವೇ. ರಾಯರ ಭಾಷಣಗಳೂ ಭಾಷಣಗಳಲ್ಲಿ "ಕಾವ್ಯಪದ" ಗಳ "ವಾಕ್ಯವೇಷ್ಟಣ" ಗಳೂ, "ಅಧ್ಯಾಹಾರ" ಪದ್ಧತಿಯಿಂದ ಹೃಸ್ವವಾಗಿಅವರುತೋರ್ಪಡಿಸುತ್ತಿದ್ದ,ಆಳವಾದಮನೋಜ್ಞ "ಮೃದುಹಾಸ್ಯ"ವೂ ಕನ್ನಡ ವಕ್ತೃತ್ವದಲ್ಲಿ ತೀರ ಅನುಪಮ ವಾದವೆಂದು ನಿಸ್ಸಂದೇಹವಾಗಿ ಹೇಳಬಹುದು. ಕನ್ನಡ ನುಡಿ ಯಲ್ಲಿ ಅವರು ಬೀರಿದ ಸೌರಭವು ಅನಂತವಾಗಿ ಉಳಿಯು ವುದಲ್ಲದೆ, ಅವರ ಭಾಷಾ ಸೇವೆಯ ಮಹೋತ್ಸಾಹವು ಚಿರ ಕಾಲ ಆದರ್ಶವಾಗಿ ಮೆರೆಯುವುದು. ವಯೋವೃದ್ಧ, ಜ್ಞಾನವೃದ್ಧ, ಶಿಕ್ಷಣತಜ್ಞರಾದ "ರಸಿಕ ವಿಮರ್ಶಕ" ಮೂರ್ತಿ ಗಳಾದ ಶ್ರೀಮಾನ್ ಪಂಜೆಯವರ ಅನಿರೀಕ್ಷಿತ ಮರಣದಿಂದ ಕನ್ನಡ ಮಾತೆಯ ಪುತ್ರ ರತ್ನವೊಂದು ಮಾಯವಾದಂತಾ ಯಿತು. ಅವರ ಆತ್ಮಕ್ಕೆ ಚಿರಶಾಂತಿಯುಂಟಾಗಲಿ.

---

# ದಿವಂಗತ ಪಂಜೆ ಮಂಗೇಶರಾಯರು.

(ದಿವಂಗತ ಶ್ರೀ ಉಳ್ಳಾಲ ಮಂಗೇಶರಾಯರು. ಬಿ. ಎ., ಯಲ್. ಟಿ.)

"ಇವರ ನಿಧನದಿಂದ ಕರ್ಣಾಟಕದ ಸಾಹಿತ್ಯ ಪ್ರಪಂಚದ ಒಂದು ದೊಡ್ಡ ಶಿಖರವು ಉರುಳಿತು! ಕನ್ನಡ ಜಿಲ್ಲೆಯ ಒಂದು ಉಜ್ವಲ ಸಾಹಿತ್ಯ ರತ್ನವು ಕಣ್ಮರೆಯಾಯಿತು! ನಿರ್ದಯವಾದ ಮೃತ್ಯುವು......ಸರ್ವ ಕರ್ಣಾಟಕವನ್ನೇ ಅಪಾರವಾದ ಶೋಕಸಾಗರದಲ್ಲಿ ಮುಳುಗಿಸಿತು" ಎಂದು ಕಂಠೀರವನು ಉದ್ಗರಿಸಿದ ಮಾತುಗಳಲ್ಲಿ ಲವಲೇಶವಾದರೂ ಅತಿಶಯೋಕ್ತಿಯಿಲ್ಲ.

ಶ್ರೀಯುತರು ಬಂಟವಾಳ (ಮಂಗಳೂರು ತಾಲೂಕಿನಲ್ಲಿ) ಒಂದು ಬಡ ಸಾರಸ್ವತ ಕುಟುಂಬದಲ್ಲಿ ಜನ್ಮವೆತ್ತಿದರು. ಇದರ ಜನನ ಫೆಬ್ರವರಿ, 17, ಇಸವಿ 1874. ಇವರ ತಂದೆ ಮಾಗಣೆ ಶಾನುಭಾಗರು. ಇವರು ತನ್ನ ಹಿರಿಯರ ಆಸ್ತಿಯನ್ನು ಹಿರಿಯರು ಸಾಲಮಾಡಿ ಆ ದಸ್ತೈವೇಜಿನಲ್ಲಿ ಹಾಕಿದ ಕುಂಟು ಪಂಕ್ತಿಯ ದೆಸೆಯಿಂದ ತನ್ನ ಮಕ್ಕಳ ರಕ್ಷಕನಾಗಿ ಸಿಗಬೇಕಾದ ಒಂದು ಸಾವಿರ ರೂಪಾಯಿ ಕೈಸೇರದೆ ಬಹಳ ಬಡತನದಿಂದ—ಬರೀ ಹತ್ತು ಹನ್ನೆರಡು ರೂಪಾಯಿ ತಲಬಿನಿಂದ ಕುಟುಂಬ ಸಂರಕ್ಷಣೆ ಮಾಡಬೇಕಾಯಿತು. ಆದರೆ ಸ್ವಯಂ ರಸಿಕರಾಗಿದ್ದು ಮತ್ತು ಗ್ರಾಮದ ಜನರ ವಿಶ್ವಾಸಕ್ಕೆ ಪಾತ್ರರಾಗಿದ್ದು ಹೇಗೂ ಜೀವನ ರಥವನ್ನು ಬಹಳ ಕಷ್ಟದಿಂದ ನೂಕಿದರು. ಶ್ರೀಯುತರು ಈ ಪಂಜೆ ರಾಮರಾಯರ ಐವರು ಗಂಡು ಮತ್ತು ಒಂದು ಹೆಣ್ಣು ಮಕ್ಕಳಲ್ಲಿ ಎರಡನೆಯವರು. ಹಿರಿಯಣ್ಣನು ಬಿ. ಏ. ಪಾಸುಮಾಡಿ ಉತ್ತರ ಕರ್ಣಾಟಕದಲ್ಲಿ ರೆವಿನ್ಯೂ ಇಲಾಖೆಗೆ ಸೇರಿ ಕೊನೆಗೆ ಡೆಪ್ಯುಟಿ ಕಲೆಕ್ಟರರಾಗಿ ಕೆಲಸದಿಂದ ನಿವೃತ್ತಿಹೊಂದಿ ಕೆಲವು ವರ್ಷಗಳ ಹಿಂದೆ ಕಾಲವಾದರು. ಇವರು ಮೊದಲು ಕರ್ಣಾಟಕದಲ್ಲಿ ಬಹಳ ಕಡಿಮೆ ಸಂಬಳಕ್ಕೆ ಸೇರಿದ್ದರಿಂದ, ಅವರ ದ್ರವ್ಯ ಸಹಾಯವು ಸಿಗದೆ ಕುಟುಂಬ ಸಂರಕ್ಷಣೆಯ ಭಾರವು ಶೀರಾ ಶ್ರೀ॥ ಮಂಗೇಶರಾಯರ ಮೇಲೆ ಬಿತ್ತು.

ಆಗ ಶ್ರೀಯುತರು ಬಿ. ಎ. ಪಾಸಾಗಿರಲಿಲ್ಲ. ಗಣಿತವನ್ನು ಐಚ್ಛಿತ ವಿಷಯವಾಗಿ ತೆಗದುಕೊಂಡು, ಮದ್ರಾಸಿನಲ್ಲಿ ಬಿ. ಎ. ಕಲಿಯಬೇಕೆಂಬ ಆಸೆಯು ಮಣ್ಣುಗೂಡಿ, ಅವರು ಇತಿಹಾಸವನ್ನು ಐಚ್ಛಿಕವಾಗಿ ತೆಗೆದುಕೊಂಡು ಬಿ. ಎ. ಯ ಮೊದಲನೆ ಭಾಗವನ್ನು ಮಾಡಿ, ಗವರ್ನಮೆಂಟ ಕೊಲೆಜಿನಲ್ಲಿ ಕನ್ನಡ ಪಂಡಿತರಾಗಿ ಸೇರಿದರು. ಇದಕ್ಕೆ ಮೊದಲೂ ಇವರಿಗೆ ಕಾವ್ಯ ಕಟ್ಟುವ ಸಾಮರ್ಥ್ಯವಿತ್ತು. ಆದರೆ ಆ ಚಿಕ್ಕ ಕಾವ್ಯಗಳು ಅವರ ಗೆಳೆಯರ ಸ್ಮರಣೆಯಲ್ಲಿಯೇ ಉಳಿದುವಲ್ಲದೆ ಅಚ್ಚಿಗೆ ಬರಲಿಲ್ಲ.

ಇವರು ಗವರ್ನಮೆಂಟ ಕೊಲೆಜಿನಲ್ಲಿ ಪಂಡಿತರಾದೊಡನೆ ಅಷ್ಟರವರೆಗೆ ನೀರಸವಾಗಿದ್ದ ಕನ್ನಡದ ಶಿಕ್ಷಣಕ್ಕೆ ಕಳೆಯೇರಿತು. ಪದ್ಯಗಳನ್ನು ಹಾಡಿ ಕಲಿಸಿದರೆ ಹೃದ್ಯವಾಗುತ್ತದೆಂದು ಆಗ ಅವರಲ್ಲಿ ಕಲಿತ ವಿದ್ಯಾರ್ಥಿಗಳ ಸ್ಮರಣೆಯಲ್ಲಿ ಈಗಲೂ ಅದೆ. ಜೈಮಿನಿ ಭಾರತ, ಕುಮಾರವ್ಯಾಸನ ಭಾರತ, ತೊರವೆಯ ರಾಮಾಯಣ, ರಾಮಾಶ್ವಮೇಧ ಮುಂತಾದ ಮಹಾ ಕಾವ್ಯಗಳ ಪಠನದಲ್ಲಿಯೂ ಇತರ ತುಂಡು ಪದ್ಯಗಳನ್ನು ರಾಗಯುಕ್ತವಾಗಿ ಓದುವುದು ಹೇಗೆ, ಈ ಕಾವ್ಯಗಳ ಹುರುಳು ಎಲ್ಲಿದೆ, ಎಂದು ವಿದ್ಯಾರ್ಥಿಗಳಲ್ಲಿಯೂ ಅವರ ಇತರ ಗೆಳೆಯರಲ್ಲಿಯೂ,ಮರಾಠಿಯ ಮೇಲಣ ಅಭಿಮಾನವು ಕನ್ನಡಕ್ಕೆ ತಿರುಗುವಂತೆ ಅಸ್ತಿವಾರ ಹಾಕಿದವರು ಇವರೆಂದು ಧಾರಾಳವಾಗಿ ಹೇಳಬಹುದು. ಬಂಕಿಂ ಚಂದ್ರರ ಬಂಗಾಳಿ ನೊವೆಲುಗಳ ಬಿ. ವೆಂಕಟಾಚಾರ್ಯರ ಕನ್ನಡ ಪರಿವರ್ತನೆಗಳನ್ನೂ ಚ. ವಾಸುದೇವಯ್ಯನವರ 'ಆರ್ಯಕೀರ್ತಿ' ಇತ್ಯಾದಿ ಹೊಸ ಗ್ರಂಥಗಳನ್ನೂ ಪ್ರಚಾರಕ್ಕೆ ತಂದವರು ಶ್ರೀ ಪಂಜೆಯವರೇ. ಪ್ರಾಥಮಿಕ ಶಾಲಾ ಪಠ್ಯ ಪುಸ್ತಕಗಳನ್ನು ಆದಷ್ಟು ಮಟ್ಟಿಗೆ ಶ್ರೀ। ಎಸ್. ಜಿ. ನರಸಿಂಹಾಚಾರ್ಯರ ಶೈಲಿಗೆ ಮತ್ತು ಹಂಚಿಕೆಗೆ ಅನುಗುಣವಾಗಿ ಮಾರ್ಪಡಿಸಿ, ಕನ್ನಡದಲ್ಲಿ ಹೊಸ ಶೈಲಿಗೆ ವಿದ್ಯಾರ್ಥಿಗಳಿಗೆ ಮಾರ್ಗ ಕಡಿದು ಕೊಟ್ಟವರು ಶ್ರೀಯುತರೇ. ಶ್ರೀ. ಬೋಳಾರ ವಿಠ್ಠಲರಾಯರು 1900ನೇ ಇಸವಿಯಲ್ಲಿ ಪ್ರಕಟಿಸುತ್ತಿದ್ದ 'ಸುವಾಸಿನಿ' ಎಂಬ ಮಾಸಪತ್ರಿಕೆಯ ಸಂಪಾದಕರು ಶ್ರೀ। ಬೆನಗಲ್ ರಾಮರಾಯರಾಗಿದ್ದರೂ ನಿಜವಾದ ಚಾಲಕರೂ ರಸಿಕವಾದ ಸಣ್ಣ ಕಥೆಗಳ ಲೇಖಕರೂ ಪಂಜೆಯವರೇ. ಇದಷ್ಟು ಅವರು ಬಿ. ಎ. ಪಾಸು ಮಾಡುವ ಮೊದಲೇ ನಡೆದ ಸಂಗತಿ.

1904ರಲ್ಲಿ ಅವರು ಬಿ. ಎ. ಮುಗಿಸಿ, 1905ರಲ್ಲಿ ಎಲ್. ಟಿ. ಪಾಸಾದೊಡನೆ ಅವರಿಗೆ ಗವರ್ನಮೆಂಟ ಕೊಲೆಜಿನಲ್ಲಿ 60 ರೂಪಾಯಿ ತಲಬಿನ ಮೇಲೆ ಅಸಿಸ್ಟೆಂಟ ಉಪಾಧ್ಯಾಯರ ಕೆಲಸ ದೊರೆಯಿತು. ಮುಂದಿನ ವರ್ಷದಲ್ಲಿ ಅವರು ಆಗ ಹೊಸದಾಗಿ ಏರ್ಪಟ್ಟ ಮಂಗಳೂರು ರೇಂಜಿನ ಸಬ್ ಅಸಿಸ್ಟೆಂಟ ಇನ್ಸ್‌ಪೆಕ್ಟರರಾಗಿಯೂ ಅನಂತರ ಕೆಲವು ಸಮಯದಲ್ಲಿ ಕಾಸರಗೋಡಿಗೆ ಸಬ್ ಅಸಿಸ್ಟಾಂಟ ಇನ್ಸ್‌ಪೆಕ್ಟರರಾಗಿಯೂ ಚಾರ್ಜು ವಹಿಸಿದರು.

ಇಲ್ಲಿಂದ ಹೊಸ ಅಧ್ಯಾಯ ಪ್ರಾರಂಭಿಸಿತು. ಆಗಲೇ

ಕೆಲವು ವರ್ಷಗಳ ಹಿಂದೆ ಡಾ। ಬೋರ್ನರ ಹೊಸ ಸರ್ಕಿಲರು ಪ್ರಾಥಮಿಕ ಶಾಲೆಗಳ ಉದ್ಧಾರ್ವನೆಗಾಗಿ ಹೊರಟಿತ್ತು. ಅದರ ಮೇರೆಗೆ ಇನ್ಸ್‌ಪೆಕ್ಟಿಂಗ್ ಆಫೀಸರುಗಳಿಗೆ ಹೊಸ ಅಧಿಕಾರಗಳು ಬಂದುದರಿಂದ ಪ್ರಾಥಮಿಕ ಶಿಕ್ಷಣದ ಉದ್ಧಾರ್ವನೆಗೆ ಶ್ರೀಯುತರು ಕೈ ಹಾಕಿ ಹೊಸ ವಿಷಯ ಪಟ್ಟಿಯನ್ನು ತಯಾರಿಸಿ, ಅವುಗಳ ಕಲಿಸುವಿಕೆಗೆ ಬೇಕಾದ ಅನುಭವವನ್ನು ಕೊಡುತ್ತ ಬಂದರು. ಇವರ ಇನ್ಸ್‌ಪೆಕ್ಶನ್ ಅಂದರೆ ಪರೀಕ್ಷೆ ಗಿಂತಲೂ ಪಾಠಕೊಡುವುದೇ ಹೆಚ್ಚು. ಇದರೊಂದಿಗೆ ಒಂದು ಬಗೆಯಲ್ಲಿ ಪ್ರೌಢಶಿಕ್ಷಣಕ್ಕೂ ಇವರು ಕೈ ಹಾಕಿದಂತೆ ತೋರುತ್ತದೆ. ಯಾಕೆಂದರೆ ಗ್ರಾಮಸ್ಥರನ್ನು ಸಂದರ್ಶಿಸಿ, ಯಕ್ಷಗಾನ ಗ್ರಂಥವಾಚನಗಳ ಅಭಿರುಚಿಯನ್ನು ಇವರು ಬೀರುತ್ತ ಬಂದುದರಿಂದ ಕಾಸರಗೋಡು ಪುತ್ತೂರು ತಾಲೂಕುಗಳಲ್ಲಿ ಹಲವು ಗ್ರಂಥ ಪ್ರೇಮಿಗಳು ಇವರ ಸರ್ಕಿಟಿನಲ್ಲಿ ಇವರೊಂದಿಗೆ ಹಳ್ಳಿ ಹಳ್ಳಿಗಳಲ್ಲಿ ಸಂಚರಿಸುತ್ತಿದ್ದುದನ್ನು ಕಂಡವರಿದ್ದಾರೆ. ಇದರೊಂದಿಗೆ ಇವರು ಹಳ್ಳಿಯ 'ಪಾಡ್ದೊನೆಳು' (ಭೂತಾರಾಧನೆಯ ಹಾಡು)ಗಳನ್ನು ಸಂಗ್ರಹಿಸಿರುವರಲ್ಲದೆ ಅತಿ ಹೀನ ಕುಲದವರು ಹಾಡುವ ಹಾಡುಗಳಲ್ಲಿ ವಿಚಿತ್ರವಾದ ಸೊಗಸುಳ್ಳ ಅಲಂಕಾರಯುಕ್ತವಾದ ನುಡಿಗಳನ್ನು ಸಂಗ್ರಹಿಸುತ್ತಿದ್ದರು. ಮತ್ತು ಕನ್ನಡ ಜಿಲ್ಲೆಯ ಇತಿಹಾಸ ಸಂಶೋಧನೆಗೆ ತೊಡಗಿದ್ದರು.

ಈ ಕಾಲದಲ್ಲಿ ಲೋಕಲ್ ಬೋರ್ಡುಗಳಿಗೆ ಕಲೆಕ್ಟರ್ ಮತ್ತು ಡೆಪ್ಯುಟಿ ಕಲೆಕ್ಟರರ ಸರಕಾರಿ ಪ್ರೆಸಿಡೆಂಟರ ಬದಲಾಗಿ ಚುನಾಯಿತ ಬಿನ್ ಸರಕಾರಿ ಪ್ರೆಸಿಡೆಂಟರ ಆಡಳಿಕೆ ಬಂತು. ಬೋರ್ಡು ಶಾಲೆಗಳ ಆಡಳಿತದಲ್ಲಿ ಇಲಾಖಾ ಆಫೀಸರುಗಳಿಗೂ, ಈ ಬಿನ್ ಸರಕಾರಿ ಪ್ರೆಸಿಡೆಂಟರಿಗೂ ತಿಕ್ಕಾಟಗಳು ಪ್ರಾರಂಭವಾದವು. ಆಗ ಶ್ರೀ ಪಂಜೆಯವರು ಪುನಃ ಮಂಗಳೂರು ರೇಂಜಿಗೆ ವರ್ಗಾಯಿಸಲ್ಪಟ್ಟಿದ್ದರು. ಹಿಡಿಯಿತು ಜಗಳ- ಇಲಾಖೆಗೂ ತಾಲೂಕು ಬೋರ್ಡಿಗೂ. ಮಂಗಳೂರಿನ ಪ್ರೆಸಿಡೆಂಟರು ಶ್ರೀ। ಪಂಜೆಯವರನ್ನೂ ತನ್ನನ್ನೂ ಪರಸ್ಪರ ಅಗಲಿಸಬೇಕೆಂದು ಡಿರೆಕ್ಟರರಿಗೆ ಬರೆದು ಬಿಟ್ಟದ್ದೇ ತಡ ಆಯಿತು ವರ್ಗ ಟ್ರೈನಿಂಗ ಶಾಲೆಯ ಮುಖ್ಯ ಉಪಾಧ್ಯಾಯರಾಗಿ.

ಇದು ಹೊಸ ಅಧ್ಯಾಯವಾಯಿತು. ತನ್ನ ಇನ್ಸ್‌ಪೆಕ್ಷನ್ ಅನುಭವದಲ್ಲಿ ಉಪಾಧ್ಯಾಯರ ಕೆಲಸದಲ್ಲಿ ಕಂಡು ಬಂದ ದೋಷಗಳಿಗೆ ಟ್ರೈನಿಂಗ ಶಾಲೆಯ ಶಿಕ್ಷಣವೇ ಕಾರಣವೆಂದು ತಿಳಿದ ಇವರು ಟ್ರೈನಿಂಗ ಶಾಲೆಯ ಶಿಕ್ಷಣ ಕ್ರಮದಲ್ಲಿ ಉದ್ಧಾರ್ವನೆ ಮಾಡಿ, ಮೂರು ನಾಲ್ಕು ವರ್ಷಗಳಲ್ಲಿ ಟ್ರೈನಿಂಗ ಶಾಲೆಯೆಂಬ ಒಂದು ಸಂಸ್ಥೆ ಇದೆ ಎಂದು ಜನತೆಗೆ ತೋರಿಸಿಕೊಟ್ಟರು. ಇದಕ್ಕೆ ಮಿ। ಯೇಟ್ಸ್ (ಇನ್ಸ್‌ಪೆಕ್ಟರ) ಇವರ ಪ್ರೋತ್ಸಾಹವು ತುಂಬಾ ಸಹಾಯಕವಾಯಿತು. ಆದರೆ ಮಂಗಳೂರಿನಲ್ಲಿಯೇ ಮಂಗೇಶರಾಯರನ್ನು ಇರಗೊಡಿಸುವ ವಿಚಾರವೇ ಒಗ್ಗದ ಪ್ರೆಸಿಡೆಂಟರು (ಇವರೂ ಮಂಗೇಶರಾಯರ ಜಾತಿ-ಸಾರಸ್ವತರೇ) ತನಗೂ ಖಾಸಗಿ ಒಂದು ಶಾಲೆಗೂ ಇದ್ದ ವಿವಾದದಲ್ಲಿ ಶ್ರೀ। ಮಂಗೇಶರಾಯರು ಹಿಂದಿನಿಂದ ಒಳಸಂಚು ನಡೆಸುತ್ತಾರೆಂದು ಸಂದೇಹದಿಂದ ಡಿರೆಕ್ಟರರ ಬಳಿಗೆ ದೂರು ಕೊಟ್ಟರು. ಡಿರೆಕ್ಟರರಿಗೆ ಶ್ರೀ ಮಂಗೇಶರಾಯರು ನಡೆದುದನ್ನೆಲ್ಲ ಬಾಯ್ದೆರೆಯಿಂದ ನಿವೇದಿಸಿದರು. "ಇದನ್ನೆಲ್ಲಾ ಬರಹ ಮೂಲಕ ಕೊಡುವಿರೆ?" ಎಂದು ಡಿರೆಕ್ಟರರ ಪ್ರಶ್ನೆ. "ಏನೂ ಅಡ್ಡಿ ಇಲ್ಲ. ಸಿದ್ಧವಾಗಿದ್ದೇನೆ"ಂದು ಶ್ರೀ ಮಂಗೇಶರಾಯರ ಉತ್ತರ. ಈ ಬರಹ ಮೂಲಕ ರಿಪೋರ್ಟನ್ನು ಕುರಿತು ಡಿರೆಕ್ಟರರು ಪ್ರತ್ಯೇಕ ತನಖಿ ನಡಿಸಿ ಸಮಾಧಾನ ಪಟ್ಟರು. ಪ್ರೆಸಿಡೆಂಟರು ಕೇಡೆಣಿಸಿದರ ಪರಿಣಾಮವು ಒಳ್ಳೆಯದಕ್ಕೆ ತಂದಿಟ್ಟಿತು. ಮಂಗೇಶರಾಯರಿಗೆ ಕೊಡಗಿಗೆ ಪ್ರೊವಿಶನಲ್ ಸರ್ವಿಸಿನಲ್ಲಿ ವರ್ಗವಾಯಿತು. ಪ್ರೆಸಿಡೆಂಟರು ಮುನಿದ ಖಾಸಗಿ ಶಾಲೆ ಉಳಿಯಿತು. ಗವರ್ನಮೆಂಟಿನವರೇ ಅದನ್ನು ಉಳಿಸಿದರು.

ಮಡಿಕೇರಿಗೆ ಹೋದವರಿಗೆ ಕೆಲವು ಸಮಯದಲ್ಲಿ ಮಡಿಕೇರಿ ಹೈಸ್ಕೂಲಿನ ಬದ್ಲಿ ಮುಖ್ಯ ಉಪಾಧ್ಯಾಯರಾಗಿ ನೇಮಕವಾಯಿತು. ಕೊಡಗಿನವರು ಪಾಶ್ಚಾತ್ಯ ಪೋಷಾಕವನ್ನು ಮೆಚ್ಚುವವರು.ಹೇಟ್ ಬೂಟ್ ಧರಿಸದೆ ವೇಷ್ಟಿ ಅಥವಾ ಮಲ್ ಉಡುವವರೆಂದರೆ ಅವರಿಗೆ ಆಗದು. ಅಂಥವರಿಗೆ ಸಿಕ್ಕಿದ ಬಡ್ತಿ ಅಲ್ಲಿಯ ಮುಖಂಡರಿಗೆ ಒಗ್ಗಲಿಲ್ಲ. ಅಲ್ಲಿಯ ಕನ್ನಡ ಪತ್ರಿಕೆಯಲ್ಲಿ ಇಲ್ಲದಸಲ್ಲದ ಆರೋಪಗಳ ಉರಿಯು ಲಾವಾಪ್ರವಾಹದಂತೆ ಹರಿಯತೊಡಗಿತು. ಯುರೋಪಿಯನ್ ಕಮಿಶನರು ಅಲ್ಲಿಲ್ಲವಾಗಿದ್ದರೆ ಶ್ರೀ ಮಂಗೇಶರಾಯರು ಎಂದೋ ಕೊಡಗನ್ನು ಬಿಟ್ಟುಬಿಡಬೇಕಾಗುತ್ತಿತ್ತು. ಆದರೆ ಸರಕಾರಿ ಕೆಲಸದಲ್ಲಿ ತನ್ನ ಜೀವಮಾನದ ಅಧಿಕಾಂಶವನ್ನೇ ಸವೆಯಿಸಿ, ಸೋತ ಮಂಗೇಶರಾಯರಿಗೆ ಈ ಕೊಡಗರನ್ನು ಸಮಜಾಯಿಸುವುದೂ ಉಸುಬಿನಿಂದ ಎಣ್ಣೆ ತೆಗೆಯುವುದೂ ಒಂದೇ ಎಂದು ಖಚಿತವಾಗಿ, ಅವರು ದೀರ್ಘಕಾಲದ ರಜೆ ಪಡೆದು ಕೆಲಸದಿಂದ ನಿವೃತ್ತರಾದರು.

ಈ ಬಗೆಯ ವಿಶ್ರಾಂತಿಯು ಅವರಿಗೆ ಕರ್ಣಾಟಕ ಸೀಮೆಯನ್ನು ಸಂಚರಿಸುತ್ತ, ಅನೇಕ ಸಾಹಿತಿಗಳನ್ನು ಕಂಡು ಅನೇಕ ಇತಿಹಾಸ ಪ್ರಸಿದ್ಧ ಸ್ಥಳಗಳನ್ನು ಸಂದರ್ಶಿಸಿ,ಕನ್ನಡದ ಸೇವೆಯನ್ನು ಮಾಡಲಿಕ್ಕೆ ಅನುಕೂಲವಾಯಿತು. ಅವರು ಕಾಶಿಗೆ ಹೋದಾಗ ಅಲ್ಲಿರುವ ಕನ್ನಡ ಬಂಧುಗಳು ಅವರಿಂದ ಕನ್ನಡದ ಪ್ರಚಾರದ ಭಾಷಣವನ್ನು ಮಾಡಿಸಿದರು. ರಾಯಚೂರಿನಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ

ಇತ್ತ ಭಾಷಣವು ಕನ್ನಡ ಸಾಹಿತಿಗಳಿಂದ ಪ್ರಶಂಸಿಸಲ್ಪಟ್ಟಿದೆ.

ಇವರು "ಸರ್ವ ಕರ್ಣಾಟಕದ ಒಂದು ಶ್ರೇಷ್ಠ ಆರಾಧ್ಯ ವ್ಯಕ್ತಿ" ಎಂದು ಕಂಠೀರವನು ಹೇಳಿದ ಮಾತುಗಳು ಚಿಕ್ಕ ಮಕ್ಕಳಿಂದ ಪ್ರೌಢರಿಗೂ ಕನ್ನಡದಲ್ಲಿ ತಾನು ಬರೆದ ಚಿಕ್ಕ ಪುಟ್ಟ ಕಾವ್ಯ, ಕಥೆಗಳು, ರಸಿಕ ಕಥೆಗಳು ಕನ್ನಡ ಮಾತೃ ಭಾಷೆಯಲ್ಲದವರಿಗೂ ಕನ್ನಡದಲ್ಲಿ ಅಭಿರುಚಿಯನ್ನುಂಟು ಮಾಡಿದ ನಿಮಿತ್ತ ಸಮಂಜಸವಾಗುತ್ತದೆ.

ಇವರು ಇವುಗಳನ್ನೆಲ್ಲ ಸರಕಾರಿ ರೂಲಿನ ನಿಮಿತ್ತ ಇತರ ಪ್ರಕಾಶಕರಿಗೆ ಕೊಟ್ಟುದರಿಂದ, ಇವರು ದುಡ್ಡಿನ ಆರಾಧಕರು ಎಂದು ಕೆಲವರ ತಪ್ಪು ಅಭಿಪ್ರಾಯವಿದೆ. ಆದರೆ ಇವರ ಗುಪ್ತದಾನ, ಪ್ರಾಥಮಿಕ ಶಿಕ್ಷಣ ಸಪ್ತಾಹಕ್ಕೆ ತನ್ನ ಕೈಯಿಂದಲೇ ವೆಚ್ಚ (ಸುಮಾರು ರೂ. 500ಕ್ಕೆ ಮಿಕ್ಕಿ) ಇವುಗಳೆಲ್ಲ ಈ ತಪ್ಪುಗ್ರಹಿಕೆಯನ್ನುಹೋಗಲಾಡಿಸುವಂತವುಗಳು. ಇವರ ನಿರ್ಮಲ ನಡತೆ, ವಿನಯ ಗುಣ, ಜಾತಿಭೇದ ರಹಿತತ್ವ, ಇವುಗಳನ್ನು ಅವರ ಒಡನಾಡಿಗರೆಲ್ಲರು ಬಲ್ಲರು. ಇವರ ಜೀವನದಲ್ಲಿ ಮುಖ ಸೂತ್ರವೊಂದಿತ್ತು. "ಅನ್ಯರ ಮೇಲೆ ಹೊಂದಿರಬೇಡ, ನಂಬಿದರೆ ನಮ್ಮ ಕೈ ನಮ್ಮ ತಲೆ ಮೇಲೆ" ಎಂದು. ಇದಕ್ಕಾಗಿ ಎಂಥ ಕಷ್ಟ ಬಂದಾಗ್ಯೂ ಅವರು ಸಾಲಕ್ಕೆ ಕೈ ಹಾಕುತ್ತಿರಲಿಲ್ಲ. ಈ ಬಗೆಯ ಸ್ವಾತಂತ್ರ್ಯವನ್ನು ಕಾಪಾಡಿಕೊಂಡಿದ್ದರು. ಇವರು ಕುಳಿತುಕೊಳ್ಳದೆ 'ಇತ್ತಿಂದತ್ತ ಅತ್ತಿಂದಿತ್ತ' ಹೆಜ್ಜೆ ಹಾಕುತ್ತ ಪಾಠ ಹೇಳುವುದೂ, ಏನೊಂದು ಸಮಸ್ಯೆಯನ್ನು ವಿಚಕ್ಷಣತೆಯಿಂದ ಟೀಕಿಸಿ ಹೇಳುವುದೂ ಇವರು ಉತ್ತಮ ಮೇಧಾವಿಯೆಂದು ತಿಳಿಸುತ್ತದೆ. ಆದರೆ ಇವರ ಹುಟ್ಟು ಗುಣವಾಗಿ ಬಂದ ತನ್ನ ಸಾಮರ್ಥ್ಯದಲ್ಲಿದ್ದ ಅವಿಶ್ವಾಸವು ಇವರ ಸಾಹಿತ್ಯ ಕಾರ್ಯವನ್ನು ಇವರ ಮನಸ್ಸಿನಲ್ಲಿದ್ದಂತೆ ಮಾಡಲು ಕೈತಡೆಯುತ್ತಿದ್ದವು. ಅಂತು ಅವರ ಸ್ಮಾರಕವನ್ನು ಮಾಡಲಿಕ್ಕೆ ಕನ್ನಡದವರು ಮುಂದುವರಿಸಿದ್ದು, ಅವರ ನಿಧನದ ಸಂಬಂಧ ಉಂಟಾದ ವಿಷಾದವನ್ನು ಸೂಚಿಸಿದ ಸಮಗ್ರ ಕರ್ಣಾಟಕದ ಪತ್ರಿಕೆಗಳಲ್ಲಿ ಲೇಖನಗಳೂ ಅಲ್ಲಲ್ಲಿ ಜರಗಿದ ಭಾಷಣಗಳೂ ಇವರ ಮೇಲಣ ನಿಸ್ಸೀಮ ಪ್ರೇಮವನ್ನು ಹೊರಪಡಿಸುತ್ತವೆ.

ಇವರ ಅಂತ್ಯ ಕಾಲವು ನ್ಯೂಮೋನಿಯ (ವಾಯು ದುಮ್ಮಾನ)ದ ಜ್ವರನಿಂತು ಅದರ ಫಲವಾಗಿ ಉಂಟಾದ ಅಶಕ್ತಿಯಿಂದಲೇ ಆಗಿದ್ದರೂ, ಇವರು ಕೊನೆಯವರೆಗೆ ಪ್ರಜ್ಞೆಯುಳ್ಳವರಾಗಿ ತನ್ನ ಮಿತ್ರರಿಗೆಲ್ಲ ತನ್ನ ವಂದನೆಗಳನ್ನು ಅರ್ಪಿಸಬೇಕೆಂದೂ ತನ್ನ ಹುಡುಗನಿಗೆ ಹೇಳಿ ಕರ್ಣಾಟಕದ ಏಕೀಕರಣವು ತನ್ನ ಧ್ಯೇಯವಿತ್ತೆಂದು ಬರೆಯಬೇಕೆಂದೂ ತಿಳಿಸಿ, ಕುಮಾರ ವ್ಯಾಸನ ಒಂದು ಸೊಲ್ಲನ್ನು ಹೇಳಿ ಶ್ವಾಸವನ್ನು ನೀಗಿದರೆನ್ನುವಾಗ ಮಂಗೇಶರಾವ್ ನೀನೇ ಧನ್ಯನೆನ್ನಬೇಕು! ನಿನ್ನ ಆತ್ಮವು ಸಾಯುಜ್ಯವನ್ನು ಪಡೆದು ನಿರಂತರ ಶಾಂತಿಯನ್ನು ಹೊಂದಲಿ!!

(ಕೆನರಾ ಬ್ರದರ್ ಹುಡ್ ಜರ್ನಲ್ ೧೯೩೮)

# ಶ್ರೀ ಪಂಜೆ ಮಂಗೇಶರಾಯರು

(ಉಗ್ರಾಣ ಮಂಗೇಶರಾಯರು, ಪುತ್ತೂರು.)

ಶ್ರೀ ಪಂಜೆ ಮಂಗೇಶರಾಯರು ನನಗೆ ಗುರುಸಮಾನರು. ನಾನು ಅವರ ಅಪಾರವಾದ ಶಿಷ್ಯವರ್ಗದಲ್ಲಿ ಒಬ್ಬನಲ್ಲ; ಆದರೆ ನನಗೆ ಕನ್ನಡದಲ್ಲಿ ದೊರೆತ ಅಲ್ಪಸ್ವಲ್ಪ ಸ್ಥಾನಮಾನವು ಅವರ ವರಪ್ರಸಾದದಿಂದ. ಪಂಜೆಯವರಿಗೆ ಅರ್ಪಿತವಾದ ಈ ಪ್ರಶಸ್ತಿಗ್ರಂಥದಲ್ಲಿ ನಾನು ಮಾಡುವ ಈ ಸ್ತುತಿ ಅವರಿಗೆ ಒಂದು ದೊಡ್ಡ ಭೂಷಣವಲ್ಲದಿದ್ದರೂ ನನಗೆ ಶ್ರೇಯಸ್ಕರವು.

ಮಂಗೇಶರಾಯರಿಗೂ ನನಗೂ ಪ್ರಥಮ ಪರಿಚಯವಾದುದು ನಾನು ಎಲೊಯ್ಸಿಯಸ್ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದು ಅವರು ಅಸಿಸ್ಟಾಂಟ್ ಇನ್ಸ್ಪೆಕ್ಟರರಾಗಿ ವರ್ಷಾವಧಿ ಶಾಲಾಪರೀಕ್ಷೆಗೆ ಬಂದಾಗ. ಅವರ ಉದ್ದವಾದ ದೇಹ, ನಸು ಬಾಗಿದ ನಡೆ, ಗಂಭೀರ ಮುಖಭಾವ, ಜೋಲು ನಿರಿಬಿಟ್ಟ ವೇಷ್ಟಿ, ಕಪ್ಪಿನ ಉದ್ದಂಗಿ, ಜರಿ ರುಮಾಲು ಕಂಡು ಆ ದಿನಕ್ಕಾಗಿ ನಾನು ತಯಾರಿಸಿದ ಪಾಠ ಗಾಳಿಗೆ ಹಾರಿಹೋಯಿತು. ಆಗ ನಾನು ಚರಿತ್ರೆ ಪಾಠಮಾಡುತ್ತಿದ್ದೆನೆಂದು ನೆನಪು. ಅವರು ಒಳಗೆ ಬಂದೊಡನೆ ತನಗೆ ಕನ್ನಡ ಪಾಠ ಕೇಳುವ ಇಚ್ಛೆಯುಂಟೆಂದು ಹೇಳಿದರು. ಅಲ್ಲಿಯ ಕನ್ನಡ ಪಾಠವೂ ನನಗೆ ಇತ್ತು. ಆಗಲೆಂದು ಕನ್ನಡ ಪಾಠ ಪ್ರಾರಂಭಿಸಿದೆ. ಹುಡುಗರಿಗೆ ಹಾಡಬರುವುದಾದರೆ ಪದ್ಯ ಬಾಯಿಪಾಠ ಹೇಳಿಸೆಂದು ಅವರ ಅಪ್ಪಣೆ ಆಯಿತು. ಕೆಲವರು ಹಿಂದೂ ಹುಡುಗರು ಒಬ್ಬಿಬ್ಬರು ಕ್ರಿಸ್ತೀಯ ಹುಡುಗರು ಸುಸ್ವರದಿಂದ ಹಾಡಿದುದನ್ನು ಕೇಳಿ ಅವರು ಸಂತೋಷಪಟ್ಟರು. ಅನಂತರ ಪ್ರಬಂಧಪುಸ್ತಕಗಳನ್ನು ನೋಡುತ್ತ ತಿಂಗಳಿಗೊಂದೇ ಪ್ರಬಂಧವೇನಯ್ಯ ಎಂದು ನನ್ನನ್ನು ಕೇಳಿದರು. ಆ ಹುಡುಗ ಮಧ್ಯೆ ಗೈರುಹಾಜರಿರಬೇಕೆಂದು ನಾನು ಧೈರ್ಯವಾಗಿ ಹೇಳಿದೆ. ಇನ್ನೊಬ್ಬನ ಪುಸ್ತಕ ನೋಡಿದಾಗ ನಾನು ಹೇಳಿದುದು ನಿಜವೆಂದು ಅವರಿಗೆ ಸಮಾಧಾನವಾಯಿತು.

ಆ ದಿನ ಸಾಯಂಕಾಲ ಉಪಾಧ್ಯಾಯರನ್ನು ಒಟ್ಟುಗೂಡಿಸಿ ಕನ್ನಡ ಕಲಿಸುವ ಕ್ರಮವನ್ನು ನಮಗೆಲ್ಲರಿಗೂ ಬೋಧಿಸುತ್ತ,— ಕಾಲೇಜಿನಲ್ಲಿ ಪದ್ಯಹಾಡಿದುದನ್ನು ತಾನು ಕೇಳಿದ್ದುದು ಒಬ್ಬರ ಕ್ಲಾಸಿನಲ್ಲಿ ಮಾತ್ರ, ಪದ್ಯವನ್ನು ಹಾಡಿಯೇ ಕಲಿಸಬೇಕು; ಶಬ್ದಕ್ಕೆ ಶಬ್ದ ಅರ್ಥಕೊಟ್ಟು ಪ್ರತಿಪದಾರ್ಥ ಅನುವಾದಗಳನ್ನು ಮಾಡಿಸುವುದಕ್ಕಿಂತಲೂ ಅಲ್ಲಿ ವರ್ಣಿತವಾದ ಚಿತ್ರವು ವಿದ್ಯಾರ್ಥಿಗಳ ಕಣ್ಣಿಗೆ ಕಾಣಿಸುವಂತೆ ಅಗತ್ಯವಾದ ಕಡೆ ಪದಚ್ಛೇದ ವಿರಾಮ ಸ್ವರಭೇದಗಳಿಂದ ಹಾಡಿ ಅದನ್ನು ಸ್ಪಷ್ಟಮಾಡುವುದುತ್ತಮವೆಂದು, ಅದಕ್ಕೆ ದೃಷ್ಟಾಂತರೂಪವಾಗಿ–ಕೃಷ್ಣನು ಕರ್ಣನನ್ನು ಪಾಂಡವರ ಪಕ್ಷಕ್ಕೆ ಒಲಿಸುವ ಯತ್ನವನ್ನೊಳಕೊಂಡ–'ಇನತನೂಜನ ಕೂಡೆ ಮೈದುನತನದ ಸರಸವನೆಸಗಿ' ಎಂಬ ಭಾರತ ಭಾಗವನ್ನು ತನ್ನ ಮೃದುಮಧುರ ಗಂಭೀರ ಸ್ವರದಿಂದ ಹಾಡಿ ನಮ್ಮೆಲ್ಲರ ತಲೆದೂಗಿಸಿದರು.

ತನ್ನ ಕನ್ನಡವು ಪಂಜೆ ಕನ್ನಡವೊ ಬಂಜೆ ಕನ್ನಡವೋ ಎಂದು ಅವರು ಸವಿನಯವಾಗಿ ಹೇಳಿಕೊಳ್ಳುವುದಿತ್ತು. ಅವರ ಮಾತು ಕಿರಿದು, ಅರ್ಥ ಹಿರಿದು. ಅವಕ್ಕೆ ಸರಳತೆ, ರಸಿಕತೆ, ಸಹಜತೆ, ಕೋಮಲತೆ ತಾನಾಗಿಯೇ ಸೇರಿಕೊಳ್ಳುತಿದ್ದುವು. ಒಂದು ದಿನ ಸಂಸ್ಕೃತಪದಗಳಿಗಿಂತ ಕನ್ನಡನುಡಿಗಳೇ ಎಂದೂ ಶೋಭಿಸುವುವೆಂದು ಅವರು 'ನಮ್ಮಲ್ಲಿಗೆ ಇಂದು ಭೋಜನಕ್ಕೆ ದಯಮಾಡಿಸಬೇಕು' ಎನ್ನುವುದರ ಬದಲಾಗಿ, 'ನಮ್ಮಲ್ಲಿ ಇವತ್ತು ಊಟಕ್ಕೆ ಬರುತ್ತೀರಾ' ಎಂದು ಕೇಳುವುದು ಕಿವಿಗೆ ಇಂಪೆಂದರು. ನಾನು ನಗುತ್ತಾ, 'ಆಗಬಹುದು ಸ್ವಾಮಿ' ಎಂದು ಉತ್ತರಕೊಟ್ಟೆ. ಆಗ ಅವರು ತಾನು ಬರೇ ದೃಷ್ಟಾಂತಕ್ಕೆ ಹೇಳಿದುದಲ್ಲದೆ ಅದು ಆಮಂತ್ರಣವಲ್ಲವೆಂದರು. ಆದರೆ ನನ್ನನ್ನು ಅವರ ಮನೆಗೆ ಊಟಕ್ಕೆ ನಾನು ಬೇಡವೆಂದರೂ ಎಳೆದುಕೊಂಡುಹೋದರು.

ಅವರಲ್ಲಿ ಊಟಮಾಡುತ್ತಿದ್ದಾಗ ಆದ ಮಾತುಕತೆಯಿಂದ ನನಗೆ ಕನ್ನಡದಲ್ಲಿದ್ದ ಪ್ರೇಮವನ್ನು ತಿಳಿದುಕೊಂಡು, ನಾನು ಎಲೊಯ್ಸಿಯಸ್ ಕಾಲೇಜಿನಲ್ಲಿ ಅದನ್ನು ವೃಥಾ ವ್ಯಯಗೊಳಿಸದೆ ಪುತ್ತೂರಿನ ಮಹಾಜನರ ಯತ್ನದಿಂದಾಗುವ ಹೊಸಶಾಲೆಯಲ್ಲಿ ಸದ್ವಿನಿಯೋಗ ಮಾಡಬೇಕೆಂದು ತಿಳಿಸಿದುದಲ್ಲದೆ ಅಲ್ಲಿಯ ಕನ್ನಡ ಪಂಡಿತನನ್ನಾಗಿ ನನ್ನನ್ನು ನಿಯಮಿಸುವಂತೆ ಶಾಲಾಧಿಕಾರಿಗಳನ್ನು ಅನಂತರ ಪ್ರೇರಿಸಿದುದರಿಂದ ನನ್ನ ಜೀವಮಾನದ ಬಹುಭಾಗವನ್ನು ಆ ಶಾಲೆಯಲ್ಲಿ ಸೇವೆಮಾಡಿ ಸಾರ್ಥಕವನ್ನಾಗಿ ಮಾಡಲು ನನಗೆ ಮಾರ್ಗದರ್ಶಕರಾದರು. ಆ ದಿನವೇ ನನಗೆ ಓದುವುದಕ್ಕಾಗಿ ಅವರು ಕೊಟ್ಟ ಕವಿರಾಜಮಾರ್ಗ, ಅಜಿತನಾಥಪುರಾಣ, ಗಿರಿಜಾಕಲ್ಯಾಣಗಳನ್ನು ನಾನು ಓದಿಯಾದ ಮೇಲೆ ಅವರ ಪ್ರಸಾದರೂಪವಾಗಿ ನನ್ನಲ್ಲೆ ಇಟ್ಟುಕೊಂಡು ಅವನ್ನು ಅವರಿಗೆ ಮರಳಿಕೊಡದೇ ಬಹುಕಾಲವಾದ ಮೇಲೆ ಧರ್ಮಕ್ಕೆ ಬಂದುದು ದಾನವಾಗಲೆಂದು ನಾನು ಸೇವೆಮಾಡುತ್ತಿದ್ದ

ಶಾಲೆಯ ಸರಸ್ವತೀ ಭಂಡಾರಕ್ಕೆ ಒಪ್ಪಿಸಿದೆ.

ಆಗಾಗ ನಮ್ಮೊಳಗೆ ಸರಸಸಲ್ಲಾಪಗಳು ಆಗುತ್ತಿದ್ದುವು. ನನ್ನನ್ನು ಕಂಡಾಗಲೆಲ್ಲ–'ಹೇಳು! ಹೇಳು! ಹೇಳು! ವಿಶೇಷವೇನು ಹೇಳು!' ಎಂದು ಅವರು ಕೇಳುವರು. ವಿಶೇಷ ತಮ್ಮನ್ನು ನೋಡುವುದೇ ಎಂದು ನಾನು ಮಾತು ಮುಗಿಸಹೋದರೆ ಅವರು ಅಷ್ಟಕ್ಕೆ ನನ್ನನ್ನು ಬಿಡಲೊಲ್ಲರು. ಅವರಿಗೆ ಮಾತು ಹೆಚ್ಚು. ಅವರೊಡನೆ ನಾವು ಮಾತಾಡುತ್ತಿರುವುದಕ್ಕಿಂತಲೂ ಅವರು ಆಡುತ್ತ ಇರುವುದನ್ನು ಕೇಳುವುದೇ ನಮಗೆ ಪರಮಾನಂದವೆಂದು ಹೇಳಿದಾಗ ಅವರು ಎಲ್ಲಿಯದೋ ಹಿಂದಿನ ನೆನಪಾಗಿ ನಕ್ಕು ಹೀಗೆಂದರು-"ನೀನು ಹೇಳುವುದು ಸರಿಯಿದ್ದೀತು. ಏಕೆಂದರೆ ನಾನು ಒಂದು ದಿನ ಒಬ್ಬ ಸ್ನೇಹಿತನೊಡನೆ ಫಲಾಹಾರ ಮಾಡುತ್ತ ಮಾತನಾಡುತ್ತಿದ್ದಾಗ ಅವರು ಹುಂಕುಟ್ಟುತ್ತ ನನ್ನನ್ನು ಮಾತನಾಡ ಬಿಟ್ಟುಬಿಟ್ಟು ತಾನು ತಿಂಡಿಯನ್ನು ತಿನ್ನುತ್ತಲೇ ಇದ್ದರು. ತಿಂಡಿಯ ತಟ್ಟೆ ಖಾಲಿಯಾಗುತ್ತಿರುವುದನ್ನು ಕಂಡು ನಾನು ಎಚ್ಚರಗೊಂಡು ನಾನು ಹೇಳುತ್ತಿದ್ದ ಕಥೆಯನ್ನು-ಹಗ್ಗ ಹರಿದ ಹಾಗೆ ಮುರಿದು-'ಅವನು ಹಾಗೆಯೇ ಸತ್ತುಹೋದನೆಂದು' ಮುಗಿಸಿ ಉಳಿದ ತಿಂಡಿಯನ್ನು ಮೌನವಾಗಿ ತಿಂದುಬಿಟ್ಟೆ."

ಸರ್ಪಭೂಷಣ ಶಿವಯೋಗಿಯ ಸರಸವಾದ ಕನ್ನಡ ಹಾಡುಗಳು ಅಚ್ಚಾಗುವುದಕ್ಕೆ ಮೊದಲಿಂದಲೇ ಅವರು ಪ್ರತಿತೆಗೆದು ಇಟ್ಟುಕೊಂಡಿದ್ದುದು ನನ್ನ ಕಣ್ಣಿಗೆ ಬಿತ್ತು. ನಾನು ಅವನ್ನು ಓದಿಕೊಂಡು ಅವುಗಳ ಲಹರಿಗೆ ಮನಸೋತು ಅವುಗಳಂತೆ ಕೆಲಕೆಲವು ಪುಟ್ಟ ಕವಿತೆಗಳನ್ನು ಮಾಡಿ ಆ ಪದ್ಯ ವಿಶೇಷಕ್ಕೆ ವೀರ ಚೌಪದಿಯೆಂದು ಹೆಸರಿಟ್ಟುದನ್ನು ಪಂಜೆಯವರು ಮೆಚ್ಚಿ ತಾನೂ ಆ ರೀತಿಯಾಗಿ ಆ ಮೊದಲೂ ಅನಂತರವೂ ಬರೆದ ಕವನಕ್ರಮಕ್ಕೆ ಆ ಹೆಸರನ್ನೇ ಇಟ್ಟು ಅದನ್ನು ಪ್ರಚಾರಗೊಳಿಸಿದರು; ಮಾತ್ರವಲ್ಲ ಅವರು ಸಂಪಾದಿಸಿದ ಪದ್ಯಸಂಗ್ರಹದಲ್ಲಿ ನನ್ನ ಕವಿತೆಗಳಿಗೆಡೆಗೊಟ್ಟು ಅವರು ನನ್ನನ್ನು ಬಹು ಪ್ರೋತ್ಸಾಹಿಸಿದರು.

ನಾನು ಮಾಸ್ತರಿ ತರಬೇತಿಯಲ್ಲಿದ್ದಾಗ ಪಂಜೆಯವರು ಉಪಾಧ್ಯಾಯರ ಮಹಾಸಭೆಗಳನ್ನು ಏರ್ಪಡಿಸಿ ಶಿಕ್ಷಣ ಪದ್ಧತಿಯನ್ನು ಕುರಿತು ಉಳ್ಳಾಳ ಮಂಗೇಶರಾವ್, ತೋನ್ಸೆ ಮಂಗೇಶರಾವ್‌ಗಳೊಡನೆ ಭಾಷಣಗಳನ್ನು ಮಾಡುತ್ತಿದ್ದರು. ಸಭೆಯಲ್ಲಿ ಒಂದು ದಿನ ಒಬ್ಬ ಉಪಾಧ್ಯಾಯರು, ಅವರು ಕೊಟ್ಟ ಬೋಧವು ಆಚರಣೆಗೆ ತರಲು ಕಷ್ಟವೆಂದಾಗ ತಾವು ಕೈಕಂಬಗಳ ಹಾಗೆ ಮಾರ್ಗದರ್ಶಕರು ಹೊರತು, ಮಾರ್ಗ ನಡೆವವರಲ್ಲ; ಆಚರಣೆಯ ಕಷ್ಟ ನಿಷ್ಠುರಗಳನ್ನು ಉಪಾಧ್ಯಾಯರು ವಹಿಸಿಕೊಳ್ಳಬೇಕೆಂದು ಎಲ್ಲರನ್ನು ನಗಿಸಿದರು. ಬಾಲಸಾಹಿತ್ಯದ ಬೆಳವಣಿಗೆಗೆ ಇಂತಹ ಸಭೆಗಳಲ್ಲಿ ಅವರು ಬೀಜಹಾಕುತ್ತಿದ್ದರು. ಮಕ್ಕಳಿಗೆ ನೀತಿಬೋಧಕವಾದ ವೈರಾಗ್ಯಪರವಾದ ಹಾಡುಗಳು ರುಚಿಸಲೊಲ್ಲವು; ಬಾಲಸುಲಭವಾದ ವಿಷಯಗಳನ್ನು ಕುರಿತು ಹೊಸ ಕವಿತೆಗಳನ್ನು ಹೊಸ ಮಟ್ಟುಗಳಲ್ಲಿ ರಚಿಸಿ ಬಾಲಕರಿಗೆ ಕಲಿಸಬೇಕೆಂದು ತರುಣರನ್ನು ಆ ಉದ್ಯೋಗಕ್ಕೆ ಅವರು ಹುರಿದುಂಬಿಸುತ್ತಿದ್ದರು.

ಪಂಜೆಯವರು ಉಳ್ಳಾಲರು ಮುಖ್ಯರಾಗಿ ಬಾಲಸಾಹಿತ್ಯ ಮಂಡಲವನ್ನು ಸ್ಥಾಪಿಸಿದರು. ಇದು ಬಾಲಕರಿಗೆ ಹಿತವಾದ ಸಾಹಿತ್ಯ ಪ್ರಕಟನಕ್ಕಾಗಿ ಅವರು ಸ್ಥಾಪಿಸಿದ ಸಂಸ್ಥೆ. ಅದರೊಳಗೆ ಶಾಲಾ ಉಪಯೋಗದ ವಿಶಿಷ್ಟ ವಸ್ತುಗಳೂ ಪೆಪ್ಪರ್ ಮಿಠಾಯಿ ಕೂಡ ಇರುವುದನ್ನು ಕಂಡು ಒಂದು ದಿನ ಇದೂ ಬಾಲಸಾಹಿತ್ಯವೊ ಎಂದು ನಾನು ತಮಾಷೆಮಾಡಿದಾಗ ಪಂಜೆಯವರು ಅದು ಬಾಲಕರಿಗೆ ನಿತ್ಯವೂ ಬೇಕಾದ ಮುಖ್ಯ ಸಾಹಿತ್ಯ, ಅದರ ಸವಿಯನ್ನು ನೋಡೆಂದು ಎರಡು ನನ್ನ ಬಾಯಿಗೆ ಹಾಕಿ ನನ್ನ ಬಾಯನ್ನು ಮುಚ್ಚಿಸಿದರು.

ಪಂಜೆಯವರು ತನ್ನನ್ನು ಸಂದಿಸಿದವರನ್ನು ತನ್ನಂತೆಯೇ ಕನ್ನಡ ಪ್ರೇಮಿಗಳನ್ನಾಗಿ ಮಾಡುತಿದ್ದರು. ತಮ್ಮ ಪ್ರತಿಭೆಯಿಂದ ಅವರಲ್ಲಿ ಪ್ರತಿಭೆಯ ಕಿಟಿಯನ್ನು ಹಚ್ಚುತ್ತಿದ್ದರು; ಅವರಿಗೆ ಕಥೆ ಕವನಗಳನ್ನು ಬರೆಯಲು ಪ್ರೇರಿಸಿ, ಅವರು ಮಾಡಿದ ಯತ್ನಗಳನ್ನು ಕೊಂಡಾಡಿ, ರಚಿಸಿದ ಕವಿತೆ ಕತೆಗಳನ್ನು ಬಾಲಸಾಹಿತ್ಯದಲ್ಲಿ ಪ್ರಕಟಿಸಿ ಪ್ರೋತ್ಸಾಹಮಾಡುತ್ತಿದ್ದರು. ದಕ್ಷಿಣ ಕನ್ನಡದಲ್ಲಿ ಶ್ರೀ ಪಂಜೆ ಮಂಗೇಶರಾಯರನ್ನು ಬಾಲಸಾಹಿತ್ಯ ಸುಧಾಕರರೆಂದು ನಿರ್ಮತ್ಸರದಿಂದ ಹೇಳಬಹುದು. ಅವರು ತೀರಿಹೋಗಿ ಇಂದಿಗೆ ಹಲವು ವರ್ಷಗಳಾದರೂ ಅವರ ಕೀರ್ತಿ ಶಾಶ್ವತವಾಗಿರುವುದು.

# ದಿವಂಗತ ಪಂಜೆಯವರ ಸ್ಮರಣೆಗಳು

(ಶ್ರೀ ಎಚ್. ಸುಂದರರಾಯರು. ಎಂ. ಎ. ಪ್ರಿನ್ಸಿಪಾಲ್ ಎಮ್. ಜಿ. ಎಫ್ ಕಾಲೇಜು ಉಡುಪಿ.)

ಕಳೆದ ವರ್ಷ (೧೯೩೬) ಎಪ್ರಿಲು ತಿಂಗಳಿನೊಂದು ದಿನ, ನಸುಕು ಹರಿಯುವ ಹೊತ್ತಿಗೆಂಬಂತೆ ನಾನು ಮೈಸೂರು ರೈಲ್ವೆ ಚಾವಡಿಯಲ್ಲಿ ಬಂದಿಳಿದಿದ್ದೆ. ಅಲ್ಲಿಂದ ರಾಜಧಾನಿಯ ಬೀದಿಗಳಲ್ಲಿ ಬಂಡಿಯನ್ನೇರಿ ಸಾಗುತ್ತಿದ್ದ ನನಗೆ- ನಗರವೆಲ್ಲ ಇನ್ನೂ ತೂಕಡಿಸುತ್ತಿರುವಂತೆ ಕಾಣಿಸುತ್ತಿತ್ತು. ದೂರದ ಚಾಮುಂಡಿ ಬೆಟ್ಟದ ದೀಪದ ಸಾಲುಗಳು–ನಗರಕ್ಕೆ ಬರುವವರನ್ನು ಸ್ವಾಗತಿಸುವಂತೆ ಮಿನುಗುತ್ತಿದ್ದುವು. ಮೆಲ್ಲನೆ ಈ ನಸುಗತ್ತಲೆ ಮಾಯವಾಗಿ ಹೊಂಬೆಳಕು ಹರಿಯಿತು. ಹೊಂಬೆಳಕು ಚೆಂಬೆಳಕಾಗಿಯೂ ಆಯಿತು. ನಾನು ಹೊಟೇಲನ್ನು ಸೇರುವಾಗ— ಅಷ್ಟೊಂದು ಸುಂದರವಾದ ಸುಪ್ರಭಾತ ನನಗಾಗಿ ಇದಿರುಕಾದಿತ್ತು. ನೀಲ ಆಕಾಶವೊಂದು; ಸೂರ್ಯರಶ್ಮಿಯಿಂದ ತೊಯ್ದ ಹೊಟೇಲಿನ ಚಾವಡಿಯೊಂದುಕಡೆ,ಎದುರಿಗೆ ತುಸು ದೂರದಲ್ಲಿ ರತ್ನಗಂಧಿ (ಗೋಲ್ಡ್ ಮೊಹರು) ಮರಗಳು ಹೂತು ಹೊನ್ನಾಗಿದ್ದುವು. ಅವಕ್ಕೆಲ್ಲ ಒಪ್ಪುವ ಬಗೆಯಲ್ಲಿ ಹೊಟೇಲಿನೆದುರಿನ ಉದ್ಯಾನವೂ— ಹತ್ತೆಂಟು ಬಗೆಯ ಹೂಗಿಡಗಳಿಂದ ಬಣ್ಣ ಬಣ್ಣದ ರತ್ನಗಂಬಳಿಯಾಗಿತ್ತು.

ನಾನು ಹೊಟೇಲಿನ ಒಂದು ಕೊಟಡಿಯನ್ನು ಸೇರಿಕೊಂಡೆ–ನನ್ನ ಬಳಿಗೆ ಬಂದ ಸೇವಕನೊಡನೆ, ನನ್ನ ಮಗ್ಗುಲಿನ ಕೋಣೆಯಲ್ಲಿ ಯಾರು ಬಂದಿದ್ದಾರೆಂದು ವಿಚಾರಿಸಿದೆ. ಇವನು ಕೊಟ್ಟ ಸುದ್ದಿಯಿಂದ ಅತ್ಯಂತ ಆತುರಾನಂದಗಳುಂಟಾದುವು. ಎಣಿಸದಂಥ ಭಾಗ್ಯ- ಇಷ್ಟು ಅಯೋಚಿತವಾಗಿ, ಅಪ್ರಾಸಂಗಿಕವಾಗಿ! ಶ್ರೀ ಪಂಜೆಯವರಂಥ ವ್ಯಕ್ತಿಗಳು ಅಲ್ಲಿದ್ದಾರೆಂದು ತಿಳಿಯಲು ಎಷ್ಟು ಆನಂದವಾಗಬೇಡ?

ಅವರು ತುಸುಹೊತ್ತಿನಲ್ಲಿ ತಮ್ಮ ಕೋಣೆಯಿಂದ ಹೊರಬಿದ್ದರು. ಪರಿಚಿತ ರೂಪವೇ! ಬಿಳುಗೂದಲಿನ ತಲೆ, ತೆಳುಗಾಲಿನ ಜೀವ; ತಾಪಸಿಗೊಪ್ಪುವ ಆಕಾರ, ಗಾಂಭೀರ್ಯ. ನಾನು ಹಿಂದೆ ಕಂಡುದಕ್ಕಿಂತ ಹೆಚ್ಚಾಗಿ ಅವರ ಬೆನ್ನಿಗೆ ಗೂನು ಬಂದಿತ್ತು; ಮುಖದಲ್ಲಿ ಒಂದು ಬಗೆಯ ದಣಿವಿನ ಛಾಯೆಯೂ ಕಾಣಿಸುತ್ತಿತ್ತು. ಆದರೆ ಮುಪ್ಪು–ಅವರ ಉತ್ಸಾಹವನ್ನಾಗಲಿ, ಪ್ರೀತಿ ಸ್ವಭಾವಗಳನ್ನಾಗಲಿ, ಗೆಳೆತನದ ಸುಖೋಷ್ಣತೆಯನ್ನಾಗಲಿ ಕುಂದಿಸಿರಲಿಲ್ಲ.

ಆ ವೇಳೆಯೇ ಅವರು ಮೈಸೂರು ವಿಶ್ವವಿದ್ಯಾನಿಲಯದ ಸಲುವಾಗಿ ಮಹಾಭಾರತದ ಸಂಪಾದನೆಯ ಕೆಲಸದಲ್ಲಿ ನಿರತರಾಗಿದ್ದರು. ಆ ದಿನ ಊಟವಾದ ಬಳಿಕ ಅವರು ನನ್ನನ್ನು ತಮ್ಮ ಕೊಟಡಿಗೆ ಕರೆದೊಯ್ದು ಕುಳ್ಳಿರಿಸಿಕೊಂಡರು. ಮುಂದೆ ತೊಡಗಿದುವು ಸಂಭಾಷಣೆಗಳು. ಹಲವಾರು ಸಂಗತಿಗಳನ್ನೆತ್ತಿಕೊಂಡೆವು; ಖಾಸಗಿ ಸುಖ ದುಃಖಗಳು, ಸಾಹಿತ್ಯ ವಿಚಾರ, ಮುಖ್ಯವಾಗಿ ವಿದ್ಯಾವಿಷಯಕವಾದ ಸಂಗತಿಗಳು–ಎಲ್ಲವೂ ಬಂದುವು. ಹುಟ್ಟು ಶಿಕ್ಷಕರುಎಂಬಂಥ ಒಬ್ಬರಿರುವುದಿದ್ದರೆ ಅವರೇ. ಅನೇಕ ಆಧುನಿಕ ಶಿಕ್ಷಣ ಸಮಸ್ಯೆಗಳನ್ನು ಕುರಿತು ತಾವಾಗಿ ಪ್ರಯೋಗದಿಂದ, ಅನುಭವದಿಂದ ಜ್ಞಾನಗಳಿಸಿ— ಖಂಡತುಂಡಾಗಿ ಮಾತನಾಡಬಲ್ಲವರು.

ಶ್ರೀ ಪಂಜೆಯವರಲ್ಲಿನ ಶಿಕ್ಷಕರ ಗುಣ ಅಮೋಘವಾದದ್ದು. ಮಗುವಿನ ಮನಸ್ಸೇನೆಂದು ಅವರು ಬಲ್ಲರು. ಮಗುವಿನೊಡನೆ ಮಗುವಾಗಿ ನಲಿದು ಅದರ ಕೆಲಸದಲ್ಲಿ ಬೆರೆಯಬಲ್ಲರು; ಮಗುವಿನ ಪಾಲಿನ ತೊಡಕೇನೆಂದು ಅರಿಯಬಲ್ಲರು. ಅಂಥ ತೆರೆದ ಮನಸ್ಸು, ತಿಳಿವು ಅವರಿಗಿದ್ದುದರಿಂದಲೇ ತಮ್ಮ ಪರಿಶೀಲನೆಯಿಂದ ಅನುಭವಿಗಳಾದರು. ಅವರೇ ನನ್ನೊಡನೆ –ತಾನು ಶಿಕ್ಷಣದ ಮೇಲೆ ಹೆಚ್ಚೇನು ಓದಿದವನಲ್ಲವೆಂದೂ, ಶಿಕ್ಷಣ ತತ್ವಶಾಸ್ತ್ರಗಳು ತನಗೆ ರುಚಿಸವೆಂದೂ ಅಂದುದುಂಟು. "ನಿಮ್ಮ ಮಗುವಿನ ಮನಸ್ಸು, ಹೃದಯಗಳನ್ನು ತಿಳಿಯಲು ಬೇರೆ ಪುಸ್ತಕ ಬೇಕೇ?" ಎಂದರು ಅವರು. ಕಲಿಸುವುದೆಂಬುದು– ಕೃತಿ. ಅನೇಕ ಹೊಸ ಶಿಕ್ಷಣ ತತ್ವವಿಚಾರಗಳನ್ನು ಅವರು ತುಸು ಅನುಮಾನದಿಂದಲೇ ನೋಡುತ್ತಿದ್ದರು. ಅವುಗಳಲ್ಲಿ ಏನೇನೂ ಅರ್ಥವಿಲ್ಲೆಂದು ಅವರು ಹೇಳುವವರಲ್ಲ. ಅವುಗಳಿಂದ ಮುಖ್ಯ ಸಮಸ್ಯೆಗಳೇನೆಂದು ತಿಳಿಯಲು ಇನ್ನಷ್ಟು ಗೊಂದಲವಾಗುತ್ತದೆಂಬುದೇ ಅವರ ವಾದ. ಅತಿವಾದಿಗಳನ್ನು— ವಾದ ಪ್ರಸಾರಕರನ್ನು ಕಂಡರೆ ಅವರಿಗೆ ಅಸಹ್ಯ. ಅದೇ ಕಾರಣದಿಂದ ಜೀವನದ ವ್ಯವಹಾರಗಳಲ್ಲೆಲ್ಲ ಸಾಮಾನ್ಯ ಬುದ್ಧಿಶಕ್ತಿಯ ದಾರಿಯನ್ನು ನೆಚ್ಚಿಹೋಗುವವರು. ಅವರ ಸಾಮಾನ್ಯ ಬುದ್ಧಿಶಕ್ತಿಯೆಂಬುದು ಅಸಾಮಾನ್ಯವೂ ಆಗಿತ್ತು; ಅಂಥ ದರ್ಶನ ಪ್ರೇರಿತರಾಗಿದ್ದ ಬಾಳಿನ ಮುಖ್ಯ ಸುಳಿವು ಸೆಳೆವುಗಳನ್ನರಿತು-ಅದರಿಂದ ಉಳಿದವರಿಗೆ ಮಾರ್ಗದರ್ಶನ, ಪ್ರೇರಣೆ ಕೊಡುವ ಯೋಗ್ಯತೆ ಅವರಿಗಿತ್ತು. ನಮ್ಮ ಜಿಲ್ಲೆಯ ಇನ್ನೊಬ್ಬರು ಹೆಸರಾದ ಶಿಕ್ಷಕರಾಗಿದ್ದ ಬಂಟ್ವಾಳ ರಘುನಾಥರಾಯರಿಗೂ ಇವರಿಗೂ— ವಿಚಿತ್ರ ತಾರತಮ್ಯ. ರಘುನಾಥರಾಯರು ವಿಶಾಲ ಹೃದಯಿಗಳು, ಪ್ರೀತಿಸಬಲ್ಲವರು–ಆದರೆ ಕೆಲಸ, ಶಿಸ್ತುಗಳಲ್ಲಿ ತೀರ ಕಠಿಣ ಮನಸ್ಕರು. ಅವರು ಕಸುಬುದಾರರು! ಅವರೂ ಅನೇಕ ವ್ಯಕ್ತಿಗಳನ್ನು ರೂಪಿಸಿದರು. ಇನ್ನೊಂದು ಕ್ಷೇತ್ರದಲ್ಲಿ ಡಾ। ಎನಿಬೆಸೆಂಟರನ್ನು ಕುರಿತ

ಹೀಗೆಯೇ ಹೋಲಿಸಲೂ ಬಹುದು. ಆದರೆ ಶ್ರೀ ಪಂಜೆಯವರ ವಿಷಯದಲ್ಲಿ ಹಾಗೇನೂ ಇಲ್ಲ--ಆ ಬಗೆಯ "ಬಿಗುಪು" ಪಂಜೆಯವರ ಗುಣವಲ್ಲ. ಶಿಕ್ಷಣವೆಂಬುದು ಇನ್ನಾವುದೋ ಒಂದಕ್ಕೆ ದಾರಿ ಎಂದು ತಿಳಿದವರು ಅವರಲ್ಲ. ಶಿಕ್ಷಣವೇ ಅವರ ಪಾಲಿನ ಗುರಿಯೂ ಆಗಿತ್ತು. ಆದುದರಿಂದ ಎಳೆಯರ ಮೇಲೆ "ಜ್ಞಾನ"ವನ್ನು ಹೊರಿಸುವವರು ಅವರಲ್ಲ. ಕಲಾವಿದರು ಅವರು; ಸೃಷ್ಟಿಕಾರ ಕಲಾವಿದನಂತೆ "ಶಿಕ್ಷಣ" ವೆಂಬ ಸೃಷ್ಟಿಯ ವಿಲಾಸ, ಸಾಹಸಗಳಲ್ಲಿ ಮಗುವು ತನ್ನ ಜತೆಯಲ್ಲಿ ಸೇರಿ–ಅದರ ಸವಿಸತ್ವಗಳನ್ನುಣ್ಣುವಂತೆ ಮಾಡಲು ಶಕ್ತರಾಗಿದ್ದರು.

ಒಳ್ಳೆಯ ಶೈಲಿಯ ಗುಟ್ಟೇನು ಎಂದರೆ — ಮೆಥ್ಯು ಆರ್ನಾಲ್ಡ್ ಒಮ್ಮೆ ವಿವರಿಸಿದರಂತೆ–ಹೇಳಲು ವಿಷಯವಿರುವುದು; ಹೇಳುವ ವಿಷಯವನ್ನು ಆದಷ್ಟು ತಿಳಿಯಾಗಿ ಹೇಳುವುದು– ಎಂಬುದು. ಒಂದು ವಿಷಯವನ್ನು ಪ್ರತಿಪಾದಿಸುವ ಕಾಲದಲ್ಲಿ ಅಂಥ ಶಕ್ತಿಯಿಂದ ವಿವರಿಸಬಲ್ಲವರು ಶ್ರೀ ಪಂಜೆಯವರು. ಅದಕ್ಕೆ ತಕ್ಕಕಂಠ ಅವರದು-ಸ್ಪಷ್ಟವಾದ,ಉಚ್ಚಾರಪೂರ್ಣವಾದ, ನಾದ ಪೂರ್ಣವಾದ ಧ್ವನಿ ಅವರದು; ಅವರ ಮಾತುಗಾರಿಕೆಗಿರುವ ಮೋಹಜಾಲವನ್ನು ಯಾರು ತಾನೆ ಮರೆತಾರು? ಒಮ್ಮೆ ಮಾತ್ರ ಅವರ ಉಪನ್ಯಾಸ ಕೇಳಿದ್ದೆನು. ಆದರೆ ಕನ್ನಡದ ಸಿರಿ, ಆ ಸಿರಿಯನ್ನು ಬಳಸುವ ಪಂಜೆಯವರ ವಾಕ್ಚಾತುರಿಗಳೆರಡನ್ನೂ ನಾನು ಮರೆಯಲಾರೆ. ಅವರ ಮಾತುಗಳೇ! ತಿಳಿವಿತ್ತು; ನಿರ್ದಿಷ್ಟತೆಯಿತ್ತು; ಶಕ್ತಿಯಿತ್ತು– ಸಾಲದುದಕ್ಕೆ ತುಂಬು ಹಾಸ್ಯ, ಉಪಮೆ, ಉದಾಹರಣೆಗಳಿಂದ ಅವು ಸದಾ ರಂಜಿತವಾಗಿರುತ್ತಿದ್ದವು. ಕನ್ನಡ ಕವಿಗಳ ಮಾತನ್ನು ಉದಹರಿಸುವುದರಲ್ಲಿ, ಕನ್ನಡ ನುಡಿಕಟ್ಟು ದೇಸಿಗಳ ಬೆಡಗಿನ ನಾದ ತರಂಗವನ್ನು ಧ್ವನಿಯನ್ನು ಪ್ರಯೋಗಿಸುವುದರಲ್ಲಿ-ನಿಸ್ಸೀಮರವರು; ಅಂಥ ಅವರ ನುಡಿಗಾರಿಕೆಯನ್ನು ಮರೆಯುವುದು ಸುಲಭವಲ್ಲ.

ಸಂಭಾಷಣೆಯ ಕಲೆಯಲ್ಲಿ ಅವರನ್ನು ಮೀರಿಸಿದವರು ಬಲು ವಿರಳ. ಒಳ್ಳೆಯ ಮಾತುಗಾರಿಕೆಗೆ ಬೇಕಾದ ಹಲವಾರು ಗುಣಗಳು ಅವರಲ್ಲಿ ಸುರಸವಾಗಿ ಸೇರಿದ್ದುದರಿಂದಲೇ, ಅವರ ಮಾತುಕತೆಗಳನ್ನಾಲಿಸಲು ಆನಂದವಾಗುತ್ತಿತ್ತು. ಮಾತನ್ನೆದುರಿಸಲು, ಕತೆ ಹೇಳಲು, ಟೀಕಾತ್ಮ ಹಾಸ್ಯ ಮಾಡಲು, ಚೇತನ ತುಂಬಿಸಲು, ಅನುತಾಪಗೊಳ್ಳಲು ಬಲ್ಲ ಅವರು ಜನತೆಯ ರೀತಿನೀತಿಗಳನ್ನು ಅರಿತವರಾಗಿದ್ದುದರಿಂದ ಮಾತು ಕಾಲಕ್ಕೆ ತಕ್ಕಂತೆ ನಿರರ್ಗಳವಾಗಿ ಅವರ ನಾಲಿಗೆಯಿಂದ ನುಡಿಯುತ್ತಿತ್ತು. ಅವರ ಮಾತನ್ನು ಕೇಳುವುದೆಂಬುದೇ ಒಂದು ವಿದ್ಯಾನುಭವವೆನಿಸುತ್ತಿತ್ತು. ಅವರ ಹಾಸ್ಯದೃಷ್ಟಿ ತುಂಬ ಮೊನಚಾದುದು; ಜೀವನದ ವಿಕಟ ಊನಗಳನ್ನು ಸುಲಭದಲ್ಲಿ ಗುರುತಿಸಬಲ್ಲ ಶಕ್ತಿ ಅವರದು; ಆದರೆ ಅವರ ಪರಿಹಾಸ್ಯ ಭಾವ–ನಗುವಿನ ನೊರೆಯನ್ನು ತೇಲಿಸುವಂಥ ಆಟವಾಗಿರದೆ, ಅನುಭವದ ಆಳದಿಂದ ಬುಗ್ಗೆಯೊಡೆದು ಹರಿದುಬರುವ ಪ್ರವಾಹದಂತಾಗಿತ್ತು. ಅವರನ್ನು ಕುರಿತು ಹಾಸ್ಯಮಾಡಿರಿ— ನಗಬಲ್ಲ ಎದೆಗಾರಿಕೆಯಿತ್ತು ಅವರಲ್ಲಿ. ಆಗಾಗ ಅವರ ನಾಲಿಗೆಯಿಂದ ಹೊಮ್ಮುತ್ತಿದ್ದ ಅಣಕ ಮಾತುಗಳಲ್ಲಿ ಒಂದು ಸೌಜನ್ಯವಿದ್ದುದರಿಂದ ಅದರ ನೋವೂ ಕ್ಷಮ್ಯವೆನಿಸುತ್ತಿತ್ತು.

ಈ ಕಿರಿಯ ಬರಹದಲ್ಲಿ ಶ್ರೀ ಪಂಜೆಯವರ ಸಾಹಿತ್ಯ ಶಕ್ತಿಯನ್ನಾಗಲಿ ಪಾಂಡಿತ್ಯವನ್ನಾಗಲಿ ತರ್ಕಿಸುವುದು ಹೊರತಾದ ಸಂಗತಿ. ಅವರ ಸಮಕಾಲೀನರಲ್ಲಿ—ನಾವು ಕಾಣದಂಥ ಎರಡು ಗುಣಗಳನ್ನು ಅವರಲ್ಲಿ ಕಾಣಬಲ್ಲೆವಾಗಿದ್ದುವು. ಅವೆಂದರೆ-ಸಾಹಿತ್ಯದ ತುಲನೆಯಲ್ಲಿ ಅವರಿಗಿದ್ದ ಸೂಕ್ಷ್ಮವಾದ ಭಕ್ತಿ; ಅದರಂತೆಯೆ ಉದಾರವಾದ ನೋಟ. ಅವರು ಸಾಮಾನ್ಯ ಕವಿಗಳಾಗಿರಲಿಲ್ಲ; ಕನ್ನಡ ಕವನ ರಾಜ್ಯದಲ್ಲಿ ಸರಳತೆಗೆ ಒಂದು ಹೊಸ ಹಾದಿ ಹಾಕಿಕೊಟ್ಟರು. ಅವರು ತಮ್ಮ ಬರವಣಿಗೆಗಳಿಂದಲೂ,ಸಾಹಿತ್ಯ ವಿಮರ್ಶೆಯಿಂದಲೂ, ಸಾಹಿತ್ಯವನ್ನು ಜನಜೀವನಕ್ಕೆ ಸಮೀಪವಾಗಿ ತರಲೆತ್ನಿಸಿದ ಸಾಹಸಿಗಳು. ಹಳೆಯದನ್ನು ಬಿಟ್ಟು, ಹೊಸ ಹಾದಿ ತುಳಿದವರು; ಸಂಪ್ರದಾಯ ನಿರ್ಬಂಧಗಳನ್ನು ಹರಿದು ಬಂದು-- ಸಾಹಿತ್ಯ ಇಂದಿನ ಬದುಕಿಗೆ, ಜೀವನಕ್ಕೆ ತಕ್ಕ ವಾಹಕವಾಗುವಂತೆ ಶ್ರಮಿಸಿದವರು ಅವರು.

ಆದರೆ ಮನುಷ್ಯನ ಕೃತಿಗಿಂತಲೂ ಅವನೇ ಮುಖ್ಯನಲ್ಲವೇ? ಆ ದೃಷ್ಟಿಯಿಂದ ಶ್ರೀ ಪಂಜೆಯವರು ಅವರ ಕೃತಿಗಳಿಗಿಂತಲೂ ಹಿರಿದಾದ ವ್ಯಕ್ತಿಯೆನ್ನಲೇಬೇಕು. ತಮ್ಮ ಅನೇಕ ಮಾನವೀ ಸಂಬಂಧಗಳಲ್ಲಿ ಜೀವನವನ್ನು ಒಂದು ಕಲೆಯಂತೆ ಮಾಡಿಕೊಂಡ ವ್ಯಕ್ತಿ ಅವರು. ಅವರ ಉತ್ಸಾಹ, ಆಶಾವಾದಿತ್ವಗಳು ಅನ್ಯರಿಗೆ ಸೋಂಕುವಂಥವು. ಒಂದಿಷ್ಟೂ ಅಹಂಭಾವ ಇಲ್ಲದೆಯೆ ಬಾಳಿದವರು. ಅದರಿಂದಲೇ ಇನ್ನೊಬ್ಬರಿಗೆ ಎಟುಕಲಾರದ ಜೀವನದ ಅರಿವು, ಅರ್ಥಗಳನ್ನು ಮಾಡಿಕೊಂಡರು. ಒಬ್ಬರನ್ನು ನೋಡಿದೊಡನೆಯೆ ತಿಳಿಯಬಲ್ಲ ಶಕ್ತಿ ಅವರಿಗಿತ್ತು; ಜತೆಗೆ ಅವರ ನ್ಯಾಯ ಪಕ್ಷಪಾತ ಬುದ್ಧಿ ಸೇರಿತ್ತು. ಅದರಿಂದಾಗಿ ಅವರು ಕೆಲವೊಮ್ಮೆ ಕಠಿಣರಾಗಿ, ಕ್ರೂರರಾಗಿ ಕಾಣಿಸಿದ್ದೂ ಉಂಟು. ಜಂಬ, ಹೆಮ್ಮೆಗಳನ್ನು ಅವರೆಂದೂ ಸಹಿಸಿದವರಲ್ಲ. ಜೀವನದಲ್ಲಿ ಯಶಸ್ಸು ಗಳಿಸಿದಂಥವರಲ್ಲಿ ನಾವು ಸಾಮಾನ್ಯವಾಗಿ–ನಾವು ಒಣ ಗಾಂಭೀರ್ಯ, ದುರಹಂಕಾರ, ಮೂಕ ಬಿಗುಪು ಕಾಣುತ್ತೇವೆ. ಪಂಜೆಯವರಲ್ಲಿ ಮಾತ್ರ ಇಂಥ ಒಂದು ದುರ್ಗುಣವೂ ಇರಲಿಲ್ಲ. ಉಳಿದವರ ಸಲುವಾಗಿ ಅವರಿಗೆಷ್ಟು ಸಹಾನು

ಭೂತಿಯಿತ್ತು! ಅವರ ನೆರವನ್ನು ಬೇಡಲು ಅಳುಕಿ ಅಳುಕಿ ಹೋದವರೊಡನೆ 'ಇಷ್ಟು ಪ್ರೇಮಮಯ ಜೀವಿಯೇ'— ಎಂದು ಬೆರಗನ್ನು ಹುಟ್ಟಿಸಿದ್ದುಂಟು. ನಮ್ಮ ಇಂದಿನ ಜೀವಮಾನದಲ್ಲಿ—ಒಳ್ಳೆಯ ಶೀಲ ಕಾಣಸಿಗುವುದು ಕಷ್ಟ; ಯಶಸ್ಸಿನ ದಾರಿಯಲ್ಲಿ ಸುಲಭ ನೀತಿ ಹುಡುಕುವವರೇ ಅಧಿಕ. ಆದರೆ ಅಂಥ ಜನಸಮುದಾಯದಿಂದ ಎದ್ದು ಕಾಣಿಸುವ ಗಾತ್ರವು ಶ್ರೀ ಪಂಜೆ ಮಂಗೇಶರಾಯರದ್ದಿತ್ತು.

ಈ ಲೇಖನ ಬರೆಯುವ ಗಳಿಗೆಯಲ್ಲಿ—ನಾನಂದು ಅವರನ್ನು ವಿದಾಯಗೊಂಡ ಸುಂದರ ಸಂಜೆಯು ನೆನಪಾಗುತ್ತದೆ. ಅವರು ದಿನವೆಲ್ಲ ದುಡಿದು, ದಣಿದ ಶರೀರಿಗಳಾಗಿ ಜಗುಲಿಯಲ್ಲಿ ನಿಂತು ನೋಡುತ್ತಿದ್ದರು. ನಾನು ಬಂಡಿಯಲ್ಲಿ ಕುಳಿತು ರೈಲ್ವೆ ನಿಲ್ದಾಣಕ್ಕೆ ಹೊರಟಿದ್ದೆ. ಸಂಜೆಯ ಎಳೆ ಬಿಸಿಲು ಅವರ ಶರೀರವನ್ನು ಬೆಳಗಿಸಿತ್ತು. ಆ ಬೆಳಕಿನಲ್ಲಿ ಅವರ ನಿಡುಗಾಯ ಇನ್ನೊಂದು ಲೋಕದ ತೇಜಸ್ಸಿನಂತೆ ನನಗೆ ಕಾಣಿಸಿತು.

---

# ಕೆಲವು ನೆನಪುಗಳು

**(ಲೇಖಕ: ಶಿವರಾಮ ಕಾರಂತ)**

ಕೆಲವೇ ದಿನಗಳ ಅಸ್ವಸ್ಥದಿಂದ ಶ್ರೀ ಪಂಜೆಯವರು ನಮಗೆ ದೂರವಾದ ಹೈದರಾಬಾದಿನಲ್ಲಿ ಮೃತ್ಯುವಶರಾದರು, ಎಂದು ಕೇಳಿದಾಗ ಆ ಸುದ್ದಿಯನ್ನು ನಿಜವೆಂದು ನಂಬುವುದೇ ಕಷ್ಟವಾಯಿತು. ಸರಿ--ಸುದ್ದಿ ನಿಜವಾದುದೇ ಎಂದು ತಿಳಿದ ಬಳಿಕ ಮೊದಲ ಸೋಜಿಗ, ಆಶ್ಚರ್ಯಗಳು ನೋವಿಗೆ ಎಡೆ ಮಾಡಿಕೊಟ್ಟುವು. ದಕ್ಷಿಣ ಕನ್ನಡದವರಾದ ನಮ್ಮಲ್ಲಿ ಹಲ ವರಿಗೆ ಪಂಜೆಯವರು–ಬರಿಯ ವ್ಯಕ್ತಿಗಳು ಮಾತ್ರವಾಗಿರದೆ ಒಂದು ಸಂಸ್ಥೆಯೇ ಆಗಿದ್ದರು. ವ್ಯಕ್ತಿಗಷ್ಟೆ ಸಾವಿನ ಮಿತಿ; ಸಂಸ್ಥೆ ಅದನ್ನು ಮೀರಿ ಉಳಿಯಬಲ್ಲ ಶಕ್ತಿಯು. ಕನ್ನಡದ ಸಾಹಿತ್ಯ ಕ್ಷೇತ್ರದಲ್ಲಿ ದುಡಿಯುತ್ತಿರುವ ನನ್ನಂಥ ಹಲವಾರು ಜನಗಳಿಗೆ ಪಂಜೆಯವರ ಹೆಸರು–ಓ ಮಂತ್ರವಿದ್ದಂತೆ!

ಅವರ ಹಿರಿಮೆಯೆಂಬುದು ವ್ಯಕ್ತಿಯಾಗಿಯೂ ನಿಲ್ಲ ಬಲ್ಲುದು; ಸಾಹಿತಿಯಾಗಿಯೂ ನಿಲ್ಲಬಲ್ಲುದು. ಸಾಹಿತಿಗಳ ಪಾಲಿಗೆ, ಸಾಹಿತ್ಯಪ್ರಿಯರ ಪಾಲಿಗೆ ಅವರಲ್ಲಿ ಅಪೂರ್ವ ಗುಣ, ಆಕರ್ಷಣ ಶಕ್ತಿ ಇದ್ದಂತಿತ್ತು. ಅವರ ಮಗುವಿನ ಮನಸ್ಸು; ತುಂಬು ನಗೆ, ನಯವಿನಯ—ಎಲ್ಲ ಬಗೆಯ ಜನ ಗಳನ್ನು ಸಮೀಪಕ್ಕೆ ತರಿಸಿಕೊಳ್ಳುವ ಚುಂಬಕ ಶಕ್ತಿಯಾ ಗಿತ್ತು. ಕಲಾಸೃಷ್ಟಿ ಮಾಡಬಲ್ಲ ಅವರು—ಇತರ ಕಲಾವಿದ ರನ್ನು ಕಾಲ, ದೇಶ, ವಯಸ್ಸಿನ ಅಂತರವನ್ನು ಮೀರಿಯೂ ತಿಳಿದು ಮೆಚ್ಚಬಲ್ಲವರಾಗಿದ್ದರು. ಅವರ ಕಾಲದಲ್ಲಿಯೇ, ಕಣ್ಮುಂದೆಯೇ--ಅವರ ಮಿತ್ರರನೇಕರು ಹಳೆ-ಹೊಸತುಗಳ ವಿಚಾರದಲ್ಲಿ ಜಗಳಾಡುತ್ತಿದ್ದ ದಿನವದು. ಸಂಸ್ಕೃತಿಯ ಪುನ ರುಜ್ಜೀವನದ ಕಾಲದಲ್ಲಿ ಅಂತಹ ಕೋಲಾಹಲ ತೀರ ಸ್ವಾಭಾ ವಿಕವೆನ್ನಬೇಕು. ಶ್ರೀ ಪಂಜೆಯವರು ಈ ವ್ಯರ್ಥ ಕಾದಾಟ ವನ್ನು ಕಂಡು ನಗುತ್ತಿದ್ದವರಲ್ಲೊಬ್ಬರು. ಅವರಿಗೆ ಹಳೆತು ಹೊಸತುಗಳೆರಡರಲ್ಲಿಯೂ ಪ್ರೀತಿಯೇ–ಸತ್ಯ, ಸೌಂದರ್ಯ ವಿರುವಲ್ಲಿ ಎರಡನ್ನೂ ಅವರು ಮೆಚ್ಚುವವರೇ.

ಸಾಹಿತ್ಯದಲ್ಲಿ, ಕಾವ್ಯದಲ್ಲಿ ಅವರ ನೋಟ ವಿಚಿತ್ರವಾ ದದ್ದು; ವಿಶೇಷವಾದದ್ದು. ಹೊರಗಿನ ಕಟ್ಟು, ಕಟ್ಟಲೆಗಳ ಬೇಡ ಗನ್ನು ದಾಟಿ ಒಳಗೆ ಹುದುಗಿದ ಚೆಲುವು, ಕಂಪು, ಸತ್ಯವೇ ನೆಂದು ಅರಸಿ, ತಿಳಿದು, ಮೆಚ್ಚುವಂಥ ಅಪೂರ್ವ ದೃಷ್ಟಿ ಅವ ರದು. ಅವರ ಕಿವಿಗೆ ಸಂಗೀತ ಸದಾ ಮೋಹಕ ವಸ್ತು; ಒಂಟಿ ಯಾಗಿರುವಾಗೆಲ್ಲ–ಜೈಮಿನಿಯಿಂದಲೋ ಗದುಗಿನ ಭಾರತ ದಿಂದಲೋ, ತುಳುಪಾಡ್ದನದಿಂದಲೋ ಏನಾದರೊಂದು ಸಾಲೆತ್ತಿಕೊಂಡು-ರಾಗವಾಗಿ ಹಾಡುತ್ತ, ಅದರ ನಾದ ಲಹರಿ, ತರಂಗಿತತೆಗಳಲ್ಲಿ ಹುದುಗಿದ ಸವಿಯನ್ನು ಆಸ್ವಾದಿಸುತ್ತ ಆಚೀಚೆ ಹೆಜ್ಜೆ ಹಾಕುತ್ತಿರುವುದು ಅವರದ್ದೊಂದು ಅಭ್ಯಾಸ. ಬರಿಯ ಶಬ್ದಾಡಂಬರ ಅವರಿಗೆ ಅಮುಖ್ಯ. ಸಾಹಿತ್ಯಕೃತಿ ಯಲ್ಲಿ "ನಾದ, ಧ್ವನಿ"ಗೆ ತುಂಬ ಪ್ರಾಧಾನ್ಯವಿದೆಯೆಂದು ಅರಿತವರವರು. ತಮ್ಮ ಬಳಿಗೆ ಹೊಸಬನಾವನಾದರೂ ಬಂ ದರೆ, ಸಾಹಿತ್ಯ ಪಿಪಾಸೆ ತೋರಿಸಿದರೆ-ಅಕ್ಕರೆಯಿಂದ, ವಿನಯ ದಿಂದ—ಕವನದ ಒಳ್ಳೆಯ ಮಾದರಿಗಳನ್ನು ಅವನೆದುರಿಗೆ ಹಾಡಿ ತೋರಿಸುತ್ತಿದ್ದರು. ಹಾಗೆ ತಮ್ಮ ಮೆಚ್ಚಿಗೆಯನ್ನು ವ್ಯಕ್ತ ಪಡಿಸುತ್ತಿದ್ದ ಬಗೆಯಲ್ಲೇ, ಅಷ್ಟೇ ಗಟ್ಟಿಯಾಗಿ, ಸ್ಪಷ್ಟವಾಗಿ –ಹಳೆಯ ಕವಿಗಳೆಷ್ಟೊ ಮಂದಿಯ ಶುಷ್ಕವಾದ, ಚಮತ್ಕಾ ರಿಕವಾದರೂ ರಸಶೂನ್ಯವಾಗಿರುವ ಕವನಗಳನ್ನೂ ಕುರಿತು "ಇದಲ್ಲ —ಸಮನಲ್ಲ"ವೆಂದು ತಲೆಯಲ್ಲಾಡಿಸಿ ಖಂಡಿಸು ತ್ತಿದ್ದರು. ಅವರ ಮೆಚ್ಚುಗೆ ಖಂಡನೆಗಳೆರಡೂ ತೆರೆಬಾಯಿ ಯವು. ಕಾವ್ಯದಲ್ಲಿ–ಎಲ್ಲಿ ಚೆಲುವಿದೆ; ಎಲ್ಲಿ ಜಂಬವಿದೆ– ಎಂದು ಕಂಡೊಡನೆ ತೋರಿಸಬಲ್ಲ ಕಣ್ಣು ಅವರದು.

ನಮ್ಮ ಕನ್ನಡ ವಾಙ್ಮಯ ಪುನರುಜ್ಜೀವನ ಕ್ಷೇತ್ರದಲ್ಲಿ ಅವರು ಮಾರ್ಗದರ್ಶಕರೂ, ಉತ್ಸಾಹಿಗಳೂ, ಪ್ರಮುಖರೂ ಆಗಿ ದುಡಿದವರಲ್ಲಿ ಒಬ್ಬರು. ಅದರ ವಿವಿಧ ಕ್ಷೇತ್ರಗಳಲ್ಲಿ ಅವರು ಸಲ್ಲಿಸಿದ ಕಾಣಿಕೆಯೂ ಅಲ್ಪವಾಗಿಲ್ಲ. ಹೊಸದಾರಿ, ಹೊಸರಚನೆ, ಹೊಸದೃಷ್ಟಿಗಳೆಲ್ಲದರಲ್ಲೂ ಅವರಿಗೆ ಮಮತೆ ಯಿತ್ತು. ಯಾವನಾದರೊಬ್ಬ ಕಿರಿಯನಲ್ಲಿ ಒಂದಿಷ್ಟು ಭರ ವಸೆ,ಪ್ರತಿಭೆ,ಸ್ಫೂರ್ತಿಗಳನ್ನು ಕಂಡುದಾದರೆ–ತಮ್ಮ ಹಿರಿತನ ಪ್ರತಿಷ್ಠೆಗಳನ್ನು ಮೂಲೆಗೊತ್ತಿ, ಅವನ ಬಳಿಗೆ ಬಂದು, ಅವ ನನ್ನು ಪ್ರೋತ್ಸಾಹಿಸಿ, ಸ್ನೇಹದಿಂದ ಅವನ ಬೆಳವಣಿಗೆಗೆ ತಮ್ಮಿಂದಾದ ಸಹಾಯ ಮಾಡುತ್ತಿದ್ದರು.

ಶ್ರೀ ಪಂಜೆಯವರ ಸಾಹಿತ್ಯವೆಂಬುದು ಜೀವನದ ಒಂದು ಅಂಗವಾಗಿತ್ತು; ಜೀವನವೇ ಆಗಿತ್ತೆಂದರೂ ತಪ್ಪಲ್ಲ. ಜೀವನದ ನಾನಾ ಮುಖಗಳನ್ನು ಕಂಡುಂಡವರಾದುದರಿಂ ದಲೇ ಅವರಿಗೆ ಅಂತಹ ನೋಟ ಪ್ರಾಪಿಸಿರಬೇಕು. ಅವರು ಶಾಲಾ ಇನ್ಸ್‌ಪೆಕ್ಟರರಾಗಿದ್ದ ಕಾಲದಲ್ಲಿ ಎರಡೆರಡು ಕೆಲಸ ಗಳನ್ನು ಜತೆಗೆ ಮಾಡಿಕೊಂಡು ಹೋಗುತ್ತಿದ್ದಂತೆ ಕಾಣುತ್ತದೆ. ತಮ್ಮ ನೌಕರಿಯ ಕರ್ತವ್ಯಗಳ ಜತೆಯಲ್ಲಿ-ಹಳ್ಳಿಗಳಲ್ಲಿ ರೂಢಿ ಯಾಗಿದ್ದ ವಿವಿಧ ಜನಪದ ಸಾಹಿತ್ಯವನ್ನು ಸಂಗ್ರಹಿಸುತ್ತಿದ್ದ ರಲ್ಲದೆ, ಅವುಗಳನ್ನು ಪ್ರೇರಿಸಿದ ಹಳ್ಳಿಗರ ಸರಳ ಜೀವನ ವನ್ನು ತಿಳಿಯಲು ಪ್ರಯತ್ನಿಸುತ್ತಿದ್ದರು. ಅದು ತುಳುವಿರಲಿ,

ಕೊಂಕಣಿಯಿರಲಿ, ಕನ್ನಡವಿರಲಿ — ಎಲ್ಲಾದರೊಂದು ಚೆಲುವಿನ ಗಾದೆ, ದೇಸಿ, ಗೀತ, ಕತೆ ಕಿವಿಗೆ ಬಿತ್ತೆಂದರೆ ಅವರ ಮನಸ್ಸೆಲ್ಲ ಧುಮುಕಿತೇ — ಅದರ ಸೆರಗನ್ನು ಹಿಡಿದು, ಸಂಶೋಧಕನಂತೆ, ಬೇಟೆಗಾರನಂತೆ, ಪ್ರಣಯಿಯಂತೆ-ಆ ಚೆಲುವಿನ ವಸ್ತು ಎಲ್ಲಿ ಹುಟ್ಟಿತು, ಹೇಗೆ ಉಂಟಾಯಿತು, ಹೇಗೆ ಈ ರೂಪ ತಾಳಿತು-ಎಂದು ಅದರ ಹಿನ್ನೆಲೆಯನ್ನು ಅರಸಿ ಹೋದರೇ ಹೋದರು. ಹಲವು ಬಾರಿ, ನಾನು ಅವರಿಗೆ ನನ್ನ ಕೆಲವು ನಾಟಕಗಳನ್ನು ಓದಿ ಹೇಳಿದ್ದುಂಟು. ಹೆಚ್ಚಾಗಿ ಅವು ಗ್ರಾಮ ಜೀವನಕ್ಕೆ ಸಂಬಂಧಿಸಿದ ನಾಟಕಗಳು. ಜನತೆಯಾಡುತ್ತಿರುವ ಮಾತಿನ ಶೈಲಿಯೇ ಅದರದು. ಹಾಗೆ ಓದುವಾಗ ಎಲ್ಲಾದರೊಂದು ಶಬ್ದ ಅವರ ಮನಕ್ಕೆ ಬಂತೆಂದರೆ ತಟ್ಟನೆ ನನ್ನನ್ನು ನಿಲ್ಲಿಸಿ "ಹೌದಯ್ಯ, ಅದೆಲ್ಲಿ ಸಿಕ್ಕಿತು ನಿಮಗೆ! ನಾನು ಆ ಮಾತನ್ನು ಮೊದಲಿಗೆ ಬಾರಕೂರಲ್ಲಿ ಕೇಳಿದೆ-30 ವರ್ಷಗಳ ಹಿಂದೆ. ಅದು ತುಂಬ ಚೆನ್ನಾಗಿದೆಯಲ್ಲ" ಎಂದು ಉದ್ಗರಿಸುತ್ತಿದ್ದರು. ಹಾಗೆ ಮಾತು ಮುರಿದು — ಜಾನಪದ ಸಾಹಿತ್ಯವನ್ನು ಕುರಿತಾದ ರಸದೌತಣಕ್ಕೇನೆ ಪ್ರಾರಂಭವಾಗುತ್ತಿತ್ತು ಒಮ್ಮೊಮ್ಮೆ.

ಶಿಕ್ಷಣಕ್ಷೇತ್ರದಲ್ಲಿ ಶ್ರೀ ಪಂಜೆಯವರ ದುಡಿಮೆ, ಹಿರಿಮೆಗಳೆರಡೂ ಹೆಚ್ಚಿನವು. ಅವರಿಗೆ ಚಿಕ್ಕಮಕ್ಕಳಲ್ಲಿದ್ದ ಪ್ರೇಮವೂ, ಪ್ರಾಥಮಿಕ ಶಾಲಾ ಉಪಾಧ್ಯಾಯರಲ್ಲಿದ್ದ ಮಮತೆಯೂ ಅಪಾರ. ಉಪಾಧ್ಯಾಯರನ್ನು ಅವರು ಅಧಿಕಾರದಲ್ಲಿದ್ದಾಗಲೂ ಸೋದರ ಭಾವದಿಂದ ಕಂಡವರು. ಕಲಿಸುವುದೆಂದರೆ ಅವರಿಗೆ ಜೀವ; ವಿದ್ಯಾರ್ಥಿಯು ತಾನಾದರೆ ಹೇಗೆಂದು ತಿಳಿಯಬಲ್ಲ ಗುರು ಅವರು. ಮಗುವೆಂಬ ವಸ್ತು ಗೌರವ ಸಲ್ಲಿಸಬೇಕಾದ ಜೀವ-ಎಂದೇ ತಿಳಿದಿದ್ದರು. ಒಮ್ಮೆ ಶಾಲೆಯ ಶಿಕ್ಷಣದ ಪಠ್ಯಕ್ರಮವನ್ನು ಬರೆದುಕೊಡಲು ಕೆಲವು ಮಿತ್ರರು ಅವರನ್ನು ಸಮೀಪಿಸಿದರು. ಆ ವಿಚಾರದಲ್ಲಿ ಅವರು ನನ್ನೊಡನೆ ನುಡಿದ ಮಾತುಗಳನ್ನು ಹೇಳುತ್ತಿದ್ದೇನೆ "ಕಾರಂತರೇ, ಆ ಕೆಲಸವನ್ನು ನಾನು ಮಾಡಬೇಕಂತೆ. ಆದರೆ ಅದಕ್ಕೆಷ್ಟೆಲ್ಲ ವಿಚಾರಮಾಡಬೇಡ? ಸಮಯ ಬೇಡ? ಅಷ್ಟನ್ನು ನಾನು ಕೊಡಬಲ್ಲೆನಾದರೂ ೫ನೇ ತರಗತಿಯ ತನಕ, ಕೆಲವೊಂದು ವಿಷಯಗಳನ್ನು ಕುರಿತು ಮಾತ್ರ ಏನಾದರೂ ಮಾಡಬಲ್ಲೆ. ಅದಕ್ಕೂ ದಾಟಿ ಮೇಲಿನ ತರಗತಿಗಳ ಪಠ್ಯಕ್ರಮ ಬರೆಯಿರಿ ಎಂದರೆ — ನನ್ನಿಂದಾಗದೇ ಆಗದು; ಅದನ್ನು ಕುರಿತು ನಾನು ಈ ತನಕ ವಿಚಾರವನ್ನೇ ಮಾಡಿಲ್ಲ, ಈಗ ಮಾಡುವುದೆಲ್ಲಿಂದ ಬಂತು?" ಎಂದರು. ಪ್ರಾಮಾಣಿಕನಾದ ವ್ಯಕ್ತಿಗೆ ತನ್ನ ಮಿತಿ, ತನ್ನ ಕರ್ತವ್ಯದ ಭಾರ ಎರಡೂ ತಿಳಿದಿದ್ದಾಗ ಬರುವಂಥ ಪ್ರತ್ಯುತ್ತರದ ರೀತಿ ಇದು.

೧೯೩೭ರಲ್ಲಿ ನಾವೆಲ್ಲ ಮಂಗಳೂರಿನಲ್ಲಿ ಒಂದು ಶಿಕ್ಷಣ ಸಪ್ತಾಹವನ್ನು ನಡೆಯಿಸುವ ಯೋಜನೆಯನ್ನು ಕೈಕೊಂಡೆವು. ನನ್ನನ್ನು ಎಳೆದುತಂದವರು ಅವರು. ಆಗ ನಾನೆಂದೆ "ತುಂಬ ಹಣದ ಖರ್ಚಿನ ಬಾಬಿದು, ದುಡ್ಡೆಲ್ಲಿಂದ ಬರಬೇಕು?" ಎಂದು. ಅವರಾಗ "ಕಾರಂತರೇ — ನೀವು ಕೆಲಸ ಮುಂದುವರಿಸಿ" ಎಂದಿಷ್ಟೇ ನುಡಿದರು. ಆ ಕೆಲಸವನ್ನು ಶ್ರೀಮಾನ್ ಮೊಳಹಳ್ಳಿ ಶಿವರಾಯರ ಸಹಕಾರದಿಂದ ನಾನು ವಹಿಸಿಕೊಂಡೆ. ಒಂದು ವಾರದ ವಿಸ್ತಾರ ಕಾರ್ಯಕ್ರಮದ ಏರ್ಪಾಟಾಯಿತು-ಉಪನ್ಯಾಸಗಳು, ದೇಖಾವೆಗಳು, ವಿನೋದಗಳು ಎಲ್ಲವನ್ನೂ ಕೂಡಿದ ಒಂದು ಉತ್ಸವವೇ ಜರುಗಿತು. ಜನರು ತುಂಬಿದರು. ಆದರೆ ನಾವೆಣಿಸಿದಂತೆ ಧನಸಹಾಯ ಯಾವ ಮೂಲೆಯಿಂದಲೂ ಬರಲಿಲ್ಲ. ಶ್ರೀ ಪಂಜೆಯವರು ಶ್ರೀಮಂತರ ಮನೆಯ ಎದುರುನಿಂತು ಸೆರಗೊಡ್ಡಿ ಬೇಡುವವರಲ್ಲ. "ಜನತಾವಾಗಿ ಇಂಥ ಕೆಲಸಗಳಿಗೆ ಮುಂದೆ ಬಂದು ಸಹಾಯ ಮಾಡಬೇಕು. ಇದು ಹತ್ತು ಜನರ ಕೆಲಸವಲ್ಲವೇ? ಬದಲು ವಂತಿಗೆಪಟ್ಟಿ ಹೊರಡಿಸಿದರೆ, ಅದರ ಹಿಂದೆಯೆ ಆಮಂತ್ರಣ, ದುಡ್ಡಿನ ಅಂತರಕ್ಕೆ ಸಮನಾದ ಸ್ಥಾನಮಾನಗಳ ಸ್ವಾಗತದ ನಾಟಕ ನಡೆಯಬೇಕಾಗುತ್ತದೆ ಎಂದರು. ವಿದ್ಯಾಭಿಮಾನಿಗಳೆನಿಸಿಕೊಂಡ ಕೆಲವು ಮಂಗಳೂರಿನ ಮಹಾನುಭಾವರಿಂದ ತನ್ನಂತೆ ಸಹಾಯ ಬಂದೀತೆಂದು ಅವರು ನಿರೀಕ್ಷಿಸಿದ್ದರು. ಸಪ್ತಾಹವೇನೋ ಮುಗಿಯಿತು. ಲೆಕ್ಕ ಪತ್ರ ಮಾಡಲಾಗಿ — ನಾನು ಮೂಲದಲ್ಲಿ ಸೂಚಿಸಿದಂತೆಯೇ ೫೦೦ ರೂಪಾಯಿಗಳ ಖೋತಾ-ಬಿದ್ದೇಬಿತ್ತು. ಪಂಜೆಯವರಿಗೆ ಆ ವಿಚಾರ ತಿಳಿಸಿದಾಗ ನಸುನಕ್ಕರು; "ಅಷ್ಟು ಸ್ವಲ್ಪವೇ" ಎಂಬಂತೆ ಅವರ ತುಟಿಗಳು ಬಿರಿದುವು. ಆ ಕ್ಷಣವೇ ರೂ ೫೦೦ರ ಒಂದು ಚೆಕ್ಕು ಬರೆದುಕೊಟ್ಟರು. ಬರೆಯುತ್ತಾ ಹೀಗೂ ನುಡಿದರು "ಕಾರಂತರೇ, ನಾನು ಡಿಪ್ಯುಟಿ ಇನಸ್ಪೆಕ್ಟರನಾಗಿದ್ದಾಗ ಈ ಹಳ್ಳಿಯ ಶಾಲಾಮಾಸ್ತರರು ನನ್ನ ಸಲುವಾಗಿ ಎಷ್ಟೆಲ್ಲ ಮಾಡಿಲ್ಲ. ನಾನು ಈಗ ಕೊಡುತ್ತಿರುವುದು ತೀರ ಅಲ್ಪ. ಅವರು ನನಗೆ ತೋರಿದ ಮಮತೆಗೆ ಸಮನಾದ ಋಣವನ್ನು ನಾನೆಂದಾದರೂ ಸಲ್ಲಿಸಬಲ್ಲೆನೇ?" ಎಂದು.

ಅವರ ಮನೋವೃತ್ತಿಯೇ ಸುಮಧುರವಾದುದು. ಬದುಕಿನ ಹೇಯನೋಟಗಳನ್ನೆಂದೂ ಸಹಿಸಲಾರದುದು. ಅಂಥವು ಅವರನ್ನು ತುಂಬ ನೋಯಿಸುತ್ತಿದ್ದುವು. ಸಾಧ್ಯವಾದರೆ ಅವುಗಳಿಂದ ದೂರವಾಗಿರುತ್ತಿದ್ದರು. ನಾನೊಮ್ಮೆ ಉತ್ತರ ಹಿಂದುಸ್ಥಾನದ ಪ್ರವಾಸಮಾಡಿದ್ದೆ. ಆ ವಿಚಾರವನ್ನು ತಿಳಿಸಲು ಅವರ ಮನೆಗೆ ಹೋಗಿದ್ದೆ. ನಾನು ಸಂದರ್ಶಿಸಿದ ಊರುಗಳಲ್ಲಿ ತಾತಾನಗರ ಒಂದು. ಅಲ್ಲಿ ಶ್ರೀ ಪಂಜೆಯವರ ಹಿರಿಯ ಮಗ ಮುಕುಂದ ರಾಯರು ಕೆಲಸದಲ್ಲಿದ್ದರು. ನಾನು ಅಲ್ಲಿನ ಉಕ್ಕಿನ ಕಾರ್ಖಾನೆಯ ಬೆಡಗನ್ನೆಲ್ಲಾ ಬಣ್ಣಿಸಿ

ಯಾದ ಮೇಲೆ ಕೇಳಿದೆ, "ನೀವೂ ತಾತಾನಗರಕ್ಕೆ ಹೋದವರು, ನಿಮಗೆ ಅಂಥ ದೊಡ್ಡ ಕಾರ್ಖಾನೆಗಳನ್ನು ಕಂಡು ಹೇಗೆನಿಸಿತು". ಅವರು ನಕ್ಕು ನುಡಿದರು "ನಾನು ಅವನ್ನು ನೋಡಲೇ ಇಲ್ಲ. ಅಂಥದೆಲ್ಲ ನನ್ನಿಂದ ನೋಡಲಿಕ್ಕೆ ಆಗದು" ಎಂದರು. ಅವರ ಚಿತ್ತವೃತ್ತಿ ಅಷ್ಟೊಂದು ಸೂಕ್ಷ್ಮ; ಅವರು ಕೇವಲ ಭಾವಜೀವಿ. ಆ ಉಕ್ಕಿನ ಕಾರ್ಖಾನೆಯ ಕಬ್ಬಿಣದ ಗಾಣಗಳನ್ನು, ಬೆಸ್ಸಿಮಾರ್ ಕುಲುಮೆಗಳನ್ನು ಕಂಡು ಸಹಿಸಲು ಅವರಿಂದಾಗದೇ ಆಗದು.

ಅವರು ಬದುಕಿದ್ದಷ್ಟು ಕಾಲ ಅವರ ಮಂಗಳೂರಿನ ಮನೆ ಎಲ್ಲ ಕನ್ನಡ ಪ್ರಿಯರಿಗೂ ಒಂದು ಯಾತ್ರಾ ಸ್ಥಳವಾಗಿತ್ತು. ಇಂದು ಅವರು ಮಾಯವಾಗಿದ್ದಾರಾದರೂ, ಅವರ ನೆನಪು ಅವರಿಗೆಲ್ಲ ಒಂದು ಕೈದೀವಿಗೆಯಾಗಿ ಉಳಿದಿದೆ.

(ಕೆನರಾ ಬ್ರದರ್‌ಹುಡ್ ಜರ್ನಲ್
ಜನವರಿ–1938)

---

# ಪಂಜೆಯವರ ನೆನವರಿಕೆಗಳು

(ಆರ್. ಹರಿ ಶೆಣೈ. ಬಿ ಎ., ಎಲ್. ಟಿ., ಉಜಿರೆ.)

ಪಂಜೆಯವರ ನನ್ನ ನೆನವರಿಕೆಗಳನ್ನು ಬರೆದು ಕಳುಹಿಸಬೇಕೆಂದು ನನ್ನ ಮಿತ್ರರಾದ ಶ್ರೀ ಕೋ. ಶಿ. ಕಾರಂತರು ನನಗೆ ಪತ್ರ ಬರೆದರು. ಅಂದಾಜು 30 ವರ್ಷಗಳ ಹಿಂದೆ ಪಂಜೆಯವರ ಒಡನಾಟದಲ್ಲಿ ನಾನು ಅನುಭವಿಸಿದ ಏಳೆಂಟು ವರುಷಗಳ ಸವಿ ನೆನಪನ್ನು ನನ್ನ ಮನಸ್ಸಿಗೆ ತಂದುಕೊಳ್ಳುವರೆ ಇದೇ ಸುಸಂದರ್ಭವೆಂದು ಮನವರಿಕೆಯಾಗಿ ಅವರ ಈ ಅಪೇಕ್ಷೆಯನ್ನು ನೆರವೇರಿಸುವುದಕ್ಕೆ ಕೃತಜ್ಞತಾಪೂರ್ವಕವಾಗಿ ಒಪ್ಪಿಕೊಂಡಿದ್ದೇನೆ. ಇದು ನನಗೆ ಕಷ್ಟತರವಾದ ಪ್ರಸಂಗವೆಂದು ನಾನು ಚೆನ್ನಾಗಿ ಬಲ್ಲೆ. ಆ ಕಾಲದ ಟಿಪ್ಪಣಿಗಳನ್ನಾಗಲೀ ದಿನಚರಿಯನ್ನಾಗಲೀ ನಾನು ಬರೆದು ಇಡಲಿಲ್ಲವಾದ ಕಾರಣ ನನ್ನ ಮನಸ್ಸನ್ನು ಅಷ್ಟು ಹಿಂದಕ್ಕೆ ಚಾಚುವುದು ನನಗೆ ಪ್ರಯಾಸದ ಸಾಹಸವಾಗಿದೆ. ಆದರೂ ನನ್ನ ಈ ಚಿಕ್ಕ ಕಾಣಿಕೆಯನ್ನು ವಿದ್ವಾಂಸರಾದ ಪಂಜೆಯವರ ಸ್ಮರಣಾರ್ಥವಾಗಿ ಅರ್ಪಿಸುತ್ತೇನೆ. ಓದುಗ ಮಹಾಶಯರು ಈ ಲೇಖನದ ದೋಷಗಳನ್ನೂ ಲೋಪಗಳನ್ನೂ ಕ್ಷಮಿಸಿ ಪಂಜೆಯವರ ಜೀವನದಲ್ಲಿ ಸಂಭವಿಸಿದ ಕೆಲವು ಘಟನೆಗಳ ಕಡೆಗೆ ಮತ್ತು ಕನ್ನಡ ಮಾತೆಯ ಸಲುವಾಗಿ ಅವರು ಸಲ್ಲಿಸಿದ ಸೇವೆಯ ಕಡೆಗೆ ಗಮನ ಕೊಡಬೇಕಾಗಿ ಅವರನ್ನು ವಿನಂತಿಸಿಕೊಳ್ಳುತ್ತೇನೆ.

ಅವರ ಮೊದಲ ಪರಿಚಯವು ನನಗಾದುದು, ನನ್ನ ಸ್ನೇಹಿತರೊಬ್ಬರ ಮೂಲಕ ಮಡಿಕೇರಿಯಲ್ಲಿ, ಗಣಪತಿ ಬೀದಿಯಲ್ಲಿ; ಅವರು ಆಗ ತಾನೆ ಮಂಗಳೂರಿನಿಂದ ಬಂದು ತಂಗಿದ ಮನೆಯಲ್ಲಿ, ಅಂದಾಜು 1920ನೆಯ ಇಸವಿಯಲ್ಲಿ. ಸರಿಸುಮಾರು 5ಅಡಿ 7-8ಇ. ಎತ್ತರವಿದ್ದ ಈ ಶ್ರೇಷ್ಠವ್ಯಕ್ತಿಯು ನೋಟಕ್ಕೆ ತೆಳ್ಳಗೆ, ಅವರ ಮೈಬಣ್ಣ ಬೆಳ್ಳಗೆ, ಮುಖ ನಸುಕೆಂಪು ಮತ್ತು ಅಗಲವಾದ ಹಣೆ, ತಲೆಯು ನಿಕೇಶ. ಅವರ ಮೀಸೆಯೂ ಹುಬ್ಬುಗಳೂ ದಟ್ಟವಾಗಿದ್ದುವು. ನಾನು ಅವರನ್ನು ಮೊದಲ ಬಾರಿಗೆ ಕಂಡಾಗ ಅವರ ಮೀಸೆಯ ಒಂದೊಂದು ಎಳೆಯು ಬೂದು ಬಣ್ಣಕ್ಕೆ ತಿರುಗುವಂತಿತ್ತು.

ಕೊಡಗಿನ ಶಾಲಾ ಎಸಿಸ್ಟಾಂಟ ಇನ್ಸ್ಪೆಕ್ಟರರಾಗಿ ಅವರು ಆಗ ಮಂಗಳೂರಿನಿಂದ ವರ್ಗಾಯಿಸಲ್ಪಟ್ಟಿದ್ದರು. ಆ ಕಾಲದಲ್ಲಿ ಕೊಡಗಿನ ಶಾಲಾ ಇನ್ಸ್ಪೆಕ್ಟರರು ಮೆ. ಜೆ. ಎ. ಏಟ್ಸ ದೊರೆ. ಅವರು ಬೆಂಗಳೂರು ದಂಡಿನಲ್ಲಿ ವಾಸವಿರುತ್ತಿದ್ದರು. ದ. ಕ. ಜಿಲ್ಲೆಗೂ ಕೊಡಗಿಗೂ, ಬೆಂಗಳೂರು ದಂಡಿಗೂ ಇನ್ಸ್ಪೆಕ್ಟರರು ಅವರೇ ಆಗಿದ್ದ ಕಾರಣ ಅವರಿಗೂ ಪಂಜೆಯವರಿಗೂ ಸ್ನೇಹವಿತ್ತು. ಅವರಿಗೆ ಶ್ರೀ ಪಂಜೆಯವರ ವಿದ್ವತ್ತು ಮತ್ತು ಸಾಮರ್ಥ್ಯಗಳಲ್ಲಿ ಗೌರವವಿತ್ತು. ಆ ಸಮಯದಲ್ಲಿ ಕೊಡಗಿನ ವಿದ್ಯಾ ಇಲಾಖೆಯು ಮದ್ರಾಸು ಪ್ರಾಂತದ ವಿದ್ಯಾಧಿಕಾರಿಯಾದ ಡೈರೆಕ್ಟರವರ ಅಧಿಕಾರದಲ್ಲಿತ್ತು. ಕೊಡಗು ಎಸಿಸ್ಟಾಂಟ ಇನ್ಸ್ಪೆಕ್ಟರರ ಮತ್ತು ಹೈಸ್ಕೂಲು ಅಧ್ಯಾಪಕ ವರ್ಗದ ಹುದ್ದೆಗಳಿಗೆ ದ. ಕನ್ನಡ ಜಿಲ್ಲೆಯಿಂದ ಕೆಲವರನ್ನು ಅಲ್ಲಿಗೆ ವರ್ಗಾಯಿಸುತ್ತಿದ್ದರು ಅಥವಾ ನೇಮಿಸುತ್ತಿದ್ದರು. ಪಂಜೆಯವರ ಪದೋನ್ನತಿ ಬಗ್ಗೆ ಅವರನ್ನು ಮೆ। ಜೆ. ಎ. ಏಟ್ಸರು ಕೊಡಗಿನ ಹುದ್ದೆಗೆ ನೇಮಿಸುವಂತೆ ಮಾಡಿದರು.

ಆ ಕಾಲದಲ್ಲಿ ಕೊಡಗಿನಲ್ಲಿ ಮೋಟರು ಬಸ್ಸುಗಳ ಚಲಾವಣೆ ಇಲ್ಲದ ಕಾರಣ ಪಂಜೆಯವರು ಎತ್ತಿನ ಗಾಡಿಯಲ್ಲಿ ಸವಾರಿಮಾಡಿ ಉತ್ತರ ಮತ್ತು ದಕ್ಷಿಣ ಕೊಡಗಿನ ಪ್ರಾಥಮಿಕ ಶಾಲೆಗಳನ್ನು ಸಂದರ್ಶಿಸಬೇಕಾಗುತಿತ್ತು. ಹಳ್ಳಿಯ ಉಪಾಧ್ಯಾಯರ ಸಹಾಯದಿಂದ ಕೊಡಗಿನ ಪೂರ್ವಚರಿತ್ರೆಯನ್ನೂ ಕೊಡಗು ಭಾಷೆಯ ಹಾಡುಗಳನ್ನೂ ಕೇಳಿ ತಿಳಿದುಕೊಳ್ಳುವ ಆಸೆ ಅವರಿಗೆ.

ಈ ಸಮಯದಲ್ಲಿ ಕೈಲಾಸವಾಸಿ ಕೊಡವ ಮಹನೀಯರಾದ ಶ್ರೀ ನಡಿಕೇರಿಯಂಡ ಚಿನ್ನಪ್ಪನವರು ಕೊಡಗಿನ ವೀರರಾಜ ಪೇಟೆಯಲ್ಲಿ ಪೋಲಿಸು ಇನ್ಸ್ಪೆಕ್ಟರರಾಗಿದ್ದರು. ಕೊಡವ ಭಾಷೆಯಲ್ಲಿ ಪ್ರಚಲಿತವಿರುವ ಹಳೆ ಹಾಡುಗಳನ್ನು ಅವರು ಸಂಗ್ರಹಿಸಿ ಅವುಗಳನ್ನು ಅಚ್ಚು ಹಾಕಿಸಿದ್ದರು. ತನ್ನ ಸಂಚಾರದ ಸಮಯದಲ್ಲಿ ಅವರಿಂದಲೂ ಇತರರಿಂದಲೂ ಆ ಹಾಡುಗಳನ್ನು ಓದಿಸಿ, ಅವುಗಳನ್ನು ಪಂಜೆಯವರು ತಿಳಕೊಂಡರು. ಆ ಕೆಲವು ಹಾಡುಗಳನ್ನು ಅವರು ತಮ್ಮ ಇಂಪಾದ ಧ್ವನಿಯಲ್ಲಿ ನನಗೆ ಹಾಡಿ ತೋರಿಸಿ ಅವುಗಳಲ್ಲಿ ಅಡಕವಾಗಿದ್ದ ಅಂದ ಚಂದಗಳನ್ನೂ ಆ ಜನರ ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನೂ ಎತ್ತಿ ಒಂದೊಂದು ಸಲ ವಿಮರ್ಶಿಸುತ್ತಿದ್ದರು. ಆ ಸರಳ ಕವಿತೆಗಳನ್ನು ಮೆಚ್ಚುತ್ತಿದ್ದರು.

ಅವರು ಕೊಡಗಿಗೆ ವರ್ಗಾಯಿಸಲ್ಪಟ್ಟ ವೇಳೆಯಲ್ಲಿ ಮಡಿಕೇರಿ ಸೆಂಟ್ರಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರು ಐ. ಇ. ಎಸ್. ಹುದ್ದೆಯ ವಿದೇಶೀಯರಾಗಿರುತ್ತಿದ್ದರು. ಇವರೆಲ್ಲ ಮದ್ರಾಸು ಸರಕಾರದಿಂದ ಕೊಡಗಿಗೆ ಎರವಾಗಿ ಕೊಡಲ್ಪಡುತ್ತಿದ್ದರು. ಇದೇ ಸಮಯದಲ್ಲಿ ನಾನು ಅದೇ ಪ್ರೌಢ ಶಾಲೆಯಲ್ಲಿ ಸಹಾಯಕ ಅಧ್ಯಾಪಕನಾಗಿದ್ದೆ. ಆಂಗ್ಲೇಯರಾದ

ಮೆ. ಬ್ರಾಯರ್ಲಿ ದೊರೆಗಳು ಅದರ ಮುಖ್ಯೋಪಾಧ್ಯಾಯ ರಾಗಿದ್ದರು. ಇವರು ವರ್ಗವಾಗಿ ಮದ್ರಾಸಿಗೆ ಹಿಂತೆರಳಿದಾಗ ಪಂಜೆಯವರನ್ನು ಹಂಗಾಮಿಯಾಗಿ ಅವರ ಸ್ಥಾನಕ್ಕೆ ನೇಮಿಸ ಲಾಯಿತು. ಪ್ರಾರಂಭದಲ್ಲಿ, ಅಸಿಸ್ಟಾಂಟ ಇನ್ಸ್‌ಪೆಕ್ಟರರ ಹುದ್ದೆಯ ಜತೆಯಲ್ಲಿ ಈ ಹಂಗಾಮಿ ಕೆಲಸವನ್ನೂ ಅವರು ಸಲ್ಲಿಸಬೇಕಾಯಿತು. ದೇಶೀಯರಿಗೆ ಸೆಂಟ್ರಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರ ಸ್ಥಾನವು ದೊರಕಿದುದು ಇದೇ ಮೊದ ಲನೆಯದು. ಈ ಎರಡು ಹುದ್ದೆಗಳ ಕಾರ್ಯಗಳನ್ನು ಕೆಲವು ಕಾಲ ಅವರು ಶ್ರದ್ಧೆಯಿಂದ ನಿರ್ವಹಿಸಿದ ಬಳಿಕ, ಅಸಿಸ್ಟಾಂಟ ಇನ್ಸ್‌ಪೆಕ್ಟರರ ಹುದ್ದೆಯು ತೆಗೆದುಹಾಕಲ್ಪಟ್ಟಿತು. ಆಮೇಲೆ ಪಂಜೆಯವರು ಮುಖ್ಯೋಪಾಧ್ಯಾಯರ ಸ್ಥಾನಕ್ಕೆ ಮಾತ್ರ ನೇಮಿಸಲ್ಪಟ್ಟರು. ಅಂದಿನಿಂದ ನನಗೆ ಬಹಳ ಸಾಮಿಪ್ಯದ ಅವರ ಸಂಪರ್ಕ ಸಹವಾಸಗಳು ದೊರೆಯುವ ಸಂದರ್ಭ ಗಳು ಒದಗಿದುವು.

ಅನೇಕ ಸಲ ಸಂಜೆ ಹೊತ್ತಿನಲ್ಲಿ ನಾವಿಬ್ಬರು ತಿರು ಗಾಡುವುದಿತ್ತು. ಅವರ ಉಡುಪು ನಿಡಿದಾದ ಕಪ್ಪು ಅಂಗಿ ಮತ್ತು ಬಿಳಿ ಪಂಚೆ, ತಲೆಗೆ ಮುಂಡಾಸು. ಮುಂಡಾಸು ಕಟ್ಟಿಕೊಳ್ಳುವ ಪ್ರಯತ್ನವನ್ನು ಅವರು ಎಂದಾದರೂ ಮಾಡಿ ದಂತೆ ನನಗೆ ತೋರಲಿಲ್ಲ. ಅದನ್ನು ಕಟ್ಟಲಿಕ್ಕೆ ನನಗೆ ಆಗಾಗ ಅವರಿಂದ ಕರೆ ಬರುತ್ತಿತ್ತು. ಕೆಲವೊಮ್ಮೆ ಅವರು ಶಾಲೆಯಲ್ಲಿ ದ್ದಾಗಲೂ ಅದು ಸಡಲಿಸಿ ಹೋದರೆ, ನಾನು ಪಾಠ ಮುಗಿಸಿ ಬಂದಾಗ ಅದನ್ನು ಸುತ್ತಿಕೊಟ್ಟದ್ದು ನೆನಪಿನಲ್ಲಿದೆ. ಒಳ್ಳೆಯ ಹವಾದಿನಗಳಲ್ಲಿ ಅವರು ಉರುಟು ತಲೆಯ ಕೈ ದೊಣ್ಣೆಯನ್ನು ಹಿಡಿಯುವುದಿತ್ತು. ಕೆಲವು ಸಲ ಕೈ ದೊಣ್ಣೆಯ ಬದಲಿಗೆ ತನ್ನ ಮಡಚಿದ ಕೊಡೆಯನ್ನು ಬೆನ್ನಿಗೆ ತಾಗಿಸಿ, ಎಡ ಭುಜದ ಹಿಂಭಾಗದಿಂದ ಬಲಭಾಗದ ಸೊಂಟದ ವರೆಗೆ ಚಾಚುವಂತೆ ಬಿಗಿದು ಹಿಡಿದುಕೊಂಡು ಸಂಭಾಷಣೆ ಮಾಡುತ್ತ ನಡೆಯು ತ್ತಿದ್ದರು. ಮೆಟ್ಟು ಜೋಡನ್ನು ಹಾಕದೆ ಅವರಿಗೆ ಹೊರಗೆ ಹೊರಡುವ ಅಭ್ಯಾಸವಿದ್ದಿಲ್ಲ. ಸಂಭಾಷಣಾ ಚತುರರಾದ ಅವರು ಸಾಹಿತ್ಯವನ್ನೊ ವಿದ್ಯಾಸಂಬಂಧದ ಕೆಲವು ವಿಷಯ ಗಳನ್ನೊ ರಾಜ ಕಾರಣವನ್ನೊ ಕುರಿತು ಮಾತನಾಡುತ್ತ, ಇಂತಹ ವೇಳೆಗಳಲ್ಲಿ ಜತೆಯಲ್ಲಿದ್ದವರ ಅಭಿಪ್ರಾಯಗಳನ್ನು ಸಂಗ್ರಹಿಸಿಕೊಳ್ಳುತ್ತಿದ್ದರು. ತನ್ನ ಅಭಿಪ್ರಾಯಗಳನ್ನು ರಸಿ ಕತೆಯಿಂದ ತಿಳಿಯಪಡಿಸುತ್ತಿದ್ದರು. ಅವರ ಜತೆಯಲ್ಲಿದ್ದ ವರು ಇಂತಹ ಸಂದರ್ಭಗಳಲ್ಲಿ ಬೇಸರ ಪಡುವಂತಿದ್ದಿಲ್ಲ. ಅವರ ಸಂಭಾಷಣೆಯು ಆಕರ್ಷಣೀಯವೂ ಹಾಸ್ಯಕಾರಕವೂ ಆಗಿತ್ತು. ಕೆಲವು ವೇಳೆ ಅವರು ಹಳೆ ಕವಿಗಳ ಕೃತಿಗಳಿಂದ ಬಾಯಿ ಪಾಠ ಹೇಳುವುದಿತ್ತು. ಆಂಗ್ಲ ಕವಿಗಳಿಂದಲೂ ಕೆಲ ವೊಮ್ಮೆ, ಹೆಚ್ಚಾಗಿ ಜೈಮಿನಿ ಮತ್ತು ಕನ್ನಡ ಭಾರತ, ಸರ್ವಜ್ಞ ಕವಿಯ ಮತ್ತು ದಾಸರ ಪದ್ಯಗಳು—ಇವುಗಳಿಂದ ಕೆಲವು ಪದ್ಯಗಳನ್ನು ರಸವತ್ತಾಗಿ ಬಾಯಿಪಾಠ ಹೇಳುತ್ತಿದ್ದರು. ಮುದ್ದಣ ಕವಿಯ ವಿಚಾರವನ್ನೂ ಅವರ ಶ್ರೀ ರಾಮ ಪಟ್ಟಾ ಭಿಷೇಕ, ರಾಮಾಶ್ವಮೇಧಗಳಿಂದ ಕೆಲವು ಭಾಗಗಳನ್ನೂ ಎತ್ತಿ ಮಾತನಾಡುತ್ತಿದ್ದರು. ಅವರ ಸಂಪರ್ಕ ಮತ್ತು ವರ್ಚ ಸ್ಸು—ಇವುಗಳ ಪರಿಣಾಮದಿಂದ ನನ್ನಲ್ಲಿ ಕನ್ನಡ ಭಾಷೆಯ ಸ್ವಲ್ಪ ತಿಳುವಳಿಕೆಯೂ, ಅದರ ಮೇಲೆ ಗೌರವವೂ ಉಂಟಾ ದುವು. ಅಷ್ಟರ ತನಕ ನನಗೆ ಕನ್ನಡ ಭಾಷೆಯಲ್ಲಿ ಪ್ರೇಮಾ ದರಗಳಿರಲಿಲ್ಲ. ಕಾರಣವಿಷ್ಟೆ-ಹೈಸ್ಕೂಲ್ ತರಗತಿಗಳಲ್ಲಿಯೂ ಯುನಿವರ್ಸಿಟಿ ತರಗತಿಗಳಲ್ಲಿಯೂ ನಾನು ಕನ್ನಡ ಭಾಷೆ ಯನ್ನು ಅಭ್ಯಾಸಿಸಿರಲಿಲ್ಲ. ನನ್ನ ವಿದಾರ್ಥಿದೆಸೆಯಲ್ಲಿ ಭಾಷೇ ತರ ಪಾಠಗಳನ್ನು ಇಂಗ್ಲಿಷು ಮಾಧ್ಯಮದಲ್ಲಿಯೇ ಕಲಿಯ ಬೇಕಿತ್ತು.

ಕೆಲವೊಮ್ಮೆ ಅವರ ಸಂಭಾಷಣೆಯು ತುಳು ಭಾಷೆ, ಕೊಂಕಣಿ ಮಾತು, ಮತ್ತು ಕನ್ನಡ ಭಾಷೆಗಳ ಒಳ್ನುಡಿ ಮತ್ತು ವ್ಯಾಕರಣ-ಇವುಗಳ ತುಲನಾತ್ಮಕ ವಿಚಾರಗಳ ಕಡೆಗೆ ಹರಿಯುತ್ತಿತ್ತು. ಇಂತಹ ಸಂದರ್ಭಗಳಲ್ಲಿ ಒಂದೊಂದು ಸಲ ಅವರು ಆವೇಶಭರಿತರಾಗಿದ್ದುದು ನನ್ನ ಸ್ಮೃತಿಯಲ್ಲಿದೆ. ಒಂದೊಂದು ಭಾಷೆಯ ಕೆಲವು ಭಾಷಾ ವೈಶಿಷ್ಟ್ಯಗಳನ್ನೂ ಬಳಕೆಯಲ್ಲಿರುವ ಮಾತುಗಳ ಸೊಬಗುಗಳನ್ನೂ ಕುರಿತು ಅವರ ವಿದ್ವತ್ಪೂರ್ಣವಾದ ವ್ಯಾಖ್ಯಾನವನ್ನು ಕೇಳುವ ಸುಸಂದರ್ಭಗಳೂ ಆನಂದವೂ ನನಗೆ ದೊರಕಿದುವಕ್ಕೆ ನಾನು ಅವರಿಗೆ ಋಣಿಯಾಗಿದ್ದೇನೆ. ನನ್ನಲ್ಲಿ ಅವರು ಕನ್ನಡ ಭಾಷೆಯ ಮೇಲೆ ಅಭಿಮಾನವನ್ನುಂಟುಮಾಡಿದುದರಿಂದಲೇ ಲಘುಗಣಿತ ಪಾಠದ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿ ಪ್ರಥಮ ಸಲ 1929ನೆ ಇಸವಿಯಲ್ಲಿ ಹೈಸ್ಕೂಲು ತರಗತಿ ಗಳಲ್ಲಿ ಪ್ರಾರಂಭಿಸುವ ಆತುರ ಉಂಟಾಯಿತು ನನ್ನಲ್ಲಿ. ಹೈಸ್ಕೂಲ್ ತರಗತಿಗಳಲ್ಲಿ ಭಾಷೇತರ ಪಾಠಗಳನ್ನು ಕಲಿಸಲು ಇಂಗ್ಲಿಷು ಭಾಷೆಯನ್ನಾಗಲೀ ಪ್ರಾದೇಶಿಕ ಭಾಷೆಯನ್ನಾಗಲಿ ಉಪಯೋಗಿಸಲು ಇಚ್ಛಿಸುವವರು ಹಾಗೆ ಮಾಡಬಹು ದೆಂಬ ಆಜ್ಞೆಯನ್ನು ಮದ್ರಾಸು ವಿದ್ಯಾ ಇಲಾಖೆಯವರು ಅದೇ ವರ್ಷವೇ ಪ್ರಕಟಿಸಿದ್ದರು. ಈ ಹೊಸ ಪ್ರಯೋಗವು ಯಶಸ್ವಿ ಯಾದ ಕಾರಣ ನಾನು ಅದೇ ಪಾಠದಲ್ಲಿ ಅದೇ ಮಾಧ್ಯಮ (ಕನ್ನಡ)ವನ್ನು ಎಲ್ಲ ತರಗತಿಗಳಲ್ಲಿಯೂ ಆಮೇಲೂ ಅನು ಸರಿಸಿದೆನು.

ಮಡಿಕೇರಿಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದ ಕಾಲ ದಲ್ಲಿ ಇನ್ನೊಂದು ಪ್ರಯೋಗವನ್ನು ನಾನು ಕೈಕೊಳ್ಳುವಂತೆ ನನ್ನನ್ನು ಅವರು ಹುರಿದುಂಬಿಸಿದರು. ಎರಡನೇ ಫೋರ್ಮು ತರಗತಿಗೆ ನನಗೆ ಇಂಗ್ಲಿಷು ಪಾಠವನ್ನು ಕಲಿಸಲು ಅನುಜ್ಞೆ

ಕೊಟ್ಟು, ಅವರು ಕೆಲವು ವರ್ಷಗಳ ಹಿಂದೆ ಕನ್ನಡದಲ್ಲಿ ರಚಿಸಿದ ಮಕ್ಕಳ ಅಜ್ಜಿ ಕಥೆಗಳನ್ನು ಇಂಗ್ಲಿಷು ಭಾಷೆಗೆ ಪರಿವರ್ತಿಸಬೇಕೆಂದು ಅಪೇಕ್ಷಿಸಿದರು. ಈ ಇಂಗ್ಲಿಷು ಅನುವಾದಗಳನ್ನು ಆ ತರಗತಿಯವರಿಗೆ ಬೋಧಿಸಿ ನನ್ನ ಅನುಭವವನ್ನು ತನಗೆ ತಿಳಿಸಬೇಕೆಂದರು. ಆ ಕಥೆಗಳಲ್ಲಿ ಅಲ್ಲಲ್ಲಿ ಉಪಯೋಗಿಸಲ್ಪಟ್ಟ ಭಾಷಾಪುನರುಕ್ತಿಗಳ ದೆಸೆಯಿಂದ ವಿದ್ಯಾರ್ಥಿವಿದ್ಯಾರ್ಥಿನಿಯರು ಅವುಗಳನ್ನು ಸುಲಭವಾಗಿ ಕಲಿಯುವಂತಾಯಿತು. ಈ ಪ್ರಯೋಗವು ಅವರ ಅಭಿಮತದಂತೆ ಸಫಲವಾಯಿತು. ಅದೇ ಕಾಲದಲ್ಲಿ ಕೊಡಗು ಕಮಿಷನರರು ಮೆ. ಟಾಸ್ಕರ ದೊರೆಗಳು. ಅವರ ಪತ್ನಿಯು ಬಾಲಕರ ಶಿಕ್ಷಣದಲ್ಲಿ ತಜ್ಞರಾಗಿದ್ದರು. ಅವರು ತನ್ನ ಎರಡು ಮೂರು ಚಿಕ್ಕಮಕ್ಕಳಿಗೆ ಪಾಠ ಕಲಿಸುವುದನ್ನು ಮಡಿಕೇರಿಯಲ್ಲಿಯ ಅವರ ವಾಸಸ್ಥಳಕ್ಕೆ ಆಗಾಗ ಹೋಗಿ ಪಂಜೆಯವರು ಅವಲೋಕಿಸುತ್ತಿದ್ದರು. ಪಂಜೆಯವರೂ ಬಾಲಕರ ಶಿಕ್ಷಣದಲ್ಲಿ ಚೆನ್ನಾಗಿ ನುರಿತವರು. ಅವರು ತನ್ನ ಸ್ವಂತ ಪ್ರಯೋಗಗಳ ಫಲವಾಗಿ, ಚಿಕ್ಕವರಿಗೋಸ್ಕರ ಪ್ರತ್ಯಕ್ಷ ಕ್ರಮದಲ್ಲಿ ಗಣಿತ ಪಾಠಗಳನ್ನು ಕಲಿಸುವ ಸಲುವಾಗಿ ರಚಿಸಿದ ಒಂದು ಪುಸ್ತಕಮಾಲೆಯು ಮಂಗಳೂರು ಬಾಸೆಲ್ ಮಿಶನ್ ಪುಸ್ತಕಾಲಯದವರಿಂದ ಪ್ರಕಟಿಸಲ್ಪಟ್ಟಿತ್ತು. ಹೊಸ ಕ್ರಮದಂತೆ ಕನ್ನಡವನ್ನು ಕಲಿಸುವುದಕ್ಕೆ ಸಹಾಯಕವಾಗುವಂತೆ ಅವರು ಕನ್ನಡ ಪಾಠಪುಸ್ತಕಗಳನ್ನು ತಯಾರಿಸಿ ಅವುಗಳನ್ನು ಸಹ ಆ ಪುಸ್ತಕಾಲಯದವರಿಂದ ಪ್ರಕಟಿಸಿದ್ದರು. ಮೇಲೆ ನಮೂದಿಸಿದ ಅಜ್ಜಿ ಕಥೆಗಳ ಇಂಗ್ಲಿಷು ಅನುವಾದಗಳ ಪದ ಪ್ರಯೋಗಗಳನ್ನೂ ಒಳ್ನುಡಿಗಳನ್ನೂ ಆ ಮಹಿಳೆಯ ಸಲಹೆ ಪಡೆದು ಅವುಗಳಿಗೆ ಸರಿಯಾದ ರೂಪುಕೊಟ್ಟರು. ಆ ಕಥೆಗಳನ್ನು 'Folk Tales For Little Folks' ಎಂಬ ಮಾಲೆಯ ಕುಸುಮಗಳಾಗಿ ಒಂದೆರಡು ವರ್ಷಗಳ ತರುವಾಯ ಮಂಗಳೂರು ಬಾಲಸಾಹಿತ್ಯ ಮಂಡಲದವರಿಂದ ಪ್ರಕಟಿಸಿದರು.

ಮಡಿಕೇರಿಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದ ವೇಳೆಯಲ್ಲಿ ಅಂದಾಜು 1923ನೇ ಇಸವಿಯಲ್ಲಿ ಹೊಸದಾಗಿ ಪ್ರಕಟಿಸಲ್ಪಟ್ಟ Dalton Plan ಎಂಬ ಶಿಕ್ಷಣ ಕ್ರಮವನ್ನು ಅನುಸರಿಸಿ VIಫೊ. ತರಗತಿಗೆ ಪಾಠಗಳನ್ನು ಬೋಧಿಸುವುದಕ್ಕೆ ನನ್ನನ್ನು ಅವರು ಪ್ರೋತ್ಸಾಹಿಸಿ, ಆ ಬಗ್ಗೆ ಅಗತ್ಯವಿರುವ ಅನುಕೂಲತೆಗಳನ್ನು ಒದಗಿಸಿಕೊಟ್ಟರು. ಅವರಲ್ಲಿ ತಾಜಾ ಶಿಕ್ಷಕರ ಲಕ್ಷಣಗಳಿದ್ದುವು. ಸರಿಯಾದ ಪ್ರಯೋಗದಿಂದ ನವೀನ ಶಿಕ್ಷಣ ಕ್ರಮಗಳನ್ನು ಪರಿಶೋಧಿಸುವುದೂ ಇತರರು ಸಂಶೋಧಿಸಿದ ಕ್ರಮಗಳನ್ನು ತಾರ್ಕಣೆಮಾಡುವುದೂ ಅವರಿಗೆ ಬಹಳ ಇಷ್ಟದ ಕೆಲಸವಾಗಿತ್ತು.

ಅಂದಾಜು 1925-26ನೇ ಇಸವಿಯಲ್ಲಿ ಬೆಂಗಳೂರು ಕರ್ಣಾಟಕ ಸಂಘದವರು ಶ್ರೀಯವರ ಇಂಗ್ಲಿಷು ಗೀತೆಗಳ ಕನ್ನಡ ಪರಿವರ್ತನಗಳನ್ನು ಹೊಸದಾಗಿ ಪ್ರಕಟಿಸಿದರು. ಆ ಹಾಡುಗಳನ್ನು ಪಂಜೆಯವರು ಬಹಳವಾಗಿ ಮೆಚ್ಚಿದರು. ಬೇರೆ ಬೇರೆ ರಾಗದಿಂದ ಅವುಗಳನ್ನು ಅವರು ಓದಿ ಹೇಳಿದ್ದುಂಟು. ಅವರು ಓದಿ ಹಾಡಿದ ಕವಿತೆಗಳಲ್ಲಿ ನನ್ನ ನೆನಪಿನಲ್ಲಿ ಹಸುರಾಗಿ ಉಳಿದ ಗೀತೆಗಳು — ಬಿಂಕದ ಸಿಂಗಾರಿ, ರಾವುತರ ದಾಳಿ, ದುಃಖಸೇತು. ಹಳೆ ಕವಿತೆಗಳನ್ನು ಮೆಚ್ಚಿದಂತೆ ಅವರು ಆಧುನಿಕರ ಕವಿತೆಗಳನ್ನೂ ಮೆಚ್ಚುತ್ತಿದ್ದರು. ಪ್ರೌಢರಿಗೆ ಪ್ರೌಢಕಾವ್ಯಗಳಿರುವಾಗ ಚಿಕ್ಕವರಿಗೆ ಸುಲಭವಾದ ಕವಿತೆಗಳೂ ಇರತಕ್ಕದ್ದು ಎಂಬ ಅಭಿಪ್ರಾಯವನ್ನು ನನಗೆ ಅವರು ತಿಳಿಸುತ್ತಿದ್ದರು. ಆದಕಾರಣ ಶಾಲಾಮಕ್ಕಳ ಉಪಯೋಗಾರ್ಥವಾಗಿ ಒಂದನೆಯ, ಎರಡನೆಯ ಮತ್ತು ಮೂರನೆಯ ಪದ್ಯಪುಸ್ತಕಗಳನ್ನು ಅವರು ತಯಾರಿಸಿದರು. ಈ ಮೂರನೆ ಪದ್ಯಪುಸ್ತಕವನ್ನು ರಚಿಸಿದ್ದು ಇದೇ ಸಮಯದಲ್ಲಿ — ಮಡಿಕೇರಿಯಲ್ಲಿ. ಇದರಲ್ಲಿ ಮೈಸೂರು ಸೀಮೆಯವರೂ ದ. ಕನ್ನಡದವರೂ ರಚಿಸಿದ ಕೆಲವು ಆಧುನಿಕ ಕವಿತೆಗಳನ್ನೂ ಸರ್ವಜ್ಞ ಕವಿಯ, ಕನಕದಾಸರ, ಪುರಂದರ ದಾಸರ, ಒಂದೆರಡು ಕವಿತೆಗಳನ್ನೂ ಸೇರಿಸಿದ್ದಾರೆ. ಆ ಪದ್ಯ ಪುಸ್ತಕದ ಪೀಠಿಕೆಯಲ್ಲಿ ನಿವೇದಿಸಿದ ಮಾತುಗಳನ್ನು ಇಲ್ಲಿ ಎತ್ತಿ ಬರೆಯಬೇಕೆಂದು ನನ್ನ ಅಪೇಕ್ಷೆ — 'ಈ ಪುಸ್ತಕದಲ್ಲಿ ಸಂಕಲಿಸಿದ ಹಾಡುಗಳಲ್ಲಿ ಹೆಚ್ಚಿನವುಗಳು ಆಧುನಿಕರ ಕವನಗಳು. ಕನ್ನಡ ಕವಿತೆಯು ಈ ಕಾಲದಲ್ಲಿ ಹೇಗೆ ಬಹುಮುಖವಾಗಿ ಹರಿಯತೊಡಗಿದೆ ಎಂಬುದನ್ನು ಪಾಠಶಾಲೆಗಳಲ್ಲಿರುವ ವಿದ್ಯಾರ್ಥಿಗಳಿಗೆ ತೋರಿಸಿಕೊಡುವುದಕ್ಕಾಗಿ ಇವನ್ನು ಸಂಗ್ರಹಿಸಿರುತ್ತೇನೆ. ವಿದ್ಯಾರ್ಥಿಗಳು ಇವನ್ನು ಹಾಡಿಸಿ, ಕೇಳಿ, ಅನಂತರ ಓದಬೇಕೆಂಬುದಾಗಿ ನಾನು ಅಪೇಕ್ಷಿಸುತ್ತೇನೆ. ಹಾಗೆ ಮಾಡಿದ್ದಲ್ಲಿ ಇವುಗಳ ಪಠನದಿಂದ ನನ್ನಲ್ಲಿ ಉಂಟಾದ ಆನಂದವು ವಿದ್ಯಾರ್ಥಿಗಳಲ್ಲಿಯೂ ಜನಿಸದೆ ಇರಲಾರದೆಂಬುದಾಗಿ ನನಗೆ ಭರವಸೆ ಇದೆ. ಇಂಥ ಚಿಕ್ಕ ಚಿಕ್ಕ ಕೃತಿಗಳನ್ನು ರಚಿಸಿ ಕನ್ನಡದ ಸೇವೆಯನ್ನು ಮಾಡುತ್ತಲಿರುವ ಈ ಮಹನೀಯರು ಅವುಗಳ ಸುಖಾನುಭವವನ್ನು ನನಗೆ ಕೊಟ್ಟುದಕ್ಕಾಗಿಯೂ ಅವನ್ನು ಹಲವರು ಓದಿ ನನ್ನಂತೆ ಆನಂದ ಪಡೆಯಬೇಕೆಂಬ ಅಭಿಪ್ರಾಯದಿಂದ ಈ ಪುಸ್ತಕದಲ್ಲಿ ಸಂಗ್ರಹಿಸುವುದಕ್ಕೆ ನನಗೆ ಅನುಮತಿಯನ್ನು ಕೊಟ್ಟುದ್ದಕ್ಕಾಗಿಯೂ ಅವರ ಉಪಕಾರವನ್ನು ಸ್ಮರಿಸುತ್ತೇನೆ.' ಇದೇ ಪದ್ಯಪುಸ್ತಕದಲ್ಲಿ ಸೇರಿಸಿದ 'ಹುತ್ತರಿ ಹಾಡು' ಅವರಿಂದಲೇ ರಚಿಸಲ್ಪಟ್ಟಿತು. ಈ ಹಾಡಿನ ಹಿನ್ನೆಲೆಯನ್ನು ಇಲ್ಲಿ ತಿಳಿಸಬಯಸುತ್ತೇನೆ. ಅವರು ಅಸಿಸ್ಟಾಂಟ ಇನ್ಸ್‌ಪೆಕ್ಟರರ ಹುದ್ದೆಯಲ್ಲಿದ್ದಾಗ 'ಬೊಮ್ಮ

ಗಿರಿಯಿಂ ಪುಷ್ಪಗಿರಿ ಪರ್ಯಂತ ಬೆಳದೀ' ಕೊಡಗು ದೇಶವನ್ನು ಸುತ್ತಿ, ಆ 'ದೇಶದ ಧರ್ಮದಾನದ ಕಟ್ಟುಕಟ್ಟಳೆ ರೀತಿ ನೀತಿಗಳನ್ನು ಚೆನ್ನಾಗಿ ಅರಿತುಕೊಂಡರು. ಅಲ್ಲದೆ ಅದೇ ಹಾಡಿನಲ್ಲಿ ಅವರು ಹಾಡಿರುವ 'ಕದನ ಸಿರಿಗುಯ್ಯಾಲೆ ತೂಗಿದ ನಿಲ್ಲಿ ಚಂದರವರ್ಮನೆ! । ಇದಕೊ! ಚೆಂಗಾಳ್ವರಸರಾಡಂಬರವು ಕುಣಿದ ಶ್ರೀರಂಗವು! ಇದೊ! ಇದೊ! ಇಲ್ಲುರುಳ್ದ ಹಾಲೇರಿಯರ ಬಲಗಿರಿ ಶೃಂಗವು! ॥'— ಈ ಐತಿಹಾಸಿಕ ವಿಷಯಗಳನ್ನು ತಿಳಿಯಲಿಕ್ಕೆ ಕೊಡಗಿನಲ್ಲಿರುವ ಕೋಟೆ ಕೊತ್ತಲಗಳನ್ನು ಅವರು ಸಂದರ್ಶಿಸಿ ಅವುಗಳಿಗೆ ಸಂಬಂಧಿಸಿದ ಶಾಸನಗಳನ್ನೂ ಕೊಡಗರ ಹಾಡುಗಳನ್ನೂ ಅಭ್ಯಸಿಸಿದರು. ಅವರ ಮೂಲ ಸ್ವಭಾವಕ್ಕೆ ಅನುಗುಣವಾಗಿ ಈ ವಿಷಯಗಳನ್ನು ಕುರಿತು ಅನೇಕರಲ್ಲಿ ವಿಚಾರ ವಿನಿಮಯ ಮಾಡಿದರು.

ಒಂದನೆಯ ಎರಡನೆಯ ಪದ್ಯಪುಸ್ತಕಗಳಲ್ಲಿ ಸಂಕಲಿಸಲ್ಪಟ್ಟ ಕವಿತೆಗಳಲ್ಲಿ 'ಕವಿಶಿಷ್ಯ'ಎಂಬ ಅಂಕಿತದಲ್ಲಿ ರಚಿಸಲ್ಪಟ್ಟವು ಅವರ ಸ್ವಂತ ಕವಿತೆಗಳು. ಮಕ್ಕಳ ಉಪಯೋಗಾರ್ಥವಾಗಿ ಕನ್ನಡದಲ್ಲಿ ಪಾಠಪುಸ್ತಕಗಳನ್ನೂ ಕಿರುಗತೆಗಳನ್ನೂ ಸುಲಭ ಪದ್ಯಗಳನ್ನೂ ರಚಿಸಿದವರಲ್ಲಿ ಪಂಜೆಯವರಿಗೆ ಪ್ರಥಮ ಸ್ಥಾನವನ್ನು ಕೊಡುವುದು ಉಚಿತವು. ಅಷ್ಟರತನಕ ಮಕ್ಕಳಿಗೆ ಪ್ರತ್ಯೇಕ ಪದ್ಯಗಳಿರಲಿಲ್ಲ. ಪ್ರೌಢ ಕಾವ್ಯಗಳಲ್ಲಿದ್ದ ಬೇಟೆಯ ವರ್ಣನೆ ಶಿಶಿಋತು ವರ್ಣನೆ, ವಸಂತಕಾಲದ ವರ್ಣನೆ, ಸಮುದ್ರದ ವರ್ಣನೆ ಇತ್ಯಾದಿಗಳನ್ನು ಕಷ್ಟಪಟ್ಟು ಅವರು ಕಲಿಯಬೇಕಿತ್ತು. 'ಬಾಲಸಾಹಿತ್ಯ ಪಿತಾಮಹ' ಎಂಬ ಬಿರುದು ಅವರಿಗೆ ಸಲ್ಲತಕ್ಕದ್ದು. ಅವರು ಕನ್ನಡಭಾಷೆಗೆ ಸಲ್ಲಿಸಿದ ಸೇವೆಯನ್ನೂ ಅವರ ಪಾಂಡಿತ್ಯವನ್ನೂ ಮನ್ನಿಸಿ, ಅವರು ಕೊಡಗಿನಲ್ಲಿ ಹುದ್ದೆಯಲ್ಲಿದ್ದಾಗ ಅವರನ್ನು ಮದ್ರಾಸು ವಿಶ್ವವಿದ್ಯಾಲಯದವರು ಕನ್ನಡಭಾಷೆಯ ಪಾಠಗಳಿಗೆ ಸಂಬಂಧಿಸಿದ ಮಂಡಲಿ (Board of studies)ಗೆ ಒಬ್ಬ ಸದಸ್ಯರನ್ನಾಗಿ ನೇಮಿಸಿದ್ದರು. ಅದರ ಸಭೆಗೆ ಹೋಗಿ ಬರುವಾಗ ಅವರು ಅನುಕೂಲವಿದ್ದಾಗ ಮದ್ರಾಸು ನಗರ, ಬೆಂಗಳೂರು ಮತ್ತು ಮೈಸೂರು—ಇವುಗಳಲ್ಲಿ ವಾಸಿಸುವ ಕನ್ನಡ ಸಾಹಿತಿಗಳಿಗೆ ಭೇಟಿಕೊಟ್ಟು ಕನ್ನಡ ಸಾಹಿತ್ಯವನ್ನು ಕುರಿತು ವಿಚಾರವಿನಿಮಯ ಮಾಡುತ್ತಿದ್ದರು. ಅವರ ಅರುವತ್ತನೆ ವಯಸ್ಸಿನಲ್ಲಿ ಅವರು ಕರ್ಣಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಚುನಾಯಿತರಾದರು. ಗಲಭೆಮಾಡದೇ ಶ್ರಮಿಸಿ ಅವರು ಕನ್ನಡಮಾತೆಗೆ ಸಲ್ಲಿಸಿದ ಅಪಾರ ಸೇವೆಗೆ ಸರಿಯಾದ ಮನ್ನಣೆಯು ಅವರು ಅಪೇಕ್ಷಿಸದೆಯೆ ಅವರಿಗೆ ದೊರಕಿತು. ಈ ಅಧ್ಯಕ್ಷ ಪದವಿಯನ್ನು ಮೊಟ್ಟಮೊದಲು ಅವರು ನಿರಾಕರಿಸಿದರೆಂದೂ ಆ ಬಳಿಕ ಅವರ ಅಚ್ಚುಮೆಚ್ಚಿನ ಸಾಹಿತ್ಯಾಭಿಮಾನಿಗಳ ಆಗ್ರಹದ ಪರಿಣಾಮವಾಗಿ ಅದನ್ನು ಅವರು ಸ್ವೀಕರಿಸಬೇಕಾಯಿತೆಂದೂ ನಾನು ಕೇಳಿರುವೆನು.

ಇತರರ ಪದ್ಯಗಳನ್ನೊ ತಾವು ರಚಿಸುತ್ತಿರುವ ತಮ್ಮ ಪದ್ಯಗಳನ್ನೊ ತಗ್ಗಾದ ಧ್ವನಿಯಲ್ಲಿ ತಮ್ಮೊಳಗೆ ಹೇಳಿಕೊಳ್ಳುವ ಅಭ್ಯಾಸವನ್ನು ನಾನು ಅವರಲ್ಲಿ ಕಂಡಿದ್ದೆ. ಅವರಿಗೆ ಏಕಾಂತವು ರುಚಿಸುತ್ತಿರಲಿಲ್ಲ. ಸಂಗಾತಿಯು ಬೇಕೆನ್ನುವಾಗ ಅವರು ನನಗಾಗಲೀ ಇತರರಿಗಾಗಲೀ ಕರೆ ಕಳುಹಿಸುವುದಿತ್ತು. ಮಡಿಕೇರಿಯಲ್ಲಿದ್ದಾಗ ನನ್ನ ಮನೆಗೂ, ಅವರ ಮನೆಗೂ ಅಂದಾಜು 120ಗಜಗಳ ಅಂತರವಿದ್ದ ಕಾರಣ, ನನ್ನ ಸ್ವಂತ ತಿಳುವಳಿಕೆಯನ್ನು ಹೆಚ್ಚಿಸಿಕೊಳ್ಳುವ ಬಗ್ಗೆ ಮತ್ತು ನನ್ನ ಮನೋರಂಜನೆಯ ಬಗ್ಗೆ, ಯಾವ ಹೊತ್ತಿನಲ್ಲಿಯಾದರೂ ಅವರನ್ನು ಭೇಟಿಯಾಗುತ್ತಿದ್ದೆ. ಕೆಲವು ಸಲ ಅವರಲ್ಲಿಯೇ ನಾಲ್ಕಾರು ತಾಸುಗಳನ್ನೂ ನಾನು ಕಳೆದಿರುವೆನು. ಒಮ್ಮೊಮ್ಮೆ ಅವರು ನನ್ನ ಮನೆಗೆ ಬರುವುದೂ ಇತ್ತು. ಇಂತಹ ಸಮಯಗಳಲ್ಲಿ ಬಂಟ್ವಾಳದಲ್ಲಿ ತಾನು ಕಳೆದ ತನ್ನ ಬಾಲ್ಯ ಮತ್ತು ತನ್ನ ಹೆತ್ತವರ ಬಡತನದ ಬೇಗೆ ಇತ್ಯಾದಿಗಳನ್ನು ಕುರಿತು ಮುಚ್ಚುಮರೆಯಿಲ್ಲದೆ ಹೇಳುತ್ತಿದ್ದರು. ತನ್ನ ವಿದ್ಯಾಭ್ಯಾಸ ಮಾಡುವ ಸಮಯದಲ್ಲಿ ತಾನು ಅನುಭವಿಸಿದ ಕಷ್ಟಪರಂಪರೆಗಳನ್ನೂ ತಾನು ಎಫ್.ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಬಳಿಕ ಗಣಿತ ಶಾಸ್ತ್ರವನ್ನು ಬಿ. ಎ. ಪರೀಕ್ಷೆಗೆ ಅಭ್ಯಸಿಸಲಿಕ್ಕೆ ಹಣದ ಅಡಚಣೆಯಿಂದ ಮದ್ರಾಸು ಕೊಲೆಜುಗಳಿಗೆ ಸೇರಲಿಕ್ಕಾಗದೆ ಇದ್ದ ಕಾರಣ ತಾನು ಮಂಗಳೂರು ಎಲೊಸಿಯಸ್ ಕೊಲೆಜಿನಲ್ಲಿ ಚರಿತ್ರೆ ಪಾಠ ಕಲಿತು ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಬೇಕಾಯಿತು ಎಂಬುದನ್ನೂ ನಗುತ್ತಾ ಹೇಳುತ್ತಿದ್ದರು. ಆ ಮೇಲೆ, ತಿಂಗಳೊಂದರ ರೂ. ೨೦ ಸಂಬಳ ಪಡೆದು ಅವರು ಮಂಗಳೂರು ಗವರ್ನಮೆಂಟ ಕೊಲೆಜಿನಲ್ಲಿ ಕನ್ನಡ ಪಂಡಿತ ಹುದ್ದೆಯನ್ನು ಸ್ವೀಕರಿಸಬೇಕಾಯಿತು ಮತ್ತು ಆ ಪಂಡಿತ ಹುದ್ದೆಗೆ ಅರ್ಜಿದಾರರಲ್ಲಿ ಒಬ್ಬರಾದ ಕವಿವರ್ಯ ಶ್ರೀ ನಂದಳಿಕೆಯವರ–ಮುದ್ದಣ ಕವಿಯ–ಅಗಾಧವಾದ ಕನ್ನಡ ಪಾಂಡಿತ್ಯವನ್ನು ಅಲಕ್ಷ್ಯಿಸಿ, ಕನ್ನಡ ಅರಿಯದ ವಿದೇಶೀಯರಾದ ಆ ಕೊಲೆಜಿನ ಪ್ರಿನ್ಸಿಪಾಲರು ಇಂಗ್ಲಿಷು ತಿಳಿದ ಬಿ. ಎ. ಪದವಿಯ ತನ್ನನ್ನೇ ಆರಿಸಿದರು ಎನ್ನುತ್ತಿದ್ದರು. ಹಾಸ್ಯಕರವಾದ ಮತ್ತು ರಸಭರಿತವಾದ ನುಡಿಗಳಲ್ಲಿ ಮುದ್ದಣ ಸ್ಮಾರಕ ಪುಸ್ತಕದಲ್ಲಿ ಅವರೇ ಬರೆದ ಉತ್ತಮ ಲೇಖನದಿಂದ ಈ ವಿಷಯವು ವಿಶದವಾಗುತ್ತದೆ. ಕನ್ನಡ ಪಂಡಿತರಾಗಿರುವ ಕಾಲದಲ್ಲಿ ತಾನು ಎಫ್. ಎ. ತರಗತಿಗಳಿಗೆ ಗಣಿತಪಾಠವನ್ನೂ ಕಲಿಸುತ್ತಿದ್ದೆ ಎನ್ನುತ್ತಿದ್ದರು. ಆಗ ತನ್ನ ಸಂಸಾರದ ಪೋಷಣೆಯ ಭಾರವೂ ತನ್ನ ಇಬ್ಬರು ತಮ್ಮಂದಿರ ವಿದ್ಯಾಭ್ಯಾಸದ ಖರ್ಚೂ ಅವರ ಪಾಲಿಗೆ

ಬಿದ್ದಿರುವ ಕಾರಣ ಆ ಕೊಲೆಜಿನ ಕೆಲವು ವಿದ್ಯಾರ್ಥಿಗಳಿಗೆ ಖಾಸಗಿ ಶಿಕ್ಷಣ ಕೊಟ್ಟು ತನ್ನ ಆದಾಯವನ್ನು ಹೆಚ್ಚಿಸುತ್ತಿದ್ದರೆಂದೂ ಹೇಳಿದರು. ಆ ಸಮಯದಲ್ಲಿ ತಾನು ಅನೇಕ ಸಲ ದಿನ ಒಂದಕ್ಕೆ 15—16 ತಾಸುಗಳ ತನಕ ಪ್ರಯಾಸಪಡುವ ಅಗತ್ಯವಿತ್ತೆಂಬುದನ್ನು ಒಂದೆರಡು ಸಲ ನನಗೆ ಅವರು ತಿಳಿಸಿದ್ದುಂಟು. ವಿದ್ಯಾರ್ಥಿ ದೆಸೆಯಿಂದಲೇ ವೃತ್ತ ಪತ್ರಿಕೆಗಳಿಗೆ ಲೇಖನಗಳನ್ನೂ ಸಣ್ಣ ಕತೆಗಳನ್ನೂ ಕವಿತೆಗಳನ್ನೂ ಕಳುಹಿಸುತ್ತಿದ್ದರೆಂದೂ ಅವರ ಬಾಯಿಯಿಂದಲೇ ತಿಳಕೊಂಡೆ.

ಅವರು ಮೊದಲನೆ ಸಲ 1920-21ನೇ ಇಸವಿಯಲ್ಲಿ ಮಡಿಕೇರಿಗೆ ಬರುವಾಗ ತನ್ನ ಸಂಸಾರವನ್ನು ಮಂಗಳೂರಿನಲ್ಲಿಯೇ ಬಿಟ್ಟಿದ್ದರು. ಸುಮಾರು ಒಂದು ವರ್ಷದ ಮೇಲೆ ತನ್ನ ಸಂಸಾರವನ್ನು ಮಡಿಕೇರಿಗೆ ತಂದರು. ಪಂಜೆಯವರ ಮೂರೂ ಗಂಡುಮಕ್ಕಳ ಪರಿಚಯವು ನನಗೆ ಆದದ್ದು ಮಡಿಕೇರಿಯಲ್ಲಿ. ಹಿರೀ ಮಗ ಶ್ರೀ ಮುಕುಂದ ರಾಯರು. ಅವರು ಈಗ ಜಮ್‌ಶೆದ್‌ಪುರ ಕಾರ್ಖಾನೆಯಲ್ಲಿ ದೊಡ್ಡ ಹುದ್ದೆಯಲ್ಲಿರುತ್ತಾರೆ. ಎರಡನೆಯವರು ಶ್ರೀ ಗೋಪಾಲ ರಾಯರು. ಇವರು ವಕಾಲತ್ತು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಬಳಿಕ ಹೈದ್ರಾಬಾದ ಸಂಸ್ಥಾನದಲ್ಲಿರುವ ಸೆಕುಂದರಾಬಾದದಲ್ಲಿ ಮೆಜಿಸ್ಟ್ರೇಟರಾಗಿ ನೇಮಕ ಹೊಂದಿದರು. ಮೂರನೆಯವರು ಶ್ರೀ ರಾಮರಾಯರು. ಇವರು ಮಡಿಕೇರಿ ಸೆಂಟ್ರಲ್ ಹೈಸ್ಕೂಲಿನಿಂದ ಆ ವರ್ಷ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾದವರಲ್ಲಿ ಪ್ರಥಮ ಸ್ಥಾನವನ್ನು ಪಡೆದು, ಆ ಮೇಲೆ ಒನರ್ಸ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಬಿಹಾರ ಪ್ರಾಂತದಲ್ಲಿ ಸರ್ಕಾರಿ ಸಕ್ಕರೆ ಕಾರ್ಖಾನೆಯಲ್ಲಿ ದೊಡ್ಡ ಹುದ್ದೆಗೆ ಸೇರಿದರು. ಇವರೆಲ್ಲರೂ ತಮ್ಮ ಸಂಸಾರಗಳೊಂದಿಗೆ ವಾಸಮಾಡಿ ಈಗಲೂ ಒಳ್ಳೆ ಹುದ್ದೆಗಳಲ್ಲಿರುವರೆಂದೂ ಸುಖಿಗಳಾಗಿರುವರೆಂದೂ ಕೇಳಿ ನನಗೆ ಬಹಳ ಸಂತೋಷವಾಗಿದೆ. ಅಂದಾಜು 1925ನೇ ಇಸವಿಯಲ್ಲಿ ಪಂಜೆಯವರಿಗೆ ಮಡಿಕೇರಿಯಲ್ಲಿ ಶಾಂತಿ ಎಂಬ ಮಗಳು ಜನಿಸಿದಳು. ಅವರ ಹಿರೀ ಮಗಳು ಶ್ರೀಮತಿ ಅನುಸೂಯಾಯವರು ಮಡಿಕೇರಿ ಹುಡುಗಿಯರ ಹೈಸ್ಕೂಲಿನಲ್ಲಿ ಎಸ್. ಎಸ್. ಎಲ್. ಸಿ. ಪರೀಕ್ಷೆಯ ತರುವಾಯ ಬಿ. ಎ. ಬಿ. ಟಿ. ಪರೀಕ್ಷೆಗಳಲ್ಲಿ ತೇರ್ಗಡೆಹೊಂದಿದರು. ಅವರು ಈಗ ಬೊಂಬೈ ಪ್ರಾಂತದಲ್ಲಿ ತನ್ನ ಗಂಡನ ಜತೆಯಲ್ಲಿದ್ದಾರೆ.

ಶ್ರೀ ಪಂಜೆಯವರು ಮಿತ ಆಹಾರಿಗಳು. ಅವರ ಜೀವನ ಸರಳವಾದದ್ದು. ಅವರಿಗೆ ಹಣ್ಣು ಹಂಪಲುಗಳನ್ನು ತಿನ್ನುವುದರಲ್ಲಿ ಬಹಳ ಇಷ್ಟ. ಕಾಫಿ ಪಾನೀಯವು ಅವರ ಅಚ್ಚುಮೆಚ್ಚಿನದು. ನಾವು ಮಡಿಕೇರಿಯಲ್ಲಿದ್ದಾಗ ಅವರ ಮಾತಿನ ಸವಿಯನ್ನು ಕೇಳುವ ಆತುರದಿಂದ ನನ್ನಾಕೆಯು ಒಮ್ಮೆ ಅವರನ್ನು ಕೊಂಕಣಿಯಲ್ಲಿ ಕಾಫಿಯ ಲಕ್ಷಣವೇನೆಂದು ಪ್ರಶ್ನಿಸಿದಾಗ ಅವರು ಹೇಳಿದ ವ್ಯಾಖ್ಯಾನವನ್ನು ಕನ್ನಡಿಸಿ ಇಲ್ಲಿ ತಿಳಿಸಲಿಕ್ಕೆ ಅಪೇಕ್ಷಿಸುತ್ತೇನೆ: ಕಾಫಿ ಪಾನೀಯವು ಮೂಗಿಗೆ ಒಳ್ಳೆ ಸುವಾಸನೆಯನ್ನೂ ನಾಲಗೆ ತುದಿಯಿಂದ ಚೀಪುವಾಗ ಸಿಹಿ ರುಚಿಯನ್ನೂ, ಗಂಟಲಿನಲ್ಲಿ ಕಹಿ ರುಚಿಯನ್ನೂ ಉಂಟುಮಾಡಿ ಹೊಟ್ಟೆಯೊಳಗೆ ಹೋದೊಡನೆ ಹಾಯಾಗಿ ಶರೀರವನ್ನು ಬೆಚ್ಚಗೆ ಮಾಡುವ ಯೋಗ್ಯತೆಯುಳ್ಳದ್ದೇ ಅದು—! ಎನ್ನುವಾಗ ಅವರು ತನ್ನದೇ ಆದ ಒಂದು ಮುಗುಳ್ನಗೆಯಿಂದ ಹೇಳಿದ ಈ ವಿನೋದಿ ವ್ಯಾಖ್ಯಾನವು ನನ್ನ ಮತ್ತು ನನ್ನಾಕೆಯ ನೆನಪಿನಲ್ಲಿ ಉಳಿದಿದೆ.

ಮಡಿಕೇರಿಯಲ್ಲಿಯೂ ಮಂಗಳೂರಿನಲ್ಲಿಯೂ ಅವರು ಸಂಸಾರ ಸಮೇತರಾಗಿ ವಾಸವಿರುವ ಕಾಲದಲ್ಲಿ ಕೆಲವೊಮ್ಮೆ ನಾನು ಪಂಜೆಯವರ ಅತಿಥಿಯಾಗಿದ್ದೆ. ಅವರೂ ಅವರ ಪತ್ನೀಪುತ್ರರೂ ತಮ್ಮ ಅಭ್ಯಾಗತರನ್ನು ಆದರ ಆತಿಥ್ಯಗಳಿಂದ ಸತ್ಕಾರಮಾಡುವುದನ್ನು ನಾನು ಮನಗಂಡಿದ್ದೇನೆ. ಪಂಜೆಯವರಂತೆ ಅವರ ಮನೆಯವರೂ ಸರಳ ಜೀವಿಗಳೂ ಸರಳ ಸ್ವಭಾವದವರೂ. ಪಂಜೆಯವರು ಕಲಂಕವಿಲ್ಲದ ಸ್ವಭಾವದವರು. ಬಡವ, ಬಲ್ಲಿದ, ಸಿರಿವಂತ, ಜ್ಞಾನಿ, ಅಜ್ಞಾನಿ, ಪ್ರೌಢ, ಬಾಲಕ ಇತ್ಯಾದಿ ಜನರಲ್ಲಿ ಅವರಿಗಿದ್ದ ಭ್ರಾತೃಭಾವವೂ ಸರಿ ಸಮಾನತೆಯೂ ನಿರೀಕ್ಷಕರಿಗೆ ಸ್ಪಷ್ಟವಾಗಿ ಕಾಣಬರುತ್ತಿದ್ದವು. ಎಲ್ಲರಲ್ಲಿಯೂ ಅವರು ಸಭ್ಯವರ್ತನೆಯನ್ನು ತೋರಿಸುತ್ತಿದ್ದರು. ಮೂರುನಾಲ್ಕು ವರ್ಷ ಪ್ರಾಯದ ಮಕ್ಕಳಲ್ಲಿಯೂ ನಗುತ್ತಾ ಮಾತನಾಡಿ ಅವರ ಮನಸ್ಸಿನ ಪ್ರವೃತ್ತಿಯನ್ನು ತಿಳಕೊಳ್ಳುವದೆಂದರೆ ಅವರಿಗೆ ಇಷ್ಟದ ಕೆಲಸವಾಗಿತ್ತು. ಮಡಿಕೇರಿಯಲ್ಲಿದ್ದಾಗ ಅವರು ನನ್ನ ಮನೆಗೆ ಬಂದು ನನ್ನ 3-4 ವರ್ಷ ಪ್ರಾಯದ ಮಗನನ್ನು ಅನೇಕ ಸಲ ಹಾಗೆಯೇ ಮಾತನಾಡಿಸಿದ್ದುಂಟು. ಇಂತಹ ಪ್ರಯೋಗಗಳಿಂದ ಚಿಕ್ಕವರ ಶಿಕ್ಷಣದಲ್ಲಿ ಅಗತ್ಯವಿರುವ ಅನುಭವವನ್ನು ಅವರು ಸಂಗ್ರಹಿಸುತ್ತಿದ್ದರು ಎಂದು ನಾನು ಗ್ರಹಿಸಿಕೊಳ್ಳುತ್ತಿದ್ದೆ.

ಮಡಿಕೇರಿಯಲ್ಲಿದ್ದಾಗ ನಡೆದ ಕೊನೆಯ ಘಟನೆಯನ್ನು ಇಲ್ಲಿ ಹೇಳಬಯಸುತ್ತೇನೆ—ಆ ಸಮಯದಲ್ಲಿದ್ದ ಕೊಡಗಿನ ಎರಡು ಸರ್ಕಾರಿ ಹೈಸ್ಕೂಲುಗಳ ಮುಖ್ಯೋಪಾಧ್ಯಾಯರ ಹುದ್ದೆಗಳಿಗೆ ಆದಷ್ಟು ಬೇಗನೆ ತಾವೇ ಏರಬೇಕೆಂಬ ಕುತೂಹಲವು ಒಂದೆರಡು ವ್ಯಕ್ತಿಗಳಿಗಿತ್ತು. ಪಂಜೆಯವರು ತಮ್ಮ ಹುದ್ದೆಯಲ್ಲಿದ್ದರೆ, ಈ ಸ್ವಾರ್ಥಸಾಧನೆಗೆ ವಿಳಂಬವಾಗಬಹುದೆಂದೂ ಅಡ್ಡಿಯಾಗಬಹುದೆಂದೂ ಭೀತಿಪಟ್ಟ ಅವರ ಹಿತೈಷಿಗಳು ಅವರಿಗೆ ನೆರವಾದರು. ಪಂಜೆಯವರಲ್ಲಿ ಅಲ್ಲಸಲ್ಲದ ಕೆಲವು ದೋಷಾರೋಪಗಳನ್ನು ಹೊರಿಸಿದುದರಿಂದ, ಆಗ ಕೊಡಗು ಕಮಿಷನರಾದ ಮಿ. ಟಾಸ್ಕರ ದೊರೆಯವರು ಫಕ್ಕನೆ

–ಪಂಜೆಯವರು ಶಾಲೆಯಲ್ಲಿ ಅನುಪಸ್ಥಿತರಾಗಿದ್ದಾಗ–ಶಾಲೆಯನ್ನು ಸಂದರ್ಶಿಸಿದರು. ಸಹಾಯಕ ಉಪಾಧ್ಯಾಯನಾಗಿದ್ದ ನನಗೂ ಈ ಸಂದರ್ಶನದ ಕುರಿತು ಸುದ್ದಿಯೇ ಇರಲಿಲ್ಲ. ಈ ಸಂದರ್ಶನದ ವೇಳೆಯಲ್ಲಿ ಯಾವುದೋ ತರಗತಿಯಲ್ಲಿ ಪಾಠ ಹೇಳುತ್ತಿದ್ದ ನನಗೆ, ಆಗ ಏನೇನು ವಿಚಾರಣೆಯಾಯಿತು ಎಂದು ತಿಳಿಯದೆ ಹೋಯಿತು. ಇದನ್ನೆಲ್ಲ ತಿಳಕೊಂಡು ಪಂಜೆಯವರು ಆ ಕಮಿಷನರರಿಗೆ ಅವರ ವಾಸಸ್ಥಾನದಲ್ಲಿ ಭೇಟಿಕೊಟ್ಟು, ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದರು. ತನ್ನ ಹಕ್ಕಿನ ರಜೆ ಪಡೆದುಕೊಂಡು ಆ ಮೇಲೆ ತನ್ನ ಹುದ್ದೆಯಿಂದ ಮುಕ್ತರಾಗಿ 1928-29ನೆ ಇಸವಿಯಲ್ಲಿ ಕೆಲಸದಿಂದ ನಿವೃತ್ತರಾದರು. ಹೆಸರುವಾಸಿಗೆ ಇಷ್ಟಪಡದೆ ಕನ್ನಡ ಭಾಷಾ ಸೇವೆಯನ್ನು ಮಾಡಿದರೂ ಉತ್ತಮ ಶಿಕ್ಷಕರೆಂದು ಕೀರ್ತಿಗಳಿಸಿದರೂ ಪ್ರಾಮಾಣಿಕರಾಗಿ ಕಾರ್ಯತತ್ಪರರಾದ ಮೇಧಾವಿಗಳಿಗೆ ಅವರ ಅಧಿಕಾರಿ ಜೀವನದಲ್ಲಿ ಇಂಥಾ ದುಃಖಕರವಾದ ಮತ್ತು ಅಸಹ್ಯಕರವಾದ ಉಪಸಂಹಾರವಾದುದಕ್ಕೆ ಪಂಜೆಯವರ ಹಿತಚಿಂತಕರಿಗೆ ಬಹಳ ವ್ಯಸನವಾಗದಿರದು.

ಅವರ ನಿಧನವು 1937ನೆ ಇಸವಿಯಲ್ಲಿ, ತನ್ನ 63ನೆವಯಸ್ಸಿನಲ್ಲಿ. ಅವರ ಎರಡನೇ ಮಗನೊಂದಿಗೆ ಹೈದರಾಬಾದಿನ ಸೆಕುಂದರಾಬಾದಿನಲ್ಲಿದ್ದಾಗ ಅವರು ನಿಮೋನಿಯ ಕಾಯಿಲೆಗೆ ತುತ್ತಾದರೆಂದು ಮಡಿಕೇರಿಯಲ್ಲಿದ್ದಾಗ ನಾನು ಕೇಳಿ ಅವರಿಗಾಗಿ ದುಃಖಾಶ್ರುಗಳನ್ನು ಸುರಿಸಿದೆ. ಅವರ ಸಂತಾಪ ಸೂಚಕ ಸಭೆಯು ಮಡಿಕೇರಿಯಲ್ಲಿ ಜರಗಿದುದು ಶ್ರೀ ಮುದುವೀಡ ಕೃಷ್ಣರಾಯರು ಮಡಿಕೇರಿಗೆ ಭೇಟಿಕೊಟ್ಟಾಗ. ಪಂಜೆಯವರ ತನ್ನ ಬಹುಕಾಲದ ನೆನವರಿಕೆಗಳನ್ನು ಅವರು ಸಭೆಯ ಮುಂದೆ ಇಟ್ಟರು. ಪಂಜೆಯವರ 'ಹುತ್ತರಿ ಹಾಡು,' ಮತ್ತು ಅವರ ಇತರ ಒಂದೆರಡು ಹಾಡುಗಳನ್ನು ವಿಮರ್ಶಿಸಿ ಅವರನ್ನು ಕರ್ಣಾಟಕದ ರವೀಂದ್ರರೆಂದು ಸಂಬೋಧಿಸಿದರು. ಕನ್ನಡ ಭಾಷೆಯಲ್ಲಿ ಒಂದು ವಿಶ್ವಕೋಶವನ್ನು ತಯಾರಿಸಬೇಕೆಂಬ ಮಹತ್ವಾಕಾಂಕ್ಷೆಯು ಆ ಸಾಹಿತ್ಯ ಪುರುಷರಲ್ಲಿತ್ತೆಂದು ಅವರು ಆ ಸಭೆಗೆ ತಿಳಿಸಿದರು. ಅಂತಹ ಕಾಂಕ್ಷೆಯನ್ನು ನೆರವೇರಿಸುವ ಮೊದಲು ಅವರು ದೈವಾಧೀನರಾದುದು ಅಖಿಲ ಕರ್ಣಾಟಕದ ದೌರ್ಭಾಗ್ಯವೆಂದರು ಅವರು. ಮಂಗಳೂರಿನಲ್ಲಿ ನೆರೆದ ಸಂತಾಪಸೂಚಕ ಸಭೆಯು ನಮ್ಮ ಈಗಿನ ರಾಷ್ಟ್ರಕವಿಯಾದ ಶ್ರೀ ಗೋವಿಂದ ಪೈಗಳ ಅಧ್ಯಕ್ಷತೆಯಲ್ಲಿ ಜರಗಿತು. ಅವರು ತಮ್ಮ ಭಾಷಣದಲ್ಲಿ ಪಂಜೆಯವರನ್ನು 'ಕನ್ನಡ ಸಾಹಿತ್ಯದಲ್ಲಿ ಆಚಾರ್ಯಪುರುಷರು,' 'ಕನ್ನಡ ಶಾರದೆಯ ಸಾಹಿತ್ಯಮಾಲೆಯ ಶಿಖಾಮಣಿ' ಎಂದು ಮುಂತಾಗಿ ಪ್ರಶಂಸಿಸಿದರು.

---

# ಒಂದು ವ್ಯಕ್ತಿ ಚಿತ್ರ

(ಶ್ರೀ ಡಿ. ವಿ. ಜಿ. ಇವರಿಂದ)

ಈಗ್ಗೆ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಬೇಸಿಗೆಯಲ್ಲಿ ಒಂದು ದಿನ ಬೆಳಗ್ಗೆ ನಾನು ನಾಲ್ಕುಮಂದಿ ಸ್ನೇಹಿತರೊಡನೆ ಮೇಲುಕೋಟೆಯ ಹತ್ತಿರದ ಒಂದು ಕಾಡಿನಲ್ಲಿ ನೋಟ ನೋಡುವುದಕ್ಕಾಗಿ ಹೋಗಿದ್ದೆ. ಆ ಹೊಂಬೆಳಕಿನ ಬದುಕು ಹಸಿರಿನ ಹರವಿನಲ್ಲಿ ಒಂದಾನೊಂದು ಮುಳ್ಳುಗಿಡದ ಮೇಲಿದ್ದ ಒಂದು ಹೂವು ನನ್ನ ಕಣ್ಣಿನ ಓಡಾಟವನ್ನು ಹಿಡಿದು ನಿಲ್ಲಿಸಿತು. ಆ ಹೂವಿನ ರೂಪವೂ ಬಣ್ಣವೂ ವಿಚಿತ್ರವಾಗಿದ್ದುವು. ಒಂದೊಂದು ರೇಕೂ ಐದಾರು ಅಂಗುಲ ಉದ್ದವಾಗಿ, ಕೋನ ಕೋನವಾಗಿ ಬಾಗಿ, ಬುಡದಿಂದ ತುದಿಯ ವರೆಗೂ ಒಂದು ನಡುಗಾಲುವೆಯಿಂದ ಸೀಳಿದ್ದಂತೆ ಇತ್ತು. ಹೂವಿನ ಒಳ ಪಕ್ಕ ದಂತದಂತೆ ಬಿಳುಪು, ಬೆನ್ನು ರಕ್ತಗೆಂಪು. ಹೂವಿನ ಆಕೃತಿಯಲ್ಲಿ ಕೋಮಲತೆಯೊಡನೆ ಒಂದು ಕಠೋರತೆ ಸೇರಿತ್ತು.

ಈ ವರ್ಣನೆಯಿಂದ ನನ್ನ ಮನಸ್ಸಿನೊಳಗಣ ಪುಷ್ಪಚಿತ್ರವನ್ನು ವಾಚಕರ ಮನಸ್ಸಿಗೆ ವರ್ಗಾಯಿಸಿದಂತೆ ಆಯಿತೆ? ಆಗಿಲ್ಲ. ನಾನು ಕಂಡದ್ದನ್ನು–ನನ್ನ ಅಂತರಂಗದಲ್ಲಿ ಮಾಸದೆ, ಬಣ್ಣಗೆಡದೆ ನಿಂತಿರುವ ಆ ಸನ್ನಿವೇಶದ ಸೊಬಗನ್ನು– ನಾನು ಬಲ್ಲ ಮಾತುಗಳು ಪ್ರತಿಬಿಂಬಗೊಳಿಸಲಾರವು. ವರ್ಣಚ್ಛಾಯಾ ಯಂತ್ರದಿಂದ (ಕಲರ್ ಫೋಟಾಗ್ರಫಿ) ಬಹುಶಃ ನನ್ನ ಒಳಗಣ್ಣು ನೋಡುತ್ತಿರುವ ಚಿತ್ರವನ್ನು ಸ್ವಲ್ಪ ಮಟ್ಟಿಗಾದರೂ ಇತರರ ಕಣ್ಣಿಗೆ ರೂಪಗೊಳಿಸಲಾಗುತ್ತಿತ್ತೋ, ಏನೋ! ನನ್ನ ಮಾತಿಗಂತೂ ಆ ಶಕ್ತಿ ಇಲ್ಲ.

ಪಂಜೆ ಮಂಗೇಶರಾಯರನ್ನು ಕುರಿತು ನನ್ನ ನೆನಪಿನಲ್ಲಿರುವ ಚಿತ್ರ ಅಂಥಾದ್ದು. ಅವರ ಮೂರ್ತಿ ನನ್ನ ಮನಸ್ಸಿನ ಪಟದ ಮೇಲೆ ಅಂಗಾಂಗ ವಿಶದವಾಗಿ ನಿಂತು ಜೀವಕಳೆ ಬೀರುತ್ತಿದೆ. ಆ ನಿಲುವಿನ ಠೀವಿ, ಆ ಕಣ್ಣಿನ ಹೊಳಪು, ಆ ತುಟಿಯ ನಗುವು, ಆ ಮೀಸೆಯ ಕುಣಿತ, ಆ ಮಾತಿನ ಕಾಕುಧ್ವನಿ—ಇವೆಲ್ಲ ನನ್ನೆದುರಿಗೆ ಆಟವಾಡುತ್ತಿವೆ. ಆ ನನ್ನ ಅಂತರ್ದೃಶ್ಯವನ್ನು ಬಹಿರಂಗ ಪಡಿಸುವುದು ಹೇಗೆ?

ಪಂಜೆಯವರ ಪ್ರತ್ಯಕ್ಷ ಪರಿಚಯ ನನಗೆ ಮೊದಲು ಎಲ್ಲಿ ಆಯಿತೋ ಈಗ ಜ್ಞಾಪಕವಿಲ್ಲ. ಅದು ಬಹುಶಃ ೧೯೨೫ರ ಸುಮಾರಿನಲ್ಲಿ ಆಗಿರಬೇಕು,— ಬಹುಶಃ ಬೆಂಗಳೂರಿನಲ್ಲಿ,—ಬಹುಶಃ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಯಾವುದೋ ಉತ್ಸವದ ಸಂದರ್ಭದಲ್ಲಿ.

ಮೊಗ್ಗು ಮುಪ್ಪಾಗ ಮಾಗಿದ್ದರೆ ಬಿಸಿಲು ಸೋಕಿದೊಡನೆಯೇ ಅರಳುತ್ತದೆ. ಇಬ್ಬರ ಮನಸ್ಸುಗಳಲ್ಲಿ ಪೂರ್ವವಿಶ್ವಾಸ ಬೆಳೆದಿದ್ದರೆ ಅವರ ಪ್ರಥಮ ದರ್ಶನವಾದೊಡನೆ ಅದು ಸ್ನೇಹವಾಗಿ ಹೊರಹೊಮ್ಮುತ್ತದೆ. ನನ್ನ ಮನಸ್ಸಿಗೆ ಬಂದಿತ್ತು ಅಂಥ ಪೂರ್ವಸಿದ್ಧತೆ—ಬಿ. ಎಂ. ಶ್ರೀಕಂಠಯ್ಯನವರ ಮೂಲಕ. ಅವರು ನಾಲ್ಕಾರು ಬಾರಿ ಪಂಜೆಯವರು ಎಂಥವರೆಂಬುದನ್ನು ನನಗೆ ತಿಳಿಸಿದ್ದರು. ವೆಂಕಣ್ಣಯ್ಯ ಸಹ ಪಂಜೆಯವರನ್ನು ಕುರಿತು ನನ್ನೊಂದಿಗೆ ಎಷ್ಟೋ ಸಲ ಪ್ರಸ್ತಾವ ಮಾಡಿದ್ದರು. ಹಾಗೆಯೇ ಯಾರೋ ಸ್ನೇಹಿತರು ನನ್ನನ್ನು ಕುರಿತು ಒಂದು ಅಭಿಮಾನದ ಮಾತನ್ನು ಪಂಜೆಯವರಿಗೆ ಹೇಳಿದ್ದರೆಂದು ತೋರುತ್ತದೆ. ನಾನು ಪಂಜೆಯವರ ಹುತ್ತರಿ ಹಾಡನ್ನೂ ಇನ್ನೂ ಒಂದೆರಡು ಕವನಗಳನ್ನೂ ಆ ವೇಳೆಗೆ ಓದಿದ್ದವನಾಗಿ, ಆ "ಕವಿಶಿಷ್ಯ"ರ ಪರಿಚಯಕ್ಕಾಗಿ ಕುತೂಹಲ ಪಟ್ಟಿದ್ದೆ. ಪಂಜೆಯವರು ಸಹ ನಾನು ಬರೆದಿದ್ದ ಒಂದೆರಡು ಪಂಕ್ತಿಗಳನ್ನು ಹಿಂದೆಯೇ ನೋಡಿದ್ದರಂತೆ. ಅಂತೂ ನಾವಿಬ್ಬರೂ ಒಬ್ಬರನ್ನೊಬ್ಬರು ಮೊದಲು ನೋಡಿದ ದಿವಸವೇ ಹಳೆಯ ಸ್ನೇಹಿತರಂತೆ ನಡೆದುಕೊಂಡೆವು. ಆ ಮೊದಲ ದಿವಸ ಹೆಚ್ಚು ಮಾತುಕಥೆಗಳೇನೂ ನಡೆಯಲಿಲ್ಲ. ಮುಖ ಕಾಣುತ್ತಲೆ ಮಾತಿನ ಮಳೆ ಸುರಿಸುವುದು ಅವರ ಸ್ವಭಾವವಲ್ಲವೆಂದು ತೋರುತ್ತದೆ. ಅಷ್ಟೇ ಅಲ್ಲದೆ, ಆ ಸಂದರ್ಭದಲ್ಲಿ ನಮ್ಮ ಸುತ್ತಮುತ್ತ ಕೆಲವರು ಸ್ನೇಹಿತರೂ ಕೆಲವರು ಅಪರಿಚಿತರೂ ಇದ್ದರು. ಹೊಸದಾದ ಸ್ನೇಹವು ಇತರರು ಇರುವಾಗ ಸಾಮಾನ್ಯವಾಗಿ ತಲೆಯನ್ನೆತ್ತಿತೋರಿಸದು. ಹೀಗೆ ನಮ್ಮ ಮೊದಲ ಸಾರಿಯ ಭೇಟಿ ಒಬ್ಬರಿಗೊಬ್ಬರನ್ನು ಗುರುತು ಮಾಡಿಕೊಟ್ಟು ವಿಶ್ವಾಸವನ್ನು ದೃಢಪಡಿಸುವಷ್ಟರ ಮಟ್ಟಿಗೆ ಉಪಯುಕ್ತವಾಯಿತು.

ಎರಡನೆಯ ಸಾರಿ ನಾನು ಅವರನ್ನು ನೋಡಿದ್ದು ಮಂಗಳೂರಿನಲ್ಲಿ, ಅವರಿದ್ದ ಮನೆಯಲ್ಲಿ,—ಬಹುಶಃ ೧೯೨೪ರ ಅಕ್ಟೋಬರಿನಲ್ಲಿ ಅಥವಾ ನವೆಂಬರಿನಲ್ಲಿ. ಆಗಿಗೆ ಪಂಜೆಯವರು ಸರಕಾರದ ಉದ್ಯೋಗದಿಂದ ವಿಶ್ರಾಂತರಾಗಿದ್ದರು, ಅಥವಾ ವಿಶ್ರಾಂತಿಯ ನಿರೀಕ್ಷಣೆಯಲ್ಲಿ ರಜ ತೆಗೆದುಕೊಂಡಿದ್ದರು. ಆಗ ನಾನು ಮಂಗಳೂರಿಗೆ ಹೋಗಿದ್ದದ್ದು ಶ್ರೀ ವಿ. ಎಸ್. ಶ್ರೀನಿವಾಸ ಶಾಸ್ತ್ರಿಗಳವರ ಮಿತ್ರ ಗೋಷ್ಠಿಯಲ್ಲಿ ಒಬ್ಬನಾಗಿ. ಆ ದಿನ ಮಧ್ಯಾಹ್ನ ಸುಮಾರು ೧೧॥–೧೨ ಘಂಟೆಗೆ ಪಂಜೆಯವರ ಮನೆಯನ್ನು ಹುಡುಕಿಕೊಂಡು ಹೋದೆ. ಅವರ ಮನೆಯ ಮುಂದೆ ಇಬ್ಬರು ಹುಡುಗರು ಆಟವಾಡು

ತ್ತಿದ್ದರು. ಅವರು—ನನ್ನ ಪ್ರಶ್ನೆಗೆ ಉತ್ತರವಾಗಿ—ರಾಯರು ಊಟಕ್ಕೆ ಕುಳಿತಿದ್ದರೆಂದು ತಿಳಿಸಿದರು. ನಾನು ಆ ಹುಡುಗರಿಗೆ ನನ್ನ ಹೆಸರನ್ನು ಹೇಳಿ, ಅದನ್ನು ಪಂಜೆಯವರಿಗೆ ತಿಳಿಸಬೇಕೆಂದು ಬೇಡಿದೆ. ರಾಯರು ಅವರಿದ್ದೆಡೆಯಿಂದಲೇ ನನ್ನ ಮಾತನ್ನು ಕೇಳಿ, ನನ್ನ ಧ್ವನಿಯಿಂದ ನನ್ನನ್ನು ಗುರುತಿಸಿ, ಅಲ್ಲಿಂದಲೇ ಓ ಹೊ ಹೋ! ಎಂದು ಸಂತೋಷಧ್ವನಿಮಾಡಿ ನನ್ನನ್ನು ಒಳಕ್ಕೆ ಬರಹೇಳಿದರು; ಭೋಜನಕ್ಕೆ ಕರೆದರು. ನನ್ನ ಊಟ ಆಗತಾನೆ ಮುಗಿದಿತ್ತೆಂದು ನಾನು ಹೊರ ಹಜಾರದಿಂದಲೇ ಹೇಳಿ, ಅವರು ಸಾವಕಾಶವಾಗಿ ಭೋಜನ ಮಾಡಬೇಕೆಂದೂ, ಅವರು ಬರುವವರೆಗೂ ನಾನು ಸಂತೋಷದಿಂದ ಕುಳಿತಿರುವುದಾದೀತೆಂದೂ ಉತ್ತರ ಕೊಟ್ಟೆ. ಹಾಗಾದರೆ ನಾನು ಹಣ್ಣನ್ನಾದರೂ ತೆಗೆದುಕೊಳ್ಳಬೇಕೆಂದು ರಾಯರು ಕೂಗಿ ಹೇಳಿ ಉಪಚರಿಸಿದರು. ನಾನು ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತೆ; ಆ ಹುಡುಗರು ಒಂದು ತಟ್ಟೆಯಲ್ಲಿ ಹಣ್ಣುಗಳನ್ನು ತಂದಿರಿಸಿದರು. ಮೇಜಿನ ಮೇಲೆ ಪತ್ರಿಕೆ ಪುಸ್ತಕಗಳಿದ್ದವು. ಅವನ್ನು ನಾನು ನೋಡುತ್ತಿರುವಲ್ಲಿ ಐದಾರು ನಿಮಿಷಗಳೊಳಗಾಗಿ ರಾಯರು ಊಟ ಮುಗಿಸಿ ಬಂದರು, ತಬ್ಬಿಕೊಂಡರು. ಅದರ ಮೇಲೆ ಮಾತು ಬೇಕಿರಲಿಲ್ಲ. ಒಂದೆರಡು ನಿಮಿಷ ಹಾಗೆಯೇ ಕಳೆಯಿತು.

ಆ ಹೊತ್ತು ಸುಮಾರು ೪ ಘಂಟೆಯ ವರೆಗೆ ಅಲ್ಲಿಯೇ ಮಾತನಾಡುತ್ತಿದ್ದೆವು; ವಿಷಯ—ಸಮಸ್ತ ಕರ್ಣಾಟಕ ಪ್ರಪಂಚ. ಬೆಂಗಳೂರಿನ ಪ್ರಮುಖರ ಅಶೋತ್ತರಗಳು, ಮಂಗಳೂರಿನ ನಾಯಕರ ಕಥೆ ಕೀರ್ತಿಗಳು, ಧಾರವಾಡದವರ ಉತ್ಸಾಹ, ಮೈಸೂರಿನವರ ತಾತ್ಸಾರ, ಪರಿಷತ್ತಿನ ಧೋರಣೆ, ಕರ್ಣಾಟಕ ಸಂಘಗಳ ಯೋಜನೆ, ಹಳೆಯ ಕಾವ್ಯದ ಚರ್ವಿತ ಚರ್ವಣ, ಹೊಸ ಲೇಖನದ ತಿಣುಕು ತಿಕ್ಕಲು—ಇವನ್ನೆಲ್ಲ ಕುರಿತು ಅಭಿಪ್ರಾಯ ವಿನಿಮಯವಾಯಿತು. ಮುಳಿಯ ತಿಮ್ಮಪ್ಪಯ್ಯನವರನ್ನೂ ಕಡೆಂಗೋಡ್ಲು ಶಂಕರ ಭಟ್ಟರನ್ನೂ ಕಾಣಬೇಕೆಂಬ ನನ್ನ ಆಶೆಯನ್ನು ತಿಳಿಸಿದೆ. ಕೂಡಲೆ ಅಲ್ಲಿಗೆ ಹೊರಟೆವು. ತಿಮ್ಮಪ್ಪಯ್ಯನವರೂ ಶಂಕರ ಭಟ್ಟರೂ ಆಗ ಒಂದುಮನೆಯಲ್ಲಿದ್ದರು—ಒಂದು ಕುಟುಂಬವಾಗಿ. ಅವರಿಬ್ಬರೂ ಸೋದರಮಾವ ಸೋದರ ಅಳಿಯ ಎಂಬುದು ನನಗೆ ಅದುವರೆಗೆ ಗೊತ್ತಿರಲಿಲ್ಲ. ಅವರಿದ್ದ ಮನೆಯ ಸುತ್ತಮುತ್ತ ಆಗ ಗದ್ದೆ ತೋಟಗಳಿದ್ದುವೆಂದು ನನ್ನ ನೆನಪು. ತಿಮ್ಮಪ್ಪಯ್ಯನವರು ಮೊಗಸಾಲೆಯಲ್ಲಿ ಕುಳಿತು ಯಾರೊಡನೆಯೋ ಮಾತನಾಡುತ್ತಿದ್ದರು. ಪಂಜೆಯವರು ದೂರದಿಂದಲೇ ಅವರನ್ನು ಕೂಗಿ ನನ್ನ ಹಾಜರಿಯನ್ನು ತಿಮ್ಮಪ್ಪಯ್ಯನವರಿಗೆ ತಿಳಿಯಪಡಿಸಿದರು. ಸ್ವಾಗತವಾಯಿತು; ಪಾನಕಸೇವೆ ಆಯಿತು; ತಾಂಬೂಲದ ತಟ್ಟೆ ಬಂತು. ಆ ವೇಳೆಗೆ ಶಂಕರ ಭಟ್ಟರೂ ಬಂದು ಸೇರಿದ್ದರು. ನಮ್ಮ ಪ್ರಪಂಚ ಪರಾಮರ್ಶೆ ಮುಂದೆ ಸಾಗಿತು. ಆಗಿನ ಪ್ರಸಂಗದಲ್ಲಿಯ ಒಂದಂಶ:—

(೧) "ಮುಳಿಯ ತಿಮ್ಮಪ್ಪಯ್ಯ"
(೨) "ಮುಳಿಯದ ತಿಮ್ಮಪ್ಪಯ್ಯ"
(೩) "ಮುಳಿಯೆ ತಿಮ್ಮಪ್ಪಯ್ಯ"

—ಈ ಮೂರರಲ್ಲಿ ನಿಮಗೆ ಯಾವುದು ಒಪ್ಪಿತ?" ಇದು ಮಂಗೇಶರಾಯರು ತಿಮ್ಮಪ್ಪಯ್ಯನವರಿಗೆ ಹಾಕಿದ ಪ್ರಶ್ನೆ. ಅದಕ್ಕೆ ವ್ಯಾಖ್ಯಾನ:—

(೧) "ಮುಳಿಯ" ಎಂದರೆ ಕೋಪವನ್ನರಿಯದ, ಸ್ವಭಾವದಲ್ಲಿಯೇ ಕೋಪವಿಲ್ಲದ—ಎಂದು.

(೨) "ಮುಳಿಯದ" ಎಂದರೆ ಕೋಪವು ಒಂದು ವೇಳೆ ಸ್ವಭಾವದಲ್ಲಿದ್ದರೂ ಅದನ್ನು ಮೇಲಕ್ಕೆ ಬರಗೊಡಿಸದ—ಎಂದು.

(೩) "ಮುಳಿಯೆ" ಎಂದರೆ ಕೋಪಿಸಿಕೊಂಡದ್ದೇ ಆದರೆ ಎಂದು; ಇದರ ಭಾವ "ಕೋಪವೆಂದರೆ ತಿಮ್ಮಪ್ಪಯ್ಯನವರದೇ ಕೋಪ" ಎಂದು.

ಈ ಸರಸ ಮುಂದೆ ನಡೆಯಿತು. ತಿಮ್ಮಪ್ಪಯ್ಯನವರು ಮಹಾವಿನಯ ಶಾಲಿಗಳು, ಸ್ನೇಹ ಪ್ರಿಯರು, ಸೌಮ್ಯಸ್ವಭಾವದವರು. ಅವರು ನಗುತ್ತ—"ನನ್ನ ವಿಷಯವನ್ನು ನಾನೇನು ಬಲ್ಲೆ? ನೀವು ಹೇಗೆಂದರೆ ಹಾಗೆ" ಎಂದು ಉತ್ತರಕೊಟ್ಟು ಮುಗಿಸಿದರು.

ಆ ಸಂಜೆ ನಾವೆಲ್ಲ, ಕಾಲೇಜು ಗುಡ್ಡಕ್ಕೆ ಹೋದೆವು. ಅಲ್ಲಿ ಚರ್ಚಿನೊಳಗಡೆ ಗೋಡೆಯ ಮೇಲಣ ಚಿತ್ರಣಗಳನ್ನೂ, ಹೊರಗೆ ಕೃತಕ ಗುಹೆಗಳಲ್ಲಿ ಕ್ರೈಸ್ತಸಂತರ ಪ್ರತಿಮೆಗಳನ್ನೂ, ಆ ಪ್ರದೇಶದಲ್ಲಿ ನನಗೆ ಸೊಗಸೆನಿಸಬಹುದೆಂದು ತೋಚಿದ ಎಲ್ಲವನ್ನೂ ಪಂಜೆಯವರು ನನಗೆ ತೋರಿಸಿದರು. ಈ ಎಲ್ಲ ತೋರಿಸೋಣ ತಿಳಿಸೋಣಗಳಲ್ಲಿಯೂ ಪಂಜೆಯವರು ತಮ್ಮನ್ನೇ—ತಮ್ಮ ಸ್ವಭಾವದ ಒಳತಿರುಳಾದ ಮೈತ್ರಿಯನ್ನೇ—ನನಗೆ ದರ್ಶನ ಮಾಡಿಸಿದರು.

ಮಾರನೆಯ ದಿನ ನಾವು ಇಳಿದಿದ್ದಲ್ಲಿಗೇ ಪ್ರಸಿದ್ಧ ವಕೀಲರು ಶ್ರೀಮಾನ್ ಗೊಲ್ಲರಕೇರಿ ಕೃಷ್ಣರಾಯರವರ ಮನೆಗೆ ಪಂಜೆಯವರು ಬಂದರು. ಅವರನ್ನು ಶ್ರೀನಿವಾಸ ಶಾಸ್ತ್ರಿಗಳವರಿಗೆ ಪರಿಚಯಮಾಡಿಕೊಟ್ಟೆ. ಅದನ್ನು ಪುನಃಪರಿಚಯವೆಂದೇ ಹೇಳಬೇಕು; ಏಕೆಂದರೆ ಅವರಿಬ್ಬರಿಗೂ ಉಭಯರ ಸ್ನೇಹಿತರ ಮೂಲಕ ಒಬ್ಬರಿಗೊಬ್ಬರ ವಿಷಯ ಆ ವೇಳೆಗೇ ತಿಳಿದಿತ್ತು. ಇಬ್ಬರೂ ಉಪಾಧ್ಯಾಯರಾಗಿದ್ದವರು, ಇಬ್ಬರೂ ಕಾವ್ಯಕಲೋಪಾಸಕರು. ಅವರು ತಮ್ಮಿಬ್ಬರ ಮದರಾಸು

ಸ್ನೇಹಿತರ ಮತ್ತು ಶಿಷ್ಯರ ನೆನಪು ಮಾಡಿಕೊಂಡು ಬಹಳ ಹೊತ್ತು ಸಂತೋಷದಿಂದ ಮಾತನಾಡುತ್ತಿದ್ದರು.

ಪಂಜೆಯವರು ಹೊರಟು ಹೋದ ಮೇಲೆ ಶ್ರೀನಿವಾಸ ಶಾಸ್ತ್ರಿಗಳು ತಮಿಳಿನಲ್ಲಿ ನನ್ನೊಡನೆ ಹೀಗೆಂದರು:–"ನೋಡಿ ಸಾರ್, ಇಂಥ ಒಳ್ಳೆ ಸಾಹಿತ್ಯ ರಸಿಕರನ್ನು ಸರಕಾರದವರು ಎಲ್ಲೆಲ್ಲಿಯೋ ಕಳುಹಿಸಿಬಿಡುತ್ತಾರೆ. ಇಂಥವರನ್ನು ಟ್ರೈಯಿನಿಂಗ್ ಕಾಲೇಜಿನಲ್ಲಿ ಸಾಹಿತ್ಯದ ಪ್ರೊಫೆಸರನ್ನಾಗಿ ನಿಯಾಮಕ ಮಾಡಿದ್ದಿದ್ದರೆ ಅದರಿಂದ ನೂರಾರು ಮಂದಿ ಉಪಾಧ್ಯಾಯರ ಮೂಲಕ ದೇಶದಲ್ಲೆಲ್ಲ ಸಾಹಿತ್ಯಾಸಕ್ತಿ ಹರಡಲು ಎಷ್ಟು ಉಪಯೋಗವಾಗುತ್ತಿತ್ತು! ಇಂಥ ಬೋಧಕರಿಂದಲ್ಲವೆ ಸಾಹಿತ್ಯ ಪಾಠ ಸ್ವಾರಸ್ಯವಾಗುವುದು!" ಎಂದು ಪ್ರಶಂಸೆ ಮಾಡಿದರು.

ಆ ದಿನ ಮಧ್ಯಾಹ್ನ ಪಂಜೆಯವರೂ ನಾನೂ ಸೇರಿ ಒಂದೆರಡು ಕಡೆ ತಿರುಗಾಡಿಕೊಂಡು ಬಂದೆವು. ಬಾಲಸಾಹಿತ್ಯ ಮಂಡಲದ ಕಾರ್ಯಾಲಯಕ್ಕೆ ಹೋಗಿ ಅಲ್ಲಿ ಉಳ್ಳಾಲ ಮಂಗೇಶರಾಯರೊಡನೆ ಮಾತನಾಡಿಕೊಂಡು ಬಂದೆವು. ಆ ಮಾತೂ ಕನ್ನಡ ಸಾಹಿತ್ಯದ ಮುನ್ನಡೆಯನ್ನು ಕುರಿತದ್ದು, —ಅದರಲ್ಲಿ ವಿಶೇಷವಾಗಿ ಶಿಶುಸಾಹಿತ್ಯವನ್ನು ಕುರಿತದ್ದು.

ಪಂಜೆಯವರ ಜೊತೆಯಲ್ಲಿ ದಿನವೆಲ್ಲ ಎಡೆಬಿಡದೆ ಇರುವ ಅವಕಾಶ ನನಗೆ ದೊರೆತದ್ದು ೧೯೩೪ನೆಯ ಡಿಸೆಂಬರಿನಲ್ಲಿ. ಆಗ ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷನೆನಿಸಿಕೊಂಡು ಆ ಸಂಸ್ಥೆಯ ಕಾರ್ಯಗಳ ಬಗ್ಗೆ ಜವಾಬ್ದಾರನಾಗಿದ್ದೆ. ಆ ಸಾರಿಯ ಸಾಹಿತ್ಯ ಸಮ್ಮೇಳನ ರಾಯಚೂರಿನಲ್ಲಿ ಸೇರುವುದಾಗಿತ್ತು. ಪಂಜೆಯವರನ್ನು ಸಮ್ಮೇಳನದ ಅಧ್ಯಕ್ಷಸ್ಥಾನಕ್ಕೆ ಕರೆತರಬೇಕೆಂದು ಅದಕ್ಕೆ ಹಿಂದೆ ಮೂರು ನಾಲ್ಕು ಸಾರಿ ಪ್ರಯತ್ನಗಳು ನಡೆದಿದ್ದುವು. ಸಲ ಸಲವೂ ಅವರು ಏನೋ ನೆವ ಹೇಳಿ ನುಣುಚಿಕೊಂಡಿದ್ದರು. ಆ ಸಾರಿ ಅವರು ಹೇಗೋ ಒಪ್ಪಿಕೊಂಡರು. ಅವರಿಗೆ ನನ್ನ ಮೇಲಿದ್ದ ಅಭಿಮಾನ ಕೊಂಚಮಟ್ಟಿಗಾದರೂ ಅದಕ್ಕೆ ಕಾರಣವಿರಬಹುದೆಂದು ನಾನು ಆತ್ಮಶ್ಲಾಘನೆ ಮಾಡಿಕೊಂಡಿದ್ದೇನೆ. ರಾಯಚೂರಿನಲ್ಲಿ ನಾಲ್ಕೈದು ದಿವಸ ಒಂದೇ ಕಡೆ ಬಿಡಾರ ಮಾಡಿದ್ದೆವು. ಬಿ. ಎಂ. ಶ್ರೀ, ಬೆನಗಲ್ ರಾಮರಾಯರು, ವೆಂಕಣ್ಣಯ್ಯ, ಕೃಷ್ಣಶಾಸ್ತ್ರಿ, ಶ್ರೀನಿವಾಸ ಮೂರ್ತಿ, ವೀ. ಸೀ; ಟಿ. ಎಸ್. ಎಸ್; ಡಿ. ಎಲ್. ಎನ್;—ಇನ್ನೂ ನಾಲ್ಕಾರು ಮಂದಿ ಮಿತ್ರರು ಒಂದೇ ಕಟ್ಟಡದಲ್ಲಿ ವಾಸವಾಗಿದ್ದೆವು. ಪಂಜೆಯವರ ಕೋಣೆಯೂ ನಾನಿದ್ದ ಕೋಣೆಯೂ ಪಕ್ಕ ಪಕ್ಕದಲ್ಲಿದ್ದುವು. ಆ ನಾಲ್ಕು ದಿವಸವೂ ಪಂಜೆಯವರ ಮಾತುಕಥೆ ನಮ್ಮೆಲ್ಲರಿಗೂ ಒಂದು ಹಬ್ಬವಾಗಿತ್ತು. ಬೆನೆಗಲ್ ರಾಮರಾಯರು ಪಂಜೆಯವರ ಹೆಂಡತಿಯ ಅಣ್ಣಂದಿರು. ಆ ಭಾವಮೈದುನರುಗಳ ಸಂಭಾಷಣೆಯು ವಿನೋದಗಾರಿಕೆಗೆ ಒಂದು ಆದರ್ಶದಂತೆ ಇತ್ತು. ಒಳ್ಳೆಯ ಹಾಸ್ಯ ಕುಚೋದ್ಯಗಳಿಂದ ಪಂಜೆಯವರು ರಾಮರಾಯರನ್ನು ಕೆಣಕುತ್ತಿದ್ದರು. ಒಂದುದಿನ ನಾನು ಪಂಜೆಯವರನ್ನು ಕುರಿತು–"ಸಮ್ಮೇಳನಕ್ಕೆ ಹೊರಡಲು ಹೊತ್ತಾಗಿದೆ. ನೀವಿನ್ನೂ ಉಡುಪು ಹಾಕಿಕೊಳ್ಳಲಿಲ್ಲವಲ್ಲ!" ಎಂದೆ.

ಪಂಜೆಯವರು ಉತ್ತರವಾಗಿ, ರಾಮರಾಯರ ಕಡೆ ನೋಡುತ್ತ,–"ನನ್ನ ಉಡುಪೇನು ಕಷ್ಟವಿಲ್ಲ; ಎಲ್ಲ ಸಿದ್ಧ ಮಾಡಿಟ್ಟಿದ್ದಾರೆ. ನನ್ನ ಮೈ ಉಡುಪು ನೋಡಲಿಕ್ಕೆ ತಕ್ಕವರನ್ನು ಇಟ್ಟುಕೊಂಡಿದ್ದೇನೆ. ಒಂದು ನಿಮಿಷದಲ್ಲಿ ತಯಾರಾದೇನು" ಅಂದರು.

ನಾನು ಗ್ರಹಿಸಿದ ಅರ್ಥ ಸರಿಯೋ ಅಲ್ಲವೋ ತಿಳಿಯಬೇಕೆಂದು—"ಯಾರು ಅಂಥವರು? ಎಲ್ಲಿದ್ದಾರೆ?" ಎಂದೆ.

ಪಂಜೆಯವರು—"ಅಲ್ಲಿ ಕುಳಿತಿದ್ದಾರಲ್ಲ ದೊಡ್ಡ ಮನುಷ್ಯರು, ಅವರು ತಂಗಿಯನ್ನೇ ನನಗೆ ಇಟ್ಟುಕೊಳ್ಳಲಿಕ್ಕೆ ಕೊಟ್ಟಿದ್ದಾರೆ."

ಆಗ ನೋಡಬೇಕಾಗಿತ್ತು ಬೆನೆಗಲ್ ರಾಮರಾಯರ ಮಾತರಿಯದ ಮುಖವನ್ನು,—ಆ ಹುಸಿ ಮುನಿಸನ್ನು,—ಆ ನಸು ರೇಗಾಟಿಕೆಯನ್ನು!

ರಾಯಚೂರು ಸಮ್ಮೇಳನದ ಅಧ್ಯಕ್ಷರ ಮೆರವಣಿಗೆಯೂ ಭಾಷಣಗಳೂ ಸಭೆಯ ಕಾರ್ಯವಿಧಾನವೂ ಅಷ್ಟು ಶೋಭಾಯಮಾನವಾದದ್ದಕ್ಕೆ ಪಂಜೆಯವರ ವ್ಯಕ್ತಿಪ್ರಕಾಶವು ಬಹುದೊಡ್ಡ ಕಾರಣವೆಂದು ಹೇಳುವುದು ಉತ್ಪ್ರೇಕ್ಷೆಯ ಮಾತಲ್ಲ. ಆ ಪ್ರಸಂಗದಲ್ಲಿ ಪಂಜೆಯವರ ಸ್ವಭಾವವನ್ನು ಪ್ರಕಟಪಡಿಸುವ ಎರಡು ಸಂಗತಿಗಳು ನನ್ನ ಜ್ಞಾಪಕದಲ್ಲಿ ನೆಲಸಿವೆ.

ಕವಿ ಸಮ್ಮೇಳನದ ದಿವಸ (ಬಹುಶಃ) ಶ್ರೀ ಗೋಕಾಕರವರು ಅಧ್ಯಕ್ಷರಾಗಿದ್ದರು. ಆಗ ಕಾವ್ಯಗಳನ್ನು ಓದಿದವರ ಪೈಕಿ ಒಬ್ಬರು ತೀರಾ ನಮ್ರ ಸ್ವಭಾವದ ಬಾಲಯುವಕರು. ಅವರು ವೇದಿಕೆಯ ಮೇಲೆ ಬಂದು—"ನಾನು ಓದಬೇಕೆಂದಿರುವುದು ಕವಿತೆ ಹೌದೋ ಅಲ್ಲವೋ! ಅಲ್ಲದಿದ್ದರೆ ಸಭಿಕರು ಕ್ಷಮಿಸಬೇಕು"—ಎಂದು ಮುಂತಾಗಿ ಅಧೈರ್ಯದ ಪೀಠಿಕೆ ಹಾಕಿ, ಬಳಿಕ ತಮ್ಮ ಪದ್ಯವನ್ನೋದಿದರು. ಅವರು ಓದುತ್ತಿರುವಾಗಲೇ ಸಭಿಕರಿಗೆ ಅದು ಉತ್ತಮ ಕಾವ್ಯವೆಂದು ಅನುಭವವಾಗಿ, ಮುಖಭಾವದಿಂದಲೂ ಚಪ್ಪಾಳೆಯಿಂದಲೂ ಸಭೆ ಸಂತೋಷವನ್ನು ಸೂಚಿಸುತ್ತಿತ್ತು. ಓದಿದ್ದು ಮುಗಿದ ಕೂಡಲೆ ಆ ತರುಣ ಕವಿಯು ವೇದಿಕೆಯಿಂದ ಇಳಿಯುವಷ್ಟರೊಳಗಾಗಿ ಪಂಜೆಯವರು ಥಟ್ಟನೆ ಎದ್ದು ಅವರನ್ನೆದುರಿಸಿ ನಿಂತು, ಹುಬ್ಬು ಗಂಟಿಕ್ಕಿ, ಅವರನ್ನು ದುರುಗುಟ್ಟಿ ನೋಡುತ್ತ,

ಆಗ್ರಹವನ್ನಭಿನಯಿಸಿ, ಕೈಯನ್ನು ಮುಷ್ಟಿಮಾಡಿ ಝಳಪಿಸುತ್ತ, ಕೋಪದ ಧ್ವನಿಯಿಂದ– "ಯಾರು ನಿಮಗೆ ಇದು ಕಾವ್ಯ ಅಲ್ಲ ಅಂತ ಹೇಳಿದವರು? ಅವರಿನ್ನಿಲ್ಲಿ ಕರೆತನ್ನಿ, ಬುದ್ಧಿ ಕಲಿಸಿಯೇವು!" ಎಂದು ಗದರಿಸಿದರು. ಮಾಸ್ತಿ ನರಸಿಂಗರಾಯರು ತಬ್ಬಿಬ್ಬಾದರು. ನಾವೆಲ್ಲ ಹೊಟ್ಟೆ ಬಿರಿಯ ನಕ್ಕೆವು. ಅದು ಹೊಗಳಿಕೆ–ಅಧಿಕಾರ ವಾಣಿಯಿಂದ ಬಂದ ಮೆಚ್ಚಿಕೆ— ಎಂಬುದು ಆ ಕವಿಗೆ ಮರುಕ್ಷಣ ಅರ್ಥವಾಯಿತು. ಪಂಜೆಯವರು ಅವರನ್ನು ಬಾಚಿ ತಬ್ಬಿಕೊಂಡರು.

ಇನ್ನೊಂದು ದೃಶ್ಯ ಕರುಣಾಸ್ಪದವಾದದ್ದು. ಸಮ್ಮೇಳನದ ಉಪಸಂಹಾರ ಭಾಷಣವನ್ನು ಮಾಡಲು ಎದ್ದು ನಿಂತರು ಪಂಜೆಯವರು. ಅವರು ಸಭೆಯಲ್ಲಿ ಕಂಡ ಉತ್ಸಾಹದಿಂದಲೂ, ಕೇಳಿದ ಉಪನ್ಯಾಸ ಚರ್ಚೆಗಳಿಂದಲೂ ಅವರ ಹೃದಯ ಕಾವೇರಿತ್ತು. ಆ ಕಾವು ಅವರ ಉಪಸಂಹಾರ ವಾಕ್ಯಗಳಲ್ಲಿ ಸೂಸುತ್ತಿತ್ತು. ಕಡೆಗೆ ಪಂಜೆಯವರ ಕಣ್ಣಿನಲ್ಲಿ ಹನಿಗೂಡಿತು, ಧ್ವನಿ ಗದ್ಗದವಾಯಿತು. ಕಡೆಗೆ ಅವರು—

"ನನಗೀಗ ಇರುವುದು ಒಂದೇ ಆಶೆ— ನನ್ನ ಕಡೆಯ ಗಳಿಗೆಯಲ್ಲಿ ನನ್ನ ನಾಲಗೆ 'ಕೃಷ್ಣ ಕೃಷ್ಣ' ಎಂದು ನುಡಿಯುವಂತೆಯೇ 'ಕನ್ನಡ ಕನ್ನಡ' ಎಂದು ನುಡಿಯುತ್ತಿರಲಿ" ಎಂದರು. ಸಭೆ ಸ್ತಬ್ಧವಾಯಿತು. ನಾವೆಲ್ಲ ಚೇತರಿಸಿಕೊಳ್ಳಲು ಎರಡು ಗಳಿಗೆ ಬೇಕಾಯಿತು. ಆ ಅನುಭವವನ್ನು ಪಟ್ಟವರು ಮರೆಯಲಾರರು.

ಪಂಜೆಯವರೊಡನೆ ಮತ್ತೊಂದು ಸಾರಿ ಸಾವಕಾಶವಾಗಿ ಸರಸ ಸಂಭಾಷಣೆ ನಡೆದದ್ದು ಬಹುಶಃ ೧೯೩೩ರಲ್ಲಿ— ಬೆಂಗಳೂರಿನಲ್ಲಿ ನಡೆದ ವಸಂತ ಸಾಹಿತ್ಯೋತ್ಸವದ ಕಾಲದಲ್ಲಿ. ಆಗ ನಾವಿಬ್ಬರೂ ಒಬ್ಬರನ್ನೊಬ್ಬರು ನಗಿಸಿದ್ದೂ, ನಕ್ಕದ್ದೂ, ಸುತ್ತ ಮುತ್ತಣ ಸ್ನೇಹಿತರನ್ನು ನಗಿಸಿದ್ದೂ ನನ್ನ ಸ್ಮೃತಿಯ ಅಪೂರ್ವವಸ್ತುಸಂಗ್ರಹದಲ್ಲಿರುವ ಅಮೂಲ್ಯ ರತ್ನಗಳು. ಆ ಮಾತು ಕಥೆಗಳು ಸರ್ವಾಂಗ ಸಾಹಿತ್ಯಮಯವಾಗಿದ್ದವು. ಯೌವನವನ್ನು ಹಿಂದೆ ಬಿಟ್ಟಿದ್ದರೂ ಅದನ್ನು ಮರೆಯದ ಮಿತವೃದ್ಧರು ಏಕಾಂತದಲ್ಲಿ ಹೇಳಬಹುದಾದ ಕಥೆಗಳನ್ನೆಷ್ಟೆಷ್ಟೋ ಹೇಳಿ ಕೇಳಿದೆವು. ಪಂಜೆ ಮಂಗೇಶರಾಯರು ಗಂಭೀರ ವ್ಯಕ್ತಿ ಮಾತ್ರವೇ ಅಲ್ಲ, ಹಾಸ್ಯ ವಿನೋದ ಪ್ರಿಯರೂ ಹೌದು. ಗೋಷ್ಠಿಗೆ ತಕ್ಕಂತೆ ಅವರ ರಸಪಾಕ; ಮುದುಕರೆಂದರೆ ಮುದುಕರು, ಯುವಕರೆಂದರೆ ಯುವಕರು. ಶೃಂಗಾರ ರಸಕ್ಕೆ ಅವರೇನೂ ಬಹಿಷ್ಕಾರ ಹಾಕಿದ್ದವರಲ್ಲ.

ಆ ಸಾರಿಯ ಸಾಹಿತ್ಯೋತ್ಸವದಲ್ಲಿ ಪಂಜೆಯವರು ಕಾವ್ಯ ಪಾಠವನ್ನು ಕುರಿತು ಮಾಡಿದ ಉಪನ್ಯಾಸವು ಅವರ ವ್ಯಕ್ತಿ ಲಕ್ಷಣಕ್ಕೆ ಪ್ರತಿಬಿಂಬ ರೂಪವಾದದ್ದು. ಅವರು ಅಂದಿನ ವ್ಯಾಖ್ಯಾನಕ್ಕಾಗಿ ಆರಿಸಿಕೊಂಡ ಕಾವ್ಯ "ಗೋವಿನ ಕಥೆ". ಆ ಪುಟ್ಟ ಕಾವ್ಯದ ಸ್ವಾರಸ್ಯ ಎಷ್ಟು ದೊಡ್ಡದು, ಉಪಾಧ್ಯಾಯನು ರಸಿಕನಾದರೆ ಆ ಸ್ವಾರಸ್ಯವನ್ನು ಎಷ್ಟು ದೊಡ್ಡದಾಗಿ ಮಾಡಿ ತೋರಿಸಬಹುದು— ಇದು ಅಂದಿನ ವಿಷಯ. ಉಪಾಧ್ಯಾಯನು ಪಾಠದ ಉಪಕ್ರಮಕ್ಕೆ ಮುಂಚೆ ಏನೇನು ಸಿದ್ಧತೆಗಳನ್ನು ಮಾಡಿಕೊಳ್ಳಬೇಕು; ಧರಣಿ ಮಂಡಲದ ಪಟ; ಕರ್ಣಾಟ ದೇಶದ ಪಟ; ಅದರಲ್ಲಿ ವಿದ್ಯಾರ್ಥಿಯೂ ಪಾಠಕನೂ ಇರುವ ಊರಿನ ನಕ್ಷೆ; ಅದರ ಬಳಿಯ ಬೆಟ್ಟ ಕಾಡಿನ ನಕ್ಷೆ— ಈ ಎಲ್ಲ ಸನ್ನಿವೇಶವೂ ಚಿತ್ರದರ್ಶನದಿಂದಲೂ ಉಪಾಧ್ಯಾಯನ ಓದುಗಾರಿಕೆಯ ಸೊಗಸಿನಿಂದಲೂ ಹುಡುಗರ ಕಣ್ಣ ಮುಂದೆ ಎದ್ದು ನಿಲ್ಲಬೇಕು. ಇವನ್ನೆಲ್ಲ ಪಂಜೆಯವರು ಚಮತ್ಕಾರದಿಂದ ವಿವರಿಸಿ, ಬಳಿಕ ಕಥಾರಂಭ ಮಾಡಿದರು.

"ಚದುರ ಶಿಖೆಯನು ಹಾಕಿದ."

ಈ ವಾಕ್ಯವನ್ನು ಹೇಳುವಾಗ ಮಂಗೇಶ ರಾಯರು ವೇದಿಕೆಯ ಮೇಲೆ ನಿಂತಿದ್ದವರು ಹಾಗೆಯೇ ತಮ್ಮ ಜುಟ್ಟನ್ನು ಎತ್ತಿ ಹಿಡಿದು ಗಂಟುಹಾಕಿ ಅರ್ಥಾನುಕರಣಮಾಡಿ, ಅದರಿಂದ ಬಾಲಕರ ಮನಸ್ಸಿನ ಮೇಲೆ ಎಂಥ ಪರಿಣಾಮವಾದೀತೆಂಬುದನ್ನು ತೋರಿಸಿದರು. ಹಿಂದೆ ಶ್ರೀನಿವಾಸ ಶಾಸ್ತ್ರಿಗಳು ಹೇಳಿದ್ದ ಮಾತಿನ ಅರ್ಥ ಆಗ ನನ್ನ ಮನಸ್ಸಿಗೆ ಬಂತು. ಕಾವ್ಯ ಪಾಠವು ವ್ಯಾಕರಣ ಪಾಠವಲ್ಲ, ನಿಘಂಟು ವಿಸ್ತರಯಣೆಲ್ಲ; ಅದು ಸ್ವಾನುಭವ ಪ್ರದರ್ಶನ.

ಒಂದು ಸಾರಿ ಶ್ರೀ ಮಾಸ್ತಿಯವರ ಮನೆಯಲ್ಲಿ ನಾಲ್ವತ್ತೈವರು ಸ್ನೇಹಿತರು ಸೇರಿದ್ದೆವು. ಆಗ ನನ್ನ ಕೋರಿಕೆಯಂತೆ ಪಂಜೆಯವರು "ನಾಗರ ಹಾವೇ" ಕವನವನ್ನು ಹಾಡಿ ತೋರಿಸಿದರು. ಮಕ್ಕಳಿಗೆ ಕಾವ್ಯ ಪ್ರವೇಶ ಮಾಡಿಸುವವರು ಕಲಿತುಕೊಳ್ಳಬೇಕಾದ ಕಲೆ ಮಂಗೇಶರಾಯರಿಗೆ ದೇವರು ಕೊಟ್ಟ ವರವಾಗಿ ಬಂದಿತ್ತು. ಒಂದು ಹಾಡನ್ನಾಗಲಿ ಪದ್ಯವನ್ನಾಗಲಿ ತುಟಿ ನುಡಿಯುತ್ತಿರುವಾಗಲೇ ಎದೆ ಹೊಗಿಸುವಂತೆ ಮಾಡುವುದರಲ್ಲಿ ಅವರಿಗೆ ಸಮಾನರಾದವರನ್ನು ನಾನು ಕಂಡಿಲ್ಲ. ಪ್ರೌಢ ಕಾವ್ಯವನ್ನು ರಾಗ ಲಯ ಸಮನ್ವಿತವಾಗಿ ಓದಿ ವಿದ್ವತ್ಸಾಮಾಜಿಕರಲ್ಲಿ ರಸಾವಿರ್ಭಾವವುಂಟುಮಾಡಬಲ್ಲ ಗಮಕಿಗಳನ್ನು ಮೂವರು ನಾಲ್ವರನ್ನು ನಾನು ನೋಡಿದ್ದೇನೆ. ಪಂಜೆ ಮಂಗೇಶರಾಯರು ಅಂಥ ಗಮಕಿಗಳಲ್ಲ. ಅವರನ್ನು "ಕಾವ್ಯಭಾಷಿ" ಎಂದು ಕರೆಯುವುದು ಉಚಿತವಾದೀತು. ಅವರು ಕಾವ್ಯವನ್ನು ಮಾತನಾಡುತ್ತಿದ್ದರು. ಮುಖಭಾವ, ಧ್ವನಿಯ ಏರಿಳಿತಗಳು–ನೇರ ಸೊಟ್ಟುಗಳು, ಹಸ್ತಮುದ್ರೆ— ಈ ಅಂಗ ಲಕ್ಷಣಗಳೆಲ್ಲವೂ ಒಳ್ಳೆಯ ಚಟುವಟಿಕೆಯ ಮನುಷ್ಯನು ಸಂಭಾಷಿಸುವಾಗ ಹೇಗೆ ಅವನ ವಾಕ್ಯಕ್ಕೆ ಅರ್ಥಪೋಷಕವಾಗಿ ಜೊತೆಗೂಡಿ ಬರುತ್ತವೆಯೋ, ಪಂಜೆಯವರು ಕಾವ್ಯವನ್ನು ಓದಿ ವ್ಯಾಖ್ಯಾನಮಾಡುವಾಗ ಅವು ಹಾಗೆ ಬರುತ್ತಿ

ದ್ದುವು. ಅದರಿಂದ ಕಾವ್ಯವು ಒಂದು ಕೃತಕವಸ್ತುವಾಗಿರುವುದು ತಪ್ಪಿಹೋಗಿ, ಅದು ನಮ್ಮ ಜೀವನದ ನಿತ್ಯ ನೈಜ ಸಾಮಗ್ರಿಯ ಒಂದು ಮುಖ್ಯಾಂಶವಾಗುತ್ತಿತ್ತು. ಕವಿ ನಮಗೆ ಸಲಿಗೆಯ ಸ್ನೇಹಿತನಾಗುತ್ತಿದ್ದ.

ಮೈಸೂರು ವಿಶ್ವವಿದ್ಯಾಲಯದ ಕನ್ನಡಗ್ರಂಥ ಮಾಲೆಗಾಗಿ ಕುಮಾರವ್ಯಾಸ ಭಾರತದ ಸಂಗ್ರಹವೊಂದನ್ನು ಸಿದ್ಧಪಡಿಸಿ ಕೊಡಬೇಕೆಂದು ಬಿ. ಎಂ. ಶ್ರೀಯವರು ಕೋರಿದ್ದ ಮೇರೆಗೆ, ಪಂಜೆಯವರು ಆ ಒಳ್ಳೆಯ ಸಂಕಲ್ಪವನ್ನು ಅಂಗೀಕರಿಸಿಕೊಂಡು, ಅದಕ್ಕಾಗಿ ಮೈಸೂರಿಗೆ ಬಂದು, ಪ್ರಾಚ್ಯ ಕೋಶಾಗಾರದಲ್ಲಿ ಪುರಾತನ ಪ್ರತಿಗಳನ್ನು ಪರಿಶೀಲಿಸಿ ಶೋಧನೆ ನಡಿಸುತ್ತಿದ್ದುದು ನನಗೆ ಜ್ಞಾಪಕವಿದೆ. ಆ ಕಾರ್ಯ ಎಷ್ಟು ದೂರ ಸಾಗಿತೋ ವಿಚಾರಿಸಲು ನನಗೆ ಅವಕಾಶ ಸಿಕ್ಕಲಿಲ್ಲ. ಆ ಕೆಲಸ ಪೂರ್ತಿಯಾಗಿ ನಡೆದಿದ್ದಿದ್ದರೆ ಪಂಜೆಯವರ ರಸ ದೃಷ್ಟಿಗೆ—ಅವರ ಕವಿ ಸಹೃದಯತೆಗೆ—ಅದು ದೊಡ್ಡ ಸಾಕ್ಷಿಯಾಗಿರುತ್ತಿತ್ತು.

ಮೈಸೂರಿನಲ್ಲಿ ಒಂದು ಬೇಸಗೆಯ ದಿನ ಸಂಜೆ ಅಠಾರಾ ಕಚೇರಿಯ ಬಳಿಯ ತೋಟದಲ್ಲಿ ಒಂದು ಬೆಂಚಿನ ಮೇಲೆ ಪಂಜೆಯವರೂ ಮೂವರು ನಾಲ್ವರು ಮಿತ್ರರೂ ಕುಳಿತು ಮಾತನಾಡುತ್ತಿದ್ದರು. ಒಬ್ಬರು ಸ್ನೇಹಿತರು ಹೊಸದಾಗಿ ಅಲ್ಲಿಗೆ ಬಂದರು. ಕುಶಲ ಪ್ರಶ್ನೆಯಾದ ಮೇಲೆ ಅವರು ಮಂಗೇಶರಾಯರನ್ನು ಕುರಿತು—

"ಏನಾದರೂ ಸಭೆಯೋ ಸಮ್ಮೇಳನವೋ ಏನು ತಮ್ಮನ್ನು ಈಗ ಮೈಸೂರಿಗೆ ಬರಮಾಡಿದ್ದು?" ಎಂದು ಕೇಳಿದರು.

ಪಂಜೆ:– ಸಭೆಗಾಗಿ ಬಂದಿಲ್ಲ, ಸ್ವಂತಕ್ಕಾಗಿ.

ಸ್ನೇಹಿತ:- (Change) ಚೇಂಜಿಗಾಗಿ (ಬದಲಾವಣೆಗಾಗಿ) ಬಂದ ಹಾಗೋ?

ಪಂಜೆ:– ಹೌದು, ಒಂದೆರಡು ದಿನ ಸ್ನೇಹಿತರಕೂಡ ಹಾಯಾಗಿದ್ದು ಹೋಗೋಣ ಎಂದು.

ಸ್ನೇಹಿತ:- ಕುಟುಂಬ ಸಹಿತ ಬಂದಿರೋಣಾಗಿದೆಯೊ?

ಪಂಜೆ:– "ಚೇಂಜಿ"ಗಾಗಿ ಎಂದು ಹೇಳಿದೆನಲ್ಲ!

ಇಂಥ ರಸಿಕರನ್ನು ಕಂಡ ಮೇಲೆ ಮರೆಯುವುದು ಹೇಗೆ?

— — — — — —

# ಸ್ವರ್ಗೀಯ ಪಂಜೆ ಮಂಗೇಶರಾಯರು

(ಲೇಖಕ:- ಬೈಂದೂರ ಆನಂದರಾವ್)

ಸ್ವರ್ಗೀಯ ಪಂಜೆ ಮಂಗೇಶರಾಯರ ಪಾಂಡಿತ್ಯದ ಬಿಣ್ಪು, ನಡೆ ನುಡಿಗಳ ಸೊಂಪು, ಮಂಜುಳ ಸ್ವರದ ಇಂಪು, ಸೌಜನ್ಯ, ಸೌಶೀಲ್ಯ ಸೌಮನಸ್ಯಾದಿ, ಸದ್ಗುಣವ್ರಾತದ ಪೆಂಪು ಇತ್ಯಾದಿಗಳನ್ನು ಕುರಿತ ಶ್ಲಾಘನಾ ಸ್ತುತಿಯನ್ನು "ಪ್ರಬುದ್ಧ ಕರ್ಣಾಟಕ"ವು ತುಂಬಾ ಮಾಡಿರುವುದು (ಸಂಪುಟ ೧೯ ಸಂಚಿಕೆ ೨-೩ ಪುಟ ೨೩೭). ಅದಲ್ಲದೆ ಮೈಸೂರಿನ ಪ್ರಸಿದ್ಧಿಗೊಂಡ ಕವಿಕುಲತಿಲಕ ಕೆ. ವಿ. ಪುಟ್ಟಪ್ಪನವರು "ಪ್ರಬುದ್ಧ ಕರ್ಣಾಟಕ"ದಲ್ಲಿ ಪಂಜೆಯವರ ವಿಷಯವಾಗಿ ನಿರವದ್ಯ ಕಾವ್ಯನೌಕ್ತಿಕಗಳನ್ನು ಸುರಿಸಿರುವರು(ಸಂಪುಟ೧೯ ಸಂಚಿಕೆ ೪. ಪುಟ೪೨). ಮುಂಬಯಿಯ "ಕೆನರಾ ಸಾರಸ್ವತ" (೧೯೩೮ ನೇ ಜುಲಾಯಿ ಪುಟ ೬) ಇತ್ಯಾದಿ ಬೇರೆ ಹಲವು ಪತ್ರಿಕೆಗಳೂ ಅವರ ಕೀರ್ತಿಕಲಾಪವನ್ನು ಉದ್ಘೋಷಿಸಿರುವುವು. ಹೀಗಾಗಿ ಪಂಜೆಯವರ ಗುಣಕಥನದ ಕೂಲಂಕಷ ಪುನರುಚ್ಚಾರಣೆಯು ಅನಗತ್ಯ. ಆದರೂ ಈಗ ಪ್ರಕಟಿತವಾದ ಈ ಸ್ಮಾರಕ ಕೃತಿಯ ಮಹಾಕಾರ್ಯದಲ್ಲಿ ನಮ್ಮ ಅಳಿಲು ಸೇವೆಯನ್ನು ಮಾಡುವುದು ಪಂಜೆಯವರ ಶಿಷ್ಯರಾಗಿದ್ದ ನಮ್ಮ ಕರ್ತವ್ಯವಾಗಿದೆಯೆಂಬ ಭಾವನೆಯಿಂದ ಇತರ ಲೇಖಕರ ಗೋಚರಕ್ಕೆ ಬಾರದ ಒಂದೆರಡು ಸಂಗತಿಗಳನ್ನು ಮಾತ್ರ ಎತ್ತಿ ಬರೆಯುವೆನು.

ಪಂಜೆಯವರ ಪಾಠ ಪ್ರವಚನಗಳು ಆನಂದದಾಯಕವಾಗಿಯೂ ಅನುಭವ ಜ್ಞಾನಪೂರ್ಣವಾಗಿಯೂ ಇದ್ದವು. ಅವರು ಕ್ಲಾಸಿನಲ್ಲಿ ಪ್ರವೇಶಿಸುವ ರೀತಿ ವಿಚಿತ್ರವಾಗಿತ್ತು. ಒಂದೊಂದು ವೇಳೆ ಎದುರಿನಿಂದ, ಒಂದೊಂದು ವೇಳೆ ಹಿಂದಿನಿಂದ, ಒಂದೊಂದು ವೇಳೆ ಬಲ ಅಥವಾ ಎಡಭಾಗದಿಂದ ಆ ದಿನದ ಪಾಠದ ಕಾವ್ಯವನ್ನು ಕಲಕಂಠನಂತೆ ಹಾಡುತ್ತ-- ನಾಟಕದಲ್ಲಿ ಒಬ್ಬ ಪಾತ್ರಧಾರಿಯು ನೇಪಥ್ಯದಿಂದ ರಂಗಸ್ಥಳಕ್ಕೆ ಬರುವಂತೆ--ಕ್ಲಾಸನ್ನು ಪ್ರವೇಶಿಸುತ್ತಿದ್ದರು. ಅವರಿಗೆ ಇತರ ಉಪಾಧ್ಯಾಯರಂತೆ ಕುರ್ಚಿಯ ಮೇಲೆ ಕುಳಿತುಕೊಳ್ಳುವ ಅಭ್ಯಾಸವಿರಲಿಲ್ಲ. ಕ್ಲಾಸಿನ ಮಧ್ಯಭಾಗದಲ್ಲಿ ನಿಂತುಕೊಂಡು ಪ್ರವಚನ ಮಾಡುವುದು ಅವರ ಕ್ರಮ. ಈ ರೀತಿ ಸರ್ವ ವಿದ್ಯಾರ್ಥಿಗಳ ಮನಸ್ಸನ್ನು ಲೋಹ ಚುಂಬಕದಂತೆ ತನ್ನ ಕಡೆಗೆ ಆಕರ್ಷಿಸಿಕೊಂಡು ಪ್ರವಚನಕ್ಕೆ ಪ್ರಾರಂಭಮಾಡುತ್ತಿದ್ದರು. ಅದ್ವಿತೀಯ ಗಮಕಿಯಾಗಿದ್ದರು ಅವರು! ಕ್ಲಾಸಿನಲ್ಲಿ ಪದ್ಯವನ್ನು ಹಾಡುವಾಗಲೂ ಗದ್ಯವನ್ನು ಓದುವಾಗಲೂ ಆಯಾ ರಸವನ್ನು ಉದ್ದೀಪನ ಮಾಡುವ ಶಕ್ತಿ ಅವರಲ್ಲಿತ್ತು. ಕುಮಾರವ್ಯಾಸನ ಅಥವಾ ಜೈಮಿನಿ ಭಾರತವನ್ನು ಹಾಡುವಾಗ "ಕಲಿಯುಗವು ದ್ವಾಪರವಾಗುತಿತ್ತು". ಭೀಮಾರ್ಜುನ, ಕೃಪ, ದ್ರೋಣ, ಭೀಷ್ಮ, ಕರ್ಣ ಇತ್ಯಾದಿ "ಸಿಂಹ ಶಾರ್ದೂಲ"ಗಳು ನಮ್ಮ ಅಂತರ್ಯದಲ್ಲಿ ಸಿನೆಮಾ ಚಲಚ್ಚಿತ್ರದಂತೆ ಹೊಳೆಯುತ್ತಿದ್ದವು. ಆರ್ಯಕೀರ್ತಿಯನ್ನು (ಪ್ರಥಮ ಭಾಗ) ಓದುವಾಗ ನಮ್ಮಲ್ಲಿ ವೀರಾವೇಶವನ್ನು ಉಂಟುಮಾಡಿ, ರಾಜಸ್ಥಾನದ ರಣಕ್ಷೇತ್ರಗಳಲ್ಲೇ ನಾವು ಎದೆಗೊಡುತ್ತೇವೋ ಎಂದು ಭಾವೋನ್ಮತ್ತರಾಗುತಿದ್ದೆವು. ಒಂದೆರಡು ಸಲ ಗಣಿತ ಶಾಸ್ತ್ರವನ್ನು (Mathematics) ಕಲಿಸಲಿಕ್ಕೆ ಮುಖ್ಯೋಪಾಧ್ಯಾಯರು ಅವರನ್ನು ಕಳುಹಿಸಿದ್ದುಂಟು. ಆಗ ಗಣಿತ ಪಾಠವನ್ನೂ ಮನೋಹರವಾಗಿಯೂ ಚಿತ್ತರಂಜಕವಾಗಿಯೂ ವಿವರಿಸಿ ಕಲಿಸಿ, ಅದರಲ್ಲಿಯೂ ಪ್ರವೀಣರೆಂದೆನಿಸಿಕೊಳ್ಳುತ್ತಿದ್ದರು.

ಪಂಜೆಯವರಿಗೆ ತನ್ನ ಶಿಷ್ಯರಾದ ವಿದ್ಯಾರ್ಥಿಗಳ ಮೇಲೆ ಬಹಳ ಮಮತೆ ಮತ್ತು ಅಭಿಮಾನವಿತ್ತು. ಹುಡುಗರ ಸಾಧಕ ಬಾಧಕಗಳನ್ನು ಚೆನ್ನಾಗಿ ಅರಿತಿದ್ದರು. ಅವರು ಪ್ರಾಥಮಿಕ ಟ್ರೈನಿಂಗ್ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಕಾಲದಲ್ಲಿ ನಡೆದ ಒಂದು ಸಂಗತಿ ಈ ಸಂದರ್ಭದಲ್ಲಿ ಉಲ್ಲೇಖಯೋಗ್ಯವಾಗಿದೆ. ಮಂಗಳೂರಿನ ಸಬ್ ಮೆಜಿಸ್ಟ್ರೇಟರ ಕೋರ್ಟಿನಲ್ಲಿ ಸುಮಾರು ಹದಿನೈದರೊಳಗಿನ ಪ್ರಾಯದ ಒಬ್ಬ ಯುವಕನ ಮೇಲೆ ಒಂದು ಕಳವಿನ ಮೊಕದ್ದಮೆ ಇದ್ದಿತು. ಅದರ ವಿಚಾರಣೆಯಲ್ಲಿ ಆರೋಪಿತ ಯುವಕನೇ ನಿಜವಾದ ಅಪರಾಧಿ ಎಂದು ಸಾಕ್ಷಿಗಾರರು ಕಂಡುಹಿಡಿಯುವುದು ಅಗತ್ಯವಾಗಿದ್ದಿತು. ಈ ವಿಧಿಗೋಸ್ಕರ ಆರೋಪಿತನ ಪ್ರಾಯದ ಕೆಲವು ಹುಡುಗರು ಬೇಕಾಯಿತು. ಸಬ್ ಮೆಜಿಸ್ಟ್ರೇಟರು ಪ್ರಾಥಮಿಕ ಟ್ರೈನಿಂಗ್ ಶಾಲೆಗೆ ಹೋಗಿ ನಾಲ್ಕೈದು ವಿದ್ಯಾರ್ಥಿಗಳನ್ನು ಆ ಬಗ್ಗೆ ಕಳುಹಿಸಬಹುದೋ ಎಂದು ಬಿನ್ನವಿಸಲಾಗಿ, ಪಂಜೆಯವರು ಕೋಪಗೊಂಡು ತನ್ನ ವಿದ್ಯಾರ್ಥಿಗಳು ಅಪರಾಧಿಯೊಡನೆ ಬೆರೆತು ಸಾಲಿನಲ್ಲಿ ನಿಲ್ಲುವಷ್ಟು ನಿಕೃಷ್ಟರಲ್ಲವೆಂದು ಹೇಳಿ ಮೆಜಿಸ್ಟ್ರೇಟರನ್ನು ಮರಳಿ ಕಳುಹಿಸಿದರಂತೆ!

ನ್ಯಾಯಮೂರ್ತಿ ಕೈ. ವಾ. ಒಂಭತ್ತಕೆರೆ ಪಾಂಡುರಂಗರಾಯರೇ ಮೊದಲಾದ ಹಲವು ಮಹನೀಯರು ಆಗ ಪಂಜೆಯವರ ವಿದ್ಯಾರ್ಥಿಗಳಾಗಿದ್ದರು. ಆ ಕಾಲದಲ್ಲಿ ಮಂಗಳೂರಿನಲ್ಲಿ ಒಳ್ಳೇದಾದ ಖಾನಾವಳಿಗಳು ಇರಲಿಲ್ಲವಾದ್ದರಿಂದ, ಪಂಜೆಯವರೂ ಪಾಂಡುರಂಗರಾಯರೂ ಇತರ ಕೆಲವು ವಿದ್ಯಾರ್ಥಿ

ಗಳೂ ಒಂದೇ ಮನೆತನದಲ್ಲಿ ಊಟಕ್ಕೆ ಇದ್ದರು. ಮನೆಯಲ್ಲಿ ಪಂಜೆಯವರು ಹುಡುಗರೊಡನೆ ಬೆರೆತು ಅನ್ಯೋನ್ಯದಿಂದಲೂ ಸಲುಗೆಯಿಂದಲೂ ಇದ್ದು, ಅವರಲ್ಲಾಗಲೀ ಹುಡುಗರಲ್ಲಾಗಲೀ ಗುರುಶಿಷ್ಯರೆಂಬ ಭಾವನೆಯೇ ಇರಲಿಲ್ಲ. ಆದರೆ ಕ್ಲಾಸಿನಲ್ಲಿ ತನ್ನೊಡನೆ ಮನೆಯಲ್ಲಿ ಊಟಕ್ಕೆ ಇರುವ ಹುಡುಗರು ಅಥವ ಇತರ ಹುಡುಗರು ಎಂಬ ಪಕ್ಷಪಾತವು ಪಂಜೆಯವರಲ್ಲಿ ಎಂದಿಗೂ ಇರಲಿಲ್ಲ. ಕ್ಲಾಸಿನಲ್ಲಿ ಎಲ್ಲರೂ ಅವರಿಗೆ ಸರಿಸಮವಾಗಿದ್ದರು.

ಪಂಜೆಯವರ ಪ್ರತಿಯೊಂದು ಕವಿತೆಯೂ ರಸಜ್ಞರಾದ ಪಾಠಕರಲ್ಲಿ ಆಯಾ ರಸೋದ್ದೀಪನ ಮಾಡುತ್ತದೆ. ಅವರ "ಅಣ್ಣನ ವಿಲಾಪ"ದಲ್ಲಿ ಕರುಣ ರಸವು ಗಂಗೆಯಂತೆ ಉಕ್ಕಿ ಬರುವುದು. ಅಣ್ಣನು ಮೃತ ತಮ್ಮನ ವಿಷಯವಾಗಿ:-

ಎಲ್ಲಿ ಹೋದನು ಅಮ್ಮ ಪುಟ್ಟಣ್ಣನಮ್ಮಾ?
ಸಿಲ್ಲದವನನು ತರುವೆ ಹುಡುಕಿ ನಾನಮ್ಮಾ!
ಅಲ್ಲಿಲ್ಲ, ಇಲ್ಲಿಲ್ಲ, ಎಲ್ಲಿಹನು ತಮ್ಮಾ?
ತಲ್ಲಣಿಸುತಿವೆ ಮನವು, ಹೇಳು ಸೀತಮ್ಮಾ! ||

*    *    *    *

ತಪ್ಪಿಕೊಂಡೆನ್ನ ನೀನಳುವುದೇನಿಂತು?
ಅಪ್ಪೆ, ಅಳದಿರು ಪುಟ್ಟ ಎಲ್ಲಿಹನು ನಿಂತು? ||

ಎಂದು ಹೇಳಲಾಗಿ ತಾಯಿ:-

ಮುತ್ತಿನಾ ಸರಪಳಿಯೆ! ಮಾಣಿನರಗಿಳಿಯೆ!
ಎತ್ತ ಹೋದನು ತಮ್ಮ ಎಂಬುದನು ತಿಳಿಯೆ
ಇತ್ತವನೆ ಎತ್ತಿದನು! ಕೇಳು ಪುತ್ಥಳಿಯೇ!
ಬಿತ್ತಿದವನೊತ್ತರಿಸಿದನು ತನ್ನ ಬಳಿಯೆ!

ಎಂದು ಹೇಳಿದಳು ಆಗ ಮಗು (ಅಣ್ಣನು):-

ಈಗಲೇ ಹೊರಡುವೆನು, ಕೈ ಬಿಡೌ, ಅಮ್ಮಾ!
ಬೇಗ ಅಪ್ಪನು ಬರುವ ಮುಂಚೆಯೇ, ಅಮ್ಮಾ!
ಹೋಗುವೆನು, ಹೋಗುವೆನು; ಹೊರಹೊರಡು ಅಮ್ಮಾ!
ಕೂಗಿ ಅಳದಿರು; ದಾರಿ ತೋರಿಸೌ! ಅಮ್ಮಾ! ||

ಎಂದು ಹೇಳಿ ಎದ್ದು ನಿಲ್ಲಲು, ತಾಯಿ:-

"ಚಂದು ಕೇಳ್! ದಾರಿಯಲಿ ನಾ ಪೋಪೆ ಮುಂದೆ.
ಬಂದಪನು ಬಳಿಕ ನಿನ್ನಯ ಮುದ್ದು ತಂದೆ.
ಮಂದಿ ಮಕ್ಕಳ ಪಡೆದು ಬಾ ನೀನು ಹಿಂದೆ."
ಎಂದವನ ಬಾಯಿ ಬಿಗಿದಳು ಮುದ್ದಿನಿಂದೆ. ||

ಈ ಕಾವ್ಯದಲ್ಲಿ ಕರುಣರಸವು ಪರಿಪೂರ್ಣವಾಗಿರುವುದು.

ಅಭಿನಯಗೀತಗಳನ್ನು ಸಮಂಜಸವಾದ ಆಯಾ ಅಭಿನಯಗಳ ಜೋಡಣೆಯಿಂದ ಹಾಡುವ ಪಂಜೆಯವರ ಕ್ರಮವು ನಿರುಪಮೇಯವಾಗಿತ್ತು. ಅವರ ಕಂಠ ಸ್ವರವು ಕೋಮಲವಾಗಿತ್ತಾದ್ದರಿಂದ ಅವರ ಅಭಿನಯಗೀತ ಪಠನವು—ಉದಯಶಂಕರನ ನಟನದಂತೆ—ನೇತ್ರಾನಂದಕರವಾಗಿಯೂ ಕರ್ಣಾನಂದಕರವಾಗಿಯೂ ಇದ್ದಿತಲ್ಲದೆ, ವಿದ್ಯಾರ್ಥಿಗಳಿಗೆ ಉಪದೇಶಪ್ರದವಾಗಿದ್ದು ಜ್ಞಾನವಿಕಾಸಕ್ಕೂ ತುಂಬಾ ಅನುಕೂಲವಾಗಿದ್ದಿತು. ಪಂಜೆಯವರು:-

ಜೋಗುಳ ಹಾಡನ್ನು ಲಾಲಿಸು, ಜೋ! ಜೋ!
ತೂಗುವೆ ತೊಟ್ಟಿಲ, ಮಲಗಿರು ಜೋ! ಜೋ! ||

ಎಂದು ಮೊದಲಾಗಿ "ಜೋಗುಳ" ಎಂಬ ಪದ್ಯವನ್ನು ಹಾಡುತ್ತ ಮನಃಕಲ್ಪಿತವಾದ ತೊಟ್ಟಿಲನ್ನು ತನ್ನ ಕೈಗಳಿಂದ ತೂಗುವ ಮಾದರಿಯು ಅನುಕರಣಾತೀತವಾಗಿದ್ದಿತು.

ಪಂಜೆಯವರು ನಟಶ್ರೇಷ್ಠರಲ್ಲೊಬ್ಬರು. ಅವರು ಹುಟ್ಟು ನಟರಾಗಿದ್ದರೆಂದೂ ಹೇಳಬಹುದು. ಅವರ "ಬಾಲ್ಯಸ್ಮರಣೆ" ಎಂಬ ಪದ್ಯದಲ್ಲಿ ತನ್ನ ಸ್ವಂತ ಬಾಲ್ಯಾವಸ್ಥೆಯ ಆಟಗಳನ್ನೇ ಸ್ಮರಿಸಿ ಬರೆದಿದ್ದರೆಂದು ಅವರೇ ನನ್ನೊಡನೆ ಹೇಳಿದ್ದುಂಟು:-

ಸೀರ ಕಚ್ಚೆಯ ಕೂದಲಿನ ಮೀಸೆ ಧರಿಸಿ,
ಶ್ರೀರಾಮನೆಂದಾಡಿ, "ಹಾ! ಪ್ರಾಣದರಸಿ,
ಬಾ! ರಮಣಿ!" ಎಂದು ನಾ ಕುಣಿದುದನು ಸ್ಮರಿಸಿ,
ಹಾರುವುದು ಬಗೆಯು ಗೈದಂಗ ನರ್ತನವಾ. ||

ಈ ಒಂದು ಪದವೇ ಆಧಾರವಾಗಿ ಸಾಕು!

"ಚಂದ್ರಹಾಸ" ನಾಟಕದಲ್ಲಿ ಪಂಜೆಯವರು "ದುಷ್ಟಬುದ್ಧಿ"ಯ ಪಾತ್ರವನ್ನು ವಹಿಸಿ ತನ್ನ ಅಪ್ರತಿಮ ಅಭಿನಯ ಕಲಾಕೌಶಲವನ್ನು ಪ್ರದರ್ಶಿಸಿದ್ದರು. ಸುಮ್ಮನೆ ಬಾಯಿಪಾಠ ಹೇಳದೆ, ತಾನು ಅಭಿನಯಿಸುವ "ದುಷ್ಟಬುದ್ಧಿ"ಯ ಪಾತ್ರದಲ್ಲಿ ರಸಜ್ಞ ಸಭಾಸದರನ್ನು ತಲ್ಲೀನರನ್ನಾಗಿ ಮಾಡಿ, ರಸಾಸ್ವಾದಾನಂದವನ್ನು ಉದ್ದೀಪನಮಾಡಿದವರು ಅವರು! ತನ್ನ ಮುಖಚರ್ಯೆ, ನಡೆನುಡಿ, ಅಭಿನಯಾದಿಗಳಲ್ಲಿ ತನ್ನ ದೇಹವನ್ನು ಮರೆತು, ತಾನು ಅಭಿನಯಿಸುವ "ದುಷ್ಟಬುದ್ಧಿ"ಯ ಪಾತ್ರದಲ್ಲಿ ಮನೋವಾಕ್ಕಾಯಗಳಿಂದ ತಾನು ಸ್ವತಃ ತಲ್ಲೀನರಾಗುತಿದ್ದರು. ಅದಲ್ಲದೆ ಇತರ ವೇಷಗಳನ್ನು ಧರಿಸಿ ಇತರ ಪಾತ್ರಗಳನ್ನು ಅಭಿನಯಿಸುತಿದ್ದಾಗ, ಅವರು ಲೋಕ ವ್ಯವಹಾರದಲ್ಲಿ ಇಂತಹ ವ್ಯಕ್ತಿ ಮನುಷ್ಯನೇ ಎಂದು ಗುರುತಿಸಲ್ಪಡಲು ಅನ್ಯ ಹೊಸಬರಿಗೆ ಕಷ್ಟಸಾಧ್ಯವಾಗುತ್ತಿತ್ತು. ಅಷ್ಟು ಚೆನ್ನಾಗಿ ಆಯಾ ಪಾತ್ರವನ್ನು ಆಯಾ ಪಾತ್ರಕ್ಕೆ ಅನುಗುಣವಾದ ನಡೆನುಡಿ ಅಭಿನಯಾದಿಗಳಿಂದ ವರ್ತಿಸುತಿದ್ದರು. ಇವೆಲ್ಲಾ ಕಾರಣಗಳಿಂದ ಪಂಜೆಯವರು ಶ್ರೇಷ್ಠವರ್ಗದ ನಟರಾಗಿದ್ದರೆಂದು ಖಂಡಿತವಾಗಿ ಹೇಳಬಹುದು. ಈ ರೀತಿ ಶ್ರೇಷ್ಠವರ್ಗದ ನಟನಾಗಬೇಕಾದರೆ ಎಂತಹ ಅಭಿನಯ ಶಕ್ತಿ, ವಾಕ್ಪಟುತ್ವ, ಶಬ್ದಚಾತುರ್ಯ, ಬುದ್ಧಿವಂತಿಕೆ, ಮತ್ತು ಅಭಿನಯ ಕಲೆಯಲ್ಲಿ ಎಷ್ಟರಮಟ್ಟಿನ ಸುಶಿಕ್ಷಣ ಅತ್ಯಾವಶ್ಯಕವಾಗಿವೆಯೋ ಅವೆಲ್ಲವೂ ಪಂಜೆಯವರಲ್ಲಿ ಇದ್ದವು. ಅವರ ಅಭಿನಯಾದಿಗಳನ್ನು ನೋಡಿ ಪ್ರಸಿದ್ಧಿಗೊಂಡ ವರದಾಚಾರ್ಯರ ನೆನಪು ಪದೇ ಪದೇ ಆಗುತಿತ್ತು.

# ತಂದೆ ಶಿಕ್ಷಕರಾಗಿ

**(ಲೇಖಕಿ:- ಶಾಂತಾ)**

ನಮ್ಮ ತಂದೆ ನನಗೆ ಗಣಿತ ಶಿಕ್ಷಣವನ್ನು ತೊಡಗಿದ್ದಾಗ ಅವರು ತೋರಿಸುತ್ತಿದ್ದ ಉತ್ಸಾಹ,ಆಸಕ್ತಿಗಳೆರಡೂ ಅತಿಶಯವಾದುವು; ಈಗೇನೋ ಅವನ್ನು ನೆನೆದು ನನಗೆ ವಿಸ್ಮಯವಾಗುತ್ತಿದೆ. ಆದರೆ ಅವರು ಕಲಿಸುತ್ತಿರುವ ದಿನಗಳನ್ನು ನೆನೆದರೆ, ಇಷ್ಟೊಂದು ಆಸಕ್ತಿ, ಉತ್ಸಾಹ-"ಅತಿ"ಯಾಗಲಿಲ್ಲವೇ ಎಂದು ನನ್ನೊಳಗೊಳಗೆ ಅನಿಸಿರಬೇಕು.

ನನಗೆ ಗಣಿತವನ್ನು ವಿಶೇಷವಾಗಿ ಕಲಿಸಲು ನನ್ನ ತಂದೆ ತೊಡಗುವ ಮೊದಲೇನೇ ಅವರು ನನಗೆ ಶಿಕ್ಷಕರಾಗಿದ್ದರೆಂದು ಎಳೆಯಳಾದ ನನಗೇ ತಿಳಿದಿರಲಿಲ್ಲ. ಆ ದಿನವನ್ನು ನಾನು ನೆನೆದಾಗ—ಅಸ್ಪಷ್ಟವಾಗಿ ನನಗೆ ಹೊಳೆಯುವ ಚಿತ್ರವೆಂದರೆ—ನಾನು ಮೂರನೆಯ ತರಗತಿ ದಾಟಿರಬಹುದಾದ ಪ್ರಾಯವದು; ಆಗ ಅವರು ನಮ್ಮ ಹಳೆ ಮನೆಯ ಜಗುಲಿಯಲ್ಲಿ ಕುಳಿತು-ನನಗಾಗಿ ಹಾಡತೊಡಗಿದುದು; ನಾನು ಆ ಹಾಡುಗಳನ್ನು ಅಷ್ಟೊಂದು ಮೆಚ್ಚಿದುದು, ನೆನಪಿಗೆ ಬರುತ್ತದೆ. ಅವರು ನನಗಾಗಿ ಹೊಸ ಹೊಸ ಹಾಡನ್ನು ಕಟ್ಟುತ್ತಿದ್ದಂತೆ ನೆನಪು. ಉದಾಹರಣೆಗಾಗಿ ನಮ್ಮ ನೆರೆಮನೆಯ ಡಾಕ್ಟರ ಮುಂಡ್ಕೂರು ಶಿವರಾಯರು ಕುದುರೆಗಾಡಿಯಲ್ಲಿ ಕುಳಿತು ನಮ್ಮ ಮನೆಯನ್ನು ದಾಟಿ ಸರಿದರೆಂದರೆ ಅವರು ಉಲ್ಲಾಸಕರವಾಗಿ--

ಜೋಡು ಕುದುರೆ ಬಂಡಿಯ ಮೇಲೆ
ನೋಡು ಶಿವರಾವ್ ಬರುತಾರೆ.....

ಎಂದೆನ್ನ ತೊಡಗಿದರೇ. ಆ ಹಾಡಿಗೆ ಇನ್ನೂ ಚರಣಗಳಿರಬೇಕು; ನನಗೆ ಅವು ನೆನಪಿಗೆ ಬರಲಾರವು. ಆದರೆ ಆ ಹಾಡಿನ ನಾದ ತರಂಗ ಇಂದಿಗೂ ನನ್ನ ಸ್ಮರಣೆಯಲ್ಲುಳಿದಿದೆ. ಇದೊಂದೇ ಹಾಡಲ್ಲ ಅವರನ್ನುತ್ತಿದ್ದುದು. ಆಗಾಗ ಸ್ಫೂರ್ತಿ ಬಂದಾಗ, ಅಷ್ಟೊಂದು ಲಘುವೃತ್ತಿಯಿಂದ ಅವರು ನನಗಾಗಿ ಹಾಡುತ್ತಿದ್ದುದರಿಂದ-ನನಗೂ ತೀರ ಸ್ವಾಭಾವಿಕವಾಗಿ ಆ ಹಾಡುಗಳು ಬಾಯಿಗೆ ಬರತೊಡಗಿದುವು. ಆ ದಿನಗಳಲ್ಲಿ ನಮ್ಮ ತಂದೆ, ತಾವೇ ಕೂಸಾಗಿ ನನ್ನ ಆಟದ ಜತೆಗಾರರಾಗುತ್ತಿದ್ದರು. ನಾವು ಹೀಗೆ ಜತೆ ಸೇರಿ ಆಡಿದ ಆಟಗಳೆಷ್ಟೊ. ವಯಸ್ಸಿನ ಅಂತರ ನಮ್ಮಿಬ್ಬರಲ್ಲೂ ಆ ಗಳಿಗೆಗಳಲ್ಲಿ ಮಾಯವಾಗಿಬಿಡುತ್ತಿದ್ದುವು.

ಈ ಕಾಲ ಸರಿಯುವುದರೊಳಗಾಗಿ ಅವರು ನನ್ನ ಪಾಲಿನ ಕತೆಗಾರರಾದರು. ಅವರ ಕತೆಗಾರಿಕೆಯು ನನ್ನನ್ನು ಊಹಾರಾಜ್ಯದಲ್ಲಿ ಮಂತ್ರಮುಗ್ಧವಾಗಿ ನಿಲ್ಲಿಸುತ್ತಲಿತ್ತು. ಆ ಗುಂಗು ನನಗಿಂದೂ ತೊಲಗಲೊಲ್ಲದು. ನಾನೆಷ್ಟೋ ಕತೆಗಾರರನ್ನು ಕೇಳಿದ್ದೇನೆ; ನಮ್ಮ ತಂದೆ ಅವರನ್ನು ಮೀರಿಸಿದವರು. ಅವರೇನಾಗಿದ್ದರು, ಏನಾಗಿರಲಿಲ್ಲ! ಅವರ ಬತ್ತಳಿಕೆಯಲ್ಲಿ ಎಷ್ಟು ಕತೆಗಳಿದ್ದುವೆನ್ನಲಾರೆ—ಎಂಥೆಂಥವು! ಅಜ್ಜಿಕತೆಗಳು, ದಂತಕತೆಗಳು, ಮಹಾಭಾರತ ರಾಮಾಯಣದ ಹಿರಿಯ ಕತೆಗಳು—ತಮ್ಮ ಬಂಟ್ವಾಳದ ಬಾಲ್ಯದ ಕತೆಗಳಿಂದ ತೊಡಗಿ, ಸಾಹಿತ್ಯ ಸಮುದ್ರದಿಂದಾರಿಸಿ ತಂದ ಕಥಾರತ್ನಗಳೂ-ಎಲ್ಲವೂ ಇದ್ದುವು. ಕತೆ ಹೇಳುವುದಾದರೂ ಹೇಗೆ? ಅಡೆತಡೆಯಿಲ್ಲದೆ ನೀರಲ್ಲಿ ಮೀನು ಈಸುವಷ್ಟು ಸುಲಭ ಅವರ ವಾಕ್‌ಸರಣಿ. ಕಥಾ ವ್ಯಕ್ತಿಗಳಲ್ಲಿ ತಲ್ಲೀನರಾಗಿ ಅನುತಾಪ ಕೆರಳಿಸುವ ಶಕ್ತಿ; ಎಲ್ಲಿ ರಸೋನ್ನತಿಯಿದೆಯೆಂದು ತೋರಿಸುವ ಶಕ್ತಿ-ಎಲ್ಲವೂ ಸೇರಿಕೊಂಡುದರಿಂದ, ಶ್ರೋತಾರನಾದ ಮಗು ಅವರ ನಗುವಿನೊಡನೆ ನಗುವನ್ನೂ, ಅಳುವಿನೊಡನೆ ಅಳುವನ್ನೂ, ಭಯದೊಡನೆ ಭಯವನ್ನೂ ಮೈಮರೆತು ವ್ಯಕ್ತ ಮಾಡಲೇಬೇಕು. ಅವರ ಮುಖ, ಮೈ, ಕಂಠ ಪ್ರತಿಯೊಂದೂ ಮಾತನ್ನೂ ಬಿಂಬಿಸುವ ಶಕ್ತಿಯುಳ್ಳವಾಗಿದ್ದುವು. ಅವರು ಯಥಾಕ್ರಮದ "ಒಂದಾನೊಂದು ಕಾಲದಲ್ಲಿ"—ಎಂದರೇನೇ ಸಾಕು-ಮುಂದಿನ ಆವರಣ ಬದಲಿಸಿ, ಮೌನವಾಗಿ, ನಿರೀಕ್ಷೆಯಿಂದ ಕಿವಿ ನಿಡಿಯಬೇಕು. ಅಜ್ಜಿಕತೆಗಳ ರಾಜ್ಯ ಬರಿಯ ಭಾರತೀಯವಾದುವಲ್ಲ. ದೇಶವಿದೇಶಗಳ ಅದ್ಭುತ ರಮ್ಯ ಕತೆಗಳನ್ನು ಅಳವಡಿಸಿಕೊಂಡಿದ್ದುವು. ಹಂದಿಗಳು, ಕಪ್ಪೆಗಳು,ಕರಡಿಗಳು ಬೇಕಾದಂತೆ ರಾಜಕುಮಾರರಾಗುತ್ತಿದ್ದುವು. ಅವರು ನಮ್ಮ ನಾಡಿನ ಪುರಾಣ ಕತೆಗಳ ಸವಿಯನ್ನೂ ನನಗುಣಿಸಿದರು.

"ವಿಶ್ವಾಮಿತ್ರ ಋಷಿ ಕಾಷಾಯ ಧರಿಸಿ, ಬೆಳೆಸಿದ ಗಡ್ಡವುಳ್ಳವನಾಗಿ, ದಶರಥನ ಅರಮನೆಯನ್ನು ಹೊಕ್ಕು—ಮಕ್ಕಳನ್ನು ಕೊಡೆಂದು ಬೇಡಿದ" ಘಟನೆಯಿಂದ ರಾಮಾಯಣದ ಬೊಕ್ಕಸಕ್ಕೆ ಅವರು ಕೈಯಿಕ್ಕಿದರು. ಅಂದಿನಿಂದ ತೊಡಗಿತು ರಘುವಂಶದ ಕಥಾನಕ. ಅದು ಮುಗಿದೊಡನೆ ಕೃಷ್ಣನ ಬಾಲಲೀಲೆಗಳು, ಗೋಕುಲದ ತುಂಟಾಟಗಳು, ಅಲ್ಲಿಂದ ಕ್ರಮೇಣ ಕುರುರಾಜರುಗಳ ಮಹಾಯುದ್ಧ-ಇವನ್ನೆಲ್ಲ ಬಣ್ಣಿಸುತ್ತಿದ್ದರು. ಒಮ್ಮೊಮ್ಮೆ ನನ್ನನ್ನು ನಡು ನಿದ್ರೆಯಿಂದ ಎಚ್ಚರಿಸಿ--ದಶಾವತಾರ ಆಟದ ದೃಶ್ಯವನ್ನು ತೋರಿಸುವುದಕ್ಕೂ ಕರೆದೊಯ್ದುದುಂಟು. ಆ ದೃಶ್ಯಗಳೆಲ್ಲವು ನನ್ನ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುವಂತಾಯಿತು.

ಅವರು ಉದ್ದೇಶಪೂರ್ವಕವಾಗಿ ನನ್ನಿಂದ ಓದಿಸಿ,ಬರೆ

ಯಿಸಿದವರಲ್ಲ. ಆ ಶುಕ ಶಿಕ್ಷಣಪದ್ಧತಿಯೇ ಅವರಿಗಾಗದು. ಅಕ್ಷರಮಾಲೆಯ A. B. C. ಎಂಬ ಪಠಣಾವಳಿಯು ಅವರಿಗೆ ಅರ್ಥಶೂನ್ಯವಾಗಿತ್ತು. ಯಾಂತ್ರಿಕ ಶಿಕ್ಷಣ ಅವರ ದಾರಿಯಲ್ಲವೇ ಅಲ್ಲ. ನಾನು ಇಂಗ್ಲಿಷು ವಾಕ್ಯಗಳನ್ನು ಓದಲುಸಮರ್ಥಳಾದುದನ್ನು ಕಾಣುತ್ತಲೆ,–ನನ್ನ ಮುಂದೆ ಅವರು ಹಲವಾರು ಬಗೆಯ ಪುಸ್ತಕಗಳನ್ನು ತಂದು ಚೆಲ್ಲಿದರು—ಕಥಾನಕಗಳು, ಚಿತ್ರ ಪುಸ್ತಕಗಳು, ಲಾಲಿಹಾಡುಗಳು, ಕವನ ಪುಸ್ತಕಗಳು. ಇಷ್ಟನ್ನು ನನ್ನ ಕೈಮೇಲಿರಿಸಿ ಸುಮ್ಮನಾದರು. ಆ ಪುಸ್ತಕ ರಾಜ್ಯದ ಸಂಶೋಧನೆ ನಾನೇ ಮಾಡಬೇಕು ಎಂಬುದು ಅವರ ಆಸೆಯಾಗಿತ್ತು. ಅದನ್ನೆಲ್ಲ ಮರೆಯಾಗಿ ನೋಡುತ್ತಿದ್ದು-ನಾನು ಆಸಕ್ತಿ ತೋರುತ್ತಿದ್ದೇನೆ, ಪುಸ್ತಕಗಳಿಂದ ಸಂತೋಷ ಪಡೆಯುತ್ತಿದ್ದೇನೆ ಎಂಬುದನ್ನು ತಿಳಿದ ಬಳಿಕವೇ–ನನ್ನ ಸುಖಾನುಭವಕ್ಕೆ ಪಾಲುಗಾರರಾಗತೊಡಗಿದರು. ಅನಂತರ ನಾವು ಜತೆಯಲ್ಲಿ ಓದತೊಡಗಿದೆವು. ಟಾಗೂರರ ಕಾಬೂಲಿವಾಲ ಕತೆಯನ್ನೋದಿ ಜತೆಯಲ್ಲಿ ಕಂಬನಿ ಮಿಡಿದೆವು. ಡಾನ್ ಕ್ವಿಕ್ಸಟನ ಅಪಸಾಹಸಗಳನ್ನು ಕಂಡು ಮೂಳೆ ಮುರಿಯುವಷ್ಟು ನಕ್ಕೆವು. ಅಲ್ಲಿಂದ ಶೇಕ್ಸ್‌ಪಿಯರನ ತನಕವೂ ಸಾಗಿದೆವು. ತಂದೆ ನನ್ನಿಂದ ಮೂಲ ಗ್ರಂಥಗಳ ಭಾಗಗಳನ್ನು ಓದಿಸುತ್ತಿದ್ದರು. ಒಮ್ಮೊಮ್ಮೆ ನಾನು ಓದುತ್ತಿದ್ದೆ–ಎಲ್ಲರಿಗೂ ಕೇಳಿಸುವಂತೆ; ತಂದೆ ಜಗುಲಿಯುದ್ದಕ್ಕೂ ಶತಪಥಹಾಕುತ್ತ ಅದನ್ನು ವಾಕ್ಯವಾಕ್ಯವಾಗಿ ಕನ್ನಡಿಸುತ್ತಿದ್ದರು; ನಮ್ಮ ತಾಯಿ ಕುಳಿತು ಕಿವಿಗೊಡುತ್ತಿದ್ದರು. ನಮ್ಮ ತಂದೆ, ಇನ್ನೇನೂ ಮಾಡದೆಯೆ ಬರಿಯ ಕತೆ ಹೇಳಿ ಮುಗಿಸಿದ್ದರೂ, ನನಗೆ ಪರಮ ಗುರುವೊಬ್ಬ ದೊರೆತಂತಾಗುತ್ತಿತ್ತು–ಎಂಬುದೇ ನನ್ನ ಭಾವನೆ.

ನನ್ನ ಒಂದನೆಯ ತರಗತಿಯಲ್ಲಿ ಕುಳಿತೊಂದು ಮಗುವಿನ ನೆನಪು ಈಗಲೂ ಆಗುತ್ತಿದೆ. ಆ ಮಗು ಬೋರ್ಡಿನ ಮೇಲಿನ ಅಂಕೆಯೊಂದನ್ನು ಬೆರಗಿನಿಂದ ನೋಡಿ ಮುರುಕು ಮುಖಮಾಡಿ ಕುಳಿತಂಥ ಚಿತ್ರ. ನಾನೇ ಅಂಥ ಸಂದರ್ಭಗಳಲ್ಲಿ ಬರೆದು ಉಜ್ಜಿ–ರಬ್ಬರಿನಿಂದ ಕಾಗದದ ಹಾಳೆಯನ್ನೇ ತೂತು ಕೊರೆದ ನೆನಪು. ಆದರೂ ಆ ಬರಡು ಪಾಠ ಮುಗಿಯದು. ಎಷ್ಟು ಬೇಗ ಹೊತ್ತಾಗಿ ಮನೆ ಸೇರಿಯೇನು ಎಂಬ ಚಿಂತೆ ನನಗೆ. ಆ ಉಪಾಧ್ಯಾಯರೋ ಆ ದಿನ ನನ್ನೊಡನೆಯೇ ನಮ್ಮ ತಂದೆಯವರಿಗೊಂದು ಚೀಟನ್ನು ಬರೆದು ಕಳುಹಿಸಿದರು. ಅಂದೇ ನನ್ನ ಗಣಿತ ಶಿಕ್ಷಣ ತೊಡಗಿದ್ದು. ಆದರೂ ಗಣಿತ ಪಾಠದಿಂದ ನನಗೆ ಸಂತೋಷವಾಗುತ್ತಿತ್ತೆಂದರೆ–ಸುಳ್ಳನ್ನು ಹೇಳಿದಂತಾದೀತು. ನನಗದು ರುಚಿಸುತ್ತಿರಲಿಲ್ಲ. ಕಾರಣ–ನಾನೇ. ಏಕೆಂದರೆ ಅಂಕೆಸಂಖ್ಯೆಗಳೆಂದರೆ ನನಗೆ ಒಗ್ಗವು. ಅವರಿಗೂ ಅದು ತಿಳಿದಂತಿತ್ತು. ಗಣಿತ ಆದಷ್ಟು ಹಿತವಾಗುವಂತೆ ಅವರು ಪ್ರಯತ್ನಿಸಿದರು. ಮಣಿ ಮೊದಲಾದ ಆಟದ ಸಲಕರಣೆ ತಂದುಕೊಟ್ಟರು. ಮಣಿಗಳನ್ನು ಎಣಿಸಲು ಹೇಳಿದರು; ನನ್ನ ಚಂಡು ಎಷ್ಟು ಬಾರಿ ಪುಟಿಯಿತೆಂದು ಕೇಳಿದರು; ಅವರ ಬೆನ್ನಿನ ಮೇಲೆ ಸವಾರಿ ಮಾಡಿದುದರ ಲೆಕ್ಕವನ್ನು ಕೇಳಿದರು. ಹಾರಿದ್ದೆಷ್ಟು-ಬಿದ್ದದ್ದೆಷ್ಟು–ಎಂದು ಕೇಳಿ ಮೆಲ್ಲನೆ ನನಗೆ ಗಣಿತದ ದಾರಿತೋರಿಸಿದರು. ಅದೂ ಸುಲಭವಾಗಲಿಲ್ಲ. ಪುಸ್ತಕ, ಪೆನ್ಸಿಲುಗಳನ್ನು ಗಾಳಿಗೆ ಎಸೆದು ಆಟಕ್ಕೆ ಓಡುವ–ಎನಿಸುವ ಮನ ನನ್ನದಾಗಿತ್ತು. ನಾನಾಗ ಹಟಮಾರಿಯಾಗಿ ಮುಟ್ಟಿದರೇ ಮುನಿಯುತ್ತಿದ್ದೆ. ನಮ್ಮ ತಂದೆಯವರ ತಾಳ್ಮೆಯನ್ನೆಲ್ಲ ನಾನು ಒರೆಗೆ ಹಚ್ಚಿರಬೇಕು. ಆದರೆ ಬಹುವಾಗಿ ನಮ್ಮಲ್ಲಿ ಗೆಳೆತನ ನೆಲಸಿತ್ತು; ನನಗೆ ಇನ್ನೊಂದು ಹೊಸ ಕತೆಯ ಆಸೆತೋರಿಸಿ–ಕೆಲಸಕ್ಕೆ ಹಚ್ಚುತ್ತಿದ್ದರು. ಮುಂದೆ–ನಿರ್ದಿಷ್ಟವಾದ ಗಣಿತದ ಸಮಸ್ಯೆಗಳು ಬಂದಾಗ, ಈ ರೀತಿಯು ತೊಡಕಾಗುತ್ತಿರಲಿಲ್ಲ; ಅದು ಹೇಗೆ? ಎಂಬ ಆಸಕ್ತಿ ಹುಟ್ಟಿ ಪ್ರಶ್ನೆಗೆ ಉತ್ತರ ಹುಡುಕುವ ಹಟ ನನಗೂ ಬರುತ್ತಿತ್ತು.

ಶಾಲೆಯಲ್ಲಿ ನಮಗೆ "ನೋಟ್ಸು"ಗಳ ಹೊರೆಯೋ ಹೊರೆ! ಇನ್ನು ನಕ್ಷೆಗಳ ವಿಚಾರ–ಅದರ ಮೇಲೆ ಬರೆಯುವ ದಿಕ್ಸೂಚಿ—ಅದರ ವಿಷಯವಾಗಿ ನೆನಪಿಡಬೇಕಾದ ಸಂಗತಿಗಳು—ಮೇಲಿನ ಮುಳ್ಳು ಉತ್ತರ, ಕೆಳಗಿನ ಮೊನೆ ದಕ್ಷಿಣ, ಎಡವೇ ಪಶ್ಚಿಮ, ಬಲವೇ ಪೂರ್ವವೆಂಬ ವಿಚಾರ, ಸೂರ್ಯ ಮೂಡಣದಲ್ಲಿ ಮೂಡಿ ಪಡುವಣದಲ್ಲಿ ಮುಳುಗುವನೆಂಬ ಸಂಗತಿ (ಅದೂ ಎಷ್ಟು ದೂರದಿಂದೆನ್ನುತ್ತೀರಿ–೯೨ಮಿಲಿಯ ಮೈಲು), ತನ್ನ ಅಚ್ಚಿನಲ್ಲಿ ಭೂಮಿ ತಿರುಗುವ ವಿಚಾರ, ಭೂಮಿ ಸೂರ್ಯನ ಸುತ್ತ ಬರುವ ವಿಚಾರ–ಇವನ್ನೆಲ್ಲ ನಾವು ಕಂಠಪಾಠಮಾಡಬೇಕಿತ್ತು ನಮ್ಮ ಮುಕ್ತಿ ಸಾಧನೆಗೆ. ಆದರೆ ನಮ್ಮ ತಂದೆಗೆ ನಾವು ಕಂಠಪಾಠಮಾಡಿದ ಇಂಥ "ಕುಂಬಳಕಾಯಿ" ಗಳೆಂದರೆ ಮೆಚ್ಚುಗೆಯಿಲ್ಲ. ಬದಲು ಅವರು ನನ್ನನ್ನು ಅಡುಗೆಮನೆಗೆ ಒಯ್ದು ಮೂಡಣದ ಬಾಗಿಲು ತೆರೆದು, ಮೂಡುವ ಸೂರ್ಯನನ್ನು ತೋರಿಸಿದರು. ಹಾಗೆಯೇ ಸಮಯ ಸಂದರ್ಭ ನೋಡಿ ದಿಕ್ಕಿನ ವಿಚಾರ, ಸೂರ್ಯನ ವಿಚಾರ ತಿಳಿಸಿಕೊಟ್ಟರು. ನಮ್ಮ ಅಡುಗೆ ಮನೆಯ ಕಡೆಯಿಂದ ಒಳಕ್ಕೆ ಬರುವ ಸೂರ್ಯರಶ್ಮಿ—ಎಡಬಲಗಳಿಗೊತ್ತಿದ್ದನ್ನು ಆಗಾಗ ತೋರಿಸುತ್ತ ಸೂರ್ಯನ ಗತಿಯನ್ನು ಸೂಚಿಸುತ್ತಿದ್ದರು. ಅವರಿಗೆ ನಕ್ಷೆಗಳೆಂದರೆ ಏತಕ್ಕೋ ಪಂಚಪ್ರಾಣ. ನನಗೂ ಹಲವಾರು ದೇಶವಿದೇಶಗಳ ನಕ್ಷೆಯನ್ನು ತಂದು ತೋರಿಸತೊಡಗಿದರು. ಕೆಲವು ಬಾರಿ ನನ್ನನ್ನು ಸೈಂಟ್ ಎಲೋಸಿಯಸ್ ಕಾಲೇಜಿಗೆ ಕರೆದೊಯ್ದು, ಅಲ್ಲಿರುವ ದೊಡ್ಡ ಭೂಗೋಲವನ್ನು (globe) ತೋರಿಸಿ, ಅದರ ಮೇಲಿನ ಭೂಖಂಡಗಳ ಪರಿಚಯಮಾಡಿಕೊಡುತ್ತಿದ್ದರು. ಹಾಗೆಯೇ ದಾರಿಯಲ್ಲಿ ಸಾಗುತ್ತ—ಪಕ್ಕನೆ

ಒಂದು ಕಡೆ ನಿಂತು, ದಾರಿಯ ಮರಳಿನಲ್ಲಿ ಬೆರಳಿಂದ ಗೀಚುತ್ತ—ಒಂದು ನದಿಯ ಗತಿಯನ್ನೋ, ಊರಿನ ತಾಣ ವನ್ನೋ ಅಂಕಿಸಿದರೂ ಅಂಕಿಸಿದರೇ. ನನಗೋ, ತುಂಬ ನಾಚಿಕೆ—ಆಚೀಚೆ ಸರಿಯುವವರು ಕಂಡು ಏನು ತಿಳಿದು ಕೊಂಡಾರೆಂದುಕೊಂಡು. ಅವರೋ, ಅದನ್ನು ಗಮನಿಸ ಲಾರದ ವಿಸ್ಮೃತರು.

ಕತ್ತಲು ಹರಿಯುತ್ತ ಮನೆಗೆ ಬರುತ್ತಿರುವಾಗಲೂ ಹಾಗೆಯೇ. ಥಟ್ಟನೆ ದಾರಿಯಲ್ಲಿ ನಿಂತು, ಕೈಗೋಲಿನಿಂದ ಬಾನನ್ನು ತೋರಿಸಿ ನಕ್ಷತ್ರ, ನಕ್ಷತ್ರಪುಂಜಗಳನ್ನು ತೋರಿಸ ತೊಡಗಿದುದೂ ಉಂಟು.

ನೆನವರಿಸಿಕೊಂಡರೆ—ನನ್ನ ತಂದೆ ನನಗೆ ಅಭಿರುಚಿ ಯನ್ನುಂಟುಮಾಡಲು ಪ್ರಯತ್ನಿಸದ ವಿಷಯಗಳೇ ಇರಲಿಲ್ಲ ಎನಿಸುತ್ತದೆ. ಬೆಳಗ್ಗೆ ನಾನು ಗಣಿತ ಅಭ್ಯಾಸ ಮಾಡಬೇಕೆಂ ಬುದು ಅವರ ಹಟ; ಆಗಲ್ಲವೇ ಮನಸ್ಸು ಹಚ್ಚಗೂ ತಿಳಿಯೂ ಆಗಿರುವುದು. ಅದು ನನಗೆ ತುಸು ಕಷ್ಟದ್ದೆಂಬುದರಿಂದ ಹಾಗೆ ಒತ್ತಾಯಿಸುತ್ತಿದ್ದರು. ಉಳಿದ ವಿಷಯಗಳನ್ನು ಕಲಿಸಿ ಕೊಡಲು ಸಮಯದ ಗೊತ್ತುಗುರಿಯಿಲ್ಲ; ನಮಗೆ ಮನಸ್ಸು ಬಂದಾಗಲೆಲ್ಲ ಅದಕ್ಕೆ ಸಮಯವೇ. ನನ್ನ ಉತ್ಸಾಹ ಉಳಿ ಯುವ ವರೆಗೂ ಪಾಠ ನಡೆಯುತ್ತಿತ್ತು. ನಾನೇನು ಪ್ರಶ್ನಿ ಸಿದರೂ ಅದಕ್ಕೆ ತಕ್ಕ ಉತ್ತರವನ್ನು ಕೊಡುತ್ತಿದ್ದರು. ಅವರಿ ಗೇನೆ ತಿಳಿಯದೆ ಹೋದಲ್ಲಿ, ಅದನ್ನು ಬಲ್ಲವರಿಂದ ತಿಳಿಸುವ ತನಕ ಸುಮ್ಮನಿರಲಾರರು. ಅವರಿಗೆ ಚಿತ್ರ ಬರೆಯಲುಬಾರ ದುದರ ಬಗ್ಗೆ ತುಂಬ ವ್ಯಸನ. ಅದು ಬಂದಿದ್ದರೆ ಶಿಕ್ಷಣಕ್ಕೆ ಮತ್ತಷ್ಟು ಅನುಕೂಲವೆಂದು ತಿಳಿದಿದ್ದರು. ಹಾಗೆಯೇ ವಿದ್ಯಾ ವಂತನೆನಿಸಿದವನಿಗೆ ಒಳ್ಳೆಯ ಬರೆಹ ಬರಬೇಕೆಂದು ಅವರ ತಿಳಿವು. ಬರಿದೆ ಗೀಚಿದರೆ ಅವರಿಗಿಷ್ಟಿಷ್ಟೂ ಸಮಾಧಾನ ವಾಗದು; ಚೊಕ್ಕವಾಗಿ ಬರೆಯಬೇಕೆನ್ನುವವರು ಅವರು.

ನಮ್ಮ ತಂದೆ ನನಗೆ ಹೇಳಿಕೊಟ್ಟ ಅತಿ ಮಹತ್ವದ ಪಾಠವೇನೆಂದು ಕೇಳಿದರೆ-ಅದು ಬಾಳುವ ವಿಚಾರದಲ್ಲೇನೆ. ಆಗಾಗ ಉಪದೇಶ, ಉಪನ್ಯಾಸಗಳಿಂದ ಕಲಿಸಿದ ಪಾಠ ಮಾತ್ರ ಅದಲ್ಲ. ತನ್ನ ನಡವಳಿಕೆಯಿಂದ ಕಲಿಸಿದ ಪಾಠವದು. ಅವರಿಗೆ ಕಪಟರಹಿತವಾದ, ಸರಳವಾದ, ನಿಷ್ಕಳಂಕವಾದ ನಡತೆಯಲ್ಲಿ ಅಗಾಧವಾದ ಮಮತೆಯಿತ್ತು. ಆದುದರಿಂದಲೇ ಬಾಹ್ಯಾಡಂಬರದ ವಿಚಾರದಲ್ಲಿ, ಉಡುಗೆ ತೊಡುಗೆ ಅಲಂ ಕಾರಗಳ ಮೆರುಗಿನ ಮೇಲೆ ತುಂಬ ತಿರಸ್ಕಾರವಿತ್ತು. ಅವರ ಜೀವನದ ರೀತಿಗಳಂತೂ ತೀರ ಸರಳವಾಗಿದ್ದುವು; ಅವರಂತೆ ನಾವಾದರೂ ಇರಬೇಕೆಂದು ಬಯಸುತ್ತಿದ್ದರು. ಆದುದರಿಂದ ಲೇನೆ ಅವರಿಗೆ ವಕ್ರಮಾರ್ಗ, ಒಳಸಂಚುಗಳೆಂದರೆ ಅಸಹ್ಯ ವಾಗುತ್ತಿತ್ತು. ನಾನೆಲ್ಲಾದರೂ ಒಂದು ಸುಳ್ಳಾಡಿದರೆ, ಅವರ ವಿಶ್ವಾಸಕ್ಕೆ ವ್ಯತಿರಿಕ್ತವಾಗಿ ನಡೆದರೆ—ಅವರಿಗೆಷ್ಟೊಂದು ನೋವಾಗುತ್ತಿತ್ತೆಂದು ಬಲ್ಲೆ. ಸುಳ್ಳು, ವಂಚನೆ ಅವರಿಗಾಗದೇ ಆಗದು. ಆತ್ಮಪತಿಷ್ಠೆ, ಪುಸ್ತಕ ಪಾಂಡಿತ್ಯ, ಕೆಲಸಕ್ಕೆ ನೈಗಳ್ಳ ತನವೆಂಬುವೂ ಅವರಿಗೆ,ಸಲ್ಲದವು. ಇಂಥ ದುರ್ಗುಣಗಳು ತಮ್ಮ ಮನೆಮಕ್ಕಳಲ್ಲಿ ಬಾರದಂತೆ ವಿಚಾರ ವಹಿಸುತ್ತಿದ್ದರು. ಅವರು ಅಂದು ಕಲಿಸಿದ ಪಾಠ ಇಂದು ನಮ್ಮ ಜೀವನಕ್ಕೆ ವಿಶೇಷ ನೆರವಾಗಿದೆ. ಹಣ, ಸೇವಕರು ಸುಲಭಸಾಧ್ಯರಲ್ಲ. ಅವಿಲ್ಲದೆ ಬದುಕನ್ನು, ಸರಿಹೋಗುವಂತೆ ಮಾಡುವ ತಾಳ್ಮೆ ನೋಟಗಳನ್ನೇ ಅವರು ನಮಗೆ ಕಲಿಸಿದರೆಂದೇ ಉಪಕಾರ ವಾಯಿತು.

ನಮ್ಮ ತಂದೆ ಹಾಸ್ಯಪ್ರಿಯರೆಂಬುದು ಲೋಕ ವಿದಿತ. ತಾವೂ ಬಾಯ್ತುಂಬ ನಕ್ಕರು; ನಮ್ಮನ್ನೂ ನಗುವಿನ ಪ್ರಿಯರ ನ್ನಾಗಿ ಮಾಡಿದರು. ಪ್ರಾಯಶಃ ಬಲು ಹಿಂದಿನಿಂದಲೂ 'ನಗು'ವಿನ ಮಹಾತ್ಮೆ ಬಲ್ಲವರವರು. ಎಷ್ಟೋ ಬಾರಿ ಪತ್ರಿಕೆ ಗಳನ್ನು, ನಿಯತಕಾಲಿತಗಳನ್ನು ತೆರೆದು—ಅಲ್ಲಿನ ಹಾಸ್ಯದ ತುಣುಕುಗಳ ಓತಣವನ್ನು ಆಗಾಗ ಮಾಡಿಸುತ್ತಿದ್ದರು. ಪರಿ ಪೂರ್ಣ ನಗು ಅವರದು. ಅವರಿಗೆ ಶಿಸ್ತೆಂದರೆ ಪ್ರೀತಿಯೆಂದ ರಿತ ನಾನು, ಅವರ ಮನಸ್ಸಿನ ಏರಿಳಿತಗಳ ವಿಚಾರ ಜಾಗರೂಕ ಳಾಗಿರುತ್ತಿದ್ದೆ. ಅವರ ಸುತ್ತಣ ವಾತಾವರಣ ಕಂಡೇ, ಅವರು ನೊಂದಿರುವರೆಂದು ತಿಳಿದುದಾದರೆ, ನಾನೇ ಕಣ್ಮರೆಯಾಗು ತ್ತಿದ್ದೆ. ಕೆಲವೊಮ್ಮೆ ಅಂಥ ವೇಳೆ ಪರಿಹಾಸ್ಯದ, ಸರಸದ ಮಾತನ್ನಾಡುತ್ತಿದ್ದೆ. ಅಂಥ ವೇಳೆಯಲ್ಲಿ ಬಹುವಾಗಿ–ಅವರ ನಗುವಿನ ಕಾರಂಜಿ ಪುಟಿಯುತ್ತಿತ್ತು. ಮನದ ಮ್ಲಾನತೆ ಮಾಯವಾಗುತ್ತಿತ್ತು. ಅವರನ್ನು ಕುರಿತಾಗಿ ಹಾಸ್ಯಮಾಡಿ ದರೂ ನಗುವವರೇ ಅವರು. ಮನೆಯಲ್ಲಿ ತೀರ ಕಿರಿಯಳಾದ ನಾನು ಹಾಗೆ ಪರಿಹಾಸ್ಯ ಮಾಡಿದರೂ ನಗುವವರೇ.

— — — — — —

# ಶ್ರೀ ಪಂಜೆಯವರ ಸ್ನೇಹಪರತೆ.

ನಮ್ಮ ಆಧುನಿಕ ಸಾಹಿತ್ಯದ ಮೊದಲ ಪೀಳಿಗೆಯ ಹಿರಿಯರಲ್ಲಿ ಒಬ್ಬರಾದ ಶ್ರೀ ಪಂಜೆ ಮಂಗೇಶರಾಯರ ಪುಣ್ಯ ಸ್ಮರಣೆಯ ಕಾರ್ಯದಲ್ಲಿ ಭಾಗಿಯಾಗುವುದು ನನ್ನ ಪಾಲಿಗೆ ಒಂದು ಭಾಗ್ಯ. ಈ ಸಂದರ್ಭದಲ್ಲಿ ನಾನು ಅವರ ಜೀವನ ದಲ್ಲಿ ಅಂತೆ ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಅವರ ವಿಶಿಷ್ಟ ಲಕ್ಷಣ ವಾಗಿದ್ದ ಸ್ನೇಹಪರತೆಯನ್ನು ಕೊಂಡಾಡಲು ಅಪೇಕ್ಷಿಸು ತ್ತೇನೆ.

ಪಂಜೆಯವರು ಈ ಶತಮಾನದ ಆರಂಭದ ವರ್ಷ ಗಳಲ್ಲೇ ಸಾಹಿತ್ಯ ಸೇವೆಯ ಧುರವನ್ನು ವಹಿಸಿ ದುಡಿಯ ತೊಡಗಿದರು. ಆದರೆ ಆಗಿನ ನಮ್ಮ ಸ್ಥಿತಿಯಲ್ಲಿ ಇಲ್ಲಿಯ ಅಲ್ಲಿಯ ಇಬ್ಬರು ಮೂವರು ಒಟ್ಟಿಗೆ ಉಳಿದ ಸಾಹಿತ್ಯ ಸೇವಕ ರಿಗೆ ತಮ್ಮ ಸುತ್ತಿನ ಹತ್ತು ಹೆಸರು ಹೊರತಾಗಿ ಕನ್ನಡದ ಇತರ ಪ್ರಾಂತಗಳ ಸಹೋದ್ಯೋಗಿಗಳ ಹೆಸರು ತಿಳಿಯುತ್ತಿರ ಲಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸೇರಿದವರ ಮಟ್ಟಿ ಗಷ್ಟೇ ಇಂಥ ಪರಿಚಯದ ಅವಕಾಶ ಇರುತ್ತಿದ್ದಿತು. ಆದರೆ ಆಗ ಪರಿಷತ್ತು ಎಲ್ಲ ಕನ್ನಡ ಪ್ರೇಮಿಗಳೂ ಕೂಡುವೆಡೆ ಎಂಬ ಭಾವನೆ ನಮ್ಮ ಜನರಲ್ಲಿ ಹರಡಿರಲಿಲ್ಲ. ಈಗಲಾದರೂ ಈ ಭಾವನೆ ನಿಜವಾಗಿ ಹರಡಿದೆ ಎಂದು ನನಗೆ ತೋರುತ್ತಿಲ್ಲ; ಆದರೆ ಆಗಿನ ದಿವಸದಲ್ಲಿ ಪರಿಸ್ಥಿತಿ ಈಗ್ಗಿಂತ ಅನ್ಯಾಯವಾಗಿ ದ್ದಿತು ಎನ್ನುವುದು ನನ್ನ ಅರ್ಥ. ಈ ಕಾರಣದಿಂದ ಪಂಜೆ ಯವರ ಹೆಸರು ಇತ್ತ ಬಹುಜನಕ್ಕೆ ಅಪರಿಚಿತ ಆಗಿದ್ದಿತು. ನಾನಂತೂ ಇವರ ಹೆಸರನ್ನು ಪರಿಷತ್ಪತ್ರಿಕೆಯಲ್ಲಿ ಒಮ್ಮೊಮ್ಮೆ ನೋಡುತ್ತಿದ್ದೆನು ಹೊರತಾಗಿ ಇವರನ್ನು ಬಹುವರ್ಷ ಕಾಣ ಲಾಗಲಿಲ್ಲ.

1925ರಲ್ಲಿ ಇರಬೇಕು, ಒಂದು ದಿನ ನಾನು ಸಂಜೆ ಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕಛೇರಿಗೆ ಏನೋ ಕೆಲಸ ಕ್ಕಾಗಿ ಹೋಗಿದ್ದೆನು. ಮೂರು ಜನ ಸ್ನೇಹಿತರು ಕುಳಿತು ಮಾತನಾಡುತ್ತಿದ್ದೆವು. ಹೊರಗಿಂದ ಶ್ರೀಮಾನ್ ವೆಂಕಣ್ಣಯ್ಯ ನವರು ಸ್ವಲ್ಪ ಸಂಭ್ರಮದಿಂದ ಒಳಕ್ಕೆ ಬಂದು, ದೊಡ್ಡವ ರೊಬ್ಬರು ಬಂದಿದ್ದಾರೆ, ಎಂದರು. ಬಂದವರು ಯಾರೆಂದು ನಮಗೆ ತಿಳಿಯದು. ದೊಡ್ಡವರು ಎಂದಾಯಿತಲ್ಲ, ಯಾರಿರ ಬಹುದೋ ಎಂದು ಎಲ್ಲರೂ ಎದ್ದೆವು. ವೆಂಕಣ್ಣಯ್ಯನವರ ಹಿಂದೆ ಗಿಡ್ಡನೆಂದು ತೋರಿದ ಮೂರ್ತಿಯ ಪ್ರಸನ್ನ ಮುಖದ ಮಹನೀಯರೊಬ್ಬರು ಒಳಗೆ ಬಂದರು. ವೆಂಕಣ್ಣಯ್ಯನವರು ಅವರನ್ನು ಪಂಜೆ ಮಂಗೇಶರಾಯರು ಎಂದು ನಮಗೆಲ್ಲ ಗುರುತು ಮಾಡಿಕೊಟ್ಟು ನಮ್ಮೆಲ್ಲರ ಗುರುತನ್ನೂ ಅವರಿಗೂ ಮಾಡಿಕೊಟ್ಟರು.

ಪಂಜೆಯವರು ಆ ದಿನ ಅಲ್ಲಿ ಬಹಳ ಹೊತ್ತು ಇರ ಲಿಲ್ಲ ಎಂದು ನನ್ನ ನೆನಪು. ಮಾತೂ ಬಹಳವೇನೂ ಆಗಲಿಲ್ಲ, ಅದರ ವಿವರವೂ ನನಗೆ ನೆನಪಿಲ್ಲ. ಮೊತ್ತದಲ್ಲಿ ಮನಸ್ಸಿನಲ್ಲಿ ಮೂಡಿದ ಭಾವ ಶ್ರೀಯುತರು ತುಂಬ ಸರಳರು, ಪರಾಭಿ ಮಾನಿ, ದೇಶಪ್ರೇಮಿ ಎನ್ನುವುದು. ಹೊಸ ಕಾಲದ ಪದ್ಯ ಒಂದನ್ನು ಬಾಯಿಪಾಠ ಮಾಡಿದ್ದು ಒಂದೆರಡು ನುಡಿಗಳನ್ನು ಅವರು ಸಹಜವಾಗಿ ಮಾತಿನ ಮಧ್ಯೆ ನುಡಿದಿದ್ದರು. ಇದು ನಮಗೆಲ್ಲ ಸೋಜಿಗವನ್ನು ಉಂಟುಮಾಡಿದ್ದಿತು.

ಇದಾದ ಮಾರನೆಯ ವರ್ಷ ನಾನು ಮದರಾಸಿಗೆ ಅಲ್ಲಿಯ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಜನತೆಯ ಸಂಸ್ಕೃತಿ ಯನ್ನು ಕುರಿತು ಉಪನ್ಯಾಸಮಾಡಲು ಹೋದೆನು. ಆಗ ಅಲ್ಲಿ ದಿವಂಗತ ಶ್ರೀ ಬೆನಗಲ್ ರಾಮರಾಯರು ನಮ್ಮ ನಾಯಕ ರಾಗಿದ್ದರು. ಆ ವೇಳೆಗೆ ಸರಿಯಾಗಿ ಅವರ ಮನೆಯಲ್ಲಿ ಒಂದು ಮದುವೆ; ಅದಕ್ಕೆಂದು ಪಂಜೆಯವರೂ ಅಲ್ಲಿಗೆ ಬಂದಿ ದ್ದರು. ಭಾವ ಮೈದುನರಿಬ್ಬರೂ ನನ್ನನ್ನು ತುಂಬ ಆದರದಿಂದ ಕಂಡರು. ವಿಶ್ವವಿದ್ಯಾನಿಲಯದ ಅಧಿಕಾರಿಗಳು ಆ ಸಲದ ಕನ್ನಡದ ಉಪನ್ಯಾಸಗಳಿಗೆ ನನ್ನನ್ನು ಆಹ್ವಾನಿಸುವುದಕ್ಕೆ ಈ ಬಂಧುಗಳೇ ಕಾರಣ ಎಂದು ನನಗೆ ಅಲ್ಲಿ ತಿಳಿಯಿತು. ಈ ಅವ್ಯಾಜ ವಿಶ್ವಾಸದ ಸಂಗತಿ ತಿಳಿದು ನನಗೆ ಸಂತೋಷದಷ್ಟೇ ಆಶ್ಚರ್ಯವೂ ಆಯಿತು.

ಮದುವೆಯ ಕಾರಣದಿಂದ ಉಪನ್ಯಾಸಗಳ ಮೊದಲ ದಿನ ಶ್ರೀ ಬೆನಗಲ್ ಬರಲಾಗಲಿಲ್ಲ. ಪಂಜೆಯವರಿಗಾದರೂ ಬರುವುದು ಸುಲಭವಾಗಿರಲಿಲ್ಲ; ಆದರೂ ಅವರು ಮದು ವೆಯ ಸಿಕ್ಕಿನಿಂದ ಹೇಗೆಯೋ ಬಿಡಿಸಿಕೊಂಡು ಬಂದರು.

ಉಪನ್ಯಾಸಕ್ಕೆ ಬಂದ ಜನರ ಸಂಖ್ಯೆ ಬಹಳ ಕಡಿಮೆ ಯಾಗಿದ್ದು ನಾನು ಉಪನ್ಯಾಸ ಮಾಡುವುದೇ ಅಥವಾ ಬೇಡ ವೇ ಎಂದೇ ಯೋಚನೆ ಮಾಡಿದೆನು. ಪ್ರಶ್ನೆಯನ್ನು ಎತ್ತಿ ದೆನು. ಇದು ತಾರುಣ್ಯದ ದುಡುಕು ಎನ್ನುವುದು ಈಗ ನನಗೆ ಕಾಣುತ್ತಿದೆ. ಅಭಿಮಾನದ ಮಂಜಿನಲ್ಲಿ ಆ ದಿನ ಇದು ನನಗೆ ಕಾಣಬಹುದಾಗಿರಲಿಲ್ಲ. ಪಂಜೆಯವರು ನನ್ನ ಯೋಚನೆ ಯುಕ್ತವಲ್ಲ ಎಂದರು. "ಕನ್ನಡಕ್ಕೆ ಸಂಭಾವನೆಯೆತ್ತಿದ್ದಾರೆ, ಅದನ್ನು ತೆಗೆದುಕೊಳ್ಳಬೇಕಾದ ಪ್ರತಿನಿಧಿ ನೀವು, ಉಡಿ ಹಿಡಿ ಯಿರಿ" ಎಂದರು.

ಇಂಥ ಸಂದರ್ಭದಲ್ಲಿ ವ್ಯಕ್ತಿಯ ದೃಷ್ಟಿ ಒಂದು ಇರು ವಂತೆ ಸಮೂಹದ ದೃಷ್ಟಿ ಒಂದು ಇರುತ್ತದೆ. ಪಂಜೆಯವರು

ನನಗೆ ಆ ದಿನ ಈ ಕರ್ತೃವನ್ನು ಜ್ಞಾಪಕಮಾಡಿಕೊಟ್ಟರು.

ನಾನು ಮದರಾಸಿನಲ್ಲಿದ್ದ ನಾಲ್ಕು ದಿನವೂ ಪಂಜೆಯವರು ನನ್ನೊಡನೆ ನಡೆದಾಡಿದರು. ನಾವು ಕಡಲ ತೀರದಲ್ಲಿ ಮಳಲ ಮೇಲೆ ಸುಳಿದೆವು; ಮಹಾಬಲಿಪುರಕ್ಕೆ ಹೋಗಿ ಬಂದೆವು. ಸಮುದ್ರದ ಅಲೆಗಳ ಪಕ್ಕದಲ್ಲಿ ರಾಯರು ನನ್ನ ಚಿನ್ನಹದ ಹಾಡುಗಳನ್ನು ಹಾಡಿಸಿ ಕೇಳಿದರು. ತಾವೂ ಹಾಡುಗಳನ್ನು ಪದ್ಯಗಳನ್ನು ಹಾಡಿ ಹೇಳಿದರು. ಮದುವೆಯನ್ನು ಬಿಟ್ಟುಬರುವುದು ಅನನುಕೂಲವಾದರೂ ಹೇಗೋ ಸರಿಪಡಿಸಿಕೊಂಡು ಮಹಾಬಲಿಪುರದ ದೃಶ್ಯಗಳನ್ನು ನೋಡುವಲ್ಲಿ ಅವರ ಸಹವಾಸವನ್ನೂ ಒದಗಿಸಿದರು. ಏನು ಆ ಪ್ರೇಮ! ಅದೆಂತಹ ವಾತ್ಸಲ್ಯ!

ಎರಡು ವರ್ಷ ಬಿಟ್ಟು ಪಂಜೆಯವರು ಬೆಂಗಳೂರಿಗೆ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಒಂದು ಉತ್ಸವಕ್ಕೆಂದು ಬಂದರು. ಮೊದಲ ಸಲಗಳಲ್ಲಿ ಕಂಡಾಗ ಬಹು ಸಂಕೋಚದ್ದೆಂದು ಕಂಡಿದ್ದ ಅವರ ಸ್ವಭಾವ ಈ ವೇಳೆಗೆ ಆ ಸಂಕೋಚದ ಕಟ್ಟಿನಿಂದ ಸ್ವಲ್ಪ ಬಿಡಿಸಿಕೊಂಡಂತೆ ಕಾಣುತ್ತಿದ್ದಿತು. ಅವರು ತುಂಬ ಹಾಸ್ಯದ ಕತೆಗಳನ್ನು ಹೇಳಿದರು, ಮಾತನ್ನಾಡಿದರು. ತುಂಬ ನಕ್ಕರು, ನಗಿಸಿದರು. ನನ್ನ ನೋಟ್ ಪುಸ್ತಕದಲ್ಲಿ ತಮ್ಮ ಪದ್ಯವೊಂದನ್ನು ಬರೆದುಕೊಟ್ಟರು. ಬಹು ಜನರ ಮಧ್ಯದ ಈ ಸಲಿಗೆಯ ಮುಖ್ಯ ಕಾರಣ—ಅವರಿಗಿಂತ ಕಿರಿಯ ನಮ್ಮ ತಲೆಮಾರಿನಲ್ಲಿ ಕೆಲವರು ಅವರ ವಿಷಯಕ್ಕೆ ಸ್ವಲ್ಪ ವಿಶ್ವಾಸದಿಂದ ನಡೆದುಕೊಂಡಿದ್ದದ್ದು, ಈ ವಿಶ್ವಾಸದ ಮುಖ ಶ್ರೀ ವೆಂಕಣ್ಣಯ್ಯನವರದು. ಆ ಸಲ ಪಂಜೆಯವರು ಇಲ್ಲಿಯ ಹಲವು ಮಿತ್ರರಮನೆಗಳಿಗೆ ಬಂದರು; ಪರಿಚಯ ಬೆಳೆಸಿದರು; ಹಿರಿಯರೊಂದಿಗೆ ಕಿರಿಯರೊಂದಿಗೆ ಸ್ನೇಹವನ್ನು ಭದ್ರಪಡಿಸಿದರು.

ಮದರಾಸಿನಲ್ಲಿ ಕಂಡಾಗ ಪಂಜೆಯವರು ಒಂದು ಹದಿನೈದು ದಿನ ನನ್ನ ಜೊತೆಗೇ ಇದ್ದುಬಿಡಬೇಕು ಎಂಬ ಅಪೇಕ್ಷೆಯನ್ನು ಸೂಚಿಸಿದ್ದರು. ಅದು ಈಗ ಆಗಬಹುದೆಂದು ನಾನು ಪಂಜೆಯವರಿಗೆ ಬೆಂಗಳೂರಲ್ಲಿ ಹೇಳಿದೆನು. ಅದು ಸಾಧ್ಯವಾಗಲಿಲ್ಲ.

ಪುತ್ತೂರಿನಲ್ಲಿ ಶ್ರೀ ಶಿವರಾಮ ಕಾರಂತರು, ಶ್ರೀ ಮೊಳಹಳ್ಳಿ ಶಿವರಾಯರ ಯಾಜಮಾನ್ಯದಲ್ಲಿ ನಡೆಸುತ್ತಿದ್ದ ದಸರಾ ಉತ್ಸವಕ್ಕಾಗಿ ನಾನು 1933ರಲ್ಲಿ ಅಲ್ಲಿ ಹೋದಾಗ ಮತ್ತೆ ಪಂಜೆಯವರ ದರ್ಶನವಾಯಿತು. ಆಗಲೂ ಅವರದು ಅದೇ ಆದರ, ಅದೇ ಪ್ರೇಮ, ಅದೇ ವಾತ್ಸಲ್ಯ. ನಾನು ಅವರೊಂದಿಗೆ ಮಂಗಳೂರಿಗೆ ಹೋಗಿ ಅರ್ಧ ದಿನ ಅವರೊಂದಿಗಿದ್ದು ಅವರ ಮನೆಯವರನ್ನು ಮಕ್ಕಳನ್ನು ಅಲ್ಲಿಯ ಅನೇಕ ಮಿತ್ರರನ್ನು ಮೊದಲ ಬಾರಿ ಕಂಡೆನು. ಮಿತ್ರರ ಸಮಾಗಮಕ್ಕೆ ಪಂಜೆಯವರ ಪೌರೋಹಿತ್ಯ ದೊರೆತದ್ದು ಎಂಥ ಸೌಭಾಗ್ಯ ಎನ್ನುವುದನ್ನು ಕಂಡು ಕೊಂಡೆನು.

ಎರಡು ವರ್ಷದಾಚೆ ನಾನು ಚಿಕ್ಕಮಗಳೂರಿನಲ್ಲಿ ಕಡೂರು ಜಿಲ್ಲೆಯ ಅಧಿಕಾರದಲ್ಲಿದ್ದಾಗ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡದ 'Bord of Studies' ಸಭೆಗಾಗಿ ಬೆಂಗಳೂರಿಗೆ ಬಂದಾಗ ನನಗೆ ಮತ್ತೆ ಪಂಜೆಯವರ ದರ್ಶನವಾಯಿತು. ಆ ಸಲ ಅವರು ಮಂಗಳೂರಿಗೆ ಹಿಂತಿರುಗಬೇಕಾದರೆ ನನ್ನ ಜೊತೆಗಿರುವ ಸಲುವಾಗಿ ಚಿಕ್ಕಮಗಳೂರ ದಾರಿಯನ್ನು ಆರಿಸಿಕೊಂಡರು. ಚಿಕ್ಕಮಗಳೂರಿನಲ್ಲಿ ಒಂದು ದಿನ ನನ್ನ ಮನೆಯಲ್ಲಿದ್ದು ಊರಿಗೆ ಹೋದರು. ನಾನು ಮರಳಿ ಅವರನ್ನು ನೋಡಲಿಲ್ಲ. ನಮ್ಮೊಂದಿಗಿದ್ದ ಒಂದು ದಿನದಲ್ಲಿ ಈ ವೃದ್ಧರು ಬಹು ಭಾಗವನ್ನು ಮನೆಯ ಎಳೆಯ ಮಕ್ಕಳೊಂದಿಗೆ ಕಳೆದರು. ಒಂದು ಸಣ್ಣ ಮಗು ಸ, ರಿ, ಗ, ಮ, ಕಲಿಯುತ್ತಿತ್ತು. ಅದರ ಕೈಯಲ್ಲಿ ಅದನ್ನು ಹೇಳಿಸಿ ಕೇಳಿದರು. ಅದಕ್ಕಿಂತ ಸ್ವಲ್ಪ ಹಿರಿಯ ಮಕ್ಕಳು ಶಾಲೆಯಲ್ಲಿ ಸ್ವಲ್ಪ ಹೆಚ್ಚಿನ ಪಾಠಗಳನ್ನು ಕಲಿಯುತ್ತಿದ್ದವು. ಪಂಜೆಯವರು ಅಜ್ಜನಾಗಿ ಪುಸ್ತಕಗಳನ್ನು ಓದಿಸಿ, ಪ್ರಶ್ನೆ ಕೇಳಿ, ಉತ್ತರ ಹೇಳಿಸಿ ಪಾಠವೆನ್ನುವುದು ಒಂದು ಹಬ್ಬ ಎಂಬಂತೆ ಅವರನ್ನು ಆಡಿಸಿದರು. ನಾನು ಆಗ ತಾನೆ ಬರೆದಿದ್ದ ತಿರುಪಾಣಿ ನಾಟಕವನ್ನು ಅವರಿಗೆ ಓದಿ ಹೇಳಿದೆನು. ಆ ನಾಟಕದಲ್ಲಿ ತುಂಬ ಹಾಡು ಇವೆ. ನಾನು ಅವುಗಳನ್ನು ಹೇಗೆ ಹಾಡಬೇಕೆಂದು ತೋರಿಸಬಲ್ಲೆನು ಹೊರತಾಗಿ ಕ್ರಮವಾಗಿ ಹಾಡಲಾರೆನು. ಪಂಜೆಯವರು, ಹಾಡನ್ನು ಅಭ್ಯಾಸಮಾಡಿದವರು; ರಂಗದ ಮೇಲೆ ಇವನ್ನು ಹಾಡಿದಾಗ ಬಹಳ ಚೆನ್ನಾಗಿರುತ್ತದೆ, ಎಂದರು. ನಾನು ಹಾಡಿದ್ದು ಚೆನ್ನ ಇಲ್ಲ ಎಂದು ಹೇಳಲು ಮನಸ್ಸಿಲ್ಲ. ಸತ್ಯವಾಗಿಯೇ ನುಡಿಯಬೇಕು, ಆದರೂ ಪ್ರಿಯವಾಗಿ ನುಡಿಯಬೇಕು.

ಒಟ್ಟು ಏನು ಹತ್ತು ದಿವಸ ನಾವು ಒಬ್ಬರನ್ನೊಬ್ಬರು ಕಂಡೆವೇನೊ. ಆ ಹತ್ತು ದಿವಸದಲ್ಲಿ ದಿನವೆಲ್ಲ ಜೊತೆಯಾಗಿದ್ದುದೆನ್ನುವುದು ಒಂದು ದಿವಸ. ಆದರೆ ಪಂಜೆಯವರು ನನ್ನ ಜೀವನದಲ್ಲಿ ಎಂಥ ಮುಖ್ಯ ಮಿತ್ರರಾದರು! ನನಗೆ ಇದು ತುಂಬ ಆಶ್ಚರ್ಯ. ಕೊನೆಯ ದಿನ ನಾವು ಚಿಕ್ಕಮಗಳೂರಿಗೆ ಜೊತೆಯಾಗಿ ಪ್ರಯಾಣಮಾಡಿದಾಗ ಪಂಜೆಯವರು ನಮ್ಮ ಹೊಸ ಸಾಹಿತ್ಯದಲ್ಲಿ ಸಣ್ಣ ಕತೆಗಳನ್ನು ಮೊದಲಲ್ಲಿ ಬರೆದವರು ಅವರು ಎಂದು ಸಮರ್ಥಿಸಲು ತೊಡಗಿದ್ದ ವಿಷಯದಲ್ಲಿ ಒಂದೆರಡು ಮಾತನ್ನಾಡಿದರು. ಇದು ಹೌದು ಎಂಬ ವಿಷಯವನ್ನು ನಾನು ಯಾವಾಗಲೂ ಒಪ್ಪಿದ್ದೇನೆ. ಅಂದು ನಾವು ಆಡಿದ ಮಾತಿನ ಸಂಗತಿಗಳನ್ನು ಉಚಿತ ಸಂದರ್ಭಗಳಲ್ಲಿ ವಿವರಿಸಿದ್ದೇನೆ; ಉಚಿತ ಸಂದರ್ಭದಲ್ಲಿ ಮುಂದೆ ಬರೆದಿಡ

ಬೇಕೆಂದು ಉದ್ದೇಶಿಸಿದ್ದೇನೆ. ಅಂದಿನ ಅವರ ಮಾತಿನಲ್ಲಿ ಈ ಸಂದರ್ಭಕ್ಕೆ ಪ್ರಕೃತವಾದದ್ದು ಇಷ್ಟು, "ಇಂಥ ಮಾತು ನಮ್ಮಲ್ಲಿ ಲೇಖಕರ ಮಧ್ಯೆ ವೈಷಮ್ಯವನ್ನು ಮೂಡಿಸತಕ್ಕದ್ದು. ಈಗ ನಮಗೆ ಮುಖ್ಯವಾಗಿ ಸೌಹಾರ್ದಬೇಕು. ಸದ್ಯದಲ್ಲಿ ಇಂಥ ಮಾತನ್ನು ಯಾರೂ ಎತ್ತುವುದೇ ಬೇಡ" ಇದು ಪಂಜೆಯವರ ಮಾತಿನ ಧೋರಣೆಯಾಗಿದ್ದಿತು. ಇಂಥ ಮಾತಿನಲ್ಲಿ ವ್ಯಕ್ತಿಯನ್ನು ಕುರಿತ ಭಾಗ ಸ್ವಲ್ಪ ಇರುವಂತೆ, ಇತಿಹಾಸದ ಭಾಗ ಒಂದಿರುತ್ತದೆ. ಒರಟು ಮಾತನ್ನಾಡದೆ, ವ್ಯಕ್ತಿಯ ವಿಷಯವನ್ನು ಮುಂದುಮಾಡದೆ, ಇತಿಹಾಸಾಂಶವನ್ನು ನಿರ್ಲೇಪದಿಂದ ಪರಿಶೀಲಿಸಬೇಕು; ಅಷ್ಟೆ. ಇದು ಅವಶ್ಯಕವಾಗಿ ಆಗಬೇಕಾದ ಕೆಲಸ ಎಂದು ನಾನು ನನ್ನ ಅಭಿಪ್ರಾಯವನ್ನು ಸೂಚಿಸಿದೆನು. ಸಾಹಿತ್ಯ ಕ್ಷೇತ್ರದ ಕೆಲಸಗಾರರ ಪರಸ್ಪರ ಸ್ನೇಹಕ್ಕೆ ಅಪಾಯ ಸೋಕುವಂತಿದ್ದರೆ ಪಂಜೆಯವರು ಸಣ್ಣಕತೆಗಳನ್ನು ಮೊದಲಲ್ಲಿ ಬರೆದವರು ತಾವು ಎಂಬ ಮಾತನ್ನು ಮರೆಸಿಡುವುದಕ್ಕೂ ಸಿದ್ಧರಾಗಿದ್ದರು. ಇದು ಎಂಥ ಸ್ನೇಹಪರತೆ! ಎಂಥ ಅಪರಂಜಿ ಸ್ವಭಾವ! ಈ ಸ್ನೇಹಪರತೆ, ಈ ಅಚ್ಛ ಸ್ವಭಾವ ನನಗೆ ಪಂಜೆಯವರಲ್ಲಿ ಎತ್ತಿ ಕಂಡ ಗುಣ.

ಮಾ. ವೆಂ. ಅ.

---

# ಗುರುಗಳಾದ ಪಂಜೆಯವರು

(ಶ್ರೀ ನರ್ಕಳ ಮಾರಪ್ಪ ಶೆಟ್ಟರು.)

ಒಂದನೆಯ ಎರಡನೆಯ ತರಗತಿಗಳಿಗೆ ಒಂದು ಸಾಲೆ ಕಂಡ ನಾನು, ಮೂರನೆ ನಾಲನೆಗೆ ಎರಡು ಸಾಲೆ ಕಂಡಿದ್ದೆ. ಅವುಗಳಲ್ಲಿ ಕಡೆಯ ಸಾಲೆ–ಸಾಲೆತ್ತೂರು ಸಾಲೆ.

ನನ್ನ ಆ ಎರಡನೆಯ ಸಾಲೆಯಲ್ಲಿ, ವರುಷ ಮೂರು ದಾಟಿ ಮೂರನೆ ದರ್ಜೆಯ ಪಾಠದಲ್ಲಿ ಮೂರು ಮುಕ್ಕಾಲು ವೀಸವೂ ಮುಗಿದಿತ್ತು. ಆಗೊಂದು ದಿನ ನಮ್ಮ ಶಾಲೆಗೆ ಇನ್ಸ್ಪೆಕ್ಟರರ ಸವಾರಿ ಬಂದಿತು; ಅಂದಿನ ಅದೇ ಮುಂಡಾಸು, ಅದೇ ಅಂಗಿ, ಅದೇ ಮೋರೆ, ಅದೇ ಹಾವ—ಭಾವ ಬಂತೇ ಬಂತು—ಪರೀಕ್ಷೆಗೆ ಆ ದೊಡ್ಡ ಇನ್ಸ್ಪೆಕ್ಟರರೊಬ್ಬರದೇ ಸವಾರಿ. ಸಾಮಾನ್ಯವಾಗಿ ಅವರ ಜತೆಗೆ ಇರುತ್ತಿದ್ದ ಸಣ್ಣ ಇನ್ಸ್ಪೆಕ್ಟರರು ಮಾತ್ರ ಆದಿನ ಇದ್ದಿರಲಿಲ್ಲ. ಉಪಾಧ್ಯಾಯರೇ ನಮಗೆ ಓದು, ಲೆಕ್ಕ ಎಲ್ಲಮಾಡಿಸಿದರು; ಇನ್ಸ್ಪೆಕ್ಟರರು ಉಪಾಧ್ಯಾಯರನ್ನು ಮುಟ್ಟಿಕೊಂಡು ತಪ್ಪೊಪ್ಪು ತಿಳಿದುಕೊಂಡರು. ಪಾಸೋ, ಫೆಯಿಲೋ, ಅದೆಲ್ಲ ನನಗೀಗ ಬೇಡ. ಇನ್ಸ್ಪೆಕ್ಟರರೆಂದರೆ, ಇವರೇ — ಇಷ್ಟೇ ಎಂದು ಪ್ರತ್ಯಕ್ಷ ಸಿದ್ಧಾಂತವಾದುದು ಮಾತ್ರ ನನಗೆ ಮುಖ್ಯ.

ಒಂದು ಸಾವಿರದ ಒಂಭೈನೂರ ಏಳನೆಯ ಇಸವಿ. ಸುಮಾರು ಸೋಣೆ ತಿಂಗಳು. ಮಳೆ ಇಲ್ಲ; ಒಂದು ದಿನ ಬೈಗಿನ ಹೊಂಬಿಸಿಲಿಗೆ ಕಳಮೆ ಕದಿರು ನಗುತಿದ್ದಾಗ ನೆಲ್ಲುಗದ್ದೆಯ ತುತ್ತತುದಿಯಲ್ಲಿದ್ದ ನಮ್ಮ ಸಾಲೆತ್ತೂರು ಸಾಲೆಯಲ್ಲಿ ನಾಲ್ಕು ಕ್ಲಾಸುಗಳ ನಟ್ಟನಡುವೆ ಕುಳಿತ ನಮ್ಮ ಉಪಾಧ್ಯಾಯರು ನಾಲ್ಕನೆಯ ತರಗತಿಯ ನಮ್ಮನ್ನು ಕಂಡು,“ಪರೀಕ್ಷೆ ಸುದ್ದಿಯ ಸುಳಿವಿಲ್ಲ! ಈ ವರುಷ ಇಳಿದು ಬರುತ್ತಾರೋ, ಅಲ್ಲ, ಹತ್ತಿ ಹೋಗುತ್ತಾರೋ! ಹೇಳ ಬರುವಂತಿಲ್ಲ. ಹೊರಿ ಪೆಟ್ಟಿಗೆ ಪಾತೂರಕಟ್ಟೆಗೆ ಮುಟ್ಟಿದ ಸುದ್ದಿ ಇನ್ನೂ ಮುಟ್ಟಿಲ್ಲ. ಇಳಿದು ಬರುವಂತಿದ್ದರೆ ಕುಮಾರ ಗಟ್ಟದ ಇಳುಕಲು ಹಿಡಿದು, ಇದರೊಳಗೇನೆ ಇಡ್ಕಿದು ಸೇರಿರಬೇಕು. ಸವಾರಿಯ ರುಮಾಲ ಕುಡಿಯನ್ನು ಕಂಡವರಿಲ್ಲ. ಬರುವುದು ಎಂದೋ! ಏನೋ!" ಎನ್ನುವುದರೊಳಗೆ, ಮೂಡಣ ಕಿಟಿಕಿಗೆ ಕಣ್ಣಿಟ್ಟಿದ್ದ ನಾನು, "ಅಗೋ ಬಂದರು!" ಎಂದೆ. ಆಗಲೇ ಮಾಸ್ತರರು—

"ಟೊಪ್ಪಿಯೋ, ಮುಂಡಾಸೋ?" ಎಂದು ಕೇಳಿದರು.

"ಮುಂಡಾಸು" ಎಂದೆ.

"ಕಪ್ಪೊ, ಬಿಳಿಯೋ?"

"ಬಿಳಿದು."

"ಹಾಗಿದ್ದರೆ ಹೊಸಬರು. ಏಳಿ; ಎಲ್ಲರೂ ನಿಂತುಕೊಳ್ಳಿರಿ. ಹೊಕ್ಕೊಡನೆ ನಮಸ್ಕಾರ ಮಾಡಿರಿ" ಎಂದು ಹೇಳುತ್ತಾ, "ಪೆಟ್ಟಿಗೆ ಒಳಗಿನ ನಿನ್ನ ಮಾದಳಕಾಯಿ ಹೊರಗೆ ತೆಗೆ ಮಾರಪ್ಪ" ಎಂದರು. ಹೇಳಿದ ಮಾತು ಮುಗಿಯುವ ಮುನ್ನ ಮಾದಳವನ್ನು ಮೇಜಿನ ಮೇಲೆ ಇಟ್ಟುದೂ, ಹೊಸ ಇನ್ಸ್ಪೆಕ್ಟರರು (ಪಂಜೆಯವರು) ಸಾಲೆಯ ಹೊಸ್ತಿಲ ಒಳಗೆ ಕಾಲಿಟ್ಟುದೂ ಸರಿಹೋಯಿತು.ಅಲ್ಲಿಂದಲೇ ಪರೀಕ್ಷೆಗೆಸುರು. ಹೊರಟುದು ಕವನದ ಮಾತು. ನನ್ನನ್ನೇ ನೋಡಿ,-"ಮಾದಳ ಮಾರಪ್ಪ!"

ನೀನೇ?

ಹೌದು.

ಗೌಡ?

ಅಲ್ಲ, ಬಂಟ.

ಪೂರ್ಣ ಹೆಸರು?

ನರ್ಕಳ ಮಾರಪ್ಪ ಸೆಟ್ಟಿ.

ಕರಿಯಪ್ಪ ಸೆಟ್ಟಿ ಅಲ್ಲ? (ತುಸು ನಗಾಡಿ)

ಅಲ್ಲ.

ಕಾಳಪ್ಪ ಸೆಟ್ಟಿಯೂ ಅಲ್ಲ? (ಮತ್ತಷ್ಟು ನಗು)

"ಅಲ್ಲ" ನಗಾಡಿಕೊಂಡೇ ನಾನೂ ಹೇಳಿದೆ. ಆದರೆ, ನನ್ನ ನಗುವಿನಲ್ಲಿ ಒಂದು ತರದ ನಂಜಿನ ಛಾಯೆ ಇದ್ದಂತಿತ್ತು. ಕಾರಣವೆಂದರೆ, 'ಜಾತ್ಯಭಿಮಾನದ ಹೆಚ್ಚಳದ ಆ ಕಾಲದಲ್ಲಿ ಮೇಲು ಜಾತಿಯ ಬಂಟನಾದ ನನ್ನನ್ನು ಅವರು ಗೌಡನೆಂದುದು ಹೀಯಾಳಿಸಿದುದಾಗಿರಬೇಕು' ಎಂದು ಊಹಿಸಿದೆ. ಹಾಗಿದ್ದರೆ, ನನ್ನನ್ನು "ಮಾದಳ ಮಾರಪ್ಪ, ಕರಿಯಪ್ಪ, ಕಾಳಪ್ಪ, ಎಂದರಲ್ಲ! ಅದಕ್ಕೇಕೆ ಸಿಟ್ಟಾಗಲಿಲ್ಲ?" ಎಂದು ಕೇಳಬಹುದು. ಅದಕ್ಕಿಷ್ಟೇ ಸಮಾಧಾನ–ಸ್ವಭಾವತ: ನಾನು ಕಪ್ಪು. ನನ್ನ ಹೆಸರು ಹಾಗೆಯೇ ಇರಬೇಕಾದುದು ನ್ಯಾಯವೇ. ಇಲ್ಲಿ, 'ಬಣ್ಣದ ಹೆಸರು, ಹೆಸರಿನ ಕ್ವಿತೆ, ಕವಿತೆಯ ಅಲಂಕಾರ–ಮಾದಳ ಮಾರಪ್ಪ' ಬಂದ ಬಂಧವು ನನಗೆ ಮರೆಯಲಾಗದ ಮಾಧುರ್ಯವನ್ನುಂಟುಮಾಡಿತ್ತು.

ಸಾಲೆಯಲ್ಲಿದ್ದುದು ಒಂದು ಕುರ್ಚಿಯನ್ನು ಬಿಟುಕೊಟ್ಟಿದ್ದರು. ಇನ್ಸ್ಪೆಕ್ಟರರು ಅದರಲ್ಲಿ ಇನ್ನೂ ಕೂತಿರಲಿಲ್ಲ. ಮುಂಡಾಸು ಮೇಜಿನ ಮೇಲೆ ಕೂತಿತ್ತು. ಎಲ್ಲರ ಕಣ್ಣು—ಮುಂಡಾಸಿಲ್ಲದ ಅವರ ಮುಖದ ಮೇಲೆ ಹಾಯ್ದಿತು. ಕೂದಲು ಹೆಚ್ಚಾಗಿಲ್ಲದ ಬರಿದಾದ ತಲೆ. ಮುಂದೆ ಚಾಚಿದ ಹಣೆ; ವಿಶಾಲವಾದ ಮುಖ. ಮುಖವನ್ನು ವಿರಿದ ಮೂಗು;

ಮೂಗು ಮುಟ್ಟಿದ ಮೀಸೆ; ಮೀಸೆ ಮುಚ್ಚಿದ ತುಟಿ; ತುಟಿ ತುಂಬ ನಗು; ಮಧುರ ಕಂಠ; ಕಂಠದಿಂದ ಹೊರಡುವ ಸ್ವೊಲ್ಲು. ಆ ಗಂಡು ಕೋಗಿಲೆಯ ಕುಕಿಲು ಸಾಲೆಯನ್ನೆಲ್ಲ ತುಂಬಿತು. ತಾಮ್ರದ ಹರಿವಿಯ ಒಳಗಿಂದ ಮಾತಾಡಿದಂತೆ ಕೇಳಿಸಿತು—ಅವರ ಆ 'ಲಲಲ ಲಲಲ' ಆಲಾಪ. ಕೂಡಲೇ ಧ್ವನಿಯನ್ನು ನಿಲ್ಲಿಸಿ, "ಪದ್ಯ ಬರುತ್ತದೆಯೆ, ಹೇಳು" ಎಂದರು. ಮೊದಲಿಗೆ ನಾನು, ನನ್ನ ಹಿಂದೆ ಮನೋಹರರಾವ್, ವೆಂಕಟ್ರಮಣ ಭಟ್ಟ ಮೂವರೂ ಹೇಳಿದೆವು. ನಮ್ಮ "ಏತರಾಯಾಸವಿದು ಜಗದ್ವಿ." ಇನ್ಸ್‌ಪೆಕ್ಟರರಿಗೆ ರುಚಿಸಿತೋ ಅಥವ ಇಲ್ಲವೋ! ಅವರು ತಮ್ಮ ಧೋತ್ರದ ನಿರಿಗೆಯನ್ನು ಹಿಡಿದ ಬಲಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡು, ಎಡದ ಕೈಯಿಂದ ಚಿಟಿಕಿ ಹೊಡೆದು ತಾಳ ಹಾಕುತ್ತಾ, ಸಾಲೆಯ ಉದ್ದಕ್ಕೆ ಕುಣಿದೋ, ನಡೆದೋ! ತುದಿಯಿಂದ ತುದಿಗೆ— ತುಟಿಯಿಂದ 'ಸೂ ಸೂ ಸೂ ಸೆ'ಂಬ ಸಿಳ್ಳಿನ ಗಾನ ಹೊರಡಿಸಿ, ನಮ್ಮ ಪದ್ಯವನ್ನು ನುಡಿಸಿಬಿಟ್ಟರು. ನಮ್ಮ ಪಾಡು (ಹಾಡು) ಅಲ್ಲಿಗೇ ನಿಂತುಹೋಯಿತು.

ಒಂದನೆಯ ತರಗತಿಗೆ ಅಜ್ಜಿ ಕತೆ, ಎರಡನೆಯ ತರಗತಿಗೆ ಮುಂಡೆಕತೆ ಕಲಿಸಿಕೊಟ್ಟರು. ಮೂರನೆಯದನ್ನು ಮುಚ್ಚಿಬಿಟ್ಟರು. ಇದ್ದ ಒಬ್ಬ ಹುಡುಗ—ಅಕ್ಷರ ಹಿಡಿದು ಓದುತ್ತಿದ್ದ. "ಈತ ಮೇಷ್ಟ್ರ ಮಗ?" ಎಂದು ಮುಖ ತಿರುಗಿಸಿ ಮಾಸ್ತರರನ್ನು ಕೇಳಿದರು; ಬಲಿಮೆ ಸತ್ಯವಾಯಿತು. "ಮಾಸ್ತರರ ಮಕ್ಕಳು, ಇನ್ಸ್‌ಪೆಕ್ಟರರ ಮಕ್ಕಳು, ಎಲ್ಲರೂ ಹೀಗೆಯೇ" ಎಂದು ಹೇಳಿ, ಹುಸಿ.ನಗೆ ನಕ್ಕರು.

"ಮುಂದೆ ಹೋಗುವವನ ಹಿಂದೆ ಇಬ್ಬರು; ಹಿಂದೆ ಹೋಗುವವನ ಮುಂದೆ ಇಬ್ಬರು, ಒಟ್ಟಿಗೆ ಜನರೆಷ್ಟು?" ಇದು ನಮ್ಮ ನಾಲ್ಕನೆಯ ತರಗತಿಗೆ ಕೇಳಿದ ಬಾಯಿ ಲೆಕ್ಕ. ಪುಣ್ಯಕ್ಕೆ ನಾವೆಲ್ಲರೂ ತಪ್ಪು. ಕಡೆಗೆ ಮೂವರನ್ನು ಸಾಲಾಗಿ ನಿಲ್ಲಿಸಿ, ಹಿಂದಿನ—ಮುಂದಿನ ಮಾತಿನ ಮರ್ಮ ಹೇಳುತ್ತಲೇ, ಹೊರಟ ನಗೆಯ ಹೊನಲಿಗೆ ಸಾಲೆಯೇ ತೇಲಿಹೋಯಿತು. 'ಇನ್ನೇನು ಕಲಿಸಿದ್ದೀರಿ—ಮಾಷ್ಟೇ?' ಎಂದರು ತಿರುಗಿ, ಇನ್ಸ್‌ಪೆಕ್ಟರರು. "ಭೂಗೋಳ—ಮದ್ರಾಸು ಸಂಸ್ಥಾನದ್ದು, ಪ್ರಬಂಧ, ವ್ಯಾಕರಣ ಎಲ್ಲ ಸ್ವಲ್ಪ ಸ್ವಲ್ಪ ಕಲಿಸಿದೆ" ಎಂದರು ಮಾಸ್ತರರು. "ಪೀಸ್ ಆಫ್ ಚಾಕ್—ಪ್ಲೀಸ್" ಎಂದರು. ಬಿದ್ದು ಹೋಯಿತೊಂದು ಇಂಗ್ಲಿಷ್ ಮಾತು ಅವರ ಬಾಯಿಯಿಂದ. ಬೆಪ್ಪಾದೆವು ನಾವು. ಮಾಸ್ತರರನ್ನು ಬದುಕಿಸಲೆಂದೂ ಏನೋ! ಒಡನೆಯೆ ಇನ್ಸ್‌ಪೆಕ್ಟರರು ಮಾಸ್ತರರ ಕಡೆಗೆ ಕೈಯನ್ನು ನೀಡಿ 'ಚೋಕು' ಎಂದು ಮೆಲ್ಲಗೆ ಹೇಳಿದರು. ಸಿಕ್ಕಿದ ಆ ಸೀಮೆ ಸುಣ್ಣದಿಂದ ಕರಿಯ ಹಲಗೆಯ ಮೇಲೆ-

(1) ಜೋರುಮಳೆ

(2) ನೆರೆ ಬಂದದ್ದು

(3) ಜನರಿಗಾದ ನಷ್ಟ"

ಇಷ್ಟನ್ನು ಬರೆದು, ಈ ಕುರಿತು, "ಪರ ಊರಿನಲ್ಲಿದ್ದ ನಿನ್ನ ಸ್ನೇಹಿತನಿಗೊಂದು ಕಾಗದ ಬರೆ" ಎಂದು ಹೇಳಿದರು.

ಇದನ್ನಷ್ಟು ಬರೆದರೆ, ಅಂದಿನ ನಮ್ಮ ಪರೀಕ್ಷೆ ತೀರಿದಂತೆಯೇ. ಸರಿಯೋ ತಪ್ಪೋ, ನಾವು ಬರೆದೆವು. ಬಹುಶಃ ಬರೆದುದನ್ನು ಇನ್ಸ್‌ಪೆಕ್ಟರರು ನೋಡಲಿಲ್ಲವೆಂದೇ ನನ್ನ ನೆನಪು. ಥಟ್ಟನೆ, "ಸಾಕು, ಮಕ್ಕಳು ಹೋಗಲಿ, ರಿಜಿಸ್ತ್ರಿ ನೋಡುವ" ಎಂಬ ಮಾತು ಕೇಳಿಸಿದುದರಿಂದ ನಾವು ಪುಸ್ತಕ ಕಟ್ಟಿದೆವು. ಆಗ್ಗೆ, ಮಕ್ಕಳ ಹಾಜರಿಗೆ ಛಾಪಾ ರಿಜಿಸ್ತ್ರಿ ಇಡುತ್ತಿದ್ದಂತೆ, ಮಾಸ್ತರರದಕ್ಕೆ ಇಡುತ್ತಿರಲಿಲ್ಲ. ಉಪಾಧ್ಯಾಯರು ಒಂದು ಖಾಲಿ ಪುಸ್ತಕದಲ್ಲಿ ತಾರೀಕು ಕೊಟ್ಟು, ದಸ್ಕತು ಹಾಕುತ್ತಿದ್ದರು. ವರುಷದ ಮುನ್ನೂರರ್ವತ್ತು ದಿನಗಳಲ್ಲಿ ಅರ್ಧಕ್ಕಿಂತ ಸ್ವಲ್ಪ ಹೆಚ್ಚಿಗೆ ದಿನ ನಮ್ಮ ಉಪಾಧ್ಯಾಯರ ಗೈರ ಹಾಜರಿ ಇತ್ತು. ಎಲ್ಲಾ ಗೈರಹಾಜರಿಗೂ ಕಾರಣವೊಂದೇ—"ಪಿ. ಮಂಗೇಶರಾಯರೊಟ್ಟಿಗೆ—ಹೋಗಲಿಕ್ಕಿದ್ದುದರಿಂದ" ಎಂದು ಓದಿ ಓದಿ ಸಾಕಾಯಿತು. ಅದನ್ನು ಕೇಳಿ ಕೇಳಿ ಸಡ್ಡಾಯಿತು. 'ಯಾರಯ್ಯಾ, ಯಾವ ಮಂಗೇಶರಾಯರವರು? ಈ ಇನ್ಸ್‌ಪೆಕ್ಟರ್ ಮಂಗೇಶರಾಯರೇ? ನನ್ನೊಂದಿಗೆ ಎಷ್ಟು ಸಲ ಬಂದಿದ್ದೀರಿ ನೀವು, ಎಲ್ಲಿಗೆಲ್ಲ?" ಎಂದು ತಮಾಷೆಮಾಡಿದರು. (ಇದರಿಂದ ಇನ್ಸ್‌ಪೆಕ್ಟರರ ಹೆಸರು ಮಂಗೇಶರಾಯರೆಂಬುದು ನಮಗೆಲ್ಲ ಗೊತ್ತಾಯಿತು.) ಉಪಾಧ್ಯಾಯರು,— "ತಾವಲ್ಲ. ಪಟೇಲರು—ಪೆರ್ಲತಬೈಲು ಮಂಗೇಶರಾಯರು" ಎಂದರು. "ಓಹೋ! ಪಟೇಲ್ ಮಂಗೇಶರಾಯರಿಗೆ ಸಾಲೆಯಲ್ಲಿ ಇಷ್ಟೂ ಅಧಿಕಾರವಿದೆಯೇ?" ಎಂದು ಹೇಳಿ, ಗೊಳ್ಳನೆ ನಕ್ಕರು. (ಪಟೇಲ್ ಮಂಗೇಶರಾಯರಿಗೂ, ಇನ್ಸ್‌ಪೆಕ್ಟರ್ ಮಂಗೇಶರಾಯರಿಗೂ ಮೊದಲಿನಿಂದಲೇ ಸ್ನೇಹ, ಸಲಿಗೆ ಇದ್ದಿತ್ತು.)

ಇಲ್ಲಿಗೆ ಇನ್ಸ್‌ಪೆಕ್ಷನ್ ಮುಗಿಯಿತು. ಸವಾರಿಯನ್ನು ಕರೆದುತಂದ ನೆರೆ ಸಾಲೆಯ ಮಾಸ್ತರರು ಕೈಮುಗಿದು ಕಳುಹಿಸಿಕೊಟ್ಟರು. ಪರೀಕ್ಷೆಯನ್ನು ನೋಡಬಂದ ನೋಟಕರು ಬೀಳುಗೊಂಡರು. ನಾವು, ಮಕ್ಕಳು, ಹೊಸ ಇನ್ಸ್‌ಪೆಕ್ಟರರ ಹೊಸ ಕ್ರಮದ ಪರೀಕ್ಷೆಯನ್ನು ಹೊಗಳಿಕೊಂಡು ಹೊತ್ತುಕೊಂಡು ನಮ್ಮ ನಮ್ಮ ಮನೆಯನ್ನು ಸೇರಿಕೊಂಡೆವು. ನಮ್ಮ ಉಪಾಧ್ಯಾಯರು ಇನ್ಸ್‌ಪೆಕ್ಷನ್ ಪುಸ್ತಕದೊಂದಿಗೆ ಇನ್ಸ್‌ಪೆಕ್ಟರರನ್ನು ಪೆರ್ಲತಬೈಲಿಗೆ ಮುಟ್ಟಿಸಿ ಹಿಂದೆರಳಿದರು.

ರಾತ್ರಿ ಮಲಗಿದ ನನಗೆ ನಿದ್ದೆಯಲ್ಲಿ ಅದೇ ಕನವರಿಕೆ. ಮುಂಜಾವಕ್ಕೆ ಮೊದಲೇ ಎಚ್ಚರ. ಎಚ್ಚತ್ತೊಡನೆ ಮುಖ ಮಜ್ಜನ ತೀರಿಸಿ, ಹೊತ್ತಿಗೆ ಮೊದಲೇ ನಾನು ಸಾಲೆಗೆ ಹೊರಟೆ.

ಬರುವಾಗ ಬೇಕೆಂದೇ ಪೆರ್ಲತಟ್ಟೆಲಿಗಾಗಿ ಬಂದೆ. ಅಲ್ಲಿ ಇನ್ಸ್ಪೆಕ್ಟರರ ಸವಾರಿ ಉಂಟೆಂದು ನನಗೆ ಮೊದಲೇ ಗೊತ್ತು. ಅವರನ್ನು ನೋಡುವ ಸಲುವಾಗಿಯೇ ನಾನಲ್ಲಿ ಬಂದುದು. ಮಂಗೇಶರಾಯರು ನನಗಿನ್ನು ಮಂಗೇಶರಾಯರಲ್ಲ. ಇನ್ಸ್ಪೆಕ್ಟರರು ಮೊದಲೇ ಅಲ್ಲ. ಅವರಿನ್ನು ನನ್ನ ಗುರುಗಳು; ಅಂಥಾ ಪರಮ ಗುರುವನ್ನು ಇನ್ನೊಮ್ಮೆ ನಖಶಿಖಾಂತವಾಗಿ ನೋಡಿಕೊಂಡರೆ, ಆ ದಿವ್ಯ ಮೂರ್ತಿಯು ನನ್ನ ಅಂತರಾಳದಲ್ಲಿ ಶಾಶ್ವತ ನೆಲೆಗೊಂಡಾಂತಾಯಿತು. ನನ್ನನ್ನು ಕಂಡ ಪಟೇಲ್ ಮಂಗೇಶರಾಯರು,—"ಬಾ ಮಾರಪ್ಪ, ಬಾ" ಎಂದರು. ಆಗಲೇ ಶ್ರೀ ಗುರುಗಳು,—"ಬಾ—ಬಾ, ಮಾದಳ ಮಾರಪ್ಪ" ಎಂದು ನಕ್ಕರು. ಆ ಮೇಲೆ ಆ ಇಬ್ಬರು ಮಂಗೇಶರಾಯರುಗಳೂ, ಕೊಂಕಣಿ ನುಡಿಯಲ್ಲಿ — ನನ್ನ ವಿಷಯವಾಗಿಯೂ, ನಮ್ಮ ಮಾಸ್ತರರ ಗೈರು ಹಾಜರಿ ವಿಷಯವಾಗಿಯೂ ಮಾತಾಡಿ ನಗತೊಡಗಿದರು. ನಗೆಗೆ ನಾಚಿದ ನಾನು ಇಬ್ಬರಿಗೂ ವಂದಿಸಿ, ಮನೋಹರನೊಂದಿಗೆ ಸಾಲೆಗೆ ಬಂದೆ.

ಘಂಟೆ ಹನ್ನೆರಡು ದಾಟಿದೆ. ಮಾಸ್ತರರನ್ನು ಕಾಣದೆ, ಮಕ್ಕಳು ಅಲ್ಲಿ ಇಲ್ಲಿ ಹಣಕುತಿದ್ದಾರೆ. ಆಗಲೇ ಮಾಸ್ತರರು ಬೆವರಿಳಿಸಿಕೊಂಡು ಸಾಲೆಯನ್ನು ಹೊಕ್ಕರು. ಹೊಕ್ಕವರೇ, "ನಾಲ್ವರಲ್ಲಿ ಮೂವರು ಪಾಸು—ಫಸ್ಟ್‌ಕ್ಲಾಸ್; ಮಾರಪ್ಪ" ಸರ್ಟಿಫಿಕೇಟು ಇಬ್ಬರಿಗೆ ಮಾತ್ರ, ಮಾರಪ್ಪನಿಗಿಲ್ಲ. ಒಂದೇ ಸಾಲೆಯಲ್ಲಿ ಮೂರು ವರ್ಷಗಳ ಹಾಜರಿರಬೇಕಿತ್ತಂತೆ. ಆದರೆ ತೊಂದರೆ ಇಲ್ಲವಂತೆ. ಇನ್ನೆರಡು ವರ್ಷಗಳಲ್ಲಿ ಟ್ರೈನಿಂಗಿಗೆ ಹೋಗುವಾಗ ಸರ್ಟಿಫಿಕೇಟು ಕೊಡಬಹುದಂತೆ. ಅವಗುಣದಲ್ಲಿ ಗುಣ. ಆ ವರೆಗೆ ಸಹಾಯಕ ಮಾಸ್ತರನನ್ನಾಗಿ ನೇಮಿಸಬಹುದಂತೆ — ಹೀಗೆಂದು ನನ್ನ ಬೆನ್ನು ತಟ್ಟಿ ಸಮಾಧಾನ ಹೇಳಿದರು. ಉಪಾಧ್ಯಾಯರ ಸಂಖ್ಯೆಯ ಮೇಲೆ ರೂಪಾಯಿ ಮೂರರಂತೆ ಮಾಸಿಕ ವೇತನವಾಗಿ ಗ್ರೇಂಟು ಎಣಿಸುವ ಕಾನೂನು ಆಗ ತಾನೆ ಜಾರಿಗೆ ಬಂದಿದ್ದುದರಿಂದ ಇನ್ಸ್ಪೆಕ್ಟರರೊಡನೆ ವಿಚಾರಿಸಿ, ನನ್ನ ಕೊರಳನ್ನು ಮಾಸ್ತರಿಕೆಯ ನೊಗಕ್ಕೆ ಕಟ್ಟುವ ನಿರ್ಧಾರವನ್ನು ಅವರು ಮಾಡಿರಬೇಕು. ನನಗೆ ಬೇಕಾಗಿದ್ದುದೂ ಅದೇನೆ. ಒಂದು ಕಲ್ಲಿಂದ ಎರಡು ಹಣ್ಣು ಬಿದ್ದಂತಾಯಿತು. ವಿದ್ಯಾರ್ಥಿಯಾಗಿದ್ದ ನನಗೆ ಉಪಾಧ್ಯಾಯನ ಗದ್ದುಗೆಯನ್ನೇರುವ ಲಾಭವೊಂದು. ಉಪಾಧ್ಯಾಯನಾಗಿದ್ದುಕೊಂಡು, ತನ್ನ ಅಧಿಗುರುವನ್ನು ವರ್ಷವರ್ಷವೂ ನೋಡುವ ಸುಯೋಗ ಇನ್ನೊಂದು. ಈ ಎರಡರಿಂದ ಎರಡರಷ್ಟು ತೃಪ್ತನಾಗಿ, ನಾನು ಹೂಂಗುಟ್ಟಿದೆ. ಒಪ್ಪಿದ್ದೇ ತಡ, ಮತ್ತಿನ ಮಾರ್ಚಿ ಎರಡಕ್ಕೆ ನಾನು ಸಣ್ಣ ಮಾಸ್ತರನಾಗಿ ನೇಮಕಗೊಂಡೆ. ಸಣ್ಣದೊಂದು ಕ್ಲಾಸು, ಕ್ಲಾಸಿನ ಮಧ್ಯೆ ಸಣ್ಣದಾದ ಕಾಲುಮಣೆ ನನಗಾಗಿ ಕೊಡಲ್ಪಟ್ಟಿತು.

ಮೊದಲಿನ ನಮ್ಮ ಸಾಲೆತ್ತೂರು ಸಾಲೆಯು ಸ್ಥಳಾಂತರವಾಗಿ, ಮಾದಕಟ್ಟೆ ಸಾಲೆಯಾಯಿತು. ಹಂಚಿನ ಮಾಡಿನ ಅಂದವಾದ ಕಟ್ಟಡ. ಮಾಸ್ತರರ ಮನೆ ತೀರ ಸಮೀಪಕ್ಕಿತ್ತು. ಇಂದೋ ನಾಳೆಯೋ, ನಮ್ಮ ಸಾಲೆಯ ಎರಡನೆ ಬಾರಿಯ ಪರೀಕ್ಷೆ. ಪೂಜ್ಯ ಗುರುವಿನ ಪುನರ್ದರ್ಶನದ ಪುಣ್ಯಕಾಲ ಸನ್ನಿಹಿತವಾಗಿದೆ.

ಶ್ರೀ ಪಂಜೆಯವರ ಸವಾರಿ, ನನ್ನ ಮೊದಲಿನ ಸಾಲೆಯಾದ ಪಡಾರಿನಲ್ಲಿಳಿದುಕೊಂಡಿತ್ತು ಎಂಬ ಸುದ್ದಿ ನಮ್ಮ ಮಾಸ್ತರರ ಕಿವಿಗೆ ಬಿದ್ದುದೇ ತಡ, ಶ್ರೀ ಕೃಷ್ಣರಾಮರನ್ನು ಆಮಂತ್ರಿಸಲು ಅಕ್ರೂರನ ನಿಯೋಗವಾದಂತೆ ಇನ್ಸ್ಪೆಕ್ಟರ್ ಪಂಜೆಯವರನ್ನು ಕರೆದು ತರಲು ನನ್ನನ್ನು ನೇಮಕಮಾಡಿದರು. ನಾನು ಹೋದಾಗ ಪೂಜ್ಯ ಗುರುಗಳು ತಾವು ಬರೆದ ಒಂದನೇ ಪದ್ಯ ಪುಸ್ತಕದಲ್ಲಿನ 'ಅಣ್ಣನ ವಿಲಾಪ' ಪದ್ಯವನ್ನು ವಿವರಿಸುತ್ತಿದ್ದರು. (ಆಗ್ಗೆ ಅದು ಛಾಪೆಯಾಗಿರಲಿಲ್ಲ.) ಪದ್ಯ ಹೀಗಿತ್ತು:-

"ಗದ್ದೆಗೋರುವ ಹಲಗೆ ಮೇಲೆ ಎಲೆಹಾಸಿ ।  
ಸುದ್ದ ನೀರನು ಮೀಸಿ ಅರಸಿನವ ಪೂಸಿ ।  
ಮುದ್ದು ಪುಟ್ಟನನುಡುಗೆಯಿಂದ ಸಿಂಗರಿಸಿ ।  
ಸದ್ದಿಲ್ಲದೆಲ್ಲಿಗೊಯಿದರು ಹಗಲೋಳಿರಿಸಿ ॥"

ಕ್ಲಾಸಿನ ಹೆಚ್ಚಿನ ಮಕ್ಕಳು ಬ್ರಾಹ್ಮಣರ ಮಕ್ಕಳಾದುದರಿಂದ ಇದರಲ್ಲಡಕವಾದ ಪೂರ್ವ ಸಂಕೇತವನ್ನು ಅವರ ಬಾಯಿಯಿಂದಲೇ ಹೊರಡಿಸಲು ತುಸು ಕಷ್ಟವಾಯಿತು. ಗುರುಗಳು ನನ್ನನ್ನು ನೋಡಿ, "ಹೇಳು, ಮಾರಪ್ಪ ಹೇಳು" ಎಂದರು. ನಮ್ಮವರಲ್ಲಿ ಸತ್ತವರ ಶವ ಸಂಸ್ಕಾರದ ಚಿತ್ರವೇ ಅದಾಗಿದ್ದುದರಿಂದ ಅರ್ಥ ಹೇಳಲಿಕ್ಕೆ ನನಗಂತು ಅತಿ ಸುಲಭವಾಯಿತು.

ಅಂದಿನ ಮಟ್ಟಿಗೆ ಅಲ್ಲಿಯೇ ಇದ್ದು ಮಾರಣೆಯ ದಿನ ಮಧ್ಯಾಹ್ನದ ನಂತರ ನಮ್ಮಲ್ಲಿಗೆ ಹೊರಟೆವು. ದಾರಿಯಲ್ಲಿ ಬರುವಾಗ ನಾಟಿ ನಡುವವರ 'ಓ ಬೇಲೆ' ಹಾಡು ಕೇಳಿ, ಅರ್ಥಗಳಿಗೆ ಗದ್ದೆ ಅಂಚುಗಳ ಮೇಲೆಯೇ ನಿಂತರು. ನಮ್ಮನ್ನು ಕಂಡ ಕೂಲಿ ಹೆಂಗುಸರು ಬೆಕ್ಕಸಗೊಂಡು, ತಮ್ಮ 'ಕಬಿತ' ವನ್ನು ಅರ್ಧದಲ್ಲೇ ನಿಲ್ಲಿಸಿಬಿಟ್ಟರು. ಕಡೆಗೆ ನನ್ನ ಸಂಧಾನದಿಂದ ಕೆಲವು ಮಂದಿ ಮುದಿ ಹೆಂಗುಸರು, — 'ಓಯ್ಯ, ಓಬೇಲೆ, ದಿಂಬಿಸಾಲೆ, ರಾವು ಕೊಂಗ್ರ್, ಪಕ್ಕಿಗುಳು, ಮಂಜಟ್ಟೆ ಕೋಣ'- ಮುಂತಾದ ಹತ್ತೆಂಟು ಕಬಿತೆಗಳ ಪಲ್ಲವಿಯನ್ನು ಹಾಡಿದರು. ಗುರುಗಳು ಕೇಳಿ ಸಂತೋಷಗೊಂಡು, ಅವರಿಗೆ ಒಂದು ರೂಪಾಯಿ ಇನಾಮು ಕೊಡಿಸಿದರು. ಆದರೆ, ಆ ಹೊತ್ತಿಗೆ ಅಲ್ಲಿಗೆ ಗುತ್ತಿನ ಕೋಚ ರೈಗಳು ಬಂದುದರಿಂದ, ಹೆಂಗುಸರು ಆ ಇನಾಮನ್ನು ಸ್ವೀಕರಿಸಲಿಲ್ಲ. ರೈಗಳು ತಾನು ಅವರಿಗೆ ಇನಾಮನ್ನು ಬತ್ತದಲ್ಲಿ ಕೊಡುತ್ತೇನೆಂದು ಹೇಳಿ

ದರು. ನಿರುಪಾಯರಾಗಿ ನಾವು ಮುಂದೆ ಸಾಗಿದೆವು.

ಬರಬರುತ್ತಾ ನಾವು ಬೈಲು ಕಳೆದು, ಬೆಟ್ಟನ್ನು ದಾಟಿ, ಅಡಕದ ಬೀಜದ ಪಾಡಿಗೆ ಕಾಲಿಟ್ಟೆವು. ಇಬ್ಬದಿಯ ಮರಗ ಳೆಡೆಯಿಂದ ಕೇಳಿಸಿತೊಂದು ಹಕ್ಕಿಯ ಕೂಗು. ಗುರುಗಳು ಅರೆಗಳಿಗೆ ಅದನ್ನು ಕೇಳುತ್ತಾ ನಿಂತರು. ಪೊದರಿನಿಂದ ಕುಡುಮುಲೊಂದು ಹಾರಿದರೆ, ದರಗಿನಿಂದ ಅಣಬೆಯೊಂದು ಕಣ್ಣಿಗೆ ಬಿದ್ದರೆ–ಅದೇನೆಂದು ವಿಚಾರಿಸದೆ ಬಿಡುತ್ತಿದ್ದಿಲ್ಲ. ಎತ್ತರದ ಗುಡ್ಡ, ತಗ್ಗಿನ ಹಳ್ಳ, ವಿಶಾಲವಾದ ಮೈದಾನ, ಓಣಿ, ಒರ್ಕುರ್ಲು ಯಾವುದನ್ನು ಕಂಡರೂ ಅವರ ಹೆಸರನ್ನು ಹೇಳಬೇಕು; ಹೆಸರಿಗೆ ಕಾರಣವನ್ನು ಕೊಡಬೇಕು,ಸರಿಯಾಗ ದಿದ್ದರೆ, ಕೆಲವಕ್ಕೆ ಅವರೇ ಕಾರಣವನ್ನು ಊಹಿಸುತ್ತಿದ್ದರು. ಹೀಗೆ ಕೇಳುತ್ತಾ ಹೇಳುತ್ತಾ ಹೊತ್ತು ಕಂತುವುದರೊಳಗೆ ಹೇಗೂ ನಾವು ಮಾಸ್ತರರ ಮನೆಗೆ ಬಂದೆವು. ರಾತ್ರಿ ಉಂಡು; ತಿಂದು ಮಲಗುವಾಗ ಗಂಟೆ ಹನ್ನೆರಡಾಯಿತು. ಆ ವರೆಗೆ 'ಬಂಟ-ಒಟ್ಟೆ, ಬಿಲ್ಲರವ-ಬೆಲ್ಲದವ, ದೀನ-ತೀಯ; ಹವೀಕ-ಹೈಗ, ಕೊಂಕಣ-ಕೊಂಕಣಿ'— ಈ ಮಾತುಗಳ ಸಾಮ್ಯ, 'ಪಗ್ಗು' ಪದದ ವ್ಯುತ್ಪತ್ತಿ, 'ತುಳು' ಶಬ್ದದ ನಿಷ್ಪತ್ತಿ ಹೇಗಾ ಗಿರಬೇಕೆಂದು ಎಲ್ಲರೂ ಸೇರಿ ಚರ್ಚಿಸಿದೆವು. ಬೆಳಗಾಗ ಬೇಕಾಗಿದ್ದರೆ, ಒಬ್ಬ ನಲ್ಕೆ ಹೊಲೆಯನನ್ನು ಕರೆಯಿಸಿದ್ದಾ ಯಿತು. ಅವನಿಂದ ಆಟಿ ಕಳೆಂಜನ ಪಾಡ್ದನವನ್ನೂ, ಬೈದ ರ್ಕಳ ಸಂಧಿಯನ್ನೂ ಹೇಳಿಸಿದ್ದಾಯಿತು. ಅದೆಲ್ಲವನ್ನೂ ನಾನೂ, ಅವರ ಪೇದೆ ರಾಮ ನಾಯ್ಕನೂ ಪೂರ್ಣವಾಗಿ ಬರೆದುಕೊಂಡದ್ದಾಯಿತು. ಬಂದ ನಲ್ಕೆಯ ಹೊಲೆಯನಿಗೆ ಎರಡು ರೂಪಾಯಿಗಳನ್ನು ಇನಾಮು ಕೊಟ್ಟುದೂ ಆಯಿತು.

ನಮ್ಮ ಸಾಲೆಯ ಗಂಟೆ ಕೇಳಿಸಿತು. ಪ್ರಾರ್ಥನೆಗೆ ಸರಿ ಯಾಗಿ ಇನ್ಸ್‌ಪೆಕ್ಟರರೂ ಬಂದರು. ಅಂದಿನ ಸುರುವಿನ ಪರೀಕ್ಷೆಯು ಮೂರನೆಗೆ-ಭೂಗೋಳದಲ್ಲಿ. ದಕ್ಷಿಣ ಕನ್ನಡ ಜಿಲ್ಲೆಯ ಪಠ, ಪಠದಲ್ಲಿನ ಮುಖ್ಯ ನದಿಗಳು, ಪಟ್ಟಣಗಳು, ಘಟ್ಟಗಳು–ಒಂದೂ ಬಿಡದೆ ಬಾಯಿಪಾಠ ಕಲಿಸಿತ್ತು. ಎಲ್ಲಾ ಶಾಲೆಗಳ ಪದ್ಧತಿಯೂ ಹೀಗೆಯೇ ಇದ್ದಿತ್ತು. ಆದರೆ ಇನ್ಸ್‌ಪೆಕ್ಟರರು ಅದನ್ನೊಂದೂ ಕೇಳದೆ, ಮೂರನೆ ನಾಲ್ಕನೆ ಕ್ಲಾಸು ಗಳನ್ನು ಒಂದುಗೂಡಿಸಿ 'ಎರಡು ಅಯನಗಳು' ಎಂಬ ಪಾಠ ವನ್ನು ವಿವರಿಸಿದರು. ಸೂರ್ಯ, ಸೂರ್ಯನ ವರ್ಷ, ವರ್ಷದ ಹನ್ನೆರಡು ತಿಂಗಳು – ಇದನ್ನೇ ಆರಾರು ತಿಂಗಳ ಎರಡು ಸಾಲಿಗೆ ಹನ್ನೆರಡು ಮಕ್ಕಳನ್ನು ನಿಲ್ಲಿಸಿ, ಉತ್ತರದ-ದಕ್ಷಿಣದ ಕಡೆಗೆ ಸೂರ್ಯನು ವಾಲುತ್ತಾ ಹೋಗುವಂತೆ ಕಾಣುವುದನ್ನು ಚಿತ್ರಿಸಿಕೊಟ್ಟರು. ಉಪಾಧ್ಯಾಯರಾದ ನಮಗೇ ಅದು ಹೊಸತಾಗಿ ಕಂಡು, ನಾವು ಪಿಳಪಿಳನೆ ಕಣ್ಣು ಬಿಟ್ಟೆವು. ನಮ್ಮ ಬೆರಗನ್ನು ನೋಡಿ, "ಇ. ಮಾರ್ಸ್ಡೆನ್ ದೊರೆಗಳಿಂದ ರಚಿಸಲ್ಪಟ್ಟ, ಬಾಸೆಲ್ ಮಿಶ್ಯನ್ ಛಾಪಖಾನೆ ಯಲ್ಲಿ ಆಗ ತಾನೆ ಮುದ್ರಿತವಾದ ದಕ್ಷಿಣ ಕನ್ನಡ ಜಿಲ್ಲೆಯ ಒಂದನೇ ಭಾಗ, ಎರಡನೇ ಭಾಗ ಭೂಗೋಳ ಶಾಸ್ತ್ರ ಪುಸ್ತಕ ಗಳನ್ನು ನೋಡಿಕೊಳ್ಳಿರಿ" ಎಂದರು. (ಸಹಜವಾಗಿ ಅದನ್ನು ಇವರು ಬರೆದು, ದೊರೆಯ ಹೆಸರು ಕೊಟ್ಟಿದ್ದರು.)

ಸರಿ, ಹೀಗೆ ಏಳೆಂಟು ವರುಷಗಳ ಪರೀಕ್ಷೆ ಅವಿಚ್ಛಿನ್ನ ವಾಗಿ ಇವರಿಂದಲೇ ನಡೆಸಲ್ಪಟ್ಟಿತು. ಇಷ್ಟು ವರ್ಷಗಳಲ್ಲಿ ಯೂ ಇನ್ಸ್‌ಪೆಕ್ಟರರನ್ನು ನಮ್ಮ ಸಾಲೆಗೆ ಕರೆದು ತರುವ, ಪುನಃ ಕಳುಹಿಸಿಕೊಡುವ ಭಾರ ನನ್ನ ಮೇಲೆಯೇ ಇರುತ್ತಿತ್ತು. ಎರಡೇ ವರ್ಷದಲ್ಲಿ ನನಗೆ ಕೊಡಬೇಕಾಗಿದ್ದ ಸರ್ಟಿಫಿಕೇಟು ಇನ್ನೂ ನನಗೆ ಸಿಕ್ಕಿರಲಿಲ್ಲ.

ವರುಷಹೋದಂತೆ ಕಲಿಸುವುದರಲ್ಲಿ ಹೊಸಕ್ರಮಗಳು ಬಂದುವು. ಕಲಿಸಲು ಕರಿಕ್ಯುಲಂ, ಸಿಲಿಬಸ್‌ಗಳು ಹೊರ ಬಿದ್ದುವು. ವರುಷಕ್ಕೆ ಒಂದು ತಿಂಗಳೂ ತೆರೆಯಲ್ಪಡದ ಸಾಲೆ ಗಳು ಜೀವಗೊಂಡುವು. ಅಡಗುವ ಹಳ್ಳಿಯ ಉಪಾಧ್ಯಾ ಯರು ಕಣ್ಣಿದಿರಿಗೆ ಬೀಳತೊಡಗಿದರು. ಹಳ್ಳಿಯ ಹತ್ತು ಸಮಸ್ತರಿಗೆ 'ಇನ್ಸ್‌ಪೆಕ್ಟರರೆಂದರೆ ಪಂಜೆ ಮಂಗೇಶರಾಯರು; ಪಂಜೆ ಮಂಗೇಶರಾಯರೆಂದರೇನೆ, ಇನ್ಸ್‌ಪೆಕ್ಟರರು' ಎಂಬ ಭಾವನೆ ಬೇರೂರಿತು. ಹಳ್ಳಿಯ ಅನೇಕ ವಿದ್ವಾಂಸರು ಅವರ ನ್ನೊಬ್ಬ ದೊಡ್ಡ ಕವಿಯೆಂದೂ ಒಪ್ಪಿಕೊಂಡರು.

ಈ ಮಧ್ಯೆ ವಿಟ್ಲದಲ್ಲೊಮ್ಮೆ ಉಪಾಧ್ಯಾಯರದೊಂದು ವಿಶೇಷವಾದ ಮೀಟಿಂಗ್ ಜರಗಿಸೋಣಾಯಿತು. ಸಭೆಗೆ ಕಡಮೆ ಪಕ್ಷ ನೂರೈವತ್ತು ಮಂದಿ ಉಪಾಧ್ಯಾಯರು ಕಲೆ ತಿದ್ದರು. ಆಗಿನ ಅಸಿಸ್ಟಾಂಟ್ ಇನ್ಸ್‌ಪೆಕ್ಟರ್ ಎಮ್. ರಘು ನಾಥರಾಯರೂ ಚಿತ್ತೈಸಿದ್ದರು. ಶ್ರೀಮಾನ್ ಪಂಜೆಯವರು ಮುಂಬಯಿ ಇಲಾಖೆಯ, ಒಂದರಿಂದ ಎಂಟರ ವರೆಗಿನ ಪಠ್ಯ ಪುಸ್ತಕಗಳನ್ನು ತರಿಸಿಕೊಂಡು, ಅವುಗಳಿಂದ ಹಲಕೆಲವು ಪ್ರಾಮುಖ್ಯ ವಿಷಯಗಳನ್ನು ಆಯ್ದು, ವಿವರಿಸಿ ಹೇಳಿದರು. ಮತ್ತು ನಮ್ಮಲ್ಲಿಯ ಉಪಾಧ್ಯಾಯರುಗಳೂ ಅನುಭವಕ್ಕಾಗಿ ಅಂಥಾ ಪುಸ್ತಕಗಳನ್ನು ತರಿಸಿಕೊಂಡು ತಮ್ಮ ಪಾಠ-ಪ್ರವ ಚನಗಳಲ್ಲಿ ಪ್ರಗತಿಹೊಂದಬೇಕೆಂದು ಪ್ರಾರ್ಥಿಸಿಕೊಂಡು ಹೇಳಿದರು. ರಾತ್ರಿಯಲ್ಲಿ, ಸೂರ್ಯನಿಗೆ ಭೂಮಿ ಚಂದ್ರರು ಸುತ್ತು ಬರುವ ಕ್ರಮವನ್ನು ಅತಿದೊಡ್ಡ ಗ್ಲೋಬಿನ ಮೂಲಕ ವಿವರಣೆ ನಡೆಯಿತು. ಅಲ್ಲದೆ ಮ್ಯಾಜಿಕ್ ಲೇಂಟರ್ನ್‌ಶೋ ನಡೆಯಿತು. ಅದರಲ್ಲಿ ಕಂಡುಬಂದ ಮುಖ್ಯ ವಿಷಯವೆಂದರೆ, ಪಂಜೆಯವರೇ ಹೊಸತಾಗಿ ತಯಾರಿಸಿದ ನಮ್ಮ ದಕ್ಷಿಣ ಕನ್ನಡಜಿಲ್ಲೆಯ ಪೂರ್ವೇತಿಹಾಸವನ್ನು ತೋರಿಸುವ ಅನೇಕಾ ನೇಕ ರಾಜಕೀಯ ಭೂಪಟಗಳು,ವಿವರಣೆಗಳು. ಪಶ್ಚಾತ್ತಾಪ ವೆಂದರೆ, ಅವರ ಜೀವಿತದಲ್ಲಿ ಅದು ಅರ್ಧಮರ್ಧವಾಗಿಯೇ

ಉಳಿದುಹೋಗಿ ಈ ವರೆಗೂ ಬೆಳಕಿಗೆ ಬೀಳದೆ ಹೋದುದು. ಎಷ್ಟೋ ಸಲ ಅವರು,–'ಅದನ್ನೊಂದು ಛಾಪಿಸಿಬಿಟ್ಟರೆ,'– ಎಂದು ನಮ್ಮ ಮುಂದೆ ಆಡಿದ್ದುಂಟು.

ಟ್ರೈನಿಂಗಿಗೆ ಸೇರಲಿಕ್ಕಾಗದೆ ಅನ್‌ಟ್ರೈನ್ಡ್ ಉಪಾಧ್ಯಾಯನಾಗಿ ಆರುವರ್ಷಕಾಲ ಕಳೆದ ನಾನು, ಉಪಾಧ್ಯಾಯಿಕೆಯಲ್ಲಿ ಜಿಗುಪ್ಸೆಗೊಂಡವನಾಗಿ, ಹದಿಮೂರನೇ ಇಸವಿ ಅಗೋಸ್ತಿಗೆ ಕುಳಾಲು ಶಾಲೆಯಲ್ಲಿ ಹೆಸರಿಗೆ ತಕ್ಕ ಮಾಸ್ತರನಾಗಿ ತಲೆ ಮರಸಿಕೊಳ್ಳುತ್ತಿದ್ದೆ. ಪರೀಕ್ಷೆಗೆ ಬಂದ ಪಂಜೆಯವರು, ನಿಸ್ತೇಜನಾದ ನನ್ನನ್ನು ಕಂಡೊಡನೆ,'ಹೇಗಿದ್ದೀಯೆ'ಎಂದರು. 'ಹೀಗಿದ್ದೇನೆ' ಎಂದು ಕೈ ತಗ್ಗಿಸಿದೆ. "ಹೆದರಬೇಡ. ನಿನಗೆಂತಲೇ ಕಾಸರಗೋಡಿನಲ್ಲೊಂದು ಸಾಲೆ ತೆರೆಯುತ್ತದೆ. 'ಸೆಶ್ಯನಲ್ ಸಾಲೆ' ಎಂದು ಅದರ ಹೆಸರು. ನಿನ್ನಂತೆಯೇ ಸರ್ಟಿಫಿಕೇಟಿಲ್ಲದ ಕೆಲವರನ್ನದರಲ್ಲಿ ಸೇರಿಸಿಕೊಳ್ಳಲಾಗುವುದು. ಅಲ್ಪ ಸ್ವಲ್ಪ ವೇತನ ಸಿಗಲೂಬಹುದು–ತಿಂಗಳೊಂದರ ಏಳು ರೂಪಾಯಂತೆ. ಆದರೆ, ಅದು ಸಿಕ್ಕೀತೆಂದೇ ನಂಬಬೇಡ. ಬೇಗನೆ ಅರ್ಜಿ ಮಾಡಿಕೊ. ನಿನಗೆ ಹುಕುಂ ಬರುತ್ತದೆ" ಎಂದು ಧೈರ್ಯಕೊಟ್ಟರು. ಅವರೊಂದಿಗೆ ಬಾಕ್ರಬೈಲು ವರೆಗೆ ಹೋಗಿ ನನ್ನ ಅರ್ಜಿಕೊಟ್ಟೆ. ಅಕ್ಟೋಬರ ಒಂದಕ್ಕೆ ಆ ಹೊಸ ತರಬೇತಿ ಸಾಲೆಗೆ ಸೇರಿ, ಮಾರ್ಚಿ ಮೂವತ್ತೊಂದಕ್ಕೆ ಬಿಡುಗಡೆಗೊಂಡೆ. ಈ ಆರು ತಿಂಗಳ ತರಬೇತಿನಿಂದ ನನಗೆ ಸರ್ಟಿಫಿಕೇಟಂತು ಸಿಕ್ಕಿತು.

ಒಂದು ದಿನ ಅಂದಿನ ಸರ್ಕಲ್ ಇನ್ಸ್‌ಪೆಕ್ಟರರಾದ ಯುರೋಪಿಯನರೊಬ್ಬರು ನಮ್ಮ ಸಾಲೆಗೆ ಸಂದರ್ಶನವಿತ್ತರು. ಅವರೊಡನೆ ಏನು ಶಿಫಾರಸು ಹೇಳಲಾಗಿತ್ತೋ ನಮಗೆ ತಿಳಿಯದು. ಜತೆಯಲ್ಲಿ ಪಂಜೆಯವರೂ ಆಗಮಿಸಿ, "ಹೇಳು, ಹೇಳು; ಪಾಡ್ದನ ಹೇಳು!" ಎಂದು ನನ್ನನ್ನು ಒತ್ತಾಯಿಸಿದರು. ತಪ್ಪಿಸಿಕೊಳ್ಳಲಿಕ್ಕಾಗದೆ, ಇನ್ಸ್‌ಪೆಕ್ಟರ್ ದೊರೆಗೆ 'ತುಳು ಬರಲಿಕ್ಕಿಲ್ಲ ಎಂಬ ಧೈರ್ಯದಿಂದ,:

"ಡೇನ ಡೆನ್ನನ ಡೇನನ.......ಓ............ಏ.......॥
ಉಳ್ಳಯ ಬುದ್ಯಂತಾ! ಯಾನಾಪುನೆಕ್–ಎನ್ನ ಮಗೀ
ಚೆನ್ನಯಾತುಂಡಾ....॥"

ಎಂದು ರಾಗವನ್ನು ಎಳೆದೆ. ಅದನ್ನು ಕೇಳಿ ಪಂಜೆಯವರು ನಡು ನಡುವೆ, "ಸರಿಸರಿ; ಕ್ವಾಯಿಟ್ ಸೋ!" ಎನ್ನುತ್ತಾ ತಲೆ ಅಲ್ಲಾಡಿಸಿದರು. ದೊರೆಗಳು ಹಾಡನ್ನು ಆಲೈಸಿ ಕೇಳಿ, ಪಿಸಿ ಪಿಸಿ ನಕ್ಕರು, ಮತ್ತು ನನ್ನೊಡನೆ ಹಸ್ತಲಾಘವ ಮಾಡಿದರು. ನಾನು ಹೇಳಿದ್ದೇನೊ, ದೊರಗಳಿಗೆ ಗೊತ್ತಾದ್ದೇನೊ! ಅಂತು 'ಹಳ್ಳಿಯ ಲಾವಣಿ', 'ಜಾನಪದ' ಸಾಹಿತ್ಯ ಸಹ ಇಲ್ಲಿ ಶಿಕ್ಷಣದ ಅಂಗವಾಗಿ ಕಲಿಸಲ್ಪಡುತ್ತದೆ.' ಎಂದು ಮೊದಲೇನೆ ಹೇಳಿದ್ದಿದ್ದರೆ, ಅದು ತಾನೆ ಋಜುವಾದಂತಾಯಿತು; ಮರ್ಯಾದೆ ಉಳಿಯಿತು.

ಇನ್ನೊಂದು ದಿನ ನಾನು ಪಂಜೆಯವರ ಬಿಡಾರಕ್ಕೆ ಹೋಗುವ ಅಗತ್ಯ ಬಿತ್ತು. ನಾನು ಹೋದಾಗ ಪಂಜೆಯವರು ಮುಂಜೆರಗನ್ನು ಹಿಡಿದ ಬಲಗೈಯನ್ನು ಸೊಂಟದಲ್ಲಿಟ್ಟುಕೊಂಡು, ಎಡದ ಕೈಯಿಂದ ಉದ್ದಕ್ಕೆ ತೊಟ್ಟಿಲು ತೂಗುತ್ತಿದ್ದರು; ಏನನ್ನೋ ಹಾಡುತ್ತಿದ್ದರು. ಮುಂದೆ ನಾನು ಟ್ರೈನಿಂಗಿನಲ್ಲಿದ್ದಾಗ ಅದೇ ಹಾಡು "ಹಗಲೆಲ್ಲಾ ಕಳೆಯಿತು" ಎಂಬ ಸಂಜೆಯ ಹಾಡಾಗಿ ಪ್ರಕಟಣೆಗೆ ಬಂದಿತು. ಉದ್ದಕ್ಕೆ ಒಂದು ತರ, ನಾಲ್ಕು ಬಳ್ಳಿ ಹಿಡಿದು ಗಿಡ್ಡಕ್ಕೆ ಒಂದು ತರ ತೊಟ್ಟಿಲು ತೂಗುವಂತೆಯೂ, ಅದಕ್ಕೆ ಸರಿಯಾಗಿ ಹಾಡುವಂತೆಯೂ, ಆ ಹಾಡು ಹೆಣೆದುಕೊಂಡಿದೆ ಎಂದು ಅವರೇ ಅದನ್ನು ಅನುಕರಣೆಮಾಡಿ ಹೇಳಿದರು. ಆಗ ಹಿಂದಿನ–ತೊಟ್ಟಿಲು ತೂಗಿದ ಹಾಡಿನ ನೆನಪಾಯಿತು.

ಒಂದೊಂದು ದಿನ ಪಂಜೆಯವರು ರೈಲ್ವೆಸ್ಟೇಶನ್ ಕಡೆಗೆ ಹೋಗುವ ಸಂಪ್ರದಾಯವಿತ್ತು. ಸಾಯಂಕಾಲ ಸಾಲೆ ಬಿಟ್ಟ ಮೇಲೆ ನಾನು ಅವರನ್ನು ಬಹುದೂರದಿಂದ ಹಿಂಬಾಲಿಸುವದಿತ್ತು. ಅವರಿಗೆ ಮನಸ್ಸಾದರೆ, ಒಮ್ಮೊಮ್ಮೆ 'ಬಾ, ಬೇಗ ಬಾ; ಸ್ಟೇಶನ್ ಕಡೆಗೆ ಹೋಗೋಣ' ಅನ್ನುತ್ತಿದ್ದರು. ಜತೆಗೂಡಿ ಹೋಗುತ್ತಿದ್ದಾಗ, ಹಲಕೆಲವು ಹಳೆಯ ಹಾಡು, ಅವರ ಹಾವಿನ ಹಾಡುಗಳಂಥವನ್ನು ಅಲ್ಲಿ ನಿಂತು ಹಾಡಿ, ಆಡಿ, ನಕ್ಕು, ನಲಿದು ಅಭಿನಯಿಸಿ ರಸಪೋಷವಾಗುವಂತೆ ಹೇಳಿಕೊಡುತ್ತಿದ್ದರು. ದಾರಿಯ ನಟ್ಟನಡುವೆ ನಡೆಯುವ ಇಂಥಾ ನಟನೆಯನ್ನು ಕಂಡು ಯಾರಾದರೂ ಕುಚೋದ್ಯ ಮಾಡಿದರೆ,, ನೋಡಿಯೂ ನೋಡದ ಹಾಗೆ ಮಾಡುತ್ತಿದ್ದರೇ ಹೊರತು, ಮಧ್ಯದಲ್ಲಿ ನಿಲ್ಲಿಸುತ್ತಿರಲಿಲ್ಲ.

ಮತ್ತೊಂದು ದಿನ ಇದೇ ರೀತಿ ಹಿಂಬಾಲಿಸುತಿದ್ದಾಗ ನಾನು ದೊಡ್ಡ ಪೇಚಿನಲ್ಲಿ ಬಿದ್ದುಬಿಟ್ಟೆ. ಬರುತ್ತಿರುವ ನನ್ನನ್ನು ತಿರುಗಿ ನೋಡಿ ಪಂಜೆಯವರು, "ಏನು! ಎಲ್ಲಿಗೆ?" ಎಂದು ಅಬ್ಬರಿಸಿ ಗದರಿಸಿಬಿಟ್ಟರು. ಕಾರಣ ತಿಳಿಯದ ನಾನು ತುಂಬಾ ಕಂಗಾಲಾಗಿ ಅತ್ತುಕೊಂಡು, ಅಲ್ಲೇ–ಸಂಕದ ಬಳಿ ನಿಂತುಬಿಟ್ಟೆ. ಪಂಜೆಯವರು ಸ್ವಲ್ಪ ದೂರ ಹೋಗಿ, ಹಿಂದಿರುಗಿ ನೋಡಿ, ಮುಂದುವರಿದುಬಿಟ್ಟರು. ಅಷ್ಟರಲ್ಲಿ ಅಲ್ಲಿಗೆ ಬಂದ ನಮ್ಮ ಮಾಸ್ತರ್ ಬಾಲಕೃಷ್ಣರಾಯರು, ನನ್ನ ದುರವಸ್ಥೆಯನ್ನು ಕಂಡು, ಕಾರಣವನ್ನು ತಿಳಿದು,"ನಿನಗೆ ಗೊತ್ತಿಲ್ಲ. ಅವರ ಮಗುವೊಂದು ತೀರಿಹೋಗಿದೆ. ಅವರಿಗೆ ಅತೀವ ದುಃಖವಿದ್ದುದರಿಂದ ಹಾಗೆ ಹೇಳಿರಬೇಕು; ಕಾರಣವನ್ನು, ನೀನು ತಿಳಿಯದಾದೆ" ಎಂದು ನನ್ನನ್ನು ಸಂತೈಸಿದರು.

ಸರಿ, ಸುಮಾರು ೧೯೧೫ರ ನಂತರ ಪಂಜೆಯವರು ಮಂಗಳೂರು ಗವರ್ನಮೆಂಟ್ ಹಾ. ಎ. ಟ್ರೈನಿಂಗ್ ಶಾಲೆ

ಯ ಹೆಡ್ಮಾಸ್ಟರರಾಗಿ ನೇಮಕಗೊಂಡರು. ಅನಂತರದ ಅವರ ಐದಾರು ವರ್ಷದ ಅಧ್ಯಾಪಿಕೆಯಲ್ಲಿ ಟ್ರೈನಿಂಗ್ ಶಾಲೆಯು ಉಚ್ಛ್ರಾಯ ಸ್ಥಿತಿಗೆ ಬಂತು. ತರಬೇತು ಶಾಲೆಯು ಒಂದು ಮಾದರಿ ಶಾಲೆಯಾಗಿ ಹೆಸರಿಗೆ ಬಂತು. ಶ್ರೀಪಂಜೆ, ಉಳ್ಳಾಲ, ಬಾಬು, ಕೊಳಲೂರು, ಮಾಧವಭಟ್ ಮುಂತಾದವರು ಅದಕ್ಕಾಗಿಯೇ ದುಡಿದರು. ಕಾಮತ್, ತೋನ್ಸೆ, ಕೋಟಿಕಾರ್, ಗೋಪಾಲ ರಾವ್ ಮೊದಲಾದವರು ಮನವಾರೆ ಸಹಕರಿಸಿದರು. ಮಂಗಳೂರಿನ ಎಲ್ಲಾ ಶಾಲಾ ಕೋಲೇಜಿನವರೂ ಇಲ್ಲಾಗುವ ಪ್ರತಿಯೊಂದು ವಿದ್ಯಾಪ್ರದರ್ಶನ—ಪ್ರಮೇಯಗಳಲ್ಲಿ ಹೃದಯಬಿಚ್ಚಿ ನೆರವಾದರು. ಬೆಂಗಳೂರು ಸರ್ಕಲ್ ಇನ್ಸ್ಪೆಕ್ಟರ್ ಜೆ. ಎ. ಏಟ್ಸ್ ದೊರೆಗಳಿಗೆ ಟ್ರೈನಿಂಗ್ ಶಾಲೆ ಎಂದರೆ, ಅಚ್ಚುಮೆಚ್ಚಿನ ತವರ್ಮನೆಯಾಯಿತು.

ಪುತ್ತೂರು ತಾಲೂಕು ಬೋರ್ಡಿನವರು ತಮ್ಮ ಶಾಲೆಗಳ ಪರವಾಗಿ ಪುತ್ತೂರಿನಲ್ಲೊಂದು ವಿದ್ಯಾ ಪರಿಷತ್ತನ್ನು ೧೯೧೯ನೇ ದಶಂಬರ ಆಖೈರವಾರದಲ್ಲಿ ಜರಗಿಸಿದರು. ನವೀನ ರೀತಿಯಲ್ಲಿ ಪಾಠ ಪ್ರವಚನಗಳನ್ನು ಕೊಡಿಸಲಿಕ್ಕಾಗಿ ಟ್ರೈನಿಂಗ್ ಶಾಲೆಯವರೂ, ಜಿಲ್ಲೆಯ ಇನ್ನಿತರ ಹೆಸರಾಂತ ಸಾಹಿತಿಗಳೂ ಆಮಂತ್ರಿತರಾಗಿದ್ದರು. ಅದನ್ನು ನೋಡಲಿಕ್ಕೆಂದು ಇತರ ಉಪಾಧ್ಯಾಯರುಗಳಂತೆ ನಾನೂ ಹೋಗಿದ್ದೆ. "ಸಾಲೆ ಸೇರಿದೊಡನೆ, ಐದು ಹರಿಯದ ಮಗುವಿಗೆ ಭಾಷಾಪಾಠವನ್ನು ಹೇಗೆ ಆರಂಭಿಸಬಹುದು" ಎಂಬುದನ್ನು ಅಲ್ಲಿ ಸೇರಿದ ಉಪಾಧ್ಯಾಯರೆಲ್ಲರೂ ಹೇಳಬಹುದೆಂದು ಸೂಚಿಸಿದರು. 'ಬಾ, ಹೋಗು, ನಿಲ್ಲು, ಕೂರು, ಏಳು,' ಎಂದು ನಾನು ಬರೆದು ಓದಿದುದಕ್ಕೆ ಪಂಜೆಯವರ ಶಿಫಾರಸು ಸಿಕ್ಕಿತು. 'ಇರಲಿ, ನೀನೇಕೆ ಟ್ರೈನಿಂಗಿಗೆ ಬರುವುದಿಲ್ಲ? ಬರುವುದಿದ್ದರೆ ಇದೀಗ ಸಮಯ. ಅರ್ಜಿಮಾಡು. ಹುಕುಂ ಬಂದೀತು—ಹುಕುಂ ಬಾರದಿದ್ದರೂ ಬಾ' ಎಂದು ಬಾಯಿಬಿಟ್ಟು ಹೇಳಿದರು. ಹನ್ನೆರಡು ವರ್ಷ ಬರಿದೆ ಸರ್ವಿಸು ಮಾಡಿದ ನನಗೆ ವಿನಾಯತಿಯ ಸರ್ಟಿಫಿಕೇಟೇ ಉತ್ತಮವೆಂದು ಯೋಚಿಸಿದೆ. ಪಂಜೆಯವರು, 'ಇಲ್ಲ, ಇಲ್ಲ; ನೀನು ಸರ್ವಥಾ ಹಾಗೆ ಮಾಡಕೂಡದೆ'ಂದೂ, ಈ ಕಾಲದಂಥಾ ಒಂದು ಒಳ್ಳೆಯ ಸಂದರ್ಭ ನಿನ್ನ ಅಭಿವೃದ್ಧಿಗೆ ನಿನಗೆ ಬೇರೆ ಸಿಗದೆಂದೂ,ನೀನು ಅಗತ್ಯ ಬರಲೇಬೇಕೆಂದೂ ಆಗ್ರಹಪಡಿಸಿದರು. ನಾನದನ್ನು ಶಿರಸಾವಹಿಸಿದೆ.

೧೯೨೦ನೇ ಜೂನಿಗೆ ನನಗೆ ಹುಕುಂ ಬಂದಿತು. ಸಾಲೆಗೆ ಸೇರಿದೆ. ಆ ವರ್ಷದ ಲೋವರ್ ಗ್ರೇಡ್ ಉಪಾಧ್ಯಾಯರ ಮಟ್ಟ ತೀರ ಕೆಳಗಿನದಿತ್ತು. ಇದರ ದೆಸೆಯಿಂದ ಲೋವರ್ ಗ್ರೇಡಿನವನಾದ ನಾನು ಆರುತಿಂಗಳವರೆಗೆ ಅರಿದುದನ್ನೇ ಅರೆದುಣ್ಣಬೇಕಾಯಿತು. ನಮ್ಮ ಕ್ಲಾಸಿಗೆ ಪಾಠಕ್ಕೆ ಬರುವುದಕ್ಕೂ ಹೆಚ್ಚಿನ ಉಪಾಧ್ಯಾಯರಿಗೆ ಬೇಸರ. ಪಂಜೆಯವರ ಪಾಲಿಗೆ ಎಲ್ಲರೂ ಬಿಟ್ಟ ಕಿಂಡರ್‌ಗಾರ್ಟನ್ ಪಾಠ ಬಂದಿತ್ತು. ಅದೂ ನಮ್ಮ ಕ್ಲಾಸಿಗೆ ವಾರಕ್ಕೆ ಬರಿಯ ಎರಡು ಪಾಠಗಳು ಮಾತ್ರ. ಇದರಿಂದೆಲ್ಲ ನನಗೆ ತುಂಬ ಅಸಮಾಧಾನವಾಯಿತು. ಒಂದು ದಿನ ಅವರ ಬಿಡಾರಕ್ಕೆ ಹೋಗಿ ನನ್ನ ಮನಸ್ಸನ್ನು ಬಿಚ್ಚಿ ಹೇಳಿದೆ; ಹೇಳುವಾಗ ನನಗೆ ಅಳುವೂ ಬಂತು. ಅಂದಿನಿಂದ ನಮಗೆ ಪಂಜೆಯವರ ಪಾಠಗಳ ಸಂಖ್ಯೆ ಮೂರಕ್ಕೇರಿತು. ಪಂಜೆಯವರು ತನ್ನ ಪಾಠದಲ್ಲಿ, ಕನ್ನಡ ಕಾವ್ಯಗಳನ್ನೂ ಸಂದರ್ಭಾನುಸಾರ ತಂದುಕೊಂಡು, ಅವುಗಳಲ್ಲಿ ಹರಿಯುವ ರಸವಾಹಿನಿಯನ್ನು ತೋರಿಸಿಕೊಟ್ಟರು. ಮತ್ತು "ಅದಕ್ಕಾಗಿಯೇ ಅವುಗಳನ್ನು ಆರಿಸಿದ್ದಾಗಿದೆ" ಎಂದೂ ಖಚಿತಪಡಿಸಿದರು. ಅವರು ತನ್ನ ಕಿಂಡರ್‌ಗಾರ್ಟನ್ ಪಾಠದಲ್ಲಿ ನಮಗೆ ಹೇಳಿದುದು ಮನಃಶಾಸ್ತ್ರವನ್ನು. ಅವರು ಏನೇನೆಲ್ಲಾ ಹೇಳಿದ್ದರೋ, ಅವೆಲ್ಲಾ ಪುತ್ತೂರು ವಿದ್ಯಾಪರಿಷತ್ತಿನ ಫಲಶ್ರುತಿ ಎಂಬಂತೆ ಮುಂದೆ ಇಂಗ್ಲಿಷ್ 'ಬುಲೆಟಿನ್' ರೂಪದ ವಹಿಯಾಗಿ, 'ಶಾಲಾ ಪತ್ರಿಕ'ಗಳೆಂಬ ಹೆಸರಿನಿಂದ ಹೊರಗೆ ಬಂದುವು. ಅವುಗಳಲ್ಲಿ 'ಬೋಧನೆ ಎಂದರೇನು?' ಎಂಬುದು ಒಂದು.

ಪಂಜೆಯವರ ಮನೆ ನಮ್ಮ ಬೋರ್ಡಿಂಗಿಗೆ ತೀರ ಸಮೀಪವಿದ್ದುದರಿಂದ ಪ್ರತಿನಿತ್ಯವೆಂಬಂತೆ ಅವರು ರಾತ್ರಿ ಬರುತ್ತಿದ್ದರು. ಬಂದ ಬಂದಾಗ ಅವರು ಅವರಿಗೆ ಮೆಚ್ಚಿಗೆಯಾದ ಕಾವ್ಯಗಳನ್ನುಎರಡು ಮೂರು ಘಂಟೆಗಳ ತನಕ ವಿವರಿಸುತ್ತಿದ್ದರು. ಲಕ್ಷ್ಮೀನಾರ್ಣಪ್ಪ(ಮುದ್ದಣ) ಕವಿಯ 'ರಾಮಾಶ್ವಮೇಧವು' ಅವುಗಳಲ್ಲೊಂದು. ಕವಿ ಉಪಯೋಗಿಸಿದ 'ಕುರುಂಬುಲ್ಲಂ' ಎಂಬ ಪದವೇ ನಮ್ಮಲ್ಲಿನ 'ಕುರುಂಬ್ಲಿ' ಯಾದುದರಿಂದ, ಅವನನ್ನು ನಮ್ಮವನನ್ನಾಗಿ ಮಾಡಿತು. ಇಲ್ಲದಿದ್ದರೆ, ಅವನು ಮೈಸೂರಿನವನೋ, ಇನ್ನಿತರ ನಾಡವನೋ ಎಂದೇ ಆಗಿ ಹೋಗುತ್ತಿದ್ದನೆಂದು ಹೇಳಿದ ವಿಮರ್ಶೆ ಮಾತು ಈಗಲೂ ನನ್ನ ನೆನಪಿನಲ್ಲಿದೆ.

ಬಿಡುವಿದ್ದಾಗ ಎಷ್ಟೋ ಬಾರಿ ನನ್ನನ್ನು ಅವರ ಬಿಡಾರಕ್ಕೆ ಕರೆಯಿಸಿದ್ದುಂಟು. ನಾನು ಒಳ್ಳೆಯ ಬರಹ ಬರೆಯುತ್ತಿದ್ದುದರಿಂದ ಅವರು ಬಾಯಿಂದ ಹೇಳುತ್ತಾ ಹೋದಂತೆ ಅಜ್ಜಿ ಕಥೆಗಳನ್ನೋ, ಹೊಸಗನ್ನಡ ಪಾಠಗಳನ್ನೋ ಬರೆಯುತ್ತಿದ್ದೆ. ಅವರು ಇಂಗ್ಲಿಷಿನಿಂದ ಕನ್ನಡಿಸಿದ 'ಮಹಾಯುದ್ಧದ ಕಥೆ'ಯನ್ನು ಬರೆದುದು ನಾನು. ಅದು ಪುಸ್ತಕ ರೂಪವಾಗಿ, ಗವರ್ನ್ಮೆಂಟಿನಿಂದ ಹೊರಬಿದ್ದಾಗ ಅದರೊಳಗಿನ ಪ್ರತಿಯೊಂದುಸೊಲ್ಲೂ ನನಗೆ ನೆನಪಿಗೆ ಬರುತ್ತಿತ್ತು. ಹೆಚ್ಚಿನವರಿಗೆ ಅದನ್ನುಯಾರು ಕನ್ನಡಿಸಿದ್ದೆಂದು ಇಂದಿಗೂ ಗೊತ್ತಿಲ್ಲ. ಅವರ ಬರವಣಿಗೆ ಬಲ್ಲವರಿಗೆ ಅದರ ನಾಲ್ಕು ಪಂಕ್ತಿ ಓದಿದಾಗ ಅದು ಪಂಜೆಯವರದೆಂದು ಹೊಳೆಯದಿರದು. 'ಯಾಥಾದರೂ ಹಣ್ಣ

ವನ್ನು ಸುಮ್ಮನೆ ಪೋಲುಮಾಡುತ್ತಾರೆಯೇ' ಇದು ಅದರೊಳಗಿನ ಒಂದು ವಾಕ್ಯ. ಅದರಲ್ಲಿ 'ಪೋಲು' ಪದ ನನಗೆ ಅಂದಿಗೆ ಹೊಸತು. ಅಲ್ಲಿಂದಲೇ ನಾನದನ್ನು ಹೆಕ್ಕಿಕೊಂಡೆ; ಇಂದಿಗೂ ಅದು ಅಳಿಸಿಹೋಗಿಲ್ಲ.

ಪಂಜೆಯವರ ಕೈಕೆಳಗೆ ಟ್ರೈನಿಂಗಿನಲ್ಲಿದ್ದಾಗ ಒಂದು ದಿನ ನಾನು ಒಂದು ಕವಿತೆ ಬರೆದೆ. 'ಬಂಟರ ಯಾನೆ ನಾಡವರ ಏಳಿಗೆ' ಎಂದು ಅದರ ಹೆಸರು. ಅದರಲ್ಲಿ ತುಂಬ ತಪ್ಪು ಇತ್ತು. ಆದಿ, ಅಂತ್ಯ ಪ್ರಾಸ ನಿಬದ್ಧವಿದ್ದುದರಿಂದ ಅದು ಪಾಮರ ಜನರ ಕಿವಿರಂಜನೆಗಿತ್ತೇ ಹೊರತು, ಕಾವ್ಯರಸಾತ್ಮಕವಾಗಿರಲಿಲ್ಲ. ಆದರೂ ಅದನ್ನು ಕ್ಲಾಸಿನ ಮಧ್ಯೆ ನಾನೊಮ್ಮೆ ಹಾಡಿ ಪಂಜೆಯವರಿಗೆ ತೋರಿಸಿದೆ. ಸಂತೋಷದಿಂದ ತೆಗೆದುಕೊಂಡು, ಕ್ಷಣಾರ್ಧದಲ್ಲಿ ಪುಟವನ್ನು ಮೊಗಚಿ, ಹಿಂದಕ್ಕೆ ಕೊಟ್ಟರು. ಮತ್ತು ಆಗಲೇ ಸಾಲೆ ಬಿಟ್ಟುದರಿಂದ 'ಬಾ, ಕವಿ ಬಾ' ಎಂದು ನನ್ನನ್ನು ಕರೆದುಕೊಂಡು ಮಧ್ಯ ಪೇಟೆಯ ತನಕ ಹೋದರು. ದಾರಿಯಲ್ಲಿ, 'ಇಕೊ, ಇದು ಕವಿತೆ; ಇದು ಕವಿತೆಯಲ್ಲ. 'ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ'— ಇತ್ಯಾದಿ, ಇತ್ಯಾದಿ–ಇವು ಕವಿತೆಗಳಲ್ಲ. ಇವುಗಳಲ್ಲಿ ಏನೂ ಇಲ್ಲ. ಇವನ್ನು ಬರೆದವನು ದೊಡ್ಡ ಕವಿಯಿದ್ದರೂ ಇಲ್ಲಿ ಇವು ಬೋಳು. ತೆಕ್ಕೊ–ಯಕ್ಷಗಾನ 'ತಲೆಯ ಮುಸುಕಿನ ಕೈಯ ಕದಪಿನ ನೆಲದ ನೋಟದ' ಇಲ್ಲೊಂದು ಚಿತ್ರವಿದೆ. ಕವಿತೆ ಹೀಗೆ ಬರಬೇಕು; ಜೀವವಿರಬೇಕು. ಹೀಗೆಂದು ಅಲ್ಲಿಂದ–ಇಲ್ಲಿಂದ ಬೇರೆ ಬೇರೆ ಸೊಲ್ಲುಗಳನ್ನೆತ್ತಿ ವಿಮರ್ಶಿಸಿ ಹೇಳಿದರು. ನನ್ನ ಕವನದ ಗುಣದೋಷಗಳನ್ನು ಹೇಳಲಿಲ್ಲ. ಹೇಳಲಿಲ್ಲವೆಂಬುದಕ್ಕೆ ಅಪವಾದವಾಗಿ, 'ಪರರ ದೂಷಣೆ ಸಲ್ಲದು' ಎಂದು ಅದರಲ್ಲಿನ ಒಂದು ಚರಣವನ್ನು ಎತ್ತಿ ಹೇಳಿದರು. ಯಾರಿಗೂ ಹೇಳದೆ ಕೇಳದೆ ನಾನದನ್ನು ಛಾಪಿಸಿದೆ. ನಮ್ಮವರ ಮಹಾಸಭೆಯಲ್ಲಿ ಓದಿದಾಗ ಅದಕ್ಕೆ ಪುರಸ್ಕಾರ ಸಿಕ್ಕಿತು. ಪುರಸ್ಕಾರಕ್ಕೆ ಕಾರಣ, ಅದು ಪಂಜೆಯವರ ಕವಿತೆಯಂತೆ ಪ್ರಾಸಬದ್ಧವಾಗಿತ್ತು ಎಂಬುದರಿಂದಲೇ. ಕೆಲವರು, ಅದನ್ನು ಪಂಜೆಯವರೇ ಬರೆದು, ನನ್ನ ಹೆಸರಿಟ್ಟುದೆಂದು ಸುಳ್ಳು ಹೊರಿಸಿದರು. ಪತ್ರಿಕೆಗಳಿಗೂ ಕೊಟ್ಟರು. ಪತ್ರಿಕೆಯನ್ನು ಕಂಡ ಪಂಜೆಯವರು ನನ್ನನ್ನು ಕರೆಯಿಸಿ, ದುಡುಕಿದ್ದಕ್ಕಾಗಿ ನನ್ನನ್ನುದೂರಿದರು.'ಅದರಲ್ಲಿ ತಪ್ಪಿತ್ತು;ಹೇಳುತ್ತಿದ್ದರೆ, ತಿದ್ದಿಕೊಡುತ್ತಿದ್ದೆ' ಎಂದರು. 'ನೋಡು! ನಿಜಸ್ಥಿತಿ ಹೇಗಿದ್ದರೂ,ಜನರು ತಪ್ಪು ಅಭಿಪ್ರಾಯ ಪಡುತ್ತಾರೆ. ನೀನು ಕಂಡೀರವ (ಪೇಪರು) ಕಂಡಿರುವೆಯಷ್ಟೆ. ಅದರ ಆರೋಪವೇ ಬೇರೆ. ಹೀಗೆ ಎಷ್ಟೋ ಸಂದರ್ಭಗಳಲ್ಲಿ ಅಪವಾದ ಹೊರಬೇಕಾಗುತ್ತದೆ. ನನಗೇನೋ ಹೊಸತಲ್ಲ' ಎಂದರು. ಅವರು ಹಾಗೆ ಹೇಳಲಿಕ್ಕೂ ಒಂದು ಕಾರಣವಿತ್ತು. ಅವರಿಂದ ಆಗ್ಗೆ ಬರೆಯಲ್ಪಡುತ್ತಿದ್ದ 'ಅಜ್ಜಿಕತೆಗಳನ್ನು' ತತ್ವವರಿಯದ ಜನ ಮೆಚ್ಚದೆ, ಪತ್ರಿಕೆಗಳಲ್ಲಿ ಬಹಳ ಟೀಕೆಮಾಡುತ್ತಿದ್ದರು. ಆ ಕತೆಗಳು ಕಾಲಾಂತರದಲ್ಲಿ ಹೆಸರಿಗೆ ಬಂದಾಗ, ಹಾಗೆ ನಿಂದಿಸಿದವರಲ್ಲೊಬ್ಬರು ಆ ಕತೆಗಳಲ್ಲಿ ಹೆಸರಾದ 'ಕೊ-ಕ್ಕೊ-ಕ್ಕೋ ಕೋಳಿ' ಕತೆಯನ್ನು ತಾನು ಬರೆದು ಕೊಟ್ಟುದೆಂದು ನನ್ನೊಡನೆ ಸುಳ್ಳು ಸುಳ್ಳೇ ಹೇಳಿಬಿಟ್ಟರು. ಆ ಕತೆ ಅಚ್ಚುಗೊಳ್ಳುವುದಕ್ಕೆ ಮೊದಲೇನೆ ಪಂಜೆಯವರು ನಮಗದನ್ನು ಕ್ಲಾಸಿನಲ್ಲಿ ವಿವರಿಸಿ ಹೇಳಿದ್ದರು; ಅಜ್ಜಿಕತೆಗಳಿಗಿರಬೇಕಾದ ಲಕ್ಷಣದ ಚೌಕಟ್ಟನ್ನೂ ನಮಗೆ ಅವರು ತಿಳಿಸಿಕೊಟ್ಟಿದ್ದರು.

ಆಗ್ಗೆ ಹಳೆಗನ್ನಡವನ್ನು ಅಕ್ಷರಶಃ ಪಾಲಿಸಿಕೊಂಡು ಬರುವ ಪಂಡಿತರ ಪಂಗಡವೊಂದು ಮಂಗಳೂರಲ್ಲಿ ಬೆಳೆದುಕೊಂಡಿತ್ತು. ಅದು ಪಂಜೆಯವರ ಹೊಸಗನ್ನಡವನ್ನು ಅಂತರಂಗ, ಬಹಿರಂಗಗಳಲ್ಲೂ ಬಹಿಷ್ಕರಿಸುತ್ತಿತ್ತು. ಪಂಜೆಯವರು ಬೇಕೆಂದೇ ಬಳಕೆಗೆ ತರುತ್ತಿದ್ದ, ದರಲೆ, ಪುರುಲೆ, ಬೆರ್ಚಪ್ಪ, ಕಡೆಕಂಜಿ, ಮುಡಗು,ನೊಳ, ದುರುಂಕು, ಒಟಗುಟ್ಟು, ಲೊಚಗುಟ್ಟು, ಗುಟುರುಪಾಕು ಇತ್ಯಾದಿ ಪದಪ್ರಯೋಗಗಳನ್ನು ಕಂಡು, ಕನ್ನಡವನ್ನು 'ಕೊಂದ',ನೆಂದು ಶಪಿಸಿದವರಿದ್ದರು. ಅಂಥವರಲ್ಲಿ ನನ್ನ ಸ್ನೇಹಿತರೊಬ್ಬರು, 'ನಿನ್ನ ಪಂಜೆಗೆ ಕನ್ನಡ ಗೊತ್ತಿಲ್ಲ. ಎಲ್ಲಿಲ್ಲೂ ತುಳು, ಕೊಂಕಣಿ ಕಲಸು, ಹೊಲಸು' ಎಂದು ಹೇಳಿ, ನಿಂದಿಸಿದಾಗ ನನಗೆ ತುಸು ಸಂಕಟವಾಯಿತು. ಇವರ ತಿರುಬೊಬ್ಬೆಗೆ ಒಂದಿಷ್ಟೂ ಕಿವಿಕೊಡದೆ,ಪಂಜೆಯವರು ತಮ್ಮ ಕನ್ನಡ ಸೇವೆಯನ್ನು ಸಾಧಿಸಿಯೇ ಬಿಟ್ಟರು. ಅವರಿಗದಕ್ಕೆ ಅನುಕೂಲವಾಗಿ ಒಂದು ಕಡೆಯಿಂದ ಪಠ್ಯಪುಸ್ತಕಗಳ ಪ್ರಕಟನೆಯ ಅಧಿಕಾರವನ್ನು ಹೊಂದಿದ ಪ್ರಬಲ ಸಂಸ್ಥೆಯಾದ ಬಾಸೆಲ್ ಮಿಶ್ಯನಿನವರ ನೆರವು ಸಿಕ್ಕಿತು. ಇನ್ನೊಂದು ಕಡೆಯಿಂದ ಬರೆದಂತೆಲ್ಲಾ ಮಂಜೂರು ಪಡಿಸುವ ಮದ್ರಾಸಿನ ಟೆಕ್ಸ್ಟ್‌ಬುಕ್ ಕಮಿಟಿಯ ಸಹಾಯ ದೊರಕಿತು. ಸರ್ಕಲ್ ಇನ್ಸ್‌ಪೆಕ್ಟರ್ ಜೆ. ಎ. ಏಟ್ಸ್ ದೊರೆಗಳು ನೀಡಿದ ಘನವಾದ ಶಿಫಾರಸ್ಸಿನಿಂದಾಗಿ ಡೈರೆಕ್ಟರ್ ಸರಕಾರದ ಅನುಮತಿಯು ತಾನಾಗಿ ಒದಗಿಬಂತು. ಇದರಿಂದೆಲ್ಲ ಮಂಗಳೂರಿನ ಕನ್ನಡವು ಪಂಜೆಮಯವಾಯಿತು. ಕಡೆಕಡೆಗೆ ಪಂಜೆಯವರು ಮುಟ್ಟದೆ-ಮುನ್ನುಡಿಯದೆ, ಒಪ್ಪದೆ-ಹೂಂಗುಟ್ಟದೆ, ಯಾವ ಕೃತಿಯೂ ಬದುಕದಂತಾಯಿತು. ಮೆಲ್ಲಮೆಲ್ಲನೆ ಸಂಸ್ಕೃತದ ಶಾಸ್ತ್ರಿಗಳೂ, ಹಳೆಗನ್ನಡದ ಪಂಡಿತರೂ ಪಂಜೆಯವರನ್ನು ಆಶ್ರಯಿಸತೊಡಗಿದರು;ಹೊಸಗನ್ನಡವನ್ನು ಅನುಸರಿಸಿದರು. ಮಹಾಕಾವ್ಯಗಳನ್ನು ಬರೆಯ ಬಯಸಿದವರು, ಲಘುಕೃತಿಗಳನ್ನು ಹೊರಗೆಡವಿದರು. ಸಮಪಾದ ವೃತ್ತಗಳ ಬದಲಿಗೆ, ದ್ವಿಪದಿ-ತ್ರಿಪದಿ, ರಗಳೆ ಪ್ರಭೇದಗಳು ಕಾಣಿಸಿಕೊಂಡುವು. ಚಿಕ್ಕಚಿಕ್ಕ ಪ್ರಹಸನಗಳು, ಏಕಾಂಕನಾಟಕಗಳು, ಚುಟುಕ

ಗಳು, ತಲೆಯೆತ್ತಿದುವು. ಅನೇಕರು ಅಜ್ಜಿಕತೆಗಳಂತೆ ಮಕ್ಕಳ ಕತೆಗಳನ್ನು ಬರೆದರು. ಬರೆಹದವರ ಬಳಗ ಬೆಳೆಯುತ್ತ ಬಂತು; 'ಬಾಲಸಾಹಿತ್ಯಮಂಡಲ' ಸ್ಥಾಪನೆಗೊಂಡಿತು.

ಇದುವರೆಗೆ ಶಿಷ್ಯನಾಗಿದ್ದ ನಾನು ಪಂಜೆಯವರ ಮುಂದೆ ಒಮ್ಮೆ ಅಕಸ್ಮಾತ್ ಒಬ್ಬ ಅಪರಾಧಿಯಾದೆ. ನನ್ನ ಬಾಲ್ಯಮಿತ್ರರಾದ ಸಿ. ಎಸ್. ಶಾಸ್ತ್ರಿಗಳೂ (ಈಗ ವಕೀಲರು) ನಾನೂ ಒಮ್ಮೆ ತಿರುಗಾಡುತ್ತಾ ನಮ್ಮ ಸಾಲೆಯ ಕಡೆ ಬಂದೆವು. ಶಾಲಾ ಪೇದೆಯು ಪಂಜೆಯವರ ಮನೆಯವರಿಗೆ ಮ್ಯೂಸಿಯಂ ತೋರಿಸುತಿದ್ದ. ನಾವೂ ನೋಡಹೋದೆವು. ಪೇದೆ ಪ್ರವೇಶಕೊಡಲಿಲ್ಲ. ಹೆಡ್ಮಾಸ್ತರರ ಅಪ್ಪಣೆ ಬೇಕೆಂದ. ಇವರಿಗೆಲ್ಲ ಅಪ್ಪಣೆ ಉಂಟು? ನಮಗೆ ಮಾತ್ರ ಅಪ್ಪಣೆ! ನಾನೇನು ಪರಕೀಯನೆ?" ಎಂದು ಹೇಳಿಹೋಯಿತು. ಮೇಲೆ ಮ್ಯೂಸಿಯಂ ನೋಡದೆಯೆ ನಾವು ಹಿಂದಕ್ಕೆ ನಡೆದೆವು. ಪೇದೆ ಅದನ್ನು ಅಷ್ಟಕ್ಕೇನೆ ಬಿಡಲಿಲ್ಲ. ಒಂದಕ್ಕೆ ಒಂಭತ್ತು ಕೂಡಿಸಿ ಒಬ್ಬ ಉಪಾಧ್ಯಾಯರ ಹತ್ತಿರ ಹೇಳಿದ. ಅವರು ಪಂಜೆಯವರ ಕಿವಿಗೂ ಅದನ್ನು ಹಾಕಿದರು. ಮರುದಿನಕ್ಕೇ ನನ್ನ ವಿಚಾರಣೆ ನಡೆಯಿತು. "ನೀನು ಹಾಗೆ ಹೇಳಿದ್ದಾಗಲಿಲ್ಲ" ಎಂಬ ತಪ್ಪನ್ನು ಹೊರಿಸಿದರು. ನೋಡುತ್ತಾ ನಿಂತೆ. 'ಆಗ ಅವರೇ, ಹಾಗಲ್ಲ. 'ನಿನ್ನ ಸ್ನೇಹಿತನಿಗೆ ತೋರಿಸಲಿಕ್ಕೆ ಆಗದೆ ಹೋಯಿತಲ್ಲಾ!' ಎಂದು ನಿನಗೆ ನೋವಾದುದು" ಎಂದರು. ಸತ್ಯಕ್ಕೂ ಹಾಗೇನೆ. ಆ ಮಾತನ್ನು ಕೇಳಿ ನನಗೆ ಗಳಗಳನೆ ಕಣ್ಣೀರಿಳಿಯಿತು. ಸಹಿಸಲಾರದ ದುಃಖದಿಂದ ರಜೆ ತೆಕ್ಕೊಂಡು ಬೋರ್ಡಿಂಗಿಗೆ ಬಂದೆ. ಬೇಸರದಿಂದ ಎರಡು ದಿನ ಶಾಲೆಗೆ ಹೋಗಲಿಲ್ಲ. "ನೀನಿಲ್ಲದೆ ಪಂಜೆಯವರ ಪಾಠವೇ ನಮಗಿಲ್ಲದಾಯಿತು" ಎಂದರು ಸಹಪಾಠಿಗಳು. ಅವರು ಹೇಳಿದುದು ನಿಜವಿತ್ತು. ಪಂಜೆಯವರು ಕ್ಲಾಸಿನಲ್ಲಿ ಹೆಚ್ಚಾಗಿ ನನ್ನ ಮುಖವನ್ನು ನೋಡಿಕೊಂಡೇ ಪಾಠ ಹೇಳುತ್ತಿದ್ದರು. ನಾನು ಆಲೈಸಿ ಕೇಳುತ್ತಿದ್ದಂತೆ ಇನ್ನೊಬ್ಬರು ಲಕ್ಷ್ಯಕೊಡುತ್ತಿದ್ದಿಲ್ಲವೆಂಬುದು ಅವರಿಗೂ ಗೊತ್ತಿತ್ತು. ಮಲತಾಯಿ ಮಗನಂತೆ ಮರುದಿನದ ಪಾಠಕ್ಕೇನೋ ನಾನು ಬಂದೆ. ಪಂಜೆಯವರ,—ಒಂದು ಮಾತಿಗೂ ನಗದೆ, ನೋಡದೆ, ಮರುಮಾತಾಡದೆ ಗುಮ್ಮನಂತೆ ಕುಳಿತ ನನ್ನ ಮುಖವನ್ನು ಕಂಡು, ತೊಡಗಿದ ಪಾಠವನ್ನು ಅರ್ಧದಲ್ಲಿಯೇ ಬಿಟ್ಟು, ಹಿಂದೆಹೋದರು. ಕ್ಲಾಸಿಗೆ ಕ್ಲಾಸೇ ಒಮ್ಮೆ ನನ್ನ ಕಡೆಗೂ, ಒಮ್ಮೆ ಪಂಜೆಯವರ ಕಡೆಗೂ ನೋಡುವಂತಾಯಿತು. ಅಂದು ರಾತ್ರಿಯೂ ಪಂಜೆಯವರು ಬೇಕೆಂದೇ ಬೋರ್ಡಿಂಗಿಗೆ ಬಂದರು. ಆಗಲೂ ನಾನು ಹಿಂದು ಹಿಂದಕ್ಕೆ ನಿಂತುಬಿಟ್ಟೆ. "ಏನು! ಮಾರಪ್ಪಸೆಟ್ಟಿ ಇಲ್ಲವೇ?" ಎಂದು ಗುಂಪಿಗೆ ದೃಷ್ಟಿ ತೂರಿದರು. ಇದ್ದಾರೆಂದರು ಬೇರೆಯವರು. 'ಬೇಕೋ, ಬೇಡವೋ' ಎಂದು ಕಾಣಿಸಿಕೊಂಡೆ. ನನ್ನ ಬೇಸರ ಇಳಿಯಲಿಲ್ಲೆಂದು ತಿಳಿದು, ಹಾಗೆಯೇ ಮರಳಿದರು. 'ಉತ್ತಮರ ಕೋಪ ಕ್ಷಣಾರ್ಧ'ವಲ್ಲವೇ? ಪಂಜೆಯವರದನ್ನು ಎಂದೇ ಬಿಟ್ಟಿದ್ದರೂ, ನನ್ನ ತಲೆಯಿಂದದು ಮೂರು ವಾರಗಳಕಾಲ ಅಳಿಸಿಹೋಗಲಿಲ್ಲ.

ಇದಾದ ಸ್ವಲ್ಪ ಸಮಯದಲ್ಲಿ ಪಂಜೆಯವರಿಗೆ ಮಡಿಕೇರಿಗೆ ವರ್ಗವಾಯಿತು. ಅವರನ್ನು ಕಳುಹಿಸಿಕೊಡುವಾಗ ಸಾಲೆಯಲ್ಲಿ ದೊಡ್ಡದೊಂದು ಸಮಾರಂಭ ನಡೆಯಿತು. ಹಳೆಯ–ಹೊಸ ವಿದ್ಯಾರ್ಥಿಗಳು ಐನೂರಕ್ಕೆ ಮೀರಿ ಕೂಡಿದರು. ಹಾರ, ಭಾವಚಿತ್ರ, ಮಾನಪತ್ರ, ಪ್ರಶಂಸನಾದಿಗಳ ಕೋಲಾಹಲ ಹೇಳಿ ಪೂರೈಸದು. ಪಂಜೆಯವರು ಮಕ್ಕಳಂತೆ ಅತ್ತು, ಪ್ರತಿಯೊಬ್ಬ ವಿದ್ಯಾರ್ಥಿಗೂ ಕೈಕೊಟ್ಟು ಬೀಳ್ಕೊಂಡರು. ಆದ ದುಃಖದ ಅಳಲು ಅಷ್ಟಿಷ್ಟಲ್ಲ. ಈ ನಡುವೆ ಇನ್ನೂ ಒಂದು 'ಪಿಟಕಾಯನ' ನಡೆಯಿತು. ಹಿಂದಿನ ನನ್ನ ಕವನದ ಪ್ರೋತ್ಸಾಹಕ್ಕೆಂದು ಶ್ರೀ ಮೊಳಹಳ್ಳಿ ಶಿವರಾಯರಿಂದ ಗುತ್ತುದತ್ತವಾದ ಬಂಗಾರದ ಪದಕವೊಂದನ್ನು ನಮ್ಮ 'ಬಂಟರ ಯಾನೆ ನಾಡವರ ಸಂಘ'ದ ಹೆಸರಿನಲ್ಲಿ ಪಂಜೆಯವರಿಂದ ನನಗೆ ಕೊಡಿಸುವ ಒಂದು ಒಳ ಏರ್ಪಾಡೂ ಈ ನಡುವೆಯೆ ನಡೆಯಿತು. ಆಗ್ಗ ಪಂಜೆಯವರ ಬಾಯಿಯಿಂದ ಹೊರಬಿದ್ದ ಮಾತುಗಳಿವು: "ಈ ಮಾರಪ್ಪನನ್ನು ನಾನು ಒಂಬೈನೂರ ಏಳರಿಂದಲೇ ಬಲ್ಲೆ. ಕಲಿಯುವಾಗಲೇ ಇವನೊಬ್ಬ ಕವನಾಸಕ್ತ. ಮನಸ್ಸಾದರೆ ಸರಸ್ವತಿ ದೇವಿಯು ಹಳ್ಳಿಯ ಕುರುಬರಿಗೂ ಒಲಿಯುತ್ತಾಳೆ ಎಂಬುದಕ್ಕೆ ಈ ಮಾರಪ್ಪನೇ ಸಾಕ್ಷಿ. ಇವನು ಬರೆದ ಕವಿತೆಗೆ ಇವನಿಗೊಂದು ಬಂಗಾರದ ಮೆಡಲನ್ನು ಇನಾಮು ಕೊಡಲು ಸಮ್ಮತವಾಗಿದೆ. ಅದನ್ನೀಗ ನಿಮ್ಮೆಲ್ಲರ ಮುಂದೆ ಇವನಿಗೆ ಕೊಡಲು ನಾನು ಸಂತೋಷಪಡುತ್ತೇನೆ. ಆದರೆ, ಇವನಿಗೆ ತಾನು ಬಂಟನೆಂಬ ಗರ್ವವೊಂದುಂಟು. ಅದನ್ನಾತ ಬಿಡಬೇಕು. ಇವನು ತನ್ನ ಕವಿತೆಯಲ್ಲಿ ತನ್ನ ಜಾತಿಯ ಉದ್ಧಾರಕ್ಕೆ ಹೋಗಿ ಅನ್ಯ ಜಾತಿಯನ್ನು ದೂರಿದ್ದಾನೆ. ಇದು ತಪ್ಪು. ಇಷ್ಟರೊಳಗೇ ಬ್ರಾಹ್ಮಣರಾದವರು ರೇಗದಿದ್ದುದು ಪುಣ್ಯ." ಎಂದು ಹೇಳಿ, ಪದಕವನ್ನು ನನ್ನ ಅಂಗಿಗೆ ಸಿಕ್ಕಿಸಿದರು. ನಾನದನ್ನು ಸ್ವೀಕರಿಸಿದಾಗ 'ದಶದಾಡಿಮ ಪಡಪೂ ಪವತ್' ಎಂಬಂತಹ ಅಸಂಗತವಾದ ಮೂರು ಮಾತುಗಳು ನನ್ನ ಬಾಯಿಯಿಂದ ಉದುರಿಹೋದುವು.

ಮುಂದೆ, ಅವರು ಮಡಿಕೇರಿಗೆ ಹೋದ ಕೆಲವೇ ದಿನಗಳಲ್ಲಿ ನಾನು ಕಾಹಿಲೆಯಲ್ಲಿ ಬಿದ್ದೆ. ನಾನು ಪಂಜೆಯವರಿಗೆ ಮರುತ್ತರವಿತ್ತುದು ಗುರುದ್ರೋಹವಾಯಿತೆಂಬ ಮನೋವೇದನೆಯೇ ನನ್ನ ಕಾಯಿಲೆಗೆ ಮೂಲ ಕಾರಣ. ಬೇನೆಯ ಮಂಚದಲ್ಲಿ ಮಲಗಿಕೊಂಡೇ ಗುರುಗಳಿಂದ ಕ್ಷಮಾಯಾಚನೆ

ಮಾಡಿಕೊಂಡೆ; ಮಡಿಕೇರಿಗೇ ಬರೆದುಕೊಂಡೆ. 'ನಿನ್ನಲ್ಲೇನೂ ಅಂತಹ ಅಕ್ಷಮ್ಯ ಅಪರಾಧವಿಲ್ಲವೆಂದೂ, ಅದನ್ನೊಂದೂ ತಲೆಗೆ ಹಚ್ಚಿಕೊಳ್ಳ ಬೇಡವೆಂದೂ, ಎಲ್ಲವನ್ನೂ ಮರೆತು ನಿರ್ಮಲ ಚಿತ್ತನಾದರೆ, ದೇವರು ನಿನ್ನನ್ನು ಆಶೀರ್ವದಿಸು ತ್ತಾನೆಂದೂ ಗುರುಗಳಿಂದ ಒಡನೆಯೆ ಪತ್ರ ಬಂತು. ಅವರ ಆಶೀರ್ವಾದದಿಂದ ಎಂಬಂತೆ ಆದಷ್ಟು ಬೇಗನೆ ನಾನು ಆಪತ್ತಿನಿಂದ ಪಾರಾದೆ.

ಪಂಜೆಯವರು ಮಡಿಕೇರಿಯಲ್ಲಿ ಕೆಲಸದಲ್ಲಿದ್ದರೂ, ಅವರ ಬಿಡಾರವು ಮಂಗಳೂರಲ್ಲೇ ಇತ್ತು. ಅವರು ಬಿಡುವಿದ್ದಾಗ ಮಂಗಳೂರಿಗೆ ಬರುತ್ತಿದ್ದರು. ಬಂದವರು ವೇಳೆ ಕಳೆಯುವುದು ಟ್ರೈನಿಂಗ್ ಶಾಲೆಯಲ್ಲೇ ಹೆಚ್ಚಿಗೆ. ಒಮ್ಮೆ ಅವರು ಬಿಡಾರಕ್ಕೆ ಹೊರಟರೆಂದಾದರೆ, ಸಾಲಿಗೆ ಸಾಲೆಯೇ ಅವರ ಹಿಂದೆ ಹೋಗುತ್ತಿತ್ತು. ನಾವು ಮನಸ್ಸಿಗೆ ಬಂದುದನ್ನು ಅವರೊಡನೆ ಕೇಳುತ್ತಿದ್ದೆವು. ಕೇಳಿದ್ದಕ್ಕೆಲ್ಲಾ ಸಮಾಧಾನದ ಉತ್ತರ ಅವರು ಹೇಳುತ್ತಿದ್ದರು. "ಇಲ್ಲಿ ನೀವೇನು ಮಾಡಿದ್ದೀರೋ, ತಿಳಿಯದು. ನಾನು ಮಡಿಕೇರಿಯಲ್ಲಿ ಮಾಡಿದ್ದೆಂದರೆ ಇದು" ಎಂದು, ಅವರು ಬರೆದ 'ಹುತ್ತರಿ ಹಾಡ'ನ್ನು ಹಾಡಿ, ಕೊಡಗಿನ, ಕೊಡವರ ಚಿತ್ರಗಳನ್ನು ನಮ್ಮ ಕಣ್ಣಮುಂದೆ ನೆಟ್ಟು ನಿಲ್ಲಿಸಿದರು.

ಟ್ರೈನಿಂಗ್ ಶಾಲೆಯಲ್ಲೊಂದು ಜಿಲ್ಲಾ ವಿದ್ಯಾಪ್ರದರ್ಶನದ ಗದ್ದಲ ನಡೆಯಿತು. ಅನೇಕಾನೇಕ ಲೇಖನಗಳು ಸ್ಪರ್ಧೆಗಾಗಿ ಬಂದಿದ್ದುವು. ನಾನೂ ನನ್ನ 'ಮಂಜಟ್ಟಿ ಕೋಣ' ಕವಿತೆಯನ್ನು ಅದಕ್ಕೆ ಕಳುಹಿಸಿದ್ದೆ. ಅಲ್ಲಿಗೆ ಬಂದಿದ್ದ ಪಂಜೆಯವರು ಅವನ್ನು ನೋಡಿದರು; "ಮಂಜಟ್ಟಿ ಕೋಣ"ವನ್ನೂ ಕಂಡರು. ಮರುದಿನ ನನ್ನೊಡನೆ, 'ನೀನು ಭರತೇಶ ವೈಭವ ನೋಡಿದ್ದೀಯೇ?" ಎಂದು ಕೇಳಿದರು. ಹೌದೆಂದೆ. ಕಾರಣವನ್ನು ಅವರು ಹೇಳಲಿಲ್ಲ; ನಾನು ಕೇಳಲೂ ಇಲ್ಲ. ಆದರೂ ಕೇಳಿದ್ದು ಯಾಕೆಂದು ನನಗೆ ಅರ್ಥವಾಯಿತು. ನಾನು ಅದರಲ್ಲಿನ 'ಒಜೆ' ಎಂಬೊಂದು ಪದವನ್ನು ಹೆಕ್ಕಿ ನನ್ನ ಹಾಡಿನಲ್ಲಿ ಸೇರಿಸಿಕೊಂಡಿದ್ದೆ. ಅದನ್ನವರು ಗೊತ್ತುಹಚ್ಚಿದ್ದರು.

ಅನಂತರ ನನ್ನೊಡನೆ, "ಬಂದುದರಲ್ಲಿ ನಿನ್ನದೇ ಚೆನ್ನ. ಬೇಗನೆ ಛಾಪಿಸಿಬಿಡಬೇಡ!" ಎಂದು ನನ್ನನ್ನು ಎಚ್ಚರಿಸಿದ್ದರು. ನನಗೆಂದಲ್ಲ, ನನ್ನಂತೆ ಕೆಲವರಿಗೆ-ತಪ್ಪಿರಲಿ, ಒಪ್ಪಿರಲಿ ಒಂದು ಕೃತಿಯನ್ನು ಬರೆದ ಒಡನೆಯೇ ಛಾಪಿಸಿಬಿಡುವ ದುಷ್ಟ ಚಾಳಿ ಇರುತ್ತದೆ. ಪಂಜೆಯವರು ಅದಕ್ಕೆ ತುಂಬ ಹಿಂದೆ. ಅವರು ಇಂದು ಒಂದು ಕೃತಿ ರಚಿಸಿದರೆ, ಕಡಿಮೆ ಎಂದರೂ ಹತ್ತು ವರ್ಷದ ವರೆಗೆ ಅದನ್ನು ಅಚ್ಚು ಹಾಕಿಸುತ್ತಿರಲಿಲ್ಲ. ಆ ವರೆಗೆ ಅವರೇ ಅದನ್ನು ತಿರಿಗಿ ತಿರಿಗಿ ತಿದ್ದಿ, ಸರಿಪಡಿಸಿ, ಆಮೇಲೆ ಮೆಲ್ಲಗೆ ಪ್ರಚುರಪಡಿಸುವುದಿತ್ತು. ಉದಾಹರಣೆಗಾಗಿ, ಬೈದರ್ಕಳ ಸಂಧಿಯನ್ನು ಬರೆದುಕೊಂಡುದು ಎಷ್ಟು ವರ್ಷಗಳಿಗೆ ಹಿಂದೆ! "ಕೋಟಿಚೆನ್ನಯ"ನಾಗಿ ಅದು ಹೊರ ಬಂದುದು ಎಷ್ಟು ವರ್ಷದ ನಂತರ! ಇದನ್ನೂಹಿಸಿದರೆ, ಎಷ್ಟೋ ಕೃತಿಗಳು ಅವರಿಂದ ಬರೆಯಲ್ಪಟ್ಟಿದ್ದಿರಬೇಕೆಂದೂ, ಅವು ಅಚ್ಚುಗೊಳ್ಳದೆ ಇನ್ನೂ ಮೂಲೆಪಾಲಾಗಿ ಬಿದ್ದಿರಬೇಕೆಂದೂ ಅನುಮಾನಿಸಲಿಕ್ಕೆ ಬರುತ್ತದೆ.

ದಸರೆಯ ಸಾಹಿತ್ಯಗೋಷ್ಠಿಗೆಂದು ಪಂಜೆಯವರೊಮ್ಮೆ ಪುತ್ತೂರಿಗೆ ಬಂದಿದ್ದರು. ಹಿಂದೆ ಅವರೇನೆ ನಮಗೆ ಹೇಳಿಕೊಟ್ಟ ಲಕ್ಷಣಕ್ಕನುಸಾರವಾಗಿ ನಾನು ಬಹುಪ್ರಯಾಸಪಟ್ಟು ತಯಾರಿಸಿದ 'ಸುಂದರಿಯ ಚಂದ' ಎಂಬ ಕತೆಯೊಂದನ್ನು ಅವರ ಮುಂದೆ ಓದಿದೆ. ಆಗ ಅವರ ತುಟಿಯಿಂದ ಮುಗುಳುನಗೆಯೊಂದು ಮೆಲ್ಲನೆ ಹೊರ ಸೂಸಿತು. ಅದನ್ನು ಓರೆ ಗಣ್ಣಿನಿಂದ ಕಂಡ ನಾನು, 'ಪಂಜೆಯವರ ಶಿಷ್ಯನಾದುದು ಇಂದಿಗೆ ಸಾರ್ಥಕವಾಯಿತು' ಎಂದು ಮನಸ್ಸಿನೊಳಗೇ ಹಿಗ್ಗಿದೆ.

ಪಂಜೆಯವರು ಕಡೇಗಾಲಕ್ಕೆಂಬಂತೆ ರಾಯಚೂರಿನಲ್ಲಿ ನಡೆದ ಅಖಿಳ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ಆ ಮೊದಲುಗೊಂಡವರು ಮಂಗಳೂರನ್ನು ಬಿಟ್ಟು ಅವರ ಎರಡನೇ ಮಗ ಗೋಪಾಲರಾಯರೊಂದಿಗೆ ಹೈದರಾಬಾದಿನಲ್ಲಿದ್ದಾಗ ಅಕಸ್ಮಾತ್ ಕಾಯಿಲೆಯಿಂದ ಪರಂಧಾಮವನ್ನೈದಿದರು. ತುಳುನಾಡಿನ—ಹಾಗೂ ಅಖಂಡ ಕರ್ಣಾಟಕದ ಮಹಾಸಾಹಿತಿಯೊಬ್ಬರು ಮರೆಗೊಂಡುದಕ್ಕಾಗಿ ಊರಿಗೆ ಊರೇ ದುಃಖಾಂಬುಧಿಯಲ್ಲಿ ಅದ್ದಿತು. ಸುದ್ದಿ ಕೇಳಿದ ನಾನೂ ನನ್ನ ಬಾಷ್ಪಾಂಜಲಿಯನ್ನು ಹೀಗೆ ಸುರಿಸಿದೆ-

"ಎಲ್ಲಿಗೆ ಹೋದೆಯೊ ಕವಿಶಿಷ್ಯ ।
ಇಲ್ಲಿ ನೀ ಬರಬೇಕು ಬರಬೇಕವಶ್ಯ ॥ ಪಲ್ಲ ॥

ಬಲ್ಲರ ಬಲ್ಲಿಹ ಕಾವ್ಯ ರಹಸ್ಯ ।
ಕಲ್ಲುಸಕ್ಕರೆ ಸವಿಯ ಹಸನ ಹಾಸ್ಯ ।
ಸೊಲ್ಲಿನ ಸೊಗಸಿಗೆ ತೀರಿತಾಯುಷ್ಯ ।
ಹಲ್ಲು ದುರಿದ ಹಾಡು ನಮ್ಮ ಭವಿಷ್ಯ ॥ ಎಲ್ಲಿಗೆ ॥ ೧ ॥

ಕನ್ನಡ ಕಸ್ತುರಿ ಎಂದಿರಬೇಕೊ? ।
ನಿನ್ನಚ್ಚ ಕತೆ ಬೇಕು 'ಕೋಳಿ ಕೊಕ್ಕೊ ಕ್ಕೊ' ॥
ಹೊನ್ನ ಪುತ್ಥಳಿ 'ಕೋಟಿಚೆನ್ನಯ' ಬೇಕೊ? ।
ಜೇನ್ನೆಯ ತಿನಬೇಕೊ 'ಬೋಧನೆ' ಬೇಕೊ? ॥ ಎಲ್ಲಿಗೆ ॥ ೨ ॥

ಗೊತ್ತಿಲ್ಲದವರಿಗೆ ಗುಟ್ಟು ಗೊತ್ತಿಲ್ಲ ।
'ಸತ್ಯದೀಪಿಕೆ'ಯಲ್ಲಿ 'ಹರಟೆಯ ಮಲ್ಲ' ॥
ಹೊತ್ತ ಹೆಸರು 'ರಾ. ಮ. ಪಂ' ಎಂದೆಲ್ಲ ।
ಸತ್ತ 'ಸುವಾಸಿನಿ'ಯಲಿ ಇಹುದೆಲ್ಲ ॥ ಎಲ್ಲಿಗೆ ॥ ೩ ॥

# ನಮ್ಮ ತಂದೆ.

ಲೇಖಕ: ಶ್ರೀ ಪಂಜೆ ರಾಮರಾವ್.

ನಮ್ಮ ತಂದೆಯವರ ಜೀವನ ವೃತ್ತವನ್ನು ಬರೆಯುವುದೆಂದರೆ ನಮಗೊಂದು ಹೆಮ್ಮೆಯ ಸಂಗತಿ. ಅವರ ಜನ್ಮ ದಕ್ಷಿಣಕನ್ನಡ ಜಿಲ್ಲೆಯ ಬಂಟವಾಳ ಎಂಬಲ್ಲಿ ತಾ 22-ಫೆಬ್ರವರಿ **1874**ರಲ್ಲಿ ಆಯಿತು. ಅವರ ತಂದೆ ತಾಯರು ಶ್ರೀಮಂತರಲ್ಲವಾಗಿದ್ದರೂ ಹತ್ತು ಜನಗಳಲ್ಲಿ ಮನ್ನಣೆ, ಆದರಗಳನ್ನು ಗಳಿಸಿ ಬಾಳಿದವರು. ಈಗ ಬಂಟವಾಳದ ಆಸ್ಪತ್ರೆಯಿರುವಲ್ಲಿಯೇ ಸಮೀಪಕ್ಕೆ ಒಂದು ಪುಟ್ಟ ಹುಲ್ಲಿನ ಮನೆಯಲ್ಲಿ ಅವರು ವಾಸವಾಗಿದ್ದರು. ಆಗಿನ ದಿನಗಳಲ್ಲಿ ಆ ಊರಿನಲ್ಲಿ ಸುಮಾರು ಮೂವತ್ತು ನಾಲ್ವತ್ತು ಸಾರಸ್ವತ ಮನೆಗಳಿದ್ದುವು. ಊರಿನ ಹಲವಾರು ಇತರ ಜಾತಿಮತಸ್ಥರ ಎಡೆಯಲ್ಲಿ, ಅವರ ಜೀವನ ಸಾಗುತ್ತಿತ್ತು. ಅವರಲ್ಲಿ ಹೆಚ್ಚಿನವರು ಮಧ್ಯಮ ತರಗತಿಯವರೆನ್ನಬಹುದು. ಏನಾದರೊಂದು ಪುಟ್ಟ ಉದ್ಯೋಗ, ಅಲ್ಪಸ್ವಲ್ಪ ಭೂಮಿಕಾಣಿಕೆಗಳಿಂದ ಅವರ ಜೀವನ ಸಾಗಬೇಕಿತ್ತು. ಅಂಥವರಲ್ಲಿಯೂ ಪಂಜೆ ಮನೆತನ ಮತ್ತೂ ಬಡವಾಗಿತ್ತು; ಜನಬಲದಲ್ಲೂ ಅದು ಕಡಿಮೆಯಾಗಿತ್ತು. ನಮ್ಮ ತಂದೆಯವರು ಅಲ್ಲಿ ಜನಿಸುವಾಗ ಈ ಪಂಜೆ ಮನೆತನ ಅಲ್ಲಿಗೆ ಬಂದು ನೆಲಸಿ ಬರಿಯ ಐವತ್ತು ವರ್ಷಗಳಾಗಿರಬಹುದು.

ನಮ್ಮ ಅಜ್ಜಂದಿರ ಪೂರ್ವಜರ ವಿಚಾರ ನಮಗೆ ತಿಳಿದ ಅಂಶ ಬಹುಕಡಿಮೆ. ತಮ್ಮ ಮುತ್ತಜ್ಜ ಪಂಜೆ ದಾಸಪ್ಪಯ್ಯ ಎಂಬವರ ವಿಷಯ ನಮ್ಮ ತಂದೆಯವರಿಗೂ ಹೆಚ್ಚಿನ ಸಂಗತಿ ತಿಳಿದಿರಲಿಲ್ಲ. ನಮ್ಮ ಮನೆತನಕ್ಕೆ ಪಂಜೆ ಎಂಬ ಹೆಸರು ಬರಲು ಕಾರಣ, ನಮ್ಮ ಪೂರ್ವಜರ ನಿವಾಸ-ಸುಬ್ರಹ್ಮಣ್ಯಕ್ಕೆ ಸಮೀಪವಾದ ಪಂಜ ಗ್ರಾಮವಾಗಿದ್ದುದು. ಅದು ತೀರ ಮಲೆನಾಡು ಪ್ರದೇಶ. ಪಂಜೆ ದಾಸಪ್ಪಯ್ಯನವರು ತಮ್ಮ ಎಳೆ ವಯಸ್ಸಿನಲ್ಲಿ ಆ ಗ್ರಾಮದಲ್ಲಿ ತೀರಿಕೊಂಡರು; ಆ ಬಳಿಕ ವೈಧವ್ಯ ದುಃಖಿತಳಾದ ಅವರ ಪತ್ನಿ ಆ ಗ್ರಾಮವನ್ನು ಬಿಟ್ಟಳು. ಬಿಡುವಾಗ ಮನೆತನದ ಆಸ್ತಿಪಾಸ್ತಿಗಳ ರಕ್ಷಣೆಗೆ ವ್ಯವಸ್ಥೆ ಮಾಡಿ, ಅಪ್ರಾಯಸ್ಥ ಮಕ್ಕಳೊಡನೆ ಹೊರಟಳು. ನಮಗೆ ತಿಳಿದು ಬಂದಿರುವಂತೆ–ಆಕೆ ತುಂಬ ಶಕ್ತಳು, ಧೈರ್ಯಸ್ಥಳು. ಒಮ್ಮೆಗೇ ನಿಲುವಿನ ಆಧಾರ ಕಡಿದು ಹೋದುದರಿಂದ, ಆಕೆ ತನ್ನ ಎಳೆಯ ಮಕ್ಕಳನ್ನು ಕಟ್ಟಿಕೊಂಡು ಆ ಕಾಡುಪ್ರದೇಶವನ್ನು ಬಿಟ್ಟು, ೫೦ ಮೈಲು ದೂರದ ಬಂಟವಾಳವನ್ನು ಸೇರಿದಳು. ಬರುವಾಗ ತಂದುದು ಅಲ್ಪಸ್ವಲ್ಪ ಮಣ್ಣಿನ ಪಾತ್ರ–ಪರಡಿಗಳು ಮತ್ತು ಮನೆಯ ದೇವರನ್ನು ಮಾತ್ರ. ಅಲ್ಲಿ ಬಂದವಳೇ ಒಂದು ಜಾಗವನ್ನು ಕೊಂಡು, ತನಗೊಂದು ಮನೆಯನ್ನು ಕಟ್ಟಿಸಿಕೊಂಡಳು; ಧೈರ್ಯಕ್ಕೆ ಒಂದೆರಡು ಹಿತ್ತಿಲು ಮನೆಗಳನ್ನು ಕಟ್ಟಿಸಿ, ಬಾಡಿಗೆಗೆ ಕೊಟ್ಟಳು. ಆ ಮನೆಯ ಬಾಡಿಗೆಯಿಂದ, ತನ್ನ ಚಿನ್ನಾಭರಣಗಳ ವಿಕ್ರಯದಿಂದ ಮಾತ್ರ ಜೀವನ ಸಾಗಬೇಕಾಯಿತು. ಬಿಟ್ಟುಬಂದ ಪಂಜದ ಭೂಮಿಯಿಂದ ಗೇಣಿ ವಸೂಲುಮಾಡುವುದೂ ಅಸಾಧ್ಯವಾಯಿತು. ಹೀಗಿರುತ್ತ ಸಂಸಾರದ ಹೊರೆಯು ಸಾಕಷ್ಟು ಬಲವಾಗಿಯೇ ಇತ್ತೆಂದು ಬಣ್ಣಿಸಬೇಕಿಲ್ಲ. ಆಕೆಯ ಸಂತತಿಯೆಂದರೆ ವಿಟ್ಠಲಪ್ಪಯ್ಯ ಎಂಬ ಗಂಡುಮಗ, ಇಬ್ಬರು ಹೆಣ್ಣುಮಕ್ಕಳು. ವಿಟ್ಠಲಪ್ಪಯ್ಯ ಬೆಳೆದು ದೊಡ್ಡವನಾಗುತ್ತಲೆ, ಸಾಲೆತ್ತೂರು ಕುಟುಂಬದ ಒಬ್ಬ ಕನ್ಯೆಯೊಡನೆ ಲಗ್ನವಾಯಿತು. ಅವರಲ್ಲಿ ಮೂವರು ಗಂಡು ಮಕ್ಕಳೂ ಇಬ್ಬರು ಹೆಣ್ಣುಮಕ್ಕಳೂ ಹುಟ್ಟಿದರು. ದಾಸಪ್ಪಯ್ಯ, ವಾಸುದೇವಯ್ಯ, ರಾಮಪ್ಪಯ್ಯ— ಎಂಬವರೇ ಆ ಮೂವರು ಗಂಡು ಮಕ್ಕಳು. ಅವರಲ್ಲಿ ರಾಮಪ್ಪಯ್ಯನೆಂಬವರೇ ನಮ್ಮ ತಂದೆಯ ತಂದೆ. ಅವರಿಗೆ ಲಗ್ನವಾದುದು ಧಾರೇಶ್ವರ ಕುಟುಂಬದಿಂದ. ನಮ್ಮ ತಂದೆ ರಾಮಪ್ಪಯ್ಯನವರ ಎರಡನೆಯ ಮಗ.

ನಮ್ಮ ತಂದೆಯವರ ಬಾಳಿಗೊಂದು ಪ್ರಭಾವ ಬೀರಿದ ಜೀವನವು ಅವರ ತಂದೆಯಾದ ರಾಮಪ್ಪಯ್ಯನವರ ಮತ್ತು ತಾಯಿ ಶಾಂತಾದುರ್ಗಾ ಅಥವಾ ಸೀತಮ್ಮ ಎಂಬವರದು ಎಂದು ಅನಿಸುತ್ತದೆ. ರಾಮಪ್ಪಯ್ಯನವರು ಸರಳಜೀವಿಗಳು; ದೈವ ಭೀತರು. ಯಾರ ವಿಷಯದಲ್ಲೂ ಒಂದು ಕಿಡುಮಾತ ನ್ನಾಡದಂಥ ನಮ್ರಶೀಲರು. ಅವರ ಪತ್ನಿಯು ಪತಿಸೇವೆಯಲ್ಲಿ ನಿರತಳಾದ ಸಾಧ್ವಿ; ಸೌಜನ್ಯಶೀಲೆ. ಪತಿಗೆ ಕಡಿಮೆಯಿಲ್ಲದಂಥ ಧರ್ಮಶ್ರದ್ಧೆ ಅವಳದಿತ್ತು. ಆಕೆಗೆ ಸಮಾಜದಲ್ಲಿ, ಆಸುಪಾಸಿನ ಸ್ತ್ರೀಯರಲ್ಲಿ ತುಂಬ ಆದರ, ಗೌರವವಿತ್ತು. ಯಾರು ತಮಗೇನು ನೋವು ಬಂದರೂ ಸಲಹೆ ಕೇಳಲು ಅವಳಲ್ಲಿಗೆ ಬಂದು ಹೋಗುತ್ತಿದ್ದರಂತೆ. ನೆರಕರೆಯವರಿಗೆ ಬೇಕಾದವಳಾಗಿ, ಸುಸಂಸ್ಕೃತಳಾಗಿ, ಚೊಕ್ಕವಾಗಿ ಬಾಳ್ವೆ ಮಾಡಿದ ಮಹಿಳೆಯವಳು. ಆಕೆಗೆ ಅನೇಕ ಪುರಾಣಗ್ರಂಥಗಳ ಪರಿಚಯವಿದ್ದಂತೆಯೂ ತಿಳಿಯುತ್ತದೆ. 'ಪಂಜೆ'ಯವರ ಮನೆಯೆಂದರೆ ಆಗಿನ ದಿನಗಳಲ್ಲಿ ದೈವಭಕ್ತರಿಗೆ, ಶ್ರದ್ಧಾವಂತರಿಗೆ ಒಂದು ಆಸರೆಯ ತಾವಾಗಿತ್ತು. ಆಗಾಗ ಅಲ್ಲಿ ನಡೆಯುತ್ತಿದ್ದ ಭಜನೆಗಳಿಗೆ, ಪಾಂಡವ ಪ್ರತಾಪ, ಹರಿ ವಿಜಯ, ಮೊದಲಾದ ಪ್ರವಚನಗಳಿಗೆ ಜನ ಬರುತ್ತಿದ್ದರು. ತುಕಾರಾಮ, ಪುರಂದರದಾಸ, ಕನಕದಾಸ, ಕೊಂಕಣದ ಸಂತರಾದ ಅಪ್ಪಯ್ಯ ಕವಿ

ಗಳ ಕೀರ್ತನೆಗಳು ಆಗಾಗ ನಡೆಯುತ್ತಿದ್ದುವು. ಆಕೆಗೆ ಇವೆಲ್ಲವುಗಳಲ್ಲಿ ಇರುವ ಶ್ರದ್ಧೆಗೆ ಸಮನಾಗಿ, ಮಕ್ಕಳಲ್ಲಿ ಅಪರಿಮಿತ ಪ್ರೀತಿಯಿತ್ತು. ಅವರಿಗೆ ಕಥೆ ಹೇಳುವುದೆಂದರೆ ಪ್ರಿಯ ಉದ್ಯೋಗವಾಗಿತ್ತು. ನಮ್ಮ ತಂದೆಯ ಅಭಿರುಚಿ, ಶೀಲಗಳಿಗೆ ಪೋಷಕವಾಗಿ ಬಂದ ಸಾರ, ಆವರಣಗಳೆಂದರೆ ನಮ್ಮ ಅಜ್ಜಿಯಲ್ಲಿ ತುಂಬಿದ್ದ ಇಂಥ ಸಂಸ್ಕೃತಿ, ಪ್ರೀತಿ, ಶೀಲಗಳು.

ನಮ್ಮ ತಂದೆಯವರ ಜನ್ಮಕಾಲವು—ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿಗಳ ಸಮ್ಮಿಲನದ ಸಂಧಿಕಾಲವಾಗಿತ್ತು. ದಕ್ಷಿಣಕನ್ನಡದಲ್ಲಿ ಆಗತಾನೆ ಇಂಗ್ಲಿಷು ವಿದ್ಯೆಯೂ,ಪಾಶ್ಚಾತ್ಯ ಭಾವನೆಗಳೂ ಬಂದು ಬೇರೂರತೊಡಗಿದ್ದುವಷ್ಟೆ. ಈಗಾಗಲೇ ಕ್ರಿಸ್ತಧರ್ಮವು ಬಂದು ನಾಡಿನಲ್ಲಿ ಕಾಲೂರಿತ್ತು. ಕೆಥೋಲಿಕ ಪಂಥದವರು,ಪ್ರೊಟೆಸ್ಟಾಂಟ್ ಮಿಶನರಿಗಳು ದಕ್ಷಿಣಕನ್ನಡದಲ್ಲಿ ಜನಗಳನ್ನು ಮತಾಂತರಗೊಳಿಸುವ ಕೆಲಸ ಸಾಗಿದ್ದು, ಅದರ ಪ್ರತಿಕ್ರಿಯೆ ಹಿಂದೂ ಜನರಲ್ಲಿ ಉಂಟಾಗಿ, ಹಿಂದೂ ಧರ್ಮವೇ ಒಂದು ಬಗೆಯಿಂದ ಕುದುರಿ ಗಟ್ಟಿಯಾಗಿತ್ತು. ಆದರೂ—ಇಂಗ್ಲಿಷು ಭಾಷಾವಿಸ್ತಾರದಿಂದಾಗಿ ಪಾಶ್ಚಾತ್ಯ ವಿಚಾರಸರಣಿ ಮತ್ತು ಸಂಸ್ಕೃತಿಗಳ ಪರಿಣಾಮ ಅದರ ಮೇಲೆ ಉಂಟಾಗುತ್ತಲೇ ಇತ್ತು. ಈ ಸಾಂಸ್ಕೃತಿಕ ಸಮ್ಮಿಲನವು ಬಂಗಾಳದಲ್ಲಿ ಬಹು ನಿಕಟವಾದದ್ದಾಗಿತ್ತಾದರೂ-ಈ ಪ್ರದೇಶದಲ್ಲಿ,ಅದರ ಪರಿಣಾಮ ಅಷ್ಟೊಂದು ಬಲವಾಗಿರಲಿಲ್ಲ.ದಕ್ಷಿಣ ಕನ್ನಡದ ಆಸುಪಾಸಿನ ಜಿಲ್ಲೆಗಳ ಮೇಲೆ ಈ ಆಧುನಿಕ ಜೀವನ ಸರಣಿಯ ಪರಿಣಾಮವೇ ಆಗಿಲ್ಲ ಎನ್ನಬಹುದಾದರೂ, ಇಲ್ಲಿನ ಜನ ತಮ್ಮ ಸಂಸ್ಕೃತಿಯನ್ನು ಕಳೆದುಕೊಳ್ಳದೆಯೆ, ಆಧುನಿಕ ವಿದ್ಯಾಭ್ಯಾಸದ ಉಪಯೋಗಹೊಂದಲು ಸಿದ್ಧರಾಗಿದ್ದರು. ಆಗಿನ ದಿನಗಳಲ್ಲಿ ಈ ಹೊಸ ಸಂಸ್ಕೃತಿಯೆಂಬುದು ಬರಿಯ ತೊಗಟೆಯಂತಿರಲಿಲ್ಲ; ಅದಕ್ಕೂ ಆಳವಾಗಿತ್ತು. ಜನಗಳ ಜ್ಞಾನದ ವಿವಿಧ ದೆಸೆಯನ್ನು ಆವರಿಸಿತ್ತು. ಈ ವಿದ್ಯಾಭ್ಯಾಸದಿಂದಾಗಿ ಜನಗಳಲ್ಲಿ ಒಂದು ಬಗೆಯ ವಿಚಾರ ವೈಶಾಲ್ಯ, ದೃಷ್ಟಿ ವೈಶಾಲ್ಯಗಳು ಉಂಟಾಗಿದ್ದುವೆಂದರೆ ತಪ್ಪಿಲ್ಲ. ನಮ್ಮ ಜಿಲ್ಲೆಯಿಂದ ಮೊದಮೊದಲು ವಿದ್ಯಾವಂತರಾಗಿ ಹೊರಹೊರಟ ಜನಗಳಲ್ಲಿ ಈ ನಯಗಾರಿಕೆ ವಿಶೇಷವಾಗಿ ಕಂಡು ಬರುತ್ತಿತ್ತು. ಅವರು ಇನ್ನಾವ ನಾಡಿನ ಭಾಗಕ್ಕೇ ಹೋಗಲಿ—ಜನಗಳೊಡನೆ ಸಮನಾಗಿ ಬೆರೆಯುತ್ತಿದ್ದುದಲ್ಲದೆ, ಪರಿಚಿತರ ಗೌರವ ಆದರಗಳಿಗೂ ಪಾತ್ರರಾಗುತ್ತ ಬಂದರು. ನಮ್ಮ ಜನಗಳ ಮನೋಧರ್ಮದ ಮೇಲೆ ಉಂಟಾದ ಈ ನವೀನ ಪರಿಣಾಮವು,ನಮ್ಮ ತಂದೆಯವರ ಮೇಲೂ ಆಗದಿರಲಿಲ್ಲ. ಕೆಲವೊಂದು ನವೀನ ಸುಧಾರಣೆ ನಮ್ಮ ತಂದೆಯವರ ಮೂಲಕವಾಗಿಯೂ ನಮ್ಮ ಜಿಲ್ಲೆಯಲ್ಲಿ ನಡೆಯುವಂತಾಯಿತು.

ಆಗಿನ ದಿನಗಳಲ್ಲಿ ಬಂಟವಾಳವು ಚಿಕ್ಕೊಂದು ಗ್ರಾಮ; ಆದರೆ ದಕ್ಷಿಣ ಕನ್ನಡದ ಅನೇಕ ಗ್ರಾಮಗಳಂತೆ ನಿಸರ್ಗ ಸುಂದರವಾದ ಗ್ರಾಮ. ಘಟ್ಟದ ಹೆದ್ದಾರಿಯೊಂದು ಅದರ ಮೂಲಕವೇ ಹಾದುಹೋಗುತ್ತಿದ್ದು, ಮಂಗಳೂರು ಬಂದರದಿಂದ ನದಿಯ ಮಾರ್ಗವಾಗಿಯೂ ಅಲ್ಲಿಗೆ ಬರುವ ಸೌಕರ್ಯವಿದ್ದು—ಸಾಕಷ್ಟು ವ್ಯಾಪಾರ ಪ್ರಸಿದ್ಧಿಯುಳ್ಳ ಪೇಟೆಯಾಗಿತ್ತು. ಪೇಟೆಗೆ ಪೇಟೆ; ಹಳ್ಳಿಗೆ ಹಳ್ಳಿ. ಪೇಟೆಯ ಇಕ್ಕಡೆಗಳಲ್ಲೂ ಹಳೆಯ ಮಾದರಿಯ ಚೌಕಿ ಮನೆಗಳಿರುತ್ತಿದ್ದುವು. ಮನೆಗೆ ಹೆಚ್ಚಾಗಿ ಹುಲ್ಲಿನ ಚಾವಣಿ. ಮನೆಯ ಹಿತ್ತಿಲು ತೋಟಗಳಲ್ಲಿ ತಲೆಯೆತ್ತಿ ಚವರಿಬೀಸುವ ತೆಂಗಿನ ಮರಗಳು, ಮಾವು ಹುಣಿಸೆಯಂಥ ಹೆಮ್ಮರಗಳು. ಇವೆಲ್ಲ ಮೂಡುವ ಸೂರ್ಯನ ಬಿಸಿಲನ್ನು ಹೀರಲು ನಿಂತಂತೆ ಗಂಭೀರವಾಗಿ ಕಾಣಿಸುತ್ತವೆ. ಇನ್ನು—ಗ್ರಾಮದ ಎಲ್ಲೆಲ್ಲೂ ಗೇರು, ಧೂಪ ಮೊದಲಾದ ಮರಗಳು ಕಡಲಿನ ಗಾಳಿಗೆ ಸದಾ ತಲೆತೂಗುತ್ತಲೇ ಇರುವುವು. ಮಳೆಗಾಲ ಬಿರಿದು ಬಂತೆಂದರೆ—ಈ ವೃಕ್ಷರಾಜಿಯ ತೂಗಾಟ, ಕಲರವ, ಚೀರಾಟ, ತೂರಾಟಗಳಿಗೆ ಗುರಿಯಾಗುತ್ತವೆ. ಊರಿಗೆ ಮಳೆ ಬಂತೆಂದರೆ ನಾಡಿನ ಸ್ವರೂಪವೇ ಬೇರಾಗುತ್ತದೆ. ಕೆಮ್ಮಣ್ಣಿನ ನೆಲ ಗುಡ್ಡಗಳು ಹಸುರು ಧಾವಳಿ ಹೊದ್ದು ಬಿಡುತ್ತವೆ. ಕಣಿವೆಯಲ್ಲಿ ತುಂಬಿದ ಕಂಗು, ಬಾಳೆ, ಕಬ್ಬು ಮೊದಲಾದುವು ಹಸುರಿನ ಚೆಲ್ಲಾಟವನ್ನು ಮಾಡುತ್ತವೆ. ಇವುಗಳ ಎಡೆಯಲ್ಲಿ ಓಡಾಡುವ ಹೊಳೆತೋಡುಗಳ ಕುಣಿದಾಟವೇನು; ಅವುಗಳ ಇಕ್ಕಡೆಯ ದಂಡೆಗಳಿಂದ ತೂಗುವ ಹೀಲಿ ಗಿಡಗಳ ಚವರಿ, ಬೀಸಣಿಗೆಗಳೇನು! ಊರಿನ ದೊಡ್ಡ ಬಯಲುಗಳು ಹೊಸ ಪೈರಿನ ಸಂಪತ್ತನ್ನು ಹೊತ್ತು ಮೆರೆಯತೊಡಗುತ್ತವೆ. ಊರ ನಡುವೆ ಹರಿಯುವ ನದಿಯೋ ಉಕ್ಕಿ, ಸೊಕ್ಕಿ ಕಡಲಕಡೆಗೆ ಓಡುವ ನೋಟವೇ ನೋಟ!.

ಬಂಟವಾಳದ ಜನಗಳ ಮನಸ್ಸಿನ ಮೇಲೆ ನೇತ್ರಾವತಿ ನದಿಯು ತನ್ನದೇ ಆದ ಮುದ್ರೆಯೊತ್ತಿಬಿಟ್ಟಿದೆ. ಬೇಸಗೆಗೂ ಬತ್ತದ ನದಿಯದು. ಅದು ಹರಸುವಾಗ—ಊರಿನ ಹೊಲ ತೋಡುಗಳು ಹಸುರಾದಾವು, ಹಚ್ಚಗಾದಾವು. ನಿತ್ಯಜೀವನದ ವ್ಯಾಪಾರ ಸಾಗುವಾಡಗಳಿಗೆ ನದಿಯ ಪ್ರವಾಹ ಅನುಕೂಲವಾದೀತು. ಆದರೆ ನೆರೆಬಂದು ಸೊಕ್ಕಿದಾಗ ಊರನ್ನು ನುಂಗುವ ಹೆದರಿಕೆಯೂ ಉಂಟಾಗುತ್ತದೆ. ಪಶ್ಚಿಮ ಘಟ್ಟದ ಝರಿಗಳು ಧುಮುಕಿ ಉಂಟಾಗುವ ನದಿ—ಕಾಡಿನ ಹಸುರು ದಟ್ಟಣೆಯನ್ನು ಸೀಳಿಕೊಂಡು, ಬಂಟವಾಳವನ್ನು ಸಮೀಪಿಸಿದಂತೆ ಬಯಲುಗಾವಲಿಗೆ ಕಾಲಿರಿಸುತ್ತದೆ. ಅಲ್ಲಿಂದ ಮುಂದೆ ಬಂಟವಾಳದಂತಹ ಹಳ್ಳಿಗಳ ಸುತ್ತಲಿನ ತೋಟ, ಬಯಲು, ದಂಡೆ, ಮನೆ ಮಠಗಳಿಗೆ—ನದಿಯೊಂದು ಚೆಲುವಿನ ಪೂರ್ಣತೆಯನ್ನುಂಟುಮಾಡುತ್ತದೆ. ಇಂಥ ನದಿಯ ದಂಡೆಯ ಮೇಲೆ ಕುಳಿತು ಆಡಿದ ನೆನಪಿನಿಂದಲೇ ಇರಬೇಕು—ನಮ್ಮ ತಂದೆ

ತನಗಾಗಿ, ತನ್ನ ಮಗಳಿಗಾಗಿ ಹಾಡಿದ ಕವನವೊಂದು ಹುಟ್ಟಿರಬೇಕು.

ನಮ್ಮ ತಂದೆಯವರ ತಾರುಣ್ಯದ ವಿಚಾರದಲ್ಲಿ, ನಮಗೆ ಹೆಚ್ಚಿಗೆ ತಿಳಿದುಬರುವುದಿಲ್ಲ. ಅವರಾಗ ಚುರುಕಾಗಿಯೂ, ಬುದ್ಧಿವಂತರಾಗಿಯೂ ಇದ್ದರೆಂದು ಹೇಳುತ್ತಾರೆ. ಅವರಿಗೆ ಹದಿನೆರಡು ವರ್ಷವಾಗುವಾಗ ಮನೆಯಲ್ಲಿ ಐವರು ಮಕ್ಕಳಿದ್ದರು. ಹಿರಿಯಾತ ಕೃಷ್ಣ ಇಲ್ಲವೆ ಕೊಗ್ಗ ಎಂಬವನ ಸ್ವಭಾವ ನಮ್ಮ ತಂದೆಯವರ ತುಂಟತನ, ಹಾಸ್ಯಪರತೆಗಳಿಗೆ ವ್ಯತಿರಿಕ್ತವಾದ ಶೀಲವಾಗಿತ್ತು. ತಂದೆಯವರ ಆಟ ತುಂಟತನಗಳಲ್ಲಿ ಶಿವನೆಂಬ ಒತ್ತಿನ ಸೋದರನೂ, ಅನಂತರದ ಶಂಕರ ಎಂಬವನೂ ಹೆಚ್ಚಾಗಿ ಬೆರೆಯುತ್ತಿದ್ದರು. ಈ ಅಣ್ಣತಮ್ಮಂದಿರು ಬಂಟವಾಳದಲ್ಲಿ ತಿರುಗದ ಮೂಲೆಯಿಲ್ಲ; ಆಡದ ತಾವಿಲ್ಲ. ಮೊನ್ನೆಮೊನ್ನೆಯ ತನಕ ಊರಿನ ದೇವಸ್ಥಾನವು ಎಲ್ಲ ಸಾಮಾಜಿಕ ಚಟುವಟಿಕೆ, ಎಳೆಯರ ಉತ್ಸಾಹ ಪ್ರದರ್ಶನಕ್ಕೂ ತಕ್ಕ ರಂಗಭೂಮಿಯಾಗಿತ್ತು. ಭೋಜನ, ಸಮಾರಾಧನೆಗಳು, ಉತ್ಸವಗಳು, ಮೆರವಣಿಗೆಗಳು, ದೀಪೋತ್ಸವಗಳು ಅಂದಿನ ಸಾಮಾಜಿಕರ ಸಾಮೂಹಿಕ ಜೀವನದ ಪ್ರಕಟಸ್ವರೂಪಗಳಾಗಿದ್ದುವು. ಹೀಗಾಗಿ ಬಂಟವಾಳದಲ್ಲಿ ಅವರು ಕಳೆದ ಸೊಬಗಿನ ದಿನಗಳ ನೆನಪು ನಮ್ಮ ತಂದೆಯವರ ಮುಪ್ಪಿನಲ್ಲೂ ಹಚ್ಚ ಹಸುರಾಗಿಯೇ ಉಳಿದಿದ್ದುವು. ಆದರೆ ಯೌವನ ಸರಿದಂತೆ ಈ ತೆರನ ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳಲ್ಲಿ ಅವರು ಬೆರೆಯುವುದು ಕಡಿಮೆಯಾಗುತ್ತ ಬಂದು, ಮುಂದೆ ಅದು ಇಲ್ಲದಂತೇ ಆಯಿತು. ಪ್ರಾಯಶಃ ಮುಂದಿನ ಜೀವನದ ಅನುಭವಗಳಿಂದ, ಆರ್ಥಿಕ–ಸಾಮಾಜಿಕ ಜೀವನಗಳ ನಿಜತ್ವ ಅವರ ಕಣ್ಣನ್ನು ತೆರೆದುದರಿಂದ ಈ ಪರಿವರ್ತನೆ ಅವರಲ್ಲಿ ಬಂದಿರಬೇಕು. ಅದಕ್ಕಿಂತ ಮುಖ್ಯವಾದುದು–ಸ್ವತಃ ಅವರಲ್ಲಿಯೇ ಹುದುಗಿದ್ದ ಪ್ರತಿಭೆಯು ವಿಕಸಿತವಾಗಿ ಪ್ರಬುದ್ಧಾವಸ್ಥೆಗೆ ಬರತೊಡಗಿದುದು.

ಅವರಲ್ಲಿ ಕಾವ್ಯಪ್ರೀತಿ ಮಕ್ಕಳಾಟಿಕೆಯಲ್ಲೇ ಮೊಳೆಯತೊಡಗಿತ್ತು. ಅದು ಪ್ರಕಟವಾದ ಬಗೆಯನ್ನು ನಾವು ಪರಿಶೀಲಿಸಬಹುದು. ಅವರ ಅನೇಕ ಗೆಳೆಯರಿಗೆ-ಅವರು ಕೇವಲ ಅಂತರ್ಮುಖಿಗಳೆನಿಸಿದುದರಿಂದ, ಒಮ್ಮೊಮ್ಮೆ ಕಾವ್ಯಾಲಾಪಕ್ಕೆ ಎಡೆಕೊಟ್ಟುದು ಆಶ್ಚರ್ಯವೆನಿಸಿರಬಹುದು. ನಿಜಸ್ಥಿತಿ ಹಾಗಿರಲಿಲ್ಲ. ಮೊದಲಿಂದಲೂ ಅವರಿಗೆ ಮಾತಿನ ಗೀತ, ಪ್ರಾಸ, ಧ್ವನಿಗಳಲ್ಲಿ ಮೋಹವಿತ್ತು. ಪ್ರಾಸ, ಶಬ್ದತರಂಗಗಳಲ್ಲಿ ಅರ್ಥವಿಲ್ಲದಲ್ಲೂ ಅರ್ಥ ಊಹಿಸಿ ಆಡುತ್ತಿದ್ದರವರು. ಶಬ್ದಗಳಿಗೆ ಉಸಿರು, ಅರ್ಥ ತುಂಬಿಸುತ್ತಿದ್ದರು. ಬರಿಯ ಪ್ರಾಸಕ್ಕಾಗಿ ಪ್ರಾಸ, ಶಬ್ದತಾರಂಗಿತ್ವ, ಧ್ವನಿಯಿಂದ ಉದ್ಭವಿಸುವ ಹಾಸ್ಯ, ಗಳಲ್ಲಿ ಆಟವಾಡತೊಡಗಿದ ಅವರಿಗೆ— ಬಹು ಶೀಘ್ರದಲ್ಲೇ "ಕವನ" ರಾಜ್ಯದಲ್ಲಿ ಶಬ್ದಬ್ರಹ್ಮಕ್ಕಿರುವ ಶಕ್ತಿಯ ಅರಿವು ಆಗತೊಡಗಿತು. ಎಳೆಯರಾಗಿದ್ದಾಗಲೇ ಪ್ರಾಸಬದ್ಧ ಮಾತುಗಳನ್ನೋ ಗಾದೆಗಳನ್ನೋ ಕನ್ನಡ, ಕೊಂಕಣಿಗಳಲ್ಲಿ ನಿರ್ಮಿಸಿ, ತಾಯ ಬಳಿಗೋಡಿ ಹೆಮ್ಮೆಯಿಂದ ಹೇಳುತ್ತಿದ್ದರಂತೆ. ದಿನವೆಲ್ಲ ದುಡಿದು ದಣಿಯುವ ತಾಯಿಯು ತನ್ನ ಮಗನ ಚಮತ್ಕಾರದ ಮಾತುಗಳಿಗಾಗಿ ನಕ್ಕು ಹಿಗ್ಗಿದ್ದುಂಟು. ಬಹುಕಾಲದವರೆಗೆ ಶಿವ, ಶಂಕರರೊಡನೆ ಈ ಕವನ ಪ್ರಾಸಗಳನ್ನು ಹೆಣೆಯುವ ಆಟ ಅವರ ಪಾಲಿನ ಮುಖ್ಯ ವಿನೋದವೇ ಆಗಿತ್ತು. ಊಟದ ವೇಳೆ, ಆಟದ ವೇಳೆ ಅವರು ಶಬ್ದಗಳ ಜೋಡಣೆ, ಬಂಡಿ, ಗಾದೆ, ಹಾಸ್ಯಗಳ ಆಟದಲ್ಲಿಯೇ ವೇಳೆ ಕಳೆದರು. ಇವೇನೆ ಅವರ ತಾಯಿ, ಅಜ್ಜಿಯರಿಗೆ ಆನಂದದ ಊಟವಾಗಿತ್ತು. ಅದರ ಮಾದರಿಗಳನ್ನಷ್ಟು ಇಲ್ಲಿ ಉದಹರಿಸುತ್ತೇನೆ. ಒಬ್ಬ ಅಣ್ಣ ಹೀಗೆ ತೊಡಗುತ್ತಾನೆ–"ಅಂಬೋ ನಾತಿಲೋ ಜವಣ" (ಮಾವಿನ ಹಣ್ಣಿಲ್ಲದ ಊಟ) ಎಂದರೆ, ಮತ್ತೊಬ್ಬ "ಚೆಂಬು ನಾತಿಲೋ ಭಟ್ಟು" (ತಂಬಿಗೆಯಿಲ್ಲದ ಪುರೋಹಿತ) ಅನ್ನುತ್ತಾನೆ. ಮೂರನೆಯವ "ಖಾಂಬ ನಾತಿಲೆ ಘರ" (ಕಂಬವಿಲ್ಲದ ಮನೆ) ಎಂದಾಗ, ಅದರ ಪೂರ್ತಿ–"ಯೆಂಬ ಚಾಬ್ಬಿಲೆ ಮಣ್ಕಿ–ಸರ್ವಜ್ಞ" (ಇರುವೆ ಕಚ್ಚಿದಂತೆ ಸರ್ವಜ್ಞ) ಎಂದು ಹೇಳಿ ಮುಗಿಸುತ್ತಾರೆ. ಇನ್ನೊಂದು ಅಂಥ ಮಾತು–

ಆವ್ಸು ನಾತಿಲೆ ಪೂತ (ತಾಯಿಯಿಲ್ಲದ ಮಗ)  
ಪಾವ್ಸು ನಾತಿಲೆ ಶಾತ (ಮಳೆಯಿಲ್ಲದ ಬೆಳೆ).........

ಇಂಥ ಆಟಗಳು ವಿಲಾಸಮನಸ್ಕರಾಗಿದ್ದ ಮಕ್ಕಳಿಗೆ ಮುಂದಿನ ಕಾವ್ಯಸ್ಫೂರ್ತಿ ಮೊಳೆಯಲು ತಕ್ಕ ಹಿನ್ನೆಲೆಯನ್ನು ಕಲ್ಪಿಸಿಕೊಟ್ಟಿತು.

ಅವರು ಎಳೆತನದಲ್ಲಿ ಅನೇಕ ಕೊಂಕಣಿ ಹಾಡುಗಳನ್ನು ರಚಿಸಿದರೆಂದೂ ನಮಗೆ ತಿಳಿದುಬರುತ್ತದೆ. ಅವರ ತಾಯಿ ಕೊಟ್ಟ ಪ್ರೋತ್ಸಾಹ, ತಮ್ಮಂದಿರು ಕೊಟ್ಟ ಅಭಿನಂದನೆಗಳಿಂದ ಅವರ ಉತ್ಸಾಹ ಹೆಚ್ಚಿತು. ಅವರು ಮಾಡಿದ ಎಷ್ಟೋ ಹಾಡುಗಳು ಬಹುದಿನ ಊರವರ ಬಾಯಲ್ಲಿ ಉಳಿದು, ಸಂಚರಿಸಿದುವು. ಒಂದೆರಡು ಬಹುಮಟ್ಟಿನ ಪ್ರಚಾರಕ್ಕೆ ಬಂದು, ಈ ಕಾವ್ಯದ ಆಟಕ್ಕೆ ಒಬ್ಬಿಬ್ಬರು ಹಿರಿಯರನ್ನೂ ತಳ್ಳಿತು. ಮಾತಿನ ಗೀತಗಳು ಅವರಿಗೆ ತೀರ ಪ್ರಿಯವಾಗಿದ್ದುವು-ಉದಾ: ಅನ್ನದ ಚಿಗುರೇ ಚಿನ್ನದ ಅಗುರು (ಅಗುಳು) . . . . . ಈ ಮಾತು 'ಅನ್ನದ ಅಗುರೇ (ಳೇ) ಚಿನ್ನದ ಚಿಗುರಿನ' ವ್ಯತ್ಯಂತರ. ಇದರಂತೆ ತಿರುಗುಮುರುಗು ಶಬ್ದಗಳ ನಿರ್ಮಾಣ ಅವರ ಮತ್ತೊಂದು ವಿನೋದವಾಗಿತ್ತು. ಅವರು ತೊಡಗಿದ "ಕುಬೇರನಿಗೇನಿರಬೇಕು"! ಎಂಬ ತಿರುಗುಮುರುಗು ನುಡಿ ಇನ್ನೂ ವಾಡಿಕೆಯಲ್ಲಿದೆ.

ಅವರ ಎಳೆತನದಲ್ಲಿ ಹೇಗೆ "ಕಾವ್ಯ"ದ ಕುರುಹು ಕಾಣ

ಸಿಗುತ್ತಿತ್ತೋ, ಅದರಂತೆ ಅವರ "ಶಿಕ್ಷಕ" ಪ್ರವೃತ್ತಿಯೂ ಆಗಿಂಹಲೇ ಅವರಲ್ಲಿ ಮೊಳೆದು ಬಂದಿತ್ತು. ಅವರಿಗೆ ಜ್ಞಾನದ ಹಸಿವು ತುಂಬ; ಅದರಷ್ಟೇ ಜ್ಞಾನ ಪ್ರಸಾರದಲ್ಲಿ ಉತ್ಸಾಹ. ಅವರು ಆಡುತ್ತಿದ್ದ ಆಟಗಳಲ್ಲಿ "ಶಾಲೆಯಾಟ" ಎಂಬುದು ಹೆಚ್ಚಿನ ವಿನೋದವೆನಿಸಿತ್ತು. ಅವರೇ ಅಣ್ಣತಮ್ಮಂದಿರೂ, ಒಬ್ಬಿಬ್ಬರು ನೆರಕರೆಯ ಬಾಲಕರೂ ಸೇರಿ ಈ ಶಾಲೆಯಾಟ ನಡೆಸುತ್ತಿದ್ದರು. ಆ ತರಗತಿಗಳನ್ನು ವ್ಯವಸ್ಥಿತವಾಗಿ ನಡೆಯಿಸಿ, ಅವರು ಬಂಟವಾಳ ಬಿಡುವ ಕಾಲದಲ್ಲಿ, ಅದರಿಂದ ಹತ್ತಾರು ಮಂದಿಗೆ ನಿಜವಾದ ಪ್ರಯೋಜನವೂ ಆಗಿತ್ತೆಂದು ಕೇಳಿದ್ದೇವೆ. ಈ ಶಾಲೆಯಾಟ — ಒಂದು ನವೀನ ವಿಚಾರವಲ್ಲ; ಇಂದಿಗೂ ಎಳೆಯರನ್ನು ಆಕರ್ಷಿಸುವ ವಿನೋದವಾಗಿದೆ. ಆದರೆ ಮಾತ್ರ ನಮ್ಮ ತಂದೆಯವರ ಜೀವನದಲ್ಲಿ ಈ ಶಾಲೆಯಾಟವು, ವಿಧಿಯ ವೈಚಿತ್ರ್ಯದಿಂದೆಂಬಂತೆ, ಅವರು ಎಫ್. ಎ. ತೇರ್ಗಡೆಯಾದ ದಿನದಿಂದ, ಅವರನ್ನು ಶಾಲೆಗೇನೆ ಬಿಗಿದುಬಿಟ್ಟಿತು.

ನಮ್ಮ ತಂದೆಯವರ ಬಾಲ್ಯ ವಿದ್ಯಾಭ್ಯಾಸದ ವಿಷಯ ಹೆಚ್ಚಿಗೆ ಹೇಳುವಂತಿಲ್ಲ. ಅವರು ಸಾಕಷ್ಟು ಚುರುಕಿನವರಾಗಿದ್ದುದರಿಂದ ತಮ್ಮ ಗ್ರಹಣ ಶಕ್ತಿ ಬುದ್ಧಿ ಬಲಗಳಿಂದ, ಉಪಾಧ್ಯಾಯರ ಮೆಚ್ಚಿಗೆಗೆ ಪಾತ್ರರಾಗಿದ್ದರು. ಮೊದಲಿಂದ ಪ್ರತಿಯೊಂದು ಪ್ರಶ್ನೆಯನ್ನು ಬುಡದಿಂದಲೇ ನೋಡುವವರಾಗಿದ್ದರಲ್ಲದೆ ಮನೆಗೆಲಸ ಮೊದಲಾದುವನ್ನು ಚಟಪಟನೆ ಮುಗಿಸಿ, ತಮ್ಮ ಆಟ, ಮಾನಸಿಕ ವಿನೋದಗಳಿಗಾಗಿ ಇದಿರು ಕಾಯುತ್ತಿದ್ದರು.

ಮನೆಯಲ್ಲಿ ಮಾತ್ರ, ಅವರು ಬಡವರಾಗಿದ್ದುದರಿಂದ ಸಾಕಷ್ಟು ದುಡಿಯಬೇಕಿತ್ತು. ನೀರೆಳೆಯುವಂತಹ ಕೆಲಸಗಳಲ್ಲಿ ಭಾಗಿಯಾಗಬೇಕಿತ್ತು. ಅತ್ತ ದೇವಾಲಯದ ಉತ್ಸವಗಳಲ್ಲಿಯೂ ಭಾಗವಹಿಸುತ್ತಿದ್ದರು. ಆಟಕ್ಕೂ ವೇಳೆಯಿರಿಸಿಕೊಳ್ಳುತ್ತಿದ್ದರು. ಅವರ ಮೆಚ್ಚಿನ ಆಟಗಳಲ್ಲಿ–ಕುಟ್ಟಿದೊಣ್ಣೆ (ಚಿಣಿ ಕೋಲು), ಗೋಲಿ ಮುಂತಾದುವು ಮುಖ್ಯವಾಗಿದ್ದುವು. ಅವರಿಗೆ ಊರಿನ ಗರಡಿ ಮನೆಗಳಲ್ಲಿ ರೂಢಿಯಾಗಿದ್ದ ದಂಡ ಬಸ್ಕಿಗಳಂತಹವು ಬೇಸರಕಾರಿ ಚಟುವಟಿಕೆಗಳೆನಿಸಿದ್ದುವು. ಮುಂದೆ ಮುಂದೆ ಅವರು, ಈಜುಗಾರಿಕೆಯಲ್ಲಿ ಹೆಚ್ಚಿನ ಆಸಕ್ತಿ ವಹಿಸಿದರು. ಬಂಟವಾಳದಲ್ಲಿಯೇ ಹರಿಯುವ ನೇತ್ರವತಿ ಹೊಳೆ ವೇಗವಾದದ್ದು; ಆಳವಾದುದಲ್ಲ; ಬಂಡೆಗಳೂ ಹೆಚ್ಚಿಗೆ. ಒಮ್ಮೆ ತಮ್ಮಂದಿರೊಡನೆ ಅವರು ಈಜುತ್ತಿದ್ದಾಗ, ನಡುಮಧ್ಯಾಹ್ನದ ವೇಳೆಗೆ, ತಮ್ಮ ಶಂಕರ ದಣಿದು ನೀರಲ್ಲಿ ಮುಳುಗಿದ. ಆಗ ಅವನನ್ನು ಉಳಿಸಲು ನಮ್ಮ ತಂದೆಯವರು ನೀರಿಗೆ ಹಾರಿ ತಮ್ಮನ ಜತೆಗೇನೆ ಕೆಳಕ್ಕೆ ಹೋದರು. ಅದನ್ನು ಕಂಡ ಮೂರನೆಯ ಸೋದರ ಶೀನನೂ ಹಾರಿದ! ಮೂವರೂ ನೀರಿಗೆ ಬಲಿಯಾಗಬೇಕಿತ್ತು. ಆಗ ದಾರಿಗನಾವನೋ ಅದನ್ನು ಕಂಡು–ನೀರಿಗೆ ಧುಮುಕಿದ. ಪುಣ್ಯಕ್ಕೆ, ಆಗಿನ ಕಾಲದ ಬಾಲಕರಿಗೆಲ್ಲ ತಲೆಗೆ ಶಿಖಿಯಿತ್ತು. ಶಿಖಿಯನ್ನೆಳೆದು ಆತ ಅವರೆಲ್ಲರನ್ನು ಪಾರುಮಾಡಿದ. ಪಾರುಮಾಡಿದಾಗ ಮೂವರಿಗೂ ಸ್ಮೃತಿಯಿದ್ದಿರಲಿಲ್ಲವಂತೆ. ಅನಂತರ ಸ್ಮೃತಿ ಬಂದು ಎಲ್ಲರೂ ಬದುಕಿಕೊಂಡರು.

ನಮ್ಮ ತಂದೆಯ ಎಳೆತನದ ಮುಖ್ಯ ಸಂಪತ್ತೇ ಅವರ ಬುದ್ಧಿಮತ್ತತೆ. ಅದು ನಾನಾ ರೂಪಗಳಲ್ಲಿ ಪ್ರಕಟವಾಗುತ್ತಿತ್ತು. ಬರಿದೆ ಕುಳಿತಿರಲಾರದ ಅವರ ಶೀಲಕ್ಕೆ, ಊರಿನ ಬಹಿರಂಗ ಆವರಣ ತಾರುಣ್ಯಕ್ಕೆ ತಕ್ಕ ಹಲವಾರು ಅವಕಾಶಗಳನ್ನು ಕೊಟ್ಟಿತು. ಆದರೆ ಅವೆಲ್ಲವಕ್ಕೆ ಕೊನೆಬರಲು ಬಹು ಕಾಲ ಹಿಡಿಯಲಿಲ್ಲ. ಬಂಟವಾಳ ಆಗಿನ ದಿನಗಳಲ್ಲಿ (೧೮೮೦–೯೦), ಅವರ ಮಾನಸಿಕ ಹಸಿವೆಗೆ ಬೇಕಾದ ಪುಸ್ತಕಗಳನ್ನು, ಅವಕಾಶವನ್ನು ಕೊಡಲಾರದ ಊರು. ಆದರೂ ಮನಸ್ಸು ಎಂದೂ ಸುಮ್ಮನೆ ಕುಳಿತಿರಲಾರದ್ದು. ಹಾಸ್ಯ ಪರಿಹಾಸ್ಯದ ನುಡಿಗಳನ್ನು, ಮಾತುಗಳನ್ನು ನಿರ್ಮಿಸುವುದರಲ್ಲಿ, ಒಗಟನ್ನು ನಿರ್ಮಿಸುವುದರಲ್ಲೂ ಅವಕಾಶ ಗಳಿಸಿತು. ಬಾಯಿ ವಿನೋದದೊಡನೆ ಬೆರೆತ ಆಟಗಳು ಅವರವು. ಗಜ್ಜುಗ, ಪಗಡೆಯಾಡುವಾಗಲೂ ಅವರ ನಾಲಗೆ ತಣ್ಣಗಿರದು. ಆಗಿನ ದಿನಗಳ ಒಂದು ಬಗೆಯ ಇಸ್ಪೀಟು ಆಟ 'ಗಂಜೀಫು' ಎಂಬುದು ಅವರಿಗೆ ಪ್ರಿಯವಾಗಿತ್ತು. ವಿಷ್ಣುವಿನ ದಶಾವತಾರಗಳಿಗೆ ಸಂಬಂಧಿಸಿದ ೧೦೦ ಎಲೆಗಳಿಂದಾಡುವ ಆಟವದು. ಈ ಶತಮಾನದ ಪ್ರಥಮ ದಶಕದ ತನಕ, ದಕ್ಷಿಣಕನ್ನಡ ಜಿಲ್ಲೆಯ ಗ್ರಾಮಾಂತರಗಳಲ್ಲಿ ಆ ಆಟ ರೂಢಿಯಾಗಿತ್ತು. ಹೊಸಮಾದರಿಯಾದ ಇಸ್ಪೀಟು ಬಂದು ಗಂಜೀಫು ಇಂದಿಗೆ ಸಂಪೂರ್ಣ ಮಾಯವಾಗಿದೆ. ನಮ್ಮ ತಂದೆಗೆ, ಅನಂತರ ನಿವೃತ್ತಿಯಾಗುವತನಕವೂ "ಆಕ್ಷನ್ ಬ್ರಿಜ್" ಆಟದ ಮೇಲೆ ತುಂಬ ಮಮತೆ. ಎಳೆತನದಲ್ಲಿ ಅವರು ಚದುರಂಗವನ್ನೂ ಬಹುವಾಗಿ ಆಡಿದವರು. ತಾನು ಅದನ್ನು ಕಲಿತವರೇ, ಸೋದರ ರಾಘವೇಂದ್ರನಿಗೂ ಇತರ ತಮ್ಮಂದಿರಿಗೂ ಅದನ್ನು ಕಲಿಸಿ— ಘಂಟೆ ಘಂಟೆಗಳ ತನಕ ವಿರಾಮ ಕಳೆದುದುಂಟು.

ರಾಘವೇಂದ್ರನೆಂಬ ಈ ಸೋದರ ಅವರಂತೆಯೇ ತುಂಬ ಚುರುಕಿನವ; ಬುದ್ಧಿವಂತ. ಅವನ ಮೃತಿಯೊಂದಿಗೆ, ತಂದೆಗೆ ಚದುರಂಗದ ಮೇಲಿನ ಮೋಹವೂ ಮೃತಿಯನ್ನೈದಿತು.

ನಮ್ಮ ತಂದೆಯವರು ಹಾಸ್ಯ ಪ್ರಿಯರು; ವಾಗ್ವಿಲಾಸಿಗಳು-ಎಳೆತನದಿಂದಲೇ. ಆ ವಿಚಾರದಲ್ಲಿ ಅವರ ಬಾಲ್ಯದ ಸಹಪಾಠಿಗಳು ಅನೇಕ ಕತೆ ಹೇಳಿದ್ದುಂಟು. ಅಂಬಿನ ವೇಗದಿಂದ ಮರುಮಾತನ್ನೂ ಎಸೆಯಬಲ್ಲ ಶಕ್ತಿ ಅವರದು. ಅವುಗಳ ವಿವರ ಹೆಚ್ಚಾಗಿ ಬರೆಯಲಾರೆ; ಒಂದೆರಡು ಉದಾಹರಣೆ

ಹೇಳಿದರೆ ಸಾಕಷ್ಟೆ. ಊರಿನ ಜಗಳಗಂಟರು ಎಂದು ಹೆಸರಾದ ಶ್ಯಾಮರಾಯರೊಮ್ಮೆ– ಊರಿನ ಸಮಾರಾಧನೆಗೆ ಬಂದಿದ್ದರು. "ಶ್ಯಾಮಣ್ಣ" ಎಂದು ಅವರನ್ನು ಕರೆಯುವ ರೂಢಿ. ನಮ್ಮ ತಂದೆ ಅವರಿಗಿಂತ ಬಲು ಕಿರಿಯರು. ಅವರಿಗೆ ನಮ್ಮಪ್ಪನನ್ನು ಮೂದಲಿಸುವುದು ಸ್ವಭಾವ; ಒಮ್ಮೆ ಹಾಗೆ ಮೂದಲಿಸಿದಾಗ ಇವರು ಎದುರುತ್ತರವಾಗಿ ಕೇಳಿದ ಪ್ರಶ್ನೆಯೆಂದರೆ "ಜಗಳದ ಬೀಜಕ್ಕೆ ಯಾವ ಮಣ್ಣು?" ಎಂದು. ಆಚೀಚೆ ಊಟಮಾಡುತ್ತಿದ್ದವರು ಉತ್ತರಿಸಲಾರದೆ ತಂದೆಯನ್ನೇ ಮುಖ ಮುಖ ನೋಡಿದರು. ಇನ್ನೊಬ್ಬರು ಅದೇ ಪ್ರಶ್ನೆ ತಿರುಗಿ ಕೇಳಿದರು "ಜಗಳದ ಬೀಜಕ್ಕೆ ಯಾವ ಮಣ್ಣು?" ಎಂದು. ಆಗ ನಮ್ಮ ತಂದೆ "ಶ್ಯಾಮಣ್ಣ" ಎಂದರು. ಇಡಿಯ ಸಭೆಯೇ ನಕ್ಕಿತು; ಶ್ಯಾಮರಾಯರ ಮುಖ ಸಪ್ಪಗಾಯಿತು. ಈ ಒಂದು ಘಟನೆ ಬಹುಕಾಲದ ತನಕವೂ ಜನಗಳ ನೆನಪಿನಲ್ಲಿ ಉಳಿದಿತ್ತು.

ಅವರು ಕೇವಲ ಚಿಕ್ಕ ಮಗುವಾಗಿದ್ದಾಗ ಆಡಿದ ಮರುಮಾತೊಂದು ಅರ್ಥವತ್ತಾಗಿದೆ. ನಮ್ಮ ಅಜ್ಜ ನಮ್ಮ ತಂದೆಯೊಡನೆ ಒಂದು ಚೀಟಿಯನ್ನು ಸಮೀಪದ ಯಾರಿಗೋ ಕಳುಹಿಸಿದರು. ಅವರದನ್ನು ಕೊಟ್ಟಾಗ, ಸ್ವಾಭಾವಿಕವಾಗಿ "ನಿನ್ನ ಹೆಸರೇನೆಂದು" ಅವರು ಕೇಳಿದರು. ಆಗ ಅವರು "ಮಂಗೇಶ" ಎಂದರು; ತಿರುಗಿ ಪ್ರಶ್ನೆ ಕೇಳಿದರು. "ನಿನ್ನ ತಂದೆಯ ಹೆಸರೇನು?" ಎಂದು. ಬೇಡದ ಈ ಪ್ರಶ್ನೆ ಕೇಳಿ ತಂದೆಗೆ ಕರಕರೆಯಾಗಿ "ನಿಮ್ಮಪ್ಪನ ಹೆಸರೇನು?" ಎಂದು ಕೇಳಿಬಿಟ್ಟರು. ಅವರಿಗೆ ಅದು ಆಶ್ಚರ್ಯವಾಗಿ ಕಂಡು "ನನ್ನ ತಂದೆಯ ಹೆಸರನ್ನು ಕೊಂಡು ನಿನಗೇನಾಗಬೇಕು?" ಎಂದರೆ, ಅದೇ ಮಾತು ಅವರಿಗೂ ಮಾರುತ್ತರವಾಗಿ ದೊರೆಯಿತು. ಆಗ ಅವರು "ಹಾಗಲ್ಲ– ಯಾರ ಮಗ ಈ ಕಾಗದ ತಂದುಕೊಟ್ಟನೆಂದು ಕೇಳಿದರೆ ನಾನು ಹೇಳಬೇಡವೇ?" ಎಂದು ಸಮಾಧಾನ ಕೊಟ್ಟರು. "ಹಾಗಿದ್ದರೆ ನೀವು ನಿಮ್ಮ ಹೆಸರನ್ನು ಹೇಳಿ, ಯಾರಿಗೆ ಕಾಗದ ಕೊಟ್ಟೆ ಎಂದು ನನ್ನನ್ನು ಕೇಳಿದರೆ ನಾನು ಹೇಳಬೇಕಲ್ಲ" ಎಂಬ ಪ್ರತ್ಯುತ್ತರ ಬಂದಿತು. ಅವರು ನಕ್ಕು ಮೌನ ತಾಳುವಂತಾಯಿತು.

ಬಂಟವಾಳದಲ್ಲಿ ಆಗಿನ ದಿನಗಳಲ್ಲಿದ್ದುದು ಪ್ರಾಥಮಿಕ ಶಾಲೆ ಮಾತ್ರ. ಹೈಸ್ಕೂಲು ವಿದ್ಯಾಭ್ಯಾಸಕ್ಕೆ ಮಂಗಳೂರಿಗೇ ಹೋಗಬೇಕಾಗಿತ್ತು. ಇನ್ನು ಮಂಗಳೂರಲ್ಲೋ–ಹುಡುಗರಿಗಾಗಿ ವಸತಿಗೃಹಗಳಿದ್ದಿಲ್ಲ; ಅಲ್ಲದೆ ಬಡವರಿಗೆ—ಶಾಲೆಯ ಸಂಬಳವನ್ನು ಕೊಡುವುದೇ ಕಷ್ಟವಾಗಿದ್ದಾಗ, ಊಟ ಮೊದಲಾದುವುಗಳ ವೆಚ್ಚ ಸಹಿಸುವುದು ಇನ್ನಷ್ಟು ಕಠಿಣ. ಹಾಗಾಗಿ ವಿದ್ಯಾರ್ಥಿಗಳಾಗಿ ಹೋಗುವವರು ತಮ್ಮ ನೆಂಟರಿಷ್ಟರೊಡನೆ ವಾಸಿಸಬೇಕಾಗುತ್ತಿತ್ತು. ನಮ್ಮ ತಂದೆ, ತಮ್ಮ ಬಂಧುಗಳಲ್ಲಿ ಒಬ್ಬರಾದ ಹಟ್ಟಂಗಡಿ ಸುಬ್ಬರಾಯರೆಂಬವರೊಡನೆ, ಹೋಗಿ ಸೇರಿಕೊಂಡರು.

ಮಂಗಳೂರಲ್ಲಿ ಅಭ್ಯಸಿಸುವ ಅವರಿಗೆ ಬಂಟವಾಳಕ್ಕಿಂತ ತುಸು ಹೆಚ್ಚಿಗೆ ಬಟ್ಟೆಬರೆ ಬೇಡವೇ? ಆಗಿನ ದಿನಗಳಲ್ಲಿ ಗಜಕ್ಕೆ 2, 4 ಆಣೆಗಳಂತೆ ಬಟ್ಟೆ ವಿಕ್ರಯವಾಗುತ್ತಿತ್ತೆನ್ನಬಹುದು. ನಮ್ಮ ತಂದೆ ಆಗಾಗ ಸಂಬಂಧಿಕರು, ಹಿರಿಯರು ಅಪೂರ್ವಕ್ಕೊಮ್ಮೊಮ್ಮೆ ಕೊಡುತ್ತಿದ್ದ, ಆಣೆ ಪಾವಾಣೆಗಳನ್ನು ಕೂಡಿಸಿ ವರ್ಷಕ್ಕೆ ದೊರೆಯಬಹುದಾದ ಎರಡು ಮೂರು ರೂಪಾಯಿಗಳಿಂದ ತಮ್ಮ ಚಲ್ಲಣ, ಅಂಗಿಗಳನ್ನು ಮಾಡಿಸಿಕೊಂಡರು. ತಮ್ಮ ಶಾಲಾ ವಿದ್ಯಾಭ್ಯಾಸದ ಕಾಲದಲ್ಲಿ ಹಣ ಹೇಗೆ ಒದಗಿತು– ಎಂಬ ವಿಚಾರದಲ್ಲಿ ತಂದೆಯಿಂದಲೇ ನಮಗೆ ಹೆಚ್ಚಿಗೆ ತಿಳಿದುಬಂದಿಲ್ಲ. ಪ್ರಾಯಶಃ ಅವರಿಗೆ ಸಂಬಳ ಮಾಫಿ ಇದ್ದಿರಬೇಕು. ಕಾಗದ ಪುಸ್ತಕಗಳ ಬೆಲೆಯು ತೀರ ಕಡಿಮೆಯಾಗಿರಬಹುದಾದರೂ– ನಮ್ಮ ಅಜ್ಜನ ವರಮಾನದ ದೃಷ್ಟಿಯಿಂದ ಅವು ಹೆಚ್ಚೇ ಸರಿ. ಹಾಗಾಗಿ–ಕಾಗದದ ಮೇಲೆ ತಿರುಗಮುರುಗ ಬರೆದು, ಪುಸ್ತಕ ಬೇಡಿ ಓದಿಕೊಂಡು, ದಿನ ಸಾಗಿರಬೇಕು. ಮಧ್ಯಾಹ್ನದ ಬಹು ಬೆಳಕಿನಲ್ಲಿ, ರಾತ್ರಿಯ ಅಲ್ಪ ಬೆಳಕಿನಲ್ಲಿ ಓದಿ ಓದಿ ಅವರ ಬಲಗಣ್ಣೊಂದು ಆಗಿಂದಲೇ ಶಕ್ತಿಶೂನ್ಯವಾಯಿತು. ಓದಿನ ವೇಳೆಯೊಳಗೇನೆ ನಂಟರ ಬಿಟ್ಟಿ ಮಾಡಬೇಕು. ಆದರೂ ಸ್ಮರಣಶಕ್ತಿ ಚೆನ್ನಾಗಿದ್ದುದರಿಂದ, ಬಿಡುವಿನಲ್ಲಿ ಗೆಳೆಯರಿಂದ ಪುಸ್ತಕಗಳನ್ನು ಎರವಾಗಿ ಕೊಂಡು ಓದಿ, ತಮ್ಮ ಅಭ್ಯಾಸ ಸಾಗಿಸಿದರು.

ವಿದ್ಯಾರ್ಥಿ ಜೀವನದಲ್ಲಿ ಅವರು ಸಹಿಸಿದ ಕಷ್ಟ, ಕಾರ್ಪಣ್ಯಗಳು ಬಹಳ. ಹೀಗಾಗಿ ಸಾಲ, ಹಂಗು, ಪರಾವಲಂಬನೆಗಳ ವಿಚಾರದಲ್ಲಿ ಮನಸ್ಸು ರೋಸಿಹೋಯಿತು. ತಾನು ಸ್ವತಂತ್ರ ಜೀವಿಯಾಗಬೇಕೆಂಬ ಹಂಬಲ ಮನದಲ್ಲಿ ಬೇರೂರಿತು. ಕೈಯೊಡ್ಡುವ ವಿಚಾರದಲ್ಲೇನೆ ಅಸಹ್ಯ ಹುಟ್ಟಿತು. ಅತ್ತ ಅವರ ತಂದೆಯವರ ನಿಧನದಿಂದಾಗಿ ಈ ಜಿಗುಪ್ಸೆ ಇನ್ನಷ್ಟು ಹೆಚ್ಚಿತು. ಹೀಗಾಗಿ ತಾನು ತುಸು ಕಲಿತು, ಇನ್ನೊಬ್ಬರಿಗೆ ಖಾಸಗಿ ಪಾಠ ಹೇಳುವ ಶಕ್ತಿ ಬರುತ್ತಲೇ, ತಮ್ಮ ಬಂಧು ಸುಬ್ಬರಾಯರ ಮನೆಯನ್ನು ಬಿಟ್ಟರು. ತಮ್ಮ ದುಡಿತದಿಂದಲೇ ಜೀವನ ಸಾಗಿಸಿದರು; ಸಾಲದುದಕ್ಕೆ ತಮ್ಮ ತಮ್ಮಂದಿರ ಓದುಬರಹದ ಹೊಣೆಯನ್ನೂ ಅವರೇ ಹೊತ್ತರು.

ಹೆದ್ದೊರೆಯ ಒಯ್ಲಿಗೆ ಎದುರಾಗಿ ಈಸುವವನಂತಿತ್ತು ಅವರ ಪಾಡು. ಮನೆಯ ಸ್ಥಿತಿ ಕೆಟ್ಟಿತ್ತು. ರಾಮಪ್ಪಯ್ಯನವರ ಪಾಲಿಗೆ ಬರಬೇಕಾದ ಆದಾಯ ಬರಲಿಲ್ಲ. ಆ ಭೂಮಿಯನ್ನು ಕೊಂಡವರು ಭೂಮಿಯ ಮೇಲಿನ ಇತರ ಬಾಧ್ಯತೆ ತಪ್ಪಿಸಬೇಕೆಂದು ಒತ್ತಾಯಿಸಿದಾಗ– ಅವರು ತಮ್ಮ ಭಾವಂದಿರಿಂದ ಹಣವನ್ನು ಸಾಲ ಪಡೆಯಬೇಕಾಯಿತು. ಏನು ಮಾಡಿದರೂ

ಅವರ ಭೂಮಿಯನ್ನು ಕೊಂಡವರು ಹಣವನ್ನು ತೆರಲೇ ಇಲ್ಲ. ಹೀಗಾಗಿ ದಾವೆ ಮಾಡಿದರು. ಅದರಲ್ಲಿ ಗುಣವಾದರೂ ಮುಂದೆ ಹೈಕೋರ್ಟಿನ ತನಕ ವಿಷಮ ಕಾಯಿದೆಗಳ ಜಂಜಾಳದಲ್ಲಿ ಅದು ತೊಳಲಿ ನರಳುವಂತಾಯಿತು. ಹೈಕೋರ್ಟಿನಲ್ಲಿ-ರಾಮ ಪ್ಪಯ್ಯನವರಿಗೆ ಅವಗುಣವಾಗುತ್ತಲೇ, ಅವರ ಮುರುಕಲು ಬಾಳು ಸಂಪೂರ್ಣ ಮುರಿದು, ತುಸು ಸಮಯದಲ್ಲಿಯೇ ವ್ಯಥೆಯಿಂದ ಅವರು ತೀರಿಕೊಂಡರು.

ಆಗ ನಮ್ಮ ತಂದೆ ಮಂಗಳೂರಲ್ಲಿ ಓದುತ್ತಿದ್ದರು. ಅವರ ಅಣ್ಣ ಮದ್ರಾಸಿನಲ್ಲಿ. ಬಂಟವಾಳದಿಂದ ಮಂಗಳೂರಿಗೆ ಹೋಗಲು ದೋಣಿಯ ದಾರಿ. ತಮ್ಮ ತಂದೆಗೆ ಕಠಿಣ ಬೇನೆ ಯೆಂಬ ಸುದ್ದಿಯನ್ನು ಕೇಳಿ ಹೊರಟಾಗ, ಬಂಟವಾಳಕ್ಕೆ ಹೋಗುವ ದೋಣಿಗಳೆಲ್ಲಾ ಹೊರಟಾಗಿತ್ತು. ನಿರುಪಾಯ ರಾಗಿ ಕಾಲು ನಡೆಯಿಂದ ಹೊರಟರು; ಬೆಳಗಿನ ಜಾವಕ್ಕೆ ತಂದೆಯ ಮೃತ್ಯುಶಯ್ಯೆಯನ್ನು ಸಮೀಪಿಸಿದರು. ಮಗನ ಬರಕ್ಕಾಗಿಯೇ ಅವರ ಜೀವ ಕಾದಂತಿತ್ತು. ಮುಪ್ಪಿನ ಆ ಹೃದಯ ಮಗನಿಗೆ ಸಾಯುವಕಾಲದಲ್ಲಿ ಸಲ್ಲಿಸಿದ ಉಪದೇಶ ಮಾತ್ರ ಮರೆಯಲಾರದ್ದು. "ಕುಡಿಯಬೇಡ, ನೀತಿಯನ್ನು ಬಿಡ ಬೇಡ. ಎಷ್ಟೇ ಕಷ್ಟಬರಲಿ ನಿನ್ನ ತಂಗಿತಮ್ಮಂದಿರನ್ನು ತೊರೆಯ ಬೇಡ" ಎಂದರು. ನಮ್ಮ ತಂದೆ ಆ ಮಾತುಗಳನ್ನು ಸಾಯುವ ತನಕ ಮರೆಯದೆ ಖಂಡಿತವಾಗಿಯೂ ನಡೆಯಿಸಿಕೊಟ್ಟರು.

ನಮ್ಮ ಅಜ್ಜ ತೀರಿಕೊಂಡುದು 1890ರಲ್ಲಿ; ತಮ್ಮ 51ನೆಯ ವಯಸ್ಸಿನಲ್ಲಿ. ಆಗ ಅವರ ಹಿರಿಯ ಮಗನಿಗೆ ಹದಿನೆಂಟು ವರ್ಷ ಪ್ರಾಯ; ನಮ್ಮ ತಂದೆಗೆ ಬರಿಯ ಹದಿ ನಾರು ವರ್ಷವಾಗಿತ್ತು. ಒಟ್ಟಿಗೆ ಏಳು ಮಂದಿ ಮಕ್ಕಳು; ತೀರ ಕಿರಿಯ ಮಗು ನಾರಾಯಣನಿಗೆ ಹತ್ತು ತಿಂಗಳಾಗಿತ್ತಷ್ಟೆ. ಹೀಗಾಗಿ ಅಜ್ಜನ ಸಾವಿನ ಪೆಟ್ಟು ನಿರಾಧಾರಿಗಳಾದ ಮಕ್ಕಳ ಮೇಲೆ ಬಿತ್ತು. ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮಂಗಳೂರಿಗೆ ಬಿಡಾರ ಸಾಗಿಸುವ ತ್ರಾಣವಿರಲಿಲ್ಲ. ಮಕ್ಕಳೇ ದುಡಿದು ಮನೆ ಯನ್ನು ಪೋಷಿಸುವ ಕಾಲ ಬಂದಿತು. ಇದರಿಂದಾಗಿ ನಮ್ಮ ತಂದೆಯವರು ಖಾಸಗಿ ಪಾಠ ಹೇಳುವ ಕೆಲಸವನ್ನು ಹೆಚ್ಚು ಹೆಚ್ಚಾಗಿ ಮಾಡಬೇಕಾಯಿತು; ತಮ್ಮ ಬುದ್ಧಿಶಕ್ತಿಯನ್ನೆಲ್ಲ ಉಪಯೋಗಿಸಬೇಕಾಯಿತು. ಆಗ ಅವರಿಗೆ ಕನ್ನಡ ಭಾಷೆ ಯಲ್ಲಿದ್ದ ಪ್ರೀತಿಯ ವಿಚಾರ ನಮಗೆ ತಿಳಿಯುವುದಕ್ಕಿಂತ ಹೆಚ್ಚಾಗಿ, ಅವರ ದಾರಿದ್ರ್ಯ, ಹೋರಾಟಗಳ ವಿಚಾರವಾಗಿಯೇ ತಿಳಿದುಬರುತ್ತದೆ. ಅವರಿಗಾಗ ಸ್ವಾವಲಂಬನ, ವಿದ್ಯಾರ್ಜನೆ ಗಳು ಮುಖ್ಯವೆನಿಸಿದ್ದುವು. ತಾನು ಕನ್ನಡ ಸಾಹಿತಿಯಾಗು ವೆನೆಂಬ ಕನಸೂ ಇದ್ದಿರಲಾರದೋ ಏನೋ.

ಸುಮಾರು 1893ರಲ್ಲಿ ಅವರ ಬಳಗದಲ್ಲಿ ಎರಡು ವಿವಾಹಗಳಾದುವು. ಒಂದು ಅವರ ಅಣ್ಣನದು; ಮತ್ತೊಂದು ಅಕ್ಕನದು. ಆ ಅಣ್ಣ ಮದ್ರಾಸಿನಲ್ಲಿ ಓದುತ್ತಿದ್ದರು. ಮದು ವೆಯ ಬಳಿಕ ಅವರು ಮಾವನ ಊರಿಗೆ ಹೋದರು. ಅನಂತರ ರಾಣೆಬೆನ್ನೂರಿನಲ್ಲಿ ಮಾಮಲೆದಾರರಾದರು. ಮುಂಬಯಿ ಸಂಸ್ಥಾನಕ್ಕೆ ಅವರು ಹೋದ ಬಳಿಕ, ಮಂಗಳೂರಿಗೆ ಬಂದು ಹೋಗುವುದೇ ಕಡಿಮೆಯಾಯಿತು. 1894ರಲ್ಲಿ ನಮ್ಮ ತಂದೆಗೂ ಲಗ್ನವಾಯಿತು. ಆಗ ಪುತ್ತೂರಿನಲ್ಲಿ ವಾಸವಾಗಿರು ತ್ತಿದ್ದ 'ಬೆನಗಲ್' ಕುಟುಂಬದಿಂದ ಬಂದವಳು ನಮ್ಮ ತಾಯಿ. ಆಕೆ—ಕನ್ನಡ ಕ್ಷೇತ್ರದಲ್ಲಿ ಹೆಸರಾಗಿದ್ದ ಬೆನಗಲ್ ರಾಮ ರಾಯರ ಸೋದರಿ. ನಮ್ಮ ತಂದೆಗೆ ಮದುವೆಯಾಗುವಾಗ 20 ವರ್ಷ ಪ್ರಾಯ; ತಾಯಿಗೆ 11 ವರ್ಷ; ತಂದೆ ಆಗ ಎಫ್. ಎ. ಕ್ಲಾಸಿನಲ್ಲಿ ಓದುತ್ತಿದ್ದರು.

ಎಫ್. ಎ. ಮುಗಿಯುತ್ತಲೇ ಮುಂದಿನ ವಿದ್ಯಾಭ್ಯಾಸದ ಚಿಂತೆ ತೊಡಗಿತು. ಅವರ ಒಲವೆಲ್ಲ ಗಣಿತ ಶಾಸ್ತ್ರದ ಮೇಲೆ. ಆದರೆ-ಆಗ ಮಂಗಳೂರಿನಲ್ಲಿದ್ದುದು ಸೈಂಟ್ ಎಲೋಸಿ ಯಸ್ ಕಾಲೇಜು; ಅದರಲ್ಲಿ ಬಿ. ಎ. ಓದುವವರಿಗೆ ಗಣಿತ ಕೊಳ್ಳುವ ಅವಕಾಶವಿರಲಿಲ್ಲ. ಚರಿತ್ರೆ ಇಲ್ಲವೆ ಅರ್ಥಶಾಸ್ತ್ರ ವನ್ನಷ್ಟೇ ಓದಬೇಕಿತ್ತು. ಗಣಿತ ಓದಲು ಮದ್ರಾಸಿಗೆ ಹೋಗುವ ತ್ರಾಣ ನಮ್ಮ ತಂದೆಗೆ ಇರದಿದ್ದುದರಿಂದ ಅವರು-ಮಂಗಳೂ ರಲ್ಲೇ, ಚರಿತ್ರೆ ಅರ್ಥಶಾಸ್ತ್ರಗಳನ್ನು ಅಭ್ಯಾಸಮಾಡಿದರು. ೧೮೯೭ರಲ್ಲಿ ಅವರು ಇಂಗ್ಲಿಷ್ ಕನ್ನಡ-ಪರೀಕ್ಷೆಗಳಲ್ಲಿ ಪಾಸಾ ದರು. ಐಚ್ಛಿಕ ವಿಷಯಗಳನ್ನು ಅಭ್ಯಸಿಸಿ ಪಾಸಾದುದು ೧೯೦೦ರಲ್ಲಿ.

ಓದು ಪೂರ್ಣಮುಗಿಯುವುದರೊಳಗೇನೆ ಸುದೈವ ದಿಂದ ಅವರಿಗೊಂದು ನೌಕರಿ ದೊರೆತು; ಹಣದ ಸಂಕಷ್ಟ ಎಷ್ಟೋ ಕಡಿಮೆಯಾಯಿತು. ಅವರು ಭಾಷಾ ವಿಷಯಗಳಲ್ಲಿ ತೇರ್ಗಡೆಯಾದುದರಿಂದ, ೧೮೯೭ರಲ್ಲಿ ಅವರಿಗೆ ಮಂಗಳೂ ರಿನ ಗವರ್ನಮೆಂಟ್ ಕಾಲೇಜಿನಲ್ಲಿ ಇಪ್ಪತ್ತು ರೂಪಾಯಿಗಳ ತಲಬಿನಮೇಲೆ-ಜೂನಿಯರ್ ಕನ್ನಡ ಪಂಡಿತರ ಕೆಲಸ ದೊರೆ ಯಿತು. ಆಗ ಗವರ್ನಮೆಂಟ್ ಕಾಲೇಜಿಗೆ ಹೆನ್ಸಮೆನ್ ಎಂಬ ಸಿಲೋನಿನ ಒಬ್ಬರು ಪ್ರಿನ್ಸಿಪಾಲರು. ನಮ್ಮ ತಂದೆಗೆ ಕನ್ನಡ ಕಲಿಸುವ ಅರ್ಹತೆ ಇತ್ತೋ ಇಲ್ಲವೊ! ಅದನ್ನೇ ಕುರಿತು ತಂದೆ ಪರಿಹಾಸ್ಯಮಾಡುತ್ತಿದ್ದುದುಂಟು. ನಮ್ಮ ತಂದೆಗೆ ಎಫ್. ಎ. ಯಲ್ಲಿ ಕನ್ನಡ ಹೇಳಿಕೊಟ್ಟವರು ಉದ್ಯಾವರ ಕೃಷ್ಣಯ್ಯ ಎಂಬ ವರು. ನಮ್ಮ ತಂದೆಯು ಕನ್ನಡಕ್ಕೆ ತೋರಿದ ಔದಾಸೀನ್ಯವನ್ನು ಕಂಡ ಅವರು-'ನೀನು ಕನ್ನಡದಲ್ಲಿ ಪಾಸಾದರೆ ನನ್ನ ಪಂಡಿತ ಗಿರಿ ಬಿಟ್ಟುಬಿಡುತ್ತೇನೆ' ಎಂದು ಶಪಥ ಹಾಕಿದ್ದರಂತೆ. ಅದನ್ನೇ ತಂದೆ ನಗುತ್ತಾ ಹೇಳುತ್ತಿದ್ದರು. ನಮ್ಮ ತಂದೆಗೆ ಕನ್ನಡ ಪಂಡಿತ ಪಟ್ಟ ದೊರಕಿದುದು ಅವರಿಗೇನೆ ಸೋಜಿಗವೆನಿಸಿರಬೇಕು. ಅಲ್ಲದೆ ಆ ಕೆಲಸಕ್ಕೆ ಅರ್ಜಿದಾರರಾಗಿದ್ದವರಲ್ಲಿ—ನಂದಳಿಕೆ

ಲಕ್ಷ್ಮೀನಾರಾಯಣಪ್ಪನವರೂ ಒಬ್ಬರಾಗಿದ್ದರು. ಅಂಥವರ ಮುಂದೆ ನಮ್ಮ ತಂದೆಯ ಆಯ್ಕೆಗೆ ಕಾರಣ, ಪ್ರಾಯಶಃ ನಮ್ಮ ತಂದೆಗೆ ಕನ್ನಡದ ಜತೆಗೆ ಇಂಗ್ಲಿಷೂ ತಿಳಿದಿದ್ದುದು. ಇಂಗ್ಲಿಷಿಗೆ ಆಗಿನ ದಿನಗಳಲ್ಲಿದ್ದ ಅಧಿಕ ಮಾನ್ಯತೆ. ನಿಜಕ್ಕೂ ಆ ಹುದ್ದೆ ನಂದಳಿಕೆಯವರಿಗೆ ದೊರಕಿತಿದ್ದರೆ ಅವರ ಪ್ರತಿಭೆ, ಕೀರ್ತಿಗಳು ಬಹು ಮುಂಚೆಯೇ ಬೆಳಕಿಗೆ ಬರುತ್ತಿದ್ದುವೋ ಏನೋ. ನಂದಳಿಕೆಯವರು ಅನಂತರ ಉಡುಪಿಯಲ್ಲಿ ಕುಸ್ತಿ ಮಾಸ್ತರರಾಗಿ ದುಡಿದರು. ಅಂತು ಈ ಉದ್ಯೋಗಗಳ ದೆಸೆಯಿಂದ ಈ ಇಬ್ಬರ ಜೀವನದಲ್ಲಿಯೂ ವಿಚಿತ್ರ ಪರಿಣಾಮವಾಯಿತು.

ನಮ್ಮ ತಂದೆಗೆ ಕನ್ನಡ ಪಂಡಿತಪಟ್ಟ ದೊರಕಿದ ಕೆಲವೇ ಸಮಯದಲ್ಲಿ, ಅವರ ಪ್ರಿನ್ಸಿಪಾಲರು ಅವರನ್ನು ಎಫ್. ಎ. ಗೆ ಗಣಿತಪಾಠ ಹೇಳಲು ನಿಯೋಜಿಸಿದರು. ಅವರಿಗೆ ಗಣಿತದಲ್ಲಿ ಅಂಥ ಪ್ರೀತಿ ಆಸಕ್ತಿಯಿತ್ತೆಂದು ತಿಳಿದವರು ಕಡಿಮೆ. ಕೆಲವು ಬಾರಿ ಗಣಿತದ ಪ್ರಾಧ್ಯಾಪಕರು ರಜೆಯಲ್ಲಿದ್ದಾಗ ನಮ್ಮ ತಂದೆಯನ್ನು, ಕ್ಲಾಸಲ್ಲಿ ಗುಲ್ಲಾಗದಂತೆ ನೋಡಲು ಕಳುಹಿಸಿದರೆ ಅವರು ಅಲ್ಲಿ-ಹೇಳತೊಡಗಿದುದು ಗಣಿತವನ್ನು. ಆಗ ಅವರು ಗಣಿತವೆಂಬುದು ಜಿಡುಕಿನ ಡೊಂಬರಾಟವಲ್ಲವೆಂದು ತೋರಿಸಿದರು. ಗಣಿತ ಪಾಠವನ್ನು ಸರಳವಾಗಿಯೂ ಮಾಡಿ ತೋರಿಸಿ, ಅನೇಕರ ಆಸಕ್ತಿಯನ್ನು ಆ ವಿಷಯದಲ್ಲಿ ಹೆಚ್ಚಿಸಿದರು. ಈ ಸುದ್ದಿಯು ಪ್ರಿನ್ಸಿಪಾಲರ ಕಿವಿಗೂ ಮುಟ್ಟಿತು. ಪ್ರಿನ್ಸಿಪಾಲರು ಇವರ ಗಣಿತಪಾಠಗಳನ್ನು ಕದ್ದು ನೋಡಿದರು. ಅದನ್ನು ಮೆಚ್ಚಿದರು. ಅನಂತರ ಟ್ರಿಗ್ನೊಮೆಟರಿ ಪಾಠವನ್ನು ಹೇಳಲು ಅವರನ್ನು ನಿಯೋಜಿಸಿದರು. ಆದರೆ ಗ್ರಾಜ್ಯುಯಟ್ ಆಗದವನಿಂದ ಎಫ್. ಎ. ಗೆ ಪಾಠ ಹೇಳಿಸುವ ಅಂಥ ಕ್ರಮ ಬಹುದಿನ ಸಾಗಲಾರದಾಯಿತು. ಹಾಗಾಗಿ ಪ್ರಿನ್ಸಿಪಾಲರು ಅದನ್ನು ತಪ್ಪಿಸಲೇಬೇಕಾಯಿತು.

ಕಾಲೇಜಿನ ಅನೇಕ ಸಾಹಿತಿಕ, ಮಾನಸಿಕ ಚಟುವಟಿಕೆಗಳಲ್ಲಿ ನಮ್ಮ ತಂದೆಯವರು ಆಸಕ್ತಿವಹಿಸಿದವರು. ಚರ್ಚಾಕೂಟಗಳು, ಪ್ರವಾಸಗಳು, ಉಪನ್ಯಾಸಗಳು ಎಲ್ಲವೂ ಇದ್ದವು. ಅವುಗಳಲ್ಲಿ ನಮ್ಮ ತಂದೆಯವರು ಭಾಗವಹಿಸಿದುದನ್ನು ನೋಡಲು ಇದಿರುಕಾದವರೂ ಬಹಳ. ಇಂಗ್ಲಿಷು ಕನ್ನಡ ನಾಟಕ ಪ್ರಯೋಗಗಳಲ್ಲೂ ಅವರಿಗೆ ಅತಿಶಯ ಪ್ರೀತಿ. ಅವರಂತೆ ನಾಟ್ಯವಿಲಾಸಿಗಳ ಬಳಗವೂ ಊರಲ್ಲಿತ್ತು; ನಾಟಕ ಬರಿಮು ಆಡುವ ಉತ್ಸಾಹಿಗಳೂ ಮಂಗಳೂರಲ್ಲಿದ್ದರು. ನಮ್ಮ ತಂದೆಗೆ ನಾಟಕಾಭಿರುಚಿಯಿದ್ದಂತೆ ಅಭಿನಯಿಸುವ ಹುಚ್ಚೂ ಇತ್ತು. ಅವರನ್ನು ನಟರಾಗಿ ಕಂಡ ನೆನಪು ಹಲವರಿಗಿದೆ. ತನ್ನ ಪಾತ್ರದಯೋಗ್ಯತೆಯನ್ನರಿತು ಅಭಿನಯಿಸಬಲ್ಲ ಚಾತುರ್ಯ ಅವರಿಗಿತ್ತು. ಚಂದ್ರಹಾಸ ನಾಟಕದಲ್ಲಿ ದುಷ್ಟಬುದ್ಧಿಯ ಪಾತ್ರವನ್ನು ಅವರು ನಟಿಸಿದ ಸವಿನೆನಪು ಅವರ ಗೆಳೆಯರು ಅನೇಕರಿಗಿದೆ.

ಅವರಿಗೆ ಪರಿಚಿತರಾದ ಅನೇಕ ಬಂಧುಗಳೂ ಮಿತ್ರರೂ ಕನ್ನಡ ಸಾಹಿತ್ಯದಿಂದ ಪ್ರವಚನ ನಡೆಸಲು ಅವರನ್ನು ಕೇಳುತ್ತಿದ್ದರು. ಕಥೆ ಹೇಳುವುದರಲ್ಲಿ ಅವರು ಜಾಣರು. ಎಳೆತನದಲ್ಲಿ ಪುರಾಣ ಕಥೆಗಳು ಅವರನ್ನು ಆಕರ್ಷಿಸಿದ್ದರೂ, ಆ ಮೇರೆಯನ್ನು ಮುರಿದು, ಅವರು ದೇಶವಿದೇಶಗಳ ಕಥೆಗಳನ್ನು ತಿಳಿದುಕೊಂಡರು. ಇಂಗ್ಲಿಷ್ ಕಾದಂಬರಿಗಳೂ, ಕಾನಂಡೈಲ ಮೊದಲಾದವರ ಪತ್ತೇದಾರಿ ಕಥೆಗಳು ಅವರ ಮನಸೆಳೆದವು. ಹೌಂಡ್ ಆಫ್ ಬಾಸ್ಕರ್‌ವಿಲೆ – ಯಂತಹ ಕಥೆಗಳನ್ನೂ ಹೇಳುತ್ತ ಶ್ರೋತಾರರನ್ನು ಬೆರಗುಗೊಳಿಸುವುದೊಂದು ಅವರಿಗೆ ಪ್ರಿಯವಾದ ಕೆಲಸವಾಗಿತ್ತು.

ಅವರಿಗೆ ಮಂಗಳೂರಿನಲ್ಲಿ ಉದ್ಯೋಗ ದೊರಕಿದುದರಿಂದ ಬಂಟವಾಳದ ಮನೆಯನ್ನು ಬಿಡುವಂತಾಯಿತು. ಹಿರಿಯಣ್ಣ ಮುಂಬಯಿ ಆಧಿಪತ್ಯದಲ್ಲಿ ನೌಕರಿಗೆ ಸೇರಿದ್ದ. ಸೋದರಿಗೆ ಮದುವೆಯಾಯಿತು. ಉಳಿದ ತಮ್ಮಂದಿರು ಮಂಗಳೂರಿನಲ್ಲಿಯೇ ಹೆಚ್ಚಿನ ಓದಿಗಾಗಿ ಬಂದು ಸೇರಿಕೊಂಡರು. ಅದರಿಂದ ಬಿಡಾರ ಮಂಗಳೂರಿಗೆ ಸಾಗಿತು; ಗ್ರಾಮ ಜೀವನದ ಸಂಬಂಧ ಕಡಿಯಿತು. ಬಂಟವಾಳದಲ್ಲಿನ ಮನೆಯ ನೆನಹಲ್ಲದೆ ಬೇರಾವ ಸಂಬಂಧ ಉಳಿಯಲಿಲ್ಲ. ಹೀಗಾಗಿ ೧೯೦೦ ಸುಮಾರಿಗೆ ಬಂಟವಾಳವನ್ನು ಬಿಟ್ಟರು. ಅವರ ತಾಯಿ ಹಿರಿಯ ಮಗನೊಂದಿಗೆ ಹೋಗಿ ಜೀವಿಸತೊಡಗಿದರು. ಮಂಗಳೂರಲ್ಲಿ ನಮ್ಮ ತಂದೆ ಈ ರೀತಿಯಲ್ಲಿ ಸ್ಥಾಪನೆಯಾಗುವಾಗ, ಮದುವೆಯಾಗಿ ನಮ್ಮ ಹಿರಿಯಕ್ಕ ಅಂಬಾ ಹುಟ್ಟಿದಳು. ಹೆಂಡತಿ, ಮಗ, ತಮ್ಮಂದಿರೊಡಗೂಡಿದ ಸಂಸಾರವನ್ನು ಐವತ್ತು ತಿಂಗಳಿಗೆ ಇಪ್ಪತ್ತು ರೂಪಾಯಿಗಳ ವೇತನದಿಂದ ಸಾಗಿಸುವಂತಾಯಿತು.

ಅಲ್ಲಿಂದ ನಮ್ಮ ತಂದೆಯವರ ದೃಷ್ಟಿಪಥವು ದೃಢವಾದ ಸಾವಧಾನದ ಹಾದಿಯನ್ನನುಸರಿಸಿತು. ಎಳೆತನದಲ್ಲಿ ಅವರು ಸಮಾಜದೊಡನೆ ಬಹು ಚೆನ್ನಾಗಿ ಬೆರೆತಿದ್ದರಾದರೂ, ಮುಂದಿನ ದಿನಗಳಲ್ಲಿ ಅಂತಹ ಆವರಣ ಹಿಡಿಸದೆಹೋಯಿತು. ಆಗಿನ ದಿನಗಳಲ್ಲಿ ನಮ್ಮ ಸಾಮಾಜಿಕ ಜೀವನದ ನಂಬಿಕೆ, ಶ್ರದ್ಧೆಗಳೇ ಕಲ್ಲೋಲಗೊಂಡಿದ್ದುವು. ಸಮುದ್ರಯಾನಮಾಡಿದವರ ಬಹಿಷ್ಕಾರ ಮೊದಲಾದುವುಗಳಿಗೆ ಪ್ರತಿಭಟಿಯಿತ್ತು. ಬಂಗಾಳದಲ್ಲಿ ತೊಡಗಿದ ಸಮಾಜ ಸುಧಾರಣೆಯ ಗಾಳಿಯು ನಮ್ಮಲ್ಲಿಗೂ ಬೀಸಿತು. ಅದು ಸಮಾಜವನ್ನು ಒಡೆದೂ ಒಡೆಯಿತು. ಹೊರಗೆ ಹೋದವರ ಸಂಖ್ಯೆ ಕಡಿಮೆಯಿರಬಹುದಾದರೂ, ಉಳಿದವರ ದೃಷ್ಟಿಕೋನ ವ್ಯತ್ಯಾಸ ಹೊಂದಲೇ ಬೇಕಾಯಿತು. ಅಲ್ಲದೆ ತಮ್ಮ ಸಮಾಜದಲ್ಲಿ–ಒಂದು ಬಗೆಯ ರಾಜಕೀಯವೂ ನಲಿದಾಡುತ್ತಿರುವುದನ್ನೂ ಕಂಡ ಅವರಿಗೆ,

ಮೊದಲಿನ ಉತ್ಸಾಹ ಸ್ವಸಮಾಜದ ವಿಚಾರದಲ್ಲಿ ಉಳಿಯಲಿಲ್ಲ. ಅವರು ಎಳೆತನದಲ್ಲಿ ಕಂಡ-ಪ್ರೀತಿ, ಮಮತೆ; ಭಕ್ತಿ, ದಯೆ, ದಾನಗಳು— ದೇವಾಲಯ ಉತ್ಸವಗಳ ವ್ಯವಸ್ಥೆಯಲ್ಲಿ ಅವರು ಮುಂದೆ ಕಾಣದಾದರು. ಅವರ ದೃಷ್ಟಿಮಾರ್ಗವೇ ಚಂಚಲಿಸುವಂತಾಯಿತು. ಆದರೆ ತಮ್ಮ ಹಿರಿಯರಿಂದ ಗಳಿಸಿದ ಸ್ಫೂರ್ತಿಯು, ಅವರ ಮುಂದಿನ ಜೀವನದ ತತ್ವಜ್ಞಾನವನ್ನು ರೂಪಿಸಲು ಸಹಕಾರಿಯಾಯಿತು. ಹಳೆಯ ಸಂಪ್ರದಾಯ ಬಿಡುವ, ಎದುರಿಸುವ ಶಕ್ತಿ ಅವರಿಗಿದ್ದಿಲ್ಲವಾದರೂ, ಆಗಿನ ಸಾಮಾಜಿಕ ನಡವಳಿಕೆಯನ್ನು ಒಪ್ಪುವ ಮನಸ್ಸೂ ಅವರಿಗೆ ಬರಲಿಲ್ಲ. ಹಳೆಯ ಜನಗಳ ಸಂಕುಚಿತ ದೃಷ್ಟಿ ಒಂದು ಕಡೆ; ಹೊಸಬರ ಆಳವಿಲ್ಲದ, ಮೇಲೆ ತೇಲುವ ಹೊಸತನದ ಸುಧಾರಣೆ ಇನ್ನೊಂದು ಕಡೆ. ಇವೆರಡರೊಡನೆಯೂ ಭಾಗವಹಿಸಲಾರದ ಅವರು ಇಂತಹ ಸಾಮಾಜಿಕ ವಿಚಾರಗಳಲ್ಲಿ ತಟಸ್ಥರಾಗಿ ದೂರವೇ ನಿಂತುಬಿಟ್ಟರು. ಸಂಪ್ರದಾಯ, ಧರ್ಮಗಳ ಒಣ ಚರ್ಚೆಗಳು ಕಹಿಹುಟ್ಟಿಸುವ ವ್ಯರ್ಥಾಲಾಪಗಳೆಂದು ಅವರಿಗನಿಸಿರಬೇಕು. ಇವುಗಳಿಗಿಂತ ಹೆಚ್ಚಾಗಿ ಅವರ ಗಮನ— ಸ್ವತಂತ್ರ ಜೀವನಕ್ಕಾಗಿಯೂ, ತಮ್ಮ ಆಸೆ ಅಭಿರುಚಿಗಳ ಬೆಳವಣಿಗೆಗಾಗಿಯೂ ಸಾಗಬೇಕಿತ್ತು. ಹಾಗಾಗಿ ಅವರು ಏಕಾಕಿಯಾಗಿಯೇ ತನ್ನ ಪಾಲಿನ ಜಗತ್ತನ್ನಿದಿರಿಸಿ, ತನಗೆ ಒಗ್ಗುವಂತೆ ಮಾಡಲು ಪ್ರಯತ್ನಿಸಿದರು.

ಅವರ ಸ್ವಂತ ವಿಚಾರ ಹೇಗೇ ಇರಲಿ, ಅದರಿಂದ ಕಷ್ಟಗಳ ಕಾಡನ್ನು ದಾಟಿದಂತಾಗಲಿಲ್ಲ. ದಾಟಬೇಕಾದ ತಡೆಗಳು ಹಲವು. ಮಂಗಳೂರಿಗೇನೆ ಅವರು ಹೊಸಬರು. ಆಗಲೇ ಒಂದು ಆರ್ಥಿಕ ವಿಪತ್ತೂ ಅವರನ್ನು ಇದಿರಿಸಿತು. ತಮ್ಮಂದಿರ ಭಾರ ಹೊರಬೇಕಾಗಿದ್ದ ಆ ದಿನಗಳಲ್ಲಿ-ಹಿರಿಯರ ಸಾಲ ತೀರಿಸುವ ಒತ್ತಾಯ ಬಂದಿತು. ಅದಕ್ಕಾಗಿ ರಾಮಪ್ಪಯ್ಯನವರ ಚಿಕ್ಕಪ್ಪ ನೀಡಿದ ಸಾಲವನ್ನು ಸಲ್ಲಿಸಲೇಬೇಕೆಂಬ ವಿವಾದ ಬಂದಿತು. ಅಸಲು ಹಣಕ್ಕಿಂತ ಇಮ್ಮಡಿಯಾಗುವಷ್ಟು ಸಾಲ, ಬಡ್ಡಿಗಳನ್ನು ಕೂಡಿಸಿದ ಪತ್ರಕ್ಕೆ ತಂದೆಯವರು ಸಹಿ ಹಾಕುವ ಒತ್ತಾಯ ಬಂದಿತು. ಇದ್ದುದೆಲ್ಲ ಮೊದಲೇ ಹೋಗಿತ್ತು; ಈ ಹೊಸ ಹೊರೆಗೆ ಸಹಿ ಮಾಡಲು ಅವರು ಹೆದರಿ ಹಿಂತೆಗೆದರು. ಆದರೆ ಅವರ ಇದಿರಾಳಿಗಳ ಸಾಮರ್ಥ್ಯಕ್ಕೆ ಬೆದರಲೇ ಬೇಕಾಗಿತ್ತು. ಅಂಥ ವೇಳೆಯಲ್ಲಿ-ರಾಮಪ್ಪಯ್ಯನವರು ಕೊಂಡ ಅಸ್ತಿಯನ್ನೆಲ್ಲ ಸ್ವಾಧೀನಪಡಿಸಿಕೊಳ್ಳುವೆವೆಂಬ ಬೆದರಿಕೆಯನ್ನೂ ಹಾಕಿದರು. ಆಗಿನ ವೇಳೆ, ಮಂಗಳೂರಿನ ಸಾಮಾಜಿಕ ಮಹಾನುಭಾವರು ತಂದೆಗೆ ಇದಿರಾಗಿ ನಿಂತರು. ಅವರ ಮಾತಿಗೇನೆ ಬೆಲೆಯಿದ್ದ ಕಾಲ. ಅಂಥ ವೇಳೆಯಲ್ಲಿ ಬೇರೆ ದಾರಿಕಾಣದೆ, ಊರಿನಲ್ಲಿ ಹೆಸರಾದ ವಕೀಲರಾಗಿದ್ದ ಅಮ್ಮೆಂಬಳ ಸುಬ್ಬಾಯ ಪೈಗಳಲ್ಲಿಗೆ ಧಾವಿಸಿ —ಅವರ ಅಭಿಪ್ರಾಯ ಕೇಳಿದರು. ಅವರು ಹೆಸರಾದವರು, ತುಂಬ ಸಜ್ಜನರು, ಮರ್ಯಾದಸ್ಥರೆಂದೆನಿಸಿದವರು. ಅವರು ತಂದೆಯಿಂದ ಆ ಯಾವತ್ತು ವ್ಯವಹಾರದ ಮಾಹಿತಿಯನ್ನು ಕೇಳಿಕೊಂಡು, ಹೇಳಿದ ಮಾತೆಂದರೆ-"ತಮ್ಮ, ಕಾಯಿದೆಯಿಂದ ಆ ಭೂಮಿ ನಿನ್ನದು; ಯಾರೂ ಕಸಿಯಲಾರರು. ಅದು ನಿಜವಾದರೆ— ಅದಕ್ಕಾಗಿ ಕೊಟ್ಟ ನಿಮ್ಮ ಚಿಕ್ಕಪ್ಪನ ಸಾಲದ ಋಣವೂ ನಿಜವಾದದ್ದೇ. ಅದನ್ನು ನಿನಗೆ ತೀರಿಸಲು ಸಾಧ್ಯವಿಲ್ಲವಾದಲ್ಲಿ, ಆ ಆಸ್ತಿಯನ್ನು ಬಿಟ್ಟುಕೊಡುವುದೂ ನಿನ್ನ ಕರ್ತವ್ಯ" ಎಂದರು. ತಂದೆ ಮನೆಗೆ ಮರಳಿ ಬಂದು ಅವರು ಹೇಳಿದಂತೆ ಮಾಡಿದರು. ಅನಂತರ-ಅವರ ಪಾಲಿಗೆ ಉಳಿದುದು ಹಿರಿಯರ ಮಣ್ಣಲ್ಲ; ತಿಂಗಳಿಗೆ ಸರಕಾರ ಕೊಡುತ್ತಿದ್ದ ೨೦ರೂಪಾಯಿಗಳ ಸಂಬಳ ಮಾತ್ರ.

ಹೀಗೆ ಆಸ್ತಿ ಕಳೆದುಕೊಂಡು ಕಂಗಾಲ ಸ್ಥಿತಿಯಲ್ಲಿದ್ದರೂ, ತಮ್ಮ ಜನಗಳ ಮುಂದೆ ಯಾವುದಕ್ಕೂ "ದೇಹಿ" ಯೆಂದು ಕೈಯೊಡ್ಡಿದವರಲ್ಲ. ಸಾಲಮಾಡುವುದೂ, ಹಂಗಿಗೆ ಬೀಳುವುದೂ ಎಂದರೆ ಅವರಿಗೆ ಭಯ. ಅಂತಹ ವೇಳೆಯಲ್ಲಿ ತನ್ನ ಬೆಳೆಯುವ ಸಂಸಾರವನ್ನು ನಿರ್ವಹಿಸಿಯೇನೆ- ಎಂದು ಅವರಿಗೆ ಕಂಡಿರಲೂ ಬಹುದು. ಆದರೆ ಎರಡು ಘಟನೆಗಳು ಕವಿದ ಮುಗಿಲನ್ನು ಚೆದರಿಸಿದುವು. ಉದ್ಯಾವರ ಕೃಷ್ಣಯ್ಯನವರು, ಹಿರಿಯ ಕನ್ನಡ ಪಂಡಿತರು, ನಿವೃತ್ತರಾದುದರಿಂದ, ತಂದೆಗೆ ಆ ಸ್ಥಾನ ದೊರಿತು ಹತ್ತು ರೂಪಾಯಿಗಳ ಬಡತಿಯೂ ದೊರೆಯಿತು. ಅದೇ ವೇಳೆಗೆ ಬಾಸೆಲ್ ಮಿಷನ್ ಸಂಸ್ಥೆಯ ಜರ್ಮನ್ ವ್ಯವಸ್ಥಾಪಕರಿಗೆ ಕನ್ನಡ-ಇಂಗ್ಲಿಷುಗಳ ಪರಿಚಯವಿದ್ದ ಪಂಡಿತರ ನೆರವು ಬೇಕಾಗಿತ್ತು. ಅವರಿಗೆ ಕನ್ನಡ ಪಾಠ ಹೇಳುವುದರಿಂದಲೂ ತುಸು ಹಣ ಸಂಪಾದನೆಯಾಗತೊಡಗಿತು. ಅವರಿಗೆ — ನಮ್ಮ ಸ್ವಶಕ್ತಿಯಿಂದಲೂ, ತಂದೆಯವರ ನೆರವಿನಿಂದಲೂ ಕನ್ನಡ ಭಾಷೆ, ಸಂಸ್ಕೃತಿಗಳ ಪರಿಜ್ಞಾನವಾದಂತೆ, ಇವರಿಗೆ ಅವರಿಂದ— ನವೀನ ಶಿಕ್ಷಣ ಮಾರ್ಗಗಳ, ಕಿಂಡರ್‌ಗಾರ್ಟನ್‌ನಂಥ ಶಿಕ್ಷಣ ದಾರಿಗಳ ಪರಿಚಯವೂ ಆಯಿತು. ಬಾಸೆಲ್ ಮಿಷನಿನವರು ವಿದ್ಯಾಪ್ರಚಾರದ ಕೆಲಸವನ್ನು ತೊಡಗಿದಾಗ, ತಂದೆಯವರಿಗೆ ಆಧುನಿಕ ಶಿಕ್ಷಣ ಮಾರ್ಗವನ್ನು ಕನ್ನಡದ ಮೂಲಕ ಪಸರಿಸುವುದಕ್ಕೂ ಅವಕಾಶ ದೊರೆಯಿತು. ಆಗಿನ ಜರ್ಮನ ಮಿಷನರಿಗಳು—ನಮ್ಮ ಜಿಲ್ಲೆಯಲ್ಲಿ ಕನ್ನಡಕ್ಕೂ, ಉದ್ಯೋಗಾಭಿವೃದ್ಧಿಗೂ ಸಲ್ಲಿಸಿದ ಸೇವೆಯನ್ನು ಎಲ್ಲರೂ ಬಲ್ಲರು. ಅವರು ನಮ್ಮ ಶಾಲೆಗಳಿಗಾಗಿ— ಜರ್ಮನಿಯಲ್ಲಿ ಮುದ್ರಿಸಿ ತರಿಸಿದ ಶಿಕ್ಷಣ ಸಾಧನಗಳು, ಅಂದಿಗೆ ಭಾರತದಲ್ಲೇ ಮಾದರಿಯಾಗಿದ್ದುವು. ಅವರು ಮುದ್ರಣ ವಿಚಾರದಲ್ಲಿ ತೋರಿಸಿಕೊಟ್ಟಂಥ ನಾಜೂಕನ್ನು, ಈ ಶತಮಾನದಲ್ಲೂ ನಾವು ಮೀರಿಸದವರಾಗಿ

ದ್ದೇವೆ. ಇಂದು ನಮ್ಮ ಜಿಲ್ಲೆಯ ಅನೇಕ ವಿಧದ ಅಭಿವೃದ್ಧಿಗಳಿಗೆ ಈ ಜರ್ಮನ್ ಮಿಷನೆರಿಗಳೇ ಕಾರಣರೆಂಬುದನ್ನು ನಮ್ಮಲ್ಲಿ ಹಲವರು ಮರೆತಿರಲೂ ಬಹುದು.

ನಮ್ಮ ತಂದೆಯವರು ಕನ್ನಡ ಪಂಡಿತರ ಕೆಲಸ ಬಹು ದಿನ ಮಾಡಲಿಲ್ಲ; ಬದಲು ತಮ್ಮ ಅಧ್ಯಾಪಕ ವೃತ್ತಿಗೆ ತಕ್ಕ ಶಿಕ್ಷಣ ದೊರಕಿಸಿಕೊಳ್ಳಲು ಮುಂದಾದರು. ತಿರುಗಿ ಓದುವುದು ಎಂದರೆ ಅವರ ಪಾಲಿಗೆ ಇನ್ನೊಂದು ಆರ್ಥಿಕ ವಿಪತ್ತೇ ಆಗಿತ್ತು. ಉದ್ಯೋಗಕ್ಕೆ ತಕ್ಕ ಶಿಕ್ಷಣ ಎಂದಿಗೆ ಕೊನೆಗೊಂಡೀತೆಂದೂ ಹೇಳಲಾರದ ವಿಷಯ. ಅವರಿಗೆ ತಮ್ಮ ಮಾನಸಿಕ ಅಭಿರುಚಿಗಳನ್ನು ಬೆಳೆಯಿಸಲು ಆತುರ. ಅದಕ್ಕೆ ಸಲಬೇಕಾದ ವೇಳೆಯನ್ನು ಇತರ ಸಂಗತಿಗಳಿಗಾಗಿ ಕಳೆಯಲು ಬೇಸರವೇ ಸರಿ. ತನ್ನ ನಾಡಿಗಾಗಿ, ನಾಡ ನುಡಿಗಾಗಿ ದುಡಿಯಲು ಸಾಕಷ್ಟು ಬಡತನವನ್ನು ಸಹಿಸಿದ್ದಾಗಿದೆ. ಆ ಗುರಿ ಮಾತ್ರ ದಿನ ಸರಿದಂತೆ ದೂರವಾಗುತ್ತಿತ್ತು. ನೌಕರಿ ದೊರಿತೊಡನೆಯೇ ಆಸ್ತಿ ಕಳೆದುಹೋದುದು, ಹಾರುವ ಹಕ್ಕಿಯ ರೆಕ್ಕೆ ಮುರಿದಂತಾಗಿತ್ತು. ಇದನ್ನೆಲ್ಲಾ ಸುಧಾರಿಸಿಕೊಳ್ಳೋಣ ಎನ್ನುವಾಗ ಎಲ್. ಟಿ. ಪರೀಕ್ಷೆಗೆ ಓದುವ ಪಾಡು, ಅದಕ್ಕಾಗಿ ಮದ್ರಾಸಿಗೆ ಹೋಗಲೇಬೇಕಾದ ಪ್ರಸಂಗ ಒದಗಿತು. ಆದರೆ ಇನ್ನು ಹಿಂದಿರುಗಲು ಮಾರ್ಗವಿಲ್ಲ; ಬರುವ ಅಡಚಣೆಗಳನ್ನು ಇದಿರಿಸಲೇಬೇಕಾಯಿತು. ಬಂಟವಾಳದ ಮನೆ ಉಳಿಯಲಿಲ್ಲ. ಅಕ್ಕ ದೂರದ ಊರನ್ನು ಸೇರಿಯಾಗಿತ್ತು. ಈಗ ಮಂಗಳೂರಿನ ಮನೆಯನ್ನು ಏನುಮಾಡಲಿ--ಎಂಬ ಚಿಂತೆ ತೊಡಗಿತು. ಹೀಗಾಗಿ ಸಪತ್ನೀಕರಾಗಿ ಮದ್ರಾಸಿಗೇನೆ ಹೋದರು. ಇಬ್ಬರು ತಮ್ಮಂದಿರು (ಒಬ್ಬನಿಗಾಗ ಲಗ್ನವಾಗಿತ್ತು) ಮಂಗಳೂರಲ್ಲಿ ಉಳಿದುಕೊಂಡರು.

1904ರಲ್ಲಿ ಅವರು ಮದ್ರಾಸಿಗೆ ಹೊರಟ ಯಾತ್ರೆ ವಿಚಿತ್ರ ಚಿತ್ರವಾಗಿತ್ತು. ಹೆಂಡತಿ, ಇಬ್ಬರು ಮಕ್ಕಳು (ಐದು ಮತ್ತು ಎರಡು ವರ್ಷದವರು) ಸಹಿತರಾಗಿ ಎತ್ತಿನ ಬಂಡಿಯಲ್ಲಿ ಕುಳಿತು ಆ ಪಯಣ ತೊಡಗಿತು. ಹೆಂಡತಿ ಗರ್ಭಿಣಿಯೂ ಆಗಿದ್ದಳು. ರೈಲನ್ನು ಹಿಡಿಯುವುದಕ್ಕೆ ಕಣ್ಣಾನೂರನ್ನು ಸೇರಬೇಕು. ಅಲ್ಲಿಯ ತನಕ ಎತ್ತಿನ ಬಂಡಿಯಲ್ಲೂ, ದೋಣಿಯಲ್ಲೂ ಕುಳಿತು ಕೆಲವು ದಿನಗಳ ತನಕ ಪಯಣ ಸಾಗಬೇಕಿತ್ತು. ಮಳೆಗಾಲದ ಜಡಿಮಳೆ, ಬಿರುಗಾಳಿಗಳು ಬೀಸುತ್ತಿದ್ದ ಜೂನ್ ತಿಂಗಳಲ್ಲೇ ಆ ಪಯಣ. ಅದೇ ಬಗೆಯ ಬಿರುಗಾಳಿ ತಂದೆಯವರ ಮಾನಸಿಕ ರಾಜ್ಯದೊಳಗೂ ಉಂಟಾಗಿರಬೇಕು. ತಮ್ಮ ಅಭಿಲಾಷೆಗೂ ವಾಸ್ತವಿಕ ಜಗತ್ತಿನ ಅನುಭವಗಳಿಗೂ ವಿಚಿತ್ರ ಸಂಘರ್ಷಣೆಯಾಗಿರಬೇಕು. ಅಂಥ ಚಿಂತೆ, ಆತುರ, ಸೆಳೆತಗಳ ಫಲ,ತೀರ್ಮಾನ ಹೇಗೆ ಆಗಿದ್ದಿರಲಿ,ಈ ಮುಗಿಯದ ಜೀವನಯಾತ್ರೆಯಲ್ಲಿ ತಾನು ಏಕಾಕಿ ದಾರಿಗನೆಂಬ ಅಸಹಾಯತೆ ಅವರಲ್ಲಿ ನಿಜಕ್ಕೂ ಕಾಣಿಸಿರಬೇಕು.

ಮದ್ರಾಸನ್ನು ಸೇರಿದ ಅವರು, ತಮ್ಮ ಜಿಲ್ಲೆಯ ಇತರ ಉಪಾಧ್ಯಾಯ ವಿದ್ಯಾರ್ಥಿಗಳೊಡನೆ-ಊಟ, ವಸತಿಗಳಿಗೆ ನಿಂತರು. ನಮ್ಮ ತಾಯಿ ತಮ್ಮ ಬಂಧುಗಳೊಬ್ಬರ ಮನೆಯನ್ನು ಸೇರಿಕೊಂಡಳು. ಅದೂ ಮದ್ರಾಸಿನಲ್ಲಿ ಎರಡೆರಡು ಮನೆಯಾದಂತೆಯೆ. ಅವರು ಓದಿಗಾಗಿ ಅಲ್ಲಿ ಕಳೆದ ಒಂಬತ್ತು ತಿಂಗಳ ಕಾಲ, ಅದಕ್ಕಾಗಿ ನಂತರ ಹಂಗಿಗೆ ಬೀಳಬೇಕಾದ ಪ್ರಸಂಗಗಳನ್ನು ನೆನೆದಲ್ಲಿ–ಆ ಅಲ್ಪಾವಧಿಯು ಸುದೀರ್ಘವಾಗಿಯೇ ಗೋಚರಿಸಿರಬೇಕು. ಮದ್ರಾಸಿನಲ್ಲಿರುವಾಗಲೇ ಅವರ ಮೂರನೆಯ ಮಗು ಜನಿಸಿತು. ಹಾಗೂ ಹೀಗೂ ಎಲ್. ಟಿ. ಅಭ್ಯಾಸ ಮುಗಿಸಿ 1905ರಲ್ಲಿ ಅವರು ಮಂಗಳೂರಿಗೆ ಮರಳಿದರು. ದಣಿದ ದಾರಿಗ ಸ್ನಾನ ಮಾಡಿದಷ್ಟು ಮೈಮನಗಳು ಹಗುರವಾಗಿರಬೇಕು. ತಿರುಗಿ ಮಂಗಳೂರಿನಲ್ಲಿ ಬಿಡಾರ ಸ್ಥಾಪನೆಯಾಯಿತು.

ಅವರು ತಿರುಗಿ ಗವರ್ನಮೆಂಟ್ ಕಾಲೇಜಿನಲ್ಲಿ ತಮ್ಮ ಹಳೆಯ ಹುದ್ದೆಗೆ ಸೇರಿಕೊಂಡರು. ಅಷ್ಟರಲ್ಲಿ ಹೊಸತಾಗಿ ನೇಮಕವಾದ ಮಂಗಳೂರು ರೇಂಜಿನ ಸಬ್-ಅಸಿಸ್ಟಾಂಟ ಶಾಲಾ ಇನ್ಸ್‌ಪೆಕ್ಟರರಾಗಿ ನೇಮಕಗೊಂಡರು. ಈ ಹೊಸ ನೌಕರಿ ಕುಳಿತಲ್ಲಿ ಕುಳಿತಿರುವ ಚಾಕರಿಯಲ್ಲ; ಬದಲು ಮಲೇರಿಯ ಪೀಡಿತ ಮೂಲೆಮೂಲೆಗಳನ್ನು ಸಂಚರಿಸಲೇ ಬೇಕಾದ ನೌಕರಿ. ಅದರಿಂದ ಮಲೇರಿಯ ಬೇನೆಗೂ ಗುರಿಯಾದರು. ಆಗಾಗ ಅದು ಬರತೊಡಗಿ, ಅವರನ್ನು ಹಾಸಿಗೆ ಹಿಡಿಸಿತು. ಕ್ರಮೇಣ ಅದು ಕಡಿಮೆಯಾಯಿತು. ಪ್ರಾಯಶಃ ಅವರ ಶರೀರ ಅದಕ್ಕೆ ಪ್ರತಿರೋಧಕ ಶಕ್ತಿಯನ್ನು ಗಳಿಸಿರಬೇಕು. ಕೊನೆಗೆ ಜ್ವರ ಬರುವುದೇ ನಿಂತುಹೋಯಿತು. ನಮ್ಮ ತಂದೆಯನ್ನು ಹಾಸಿಗೆ ಹಿಡಿಸಿದ ಬೇನೆಯೆಂದರೆ ಇದೊಂದೇ; ಅದೂ ಬಹು ಸ್ವಲ್ಪ ಕಾಲ.

1906ರ ತನಕ ಅವರ ಜೀವನ ಶಾಂತವಾಗಿ ಕಳೆಯಿತು. ಆ ವರ್ಷದಲ್ಲಿ ಅವರ ಸೋದರ ರಾಘವೇಂದ್ರ ಎಂಬವರು ತೀರಿಕೊಂಡರು. ಈ ಮೊದಲೇ ಅವರ ತಮ್ಮ ಶಿವನು ತೀರಿಕೊಂಡಿದ್ದ. ಈಗ ಮಮತೆ ವಾತ್ಸಲ್ಯಗಳಿಗೀಡಾಗಿದ್ದ 'ಅಗದ' (ರಾಘವೇಂದ್ರ)ನೂ ತೀರಿಕೊಂಡುದರಿಂದ-- ತಂದೆಯ ಮನಸ್ಸಿಗೆ ಬಲವಾದ ಪೆಟ್ಟು ತಗಲಿದಂತಾಯಿತು. ಆತ ತುಂಬ ಚುರುಕಿನ ವಿದ್ಯಾರ್ಥಿಯಾಗಿದ್ದ. ಅಣ್ಣನ ಮಾನಸಿಕ ಚಟುವಟಿಕೆಗಳಿಂದಾಗಿ ಅವನ ಮಾನಸಿಕ ಬೆಳವಣಿಗೆಯೂ ಚುರುಕಿಂದ ಸಾಗಿತ್ತು. ಆದರೆ ಆತಗೆ ಒಂದು ದಿನ ಇದ್ದಕ್ಕಿದ್ದಂತೆ ಉದರ ಬೇನೆ ಕಾಣಿಸಿಕೊಂಡಿತು. ಅದೇನೆಂದು ನಿದಾನವಾಗುವ ಮುಂಚೆಯೇ ಆತ ಬಲಿಯೂ ಆಗಿ ಬಿಟ್ಟ. ಆ ಸಂಕಟ, ಆಕಸ್ಮಿಕ ಅನುಭವ ಕುಟುಂಬವನ್ನು ಅದುರಿಸಿತು.

ನಮ್ಮ ತಂದೆಗೆ ಈ ನಷ್ಟ ಅತಿ ಹೆಚ್ಚಿನದಾಗಿಯೂ ಅನಿಸಿತು.

ಎಳೆತನದಿಂದಲೂ ನಮ್ಮ ತಂದೆ ನೆರೆಕರೆಯುವರನ್ನು ಪ್ರೀತಿಸಿದವರು. ಆದರೆ ಅವರ ಅತಿ ಹೆಚ್ಚಿನ ಮೋಹ-ತಾಯಿ, ಇಬ್ಬರು ತಮ್ಮಂದಿರಲ್ಲಿ. ಮೊದಲಾಕೆ ಅವರ ಮಮತಾ ಶಕ್ತಿಗೇ ಪ್ರೇರಿತಳಾದ ವ್ಯಕ್ತಿ. ಉಳಿದಿಬ್ಬರು ಅವರ ನೆರಳಾಗಿ ಬಾಳಿದ, ಕಷ್ಟಸುಖಗಳಲ್ಲಿ ತೊಳಲಿದ ಸಹಚರರು. ಅವರ ಒಡತನದ ಬಾಳಿನಲ್ಲಿ ಜತೆಗೇನೆ ದುಡಿದು ಕಂಗಾಲಾದವರು. ಅವರಲ್ಲೊಬ್ಬ ತೀರಿದಾಗಲೇ-ಭ್ರಾತೃ ವಿಯೋಗ ದುಃಖವೆಂಥದೆಂಬ ಅರಿವಾಗಿತ್ತು. ಈಗ--ಇನ್ನೊಬ್ಬ ತೀರಿದುದು, ಫಲಕ್ಕೆ ಬಂದ ಬಾಳೆ ಮುರಿದುಬಿದ್ದಂತಾಯಿತು.

ನಮ್ಮ ತಂದೆಗೆ ಈ ಸೋದರನು ತಮ್ಮನಿಗೆ ತಮ್ಮ, ಸಾಕು ಮಗುವಿಗೆ ಸಾಕುಮಗು, ಶಿಷ್ಯನಿಗೆ ಶಿಷ್ಯ, ಗೆಳೆಯನಿಗೆ ಗೆಳೆಯನಾಗಿದ್ದ ಏಕಕಾಲದಲ್ಲಿ. ಅವರ ಆದರ್ಶವಾಗಿದ್ದ ಒಳ್ಳೆತನ, ವಿನಯ, ಪ್ರೀತಿ, ಬುದ್ಧಿಮತ್ತತೆ, ಪರಿಶ್ರಮಾದಿ ಗುಣಗಳನ್ನು ಕೂಡಿದವನಾಗಿದ್ದ ಆತ. ಅವರಿಬ್ಬರೂ ಒಬ್ಬ ವಿಚಿತ್ರ ಸ್ತ್ರೀಯನ್ನು ಒಟ್ಟಿಗೇ "ಅಮ್ಮ" ಎಂದು ಕರೆದವರು; ಒಬ್ಬ ಶ್ರದ್ಧಾಪರ ವ್ಯಕ್ತಿಯನ್ನು "ತಂದೆ" ಎಂದವರು; ಬಂಟವಾಳದ ಒಂದೇ ಆವರಣವನ್ನು ಉಸಿರಾಡಿದವರು. ಅವರಿಬ್ಬರೊಳಗಿದ್ದ ಹೊಂದಿಕೆಯೆಷ್ಟೆಂದರೆ- ಒಬ್ಬರ ಅಂಗಚೇಷ್ಟೆ ಇನ್ನೊಬ್ಬರಿಗೆ ಅರ್ಥವಾಗುತ್ತಿತ್ತು; ಒಬ್ಬರ ಹಾವದಿಂದ ಇನ್ನೊಬ್ಬಗೆ ಮನಸ್ಸಿನಲ್ಲಿ ಚಿತ್ರ ಕಟ್ಟುತ್ತಿತ್ತು; ಒಬ್ಬನ ನುಡಿಯಿಂದ ಇನ್ನೊಬ್ಬನಿಗೆ ಕತೆಯೇ ಚಿತ್ತರಿಸುವಂತಿತ್ತು. ಆ ತಮ್ಮ, ನಮ್ಮ ತಂದೆಗೆ ಒಂದು ಧ್ಯೇಯ ಸಾಧನೆಯಂತಿದ್ದ. "ಶಿಷ್ಯವೃತ್ತಿಗೆ" ದರ್ಶನ ಕೊಟ್ಟಂತಿದ್ದ. ಆತನ ಬೆಳವಣಿಗೆ, ಪಾಲನೆಗಳಲ್ಲಿ ಅವರು ವಹಿಸಿದ ಶ್ರಮ ಅಷ್ಟಿಷ್ಟಲ್ಲ. ತನಗಾದ ಸಂಕಟ, ತನ್ನ ಹಂಗಿನ ಬಾಳು ಎಂದೆಂದೂ ಅವನಿಗೆ ಬರಬಾರದೆಂದು ದುಡಿದವರು ಅವರು. ಆದರೆ, ಅವರ ಆಸೆ ಕೈಗೂಡುತ್ತ ಬಂದಾಗ, ಮುಂದಿನ ಸವಿಗನಸು ನಿಜವಾದೀತೆಂದು ಅನಿಸಿದಾಗ, ಆಗಲೇ ಆತ, ಆ ಸೋದರ ದೂರವಾದ.

ಹಾಗಿರುತ್ತ-ಆ ವೇಳೆಯಲ್ಲಿ ಅತಿ ಹೆಚ್ಚಿನ ನಿಸ್ಸಹಾಯತೆಯುಂಟಾಗಿರಬೇಕು. ಅವರ ಪಾಲಿನ ಜೀವನ ಎಂದೂ ಸುಗಮವಾಗಿರಲಿಲ್ಲ; ಆದರೆ ನಾಳಿನ ಭರವಸೆ, ಆಶಾವಾದಿತ್ವಗಳಿಂದ ಇಂದಿನ ಎಲ್ಲ ಸಂಕಟಗಳನ್ನೂ ಸಹಿಸಿಕೊಂಡಿದ್ದರು. ಅವರ ಬದುಕಿನಲ್ಲಿ ಅವರಿಗೊಂದು ಸಮಾಧಾನದ ಮಾತನ್ನೊ, ಪ್ರೋತ್ಸಾಹವನ್ನೊ ಕೊಟ್ಟವರು ಕಡಿಮೆ. ಅಂಥ ಕೆಲವರಲ್ಲಿ ಈ ತಮ್ಮನು ಒಬ್ಬನಾಗಿದ್ದ. ಅವನೀಗ ಅಗಲಿದುದೆಂಬುದು-ವಿಧಿಯು ಹುಣ್ಣಿಗೆ ಬರೆಯಿಟ್ಟಂತಾಯಿತು.

ನಮ್ಮ ತಂದೆ ಈ ದಾರುಣವ್ಯಥೆಯನ್ನು ಹೇಗೆ ಸಹಿಸಿದರೋ ಅವರಿಗೇ ಗೊತ್ತು. ಅಂತು ಸಹಿಸಿದರು. ಇದರಿಂದಾಗಿ ಅವರ ಜೀವನದಲ್ಲಿ ಮಾರ್ಪಾಟಾಯಿತೇ-ಅದೂ ತಿಳಿಯದ ಸಂಗತಿ. ದೈವದ ಕರುಣೆಯಲ್ಲಿ ಅವರಿಗಿದ್ದ ನಂಬಿಕೆ ಅದುರಿತೇ-ಅದೂ ನಮಗೆ ತಿಳಿಯದು. ಇದರಿಂದ ಮನಸ್ಸು ಕಹಿಗಟ್ಟಿ ಬದುಕೇ ಕ್ಷಣಭಂಗುರವೆನಿಸಿತೇ? ಇದರಿಂದ ವಿರಕ್ತಿ ಬಂದಿತೇ?. ....ಇದ್ದಿರಲಾರದು. ಏಕೆಂದರೆ, ತಮ್ಮ ತಂದೆಯವರ ಶೀಲ ಉಕ್ಕಿನದು; ಅವರ ತಾಳ್ಮೆಯ ಗುಣ ಬಹಳ; ಆಸ್ಪಂದನ ಶಕ್ತಿಯೂ ಬಹಳ. ದುಃಖದಿಂದ ಅವರಿಗೆ ನೋವಾಗದಿರಲಿಲ್ಲ; ದುಃಖ ಆಳವಾಗಿಯೂ ನಾಟುತ್ತಿತ್ತು. ಆದರೆ ಅದನ್ನೆಂದೂ ತೋರಿಸಿಕೊಂಡವರಲ್ಲ. ತೀರ, ತೀರ ಆಪ್ತರಾದ ಕೆಲವರಲ್ಲಷ್ಟೆ ಅವರು ತಮ್ಮ ನೋವನ್ನು ಹೇಳಿರಬಹುದು. ಆದರೂ ಮರುಕ, ದಯೆಯನ್ನು ಪರರಿಂದ ಬಯಸಿದವರಲ್ಲ. ತಮ್ಮನ ಸಾವು ಅವರನ್ನು ಅಮೂಲಾಗ್ರವಾಗಿ ಕಳವಳಕ್ಕೆ ಗುರಿಮಾಡಿರಬಹುದು; ಆದರೂ ಅದನ್ನು ತಾಳಿದರು; ತಾಳಿ ಬಾಳಿದರು.

ಅವರದೊಂದು ಹಾಡಿನ ನೆನಪು ನಮಗಾಗುತ್ತದೆ— "ಎಲ್ಲಿ ಹೋದನು ಅಮ್ಮ" ಎಂಬ ದುರಂತ, ಶೋಕಪೂರಿತ ಹಾಡದು. ಅದರಲ್ಲಿ ಕಾಣುವ ವಾತ್ಸಲ್ಯ, ಮಮತೆಗಳ ಚಿಲುಮೆ, ಅನುತಾಪ, ವ್ಯಥೆಗಳು ಈ ಘಟನೆಯಿಂದ ಕೆರಳಿದುವೇ ಎಂದು ನಾವಾಗಿ ಅವರನ್ನು ಕೇಳಿದವರಲ್ಲ. ಆ ಹಾಡಿಗೆ ಪ್ರೇರಣೆ ಹೆಮಾನ್ಸ್‌ನ ಕವನದಿಂದ ಬಂದಿರಬಹುದು. ಆದರೆ ಈ ಕನ್ನಡ ಹಾಡಿನಲ್ಲಿರುವ ಆವರಣ, ವ್ಯಥೆಯ ತೀವ್ರತೆ, ಹಿನ್ನೆಲೆಯ ಚೆಲುವು, ಹಿಂದಣ ದಿನದ ಸಾವಿನ ಭೀಕರ, ಗಭೀರ ಚಿತ್ರ ಸ್ವತಂತ್ರವಾದುವು. ಒಮ್ಮೆ ನಾವೇ ಯಾರೋ, ಹೆಮನ್ಸನ ಆ ಇಂಗ್ಲಿಷ್ ಹಾಡನ್ನು ಓದಿ ತಂದೆಯ ಬಳಿಗೋಡಿ "ಈ ಹಾಡನ್ನು ನೀನು ಅನುವಾದಿಸಿದ್ದೇ?" ಎಂದೂ ಕೇಳಿದ್ದೆವು. ಆಗ ತಂದೆ ಮೆಲುವಾಗಿ ನಕ್ಕರು; ಅನಂತರ "ಎಂಥ ಮಾತಿದು!" ಎಂದರು. ನಮಗೆ ಆಗ ಅದರ ಅರ್ಥವೇ ಆಗಲಿಲ್ಲ. ಅವರು ಇತರ ಕೆಲವು ಹಾಡುಗಳನ್ನು ಕನ್ನಡಿಸಿದ್ದರೆಂದು ತಿಳಿದಿದ್ದರಿಂದ, ನಮಗೆ ಈ ಮಾತಿನ ಅರ್ಥ ಹೊಳೆಯಲಿಲ್ಲ. ಆ ಸಂದರ್ಭದಲ್ಲಿ ಅವರಾದರೂ ಏನು ಹೇಳಬಹುದು? ಕವಿಯಾದವನು ತಾನು ಇನ್ನೊಬ್ಬನಾಗಿ, ಪರರ ದುಃಖದ ಅನುಕಂಪವನ್ನು ಆತ್ಮೀಯ ರೀತಿಯಿಂದ ತೋರಬೇಕಾದವ. ಇಂಗ್ಲಿಷ್ ಕವನವೊಂದರಿಂದ ಈ ಭಾವನೆಯು ಬಂದಿರಬಹುದೆಂದಾದ ಮಾತ್ರಕ್ಕೆ ಅದು ಅನುವಾದವಾಗಿರಬೇಕಿಲ್ಲ. ನಮ್ಮ ಅಜ್ಜ, ತಂದೆ, ಅವರ ತಮ್ಮಂದಿರ ಬಾಳನ್ನು ಬಿಗಿದ ಮಮತೆ ಪ್ರೀತಿಗಳ ಆಳ ಬಲ್ಲವರು, ತಮ್ಮನ ಸಾವಿನ ನೋವಿನ ಆಘಾತ ಬಲ್ಲವರು—ತುಂಬಿದ ದುಃಖದ ಚಿಲುಮೆ, ಕೆಲವುಕಾಲ ಮರೆಯಾಗಿದ್ದರೂ ಈ ಕವನರೂಪದಿಂದ ಹರಿದು ಬಂದುದರಲ್ಲಿ ಸೋಜಿಗವನ್ನು ಕಾಣಬೇಕಿಲ್ಲ. ಅನಂತರ ಎಷ್ಟೋ

ಕಾಲದ ಬಳಿಕ– ಈ ಕವನದ ವಿಚಾರದಲ್ಲಿ ಕೆಲವರು ಕೇಳಿಯೂ ಕೇಳಿದರಂತೆ. ಆಗ ಅವರು, ಆ ಕವನಕ್ಕೆ ಮೂಲ ತಮ್ಮ ಪ್ರೀತಿಯ ತಮ್ಮನ ಅಗಲಿಕೆಯೆಂಬುದನ್ನು ತಿಳಿಸಿದರಂತೆ.

ನಮ್ಮ ತಂದೆಯವರು ಟ್ರೈನಿಂಗ್ ಕಾಲೇಜಿನಲ್ಲಿ ಕಳೆದ ಅಲ್ಪಾವಧಿಯನ್ನು ಬಿಟ್ಟರೆ—ಅವರ ಯೌವನದ ಪ್ರಥಮ ಕಾಂಡ, ಸುಮಾರು ಏಳು ವರ್ಷಗಳ ಅವಧಿ, ಕಳೆದುದು ಮಂಗಳೂರಿನಲ್ಲಿಯೆ. ಆಗಾಗಲೇ ಅವರು ತನ್ನ ಆವರಣದಲ್ಲಿ ಪರಿಚಿತರೂ ಜನಪ್ರಿಯರೂ ಆಗಿ ಬಂದಿದ್ದರು. ಆಗಿನ ದಿನಗಳಲ್ಲಿ ಆಧುನಿಕ ಸಂಸ್ಕೃತಿಗೆ ಒಲಿದ, ಆದರೂ ಹಳೆಯದನ್ನು ಮರೆಯಲಾರದ ಮನೆತನಗಳು ಹಲವಿದ್ದುವು. ಅಂಥವುಗಳಲ್ಲಿ ಕಲೆ ಮೊದಲಾದುವುಗಳಿಗೆ ಪ್ರೋತ್ಸಾಹ ಕೊಡುತ್ತಿದ್ದ ಬಳಗ ಕೆಲವಿದ್ದುವು; ಅವುಗಳಲ್ಲಿ ಹೇಳಬಹುದಾದುದು ಸೆಲ್ಲಿಕಾಯಿ ಶ್ರೀನಿವಾಸರಾಯರ ಮನೆ. ಅವರ ಕುಟುಂಬದೊಡನೆ ತಂದೆಯವರಿಗೆ ಹೆಚ್ಚಿನ ಸ್ನೇಹವು ಪ್ರಾಪಿಸಿತು. ಅದರಂತೆಯೆ ಇನ್ನೂ ಕೆಲವು ಪ್ರಮುಖ ಮನೆಗಳಿದ್ದುವು. ಈ ಅವಧಿಯಲ್ಲಿ ನಮ್ಮ ತಂದೆಯವರು ಕನ್ನಡ ಸಾಹಿತ್ಯ, ಚರಿತ್ರೆಗಳ ವಿಶೇಷ ಅಭ್ಯಾಸವನ್ನು ತೊಡಗಿದರೆಂದು ತಿಳಿದುಬರುತ್ತದೆ. ಹಳೆಗನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸಿದ್ದರು. ಅವುಗಳಿಂದ ದೊರೆತ ಲಾಭವನ್ನು ಬಳಸುವ, ಬೆಳೆಸುವ ಅವಕಾಶ ಮಾತ್ರ ಉಳಿದಿತ್ತು. ವಿವಿಧ ಗುಪ್ತನಾಮಗಳಿಂದ ವೃತ್ತಪತ್ರಿಕೆಗಳಿಗೆ, ಮಾಸಪತ್ರಿಕೆಗಳಿಗೆ ಅವರು ಬರೆಯತೊಡಗಿದ್ದರು. ಮೊದಮೊದಲು ರಾ. ಮ. ಪಂ. ಎಂದೂ, ಹರಟೆಮಲ್ಲನೆಂದೂ, ಬರೆಯತೊಡಗಿದ ಅವರು ಅನಂತರ ಈ ಗುಪ್ತನಾಮವನ್ನು 'ಕವಿಶಿಷ್ಯ' ಎಂದು ಬದಲಿಸಿದರು. ಅವರು ಸಂಪಾದಿಸಿದ ಮೂರು ಪದ್ಯ ಪುಸ್ತಕಗಳಲ್ಲಿ "ಕವಿಶಿಷ್ಯ"ನೆಂಬ ನಾಮವನ್ನು ಬಳಸಿದ್ದಾರೆ. ಆದರೆ ತಾವು ಮಾಡಿದ ಸಾಹಸಗಳ ದಾಖಲೆಯನ್ನಾಗಲಿ, ಬರೆದ ಬರಹಗಳ ದಾಖಲೆಯನ್ನಾಗಲಿ, ಅವರು ಇರಿಸಿಕೊಂಡವರಲ್ಲ. ಹೀಗಾಗಿ ಅವರ ಬರಹಗಳ ವಿವರ, ಕಾಲ, ವಿಸ್ತಾರಗಳೆಲ್ಲ ನಮಗೆ ತಿಳಿಯುವುದು ಕಷ್ಟವಾಗಿದೆ. ಬಾಸೆಲ್ ಮಿಷನಿನವರು ಪ್ರಕಟಿಸಿದ ಸತ್ಯದೀಪಿಕೆಯಲ್ಲಿ ಅವರ ಹಲವು ಲೇಖಗಳು ಬಂದುವು. ಅದರಂತೆ ಬೆನಗಲ್ ರಾಮರಾಯರ ಸಂಪಾದಕತ್ವದಲ್ಲಿ ಹೊರಟ ಸುವಾಸಿನಿಯಲ್ಲಿ ಹಲವಾರು ಬರಹಗಳು ಬೆಳಕನ್ನು ಕಂಡುವು. ಅವರ ಮೊದಮೊದಲ ಬರವಣಿಗೆಗಳಲ್ಲಿ ಚಿಕ್ಕ ಕಥೆ, ಲಘು ಹಾಸ್ಯದ ಬರಹಗಳೇ ಅಧಿಕವಾಗಿದ್ದುವು. ಅದರಂತೆ ತಮ್ಮ ಕಾಲದ ಜನತೆಯ ವಿಚಾರ, ಅಂಧಶ್ರದ್ಧೆ, ಅನಾಚಾರಗಳನ್ನು ಮೆಚ್ಚಲಾರದ ಅವರು ಅನೇಕ ವಿಡಂಬನಾತ್ಮಕ ಲೇಖಗಳನ್ನು ಬರೆದರು. ಅವರು ಚಿಕ್ಕಕತೆ ಬರೆದ ಕಾಲವು ಸುಮಾರು 1901–1903ರೊಳಗೇನೆ. ಆದುದರಿಂದ ಕನ್ನಡದಲ್ಲಿ ಸಣ್ಣ ಕತೆಗಳ ಮೂಲಪುರುಷನೆಂದು ಅವರನ್ನು ಹಲವರು ಇಂದಿಗೂ ಕರೆಯುತ್ತಿದ್ದಾರೆ. ಇಂಗ್ಲಿಷು ಕವನಗಳ ವರ್ಚಸ್ಸು ಕನ್ನಡಕ್ಕೆ ಬರುವಂತೆ ಮಾಡಿದವರಲ್ಲಿ ಅವರು ಮೊದಲಿಗರು. ಅವರೇನೆ ಕೆಲವು ಇಂಗ್ಲಿಷ್ ಕವನಗಳನ್ನು (ಮಕ್ಕಳಿಗಾಗಿ) ಕನ್ನಡಿಸಿದ್ದರು. ಈ ಕಾಲದಲ್ಲಿ ತೀರ ಪ್ರಚುರವಾದ ಅವರದೊಂದು ಕವನ, ಬಾಯಿಂದ ಬಾಯಿಗೇನೆ ಪಸರಿದ ಹಾಡು ಎಂದರೆ "ತೂಕಡಿಕೆಯನು ಕಳೆಯದೇಕೆ ಮಲಗಿಹೆ ಗೆಳೆಯ" ಎಂಬುದು. ಆಗ ಬ್ರಿಟಿಷರ ಮೇಲಿನ ಭಯ ಹಗೆತನಗಳೆರಡೂ ಉಲ್ಬಣಿಸಿದ್ದ ಕಾಲ; ಬಂಗಾಳದ ವಿಭಜನೆಯಿಂದಾಗಿ ಜನರು ರೊಚ್ಚಿಗೆದ್ದ ಕಾಲ. ಅದರಿಂದ ತಂದೆಯಲ್ಲಿನ ರಾಷ್ಟ್ರಪ್ರೇಮ ಉಜ್ವಲಿಸಿ ಈ ಕವನವನ್ನು ಸ್ಫುರಿಸಿತು. ಅದು ಅಚ್ಚಿನಲ್ಲಿ ಬಾರದೆಹೋದರೂ ಜನರ ಬಾಯಲ್ಲಿ ಉಳಿಯಿತು. ಅದನ್ನು ತಿಳಿದವರು ಅದರ ಕರ್ತೃವನ್ನೂ ತಿಳಿದಿದ್ದರು. ಅವರ ಗೆಳೆಯರನೇಕರು ಮನೆಯಲ್ಲಿ, ವಿಹಾರದಲ್ಲಿ ಸೇರಿದಾಗ ಆ ಹಾಡನ್ನು ಹಾಡೆಂದು ತಂದೆಯವರನ್ನು ಕೇಳುತ್ತಿದ್ದರು. ಈ ಹಾಡಿಗೆ ಅಣಕವಾಡುಗಳಾಗಿ ಇನ್ನೆರಡು ಹಾಡುಗಳು ಹುಟ್ಟಿ ಪ್ರಕಟಗೊಂಡುವಾದರೂ, "ತೂಕಡಿಕೆಯನು ಕಳೆಯ" ಎಂಬ ಹಾಡು ಮಾತ್ರ ಅಳಿಯದೆ ಉಳಿಯಿತು. ಅನಂತರ ಅವರು ಲೋಕಮಾನ್ಯ ತಿಲಕರ ಮತ್ತು ಗೋಖಲೆಯವರ ಧ್ಯೇಯವನ್ನು ಕುರಿತಾದ ಹಾಡನ್ನು ಬರೆದುದಾಗಿ ತಿಳಿದುಬರುತ್ತದೆ; ಆದರೆ ಅದರ ಗತಿಯೇನಾಯಿತೆಂಬುದು ನಮಗೆ ತಿಳಿದುಬಂದಿಲ್ಲ.

1907ರಲ್ಲಿ ನಮ್ಮ ತಂದೆಯವರಿಗೆ ಕಾಸರಗೋಡಿಗೆ ವರ್ಗವಾಯಿತು. ಅವರಿಗೆ ಅದು ಹೊಸ ಊರು. ಆದರೇನು? ಕನ್ನಡ ನಾಡಿನದೇ ಒಂದು ಭಾಗ. ದಕ್ಷಿಣ ಕನ್ನಡದ ಜಾತಿ, ನೀತಿ, ಜನ, ಮನಗಳ ಬಗೆಗಳನ್ನೆಲ್ಲ ತಿಳಿದ ನಮ್ಮ ತಂದೆಗೆ ಅದರ ಒಂದು ಭಾಗವು ಇನ್ನೊಂದು ಭಾಗದಷ್ಟೆ ಪರಿಚಿತ ಪ್ರದೇಶವಾಯಿತು. ಅಲ್ಲದೆ ಕಾಸರಗೋಡು ರೇಂಜಿನಲ್ಲಿ ಅವರು ಕೆಲಸಮಾಡುತ್ತ ಹೋದಂತೆ ಅವರಲ್ಲಿ ಹೆಚ್ಚಿನ ಪರಿಣಾಮವಾಯಿತು. ಈ ಊರಲ್ಲಿ ಅವರು ಕಳೆದ ಎಂಟು ವರ್ಷಗಳೆಂಬುವು ಜೀವನದ ತೀರ ಸುಖಮಯ ದಿನಗಳು; ಅಲ್ಲದೆ ಅವರಿಂದ ಹೆಚ್ಚಿನ ರಚನಾತ್ಮಕ ಕಾರ್ಯಗಳಿಗೆ ಅವಕಾಶ, ಪ್ರೇರಣೆಗಳನ್ನು ನೀಡಿದ ಕಾಲವಾಗಿತ್ತು. ಆಗ ಅವರ ಜೀವನದಲ್ಲಿ ನಿಕಟ ಸಂಬಂಧಕ್ಕೆ ಗುರಿಯಾದ ಇಬ್ಬರು ವ್ಯಕ್ತಿಗಳನ್ನು ಇಲ್ಲಿ ಸ್ಮರಿಸದೆ ಗತ್ಯಂತರವಿಲ್ಲ. ಅವರಲ್ಲೊಬ್ಬ-ಅವರ ಅಡುಗೆಯವ, ಬಾಬುಪೈ; ಇನ್ನೊಬ್ಬ ಪೇದೆ ರಾಮನಾಯಕ. ಈ ಇಬ್ಬರು ವ್ಯಕ್ತಿಗಳು ಅವರ ಸೇವಕರಾಗಿ, ಊರಿಂದ ಊರಿಗೆ, ಶಾಲೆಯಿಂದ ಶಾಲೆಗೆ ಅವರ ಬೆನ್ನಹಿಂದೆಯೇ ಅಲೆದವರು. ಮಾತ್ರವಲ್ಲ-ತಮ್ಮ ಉದ್ಯೋಗಕ್ಕೆ ಮೀರಿದ ಆಸಕ್ತಿಯನ್ನು ನಮ್ಮ

ತಂದೆಯ ಕೆಲಸದಲ್ಲಿ ತೋರಿಸಿ ನೆರವಾದರು. ಅದರಲ್ಲಿ ರಾಮ ನಾಯಕನ ಪಾತ್ರ ವಿಶೇಷವಾದುದು; ತಂದೆ ಅವನಿಗಾಗಿ ಕವನ ಹಾಡುತ್ತಿದ್ದರು. ಆತ ತಲ್ಲೀನನಾಗಿ ಕೇಳುತ್ತಿದ್ದ; ತಂದೆ ಗೊಣಗುತ್ತಿದ್ದ ಸ್ವ-ಕವಿತೆಗಳನ್ನು ಬರೆದಿಡುತ್ತಿದ್ದ. ಅವರು ಹೋದ ಹೋದಲ್ಲಿ ಅವರಿಗಾಗಿ ಊರಿನ ಕನ್ನಡ, ತುಳುಕತೆ, ಕವನ ಪಾಡ್ದನಗಳನ್ನು ಬರೆದುಕೊಳ್ಳುತ್ತಿದ್ದ. ನಮ್ಮ ತಂದೆ ರಚಿಸಿದ ಪ್ರತಿಯೊಂದು ಕವಿತೆಯೂ ರಾಮನಾಯಕನಿಗೆ ಕಂಠ ಪಾಠವಾಗಿತ್ತು. ಎಷ್ಟೋ ಬಾರಿ ಅರ್ಧ ರಚಿಸಿ, ಮರೆತಂತಹ ಕವನಗಳನ್ನು ನಮ್ಮ ತಂದೆಯವರಿಗೆ ನೆನಪರಿಸಿ ಕೊಡುತ್ತ ಲಿದ್ದ. ಹಲವು ಬಾರಿ ರಾಮನಾಯಕನ ನಾಡನುಡಿಯ ಪ್ರೀತಿ ಯನ್ನು ಕಂಡು ತಂದೆಯವರಿಗೆ ಅಚ್ಚರಿಯಾಗಿತ್ತು. ಅವನಿಗೆ ಹಳೆಗನ್ನಡ ಸಾಹಿತ್ಯವನ್ನು ಅವರು ಓದಿಹೇಳಿದುದುಂಟು. ಅವರ ಜತೆಗೆ ನಡೆಯುತ್ತ ಊರಿಂದೂರಿಗೆ ಮಜಲು ಹೋಗು ವಾಗ, ದಾರಿಯುದ್ದಕ್ಕೂ- ಊರ ಕತೆಗಳ, ಊರ ದೈವಗಳ, ಪವಾಡಗಳ ದಂತ ಕಥೆಗಳನ್ನು ಕುರಿತು- ಹೇಳುತ್ತ, ಕೇಳುತ್ತ ಅಲೆದಾಡುತ್ತಿದ್ದರು. ನಮ್ಮ ತಂದೆ ಜೀವಮಾನದಲ್ಲಿ- ತಮ್ಮಿ ಬ್ಬರು ಅನುಚರರಾದ ಬಾಬು ಪೈ ಮತ್ತು ರಾಮನಾಯಕರನ್ನು ಎಂದೂ ಮರೆತವರಲ್ಲ.

ಕಾಸರಗೋಡಿಗೆ ತಂದೆಯವರು ಶಾಲಾ ಇನಸ್ಪೆಕ್ಟರ ರಾಗಿ ವರ್ಗವಾದಂದಿನಿಂದ ಊರ ಉಪಾಧ್ಯಾಯರಿಗೆ ಅಧಿ ಕಾರಿಗಳ ವಿಚಾರದಲ್ಲಿದ್ದ ಭೀತಿಯು ತೊಲಗಿ ಆದರ, ಪ್ರೀತಿ ಗಳು ಉಂಟಾದುವು. ಅವರ "ಪರೀಕ್ಷೆ"ಯ ದಿನವನ್ನು ಆತುರ ದಿಂದ ಇದಿರು ಕಾಯತೊಡಗಿದರು. ತಂದೆಯವರು ತಮ್ಮ ಸ್ಥಾನದ ಜಂಬ ಮೆರೆಯಿಸಿದವರಲ್ಲ; ಬದಲು ಕೆಳಗಿನ ಉಪಾ ಧ್ಯಾಯರೊಡನೆ ಆತ್ಮೀಯವಾಗಿ ವರ್ತಿಸತೊಡಗಿದವರು. ಅಲ್ಲದೆ—ಅವರಲ್ಲಿ ಸಾಹಿತ್ಯ, ಸಂಸ್ಕೃತಿಗಳ ವಿಚಾರದಲ್ಲಿ ಅಭಿರುಚಿ ಹೆಚ್ಚುವಂತೆ ತುಂಬಾ ಪ್ರಯತ್ನವನ್ನು ಮಾಡಿದರು. ತಾವೇ ಮಾದರಿಯಾಗಿ ನಿಂತು — ಬಡ ಉಪಾಧ್ಯಾಯರ ಪಾಲಿನ ಜೀವನ ಸೌಂದರ್ಯವು ಹೆಚ್ಚುವಂತೆ, ಮಾನಸಿಕ ಸುಖ, ವಿಚಾರಗಳಲ್ಲಿ ಆಸಕ್ತಿ ಹುಟ್ಟುವಂತೆ, ಸುತ್ತಲಿನ ಚೆಲುವಿಗೆ ಅವರ ಕಣ್ಣು ತೆರೆಯುವಂತೆ—ದಾರಿ ತೋರಿಸಿ ಕೊಟ್ಟರು. ಉಪಾಧ್ಯಾಯರ ಬರಡು ಜೀವನಕ್ಕೆ ಕಳೆ,ಸೊಗಸು ಗಳು ಬರತೊಡಗಿದವು. ಅವರಲ್ಲಿ ಜಾಗ್ರತಿಯೂ ಉಂಟಾ ಯಿತು. ಉಪಾಧ್ಯಾಯರಿಗೆ ನಮ್ಮ ತಂದೆಯನ್ನು ಕುರಿತಾದ ಆಸಕ್ತಿಯೆಷ್ಟಿತ್ತೆಂದರೆ—ಅವರೆಲ್ಲ ತಮ್ಮೂರಿಂದ ಮುಂದಿನ ಊರಿಗೆ, ತಂದೆಯನ್ನು ಕಳುಹಿಸಿಕೊಡಲು ಹೋಗಿಬರು ವವರೇ. ಅವರಿಗೆ ಮುಂದೆ ದಾರಿಯಲ್ಲಿ ತೊಂದರೆಯಾಗಬಾರ ದೆಂಬ ಸಲುವಾಗಿಯಲ್ಲ. ಅವರ ಬಾಯಿಂದ ಬರುವ ಸರಸ ಸಲ್ಲಾಪ, ಸವಿ ನುಡಿಗಳನ್ನು ಕೇಳಿ ಆನಂದಿಸುವುದಕ್ಕಾಗಿ. ಅವರು ಹೋದ ಹಳ್ಳಿಗಳಲ್ಲಿ—ಧನಿಕರಿಗೆ, ಅಂಗಡಿಯವರಿಗೆ, ಪುರೋಹಿತರಿಗೆ, ರೈತರಿಗೆ ಪರಿಚಯದ ವ್ಯಕ್ತಿಯಾಗಿ ಪರಿ ಣಮಿಸುವಂತಾಯಿತು. ಆ ಬಗೆಯ ಸಾಮಾಜಿಕತೆ, ಸ್ನೇಹ ಪರತೆ, ಅನುಕಂಪ, ಆಸಕ್ತಿ ಅವರಿಗೆ ತಮ್ಮ ಉಪಾಧ್ಯಾಯ ರೊಡನೆಯೂ ಊರಜನಗಳೊಡನೆಯೂ ಇದ್ದಿತು.

ಕಾಸರಗೋಡಿನಲ್ಲಿ ಅವರು ಇರುವಾಗ ಮಾಡಿದ ಕೆಲಸಗಳಲ್ಲಿ — ಹೊಸ ಸಾಹಿತ್ಯಾಭಿರುಚಿಯುಂಟಾಗುವಂತೆ ಯೂ, ಅದರಲ್ಲಿ ಸವಿಗಾರಿಕೆಯ ಮೊಳೆಯಿರುವಂತೆಯೂ ಅವರು ಪ್ರಯತ್ನಿಸಿದರಲ್ಲದೆ, ಹಳ್ಳಿಯ ಶಾಲೆಗಳ ಶಿಕ್ಷಣ ಕ್ರಮವನ್ನು ತಿದ್ದುವುದರಲ್ಲಿ ಅವರು ತುಂಬ ಪರಿಶ್ರಮ ವಹಿ ಸಿದರು. ಆಗಿನ ಕಾಲದಲ್ಲಿ ಮದ್ರಾಸು ವಿದ್ಯಾಭ್ಯಾಸ ಇಲಾಖೆ ಯವರು ಶಿಕ್ಷಣ ಸುಧಾರಣೆಗಾಗಿ ಡಾ। ಎ. ಜಿ. ಬೋರ್ನ್ ಎಂಬ ಮಹನೀಯರನ್ನು ನಿಯೋಜಿಸಿದ್ದರು. ವಿದ್ಯಾಸಂಸ್ಥೆ ಯಲ್ಲಿದ್ದ ಅನೇಕರಿಗೆ ಈ ಯೋಜನೆಯೇ ಪ್ರಿಯವಾಗಿ ಕಂಡು ಬರಲಿಲ್ಲ. ನಮ್ಮ ತಂದೆಯವರಿಗೆ ಇದ್ದ ಸ್ಥಾನ ಕಡಿಮೆಯದು. ಅವರು ಒಂದು ರೇಂಜಿನ ಸ. ಅ. ಇನ್ಸ್‌ಪೆಕ್ಟರರು ಮಾತ್ರ. ಆದರೂ ಅವರು ಈ ಹೊಸ ವಿಚಾರವನ್ನು ಆಸಕ್ತಿಯಿಂದ ತಬ್ಬಿದರು. ಅದಕ್ಕನುಗುಣವಾದ ಪಠ್ಯ ಕ್ರಮಗಳ ವಿವರವನ್ನು ತಯಾರಿಸಿದರು. ಈ ದಾರಿಯು ರೂಢಿಯಲ್ಲಿದ್ದ ಕ್ರಮಗಳಿಗೆ ವಿರುದ್ಧವಾಗಿತ್ತು; ಸಾಂಪ್ರದಾಯಿಕ ಶಿಕ್ಷಕರಿಗೆ ಅಸಮಾಧಾನ ಕರವಾಗಿತ್ತು. ನೇರವಾದ ಕ್ರಮ (Direct method)ವೆಂಬ ಈ ಹೊಸ ದಾರಿ ಉಳಿದವರ ವಕ್ರ ನೋಟಕ್ಕೆ ಪಾತ್ರವಾಗಿತ್ತು. ತಂದೆಯವರು ತಮ್ಮ ಹಟವನ್ನು ಬಿಡಲಿಲ್ಲ. ಶಿಕ್ಷಣ ಸುಧಾರಣೆ ಯಾಗಲೇಬೇಕೆಂದು ಅವರು ಅರಿತಿದ್ದರು. ಈ ಬಗೆಯ ಹೊಸ ಪ್ರಯೋಗಕ್ಕೆ, ಅತಿ ಉತ್ಸಾಹದಿಂದ ಧುಮುಕಿದರು. ಆ ಪ್ರಯೋಗ ಮಾರ್ಗವನ್ನು ಪಸರಿಸಲು ಮೇಲಿನ ಇನ್ಸ್ ಪೆಕ್ಟರರಿಂದ ಅಪ್ಪಣೆಯನ್ನು ದೊರಕಿಸಿಕೊಂಡರು. ಅಲ್ಲಿಂದ ಊರೂರಲ್ಲಿ ರೂಢಿಯಾಗಿದ್ದ ಹಳೆಯ ಐಗಳ ಮಠದ ಪಠ್ಯ ಕ್ರಮ ಬದಲಿಸಿ, ಹೊಸ ದಾರಿಗೆ ಎಡೆ ಕೊಡುವಂತಾಯಿತು. ನಮ್ಮ ತಂದೆಯವರು ಸಾಹಿತ್ಯಕ್ಷೇತ್ರದಲ್ಲಿ ಸಲ್ಲಿಸಿದ ಸೇವೆ ಎಷ್ಟು ಮಹತ್ವದ್ದೋ, ಅದಕ್ಕಿಂತ ಕಡಿಮೆಯಲ್ಲದ ಕೆಲಸ, ಸೇವೆ ಅವರು ಶಿಕ್ಷಣ ಪ್ರಗತಿಯ ವಿಚಾರದಲ್ಲಿ ಸಲ್ಲಿಸಿದ ರೆಂಬ ಮಾತು ಮುಖ್ಯವಾದುದು. ಪ್ರಾಥಮಿಕ ವಿದ್ಯಾಭ್ಯಾಸ ದಲ್ಲಿ ಇದೊಂದು ಕ್ರಾಂತಿಯನ್ನೆ ಉಂಟುಮಾಡಿತು. ಅದರಿಂ ದಾಗಿ ಸಾವಿರಾರು ಬಾಲಕರ ಬಾಳು ಸವಿಯಾಯಿತು; ಸುಖ ಮಯವಾಯಿತು. ಅದಕ್ಕೆ ಮೂಲಪುರುಷರಾರೆಂದು ಆ ಮಕ್ಕಳಿಗೆ ತಿಳಿಯದೆ ಹೋದರೂ- ಈ ಮಾತು ಮಾತ್ರ ಸತ್ಯ.

ಅವರು ಕೈಕೊಂಡ ಈ ಕೆಲಸ, ಅವರಿಗೆ ಪ್ರಿಯವಾಗಿ ದ್ದುದರಿಂದ, ಅದೊಂದು ಕೆಲಸದಂತೆ ಕಾಣುವ ಬದಲು ಆಟ

ವಾಗಿತ್ತು. ಆದರೆ ಎಂದೂ ಸುಲಭವಾಗಿರಲಿಲ್ಲ. ಏಕೆಂದರೆ– ತಮ್ಮ ಹೊಸ ದಾರಿಯನ್ನು, ಸಹ ಉದ್ಯೋಗಿಗಳ ಮೇಲೆ, ಇಷ್ಟವಿಲ್ಲದವರ ಮೇಲೆ ಅವರು ಬಲವಂತಪಡಿಸಲಾರರು. ಅಲ್ಲದೆ ಪ್ರತಿಗಾಮಿ ಶಕ್ತಿಗಳನ್ನು ಅವರು ಇದುರಿಸಬೇಕಾಗಿತ್ತು. ಕಾಸರಗೋಡು ಕ್ಷೇತ್ರದಲ್ಲಿ ಅವರು ನಡೆಯಿಸಿದ ಪ್ರಯೋಗಗಳು ಜಯಪ್ರದವಾದುದನ್ನು ಕಂಡಮೇಲೂ ಆ ಬಗೆಯ ಸುಧಾರಣೆಯನ್ನು, ಜಿಲ್ಲೆಯುದ್ದಕ್ಕೆ ಪಸರಿಸುವಲ್ಲಿ ತುಂಬ ವಿರೋಧವುಂಟಾಯಿತು. ಆದರೆ ಪುಣ್ಯವಶಾತ್ — ತಂದೆಯವರು ಆ ಪ್ರಯೋಗಗಳನ್ನು ತಮ್ಮ ಕ್ಷೇತ್ರದೊಳಗೆ ಯಶಸ್ವಿಗೊಳಿಸುವುದಕ್ಕೆ ಯಾರೂ ಆತಂಕಪಡಿಸಲಿಲ್ಲ. ಅವರು ತಮ್ಮ ಸುಧಾರಣೆಯ ಕೆಲಸವನ್ನು ಮುಂದುವರಿಸಿದರು. ಉಪಾಧ್ಯಾಯರು ಅವರ ಕೆಲಸಕ್ಕೆ ನೆರವಾದರು. ಮೆಲ್ಲ ಮೆಲ್ಲಗೆ ಹಳೆಯ ದಾರಿಯು ಹೊಸ ಶಿಕ್ಷಣಮಾರ್ಗಕ್ಕೆ ಇಂಬುಗೊಟ್ಟಿತು.

ನಮ್ಮ ತಂದೆಯವರು ಕಾಸರಗೋಡು ಕ್ಷೇತ್ರದಲ್ಲಿ ಕೆಲಸಮಾಡುತ್ತ ಹೋದ ಹಾಗೆ— ಶಿಕ್ಷಣ ವಿಧಾನವನ್ನರಿತ ಹಾಗೆ, ಊರಿನ ರಾಜಕೀಯ ಹವಾಮಾನವನ್ನೂ ಅರಿತುಕೊಂಡರು. ಹಳ್ಳಿ ಉಪಾಧ್ಯಾಯರ ಜೀವನ, ನೋಟಗಳನ್ನು ತಿಳಿಯಲು ಶಕ್ತರಾದರು. ಗ್ರಾಮವಾಸಿಗಳ ಬದುಕು, ಬಗೆಗಳ ವಿಚಾರದಲ್ಲಿ ಅವರಿಗೆ ಮಮತೆಯುಂಟಾಯಿತು. ಜನಗಳಿಗೆ ತಮ್ಮಿಂದಾದ ಸಹಾಯ, ಸಹಕಾರಗಳನ್ನು ಅವರು ನೀಡಿದರು. ಉಪಾಧ್ಯಾಯರೊಡನೆ ನಿಕಟವಾದ ಸ್ನೇಹ ಬೆಳೆಸಿ ಅವರಿಗೊಂದು ಆತ್ಮಗೌರವವಿದೆಯೆಂದು ಕಲಿಸಿಕೊಟ್ಟರು. “ನೀನು” ಎಂದು ಸಂಬೋಧಿಸಲ್ಪಡುತ್ತಿದ್ದ ಬಡ ಉಪಾಧ್ಯಾಯನನ್ನು “ನೀವು” ಎಂದು ಬಹುವಚನದಲ್ಲಿ ಸಂಬೋಧಿಸತೊಡಗಿದವರು ನಮ್ಮ ತಂದೆಯವರು. ಶಾಲಾ ಸಂದರ್ಶಣೆಗಳು–ಶಾಲೆಯ ಹುಳುಕು ಹುಡುಕುವುದಕ್ಕಷ್ಟೇ ಅಲ್ಲ-ಶಾಲೆಯ ಶಿಕ್ಷಣದಲ್ಲಿ ಸಹಾಯವಾಗುವುದಕ್ಕೆ ಎಂದು ತೋರಿಸಿಕೊಟ್ಟರು. ಅವರ ಬರವನ್ನು ಅಧ್ಯಾಪಕ ವರ್ಗ ಆದರದಿಂದ ಇದಿರುಕಾಯುವಂಥ ಆಸಕ್ತಿಯನ್ನು ಹುಟ್ಟಿಸಿದರು. ಮಕ್ಕಳ ಒಡನಾಟದಲ್ಲಿ ಸವಿಯಿದೆ, ಸುಖವಿದೆ, ಹೊಸ ದಾರಿಯಲ್ಲಿ ಚೆಲುವಿದೆ, ಮಕ್ಕಳ ಬದುಕು ಲಘುವಾಗುತ್ತದೆ, ಜ್ಞಾನದ ಹಸಿವು ಬೆಳೆಯುತ್ತದೆ, ಶಾಲೆಯ ಕೆಲಸ ಕಾಮಗಾರಿಯಲ್ಲ, ಸವಿಯೂಟ- ಎಂದೆಲ್ಲಾ ತೋರಿಸಿಕೊಟ್ಟರು. ಅಕ್ಷರಮಾಲೆಯು ಕಾಡುವ ಬೇತಾಳವಾಗುವುದು ನಿಂತಿತು. ಅಂಕೆ, ಅಂಕಗಣಿತಗಳು ಜೀವ ತಿನ್ನುವ ಬೇನೆಯಾಗುವುದು ನಿಂತಿತು. ಬದಲು ಮಗುವನ್ನು ನಗಿಸುವ, ಮಗುವಿನಲ್ಲಿ ಉತ್ಸಾಹ ಆಸಕ್ತಿ ಹುಟ್ಟಿಸುವ ಕೆಲಸವಾಗತೊಡಗಿತು.

ನಮ್ಮ ತಂದೆಯವರು ಕಾಸರಗೋಡಿನಲ್ಲಿದ್ದ ಕಾಲದಲ್ಲಿ ಚಿಂತೆಯಿರಲಿಲ್ಲ. ಮನೆಯ ಮಟ್ಟಿಗೆ ಸುಖಸಂತೋಷವಿತ್ತು; ಹಣಕಾಸಿನ ತಾಪತ್ರಯಗಳಿರಲಿಲ್ಲ. ಆಗಿನ ದಿನಕ್ಕೆ–ಸಬ್ ಅಸಿಸ್ಟೆಂಟ್ ಇನ್ಸ್‌ಪೆಕ್ಟರರಾಗಿದ್ದ ಅವರಿಗೆ ತಿಂಗಳೊಂದರ ನೂರು ರೂಪಾಯಿಗಳ ವೇತನ ಬರುತ್ತಿತ್ತು. ಅದೇನು ಕಡಮೆಯಲ್ಲ. ನಮ್ಮ ಕಾಸರಗೋಡಿನ ಮನೆ ರೈಲ್ವೆನಿಲ್ದಾಣದ ಬಳಿಯ ಒಂದು ದೊಡ್ಡ ಹಿತ್ತಿಲು ಮನೆಯಾಗಿತ್ತು. ಹಿತ್ತಿಲ ತುಂಬ ತೆಂಗಿನ ಮರಗಳಿದ್ದುವು. ನಾವಿಬ್ಬರು ಮಕ್ಕಳು ಅಲ್ಲಿಯೇ ಜನಿಸಿದವರು. ಆ ಹಿತ್ತಿಲುಗಳಲ್ಲಿ ನಾವು ಆಡಿಕೊಂಡಿದ್ದವರು. ನಮ್ಮ ತಂದೆಗೂ ಆ ಆವರಣವು ಚೆಲುವಿನದಾಗಿ ಕಾಣಿಸಿತ್ತು. ಅವರು ನಮಗಾಗಿ ಅಲ್ಲಿ ಹಾಡಿದರು; ಕವನ ರಚಿಸಿದರು. ಆ ಹಲವು ರಚನೆಗಳು ಈಗ ಉಳಿದಿಲ್ಲ. ಅದೇಕೆ– ನಮ್ಮನ್ನವರು ಆಡಿಸಿದಾಗ, ಎತ್ತಿ ಮುದ್ದಿಸುವಾಗಲೆಲ್ಲ ಹಾಡುತ್ತಿದ್ದರು, ಹಾಡುಗಬ್ಬ ರಚಿಸುತ್ತಿದ್ದರು. ತೊದಲು ನುಡಿಯಲ್ಲೋ, ಶುದ್ಧ ಭಾಷೆಯಲ್ಲೋ ಅವರು ಆಯಾ ಗಳಿಗೆಯ ಸುಖಕ್ಕಾಗಿ ರಚಿಸಿದ ಈ ಹಾಡುಗಳು, ಆ ಗಳಿಗೆಗೇ ಸಂದುವು; ತಮ್ಮ ಕೆಲಸಮಾಡಿ ಅಳಿದುವು. ಅವರ ಪದ್ಯಗ್ರಂಥದೊಳಗಿನ ಸಂಜೆಯ ಹಾಡು ನಮ್ಮ ಹಿರಿಯಣ್ಣನಿಗಾಗಿ (1902ಮಂಗಳೂರಲ್ಲಿದ್ದಾಗ) ಹಾಡಿದುದು. ಜೋಗುಳ ಎಂಬ ಇನ್ನೊಂದು ಕವನವು 1910ರಲ್ಲಿ ಕಿರಿಯ ಮಗನಿಗಾಗಿ ರಚಿಸಿದುದು. ಅವರು ತಮ್ಮ ಮಕ್ಕಳೊಡನೆ ನಲಿದು, ಅವರ ಸಂತೋಷಕ್ಕಾಗಿ ರಚಿಸಿದ ಹಾಡುಗಳಲ್ಲಿ “ಹಾವಿನ ಹಾಡು” ಒಂದಾಗಿದೆ.

1915ರಲ್ಲಿ ನಮ್ಮ ತಂದೆಗೆ ಕಾಸರಗೋಡಿನಿಂದ ಮಂಗಳೂರಿಗೆ ವರ್ಗವಾಯಿತು. ಅವರು ಕದ್ರಿಯಲ್ಲಿ ಒಂದು ಬಾಡಿಗೆಯ ಮನೆಯಲ್ಲಿ ವಾಸಿಸತೊಡಗಿದರು. ಈ ಕದ್ರಿಯ ಮನೆ ಅವರ ಗೆಳೆಯರನೇಕರ ನೆನಪಿನಲ್ಲಿ ಉಳಿಯುವಂತಾಯಿತು. ಈ ಕಾಲದಲ್ಲಿ ಅವರು ಆಗಾಗ ಸಾಹಿತ್ಯದ ಒಂದಲ್ಲ ಒಂದು ಕೆಲಸವನ್ನು ಮಾಡುತ್ತಲೇ ಇದ್ದರು. ಅವರ ಅನೇಕ ಕವನಗಳು ಇಲ್ಲಿ ರಚಿತವಾದುವು. ಇಷ್ಟರಲ್ಲಿ ಅವರ ಪದ್ಯ ಪುಸ್ತಕದ ಪ್ರಥಮ ಭಾಗ ತುಂಬ ಪ್ರಚಾರವಾಗಿತ್ತು. ಎರಡನೆಯ ಪದ್ಯಪುಸ್ತಕವು ರೂಪುಗೊಳ್ಳುತ್ತಿತ್ತು. ಆದರೆ ಈ ಕಾಲದಲ್ಲಿ ಅವರ ಮುಖ್ಯ ಚಟುವಟಿಕೆ ಶಿಕ್ಷಣ ಕ್ಷೇತ್ರದಲ್ಲಿಯೆ ಎನ್ನಬಹುದು. ಕಾಸರಗೋಡಿನಲ್ಲಿ ದೊರಕಿಸಿದ ಅನುಭವ, ಉಂಟಾದ ವಿಶ್ವಾಸಗಳಿಂದಾಗಿ, ಅವರು ಧೈರ್ಯವಾಗಿ ಮುಂದುವರಿಯಲು ಸಾಧ್ಯವಾಯಿತು. ಜನತೆಯ ಅಭಿವೃದ್ಧಿಗೆ ಅವರ ಶಿಕ್ಷಣ, ಸಂಸ್ಕೃತಿಗಳ ಅಭಿವೃದ್ಧಿಯೂ ಕಾರಣವಷ್ಟೆ.

ಆದರೆ ಮಂಗಳೂರಿಗೆ ಬಂದು ಎರಡು ವರ್ಷಗಳು ಪೂರ್ತಿ ಸಲುವುದರೊಳಗಾಗಿ ಅವರಿಗೆ ಇಲ್ಲದ ಸಮಸ್ಯೆಗಳು ಎದುರಾದುವು; ಆ ಸಮಸ್ಯೆಗಳಿಗೆ ಕಾರಣರಾದ ವ್ಯಕ್ತಿಗಳೂ

ಅಸಾಧಾರಣರಾಗಿದ್ದರು. ಸಬ್ ಎಸಿಸ್ಟೆಂಟ್ ಇನ್ಸ್ಪೆಕ್ಟರ ರಾಗಿದ್ದ ಅವರು ತಮ್ಮ ರೇಂಜಿನ ಶಾಲೆಗಳನ್ನು ಸಂದರ್ಶಿಸಿ– ಅವುಗಳಿಗೆ ಮನ್ನಣೆ ಕೊಡಬೇಕೆಂದು ಸಂಬಂಧಿಸಿದ ಜಿಲ್ಲಾ ಬೋರ್ಡು, ತಾಲೂಕು ಬೋರ್ಡುಗಳಿಗೆ ಶಿಫಾರಸು ಮಾಡ ಬೇಕಿತ್ತು. ಆದರೆ ನಮ್ಮ ತಂದೆಯವರು ಈ ಕೆಲಸಕ್ಕೆ ಆರಿಸಿ ಕೊಂಡಿದ್ದ ಅಳತೆಗೋಲಿಗೂ, ಅಂದಿನ ತಾಲೂಕು ಬೋರ್ಡಿ ನಲ್ಲಿ ನಡವಳಿಕೆಯಲ್ಲದ ರೂಢಿ, ಪರಿಪಾಠಗಳಿಗೂ ಹೊಂದಿಕೆ ಬರುವಂತಿರಲಿಲ್ಲ. ಶಿಕ್ಷಣ ಖಾತೆಯ ಆಡಳಿತೆಯಲ್ಲಿ ತುಂಬಿ ಕೊಂಡಿದ್ದ ಕೆಲವೊಂದು ದುರ್ವ್ಯಾಪಾರಗಳ ಕಡೆಗೆ ಅವರ ದೃಷ್ಟಿಯು ಬೀಳಲೇ ಬೇಕಾಯಿತು. ಅದನ್ನು ಕಂಡಷ್ಟೂ ಅದ ನ್ನಿದಿರಿಸಿ ಮುರಿದು ಹಾಕಬೇಕೆಂಬ ಹಟವೂ ಹೆಚ್ಚಿತು.

ಅಲ್ಪ ಸಮಯದೊಳಗಾಗಿ ಈ ವಿಚಾರದಲ್ಲಿ ತೊಡಗಿದ ಸುದ್ದಿ ಸಮಾಚಾರಗಳು, ಬಿರುಗಾಳಿಯ ಬಿರುಸಿಗೆ ಸಮನಾಗ ತೊಡಗಿದುವು. ಈ ಪ್ರಕರಣಗಳಿಗೆ ಕಾರಣರಾದವರು ಚಿಲ್ಲರೆ ಯವರಲ್ಲ; ಸಮಾಜದ ವರ್ಚಸ್ವೀ ವ್ಯಕ್ತಿಗಳು. ಅವರು ನಮ್ಮ ತಂದೆಯವರಿಗೆ ಆಗಾಗ ಕಿರುಕುಳ ಕೊಡತೊಡಗಿದರು. ಅದ ರಿಂದ ತಂದೆಯವರು ಅಂಜಲಿಲ್ಲವೆಂದು ತಿಳಿಯುತ್ತಲೇ, ತಾಲೂಕು ಬೋರ್ಡಿನ ಜತೆಗೆ ಜಿಲ್ಲಾ ಬೋರ್ಡೂ— ಈ ಜಗಳದ ವಕಾಲತು ವಹಿಸಿ, ಮುಂದೆ ಬಂದಿತು. ಈ ಸಂಸ್ಥೆ ಯಲ್ಲಿ ಆಗ ನಮ್ಮ ಸಾರಸ್ವತ ಸಮಾಜದ ಹಲವು ಪ್ರತಿಷ್ಠಿತ ರಿದ್ದರು. ನಮ್ಮ ತಂದೆಯವರು ಚುಚ್ಚಿ ತೋರಿಸಿದ ಕುಂದು ಕೊರತೆಗಳು, ಅದರ ವಿಷಯವಾಗಿ ಹಿಡಿದ ಛಲಗಳು, ನಮ್ಮ ಸಮಾಜದ ಪ್ರತಿಷ್ಠೆಗೆ ಕುಂದೆಂದು ಅವರು ತಿಳಿದರು. ಸಮಾಜ ದವರು ತಂದೆಯನ್ನು ಕಂಡರೆ ದೂರ ನಿಲ್ಲತೊಡಗಿದರು. ನಮ್ಮ ತಂದೆ ಆಗ–ಹಳ್ಳಿಯ ಬಡ ಉಪಾಧ್ಯಾಯನಿಗೆ ನ್ಯಾಯ ಸಲುತ್ತಿದ್ದಿಲ್ಲ; ಅದು ಸಲಲೇಬೇಕು– ಎಂಬ ಹಟಸಾಧನೆಗೆ ನಿಂತರು. ಈ ದೂರುಗಳು ವಿದ್ಯಾ ಇಲಾಖೆಯ ಮೇಲಿನವರ ತನಕವೂ ಹೋದುವು. ವಿದ್ಯಾಖಾತೆಯ ಡಿರೆಕ್ಟರರಾದ ಜೆ. ಎಚ್. ಸ್ಟೋನ್ ಎಂಬವರು ಜಿಲ್ಲಾ ಬೋರ್ಡಿನ ಅಧ್ಯಕ್ಷರ ಪ್ರೀತ್ಯರ್ಥವಾಗಿ–ನಮ್ಮ ತಂದೆಯನ್ನು, ಇನ್ಸ್ಪೆಕ್ಟರಿಕೆ ಕೆಲಸ ದಿಂದ ತೆಗೆದು, ಹೈಯರ್ ಎಲಿಮೆಂಟರಿ ಟ್ರೈನಿಂಗ್ ಶಾಲೆಯ ಮುಖ್ಯ ಅಧ್ಯಾಪಕರನ್ನಾಗಿ ಮಾಡಿದರು. ಇದರಿಂದಾದರೂ ಗೊಂದಲವು ಶಾಂತವಾಗಲಿ–ಎಂಬುದು ಅವರ ಯೋಚನೆ.

ಅದರಿಂದ ನಮ್ಮ ತಂದೆಗೆ ಅನುಕೂಲವಾಯಿತು. ಅವ ರಿಗೆ ಆಡಳಿತೆಯಲ್ಲಿನ ಕೊಳಕನ್ನು ತೊಳೆಯಲು ಸಾಧ್ಯವಾಗ ದಿದ್ದರೂ–ಅವರು ಈಗ ಪಡೆದ ಉದ್ಯೋಗವು ಜಿಲ್ಲಾ ಬೋ ರ್ಡಿನ ಕಿರುಕುಳದಿಂದ ದೂರವಾದದ್ದು; ಸ್ವತಂತ್ರ ಹೊಣೆ ಗಾರಿಕೆಯುಳ್ಳದ್ದು. ಅದರಿಂದ ಅವರಿಗೆ ಸಂತೋಷವೇ ಆಯಿತು. ಆದರೆ ಅವರ ವರ್ಗಾವರ್ಗಿಯಿಂದ ತಾಲೂಕು ಬೋರ್ಡಿನಲ್ಲಿ ಎದ್ದ ಗೊಂದಲ, ಅಶಾಂತಿಗಳು ಮುಗಿಯಲಿಲ್ಲ. ಅದನ್ನು ಕಂಡವರು ನಮ್ಮ ತಂದೆಯವರನ್ನು ಜಿಲ್ಲೆಯಿಂದ ಹೊರಗೋಡಿಸಿದರಾಗದೇ–ಎಂದೂ ಯೋಚಿಸಿದರು.

ಹೀಗೆ ತಾಲೂಕು ಬೋರ್ಡಿನ ಆಡಳಿತೆಯಲ್ಲಿ ಉಂ ಟಾದ ಮತಭೇದ, ಸಂಘರ್ಷಣೆಗಳು ದಿನ ಸರಿಯುತ್ತ ಹೋ ದಂತೆ–ಮೂರ್ತಸ್ವರೂಪ ತಾಳಿದುವು. ಹಿಂದೆ ಬೋರ್ಡು ಶಾಲಾ ಉಪಾಧ್ಯಾಯರಾಗಿದ್ದ ಒಬ್ಬ ಮಾಸ್ತರರು ತೊಡಗಿದ ಖಾಸಗಿ ಶಾಲೆಗೆ-ಬೋರ್ಡು ಮನ್ನಣೆ ಕೊಡಬೇಕೇ ಬೇಡವೇ -ಎಂಬ ಒಂದು ಪ್ರಶ್ನೆ ಹುಟ್ಟಿ ಸಂಬಂಧಿಸಿದವರ ದ್ವೇಷ, ಹಟ ಸಾಧನೆಗಳಿಗೆ ತಕ್ಕ ಅವಕಾಶ ರೂಪುಗೊಂಡಿತು. ಬೋರ್ಡು ಈ ಹೊಸ ಶಾಲೆಗೆ ಮನ್ನಣೆ ಕೊಡೆನೆಂದಿತು; ಆದರೆ ಹಳೆಯ ಬೋರ್ಡು ಶಾಲೆಯಲ್ಲಿ ಹುಡುಗರೇ ಇದ್ದಿರಲಿಲ್ಲ! ಹುಡುಗರ ಸಂಖ್ಯೆ ಹೊಸ ಖಾಸಗಿ ಶಾಲೆಯಲ್ಲಿ ಹೆಚ್ಚಾಗಿತ್ತು. ಮೊದಲೇ ಜಿಲ್ಲಾ ಬೋರ್ಡಿನವರಿಗೆ-ನಮ್ಮ ತಂದೆಯ ಮೇಲಿನ ಅಸಮಾ ಧಾನ; ತಾವು ಮಾಡುವ ಅಂದಾ ದರ್ಬಾರಿಗೆ, ಅಡ್ಡಗೆರೆ ಬರೆಯಲು ಹೋದವರವರು. ಅದನ್ನು ನಿಲ್ಲಿಸುವ ಪ್ರಯತ್ನ ಅವರು ಮಾಡದಿದ್ದಾರೆಯೇ? ಆಗ ವಿದ್ಯಾ ಇಲಾಖೆಯ ಡಿರೆ ಕ್ಟರರಾಗಿದ್ದ ಲಿಟಲ್‌ಹೈಲ್ಸ್ ಎಂಬವರು ಮಂಗಳೂರಿಗೆ ಬಂ ದರು. ಆಗ ಜಿಲ್ಲಾ ಬೋರ್ಡು ಪ್ರಸಿಡೆಂಟರು ನಮ್ಮ ತಂದೆ ಯನ್ನು ಜಿಲ್ಲೆಯ ಹೊರಗಟ್ಟುವುದು ಒಳ್ಳಿತೆಂದು ಬೋಧಿಸಿ ದರು. ಅಲ್ಲದೆ ಆ ಎರಡು ಶಾಲೆಗಳ ಸ್ಪರ್ಧೆಯನ್ನೂ ತಡೆಯ ಬೇಕಿತ್ತು. ಲಿಟಲ್‌ಹೈಲ್ಸ್‌ರವರು ಈ ವಿಚಾರದಲ್ಲಿ ದೀರ್ಘ ತನಿಖೆ ನಡೆಯಿಸಿದರು. ತನಿಖೆಯ ಪರಿಣಾಮವೇನೋ ನಮ್ಮ ತಂದೆಗೆ ಪ್ರತಿಕೂಲವಾಗಲಿಲ್ಲ. ತಾಲೂಕು ಬೋರ್ಡು ಅಧ್ಯ ಕ್ಷರ ಇಚ್ಛೆಯೂ ನೆರವೇರಿತು. ಅದರಂತೆ ನಮ್ಮ ತಂದೆಗೆ ಊರಿಂದ ವರ್ಗವಾಯಿತು. ಅದು ಮಾತ್ರ ಅವಮಾನವೆನಿಸ ಲಿಲ್ಲ. ಹೆಚ್ಚಿನ ಸಂಬಳವೂ, ಗಜೆಟು ಅಧಿಕಾರವುಳ್ಳ ಕೆಲಸ ವೂ ಅವರಿಗೆ ದೊರೆಯುವಂತಾಯಿತು. ಹಾಗೇನೆ ಆ ಎರಡು ಪ್ರಾಥಮಿಕ ಶಾಲೆಯ ಜಗಳವೂ ಇತ್ಯರ್ಥವಾಯಿತು. ಹೊಸ ಖಾಸಗಿ ಶಾಲೆಗೆ ಸರಕಾರದ ಮನ್ನಣೆ ದೊರೆಯಿತು.

ಇದೊಂದು ಘಟನೆಯಿಂದಾಗಿ— ಹಳ್ಳಿಯ ಶಾಲೆಯ ಆವರಣಗಳಲ್ಲಿ ನಮ್ಮ ತಂದೆಗಿದ್ದ ಮನ್ನಣೆ ಹೆಚ್ಚಿತು. ವಿದ್ಯಾ ಇಲಾಖೆಯಲ್ಲಿಯೂ ಅವರ ವಿಷಯದಲ್ಲಿ ಹೆಚ್ಚಿನ ಗೌರವ ಆದರಗಳು ಉಂಟಾದುವು. ನಮ್ಮ ತಂದೆಗೆ— ಜಿಲ್ಲೆಯಲ್ಲಿ ವಾಸಿಸಿಕೊಂಡಿರುವಷ್ಟು ಕಾಲ, ತಮ್ಮವರೇ ಆದ ಪ್ರತಿಷ್ಠಿತ ರೆಂಬವರೊಡನೆ ಉಂಟಾದ ಈ ತಿಕ್ಕಾಟಗಳಿಂದ, ಮನಃಶಾಂತಿ ಕೆಟ್ಟಿರಬಹುದು. ಆದರೆ ಅದನ್ನು ಅವರು ಹೊರಗೆ ಎಂದೂ ತೋರಿಸಿಕೊಂಡವರಲ್ಲ. ಆಗಿನ ದಿನಗಳಲ್ಲೊಂದು ಸಮಾ ಧಾನ— ಏನೇ ಆಗಲಿ, ಸತ್ಯ ಜಯಿಸುತ್ತದೆ— ಎಂಬ ನಂಬಿಕೆ

ನೆಲಸಿತ್ತು. ತಮ್ಮ ಆಸ್ತಿ ಮುಳುಗಿದ ಮೇಲೆ, ನಮ್ಮ ತಂದೆಗೆ ಅಂಥ ವಿಶ್ವಾಸ ನಂಬಿಕೆಗಳು ಉಳಿದಿದ್ದುವೋ ಇಲ್ಲವೋ ನಾವು ಹೇಳಲಾರೆವು. "ಸತ್ಯಕ್ಕೆ ತಕ್ಕ ನ್ಯಾಯ ದೊರೆಯಲಿ, ದೊರೆಯದಿರಲಿ! ತಾವು ಮಾತ್ರ ಹೊಲಸಿನ ಹಾದಿಗೆ ಇಳಿಯಲಿಲ್ಲ, ಅನ್ಯಾಯಕ್ಕೆ ಕೈತುರುಕಲಿಲ್ಲ"—ಎಂಬ ಆತ್ಮ ವಿಶ್ವಾಸವಾದರೂ ನಮ್ಮ ತಂದೆಯವರಿಗಿತ್ತು.

ನಮ್ಮ ತಂದೆಯ ಜಾತಕದಲ್ಲಿ 1915-1918ರ ಅವಧಿ ಕೆಡುಗಾಲವೆನಿಸಿತು. ಆಗ, ಬೆಳೆಯುವ ಸಂಸಾರದ ಆರ್ಥಿಕ ಅಡಚಣೆಗಳ ಜತೆಗೆ ಸಾವಿನ ಬರೆಯೂ ಬೀಳುವಂತಾಯಿತು. ಮುದಿ ತಾಯಿ ತೀರಿಕೊಂಡಳು; ಅದರಂತೆ ನಮ್ಮ ಅಕ್ಕ, ಮದುವೆಯಾಗಿ ಕೆಲವೇ ವರ್ಷ ಸಂದವಳು, ತೀರಿಕೊಂಡಳು. ಹಿರಿಯರ ಎದುರಿಗೆ ಮಕ್ಕಳ ಸಾವಾದರೆ ಎಂಥ ಹೃದಯಕ್ಕೂ ನೋವುಂಟಾದೀತು. ಆಕೆ–ಬಳಗದ ಮಮತೆಗೆ ಪಾತ್ರಳಾದ ವ್ಯಕ್ತಿ. ಅಂಥವಳು ತನ್ನ ಯೌವನದಲ್ಲಿ ಇನ್‌ಫ್ಲ್ಯುಯಂಜಾ ಬೇನೆ ಬಿದ್ದಳು. ದೂರದ ಕೊಳ್ಳೆಗಾಲದಲ್ಲಿ ಹೀಗಾಯಿತು. ಅದರಿಂದ ಸಾವಿನ ಆಘಾತ ನಮ್ಮ ತಾಯಿತಂದೆಯರಿಬ್ಬರನ್ನೂ ಕಂಗಾಲುಮಾಡಿತು. ಈ ಪೆಟ್ಟು ಬರಿಯ ಅವರಿಬ್ಬರಿಗಾದ ನೋವಲ್ಲ; ಅವರ ಯಾವತ್ತು ಮಿತ್ರವರ್ಗಕ್ಕೂ, ಬಂಧುಗಳಿಗೂ ಆದ ನೋವು. ನಮ್ಮ ತಂದೆಗೆ ಆಗ ಟ್ರೈನಿಂಗ್ ಶಾಲೆಯಲ್ಲಿ ಕೆಲಸವಿತ್ತು. ಈ ಅಪಘಾತದಿಂದಾಗಿ ಕ್ಲಾಸಿನಲ್ಲಿ ಕಲಿಸುತ್ತಿದ್ದಾಗಲೇ ಒಂದೆರಡು ಬಾರಿ ಕುಗ್ಗಿ ಕಂಬನಿ ಸುರಿದರಂತೆ. ನಮ್ಮ ಕುಟುಂಬದ ಒಂದು ಮಧುರವಾದ ಪ್ರಭಾವವೇ ನಮ್ಮಕ್ಕನ ಸಾವಿನಿಂದ ಅಳಿದಂತಾಯಿತು.

ಅದರಿಂದಲೂ ತಂದೆ ಚೇತರಿಸಿದರು. ಹಾಗೆ ಚೇತರಿಸಲು ಅವರಿಗೆ ಹಿತಕರವಾಗಿದ್ದ ಟ್ರೈನಿಂಗ್ ಶಾಲೆಯ ವಾತಾವರಣ ಸಹಾಯವನ್ನು ಮಾಡಿತು. ಅದು ಅಧ್ಯಾಪಕರ ತರಬೇತಿ ಶಾಲೆ, ಕನ್ನಡ ಮಕ್ಕಳಿಗೆ ಕನ್ನಡದಲ್ಲಿ ಶಿಕ್ಷಣ ಕೊಡುವ ಬಗೆಯನ್ನು ಹೇಳಿಕೊಡುವ ಶಾಲೆ. ಕವಿ, ಸಾಹಿತಿ, ಶಿಶುಪ್ರಿಯರಾಗಿದ್ದ ನಮ್ಮ ತಂದೆಗೆ ಒಗ್ಗುವ ಉದ್ಯೋಗವದು. ಆ ಉದ್ಯೋಗದಿಂದ ಅವರ ಹಲವಾರು ಕನಸುಗಳು ಜೀವಕಳೆಯನ್ನು ತಾಳಲು ತುಂಬ ಅವಕಾಶವಿತ್ತು. ಆದುದರಿಂದ ಈ ಕೆಲಸದಲ್ಲಿಯೆ ಅವರು ತಮ್ಮ ತನುಮನ ಧನಗಳನ್ನು ವ್ಯಯಿಸಿ, ಯಾವ ಆಡಂಬರವೂ, ಪ್ರದರ್ಶನವೂ ಇಲ್ಲದೆಯೆ ಕೆಲಸ ನಡೆಸಿ ಸಂತೋಷಗೊಂಡರು. ಈ ಶಾಲೆಯ ಕೆಲಸಗಳಲ್ಲಿ ಮುಳುಗಿದ ಅವರಿಗೆ ಮನೆಯೇ ಮರವೆಯಾಗುತ್ತಿತ್ತು. ದಿನವೂ ಅಲ್ಲಿಯೆ ಕಳೆದು, ರಾತ್ರಿಯ ವೇಳೆಯೂ ಅಲ್ಲೇ ಸವೆಯುತ್ತಿತ್ತು. ಅವರು ಅಲ್ಲಿ ಕಳೆದ ಒಟ್ಟು ಸಮಯ ಬರಿಯ ಎರಡು ಮೂರು ವರ್ಷಗಳ ಕಾಲ ಎಂಬುದೊಂದೇ ಅಸಮಾಧಾನದ ಸಂಗತಿ.

ಆ ಟ್ರೈನಿಂಗ್ ಶಾಲೆಯಲ್ಲಿ ಅವರಿಗೆ ದೊರೆತ ಸಹಾಯಕರೂ ತುಂಬ ಅನುಕೂಲರಾಗಿದ್ದರು. ಅವರಿಗೆ ತೀರ ಗೆಳೆಯರೂ ಸಹಚರರೂ ಆದವರಲ್ಲಿ ಶ್ರೀ ಉಳ್ಳಾಲ ಮಂಗೇಶರಾಯರು ಒಬ್ಬರು. ಇವರಿಬ್ಬರ ನಿಕಟ ಬಾಂಧವ್ಯ ಕೊನೆಯ ತನಕ ಉಳಿದದ್ದು. ಇನ್ನೊಬ್ಬರು ಸಹಾಯಕರು ಎಂ. ಬಾಬು ಎಂಬವರು. ಈ ಬಾಬು ಮಾಸ್ತರರು ನಮ್ಮ ತಂದೆಯ ಬಳಿಕ, ಗವರ್ನ್‌ಮೆಂಟ್ ಕಾಲೇಜಿನ ಕನ್ನಡ ಪಂಡಿತರಾದರು. ಇವರಿಬ್ಬರೂ ಈಗ ಕಾಲವಶರಾಗಿದ್ದಾರೆ. ತಂದೆಯ ಇನ್ನೊಬ್ಬರು ಸಹಾಯಕರು ಶ್ರೀ ಮಾಧವ ಭಟ್ಟರೆಂಬವರು ಸ್ನೇಹಪರರೂ, ನಮ್ರರೂ, ಸರಳರೂ ಆದ ವ್ಯಕ್ತಿಗಳು; ಅವರಿದ್ದಾರೆಂದೇ ತಿಳಿಯದಾಗುವಷ್ಟು ವಿನಯಶೀಲರು. ಅವರಂತು ನಮ್ಮ ತಂದೆಗೆ ಬಹುವಾದ ಸೇವೆಸಲಿಸಿದವರು. ಇನ್ನು, ಅಲ್ಲಿನ ಮಾದರಿ ಶಾಲೆಯಲ್ಲಿ ಕೆಲಸಮಾಡಿದ ಶ್ರೀ ಕೊರಿಯ–ಎಂಬವರು ವೃತ್ತಿಶಿಕ್ಷಣ ಮೊದಲಾದವನ್ನು ಮಾಡಿಕೊಂಡಿದ್ದರು. ಅವರಿಗೆ ಮುಂದಕ್ಕೆ ಮದ್ರಾಸಿಗೆ ವರ್ಗವಾಯಿತು. ಶ್ರೀ ಓಬಯ್ಯ ಮಾಸ್ತರರು ಆಗ ತೀರ ಕೆಳದರ್ಜೆಯ ಎಳೆಯರಿಗೆ ಪಾಠ ಹೇಳುತ್ತಿದ್ದರು. ಅವರಿಗೆ ಮಕ್ಕಳೊಡನೆ ಕಥೆ ಹೇಳಿ, ಮಾತನಾಡಲು ಬೇಕಾದ ತಾಯ್ತನದ ಧ್ವನಿಯಿತ್ತೆಂದು ನಮ್ಮ ತಂದೆ ಹೇಳುತ್ತಿದ್ದುದುಂಟು. ಅವರ ತಮ್ಮಂದಿರಾದ ಕೊಗ್ಗ ಮಾಸ್ತರರೆಂಬವರು ಇನ್ನೊಬ್ಬ ಸಹಾಯಕರು. ಇವರೆಲ್ಲರೊಡನೆ ನಮ್ಮ ತಂದೆ ಒಂದು ಸಂಸಾರವೆಂಬಷ್ಟು ಸಂತೋಷ, ಆದರ, ಪ್ರೀತಿಗಳಿಂದ ಜೀವನ ಸವೆದರು. ತಮ್ಮ ಸಹಚರರ ಅತ್ಯಂತ ಆದರಾಭಿಮಾನಗಳಿಗೆ ಪಾತ್ರರಾದರು.

ಈ ಟ್ರೈನಿಂಗ್ ಶಾಲೆಯಲ್ಲಿ ನಮ್ಮ ತಂದೆ ಮಾಡಿದ ಕೆಲಸ, ಸವೆದ ಜೀವನ, ಜಿಲ್ಲೆಯ ಶಿಕ್ಷಣಕ್ಕೆ ಸಂಬಂಧಿಸಿದ ಹಿರಿಯ ವಿಷಯವೆಂಬುದರಿಂದ ಸವಿಸ್ತಾರವಾಗಿ ಬರೆಯಬೇಕಾಗುತ್ತದೆ. ಅವರು ಸಬ್ ಇನ್ಸ್‌ಪೆಕ್ಟರರಾಗಿದ್ದ ಕಾಲದಲ್ಲಿ ಹಳ್ಳಿಯ ಉಪಾಧ್ಯಾಯರ ಹಳೆಯ ನೋಟವನ್ನು ಬದಲಿಸಿದರು. ಉಪಾಧ್ಯಾಯರಾಗಿ ದುಡಿಯುತ್ತಿರುವ ಹಲವರ ಪರಿಚಯ, ಸಂಭಾಷಣೆ, ಅನುಕಂಪನೆಗಳಿಂದ ಇಂಥ ಕೆಲಸ ಸಾಗಿಸಿದ ಅವರಿಗೆ, ವಿದ್ಯಾರ್ಥಿ ಉಪಾಧ್ಯಾಯರ ಗುರುಪಟ್ಟ ದೊರಕಿದುದರಿಂದ ಇನ್ನಷ್ಟು ಅನುಕೂಲವಾಯಿತು. ತಮ್ಮ ಶಿಕ್ಷಣ ವಿಚಾರಗಳನ್ನು ಜಿಲ್ಲೆಯುದ್ದಕ್ಕೂ ಹರಡಲು ಅವಕಾಶ ದೊರೆಯಿತು. ಇದು ತರಬೇತಿ ಶಾಲೆಯಷ್ಟೆ. ಅಲ್ಲಿಗೆ ಬರುತ್ತಿದ್ದ ಉಪಾಧ್ಯಾಯರು ಎಳೆಯರು; ಉತ್ಸಾಹಿಗಳು. ಬೇಕಾದಂತೆ ರೂಪಿಸಬಲ್ಲ ಹಸಿಯ ಆವೆಮಣ್ಣಿನಂತೆ ಮಿದುವಾಗಿದ್ದವರು. ಆದುದರಿಂದಲೇ—ತಂದೆಯವರ ಕೆಲಸವು ಸುಲಭವಾಯಿತು. ಇಡಿ ಜಿಲ್ಲೆಯ ಶಾಲಾ ಇನ್ಸ್‌ಪೆಕ್ಟರರಾಗಿದ್ದರೂ ಮಾಡಲಾರದಷ್ಟು ಸುಧಾರಣೆ, ಈ ಉದ್ಯೋಗದಿಂದ

ಸಾಧ್ಯವಾಯಿತು. ಆದುದರಿಂದಲೇ ನಮ್ಮ ತಂದೆಯು ಜಿಲ್ಲೆಯನ್ನು ಅಗಲಿದ ಮೇಲೆಯೂ, ನಿವೃತ್ತರಾದ ಬಳಿಕವೂ, ಅವರ ವರ್ಚಸ್ಸು ಉಳಿದುಕೊಂಡಿತು. ನಮ್ಮ ಜಿಲ್ಲೆಯ ಅನೇಕಾನೇಕ ಹಳೆಯ ಉಪಾಧ್ಯಾಯರು ಅವರ ವಿದ್ಯಾರ್ಥಿಗಳಾಗಿದ್ದರು. ಅನಂತರ ಬಂದಂಥ ಎಳೆಯ ಉಪಾಧ್ಯಾಯರ ಪೀಳಿಗೆಗೂ ಪಂಜೆ ಮಂಗೇಶರಾಯರೆಂದರೆ ತುಂಬ ಗೌರವವಿತ್ತು.

ಟ್ರೈನಿಂಗ್ ಶಾಲೆಯ ಮುಖ್ಯ ಅಧ್ಯಾಪಕರಾಗಿ ಕಳೆದ ಈ ಕಾಲವು ಅವರ ಜೀವನದಲ್ಲಿಯೇ ತುಂಬ ಫಲಕಾರಿಯೂ ಕೃತಕೃತ್ಯವೂ ಆದ ಕಾಲವೆನ್ನಬೇಕು. ಆಗಿನ ದಿನಗಳಲ್ಲಿ ಮಂಗಳೂರಿನ ಹೈಯರ್ ಎಲಿಮೆಂಟರಿ ಟ್ರೈನಿಂಗ್ ಶಾಲೆಗೆ ವಿಸ್ತಾರವಾದ ಕಟ್ಟಡಗಳೂ ಇದ್ದಿರಲಿಲ್ಲ; ಮಂತ್ರಿಗಳೇ ಬಂದು ಬಹುಮಾನ ವಿತರಣೆ ಮಾಡುವಂತಹ ಮನ್ನಣೆ ಗೌರವಗಳೂ ಇದ್ದಿರಲಿಲ್ಲ. ಈ ಬಗೆಯ ಬಡತನದ ಚಿತ್ರ ಅಷ್ಟೊಂದು ಉತ್ಸಾಹ ಹುಟ್ಟಿಸುವಂತಿಲ್ಲವಾದರೂ, ಆ ಶಾಲೆಯಲ್ಲಿ ನಡೆದ ಕೆಲಸಗಳು ಮಾತ್ರ ಅನೇಕ ಬಗೆಯ ಭರವಸೆಗಳನ್ನು ಉಂಟು ಮಾಡಿದುವು. ಆ ಶಾಲೆಯವರು ದೂರದ ಊರಿಗೆ ಹೋಗಿ ಫುಟ್‌ಬಾಲ್ ಚೆಂಡಾಟ ಗೆಲ್ಲಲಿಲ್ಲ; ಆರೋಗ್ಯ ಸಪ್ತಾಹಕ್ಕಾಗಿ ನಾಟಕವನ್ನು ಆಡಿರಲಿಲ್ಲ. ಅವರ ದುಡಿತ ಬೇರೆ ತೆರನಾದುದು. ಹೊರಗಿನ ಆಡಂಬರವಿಲ್ಲದ್ದು. ಅಲ್ಲಿಯೇ ಒಳಗೆ ಕುಳಿತು ಕೆಲಸಮಾಡುವವರು, ಆಗಾಗಲೇ ಪರಾಂಬರಿಸಿ-ಫಲಾಫಲಗಳನ್ನು ಎಣಿಕೆ ಹಾಕಲಾರದಂಥ ಕೆಲಸ ಅದು. ಅಲ್ಲಿನ ಶಿಕ್ಷಣ ಸುಧಾರಣೆಗಳ ಜತೆಗೆ, ನೆರೆದ ವಿದ್ಯಾರ್ಥಿ ಉಪಾಧ್ಯಾಯ ವೃಂದ ಒಂದು ಬಳಗವಾಗಿ ಜೀವಿಸುತ್ತಿತ್ತು. ಪ್ರಾಮಾಣಿಕತೆ, ಸರಳತೆ, ವಿನಯಪೂರಿತ ನಡತೆ ಅವರದು. ಆ ವಿದ್ಯಾರ್ಥಿಗಳಲ್ಲಿ ಹೊಸ ಜಾಗೃತಿ ಹುಟ್ಟಿತ್ತು; ತಮ್ಮ ಮುಂದಿನ ಕೆಲಸದಲ್ಲಿ ಆತ್ಮವಿಶ್ವಾಸ ಮೂಡಿತ್ತು. ಬಡ ಜೀವನ ನಡೆಯಿಸುವವರಾದರೂ — ತಾವು ಮನಸ್ಸಿನಲ್ಲಿ ಸುಖಿಗಳು, ತಮ್ಮ ಕೆಲಸ ಹಣ ತರದಿದ್ದರೂ ಪವಿತ್ರ ಕೆಲಸ, ಶಿಕ್ಷಣವೃತ್ತಿ, ವಂದ್ಯವೃತ್ತಿ — ಎಂಬೆಲ್ಲ ಭಾವನೆಗಳು ಅವರಲ್ಲಿ ಮೂಡುವಂತಾಗಿತ್ತು. ತಮ್ಮ ಮೇಲುವಾದ ನಡೆ, ನುಡಿ, ಕೆಲಸಗಳಿಂದ ಮುಂದಿನ ಜನಾಂಗವೇ ಸುಖಮಯವಾದೀತು, ಇಂದಿನ ಎಳೆಯರ ಬಾಳು ನಾಳೆಗೆ ಹಸನಾದೀತು-ಎಂಬ ಅತ್ಯವಶ್ಯವಾದ ನೋಟ, ಆಸಕ್ತಿಗಳೆರಡೂ ಆ ಉಪಾಧ್ಯಾಯ ವರ್ಗದಲ್ಲಿ ಬೇರೂರುವಂತಾಯಿತು.

ಅವರ ಎರಡನೆಯ ಪದ್ಯಪುಸ್ತಕವು ಪ್ರಕಟವಾದುದು ಈ ಕಾಲದಲ್ಲಿ. ಮೊದಲನೆಯ ಪುಸ್ತಕವು ಮುದ್ರಣವಾಗಿ ಕೆಲವು ಆವೃತ್ತಿಗಳು ಖರ್ಚಾಗಿದ್ದುವು. ಅದರಿಂದ ಅವು ಯಶಸ್ವಿಯಾಯಿತೆನ್ನಬಹುದು. ಆಗಿನ ದಿನಗಳಲ್ಲಿ ಏನೇನೂ ಶಿಶು ಸಾಹಿತ್ಯಗಳಿರಲಿಲ್ಲ. ಅಂತಹ ಒಂದು ಪುಸ್ತಕ ಬಂದಾಗ -ಅದನ್ನು ಒದಗಿಸಿಕೊಡುವಾಗ, ಅಷ್ಟೊಂದು ಧೈರ್ಯಬಂದಿರಲಾರದು. ಅದು ಪ್ರಕಟವಾದಮೇಲೆ, ಶಾಲಾ ಉಪಾಧ್ಯಾಯರಂತಹ ವ್ಯಕ್ತಿ ಬರೆದ ಪುಸ್ತಕ, ಬಹುಕಾಲ ಶಾಲೆಯ ಗೋಡೆಗಳನ್ನು ದಾಟಿ ಹೋಗಲಿಲ್ಲ. ಆದರೆ ಮೊದಲನೆ ಪುಸ್ತಕದಿಂದ ತಕ್ಕ ಆವರಣವು ಕಲ್ಪಿತವಾದ ಮೇಲೆ ಅಚ್ಚಾದ ಎರಡನೆಯ ಪುಸ್ತಕಕ್ಕೆ ಕ್ಷಿಪ್ರ ಸ್ವಾಗತ ದೊರೆಯಿತು. ಅದರಲ್ಲಿ ಸಂಪಾದಿತವಾದ ಕವನಗಳೂ ಹಲವು; ಅವುಗಳ ವಿಷಯವೂ ವಿವಿಧವಾಗಿತ್ತು. ಇದಾದ ಸುಮಾರು ಮೂರು ವರ್ಷಗಳ ಬಳಿಕ ಮೂರನೆಯ ಪದ್ಯ ಪುಸ್ತಕ ಪ್ರಕಟವಾಯಿತು. ಹೊಸಗನ್ನಡ ಸಾಹಿತ್ಯಕ್ಕೊಂದು ಹೆದ್ದಾರಿಯನ್ನೆ ಈ ಪ್ರಯತ್ನಗಳು ನಮ್ಮ ಜಿಲ್ಲೆಯಲ್ಲಿ ಹಾಕಿಕೊಟ್ಟಂತಾಯಿತು. ಅನಂತರ ಪ್ರಕಟವಾದ ಅಜ್ಜಿಕಥೆಗಳೆಂಬುವು ಸಾವಿರಾರು ಸಂಖ್ಯೆಯಿಂದ ವಿಕ್ರಯವಾದುವು. ಅದರಿಂದ ವಿಶೇಷ ಹಣ ತಂದೆಯವರಿಗೆ ಬಂದಿರಲಾರದಾದರೂ, ತಮ್ಮ ಕವನಸಂಗ್ರಹ ಎಳೆಯಮಕ್ಕಳಲ್ಲಿ ಹೆಚ್ಚಾಗಿ ಪ್ರಚಾರಗೊಂಡುದಕ್ಕೆ, ಮಕ್ಕಳ ನಲಿವು ಸಂತೋಷಗಳಿಗೆ ಕಾರಣವಾದುದಕ್ಕೆ ಅವರು ತುಂಬ ಸಂತೋಷಗೊಂಡರು. ತನ್ನಾಸೆಯ ಬಿತ್ತು ಒಳ್ಳೆಯ ನೆಲದಲ್ಲಿ ಬಿದ್ದು, ಮೊಳೆತು, ಹೂಬಿಟ್ಟಿತಲ್ಲ ಎಂಬ ಹಿಗ್ಗುಂಟಾಯಿತು. ಅವರ ವಿಚಾರಗಳು, ಪ್ರಯತ್ನಗಳು ನಿಧಾನವಾಗಿಯಾದರೂ ಜಿಲ್ಲೆಯ ಶಿಕ್ಷಣ, ಸಾಹಿತ್ಯ ರಾಜ್ಯಗಳಲ್ಲಿ ಮನ್ನಣೆಪಡೆದು ಸಾರ್ಥಕಗೊಂಡುವು.

ನಮ್ಮ ತಂದೆಯವರ ಶೈಕ್ಷಣಿಕ ಸುಧಾರಣೆ, ಅಭಿವೃದ್ಧಿಗಳ ವಿಚಾರವಾಗಿ ಹೇಳುವಾಗ ಜೆ. ಎ. ಯೇಟ್ಸ್ ಎಂಬ ವಿದ್ಯಾಧಿಕಾರಿಗಳ ಹೆಸರನ್ನು ಹೇಳದಿದ್ದರೆ ತೀರ ತಪ್ಪಾದೀತು. ಅವರು ಆಕ್ಸಫರ್ಡ್ ವಿದ್ಯಾಲಯದ ಎಂ.ಎ.ತೇರ್ಗಡೆಯಾಗಿ, ಹೊಸದಾಗಿ ರಚಿತವಾದ ಬೆಂಗಳೂರು ವೃತ್ತದ ಶಾಲಾ ಇನಸ್ಪೆಕ್ಟರರಾಗಿ ಬಂದವರು. ಆ ವೃತ್ತಕ್ಕೆ–ಕೊಡಗು, ದಕ್ಷಿಣ ಕನ್ನಡ ಜಿಲ್ಲೆಗಳು ಸೇರಿದ್ದುವು; ಅವರು ಬಂದ ಕಾಲ ಸುಮಾರು ೧೯೧೫. ಬ್ರಿಟಿಷರು ನಮ್ಮನ್ನಾಳಿದ ಕಾಲದಲ್ಲಿ ನಮ್ಮ ಜನಕ್ಕಾಗಿ, ನಮ್ಮವರಿಗಿಂತ ಹೆಚ್ಚಿನ ಸೇವೆ ಸಲ್ಲಿಸಿದ ಬಿಳಿಯ ನೌಕರರಲ್ಲಿ ಅವರು ಒಬ್ಬರೆನ್ನಬಹುದು. ಅವರು ಇತಿಹಾಸ, ಸಂಸ್ಕೃತಿಗಳ ವಿಚಾರವನ್ನರಿತ ವಿದ್ವಾಂಸರು; ದಕ್ಷಿಣ ಹಿಂದುಸ್ಥಾನದ ಭಾಷೆಗಳಲ್ಲಿ ಆಸಕ್ತರಾದವರು; ಪಾಶ್ಚಾತ್ಯ ಸಂಗೀತದಲ್ಲಿ ನುರಿತ ಪಂಡಿತರು; ಅಲ್ಲದೆ ತಾವೇ ವಾಯಲಿನ್ ಬಾರಿಸುವ ನೈಪುಣ್ಯ ಗಳಿಸಿದವರು. ಅದರಂತೆ ಭಾರತೀಯ ಸಂಗೀತವನ್ನು ಅಭ್ಯಸಿಸಲು ಪ್ರಯತ್ನಿಸಿದವರು. ಒಳ್ಳೆಯ ಶೀಲ, ಉದಾರ ದೃಷ್ಟಿ, ಸರಳ ಜೀವನ ಅವರದು. ಯಾರನ್ನೂ ಕಂಡು ಮೂಗು ಮುರಿಯುವವರಲ್ಲ. ತುಂಬ ಸಾತ್ವಿಕರಾದ ಇವರು ಐರಿಷ್ ಜನಾಂಗಕ್ಕೆ ಸೇರಿದವರು.

ಅವರ ನೀಲಗಣ್ಣುಗಳ ಮೂಲೆಗಳಲ್ಲಿ ಚರ್ಮ ನಿರಿಗಟ್ಟಿತ್ತು. ಅವರು ಏನನ್ನಾದರೂ ಪರಿಶೀಲಿಸುವಾಗ, ಆಲಿಸುವಾಗ— ಈ ನಿರಿಗೆಗಳು ಅವರ ಏಕಾಗ್ರಚಿತ್ತತೆಯನ್ನೂ ಆಸಕ್ತಿಯನ್ನೂ ಸೂಚಿಸುವಂತಿದ್ದುವು. ಮಾತಿನಲ್ಲಿ ಶಾಂತರು; ಸಂಭಾಷಣಾಪರರು; ಮಿದು ಹಾಸ್ಯಮುಖಿಗಳು.

ನಮ್ಮ ತಂದೆಯ ಶಿಕ್ಷಣ ಸುಧಾರಣಾ ಹುಚ್ಚಿಗೆ ನಿಜವಾದ ಬೆಂಬಲ, ಮನ್ನಣೆಗಳು ದೊರೆತುದು ಈ ಯೇಟ್ಸರವರ ದೆಸೆಯಿಂದ. ಅವರ ಸ್ನೇಹ, ಆದರ್ಶ, ಪ್ರೋತ್ಸಾಹಗಳಿಂದ. ಅವರಿಂದ ನಮ್ಮ ತಂದೆ ಕಲಿತುಕೊಂಡ ಸಂಗತಿಗಳೂ ನೂರಾರಿರಬಹುದು. ಯೇಟ್ಸರವರೂ ನಮ್ಮ ತಂದೆಯಲ್ಲೊಬ್ಬ ಅಪೂರ್ವ ವ್ಯಕ್ತಿಯನ್ನು ಕಂಡರು. ಬರಿದೆ ಇಂಗ್ಲಿಷ್ ಕನ್ನಡ ಬಲ್ಲ ಪಂಡಿತನನ್ನು ಕಾಣುವ ಬದಲು—ಆಧುನಿಕ ಆದರ್ಶಗಳನ್ನು ಅರಿಯಬಲ್ಲ, ಸ್ವದೇಶದ ಚರಿತ್ರೆ ಸಂಸ್ಕೃತಿಗಳ ವಿಶಾಲ ಪರಿಚಯವುಳ್ಳ ವ್ಯಕ್ತಿಯನ್ನು ತಾನು ಸಂಧಿಸುತ್ತಿದ್ದೇನೆ-ಎಂಬ ಅನುಭವ ಅವರಿಗೂ ಆಗಿರಬೇಕು. ಈ ಉಭಯತರ ಮಾನಸಿಕ ಮಿತ್ರತ್ವ ಬಹಳವಾಗಿತ್ತು. ನಮ್ಮ ತಂದೆಯ ಜೀವದ ಸ್ಮರಣೆಗಳಲ್ಲಿ ಈ ಅಪೂರ್ವ ವ್ಯಕ್ತಿಯನ್ನು ಕುರಿತು ಉಂಟಾದ ಸವಿ ನೆನಪುಗಳು ಹಲವಾರು ಇದ್ದಿರಬೇಕು.

ಯೇಟ್ಸರವರು ಭರತಖಂಡದಲ್ಲಿದ್ದಷ್ಟುಕಾಲ ಅವರ ಸ್ನೇಹ, ಸಂಪರ್ಕಗಳು ಉಳಿದುಕೊಂಡುವು. ಅವರು ನಿಜವಾಗಿ ನೀಡಿದ ಬೆಂಬಲವಲ್ಲದೆ ಹೋದರೆ,ನಮ್ಮ ತಂದೆಯವರ ಆಸೆ ಉತ್ಸಾಹಗಳು ಉಳಿಯುತ್ತಿರಲಿಲ್ಲ.ಅವರು ಅಧಿಕಾರದಲ್ಲಿದ್ದಷ್ಟುಕಾಲ-ಸುತ್ತಲಿನ ಜನತೆಯೂ, ಪ್ರತಿಷ್ಠಿತರೂ ತೋರಿದ ಅಸೂಯೆ, ಕೊಡುತ್ತಿದ್ದ ಕಿರುಕುಳಗಳಿಗಾಗಿ ನಮ್ಮ ತಂದೆ ಬೆದರಲೇ ಬೇಕಾಗಿರಲಿಲ್ಲ. ನಮ್ಮ ತಂದೆಯವರನ್ನು ಕಾಡಲು ಹೊರಟ ವ್ಯಕ್ತಿಗಳು-ಸಿರಿವಂತರು, ಸ್ವಜಾತಿಯ ಪ್ರತಿಷ್ಠಿತರು, ಅಧಿಕಾರದಿಂದ ಹಿರಿಯ ಸ್ಥಾನಗಳಲ್ಲಿ ನಿಂತು, ಕಣಕಿಕಾಡುವ ಶಕ್ತಿಯಿದ್ದು, ಅವೆಲ್ಲವನ್ನೂ ಮಾಡಿದವರು. ಅವುಗಳನ್ನೆಲ್ಲ ತಡೆದು ಸಹಿಸಿ ನಿಲ್ಲುವಶಕ್ತಿ-ಪರದೇಶಿಯರಾಗಿದ್ದ ಯೇಟ್ಸರ ಬೆಂಬಲದಿಂದ ಬಂದಿತೆನ್ನಬೇಕು.

1918-21ರ ತನಕ ನಮ್ಮ ತಂದೆ ಟ್ರೈನಿಂಗ್ ಶಾಲೆಯ ಕೆಲಸದಲ್ಲಿದ್ದರೂ ಬರಿಯ ಇದೊಂದೇ ಚಟುವಟಿಕೆಯಲ್ಲಿ ಮುಳುಗಿರಲಿಲ್ಲ. ನಮ್ಮ ಜಿಲ್ಲೆಗೆ ಆ ವೇಳೆಗೆ ಕಾಲಿರಿಸಿದ ಸಹಕಾರಿ ಚಳುವಳಿಯಲ್ಲಿ ಅವರು ಆಸಕ್ತಿವಹಿಸಿದರು. ಅಲ್ಲಲ್ಲಿ ವಿದ್ಯಾಪರಿಷತ್ತುಗಳನ್ನು ಜರುಗಿಸಿದರು; ಪ್ರಾಥಮಿಕ ಶಿಕ್ಷಣ ವಿಚಾರದಲ್ಲಿ ಪ್ರಕಟಣೆಗಳನ್ನು ಹೊರಡಿಸಿದರು. ಶಾಲಾ ಸಲಕರಣೆಗಳ ವಿಚಾರದಲ್ಲಿ ಕೆಲಸಮಾಡಿದರು. ಅದರ ಜತೆಗೆ ಜಾತಿ-ಸುಧಾರಣೆಯ ವಿಚಾರದಲ್ಲೂ ಪ್ರಯತ್ನಿಸಿದರು. ಅವರು ಮುಖ್ಯ ಅಧ್ಯಾಪಕರಾಗಿ ಬರುವ ಸ್ವಲ್ಪ ಸಮಯದ ಮೊದಲು ಹರಿಜನ ವಿದ್ಯಾರ್ಥಿಗಳಿಗೆ ಟ್ರೈನಿಂಗ್ ಶಾಲೆಯಲ್ಲಿ ಪ್ರವೇಶ ದೊರಕಿತ್ತು. ಆಗ ಉಳಿದ ಹಲವಾರು ಮೇಲು ಜಾತಿಯ ವಿದ್ಯಾರ್ಥಿಗಳಿಂದ ಅದಕ್ಕೆ ತುಂಬ ವಿರೋಧ ಹುಟ್ಟಿತು. ನಮ್ಮ ತಂದೆ ಅಲ್ಲಿನ ಹೊಣೆ ಹೊರಲು ಬಂದರೆ-ಎರಡೆರಡು ಅಡಚಣೆಗಳು ಎದುರಿಗಿದ್ದುವು. ಜಾತೀಯತೆಯ ದ್ವೇಷ್ಯಹೋಗಲಾಡಿಸುವ ಅವಶ್ಯ ಕೆಲಸ ಒಂದು ಕೆಲಸ. ಉಳಿದ ವಿದ್ಯಾರ್ಥಿ ಉಪಾಧ್ಯಾಯರಿಂದ ಬರುವ ವಿರೋಧವನ್ನು ತಡೆಯುವುದೊಂದು ಕೆಲಸ. ಆದರೆ ಯಾವದಾರಿಯಿಂದಲೋ, ಈ ಸಮಸ್ಯೆ ಬಗೆಹರಿದು ಶಾಂತ ವಾತಾವರಣ ಕಲ್ಪಿತವಾಯಿತು. ಒಂದು ದಿನ ಹರಿಜನ ವಿದ್ಯಾರ್ಥಿಗಳು ಶಾಲೆಗೆ ಬರುವುದು ಸಾಧ್ಯವಾದದ್ದಲ್ಲದೆ-ಅವರೊಡನೆ ಇತರರೂ ಸೇರಿ ಮಿತ್ರಭೋಜನ ಸಹ ಮಾಡುವಂತಾಯಿತು. ಆ ಭೋಜನದಲ್ಲಿ ನಮ್ಮ ತಂದೆಯೊಡನೆ, ಕೈ. ಶ್ರೀ ಉಳ್ಳಾಲ ಮಂಗೇಶರಾಯರು ಭಾಗವಹಿಸಿದ್ದರು. ಈ ಕಾಲದಲ್ಲಿ ನಮ್ಮ ತಂದೆ ಬರೆದ ಕವನವಾದ "ಉಳ್ಳಯ್ಯ, ದಯೆಗೊಳ್ಳಯ್ಯ." ಎಂಬ ಹಾಡನ್ನು ಶಾಲಾ ವರ್ಧಂತಿಯ ದಿನ ಹರಿಜನ ವಿದ್ಯಾರ್ಥಿಗಳು ಹಾಡಿದರು.

ತಂದೆಯವರು ಟ್ರೈನಿಂಗ್ ಶಾಲೆಯಿಂದ 1921ರಲ್ಲಿ ಕೊಡಗಿಗೆ ವರ್ಗವಾದರು. ತಮ್ಮ ಕೆಲಸದ ದೆಸೆಯಿಂದ ಮದ್ರಾಸು ಎಜ್ಯುಕೇಶನಲ್ ಸರ್ವಿಸಿಗೆ ಅವರನ್ನು ಕೊಂಡು ಬಡತಿಕೊಟ್ಟು, ಕೊಡಗಿನ ಎಸಿಸ್ಟಾಂಟ್ ಶಾಲಾ ಇನಸ್ಪೆಕ್ಟರರಾಗಿ ವರ್ಗವಾಯಿತು. ಅವರ ಮುಖ್ಯ ಕಚೇರಿಯಿರುವುದು ಮಡಿಕೇರಿಯಲ್ಲಿ.

ಒಂದು ದೃಷ್ಟಿಯಿಂದ ನೋಡಿದಲ್ಲಿ ನಮ್ಮ ತಂದೆಗೆ ಕೊಡಗಿಗೆ ವರ್ಗವಾದುದು ಅಷ್ಟೊಂದು ಹಿತಕರವಾಗಲಿಲ್ಲ. ಇಪ್ಪತ್ತು ವರ್ಷಕಾಲ ದಕ್ಷಿಣಕನ್ನಡದಲ್ಲೇ ಜೀವಿಸಿದವರಿಗೆ ಅದೊಂದು ಹೆಚ್ಚಿನ ಸ್ಥಳಾಂತರವೆನಿಸಿತು. ಕೊಡಗು ಒಂದು ಮೂಲೆಯ ಊರು. ದಕ್ಷಿಣ ಕನ್ನಡ ವಿದ್ಯಾಭಿವೃದ್ಧಿಯಲ್ಲಿ ಮುಂದುವರಿದಿತ್ತು. ಆ ಅಭಿವೃದ್ಧಿ ಕೊಡಗಿನಲ್ಲಿಲ್ಲ. ಅದು ರಾಜಕೀಯವಾಗಿ, ಭೂಗೋಲಿಕವಾಗಿ ವ್ಯಾಪಾರ ವಾಣಿಜ್ಯಗಳ ದೃಷ್ಟಿಯಿಂದಲೂ ಹಿಂದೆಬಿದ್ದ ಭಾಗವಾಗಿತ್ತು. ಅಂಥ ಪ್ರದೇಶದಲ್ಲಿ ಅಭಿವೃದ್ಧಿ ಸುಧಾರಣೆಗಳಿಗೆ ಹೆಚ್ಚಿನ ಅವಕಾಶವಿದ್ದರೂ ಆ ಕೆಲಸ ತುಂಬ ಕಷ್ಟಸಾಧ್ಯವಾಗಿತ್ತು. ಅಲ್ಲಿನ ಶಾಲೆಗಳ ಸಂಖ್ಯೆ ಕಡಿಮೆ,ವಿರಳ. ನಾಪೊಕ್ಲು,ತಿತ್ತಿಮತ್ತಿಯಂತಹ ಮೂಲೆಗಳಿಗೆ ಹೋಗಿ ಬರಲು ಎತ್ತಿನ ಗಾಡಿಯೊಂದೇ ವಾಹನ ಸೌಕರ್ಯವಾಗಿತ್ತು. ಅಲ್ಲದೆ ಕೊಡಗಿನಲ್ಲಿ ನೌಕರಿ ಮಾಡುವುದಕ್ಕೂ ಇತರ ಅಡಚಣೆಗಳಿದ್ದುವು. ಕೊಡಗರಲ್ಲದವರಿಗೆ ಅದು ಹಿತಕರವಲ್ಲದ ಆವರಣವಾಗಿತ್ತು. ಅಲ್ಲಿ ತಮ್ಮ ಕೆಲಸಗಳನ್ನು ನಿರ್ಭೀತಿಯಿಂದ ಮಾಡುವುದು ಸಾಧ್ಯ

ವಿರಲಿಲ್ಲ. ಆದುದರಿಂದ ನಮ್ಮ ತಂದೆಯವರು ಆರಂಭದಿಂದ ಲೂ ಜಾಗ್ರತೆಯಿಂದ ಇರುತ್ತಿದ್ದರು. ನಮ್ಮ ತಂದೆಯ ಆಹಾರ, ಉಡುಗೆ ಸರಳ ತೆರನಾದುದು. ಆ ವಿಷಯದಲ್ಲೂ ಅವರು ಸ್ಥಳಿಕರೊಡನೆ ಬೆರೆತು ಜೀವಿಸುವುದು ಸುಲಭವಾಗಲಿಲ್ಲ.

ಆದರೂ ನಮ್ಮ ತಂದೆ ತಮ್ಮ ಆರೋಗ್ಯ, ಮನಸ್ಸಿನ ತೋಲಗಳನ್ನೆ ಕೆಡಿಸಿಕೊಳ್ಳದೆ ಹಸನ್ಮುಖಿಗಳಾಗಿಯೇ ಇದ್ದರು. ಅವರ ಸಾಹಿತ್ಯ ಸೇವೆಯ ಕೆಲಸವು—ಹೊರಗಿನ ವಾತಾವರಣದಿಂದ ಕಡಿಮೆಯಾಗ ಬೇಕಾಯಿತು. 1918-21 ರ ತನಕ ಅವರ ಸಾಹಿತ್ಯ ಪ್ರವೃತ್ತಿ, ಕೆಲಸಗಳು ತುರೀಯಾವಸ್ಥೆಗೆ ಮುಟ್ಟಿದ್ದು, ಇಲ್ಲಿಗೆ ಬರುತ್ತಲೇ ತೀರ ತಗ್ಗಿದುವು. ಉತ್ಸಾಹ ಕುಗ್ಗಿ, ಆತುರತೆಯುಂಟಾಯಿತು. ಈ ಬಗೆಯ ಅವನತಿ ಸಾಹಿತ್ಯ ಕ್ಷೇತ್ರದಲ್ಲಿ ಕಾಣಿಸಿದಂತೆ, ಶಿಕ್ಷಣ ಕ್ಷೇತ್ರದಲ್ಲೂ ಕಾಣಿಸಿತು. ಅವರು ಕೊಡಗಿನಲ್ಲೂ ಬೋರ್ನ್‌ರವರ-ನೇರ ಶಿಕ್ಷಣ ಪದ್ಧತಿಯನ್ನು ಪ್ರಚಾರಕ್ಕೆ ತರತೊಡಗಿದರು. ಅದರ ನಡೆ ಮಾತ್ರ ಮಂದ ಗತಿಯಿಂದ ಸಾಗಿತು. ದಕ್ಷಿಣ ಕನ್ನಡದ ಉಪಾಧ್ಯಾಯರಲ್ಲಿ ಕಂಡುಬಂದ ಉತ್ಸಾಹ, ಅಲ್ಲಿನ ಬಹುಮಂದಿ ಉಪಾಧ್ಯಾಯರಲ್ಲಿ ಕಂಡುಬರಲಿಲ್ಲ. ಅದು ಅವರ ತಪ್ಪಲ್ಲ. ನಮ್ಮ ತಂದೆಯಿಂದ ಕಲಿಯತಕ್ಕ ಅಂಶವೇನಿಲ್ಲ ವೆಂದು ಅವರು ತಿಳಿದಂತಿತ್ತು. ಅಲ್ಲದೆ ಅಲ್ಲಿನ ಉಪಾಧ್ಯಾಯರು ಮೇಲಿನ ನೌಕರರೊಡನೆ ಸರಿಸಮಾನತೆಯಿಂದ ಬೆರೆಯಲು ಅಂಜಿದರು, ನಾಚಿದರು. ಹೀಗಾಗಿ ಕೊಡಗಿನಲ್ಲಿ ನಮ್ಮ ತಂದೆಯಿದ್ದಷ್ಟು ಕಾಲ—ಸಾಹಿತಿಯಾಗಿಯಾಗಲಿ, ಶಿಕ್ಷಕನಾಗಿಯಾಗಲಿ—ಹತ್ತಿರದ ನಾಲ್ಕೆಂಟು ಮಿತ್ರರಿಗಿಂತ, ಹೆಚ್ಚಿನ ಪರಿಚಯ ಪ್ರಸಿದ್ಧಿಗಳೆರಡೂ ನಮ್ಮ ತಂದೆಗೆ ಬರಲಿಲ್ಲ.

ಕೊಡಗಿನಲ್ಲಿ ಎರಡು ವರ್ಷಗಳ ಕಾಲ ಎಸಿಸ್ಟಾಂಟ್ ಶಾಲಾಇನ್ಸ್ಪೆಕ್ಟರರಾಗಿ ಕಳೆದ ಮೇಲೆ ನಮ್ಮ ತಂದೆ, ಸೆಂಟ್ರಲ್ ಹೈಸ್ಕೂಲಿನ ಮುಖ್ಯ ಅಧ್ಯಾಪಕರಾಗಿ ನೇಮಿತರಾದರು. ಇದು ಅವರ ಒಳಿತಿಗೇ ಆಯಿತು. ಕೊಡಗಿನ ಶೀತ ಹವೆಯಲ್ಲಿ ಒಂಟಿ ಜೀವನ ಮಾಡಿಕೊಂಡಿದ್ದ ಅವರು ಹಾಗೆಯೇ ಮುಂದುವರಿದಿದ್ದರೆ ಅವರ ಆರೋಗ್ಯವೂ ಕೆಡುತ್ತಿತ್ತು. ಹೀಗಾಗಿ ಒಂದೇ ಕಡೆ ಇರಲು ಅವಕಾಶವನ್ನು ಕೊಟ್ಟ ಹೆಡ್‌ಮಾಸ್ತರಿಕೆಯಿಂದ ಅವರಿಗೆ ಅನುಕೂಲವೇ ಆಯಿತು. 1923ರಲ್ಲಿ ಅವರು ತಮ್ಮ ಮಂಗಳೂರಿನ ಬಿಡಾರವನ್ನು ಮಡಿಕೇರಿಗೆ ಸಾಗಿಸಿದರು. ಪರಿಮಿತ ಆವರಣದಲ್ಲಿ ಕೆಲಸ ಮಾಡತೊಡಗಿದರು. ಅವರ ಸುದೈವಕ್ಕೆ ಶಾಲೆಯಲ್ಲಿ ಅವರಿಗೆ ಕೆಲವರು ಪ್ರಿಯ ಸಹಚರರೂ ದೊರಕಿದರು. ಅವರಲ್ಲಿ ಮುಖ್ಯತ; ಶ್ರೀ ಹರಿ ಶೆಣಾಯಿ, ಶ್ರೀ ರಾಘವೇಂದ್ರ ರಾವ್, ಶ್ರೀ ಜಿ. ಗಣೇಶರಾವ್ ಮೊದಲಾದವರು. ನಮ್ಮ ತಂದೆಗೆ ತಾನು ತೀರ ಕೆಳಗಿನ ತರಗತಿಗಳನ್ನು, ಅಂದರೆ ಎಳೆಯರ ಶಿಕ್ಷಣವನ್ನು ನಿರ್ವಹಿಸ ಬೇಕೆಂಬ ಆತುರ. ಆದರೆ ಅಲ್ಲಿನ S. S. L. C. ಫಲಿತಾಂಶ ತುಸು ನಿಕೃಷ್ಟವಾಗಿದ್ದುದರಿಂದ—ಅದಕ್ಕೆ ಗಮನ ಕೊಡಬೇಕಾಯಿತು. ಶಾಲೆಯ ಯೋಗ್ಯತೆಯನ್ನು ಪರೀಕ್ಷಾ ಫಲದಿಂದ ತೂಗಿ ನೋಡುವ ದಿನಗಳಲ್ಲಿ ಅವರು ಹೀಗೆ ಮಾಡದೆ ಉಪಾಯವಿರಲಿಲ್ಲ. ತಮ್ಮ ಗೆಳೆಯರ ಸಹಕಾರದಿಂದ ಮೇಲಿನ ತರಗತಿ ಕಡೆಗಳಿಗೇನೆ ಹೆಚ್ಚಿನ ಗಮನ ನೀಡಬೇಕಾಯಿತು. ಆ ಕೆಲಸ ಸಾಕಷ್ಟು ನಡೆದ ಬಳಿಕ ಅವರು ತಮ್ಮ ಮನಸ್ಸನ್ನು ತಿರುಗಿ ಎಳೆಯ ಮಕ್ಕಳ ತರಗತಿಗಳ ಕಡೆಗೆ ಹರಿಸಿದರು; ಅದರಿಂದ ಅವರ ಮನಸ್ಸಿಗೆ ತೃಪ್ತಿಬಂದಿತು.

ಈ ಕಾಲದಲ್ಲಿ—ಹಿಂದೆ ಟ್ರೈನಿಂಗ್ ಶಾಲೆಯಲ್ಲಿ ಅವರಿಗಿದ್ದಷ್ಟು ಸ್ವಾತಂತ್ರ್ಯವಿರಲಿಲ್ಲ. ಕಲಿಸುವುದರ ಜತೆಗೆ ಶಾಲೆಯ ಆಡಳಿತೆಯ ಹೊರೆಯು ಬಲವಾಗಿತ್ತು. ಆಫೀಸು ಕೆಲಸವನ್ನು ಬಹು ಎಚ್ಚರದಿಂದ ನಿರ್ವಹಿಸಬೇಕಾಗಿತ್ತು. ಸಾಮಾನ್ಯವಾಗಿ ಈ ಕೆಲಸದಲ್ಲಿ ಹೆಚ್ಚಿನ ತೊಂದರೆಗಳೇನೂ ಬರಲಿಲ್ಲ. ಅವರ ವಿಚಾರದಲ್ಲಿ-ಅಲ್ಲಿ ಇಲ್ಲಿ ಕೊಡಗಿನ ಹೊಸ ಲೆಜಿಸ್ಲೇಟಿವ್ ಎಸೆಂಬ್ಲಿಯಲ್ಲಿ ಒಂದು ಪ್ರಶ್ನೆಯನ್ನು, ಸ್ಥಳಿಕ ಪತ್ರಿಕೆಯಲ್ಲಿ ಒಂದು ಬಾತಮಿಯನ್ನು ಹಾಕಿದವರುಂಟು. ಅದು ಆಡಳಿತೆಯಲ್ಲಿ ಕೊಡಗರನ್ನು ಮಾತ್ರ ತೆಗೆದುಕೊಳ್ಳಲಿಲ್ಲವೆಂಬ ದೂರಿಗೆ ಸಂಬಧಿಸಿದುದು. ಇಷ್ಟೇ ಅಲ್ಲದೆ ಇನ್ನೇನೂ ತೊಡಕು ಬರಲಿಲ್ಲ.

ಅಂತು ನಮ್ಮ ತಂದೆಯ ತೀರ ಸುಖಮಯ ಕಾಲ ಸರಿದಂತೆ. ಅಧಿಕಾರದ ಹೊರೆ, ಆತುರಗಳು ಒಂದು ಕಡೆಯಿರುವಾಗಲೇ ಸಂಸಾರಿಕ ತಾಪತ್ರಯಗಳ ಒತ್ತಡವೂ ಸೇರಿಕೊಂಡಿತು. ನಾವೆಲ್ಲ ಮಕ್ಕಳು ಬೆಳೆದು ಬಂದೆವು; ನಮ್ಮ ವಿದ್ಯಾಭ್ಯಾಸ ನೌಕರಿಗಳ ಪ್ರಶ್ನೆಗಳು ಒಂದೊಂದಾಗಿ ತಲೆಯೆತ್ತಿ ನಿಂತುವು. ನಮ್ಮ ತಾಯ ಆರೋಗ್ಯ ಕೆಡುತ್ತಿತ್ತು. ಸೇವಕರ ಸಮಸ್ಯೆ, ಔಷಧದ ವೆಚ್ಚ, ಮಗಳ ಮದುವೆ, ಮಂಗಳೂರಲ್ಲಿ ಅವರು ತೊಡಗಿದ ಬಾಲಸಾಹಿತ್ಯಮಂಡಲದ ಕಷ್ಟಗಳು ಒಂದೊಂದಾಗಿ ಬೆಳೆಯತೊಡಗಿದುವು. ಅವರ ಚುರುಕಿಗೆ ಕಡಿಮೆಯಿರಲಿಲ್ಲವಾದರೂ ನಾಲ್ಕನೆಯ ದಶಕ ಮುಗಿದು ಐದಕ್ಕೆ ಕಾಲಿರಿಸುವಾಗ, ಉತ್ಸಾಹ ತಗ್ಗುತ್ತ ಬಂದು, ನಿವೃತ್ತಿಯಾಗುವುದೆಂದು — ಎಂದು ಸಮಯ ನಿರೀಕ್ಷಿಸುವಂತಾಯಿತು.

ಅವರ ಸಾಮಾಜಿಕ ಜೀವನ ಮಂಗಳೂರಿನಷ್ಟು ಕೊಡಗಿನಲ್ಲಿ ವಿಶಾಲವಾಗಿರಲಿಲ್ಲ. ಅವರು ಮೊದಲಿನಿಂದಲೂ ಇತರರ ಮನೆಗೆ ಹೋದವರಲ್ಲ; ಅದರಂತೆ ಎಲ್ಲರನ್ನೂ ಮನೆಗೆ ಉಪಚಾರಕ್ಕಾಗಿ ಬರಮಾಡಿಕೊಂಡವರಲ್ಲ. ಆದರೂ-ಸ್ನೇಹಿತರನ್ನು ಸಂಪಾದಿಸಿದ್ದರು; ಅವರನ್ನು ಸಂಭಾಷಣೆ ವಿನೋದಗಳಿಂದ ನಗಿಸಿದ್ದರು. ಈ ಗುಣ ಅವರಲ್ಲಿ ಮುಖ್ಯವಾಗಿತ್ತು. ಅವರಿಗೆ ಮಡಿಕೇರಿಯಲ್ಲಿ ಆಪ್ತರಾಗಿ ದೊರಕಿದವರು ಕಡಿಮೆ. ಬೇರೆ

ಯುವುದಕ್ಕೆ ಎಲ್ಲರೊಡನೆಯೂ ಅವರು ಬೆರೆಯುತ್ತಿದ್ದರು; ಹಬ್ಬ, ಹರಿದಿನಗಳಿಗೆ ಹೋಗುತ್ತಿದ್ದರು. ಕ್ಲಬ್ಬು, ಆಟಗಳಲ್ಲಿ ಬೆರೆಯುತ್ತಿದ್ದರು. ಆದರೂ ಅವರಿಗೆ ಆಪ್ತರ ಸಂಖ್ಯೆ ಕಡಿಮೆಯೇ. ತಮ್ಮ ವಿರಾಮದ ವೇಳೆಯನ್ನು ಅವರು, ಮಕ್ಕಳಾದ ನಮಗೆ ಪಾಠ ಹೇಳುವುದರಲ್ಲಿ ಕಳೆಯುತ್ತಿದ್ದರು. ನಮಗಾಗಿ ಕವನಗಳನ್ನು ಓದುತ್ತಿದ್ದರು. 1926ರ ತನಕ ನಾವು ಕೊಡಗಿನಲ್ಲಿ ಕಳೆದ ಮೂರು ವರ್ಷಗಳ ಕಾಲವು ಕೊಡಗಿನ ಭವ್ಯ, ಉನ್ನತ ಬೆಟ್ಟಗಳ ಮೇಲೆ ಉರುಳಿ ಸರಿದ ಬೂದು ಬಣ್ಣದ ಮುಗಿಲುಗಳ ರಾಶಿಯಂತೆ ಸರಿಯಿತು.

ನಮ್ಮ ತಂದೆಯು ಕೊಡಗಿನಲ್ಲಿರುವಾಗ ಒಂದಲ್ಲ ಒಂದು ಕೆಲಸದಲ್ಲಿ ನಿರತರಾಗಿದ್ದರೂ, ಅವರು ಬರೆದುದು ಕಡಿಮೆ. ಬಾಲಸಾಹಿತ್ಯ ಮಂಡಲಕ್ಕಾಗಿ ಕೆಲವು ಕತೆಗಳನ್ನು ಬರೆದರು; ಕೋಟಿ ಚೆನ್ನಯರ ಕತೆಯನ್ನು ಬರೆದುದು ಮಡಿಕೇರಿಯಲ್ಲಿ. ಹುತ್ತರಿಹಾಡಿನ ಜನ್ಮವು ಈ ಕೊಡಗಿನಲ್ಲೇ ಆಯಿತು. ಕೊಡಗಿನ ಜನಜೀವನವನ್ನು ಎವೆ ಬಿಡದೆ ನೋಡಿ, ಜನರಲ್ಲಿನ ಒಳಿತಿಗೆ ಎಂದೂ ಕುರುಡರಾಗಿರದ ಅವರು, ಇಂಥ ಕವನವನ್ನು ಬರೆದುದರಲ್ಲಿ ಆಶ್ಚರ್ಯವೇನಿಲ್ಲ.

ನಮ್ಮ ತಂದೆಯವರು 1928ರ ತನಕ ಮಡಿಕೇರಿಯಲ್ಲಿ ವಾಸವಾಗಿದ್ದು, ಅನಂತರ ನಿವೃತ್ತಿಗೆ ಮುಂಚಿತವಾಗಿ ರಜೆಯನ್ನು ಪಡೆದು ಮಂಗಳೂರನ್ನು ಸೇರಿದರು. ಅವರ ಶ್ರಮಕ್ಕೆ ತಕ್ಕ ವಿಶ್ರಾಂತಿಯ ಕಾಲ ದೊರಕಿತೆನ್ನಬೇಕು. ಅನಂತರ ಅವರು ವಿವಿಧ ರೀತಿಯ ಸಾಹಿತ್ಯಾತ್ಮಕ ಚಟುವಟಿಕೆಗಳನ್ನು ಕೈಕೊಂಡುದಲ್ಲದೆ, ಹಳೆಯ ಶಾಸನಗಳ ಅಭ್ಯಾಸವನ್ನು ತೊಡಗಿದರು. 1930ರಲ್ಲಿ ಹಾಸ್ಯವನ್ನು ಕುರಿತಾಗಿ ಒಂದು ಉಪನ್ಯಾಸ ಮಾಲೆಯನ್ನು ಮದ್ರಾಸು ವಿಶ್ವವಿದ್ಯಾಲಯದಲ್ಲಿ ನಡೆಸಿದರು. ಈ ಸಮಯದಲ್ಲಿ ಅವರ ಮುಖ್ಯ ಆತುರ, ಕೆಲಸಗಳೆಂದರೆ-ತಾವು ಸ್ಥಾಪಿಸಲು ನೆರವಾದ ಬಾಲ ಸಾಹಿತ್ಯ ಮಂಡಲದ ಅಭಿವೃದ್ಧಿಗಾಗಿ ಹೆಣಗಾಡಿದುದು. ಶಾಲೆಯ ವಿದ್ಯಾಭ್ಯಾಸದ ಸಲುವಾಗಿ, ಎಳೆಯರಿಂದ ಹಿಡಿದು ತರುಣರ ವರೆಗೆ ಬೇಕಾಗುವ ವಿವಿಧ ರೀತಿಯ ಸಾಹಿತ್ಯಗಳನ್ನು ತಾವೂ ತಮ್ಮ ಗೆಳೆಯರೂ ಬರೆದು ಪ್ರಕಟಿಸಬೇಕೆಂಬುದೇ ಅವರ ಹಿರಿಯಾಸೆಯಾಗಿತ್ತು. 1918ರಲ್ಲಿ ಅವರು ಬರೆಯತೊಡಗಿದ "ಅಜ್ಜಿ ಕಥೆಗಳು" ಬಾಲಕರಿಗೆ ಪ್ರಿಯವಾದುದನ್ನು ಕಂಡು ಉತ್ಸಾಹಿತರಾದ ಅವರು ಈ ಕೆಲಸವು ತೀರ ಸಾಧ್ಯವೆಂದು ತಿಳಿದಿದ್ದರು. ಈ ಸಂದರ್ಭದಲ್ಲಿ ಬೇರೊಂದು ಸಂಗತಿಯನ್ನು ಹೇಳಬಹುದು. ಅವರು ಈ ಕಥೆಗಳನ್ನು ಮಂಗಳೂರಿನ ಒಂದು ಛಾಪಖಾನೆಗೆ ಪ್ರಕಟಣೆಗೆ ಕೊಟ್ಟಿದ್ದರು. ಅದರ ಮೊದಲಿನ ಆವೃತ್ತಿ ಕೆಲವೇ ವಾರಗಳಲ್ಲಿ ವಿಕ್ರಯವಾಗಿ, ನಮ್ಮ ತಂದೆಯ ಕೈಗೆ 40–50 ರೂಪಾಯಿಗಳು ಬಂದಿರಬಹುದು. ಆದರೆ ಅನಂತರ–ಹಲವು ಆವೃತ್ತಿಗಳು ಪ್ರಕಟವಾಗಿ, ಅಸಂಖ್ಯಾತ ಪುಸ್ತಕಗಳು ಮಾರಿದುವಾದರೂ ಬರೆದಾತಗೆ ಸಲ್ಲಿಸತಕ್ಕ ಋಣವಿದೆಯೆಂಬುದನ್ನು ಮರೆತುಬಿಟ್ಟರು. ಈ ಅನುಭವ ನಮ್ಮ ತಂದೆಯ ಮನದಿಂದ ಮರವೆಯಾಗಲಿಲ್ಲ. ಇದೇ ಬಗೆಯಲ್ಲಿ ಇನ್ನು ಹಲವು ಪುಸ್ತಕಗಳನ್ನು ಪ್ರಕಟಿಸಬೇಕೆಂದು ಹಂಬಲ ತೊಟ್ಟಾಗ, ಅದಕ್ಕಾಗಿಯೇ ಒಂದು ಸ್ವತಂತ್ರ ಪ್ರಕಟಣ ಸಂಸ್ಥೆ ಮಾಡುವುದೊಳಿತೆಂದು ಯೋಚಿಸಿದರು. ಆ ಸಂಸ್ಥೆಯು "ಬಾಲ ಸಾಹಿತ್ಯ ಮಂಡಲ"ವೆಂಬ ಹೆಸರಿಂದ 1921ರಲ್ಲಿ ಜನಿಸಿತು. ಮಕ್ಕಳಿಗೆ ತಕ್ಕ ಸಾಹಿತ್ಯವನ್ನೊದಗಿಸಿ, ಬರೆದವರಿಗೆ ಯೋಗ್ಯ ಸಂಭಾವನೆಯನ್ನು ಕೊಡಬೇಕೆಂಬ ಆಶಯದಿಂದಲೇ ಆ ಸಂಸ್ಥೆಯು ಜನ್ಮವೆತ್ತಿತು.

ಆದರೆ ಈ ಸಂಸ್ಥೆಯ ಅಭಿಲಾಷೆ ಹಿರಿದಾಗಿದ್ದರೂ, ಅದರ ಕೆಲಸ ಮಿತವಾಗಿತ್ತು. ತಂದೆಯವರು ಮಂಗಳೂರಿಗೆ ಮರಳಿ ಬಂದಮೇಲೆ ಈ ಸಂಸ್ಥೆಯ ಬೆಳವಣಿಗೆ, ಲೆಕ್ಕಪತ್ರಗಳ ವಿಚಾರದಲ್ಲಿ ಗಮನವಹಿಸುತ್ತ ಕುಳಿತರು. ಎಷ್ಟು ಅಂಜಿಕೆ ತೋರಿದರೂ, ವ್ಯಾಪಾರದ ಚಲಾಕಿಯು ಸಾಲದೆ ಹೋದರೂ, ಸಂಸ್ಥೆ ಮುಂದುವರಿಯಿತು; ಮೆಲುವಾಗಿಯಾದರೂ ಬೆಳೆಯಿತು. ಪುಸ್ತಕ ವ್ಯಾಪಾರದ ಜತೆಗೆ—ಸಾಬೂನು, ಬರವಣಿಗೆಯ ಸಲಕರಣೆ ಮೊದಲಾದುವನ್ನು ಸೇರಿಸಿಕೊಂಡುದರಿಂದ ದಿನದಿನದ ಆದಾಯವೂ ಹೆಚ್ಚಿತು. ಸಂಸ್ಥೆಯ ಮುಖ್ಯ ಗುರಿಯೇನೆಂಬ ವಿಚಾರದಲ್ಲಿ ಅನುಮಾನವಿರಲಿಲ್ಲ. ಅದರಂತೆ ಅನೇಕ ಪುಸ್ತಕಗಳು ಪ್ರಕಟಗೊಂಡುವು. ಇದೇ ಬಗೆಯಲ್ಲಿ ಸಂಸ್ಥೆ ಮುಂದುವರಿದರೆ ನಾಡಿನ ಶಿಶುಸಾಹಿತ್ಯಕ್ಕೆ ಅದೊಂದು ಮುಖ್ಯ ಪ್ರಕಟಣ ಸಂಸ್ಥೆಯಾದೀತೆಂದು ಅವರು ನಂಬಿದ್ದರು.

ಈ ಶತಮಾನದ ಮೊದಲಿನ ೨೫ ವರ್ಷಗಳ ತನಕ ನಮ್ಮ ತಂದೆಯ ಪರಿಚಯ ಮೈಸೂರಿಗಿರಲಿಲ್ಲ. ಅವರ ಹೆಸರು ದಕ್ಷಿಣಕನ್ನಡದ ಮೇರೆಯನ್ನು ದಾಟಿರಲೂ ಇಲ್ಲ. ಶ್ರೀ. ಬಿ. ಎಂ. ಶ್ರೀಕಂಠಯ್ಯನವರಂಥ ಕೆಲವು ಸಾಹಿತಿಗಳಿಗಷ್ಟೇ ಅವರ ಗುರುತು, ಪರಿಚಿತಿಯಿತ್ತು. ಆದರೆ ಈ ಕಾಲದ ಬಳಿಕ ಅವರ ಹೆಸರು ಮೆಲ್ಲಮೆಲ್ಲಗೆ ಧಾರವಾಡ, ಮೈಸೂರು ಪ್ರಾಂತ್ಯಗಳಿಗೆ ಹಬ್ಬತೊಡಗಿತು. ಈಗಾಗಲೇ ಅಖಿಲಕರ್ಣಾಟಕದಲ್ಲಿ ಕರ್ಣಾಟಕ ಪುನರುಜ್ಜೀವನದ ಕೆಲಸ ಸಾಗಿತ್ತು. ಶ್ರೀಕಂಠಯ್ಯನವರು, ಶ್ರೀ ಮಾಸ್ತಿಯವರು, ಶ್ರೀ ಡಿ. ವಿ. ಗುಂಡಪ್ಪನವರು, ಶ್ರೀ ವಿ. ಸೀತಾರಾಮಯ್ಯ ಮೊದಲಾದವರು ತಮ್ಮ ಗ್ರಂಥ, ಲೇಖನಗಳಿಂದ ಪ್ರಸಿದ್ಧಿಯನ್ನು ಪಡೆದಿದ್ದರು. ನಮ್ಮ ತಂದೆಯ ಹೆಸರು ಈ ಬಗೆಯಿಂದ ಬೆಳಕಿಗೆ ಬರತೊಡಗಿತಾದರೂ ಸಾಹಿತಿಯಾಗಿ ಅವರು ಬೆಂಗಳೂರು ಧಾರವಾಡಗಳಿಗೆ ಹೋಗಿ ಬರುತ್ತಿದ್ದುದು ಕಡಿಮೆ. 1927ರ ತನಕ ಅವರಿಗೆ ನೆರೆಯಪ್ರಾಂತವಾದ ಮೈಸೂರಿನೊಡನೆ ಒಡನಾಟ, ಬಳಕೆಗಳಿರಲೇ ಇರಲಿಲ್ಲ.

ಆಗಿನ ದಿನಗಳಲ್ಲಿ ನಮ್ಮ ಸಮಾಜದ ಅನೇಕರು ಜೀವನಕ್ಕೂ, ವಿಶ್ರಾಂತಿಗೂ ಬೆಂಗಳೂರಿನ ಹವೆ, ಅನುಕೂಲತೆಗಳನ್ನು ಮೆಚ್ಚಿ ಅಲ್ಲಿಗೆ ಹೋಗಿ ವಸತಿಹೂಡತೊಡಗಿದ್ದರು. ನಮ್ಮ ತಂದೆಗೆ ಆ ಯೋಚನೆಯೇ ಒಗ್ಗದು. ಏಕೆಂದರೆ ಅವರು ದಕ್ಷಿಣ ಕನ್ನಡದ ನೀರುಗಾಳಿಗಳನ್ನುಂಡು ಅಲ್ಲೇ ಬೇರುಬಿಟ್ಟವರು. ಮುಂದೆ ಮುಂದಕ್ಕೆ ಅವರು ಬೆಂಗಳೂರಿನ ಕಡೆಗೆ ಹೋಗಿ ಬರುವುದು ಹೆಚ್ಚಿತು.

ಮೈಸೂರು ಪ್ರಾಂತದಲ್ಲಿ 1920 ರಿಂದ 1935ರ ತನಕ ಕಾಣಿಸಿಕೊಂಡಂಥ ಹೊಸ ಸಾಹಿತ್ಯವು ನಮ್ಮ ತಂದೆಯವರನ್ನು ಚಕಿತಗೊಳಿಸಿತು. ಮಡಿಕೇರಿಯಲ್ಲಿ ಅವರು ಇದ್ದ ಕಾಲದಲ್ಲಿ ತಂದೆ ನಮಗೆ ವರ್ಡ್ಸ್‌ವರ್ತ್, ಟೆನಿಸನ್, ಮಿಲ್ಟನ್, ಶೇಕ್ಸ್‌ಪಿಯರ್ ಮೊದಲಾದ ಕವಿಗಳ ಹಲವು ಕವನಗಳನ್ನು ಆಗಾಗ ಓದಿ ಹೇಳುತ್ತಿದ್ದರು. ಅಂಥವುಗಳಲ್ಲಿ ಹಲವು ಬಾರಿ ನಮಗಾಗಿ ಓದಿದ ಕವನ ಥಾಮಸ್ ಹುಡ್ಡನ 'ಬ್ರಿಜ್ ಆಫ್ ಸ್ಯಾಸ್'–ಎಂಬುದು. ಆದರೆ ಒಂದು ದಿನ ಶ್ರೀಕಂಠಯ್ಯನವರ ಅನುವಾದ 'ದುಃಖಸೇತು' ಅವರ ಗೋಚರಕ್ಕೆ ಬರುತ್ತಲೇ, ಈ ಕನ್ನಡ ಅನುವಾದವನ್ನು ಕಂಡು ಮನಸೋತರು. ಅನಂತರ ಅದೇ ಕವನವನ್ನವರು ಅದೆಷ್ಟೋ ಬಾರಿ ಜಪಿಸಿದ್ದುಂಟು. ಅವರ ಮನಸ್ಸನ್ನೆ ಸೆಳೆದ ಕವನಗಳಲ್ಲಿ ಇದೊಂದು. ಅನಂತರ ಕ್ರಮೇಣ ಒಂದೊಂದಾಗಿ ಧಾರವಾಡ ಮೈಸೂರು ಪ್ರಾಂತಗಳಿಂದ ಅನೇಕ ಕವನಗಳು ಉದಿಸಿ ಅವರ ಜೀವನವನ್ನು ಬೆಳಗಿದುವು. ಅವರು ಮೆಚ್ಚಿದ ಇನ್ನೊಂದು ಹಾಡೆಂದರೆ ಶ್ರೀ ಬೇಂದ್ರೆಯವರು ಬರೆದ 'ಮುವ್ವತ್ತ ಮೂರು ಕೋಟಿ'. ತಮ್ಮ ವಯಸ್ಸಿನ ದೆಸೆಯಿಂದಲೂ, ತನ್ನದೇ ಆದ ಕಾರಣದಿಂದಲೂ ಅವರು ಅತಿಶಯವಾಗಿ ಮೆಚ್ಚಿದ ಹಾಡೆಂದರೆ ಶ್ರೀ ಸೀತಾರಾಮಯ್ಯನವರ "ಹಾಳೂರು". ಆ ಹಾಡನ್ನು ಕುರಿತು ತಮ್ಮ ಗೆಳೆಯರಿಗೆ, ಬಿಡಿಸಿ, ಬಿಡಿಸಿ ಹೇಳಿ ಹೆಚ್ಚಿನ ಆನಂದದಲ್ಲಿ ತೇಲಿದ್ದುಂಟು. ಆ ಹಾಡನ್ನು ಹಾಡುವಾಗ ಅವರಲ್ಲಿ ಉದ್ರೇಕಗೊಳ್ಳುತ್ತಿದ್ದ ಭಾವನೆಗಳು ಅಷ್ಟಿಷ್ಟಲ್ಲ. ಅನಂತರ ಆ ಹಾಡು ಅವರ ಜೀವನದ ಅಂಶವೇ ಆಯಿತು. ಅದನ್ನು ಗೊಣಗುತ್ತ ನಲಿಯುವುದು ಅವರಿಗೊಂದು ಅಭ್ಯಾಸವೇ ಆಯಿತು.

ಹೇಗೆ ಅವರಿಗೆ ವಿಶಾಲ ಕರ್ಣಾಟಕದ ಹೊಸ ಸಾಹಿತ್ಯ ಪರಿಚಯವಾಗುತ್ತ ಬಂದಿತೋ ಅದೇಬಗೆಯಲ್ಲಿ ಅವರ ಬರಹಗಳ ಪರಿಚಯ ಹೊರಗಿನ ಕರ್ಣಾಟಕಕ್ಕೂ ಆಗತೊಡಗಿತು. ಮೈಸೂರವರು, ದಕ್ಷಿಣ ಕನ್ನಡದಲ್ಲಿ ತಂದೆಯವರೂ, ಅವರ ಸಮಕಾಲೀನರೂ ಮಾಡುತ್ತಿದ್ದ ಕೆಲಸಗಳನ್ನು ನೋಡತೊಡಗಿದರು. ನಮ್ಮ ತಂದೆಯವರ ಕವನಗಳನ್ನು ಓದಿದವರ ಸಂಖ್ಯೆಯು ಹೆಚ್ಚಿರಬೇಕು. ನಮ್ಮ ತಂದೆಯವರನ್ನು ಮೈಸೂರಿನ ಜನಕ್ಕೆ ಪರಿಚಯ ಮಾಡಿಕೊಟ್ಟ ಮಹಾನುಭಾವರಲ್ಲಿ ಇಬ್ಬರು ಮುಖ್ಯರು-ಶ್ರೀ ಶ್ರೀಕಂಠಯ್ಯನವರು, ಶ್ರೀಮಾಸ್ತಿಯವರು. ಅವರಲ್ಲಿ ಇಂಥವರೇ ಪ್ರಥಮರೆಂದು ಹೇಳಲು ಬರಲಾರದು.

1927 ರಿಂದ 1934 ವರೆಗೆ ನಮ್ಮ ತಂದೆ ಬಹುವಾಗಿ ಊರನ್ನು ಬಿಟ್ಟು ಸಂಚರಿಸಿದವರಲ್ಲ. ಏನೋ, ಮೈಸೂರು ಮದ್ರಾಸು ವಿಶ್ವವಿದ್ಯಾಲಯಗಳ ಕೆಲಸಗಳಿಗೆ ಹೋಗಿಬರುತ್ತಿದ್ದರಾದರೂ-ಅವರಿಗೆ ಕರ್ಣಾಟಕ ಸಾಹಿತ್ಯ ಕ್ಷೇತ್ರದೊಡನೆ ಬಲವಾದ ಸಂಪರ್ಕವುಂಟಾಯಿತು. ಅವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಹೆಚ್ಚು ಹೆಚ್ಚು ಆಸಕ್ತಿಯುಂಟಾಯಿತು. ಅದರಂತೆ–ವಿಜಯನಗರಕಾಲದಲ್ಲಿ ಏಕೀಕೃತವಾಗಿದ್ದ ಕನ್ನಡ ನಾಡನ್ನು ವಿವಿಧ ಪ್ರಾಂತಗಳಾಗಿ ಹಂಚಿ ಹಾಕಿದುದರಿಂದ ಕನ್ನಡ ದೇಶವು ಪಟ್ಟಕಷ್ಟನಷ್ಟಗಳ ಅರಿವೂ ಆಯಿತು. ಕನ್ನಡ ನಾಡಿನ ಭವಿಷ್ಯ ಒಳ್ಳಿತಾಗಬೇಕಾದರೆ, ಕರ್ಣಾಟಕ ಪ್ರಾಂತವನ್ನು ಒಂದುಗೂಡಿಸಿ, ಭದ್ರವಾದ ತಳಹದಿಯ ಮೇಲೆ ನಿಲ್ಲಿಸದಿದ್ದರೆ ಆಗದು–ಎಂಬ ನಿಶ್ಚಿತ ಅಭಿಪ್ರಾಯಕ್ಕೆ ಅವರು ಬಂದರು. ಆಗಿನ ದಿನಗಳಲ್ಲಿ—ಈ ಭಾಷಾವಾರು ಪ್ರಾಂತ ರಚನೆಯ ಪ್ರಶ್ನೆ ಭಾರತೀಯ ರಾಜಕೀಯದಲ್ಲಿ ಜಗಳಕ್ಕೆ ಕಾರಣವಾದೀತು ಎಂದು ಅವರು ಎಣಿಸಿರಲಾರರು. ಇದನ್ನು ರಾಜಕಾರಣಿಗಳು ತಮ್ಮ ಸ್ವಾರ್ಥಕ್ಕಾಗಿ ತಿರುಗಿಸಿ ಕೊಳ್ಳಬಲ್ಲರು—ಎಂಬ ಅರಿವೂ ಇದ್ದಿರಲಾರದು. ಆದರೆ—ಅವರ ಕಾಲಕ್ಕೆ ಇದು ನಿರ್ವಿವಾದದ ಪ್ರಶ್ನೆಯಾಗಿತ್ತು. ಕನ್ನಡ ಸಾಹಿತ್ಯದ ಬೆಳವಣಿಗೆ, ಆರ್ಥಿಕ ಬೆಳವಣಿಗೆಗಳೆರಡೂ ಏಕೀಕೃತ ಕರ್ಣಾಟಕವಿಲ್ಲದೆ ಕೈಗೂಡಲಾರವು—ಎಂಬುದು ನ್ಯಾಯವೆನಿಸಿತ್ತು. ಆದರೆ ಮುಖ್ಯತಃ ರಾಜಕಾರಣದ ಕ್ಷೇತ್ರ ಅದು; ಸಾಹಿತಿಯಾದ ತಂದೆಯಿಂದ ಅದಕ್ಕಾಗಿ ತೊಳಲುವ ಶಕ್ತಿಯಿರಲಿಲ್ಲ. ಆ ವಿಚಾರದಲ್ಲಿ–ರಾಜ್ಯವನ್ನು ಒಡೆದು ಆಳುವ ತಂತ್ರದಿಂದಲೇ ಕಾಲಕಳೆದ ಬ್ರಿಟಿಷ್ ಮುತ್ಸದ್ದಿಗಳಿಗೆ ಅದು ಬೇಡದ ಪ್ರಶ್ನೆಯಾಗಿತ್ತು. ಹಿಗಾಗಿ ಏಕೀಕರಣಕ್ಕಾಗಿ ಹೋರಾಡುವ ಮುಂದಾಳುಗಳ ಶ್ರಮ, ಕೂಗುಗಳು ಬರಿಯ ಠರಾವು, ಗೊತ್ತುವಳಿಗಳ ಗತಿಗಿಂತ ಮುಂದುವರಿಯಲಿಲ್ಲ. ಅನೇಕ ಬಗೆಗಳಿಂದ ಸ್ವತಂತ್ರ ಪ್ರಾಂತಗಳಾಗಲು ಕಡಿಮೆ ಅರ್ಹತೆಯುಳ್ಳ ಸಿಂಧ, ಒರಿಸ್ಸಾಗಳು ಬೇರೆ ಪ್ರಾಂತಗಳಾಗಿ ಬಿಟ್ಟುವು. ಕನ್ನಡ ಜನರು ತಮಗಾದ ನೋವಿಗಾಗಿ ಅಳುವುದಷ್ಟೇ ಉಳಿಯಿತು.

ಆದರೆ ಕರ್ಣಾಟಕದ ಉದ್ದಕ್ಕೆ, ಘಟ್ಟದ ಆಚೆಗೆ, ಈಚೆಗೆ ಸಾಹಿತ್ಯ ಅಭಿರುಚಿ, ರಸಿಕತೆಗಳಿಂದ ಬೆಳೆಯತೊಡಗಿದ ಸ್ನೇಹ ಸಂಬಂಧವು ಹೆಚ್ಚುತ್ತ ಬಂದಿತು. ಕರ್ಣಾಟಕವು ಮೈಸೂರು ಪ್ರಾಂತಕ್ಕಿಂತ ಹಿರಿದಾದ ದೇಶವೆಂಬ ಭಾವನೆಯು ಜನಕ್ಕೆ

ಬರತೊಡಗಿತು. ಅರಮನೆಗಳ ಸಾಂಪ್ರದಾಯಿಕ ಪಂಡಿತವರ್ಗ ಹೊಸಗನ್ನಡದ ಮುಂದಾಳುಗಳನ್ನು ಮನ್ನಿಸಲೇ ಬೇಕಾಯಿತು. ಹೊಸಗನ್ನಡದ ಕ್ರಾಂತಿಯು ನಿಶ್ಚಯವಾಗಿಯೂ ಉಂಟಾಯಿತು. ಅನಂತರ ಹಲವಾರು ಮೈಸೂರಿನ ಪ್ರಸಿದ್ಧ ಸಾಹಿತಿಗಳು—ವಿಶಾಲ ಕರ್ನಾಟಕದ ಸಲುವಾಗಿ ಜನರ ಗಮನವನ್ನು ಸೆಳೆಯತೊಡಗಿದರು. ಅವರ ಸ್ಫೂರ್ತಿಯಿಂದ -ಅನೇಕಾನೇಕ ಎಳೆಯರೂ ಕನ್ನಡವನ್ನು ಮೆಚ್ಚತೊಡಗಿದರು. ಈ ಶತಮಾನದ ಮೂರನೆಯ ಮತ್ತು ನಾಲ್ಕನೆಯ ದಶಕಗಳಲ್ಲಿ ಈ ತೆರನ ಉತ್ಸಾಹವನ್ನು ನಾವು ಕಾಣಬಹುದಾಗಿದೆ.

1934ರಲ್ಲಿ ಕನ್ನಡಸಾಹಿತ್ಯ ಪರಿಷತ್ತನ್ನು ರಾಯಚೂರಲ್ಲಿ ಜರುಗಿಸಿದರು. ಅದಕ್ಕೆ ನಮ್ಮ ತಂದೆಯನ್ನು ಅಧ್ಯಕ್ಷರನ್ನಾಗಿ ಆರಿಸಿದರು. ಕನ್ನಡಿಗರಾದವರಿಗೆ ಕೊಡಬಹುದಾದ ಅತಿ ಹಿರಿಯ ಮನ್ನಣೆಯಿದು. ಅದನ್ನು ನಮ್ಮ ತಂದೆಗೆ ಪ್ರಬುದ್ಧ ವಯಸ್ಸಿನಲ್ಲಿ ಸಲ್ಲಿಸಿದುದು ಉಚಿತವೇ ಆಗಿತ್ತು. ಸುಮಾರು ಮೂರು ಘಂಟೆಗಳ ಕಾಲ ಅವರು ಕೊಟ್ಟ ಅಧ್ಯಕ್ಷ ಭಾಷಣವು ವಿಚಾರ ಪೂರ್ಣವೂ, ಬೋಧಕವೂ ಆಗಿದ್ದು ಸಭಿಕರನ್ನು ಮುಗ್ಧಗೊಳಿಸಿತೆನ್ನುತ್ತಾರೆ. ಆ ಭಾಷಣವನ್ನು ಕರ್ನಾಟಕವೇ ಮೆಚ್ಚಿದಂತಿದೆ.

ರಾಯಚೂರಿನಿಂದಲೇ, ವಿಧಿ ಒತ್ತಾಯಿಸಿದಂತೆ, ನಮ್ಮ ತಂದೆ ಕರ್ನಾಟಕವನ್ನು ಬೀಳ್ಕೊಟ್ಟು ಹೊರಟರು. ತಾವು ನಿವೃತ್ತರಾದ ಕಾಲದಿಂದ, ನಮ್ಮ ತಂದೆ ಮಂಗಳೂರಲ್ಲಿ ಹೆಚ್ಚುಕಡಿಮೆ ಏಕಾಕಿಯಾಗಿ ಬಾಳಿದರು. ಮಕ್ಕಳು ಒಬ್ಬೊಬ್ಬರಾಗಿ ಬೇರೆ ಬೇರೆ ಪ್ರಾಂತಗಳಿಗೆ ತಂತಮ್ಮ ನೌಕರಿಗಳಿಂದಾಗಿ ಹೊರಟುಹೋದರು. ಮಂಗಳೂರಲ್ಲಿ ಮನೆಮಾಡಿ ನಿಲ್ಲುವ ಆವಶ್ಯಕತೆ ಅವರಿಗೆ ಕಡಿಮೆಯಾಯಿತು. ಆದರೂ ಮಂಗಳೂರನ್ನು ಬಿಡುವ ಮನಸ್ಸೂ ಬಾರದಾಯಿತು. ಮಕ್ಕಳಾದ ನಾವು ಒಬ್ಬೊಬ್ಬರೇ-ನಮ್ಮೊಡನೆ ಬಂದು ವಾಸಿಸುವಂತೆ ಅವರನ್ನು ಒತ್ತಾಯಿಸುತ್ತಿದ್ದೆವು. ಅವರಿಗೆ-ತಮ್ಮ ಕಾರ್ಯರಂಗವಾಗಿದ್ದ ಕ್ಷೇತ್ರವನ್ನು ನಿಜಕ್ಕೂ ಬಿಟ್ಟಲ್ಲದೆ ತಮ್ಮ "ನಿವೃತ್ತಿ" ಉಂಟಾಗಲಾರದೆನಿಸಿತು. ಬಾಲಸಾಹಿತ್ಯ ಮಂಡಲದ ಚಟುವಟಿಕೆಗಳು ಅವರ ಮನಸ್ಸಿನಲ್ಲಿ ತುಂಬಿತ್ತಾದರೂ, ಅದನ್ನು ತನ್ನಷ್ಟಕ್ಕೆ ಬಿಟ್ಟು, ಅದು ತನ್ನ ಕಾಲಿನಮೇಲೆ ನಿಲ್ಲುವ ಶಕ್ತಿಗಳಿಸಲೆಂದು ಅವರು ಬಯಸಿದರು. ಆದರೆ ಅನಂತರದ ಅನುಭವಗಳಿಂದ-ನಾವು ಅವರನ್ನು ಸ್ಥಳಾಂತರಗೊಳಿಸಿದ್ದು ತಪ್ಪೆಂದು ತೋರುತ್ತದೆ. 1934ರಲ್ಲಿ ಅವರು ಊರುಬಿಟ್ಟು ಪಾಟ್ನಾನಗರಕ್ಕೆ ತೆರಳಿದರು.

ಉತ್ತರ ಹಿಂದುಸ್ಥಾನದ ಕಡು ಬೇಸಗೆಯು ಕಾಲಿರಿಸುವಾಗಲೇ ಅಂದರೆ 1934ರ ಮಾರ್ಚಿತಿಂಗಳಲ್ಲಿ ಅವರಲ್ಲಿಗೆ ಬಂದರು. ಆ ಬದಲಾವಣೆಯು ವಿಶೇಷವಾಯಿತು. ಅಲ್ಲಿನ ಪಸೆಯುಳ್ಳ ಹವೆಯ ಸೆಕೆ ಅವರಿಗೆ ತಡೆಯಲಿಲ್ಲ; ವಿದ್ಯುತ್ತಿನ ಬೀಸಣಿಗೆಯ ಸೌಕರ್ಯವಿರಲಿಲ್ಲ. ಸುತ್ತಣ ಊರಿನ ಜನ ಜೀವನವೂ ಜಡವಾಗಿ ಕಾಣಿಸತೊಡಗಿತು. ಎಷ್ಟೆಂದರೂ ಕನ್ನಡ ನಾಡಿಂದ, ನುಡಿಯಿಂದ, ಒಮ್ಮೆಗೇ ಕಡಿದು ಬಂದಂತಾಗಿತ್ತು. ಮಂಗಳೂರಿಂದ ಪತ್ರಿಕೆಗಳು ಬರುತ್ತಿದ್ದುವು; ಕೆಲವು ಮಿತ್ರರು ಅವರಿಗೆ ಕಾಗದಗಳನ್ನೂ ಬರೆಯುತ್ತಿದ್ದರು. ಅಷ್ಟೇನೆ ಉಳಿದ ಸಂಬಂಧ. ತಮ್ಮ ಕಿರಿಯ ಮಗಳಿಗೆ ಪಾಠ ಹೇಳುವುದರಲ್ಲಿ ಸ್ವಲ್ಪಸಮಯ ಕಳೆಯುತ್ತಿದ್ದರು. ಅವರು ಪಾಟ್ನಾದಲ್ಲಿರುವಾಗ 'ಪದಾರ್ಥವೇನು' ಎಂಬ ಲೇಖಮಾಲೆಯನ್ನು ಬರೆದು ಕಂಠೀರವ ಪತ್ರಿಕೆಯಲ್ಲಿ ಪ್ರಕಟಿಸತೊಡಗಿದರು. ಇದೇ ವೇಳೆಗೆ, ಅವರಿಗೆ ಮೈಸೂರು ವಿಶ್ವವಿದ್ಯಾಲಯದವರು-ಸಂಪಾದನೆ, ಸಂಗ್ರಹಗಳಿಗಾಗಿ—ಅವರಿಗೆ ಪ್ರಿಯವಾಗಿದ್ದ ಜೈಮಿನಿ ಭಾರತದ ಕೆಲಸವನ್ನು ವಹಿಸಿದರು. ಆ ಕೆಲಸವನ್ನು ಅವರು ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಸಹಕಾರದಿಂದ ನಡೆಯಿಸಬೇಕಿತ್ತು. ಅಂಥ ಇತರ ಕೆಲವು ಕೆಲಸಗಳಲ್ಲಿ ಅವರ ಸಮಯ ಸರಿಯುತ್ತಿತ್ತು. ಈ ಕೆಲಸಗಳಿಗಾಗಿ ಅವರು ಒಂದು ವರ್ಷ ಪಾಟ್ನಾದಲ್ಲಿದ್ದಾಗ, ಎರಡೆರಡು ಬಾರಿ ದಕ್ಷಿಣಕ್ಕೆ ಯಾತ್ರೆ ಮಾಡಿ ಬಂದರು. ಇದು ಕಷ್ಟತರವಾಗಿ ಕಂಡುಬಂದುದರಿಂದ, ದಕ್ಷಿಣಕ್ಕೆ ತುಸು ಸಮೀಪವಾಗಿರುತ್ತೇನೆಂದು ತಮ್ಮ ಇನ್ನೊಬ್ಬ ಮಗನಿರುವ ಹೈದರಾಬಾದಿಗೆ ಹೊರಟುಬಂದರು.

ಹೈದರಾಬಾದಿನಲ್ಲಿ ಅವರು ಹೆಚ್ಚುಕಡಿಮೆ ಒಂದು ವರ್ಷಕಾಲ ಕಳೆದರು. ಆಗಲೇ ಮುಪ್ಪು ಕವಿದಿತ್ತು. ಮನಸ್ಸಿನಲ್ಲಿ ತನ್ನ ದಿನ ಸಂದಿವೆ; ಕೆಲಸ ಮುಗಿದಿದೆ-ಎಂಬ ಭಾವನೆಯೂ ಉಂಟಾಗಿತ್ತು. ತಮ್ಮ ಕೆಲಸಕಾರ್ಯಗಳ ಬಗ್ಗೆ ಅವರು ಎಂದೂ ಹೆಮ್ಮೆಪಟ್ಟಿರಲಾರರಾದರೂ, ತಮ್ಮ ಬಾಳು ವ್ಯರ್ಥವಾಗಿಲ್ಲ ಎಂಬ ಸಮಾಧಾನವು ಅವರಿಗೆ ಬಂದಿತ್ತು. ಅವರ ಜೀವನದಲ್ಲಿ-ಒಂದು ಮುಖ್ಯ ಆಸೆ ಕುದಿಯುತ್ತಿತ್ತು. ಅದೇಂದರೆ, ತಾನು ಆರ್ಥಿಕ ಸ್ವಾತಂತ್ರ್ಯ ಗಳಿಸಬೇಕು, ಪರರ ಹಂಗಿನ ಜೀವನ ಮಾಡಬಾರದೆಂದು. ಅದರಂತೆ ತನ್ನ ಮಕ್ಕಳು ಬಡತನಕ್ಕೆ ಗುರಿಯಾಗಿ ಹಂಗಿನ ಬಾಳ್ವೆಮಾಡದಿರಲಿ-ಎಂದು. ಈ ಒಂದು ಗುರಿ ಸಾಧ್ಯವಾಯಿತು ಎಂಬ ಸಂತೋಷ ಅವರ ಮುಪ್ಪಿನಲ್ಲಿ ಖಂಡಿತವಾಗಿ ಅವರಿಗಿತ್ತು. ತನ್ನನ್ನೂ ತನ್ನ ವಂಶವನ್ನೂ ದಾರಿದ್ರ್ಯಕೂಪದಿಂದೆತ್ತಿ, ಒಳ್ಳೆಯ ಬದುಕಿನ ಕಡೆಗೆ ಸಾಗಿಸಿದೆನಲ್ಲಾ ಎಂಬ ಆತ್ಮತೃಪ್ತಿ ಇದ್ದಿತ್ತು. ಅದು ಬಾಳಿನ ಸಾರ್ಥಕ್ಯವೂ ಅನಿಸಿತ್ತು. ತಮ್ಮ ಮಕ್ಕಳು ಎಲ್ಲರೂ ಸ್ವಾವಲಂಬಿಗಳಾಗಿ, ಸ್ವತಂತ್ರರೂ ಆದದ್ದೊಂದು ಅವರಿಗೆ ತುಂಬ ಸಮಾಧಾನ. ಸಂಸಾರವನ್ನು ತೊಡಗಿದಾಗ ಅವರಿಗಿದ್ದ ಮುಖ್ಯ ಬೆದರಿಕೆ-ತಾನು ತನ್ನ ಮಕ್ಕಳಿಗೆ ಸಮನಾದ ವಿದ್ಯಾಭ್ಯಾಸ ಕೊಡಲು ಶಕ್ತನಾದೇನೆಯೇ ಎಂಬುದು. ಇದು ಸಾಧ್ಯ

ವಾಗಿ ಈ ಕೆಲಸ ಮುಗಿದಾಗ, ಕಾಣಿಸಿದ ಬೇತಾಳ—ಓದಿ ಪಾರಾದ ತನ್ನ ಮಕ್ಕಳಿಗೆ ಜೀವನ ನಿರ್ವಹಣಕ್ಕೆ ತಕ್ಕ ಉದ್ಯೋಗ ದೊರಕೀತೇ-ಎಂಬುದು.ಆದರೆ ಆಭೀತಿಯು ಉಳಿಯಲಿಲ್ಲ. ಅವರ ಗಂಡು ಮಕ್ಕಳೆಲ್ಲರಿಗೂ ಉದ್ಯೋಗ ದೊರಕಿತು.ಅವರವರ ಜೀವನ ಅವರೇ ನಡೆಸುವಂತಾಗಿತ್ತು.ಇಬ್ಬರು ಹೆಣ್ಣುಮಕ್ಕಳಲ್ಲಿ ಒಬ್ಬಳಿಗೆ ಮದುವೆಯಾಗಿತ್ತು; ಇನ್ನೊಬ್ಬಳ ಮದುವೆಗೆ ಬೇಕಾದ ಆರ್ಥಿಕ ವ್ಯವಸ್ಥೆಯನ್ನು ಮಾಡಿ ಕುಳಿತಿದ್ದರು. ಅವರ ಉಳಿದೊಂದು ಚಿಂತೆಯೆಂದರೆ—ತಾನೂ ತನ್ನ ಹೆಂಡತಿಯೂ ಬದುಕಿರುವಷ್ಟು ಕಾಲ ಮಕ್ಕಳ ಪಾಲಿಗೆ ಹೊರೆಯಾಗಬಾರದೆಂದು; ಅನಾವಶ್ಯಕವಾಗಿ ಬಾಳಬಾರದೆಂದು; ತಮ್ಮ ಗಂಡಹೆಂಡಿರ ವೆಚ್ಚವು ತಮಗೆ ದೊರಕುತ್ತಿದ್ದ ನಿವೃತ್ತಿ ವೇತನಕ್ಕಿಂತ ಹೆಚ್ಚಾಗಬಾರದೆಂದು. ಅವರ ಜೀವಮಾನವೆಲ್ಲ ಅವರೆಷ್ಟು ಸ್ವತಂತ್ರಮನಸ್ಕರಾಗಿದ್ದರೊ ಅಷ್ಟೇ ನಮ್ರರೂ ಆಗಿದ್ದರು. ವಯಸ್ಸು ಮುಂದುವರಿಯುತ್ತ ಬಂದಂತೆ, ಎಂದಾದರೂ ಹಾಸುಗೆ ಹಿಡಿದು ಇನ್ನೊಬ್ಬರಿಗೆ ಕೈ ನೀಡುವ ಕಾಲ ಬಂದೀತೇ ಎಂಬ ಚಿಂತೆ, ಬೆದರಿಕೆಗಳಿದ್ದುವು. ಅವರಿರುವಷ್ಟು ಕಾಲ—ಅವರ ಚುರುಕುತನ, ಶಕ್ತಿ, ಬುದ್ಧಿಬಲ ಯಾವುದೂ ಅವರನ್ನು ಸೋಲಿಸಲಿಲ್ಲ. .ಅವು ಕಳಚಿದ ಮೇಲೆ ಬದುಕಬಾರದೆಂದು ಅವರ ಬಯಕೆ. ಹಾಗಾಗಿ—ತನಗೆ ಬರುವ ಕಾಲನ ಕರೆಗೆ ಸಿದ್ಧರಾಗಿ ಕಾದು ಕುಳಿತಿದ್ದರು.

ಆ ಕರೆಯು 1937ರ ಅಕ್ಟೋಬರದ ಒಂದು ದಿನ ಬಂದೇ ಬಂದಿತು. ಅವರಿಗೆ ಶೀತವಾಗಿ ನಿಮೋನಿಯಾ ಬೇನೆಯುಂಟಾಯಿತು. ಬರಿಯ ಐದು ದಿನಗಳ ಕಾಲ ಜ್ವರ ಬಂದು ಅವರು 'ಈ ಬಾರಿ ಪಾರಾದರು' ಎಂದೂ ನಮಗನಿಸಿತ್ತು. ತಾ. 24ರ ದಿನ ಸಂಜೆಗೆ ಮೈಯ್ಯ ಉಷ್ಣತೆ ಒಮ್ಮೆಗೇ ಇಳಿಯತೊಡಗಿತು. ಸಮೀಪದಿಂದ ಬೇಕಾದ ವೈದ್ಯಕೀಯ ಸಹಾಯ ಒದಗಿತಾದರೂ, ತಂದೆಯವರಿಗೆ ತಮ್ಮ ಅವಧಿ ಖಂಡಿತವಾಗಿಯೂ ಬಂದಿದೆ—ಎಂದು ಅನಿಸಿತು. ಅದಕ್ಕಾಗಿ ಅವರು ಕಾದಿದ್ದರು. ಸಾವಿನ ಸಮ್ಮುಖದಲ್ಲಿ ಅಂಜಲಿಲ್ಲ; ಅನುಮಾನಿಸಲಿಲ್ಲ. ಕೊನೆಯ ಗಳಿಗೆಯ ತನಕ-ಪರರಿಗೆ ಕೇಡನ್ನುಬಗೆಯದಾತನು ಎಷ್ಟು ನಿರ್ಮಲ ಮನಸ್ಕನಾಗಿರಬಹುದೋ ಅಷ್ಟು ಶಾಂತಿಯಿಂದಿದ್ದರು. ತನ್ನ ತಂದೆ ತನಗೆ ಬೋಧಿಸಿದಂಥ ಕೊನೆಯ ಉಪದೇಶ ವಾಕ್ಯಗಳನ್ನು, 'ಕುಡಿಯಬೇಡ, ನೀತಿ ಬಿಡಬೇಡ, ತಮ್ಮ, ತಂಗಿಯರನ್ನು ಎಷ್ಟುಕಷ್ಟ ಬಂದರೂ ಕೈಬಿಡಬೇಡ' ಎಂಬ ಮಾತುಗಳನ್ನು ತಾನು ನಡೆಸಿದ್ದೇನೆ-ಎಂಬ ಪೂರ್ಣ ತೃಪ್ತಿಯಿತ್ತು. ತಾನು ತನ್ನ ಸುತ್ತಲಿನ ಜಗಕ್ಕಾಗಿ, ತನ್ನಶಕ್ತಿಗೆ ಸಮನಾದ ಬಗೆಯಲ್ಲಿ ಸೇವೆಸಲಿಸಿದ್ದೇನೆ ಎಂಬ ವಿಶ್ವಾಸವಿತ್ತು. ಅದರ ಜತೆಗೆ-ತನ್ನನ್ನು ಯಾರೂ ಹಳಿಯರು; ದೂರರು; ತನ್ನ ಪರಿಚಿತರಿಗೆ ತಾನು ಪ್ರಿಯನಾಗಿ ಬಾಳಿದ್ದೇನೆ-ಎಂಬ ಸಮಾಧಾನವೂ ಅವರಲ್ಲಿದ್ದಿತು.

ಇನ್ನು ಮಾಡುವ ಕೆಲಸವೇನಿರಲಿಲ್ಲ. ಅವರ ಸಂಸಾರದವರೆಲ್ಲ ಅವರ ಸುತ್ತ ಕಲೆತಿದ್ದರು. ಅವರನ್ನು ಹರಸಿದರು. ತನ್ನ ಜೀವಮಾನದಲ್ಲಿ ತನಗೆ ಯಾರಾರು ನೆರವಾಗಿದ್ದರೋ ಅಂಥ ಸ್ನೇಹಿತರನ್ನೂ ಸೇವಕರನ್ನೂ ನೆನೆದರು. ಅವರ ಹೆಸರು ಹೇಳಿ ಒಬ್ಬೊಬ್ಬರನ್ನಾಗಿ ನೆನಪರಿಸಿ, ತನ್ನ ಕೊನೆಯ ಸ್ಮರಣೆಗಳನ್ನು ಒಬ್ಬೊಬ್ಬರಿಗೂ ತಿಳಿಸಿ ಎಂದು ನುಡಿದರು. ಕಾಸರಗೋಡಿನಲ್ಲಿ ತಮ್ಮ ನೆರಳಾಗಿ ಬಾಳಿದ ಸೇವಕರಾದ ಬಾಬುಪೈ ಮತ್ತು ಪೇದೆ ರಾಮ ನಾಯಕರನ್ನೂ ಹೆಸರಿಸಿ ಸ್ಮರಿಸಿದರು. ಅವರೆಲ್ಲರನ್ನು ಸ್ಮರಿಸಿ ವಿದಾಯಗೊಂಡ ಬಳಿಕ-ಸುತ್ತ ನೆರೆದ ಬಂಧುಮಿತ್ರರನ್ನು ವಂದಿಸಿ—'ದುಃಖಿಸಬೇಡಿ' ಎಂದರು. ಅವರ ಕೊನೆಯಾಸೆಯೆಂಬುದು ಕರ್ಣಾಟಕ ಏಕೀಕರಣವಾಗಿತ್ತು. ಆ ಕೊನೆಯ ಗಳಿಗೆಯಲ್ಲಿ ಕುಮಾರವ್ಯಾಸನ ಪ್ರಿಯನುಡಿಗಳನ್ನು ಉಸುರುತ್ತ, ತಮ್ಮ ಭೌತಿಕ ಪ್ರಪಂಚವನ್ನಗಲಿ, ತಮ್ಮ ಹಿರಿಯರ, ತಮ್ಮ ಸೃಷ್ಟಿಕರ್ತನಲೋಕಕ್ಕೆ ಶಾಂತವಾಗಿ ನಡೆದರು. ಅಂದಿಗೆ ಒಂದು ಹಿರಿಯ ಬಾಳು ಕೊನೆಗಂಡಿತು.

---

# ನಮ್ಮ ತಂದೆ ಶಿಕ್ಷಕರಾಗಿ, ಮಾನವರಾಗಿ.

(ಲೇಖಕ: ಶ್ರೀ ರಾಮರಾಯರು; ಪಂಜೆ.)

ನಮ್ಮೊಬ್ಬ ಸಭ್ಯಮಿತ್ರರು, ತುಂಬ ಪರಿಶೀಲನ ಬುದ್ಧಿ, ತೂಕ ಇರುವವರು, ನನ್ನೊಡನೆ ನಮ್ಮ ತಂದೆಯನ್ನು ಕುರಿತು ಮಾತನಾಡುತ್ತಿದ್ದಾಗ, ಅವರ ವಿಚಾರಗಳಲ್ಲಿ ಒಂದೆರಡು ಅಭಿಪ್ರಾಯಗಳನ್ನು ಹೇಳಿದ್ದರು. ಸಾಮಾನ್ಯವಾಗಿ ತೂಕ ತಪ್ಪಿ ಮಾತನಾಡುವವರು ಅವರಲ್ಲ. ಉಳಿದವರ ಬುದ್ಧಿಮತ್ತತೆಯನ್ನು ಅಳೆಯುವಷ್ಟೇ ಎಚ್ಚರದಿಂದ, ತಮ್ಮ ನುಡಿಯನ್ನು ಅರಿಸುವ ಪರಿಪಾಠವುಳ್ಳ ಅವರೆಂದದ್ದೆಂದರೆ–

"ನಾನು ಕವಿಯಲ್ಲ, ವಿದ್ಯಾಭ್ಯಾಸದಲ್ಲಿ ತಜ್ಞನೂ ಅಲ್ಲ. ಆದರೂ ನನಗೆ ಪಾಠ ಹೇಳಿದ ಸುಮಾರು ನಲ್ವತ್ತೆರಡು ಮಂದಿ ಉಪಾಧ್ಯಾಯರಲ್ಲಿ, ಕಾಲೇಜಿನ ಉಪನ್ಯಾಸಕರಲ್ಲಿ, ಮಂಗೇಶರಾಯರಿಗಿರುವ ಹಿರಿಮೆ ಇನ್ನೊಬ್ಬರಿಗೆ ಬರಲಾರದು. ಉಪಾಧ್ಯಾಯನಾಗುವವನಿಗೆ ಯಾವೆಲ್ಲ ಪ್ರಧಾನ ಗುಣಗಳಿರಬೇಕೊ ಅಷ್ಟೆಲ್ಲ ಗುಣಗಳುಳ್ಳ ಇನ್ನೊಬ್ಬರನ್ನು ಕಾಣೆ" ಎಂದಿದ್ದರು.

ಶಾಲೆ,ಕಾಲೇಜುಗಳಿಗೆ ಹೋದ ನಮ್ಮಲ್ಲನೇಕರು ತಮ್ಮ ಅಧ್ಯಾಪಕ,ಪ್ರಾಧ್ಯಾಪಕರನ್ನು ಅವರ ಯೋಗ್ಯತೆಗೆ ಸರಿಯಾಗಿ ಅಳೆಯುವ ಕೆಲಸ ಮಾಡಲಾರೆವು; ನಿಶ್ಚಿತ ತೀರ್ಮಾನ ಕೊಡಲಾರೆವು. ಆದರೂ ನಮ್ಮ ತಂದೆ ದಕ್ಷಿಣಕನ್ನಡ ಜಿಲ್ಲೆಯಲ್ಲಿದ್ದು ನಡೆಸಿದ ಇಪ್ಪತ್ತು ವರ್ಷದ ಉಪಾಧ್ಯಾಯ ವೃತ್ತಿಯಲ್ಲಿ ತಮ್ಮ ಯಾವತ್ತು ಶಿಷ್ಯರುಗಳಿಂದ ಮೇಲೆ ಹೇಳಿದಂತಹ ಒಳ್ಳೆಯ ಮಾತನ್ನು ಕೇಳಿಕೊಂಡು ಬಂದವರು.

ಅವರಲ್ಲಿ ಅಂತಹ ಹಿರಿತನ ಸ್ಥಾಪನೆಯಾಗುವುದಕ್ಕೆ ಏನು ಕಾರಣ? ಅದಕ್ಕೆ ಬೇಕಾದ ಗುಣಗಳನ್ನು ಪ್ರಥಕ್ಕರಿಸಿ, ತೂಗಿ ಹೇಳುವ ಕೆಲಸ ಸಾಹಸದ್ದು. ನಾನು ಎಳೆಯನಾಗಿದ್ದಾಗ ನಮ್ಮ ತಂದೆಯ ವಿಚಾರದಲ್ಲಿ ಉಂಟಾದ ಅನುಭವಗಳನ್ನೂ, ಭಾವನೆಗಳನ್ನೂ ಇಷ್ಟು ದಿನಗಳ ಬಳಿಕ, ನನ್ನ ಪ್ರಬುದ್ಧ ಅನುಭವದೊಡನೆ ಹೋಲಿಸಿ ನೋಡಬೇಕೆಂಬ ಆತುರ ನನ್ನಲ್ಲಿ ಉಂಟಾಯಿತು. ಹಳೆಯ ಭಾವನೆಗಳನ್ನು ಹೀಗೆ ಕೆದಕಿ, ಹುಡುಕುವ ನನ್ನೀ ಕ್ರಮ, ಮನಶ್ಶಾಸ್ತ್ರದ ದೃಷ್ಟಿಯಿಂದ ಸರಿಯೆನಿಸಲಾರದು. ಆದರೂ ಅವರು ಬದುಕಿದ ವೇಳೆಯಲ್ಲಿ ಅವರ ಅನೇಕ ಗುಣಗಳನ್ನು ತಿಳಿಯದೆ ಹೋದುದರಿಂದ ನಾನೆಷ್ಟೋ ನಷ್ಟಗೊಂಡಿದ್ದೇನೆ, ಪಡೆಯಬಹುದಾದ ಲಾಭವನ್ನು ಕಳೆದುಕೊಂಡಿದ್ದೇನೆ–ಎಂದು ನನ್ನ ಮನಸ್ಸು ಹೇಳುತ್ತದೆ.

ಆ ಮೇಲೆಯೂ ನನಗನಿಸಿದ ವಿಚಾರವೆಂದರೆ–ಅವರಿಗೆ ಶಿಕ್ಷಣದಲ್ಲಿ ಎಷ್ಟೊಂದು ಅನುಭವ ಇತ್ತು; ಆ ಕಲೆಯ ಮೇಲೆ ಎಂತಹ ಅಪೂರ್ವವಾದ ಹಿಡಿತವಿತ್ತು. ಅದನ್ನು ಕುರಿತಾಗಿ ಅವರು ನಮ್ಮ ಜಿಲ್ಲೆಯ ಎಳೆಯರ ಭವಿಷ್ಯತ್ತಿನ ಸಲುವಾಗಿ ಒಂದು ಗ್ರಂಥವನ್ನು ಬರೆದಿದ್ದರೆ ಎಷ್ಟು ಚೆನ್ನಾಗುತಿತ್ತು; ಅದರಿಂದ ಆ ಹಾದಿಯಲ್ಲಿ ಸಾಗುವವರಿಗೆ ಎಷ್ಟು ಉಪಕಾರವಾಗುತಿತ್ತು–ಎಂದು ತೋರಿದೆ. ಅವರು ಕಣ್ಮರೆಯಾಗುತ್ತಲೇ ಅವರಜತೆಗೆ ಈ ಅಪಾರ ಸಂಪತ್ತೂ ನಷ್ಟವಾಯಿತಲ್ಲ — ಎಂದು ನನಗನಿಸಿದೆ; ಅನಿಸಿ ವ್ಯಥೆಯಾಗಿದೆ.

ಕೆಲವೊಮ್ಮೆ ಇಂತಹ ಮರುಳು ವಿಚಾರ ಸರಣಿಯನ್ನು ನೆನೆದಾಗ ನನಗೆ ನಗು ಬರುತ್ತದೆ. ಭವಿಷ್ಯತ್ತಿನ ಬಗ್ಗೆ ಎಂತಹ ಚಿಂತೆಯಪ್ಪಾ-ಎಂದನಿಸುತ್ತದೆ. ಮೈಕೆಲ್ ಎಂಜೆಲೊ ಮಹಾ ಶಿಲ್ಪಿಯಷ್ಟೆ! ಅವನು ಕಲೆಯನ್ನೇ ಕುರಿತು ಏಕೆ ಒಂದು ಉದ್ಗ್ರಂಥ ಬರೆದಿರಬಾರದು? ಜೀವನದಲ್ಲಿ ಯಶಸ್ಸು ಗಳಿಸಿದ ಡೇಲ್ ಕಾರನಿಗಿಯ ಮಾದರಿಯನ್ನು ಅನುಸರಿಸಿ, ಕಾಳಿದಾಸನು ಕಾವ್ಯಕಲೆಯನ್ನು ಕುರಿತು ಏಕೆ ಬರೆದಿರಬಾರದು– ಎಂಬ ಪ್ರಶ್ನೆಗಳಷ್ಟೇ ಮರುಳು ಪ್ರಶ್ನೆ ಇದು. ನಮ್ಮ ತಂದೆಯ ಪರಿಚಯ ನಮಗೆ ಸಾಕಷ್ಟು ಆಗಿಲ್ಲವೆಂದೇ ನನಗೆ ವ್ಯಥೆ. ನಮ್ಮ ತಂದೆ ನಮಗಾಗಿ ತಮ್ಮನ್ನು ಉಳಿಸಿಕೊಂಡಿದ್ದರೆ ಅದೇ ದೊಡ್ಡದು. ಆದರೆ ಮನುಷ್ಯ ಮರ್ತ್ಯನು. ಹಾಗಿರುತ್ತ ಅವರು ಬದುಕಿದ್ದಾಗ ಅವರ ಪ್ರೇರಣೆಯಿಂದ, ಅವರ ಆದರ್ಶದಿಂದ ನಮ್ಮ ಜೀವನ ಅರಳಬೇಕೆಂಬುದು, ಬೆಳೆಯಬೇಕೆಂಬುದು, ನಾವು ಪಡಬೇಕಾದಂಥ ಆಸೆಯೇ ಸರಿ.

ನಮ್ಮ ತಂದೆ ಹುಟ್ಟು ಉಪಾಧ್ಯಾಯರು ಎಂದು ಒಂದೇ ಮಾತಿನಲ್ಲಿ ಹೇಳಬಹುದು. ಹಾಗೆ ಹೇಳಿದಲ್ಲಿ ಅದನ್ನು ವಿವರಿಸಿದಂತಾಗಲಿಲ್ಲ; ಕಾರ್ಯ, ಕಾರಣಗಳನ್ನು ಕೊಟ್ಟಂತಾಗಲಿಲ್ಲ. ನಮ್ಮೆಲ್ಲರಿಗೂ ಗೊತ್ತಿದ್ದಂತೆ ಶಿಕ್ಷಣ ಪ್ರವೃತ್ತಿ ಅನುವಂಶೀಯ ಸ್ವಭಾವವಲ್ಲ. ಒಬ್ಬನು ಹುಟ್ಟು ಉಪಾಧ್ಯಾಯ– ಎಂದರೆ ಆತನಲ್ಲಿ ಎಳೆತನದಿಂದಲೂ ಶಿಕ್ಷಣ ವೃತ್ತಿಗೆ ಬೇಕಾದಂತಹ ಶೀಲ, ಗುಣಗಳು ಅಡಕವಾಗಿವೆ — ಎಂಬುದೇ ತಾತ್ಪರ್ಯ. ನಮ್ಮ ತಂದೆ ಅಷ್ಟನ್ನೆಲ್ಲ ಹೇಗೆ ಗಳಿಸಿದರು– ಎಂಬುದು ಉತ್ತರಿಸಲಾಗದ ಪ್ರಶ್ನೆ. ಅವರು ಬೆಳೆದಂಥ ಆವರಣ, ಅವರ ಸಮ ವಯಸ್ಕರಾದ ಸಹಪಾಠಿಗಳ ಆವರಣದಂತೆಯೇ ಇತ್ತು. ಪಂಡಿತರ ಸಮೂಹದಲ್ಲಿ ಅವರು ಬೆಳೆದವರಲ್ಲ. ಆಗಿನ ದಿನಗಳಲ್ಲಿ ಅವರಿಗೆ ದೊರೆತ ವಿದ್ಯಾಭ್ಯಾಸವೂ ಸಾಮಾನ್ಯವಾದುದು. ಅವರು ಕಲಿತ ಶಾಲೆಗಳೂ ಸಾಮಾನ್ಯವಾದುವೇ. ಯಾರಾದರೊಬ್ಬನು ಮಕ್ಕಳ ಮನಸ್ಸನ್ನರಿತ

ಮಾಹಾಶಿಲ್ಪಿಯಿಂದ ಅವರಿಗೆ ಪ್ರೇರಣೆ ದೊರಿತು ಅವರು ಶಿಕ್ಷಕರಾಗಿ ರೂಪುಗೊಂಡುದೂ ಅಲ್ಲ.

ಅವರ ಕಾಲದಲ್ಲಿ ಊರಲ್ಲಿದ್ದ ಶಾಲೆಗಳು ಐಗಳ ಮಠದ ಮಾದರಿಗಳು; ಉಪಾಧ್ಯಾಯರೂ ಹಳೆಗಾಲದ ಐಗಳೇ. ಹೀಗಾಗಿ ಅವರು ಶಿಕ್ಷಣ ಕಲೆಯಲ್ಲಿ ಪ್ರಯೋಗ, ಸಾಹಸಗಳನ್ನು ಮಾಡತೊಡಗಿದ್ದಾದರೆ ವಿದ್ಯಾರ್ಥಿ ದೆಸೆಯಲ್ಲಿ ತಮಗಾದ ಅನುಭವಗಳಿಂದ ಮೂಡಿದ ಪ್ರತಿಕ್ರಿಯೆಗಳಿಂದಿರಬೇಕು. ಆ ಬಗೆಯ ಪ್ರತಿಕ್ರಿಯೆಗಳು ಉಂಟಾಗಬೇಕಾಗಿದ್ದರೆ ತಕ್ಕ ಮನೋವೃತ್ತಿಯು ಶಿಶುವಾಗಿದ್ದಾಗಲೂ, ವಿದ್ಯಾರ್ಥಿಯಾಗಿದ್ದಾಗಲೂ ಅವರಲ್ಲಿರಬೇಕಿತ್ತು. ಅವರು ಚುರುಕುಬುದ್ಧಿಯವರು. ಉಪಾಧ್ಯಾಯರು ಕಲಿಸುವುದನ್ನು ಕೆದಕಿ ನೋಡುವ ಶಕ್ತಿ ಇದ್ದವರು. ಹೆಚ್ಚಿನ ವಿಚಾರಪರತೆ, ಚುರುಕುತನ ಅವರಲ್ಲಿತ್ತು. ಏನಾದರೊಂದು ಸಮಸ್ಯೆ ಹೇಳಿದರೆ, ಲೆಕ್ಕ ಹೇಳಿದರೆ ಥಟ್ಟನೆ ಉತ್ತರ ಹೇಳುತ್ತಿದ್ದರು. ತರ್ಕಿಸುವ ರೀತಿ ತಮ್ಮದೇ ಆದದ್ದು. ಎಷ್ಟೋ ಸಾರಿ ರೂಢಿಯ ರೀತಿಗಳಿಗಿಂತ ಸುಲಭವಾದ್ದು-ಎಂಬ ಸಂಗತಿಯನ್ನೂ ಕೇಳಿದ್ದೇನೆ. ಹೀಗಾಗಿ ಶಾಲೆಗಳಲ್ಲಿ ಪಾಠ ಹೇಳುವ ವಿಷಯಗಳ ಮುಖ್ಯಾಂಶವನ್ನು ಒಡನೆ ಗ್ರಹಿಸುತ್ತಿದ್ದಿರಬೇಕು. ಅವನ್ನು ಸಿದ್ಧಾಂತಗೊಳಿಸುವ ಸುಲಭದಾರಿಯನ್ನು ಹುಡುಕುತಿದ್ದಿರಬೇಕು. ಎಷ್ಟೋ ಬಾರಿ ಉಪಾಧ್ಯಾಯರು-ರೂಢಿಯಿಂದ ಬಂದ ತರ್ಕ, ರೀತಿಗಳಿಂದ ಬಂದ ಯಾವುದಾದರೂ ಸಿದ್ಧಾಂತಕ್ಕೆ ಕಾರಣಗಳನ್ನು ತೋರಿಸುವಾಗ, ತಂದೆಗೆ ಆಶ್ಚರ್ಯವೆನಿಸಿರಬೇಕು. 'ಯಾಕಪ್ಪ, ಇಷ್ಟೆಲ್ಲ ಬಳಸು ದಾರಿ? ರೀತಿ, ಗೀತಿ ಎಂದು ಸುತ್ತಿ, ಸುತ್ತಿ, ನೇರಾದ, ಸರಳವಾದ ದಾರಿಯನ್ನು ಬಿಡುವುದೇತಕ್ಕೆ? ಕಲಿಸುವುದಕ್ಕೂ ಎಷ್ಟು ತೊಂದರೆ! ಕಲಿಯುವುದಕ್ಕೂ ಎಷ್ಟು ತೊಡಕು! ವಿಷಯ ಪ್ರತಿಪಾದನೆಯಲ್ಲೂ ಮುಖ್ಯ, ಅಮುಖ್ಯಗಳನ್ನುಬೆರಸಿಬಿಡುತ್ತಾರಲ್ಲ ಎಂದು ಹೊಳೆಯುವುದು ಸಹಜ.

ಇನ್ನು ಅವರ ಬೆಳವಣಿಗೆಗೆ-ಮನೆಯ ವಾತಾವರಣ ತುಂಬ ಪ್ರಭಾವವನ್ನು ಬೀರಿರಬೇಕೆಂದು ನನಗನಿಸುತ್ತದೆ. ಅವರ ಮನೆಯೆಂಬುದು ಹಳೆಗಾಲದ,ಹಿಂದೂ ಸಂಸ್ಕೃತಿಯ, ಸಂಪ್ರದಾಯದ ಕೇಂದ್ರವಾಗಿತ್ತು. ಉತ್ತಮ ತರದ ಸಾಮಾಜಿಕ ಶಿಷ್ಟಾಚಾರದಿಂದಲೂ ಶ್ರೇಷ್ಟತರವ ಪಾರಮಾರ್ಥಿಕ ಮನೋವೃತ್ತಿಯಿಂದಲೂ ಕೂಡಿತ್ತು. ಈ ಜಗಜ್ಜೀವನ ಕ್ಷಣಭಂಗುರವೆಂಬ ನಿರಾಶಾವಾದವು, ಮಾನವತೆಯ ಪ್ರಾಪಂಚಿಕತೆಯೊಡನೆ ಸರಸವಾಗಿ ಮೇಳಗೊಂಡಿದ್ದ ಆವರಣವಾಗಿತ್ತು. ಅಂಥೊಂದು ಆವರಣದಲ್ಲಿ ನಮ್ಮ ವಿಚಾರಪರತೆಗೂ, ಅನುಮಾನಕ್ಕೂ, ವಿಮರ್ಶೆಗೂ, ಶ್ರದ್ಧೆ ಎಂಬ ವಸ್ತುವಿನೊಡನೆ ವಿರಸವಿರಲಿಲ್ಲ. ನಮ್ಮ ತಂದೆಯವರ ಚಿಕಿತ್ಸಕ ಬುದ್ಧಿ ಅದರಿಂದ ಬಚ್ಚಲಿಲ್ಲ; ಬತ್ತಲಿಲ್ಲ. ಅದಕ್ಕೆ ತಕ್ಕ ಪುಷ್ಟಿ ದೊರೆಯದೆ ಹೋದರೂ ಉಳಿದವರಿಗಿಂತ ಹೆಚ್ಚಾಗಿ ಅವರು ತಮ್ಮ ಜ್ಞಾನದ ಹಸಿವಿಗೆ ತಕ್ಕಆಹಾರವನ್ನು ದೊರಕಿಸಿಕೊಳ್ಳುವುದಕ್ಕೆ ಶಕ್ತರಾದರು.

ನಮ್ಮ ತಂದೆಯವರನ್ನು ಶಿಕ್ಷಣ ವೃತ್ತಿಗೆ ತಕ್ಕವರನ್ನಾಗಿ ಮಾಡಿದ ಗುಣವೆಂದರೆ-ಅವರಿಗೆ ಜ್ಞಾನ ಸಂಗ್ರಹ, ಸಮಸ್ಯಾಪೂರ್ತಿಗಳಲ್ಲಿ ದೊರಕುತ್ತಿದ್ದ ತೃಪ್ತಿಗಿಂತ ಹೆಚ್ಚಾಗಿ, ತಾನು ತಿಳಿದುದನ್ನು ಇನ್ನೊಬ್ಬರಿಗೆ ಹೇಳಿಕೊಟ್ಟು, ಅವರ ಮನಸ್ಸು ಬೆಳಗುವಂತೆ ಮಾಡಬೇಕೆಂಬ ಆತುರ ಇದ್ದುದು. ದೊಡ್ಡ ಪ್ರಶ್ನೆಗಳನ್ನೂ ಸುಲಭವಾಗಿ, ಸರಳವಾಗಿ ತಿಳಿಯಬೇಕೆಂಬ ಕುತೂಹಲ, ಸಮಸ್ಯೆಗಳ ತಿರುಳನ್ನು ಕಂಡುಹಿಡಿವ ಗುಣ-ಇವೆಲ್ಲ ಅವರಲ್ಲಿ ಹೆಚ್ಚಾಗಿತ್ತು. ಈ ಆಟದಲ್ಲಿ ಸಹಪಾಠಿಗಳನ್ನು ಕರೆದುಕೊಂಡು ಜ್ಞಾನದ ಅರಣ್ಯದಲ್ಲಿ ಅನ್ವೇಷಣೆ ಮಾಡುವುದಕ್ಕೆ ಅವರಿಗೆ ಉತ್ಸಾಹ. ಹೊಸ ದಾರಿ ಹುಡುಕುವುದಕ್ಕೆ ಹೆಚ್ಚಿನ ಆನಂದ. ಪ್ರಪಂಚದ ಜ್ಞಾನಾಭಿವೃದ್ಧಿಯೆಲ್ಲವು ಈ ಬಗೆಯ ಅನ್ವೇಷಣಾ ಬುದ್ಧಿಯಿಂದಲೇ ಉಂಟಾದದ್ದು. ಸಾಮಾನ್ಯವಾಗಿ ನಮ್ಮವರು ಇಂತಹ ಪರಿಶ್ರಮ, ಪ್ರಯೋಜನಕಾರಿ ಎಂದು ತಿಳಿಯುವುದಿಲ್ಲ. ಹೊರಗಿನ ಪ್ರೇರಣೆ,ಆದರ್ಶಗಳಿಲ್ಲದೆ, ನಮ್ಮ ತಂದೆ ಅನುಸರಿಸುತ್ತಿದ್ದ ಮಾರ್ಗ ಮಾತ್ರ ಈ ಬಗೆಯದು.

ನಮ್ಮ ತಂದೆಯ ಜೀವನದುದ್ದಕ್ಕೂ,ತನ್ನಲ್ಲಿರುವ ಜ್ಞಾನವನ್ನು ತಾನು ದೊರಕಿಸಿಕೊಂಡ ತಿಳಿವನ್ನು, ಗೆಳೆಯರೊಡನೆ ಹಂಚಿ ಉಣ್ಣಬೇಕೆಂಬ ಆಸೆಯು ಎದ್ದು ಕಾಣುತ್ತದೆ. ಅವರಿಗೆ ತನ್ನ ಸುತ್ತಲಿನ ಜನವರ್ಗದ ಮೇಲಿದ್ದ ಮಮತೆಯಿಂದಾಗಿ ತಾವೊಬ್ಬರೇ ಜ್ಞಾನದ ಬೆಟ್ಟವನ್ನು ಹತ್ತುವುದೂ; ಸಹಚರರು ಹಿಂದಕ್ಕೆ ನಿಲ್ಲುವುದೂ ಸಹಿಸುತ್ತಿರಲಿಲ್ಲ. ಈ ಗುಣದಿಂದಾಗಿಯೇ ಅವರು ಶಿಕ್ಷಕ ವೃತ್ತಿಗೆ ತಕ್ಕವರಾದದ್ದು. ಉತ್ತಮ ಶಿಕ್ಷಕನಾದವನಿಗೆ ತನ್ನ ಜ್ಞಾನವನ್ನು ಇತರರೊಡನೆ ಬೆರೆತು ಸವಿಯುವುದರಲ್ಲಿ ದೊರಕುವಷ್ಟು ಆನಂದ ಇನ್ನೇತರಿಂದಲೂ ಬರಲಾರದು.

ಅವರಲ್ಲಿನ ಶಿಕ್ಷಕ ಗುಣಕ್ಕೆ ಸಮ್ಮೇಳವಾಗಿ ಹೋದ ಇನ್ನೊಂದು ಗುಣವೆಂದರೆ ಕವಿತನ. ಅವರ ಮಾನಸಿಕ ಚಟುವಟಿಕೆ ತುಂಬ. ಅದರ ಜತೆಗೇನೆ ಕಾಣಿಸುತ್ತಿದ್ದುದು-ಸೂಕ್ಷ್ಮವಾದ ಸೌಂದರ್ಯಾಸ್ವಾದನ ಶಕ್ತಿ. ಆ ಚೆಲುವು, ಆ ಸೌಂದರ್ಯಗಳು ಧ್ವನಿಯಿಂದುಂಟಾಗಿರಲಿ! ಮಾತಿನಿಂದ ಬರಲಿ! ಗೀತಾಲಾಪದಿಂದ ಹೊರಡಲಿ! ಇಲ್ಲವೆ ರೂಪ ಪ್ರತಿರೂಪಗಳ ತರಂಗದಿಂದುಂಟಾಗಲಿ-ಎಲ್ಲವನ್ನು ಮೆಚ್ಚಿದವರು ಅವರು. ಈ ಪ್ರತಿಯೊಂದೂ-ನಮ್ಮ ವಿಚಾರ, ಭಾವನೆಗಳನ್ನು ಪ್ರಕಟಿಸುವುದಕ್ಕೆ ಅನುಕೂಲವೆಂದರಿತುಕೊಂಡರು. ಚೆಲುವಿನ ಕಡೆಗೆ ಅವರಿಗಿದ್ದ ಈ ಸೂಕ್ಷ್ಮಗ್ರಾಹಿ ಶಕ್ತಿಯಿಂದಾಗಿ ಎರಡೆರಡು

ಬಗೆಯ ಆನಂದಗಳು ಅವರಿಗುಂಟಾಗುತ್ತಿದ್ದುವು. ತಮಗಾಗುತ್ತಿರುವ ಆನಂದದ ಜತೆಗೆ, ಇನ್ನೊಬ್ಬರಲ್ಲಿ ಭಾವಾವೇಶವನ್ನು ಮೊಳಗಿಸಬಹುದೆಂಬ ಆನಂದ. ತಮ್ಮನ್ನು ಕದಡಿಸಿದ ಮಾತು ಧ್ವನಿಗಳನ್ನೆಲ್ಲ ಅವರು ಪುನರಪಿ ಪಠಿಸಿ, ಅದರಿಂದ ಶ್ರೋತಾರರಲ್ಲಿನ ಭಾವನೆಗಳೂ ಉದ್ರೇಕಗೊಳ್ಳುವಂತೆ ಮಾಡುತ್ತಿದ್ದ ಪ್ರಸಂಗಗಳನ್ನು ಅನೇಕರು ಕಂಡಿದ್ದಾರೆ. ಅವರಲ್ಲಿರುವ ಈ ಹೆಚ್ಚಿನ ಅನುಕಂಪನಾ ಶಕ್ತಿಯಿಂದಾಗಿ ಅವರು ಒಳ್ಳೆಯ ಶಿಕ್ಷಕರೂ, ಕವಿಯೂ ಆಗುವುದಕ್ಕೆ ಸಾಧ್ಯವಾಯಿತು. ಅವರಲ್ಲಿನ ಈ ಗುಣಗಳ ಪ್ರತೀಕವನ್ನು, ಬಹುಕಾಲದ ಬಳಿಕ ಅವರು ಬರೆದ ಮಕ್ಕಳ ಕಥೆಯೊಂದರಲ್ಲಿ ನಾವು ಕಾಣಬಹುದಾಗಿದೆ. 'ಒಡ್ಡನ ಓಟ' ಎಂದು ಆ ಕತೆಗೆ ಹೆಸರು. ಮೂವರು ಅಣ್ಣತಮ್ಮಂದಿರಿದ್ದಾರೆ. ಅವರಲ್ಲಿ ಕಿರಿಯಾತ ಹಿರಿಯರಂತಲ್ಲ. ಎಂದೂ ತಣಿಯಲಾರದ ಕುತೂಹಲ ಬುದ್ಧಿ ಅವನದು. ತಾನು ಕೇಳಿದ ಅಪೂರ್ವ ಸದ್ದುಗಳನ್ನು ಹಿಂಬಾಲಿಸಿಕೊಂಡು ಹೊರಟು ಹೋದ. ಹಾಗೆ ಅನ್ವೇಷಣಾ ಬುದ್ಧಿಯಿಂದ ಹೊರಟು, ಅದರಿಂದ ದೊರೆತ ಅಪೂರ್ವ ತಿಳಿವಿನಿಂದ, ಮುಂದೆ ಅಸಾಧ್ಯದ ಕೆಲಸಗಳನ್ನೂ ಆತ ಸಾಧಿಸುತ್ತಾನೆ. ತಾನು ವಿಜಯಶಾಲಿಯಾದ ಮೇಲೆ, ಸೋದರರನ್ನು ಜತೆಗೆ ಬನ್ನಿ ಎಂದು ಕರೆದು ಕೂಡಿಕೊಳ್ಳುತ್ತಾನೆ. ನಿಜಕ್ಕೂ ಇಂತಹದೇ ಗುಣ ವಿಶೇಷ ಅವರಲ್ಲಿತ್ತು.

ಇವೆಲ್ಲ ಎಳೆದು ತಂದ ಸಮಾಧಾನಗಳು, ಕಾರಣಗಳು ಎಂದು ಅನಿಸಬಹುದಾದರೂ, ನಮ್ಮ ತಂದೆಯ ಬಾಲ್ಯದ ಮನೋಲಹರಿಗಳನ್ನು ಅವರು ಪ್ರಬುದ್ಧಾವಸ್ಥೆಯಲ್ಲಿ ತೋರಿದ ಶಿಕ್ಷಕ, ಕವಿ ಮನೋವೃತ್ತಿಗಳೊಡನೆ ಹೋಲಿಸಿ ನೋಡಿದರೆ, ಈ ನಿರ್ಧಾರಗಳಿಗೆ ಬರಬೇಕಾಗುತ್ತದೆ. ಅವರಲ್ಲಿ ಕುತೂಹಲ ಬುದ್ಧಿ, ಮಾನಸಿಕ ಚಟುವಟಿಕೆಗಳು ಹೆಚ್ಚಾಗಿದ್ದುವು. ಎರಡನೆಯದಾಗಿ—ಧ್ವನಿಯಿಂದ ಮೊಳಗಬಲ್ಲ ಸೌಂದರ್ಯವನ್ನು ಅನುಭವಿಸುವಂಥ ಶಕ್ತಿ ಇತ್ತು. ಅವುಗಳನ್ನು ಮರುಧ್ವನಿಸುವ ಭಾವಾವಿಷ್ಟತೆಯೂ ಇತ್ತು. ಈ ಎರಡು ಗುಣಗಳ ಜತೆಗೆ-ಸಹಚರರ ಮೇಲಿನ ಪ್ರೇಮ, ಜತೆಯವರೊಡನೆ ತಾನು ಈ ಚೆಲುವುಗಳನ್ನು ಸವಿಯಬೇಕೆಂಬ ಆತುರವೂ ತುಂಬಿತ್ತು. ಮೊದಲನೆಯ ಗುಣ ಮನಸ್ಸಿನ ಹಿರಿಮೆಯನ್ನೂ, ಎರಡನೆಯದು ಅಂತಃಕರಣದ ಸೂಕ್ಷ್ಮತೆಯನ್ನೂ, ಮೂರನೆಯದು ಶೀಲ, ಸ್ವಭಾವಗಳ ಸಂಸ್ಕೃತಿಯನ್ನೂ ಸೂಚಿಸುತ್ತವೆ. ಈ ಗುಣಗಳು ಅವರ ಜೀವಮಾನದಲ್ಲೆಲ್ಲಾ ಬೆಳಗಿ ಬಂದಿವೆ. ಅವರು ಕವನ ಬರೆಯಲು ಕುಳಿತರೆಂದರೆ, ಏಕಾಗ್ರಚಿತ್ತರಾಗಿ, ಅವಿಶ್ರಾಂತರಾಗಿ ಕುಳಿತುಕೊಂಡು ತನ್ನ ತೃಪ್ತಿಗಾಗಿ ಮಾನಸಿಕ ಕ್ರಿಯೆಯಲ್ಲಿ ತಲ್ಲೀನರಾಗಬಲ್ಲರು. ಅದು ಬರಿದೇ ಕುಳಿತಿರುವ ಮನಸ್ಸಲ್ಲ. ಪ್ರತಿಯೊಂದಕ್ಕೂ ಅರ್ಥವನ್ನು ಹುಡುಕಬಲ್ಲದ್ದು. ಅದು ನದಿಯೊಂದರಂತೆ ಜಗತ್ತಿನಲ್ಲಿ ಹರಿಯುತ್ತ, ಮುಂದುವರಿಯುತ್ತ ಜೀವನದ ಸೊಗಸುಗಳ ಪರಿಚಯ ಮಾಡಿಕೊಳ್ಳುತ್ತ ತನ್ನಂತೆಯೇ ಚೆಲುವಿನ ಅನ್ವೇಷಣೆಗೆ ಹೊರಟ ಇತರ ಉಪನದಿಗಳನ್ನು ಕೂಡಿಕೊಳ್ಳುತ್ತ-ಮುಂದುವರಿಯುತ್ತಿದ್ದಿತು. ಹೀಗೆ ಹಲವೊಂದು ಸಹಾನುಭವಿ ಹಳ್ಳಗಳಿಂದ ಕೂಡಿಕೊಂಡ ನದಿಯು ಅಗಲವಾಗಿ, ಆಳವಾಗಿ, ತುಂಬಿ ತುಳುಕಿ, ಹರಿಯುವುದರ ಪರಿಣಾಮವೆಂದರೆ, ಅದು ಹರಿಯುವ ದಾರಿಯ ಇಕ್ಕಡೆಗಳಲ್ಲೂ ಚೆಲುವಿನ ಹಸುರು ನಲಿದಾಡುವುದು.

ಅವರು ಕೈಕೊಂಡ ಉಪಾಧ್ಯಾಯ ವೃತ್ತಿಗೆ ತಕ್ಕುದಾದ ಮಾನಸಿಕತೆ, ಭಾವನೆಗಳು ಅವರಲ್ಲಿ ಇದ್ದುದು ನಿಜವಾದರೂ, ಆ ವ್ಯವಸಾಯವನ್ನು ಕೊಳ್ಳುವಂತೆ ಮಾಡಿದ ಪ್ರಸಂಗಗಳು ಮಾತ್ರ ಜೀವನದ ಕಷ್ಟ, ನಿಷ್ಠುರಗಳು. ತಂದೆ ತಾಯಿಯರಿಗೆ ಅವರೊಬ್ಬರೇ ಮಕ್ಕಳಲ್ಲ. ಇನ್ನೂ ಕೆಲವು ಮಕ್ಕಳಿದ್ದರು. ಅವರನ್ನು ನೋಡಿಕೊಳ್ಳಬೇಕಾದ ಹೊಣೆ ಅವರ ಮೇಲಿತ್ತು. ಅವರಿಗೆಲ್ಲ ತನ್ನಿಂದಾದ ಸಹಾಯಮಾಡಿ ತಮ್ಮ ಕಾಲಮೇಲೆ ನಿಲ್ಲುವಂತೆ ಮಾಡಬೇಕಾದರೆ ಹಣದ ಅಭಾವ ತುಂಬ. ಇತರರಿಗೆ ಪಾಠ ಹೇಳಿ, ಹಣ ಸಂಪಾದಿಸಬೇಕಾದ ಕಷ್ಟ ಜೀವನ ಬಂದಿತು. ಆ ದಿನಗಳಲ್ಲಿ ಅವರ ಇದಿರಿಗೆ ಕಾಣಿಸಿದ ಒಂದೇ ಒಂದು ಉದ್ಯೋಗವೆಂದರೆ—ಉಪಾಧ್ಯಾಯ ವೃತ್ತಿ. ಅದಕ್ಕೆ ಬೇಕಾದ ಶಿಕ್ಷಣವನ್ನು ತಾನು ದೊರಕಿಸಿಕೊಂಡು ಮಾಸ್ತರಿಕೆಯನ್ನು ಸುಲಭದಲ್ಲಿ ಸಂಪಾದಿಸಿಕೊಂಡರು. ಅವರು ಕೆಲಸ ಹುಡುಕುತಿದ್ದಾಗ ಕಣ್ಣೆದುರೊಂದು ಕನ್ನಡ ಪಂಡಿತರ ಕೆಲಸ ಖಾಲಿ ಇತ್ತು. ಅದರ ಬದಲು ಬೇರೆಯೇ ಒಂದು ಉದ್ಯೋಗ ಖಾಲಿ ಇದ್ದಿದ್ದರೆ, ಅದಕ್ಕೂ ಅರ್ಜಿ ಹಾಕಬೇಕಿತ್ತು. ಅದು ಹೇಗೆಯೇ ಇರಲಿ—ಅವರು ವಯಸ್ಸಿಗೆ ಬರುವಾಗ, ಅಭಿರುಚಿಗೆ ಸಮನಾಗಿಯೊ, ಅಥವಾ ಸಾಂಪತ್ತಿಕ ದುಸ್ಥಿತಿಯನ್ನು ನಿವಾರಿಸುವುದಕ್ಕೊ, ಆರಂಭದಿಂದಲೂ ಉಪಾಧ್ಯಾಯರಾದರು. ತಮ್ಮ ಶಕ್ತಿಯನ್ನೆಲ್ಲಾ ಅದಕ್ಕಾಗಿ ವಿನಿಯೋಗಿಸಿದರು. ಅವರ ಜೀವಮಾನದಲ್ಲಿ ಒಂದಲ್ಲ ಒಂದು ಬಗೆಯ ವಿದ್ಯಾರ್ಥಿಗಳು ಅವರಸುತ್ತಲಿದ್ದರು. ಜೀವನದಲ್ಲಿ ಅವರು ಉಪಾಧ್ಯಾಯರಾಗಿಲ್ಲದ ವೇಳೆಯೇ ಇರಲಿಲ್ಲ.

ಅವರ ಉಪಾಧ್ಯಾಯ ವೃತ್ತಿಯ ಪ್ರಾರಂಭವೇನೊ ಕಾಲೇಜಿನಲ್ಲಿ ತೊಡಗಿತು. ಕಾಲೇಜಿನ ಹುಡುಗರಿಗೂ, ಹೈಸ್ಕೂಲಿನ ಹುಡುಗರಿಗೂ ಪಾಠ ಹೇಳಿದರು. ಆದರೆ ಅವರಿಗೆ ಅಭಿರುಚಿಯನ್ನುಂಟುಮಾಡಿದ ಶೈಕ್ಷಣಿಕ ವಿಷಯಗಳೆಂದರೆ-ಶಿಶು ಶಿಕ್ಷಣ ಮತ್ತು ಪರಭಾಷಾ ಶಿಕ್ಷಣ. ಆಗಿನ ದಿನಗಳಲ್ಲಿ ರೂಢಿಯಲ್ಲಿದ್ದ ಪಠ್ಯ ಕ್ರಮದಲ್ಲಿ ಅ-ಅಳಿಲು, ಆ-ಆನೆ, ಇ-ಇಲಿ-ಎಂಬಿತ್ಯಾದಿ ಪಾಠಗಳನ್ನು ಉರುಹಾಕಿಸಿ, ಕಲಿಸಿ

ಕೊಡುವುದು ರೂಢಿಯಾಗಿತ್ತು. ಈ ದಾರಿಯು ಅವರಿಗೆ ರುಚಿಸಲಿಲ್ಲ. ಇದರಿಂದ ಮಗುವಿನ ಮನಸ್ಸು ಅಕ್ಷರಕ್ಕೇ ಹೋಗುತ್ತದೆ ಹೊರತು, ಸೂಚಿತವಾಗುವ ವಸ್ತುಗಳಿಗೆ, ಶಬ್ದಗಳಿಗೆ ಹರಿಯುವುದಿಲ್ಲ. ಅಕ್ಷರ ಬಿಡಿಸಿ, ಓದಿ, ಶಬ್ದವಾಗಿ ಮಾಡಿದಲ್ಲಿ ಸಮಯವೂ ಹಾಳು, ಮನಸ್ಸಿಗೂ ದಣಿವು. ಮಾತೃ ಭಾಷೆಯಲ್ಲೇ ಪಾಠಹೇಳುವಾಗ ಅಂಥ ಚಿತ್ರವನ್ನು ಮುಂದಿರಿಸಿ ಅ-ಅಳಿಲು, ಆ-ಆನೆ ಎನ್ನುವ ರೀತಿಯು ಸಮನಾದೀತು. ಅಳಿಲು, ಆನೆ, ಇಲಿ-ಮೊದಲಾದ ಶಬ್ದಗಳು ಸೂಚಿಸುವ ಪ್ರಾಣಿಗಳ ಮಾನಸಿಕ ಬಿಂಬ ಆಗ ಉಂಟಾಗುತ್ತದೆ. ಆಗ ಕಣ್ಣಿಂದ ಕಾಣುವ ಪ್ರಥಮಾಕ್ಷರಗಳನ್ನು ಅದರೊಂದಿಗೆ ಜೋಡಿಸಿ ಅ, ಆ, ಇ, ಈ ಗುರುತಿಸುವುದು ಸಾಧ್ಯ. ಆದರೆ ಕಲಿಯುವ ಭಾಷೆಯು ಮಾತೃ ಭಾಷೆಯಲ್ಲದಿದ್ದರೆ ಗತಿಯೇನು? ಇಂಗ್ಲಿಷ್ ಆದರೆ? ಎಪ್ಪಲ್, ಬೇರ್, ಕೇಟ್ ಎಂಬುದನ್ನು ಎ, ಬಿ, ಸಿ ಅಕ್ಷರಗಳ ಸಲುವಾಗಿ ಹೇಳಿದಾಗ ಅರ್ಥಶೂನ್ಯವೂ ಆಗುತ್ತದೆ. ಮೊದಲು ಹೆಸರಿನ ಪರಿಚಯ, ಅನಂತರ ಅಕ್ಷರಗಳ ಧ್ವನಿ, ಇವನ್ನು ಬರಹದ ರೂಪದಲ್ಲಿ ಇಡುವಾಗ ಹೊಂದಿಸಿಕೊಂಡು, ಆ ಶಬ್ದದ ಬಳಕೆಯನ್ನು ಕಲಿಯಬೇಕಾಗುತ್ತದೆ. ಹೀಗೆಲ್ಲಮಾಡುವಾಗ–ಇದೆಲ್ಲಾ ಯಾತಕ್ಕೆ–ಎಂದು ಮಗುವು ಗ್ರಹಿಸುವುದು ಸಹಜ. ಪರಭಾಷೆಯೊಂದನ್ನು ಕಲಿಸುವ ಪ್ರಸಂಗ ಬಂದಾಗ, ಈ ಬಗೆಯ ಶಿಕ್ಷಣ ಕ್ರಮವು, ಪುಸ್ತಕಗಳು ಅವೆಷ್ಟೇ ಚಿತ್ರ ಭರಿವಾಗಿರಲಿ, ಅರ್ಥಶೂನ್ಯವಾಗಿ ಬಿಡುತ್ತವೆ. ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಉತ್ತರಭಾಗವನ್ನು ಬಿಟ್ಟರೆ, ಮಕ್ಕಳ ಮನೆಯ ಮಾತು ತುಳು, ಕೊಂಕಣಿ. ಶಾಲೆಯಲ್ಲಿ ಬೇಗ ಬೇಗನೆ ಕನ್ನಡವನ್ನು, ಅದರ ಬೆನ್ನಿಗೆ ಇಂಗ್ಲಿಷನ್ನೂ ಅಂದರೆ ಎರಡೆರಡು ಪರಭಾಷೆಗಳನ್ನೂ ಕಲಿಯುವ ಪ್ರಸಂಗ ಬಂದಾಗ ಅಷ್ಟಿಷ್ಟು ಕಷ್ಟವಲ್ಲ. ಮಾತೃಭಾಷೆಯಲ್ಲಿ ಕಲಿಯುವ ಅನುಕೂಲತೆ ಇದ್ದವರಿಗೆ ಅದು ತಿಳಿಯಲಾರದು.

ಶಿಶು ಶಿಕ್ಷಣದಲ್ಲಿ ಈ ಸಮಸ್ಯೆಯು ಬಹು ಮುಖ್ಯವಾದ ಸಮಸ್ಯೆಯೆಂದೂ ರೂಢಿಯ ಶಿಕ್ಷಣ ಪದ್ಧತಿಯಿಂದ ಹಾನಿ ಇದೆಯೆಂದೂ ತಂದೆ ಮನಗಂಡರು. ಇದು ಶಿಶುವಿನ ನೋಟವನ್ನೇ ತಲೆಕೆಳಗೆ ಮಾಡುತ್ತದೆ. ಮೊದಲು ವಸ್ತುವಿನ ಮಾನಸಿಕ ಬಿಂಬ, ಅನಂತರ ಧ್ವನಿ, ಅನಂತರ ಶಬ್ದ, ಅನಂತರ ಅಕ್ಷರಗಳು — ಹೀಗಾಗಬೇಕಾದ ಕ್ರಮವು ಬಿಡು ಅಕ್ಷರದಿಂದ ತೊಡಗಿ, ಮನೋಬಿಂಬದಲ್ಲಿ ರೂಪುಗೊಳ್ಳಬೇಕಾದರೆ ಎಷ್ಟು ತಿರುಗು, ಮುರುಗು?

ಆದರೆ ಸುದೈವದಿಂದ ಮದ್ರಾಸ್ ವಿದ್ಯಾ ಇಲಾಖೆಯವರು ಡಾಕ್ಟರ್ ಎ. ಜಿ. ಬೋರ್ನರವರ ನೇರಾದ ಶಿಕ್ಷಣಕ್ರಮವನ್ನು ಪ್ರಯೋಗಿಸಿ ನೋಡಬೇಕೆಂದು ನಿರ್ಣಯಿಸಿದ್ದರು. ಆಗ ತಮ್ಮ ಸಹಚರರು ನಿರುತ್ಸಾಹ ತೋರಿದರೂ, ನಮ್ಮ ತಂದೆಯವರು ಒಬ್ಬಂಟಿಗರಾಗಿ ಆ ಪ್ರಯೋಗಕ್ಕೆ ಮುಂದಾದರು. ಅದನ್ನು ಯಶಸ್ವಿಯಾಗಿ ಮಾಡಿದರು. ಅದು ಜಿಲ್ಲೆಯುದ್ದಕ್ಕೂ ಪ್ರಸಾರವಾಯಿತು. ಈ ನೇರಾದ ಶಿಕ್ಷಣ ಕ್ರಮದ ಮೊದಮೊದಲ ಪ್ರಯೋಗಗಳು ನಡೆದದ್ದು ಕಾಸರಗೋಡು ತಾಲೂಕಿನ ಹಳ್ಳಿಯ ಶಾಲೆಗಳಲ್ಲಿ. ಅದರ ಹೆಚ್ಚಿನ ಬೆಳವಣಿಗೆಯುಂಟಾದುದು ಮಂಗಳೂರಿನ ಟ್ರೈನಿಂಗ್ ಶಾಲೆಗೆ ಜತೆಗೂಡಿಸಿದ 'ಮಾದರಿ ಶಾಲೆ'ಯಲ್ಲಿ. ನಿಜವಾಗಿಯೂ ಆ ಶಾಲೆ ಮಾದರಿಯೇ ಆಗಿತ್ತು. ಇಂದಿನ ಶೈಕ್ಷಣಿಕ ಸಿದ್ಧಾಂತಗಳ ದೃಷ್ಟಿಯಿಂದ ಅದು ಅಷ್ಟು ಆಧುನಿಕ ಶಾಲೆಯೆನ್ನುವುದು ಕಷ್ಟವಾದರೂ, ಅಂದಿನ ದಿನಗಳಲ್ಲಿ ಆ ಸಣ್ಣ ಸಂಸ್ಥೆಯು ನಾಳಿನ ಸುಧಾರಣೆಯನ್ನು ಇಣಿಕಿನೋಡಬಲ್ಲ ದೃಷ್ಟಿಯನ್ನು ದೊರಕಿಸಿಕೊಟ್ಟಿತು. ಆಟ, ವಿಶ್ರಾಮಗಳು ಆ ಶಾಲೆಯ ಮುಖ್ಯ ತತ್ವವೆನಿಸಿದ್ದು, ಪಾಠಕ್ಕೂ ಆಟದ ರೂಪವನ್ನು ಕೊಡುವ ಪ್ರಯತ್ನ ನಡೆದಿತ್ತು. ಶಾಲೆಗೆ ಚಿಕ್ಕೊಂದು ತೋಟವಿತ್ತು. ತುಂಬ ಗುಲಾಬಿ ಗಿಡಗಳಿದ್ದುವು. ಮಕ್ಕಳಿಗೆ ಆಟದಸಾಮಾನುಗಳ ಕೊರತೆಯಿರಲಿಲ್ಲ. ಚಿತ್ರ, ನಕ್ಷೆ, ತಖ್ತೆಗಳ ಸಂಖ್ಯೆ ಬೇಕಷ್ಟು ಇದ್ದುವು. ಅಷ್ಟೆಲ್ಲ ಸಂಭ್ರಮ ಪೇಟೆಗಳ ಶಾಲೆಗಳಲ್ಲೇ ಇರಲಿಲ್ಲ. ವಸ್ತು ಸಂಗ್ರಹಾಲಯವೊಂದಿತ್ತು ಅಲ್ಲದೆ ಎಳೆಯರ ಸಲುವಾಗಿ ಮೊಲ, ಬಿಳಿ ಇಲಿ, ಪಾರಿವಾಳ, ಗಿಳಿ ಮೊದಲಾದ ಸಾಕು ಪ್ರಾಣಿಗಳನ್ನು ಇರಿಸಿದ್ದರು. ಮಕ್ಕಳು ಇವುಗಳನ್ನು ನೋಡುವ, ಸಾಕುವ ಆತುರ ತೋರಿಸುತ್ತಿದ್ದುದರಿಂದ ಅದು ನಿಜಕ್ಕೂ ಕಿಂಡರ್ ಗಾರ್ಟನ್ ಅಥವಾ ಮಕ್ಕಳ ತೋಟವೆನಿಸಿತ್ತು. ತೀರ ಕೆಳದರ್ಜೆಯ ಎಳೆಯರ ಶಿಕ್ಷಣವೇ ಪ್ರಾಮುಖ್ಯ ಸಂಗತಿ ಎಂದು ತಂದೆ ತಿಳಿದಿದ್ದರು. ನಾಳೆ ಎಂತಹ ಶೈಕ್ಷಣಿಕ ಕಟ್ಟಡ ಕಟ್ಟುವುದಿದ್ದರೂ ಅದರ ಬುನಾದಿ ಎಳೆಯ ವಯಸ್ಸಿನಲ್ಲಾಗಬೇಕು. ಮಗುವಿನ ಶೀಲಕ್ಕೆ ತಕ್ಕ ಪೀಠಿಕೆಯೂ ಸಹ ಶೈಶವದಲ್ಲೇ ಬೀಳಬೇಕು. ಈ ಪ್ರಾರಂಭದ ಶಿಕ್ಷಣದಲ್ಲೇ ರೂಢಿಯನ್ನು ಬದಲಿಸಿ, ಕ್ರಾಂತಿಕಾರಕ ಬದಲಾವಣೆ ಮಾಡಲು ನಮ್ಮ ತಂದೆಯು ಪ್ರಯತ್ನಿಸಿದರು. ಅವರ ಕೆಲಸ ಹೆಚ್ಚಿನ ಯಶಸ್ಸು ಪಡೆದದ್ದು ಅಲ್ಲಿಯೇ.

ಈ ಮಾದರಿ ಶಾಲೆಗೆ ಹೋಗುವುದಕ್ಕಾಗಿ ಎಳೆಯ ಮಕ್ಕಳು ತಮ್ಮ ತಾಯಿತಂದೆಯವರ ಸೆರಗನ್ನು ಜಗ್ಗಿ, ಪೀಡಿಸುತ್ತಿದ್ದ ನೆನಪು ನನಗೆ. ಈಗ ಮೂವತ್ತು ವರ್ಷಗಳ ನಂತರ ನಾನೇ ನನ್ನ ಮಕ್ಕಳನ್ನು ತುಂಬ ಖರ್ಚುಳ್ಳ ಒಂದು ಶಾಲೆಗೆ ಕಳುಹಿಸುತ್ತಿದ್ದೇನೆ. ಮೊಂಟೆಸೋರಿ ಮೊದಲಾದ ನವೀನ ಪದ್ಧತಿಗಳ ಏರ್ಪಾಡು ಅಲ್ಲಿದೆಯಾದರೂ, ಮಕ್ಕಳಿಗೆ ಹೋಗಬೇಕೆಂಬಷ್ಟು ಉತ್ಸಾಹವಿಲ್ಲ; ಹಿಂದುಳಿಯುವುದಕ್ಕೇ ಆಸೆ. ಆಗಿನ ದಿನಗಳಲ್ಲಿ ಹೆಚ್ಚಿನ ಪ್ರೈಮರಿ ಶಾಲೆಗಳು ಮಕ್ಕಳಿಗೆ ಹಿತವೆನಿಸಿರಲಿಲ್ಲ. ಅಲ್ಲಿ ಆಟಕ್ಕಾಗಿ ಆಟವೂ ಇರಲಿಲ್ಲ; ಪಾಠಕ್ಕಾಗಿ

ಆಟವೂ ಇರಲಿಲ್ಲ. ಉಪಾಧ್ಯಾಯರಿಗೂ ಕಲಿಸುವ ಲವಲವಿಕೆ ಇದ್ದಿರಲಿಲ್ಲ. ಪ್ರತಿಯೊಂದನ್ನು ಉರುಹಾಕಿಸುವ ಆ ಶಾಲೆಗಳಿಗೆ ಹೆತ್ತವರ ಭಯಕ್ಕೇನೇ ಮಕ್ಕಳು ಹೋಗಬೇಕಿತ್ತು. ಸಂಪ್ರದಾಯದ ಐಗಳ ಶಾಲೆ ಸತ್ತಿದ್ದರೂ, ಈ ಶಾಲೆಗಳಲ್ಲಿ ಅದರ ನಾತ ಇನ್ನೂ ಉಳಿದಿತ್ತು. ಮಾದರಿ ಶಾಲೆಗೂ ತಮ್ಮ ಮಕ್ಕಳನ್ನು ಒತ್ತಾಯದಿಂದ ಕರೆದು ತಂದು ಉಪಾಧ್ಯಾಯರೊಡನೆ "ಮಾಸ್ತರರೇ, ಈ ಹುಡುಗನ ತಂಟೆ ಮನೆಯಲ್ಲಿ ಸಹಿಸುವುದಕ್ಕಾಗುವುದಿಲ್ಲ. ಚೂರೂ ಓದುವುದಿಲ್ಲ; ಶಾಲೆ ಎಂದರೆ ಅಳುತ್ತಾನೆ. ನಿತ್ಯವೂ ಎರಡೆರಡು ಚೆನ್ನಾಗಿ ಕಾಯಿಸಿದರೆ ಸರಿ ಬಂದಾನು" ಎಂದು ಒಪ್ಪಿಸುವ ಹಿರಿಯರುಂಟು. ಆ ಮಗುವೊಂದು ಮುದ್ದೆಯಾದಂಥ ಕೊಳೆ ಬಟ್ಟೆ. ಅದನ್ನು ತೊಳೆದು ಇಸ್ತ್ರಿಹಾಕುವ ಅಗಸರು ಉಪಾಧ್ಯಾಯರು ಎಂದೋ ಅಥವಾ ಉಪಾಧ್ಯಾಯರು ಗ್ರಾಮದ ದಂಡನಾಯಕರೆಂದೋ ಅವರ ತಿಳುವಳಿಕೆ. ಹೊಡೆದು, ಬಡಿದು ತಾವು ಸಾಧಿಸಲಾರದ ಸುಧಾರಣೆಯನ್ನು ಶಿಕ್ಷಕನಿಂದ ಮಾಡಿಸಬಹುದೆಂಬ ಪ್ರಯತ್ನ ಅವರದ್ದು. ಹಾಗೆಯೇ ಮನೆಯಿಂದ ಅಳುತ್ತ, ಕಿರುಚುತ್ತ ಬಂದ ಮಕ್ಕಳು ಈ ಶಾಲೆಯಲ್ಲಿ ನಗುತ್ತ ಆಟವಾಡುವ ನೋಟ ಅಪೂರ್ವದ್ದಾಗಿತ್ತು. ಭೀತಿ ತೊಲಗಿ, ಮಕ್ಕಳು ಕನ್ನಡ ಪಾಠದಲ್ಲೋ, ಕತೆ ಕೇಳುವುದರಲ್ಲೋ, ಆಡುವುದರಲ್ಲೋ ಮಗ್ನರಾದುದನ್ನು ಕಂಡ ಹೆತ್ತವರಿಗೆ "ಇದೂ ಒಂದು ಸಾಧ್ಯವೇ" ಎಂದು ಅನಿಸಿದುದೂ ಉಂಟು.

ನೇರಾದ ಶಿಕ್ಷಣ ಕ್ರಮವನ್ನು ಪ್ರಚಾರಗೊಳಿಸುವುದಕ್ಕಾಗಿ ನಮ್ಮ ತಂದೆ ಎಂಟು ವರ್ಷ ದುಡಿದ ಮೇಲೆ, ಈ ಮಾದರಿ ಶಾಲೆ ದೊರೆತದ್ದು. ಇಲ್ಲಿ ಅವುಗಳ ಪ್ರಯೋಗ ತೀರ ಸಾರ್ಥಕವಾದುದನ್ನು ಕಂಡು, ತನ್ನ ಹೊಸ ಯೋಜನೆಗಳು ಗಾಳಿ ಗೋಪುರಗಳಲ್ಲ; ಅನುಭವ ಸಾಧ್ಯ–ಎಂಬುದನ್ನು ಅರಿತುಕೊಂಡರು.

ಅವರು ಮಾಡಿದ ಸುಧಾರಣೆಗಳಲ್ಲಿ ಮೊದಲಿನ ಕೆಲಸವೆಂದರೆ, ಶಾಲೆಯಿಂದ ಬೆತ್ತವನ್ನು ಗಡೀಪಾರು ಮಾಡಿದ್ದು. ಆಗಿನ ದಿನಗಳಲ್ಲಿ ಬೆತ್ತವೆಂಬುದು ಶಿಕ್ಷಣದ ಮೂಲಮಂತ್ರವಾಗಿತ್ತು. 'ಬಿಸಿಯಾಗದೆ ಬೆಣ್ಣೆ ಕರಗದು' ಎಂಬ ನಂಬಿಕೆ ಬೇರೂರಿತ್ತು. ಪೆಟ್ಟಾಗಲಿ, ಪೆಟ್ಟಿನ ಹೆದರಿಕೆಯಾಗಲಿ ಇಲ್ಲದೆ ಕಲಿಸುವುದನ್ನು ಎಲ್ಲರೂ ಅಸಾಧ್ಯವೆಂದೇ ತಿಳಿದಿದ್ದರು. ಆದರೆ ಉಪಾಧ್ಯಾಯನಾದವನು ಮಕ್ಕಳಿಗೆ ಕೊಡುತ್ತಿದ್ದ ವಿವಿಧ ಹಿಂಸೆಗಳನ್ನು ಕಂಡು, ನಮ್ಮ ತಂದೆ ಚಕಿತರಾಗಿದ್ದರು. ಅದು ಕೇವಲ ಹಿಂಸಾಪ್ರಿಯತೆ ಇಲ್ಲವೆ, ಉಪಾಧ್ಯಾಯನ ಮಾನಸಿಕ ಕಿರಿಮೆಯಿಂದುಂಟಾದ ಭಾವನೆ. ಒಂದು ಪ್ರಶ್ನೆಯನ್ನು ಉತ್ತರಿಸಲಿಲ್ಲ — ಎಂಬ ಬಗ್ಗೆ ಹೊಡೆಯುವುದು. ಉತ್ತರ ತುಟಿಯಿಂದ ಹೊರಡುವುದಕ್ಕೆ ಮೆಲ್ಲಗಾಯಿತು ಎಂಬುದಕ್ಕೆ ಹೊಡೆಯುವುದು–ನಿರರ್ಥಕವಾದದ್ದೆಂಬುದರಿಂದ, ಆ ಬಗೆಯ ಹಿಂಸೆಯನ್ನು ಅವರು ಅನೇಕ ಬಾರಿ ಕೈಯಿಟ್ಟು ತಡೆದುದುಂಟು. ಅವರು ದಂಡ ಪ್ರಯೋಗದ ಮೇಲೆ ಒಬ್ಬಂಟಿಗರಾಗಿ ಹೂಡಿದ ಈ ಕಾಳಗದ ವಿಚಾರದಲ್ಲಿ ಅವರ ಸಹಚರರನೇಕರಿಗೆ ತಿರಸ್ಕಾರವಿತ್ತು. ಆದರೂ ತಮ್ಮ ಸಹೋಪಾಧ್ಯಾಯರಾಗಲೀ, ಮೇಲಧಿಕಾರಿಗಳಾಗಲಿ ತಿಳಿದಂತೆ ತಿಳಿಯಲಿ–ಎಂದುಕೊಂಡು ಇವರು ಕಾರ್ಯಪ್ರವೃತ್ತರಾದರು. ಶಾಲಾ ಅಧಿಕಾರಿಗಳಾದ ಅವರಿಗೆ ಸ್ವಂತ ಸಾಕಷ್ಟು ವರ್ಚಸ್ಸು, ಪ್ರಭಾವಗಳಿದ್ದುದರಿಂದ ಪುರಾಣ ಯುಗದ ಈ ಬೆತ್ತವನ್ನು ಓಡಿಸುವುದಕ್ಕೆ ಸಾಧ್ಯವಾಯಿತು. ಬೆತ್ತವೆಂಬುದು ಜ್ಞಾನವೃಕ್ಷದ ಬೇರು ಎಂಬ ಹಳೆಯ ಸಿದ್ಧಾಂತವನ್ನು ನಮ್ಮ ಜಿಲ್ಲೆಯಿಂದ ಓಡಿಸಿದ ಕೀರ್ತಿ ಅವರದ್ದು.

ಮಕ್ಕಳ ಶಿಕ್ಷಣದಲ್ಲಿ ಕತೆಗಾರಿಕೆಗೆ ವಿಶೇಷ ಸ್ಥಾನವಿದೆ ಎಂದು ನಂಬಿದವರು ಅವರು. ಆಗಿನ ಕಾಲದಲ್ಲಿಯೂ ಕತೆ ಹೇಳುವ ಪರಿಪಾಠವಿತ್ತು. ಅದೇನೂ ಹೊಸ ಸಂಗತಿ ಅಲ್ಲ. ಆದರೆ ಕತೆಯ ಮೂಲಕವಾಗಿ ಮಗುವಿನ ಮನೋಪ್ರಪಂಚದಲ್ಲಿ ಅನೇಕ ಸುಂದರವಾದ, ಪ್ರಭಾವಶಾಲಿಗಳಾದ ಬಿಂಬಗಳನ್ನು ಹುಟ್ಟಿಸಬಹುದು. ಅದರಿಂದ ಮಕ್ಕಳ ಮನಸ್ಸನ್ನೇ ರೂಪಿಸಬಹುದು ಎಂದು ತಿಳಿದವರು ಕಡಿಮೆ; ಇಲ್ಲವೇ ಇಲ್ಲ ಎಂದರೂ ಸಲ್ಲುತ್ತದೆ. ಈಗಲೂ ಕತೆಯ ಪ್ರಾಮುಖ್ಯತೆಯನ್ನರಿತವರು ತೀರ ಕಡಿಮೆ. ಇಂದಿಗೂ ಕತೆ ಹೇಳುವುದರಿಂದ ಮಕ್ಕಳ ಮನಸ್ಸಿಗೆ ಹರ್ಷವಾಗುತ್ತದೆ, ವಿಶ್ರಾಮವಾಗುತ್ತದೆ, ಒಳ್ಳೆಯ ನಡತೆಗೆ ಕಾರಣವಾಗಬಹುದು ಎಂದಿಷ್ಟೇ ತಿಳಿದಿರಬಹುದು. ಆದರೆ ಆ ತೆರನ ಆದರ್ಶಗಳನ್ನಿಟ್ಟುಕೊಂಡು, ನಮ್ಮ ತಂದೆ ಕತೆಯ ಪ್ರಾಧಾನ್ಯವನ್ನು ಸಾರಿದವರಲ್ಲ. ಅದರಿಂದ ಮನಸ್ಸನ್ನಾಕರ್ಷಿಸಲು ತೀರ ಸಾಧ್ಯ. ಆದುದರಿಂದಲೇ ಶಿಶುಶಿಕ್ಷಣಕ್ಕೆ ಅದು ಪ್ರಧಾನ ಸಾಧನವಾಗಬಲ್ಲುದು. ಅವರಿಗೆ ಈ ಬಗೆಯ ದೃಷ್ಟಿಕೋನವಿದ್ದುದರಿಂದಲೇ ಮುಂದೆ 'ಅಜ್ಜಿ ಕತೆಗಳ'ನ್ನು ಬರೆದರು; ಅವನ್ನು 'ಮಕ್ಕಳ ಕಥೆಗಳು' ಎಂದು ಪ್ರಕಟಿಸಿದರು. ಈ ಚಿಕ್ಕ, ಪುಟ್ಟ ಕತೆಗಳು ಎಳೆಯರ ಶಿಕ್ಷಣಕ್ಕೆ ಎಂತಹ ಮಾದರಿಯಾಗಿದ್ದುವು ಎಂಬುದನ್ನು ಇನ್ನಷ್ಟು ವಿಶದವಾಗಿ ಹೇಳಲು ಪ್ರಯತ್ನಿಸುತ್ತೇನೆ. ನಮ್ಮ ತಂದೆಯವರಿಗೆ ಶಿಕ್ಷಣ ಸಮಸ್ಯೆಯೆಂದರೆ–ಬರಿಯ ಗಣಿತ, ಓದುಗಳ ಸಮಸ್ಯೆಯಾಗಿರಲಿಲ್ಲ. ಮಗುವಿನ ಮಾತೃಭಾಷೆಯಲ್ಲದ ನಾಡಭಾಷೆಯಲ್ಲಿ, ಅದಕ್ಕೆ ಎಲ್ಲ ಬಗೆಯ ಜ್ಞಾನಗಳನ್ನು ಒದಗಿಸಿಕೊಡುವ ಸಮಸ್ಯೆಯಾಗಿತ್ತು. ಕತೆಗಳಿಂದ ಭಾವಗಳನ್ನೂ, ಬಿಂಬಗಳನ್ನೂ ಹೇಳುವುದಕ್ಕೆ ಸಾಧ್ಯವಾದಷ್ಟೇ, ಭಾಷೆಯೊಳಗಣ ಶಬ್ದ, ನುಡಿಕಟ್ಟು, ಲಾಲಿತ್ಯವನ್ನು ತಿಳಿಸುವುದೂ ಸಾಧ್ಯವೆಂದು ಅವರು ತಿಳಿದಿದ್ದರು. ಆದುದರಿಂದ ಇಂತಹ ಕತೆಗಳ

ಭಾಷೆಯಲ್ಲಿ ಒಂದು ನಿಶ್ಚಿತ ಗುಣವಿರಬೇಕು. ಅಲ್ಲಿ ಕೆಲವೊಂದು ಶಬ್ದಗಳು, ನುಡಿಕಟ್ಟುಗಳು, ವಾಕ್ಯಗಳು ಮರುಕಳಿಸುತ್ತವೆ. ಇಲ್ಲಿನ ಕಥಾವಸ್ತುಗಳೇನೋ ಮುದುಕಿಯರ ಬಾಯಿಯಿಂದ ಬರುವ ಕತೆಗಳಂತೆಯೇ ಇರುತ್ತವೆ. ಮಾತೃಭಾಷೆಯಲ್ಲಿ ಕತೆಗಳನ್ನು ಹೇಳುವಾಗ, ಕತೆ ಹೇಳುವವರು, ಶಬ್ದ, ವಾಕ್ಯಗಳನ್ನು ಎಳೆದು, ಆವರ್ತನೆಯಿಂದ ಹೇಳುವ ಕಾರಣವೆಂದರೆ ಪ್ರಾಯಶ:— ಕೇಳುವ ಮಗುವಿಗೆ ಬೇಗನೆ ನಿದ್ದೆ ಬರಲಿ—ಎಂದು. ಆದರೆ ಅವೇ ಅಜ್ಜಿಕತೆಗಳನ್ನು ಕನ್ನಡದಲ್ಲಿ ತಿರುಗಿ ಹೇಳುವಾಗ, ಈ ಪುನರಾವರ್ತನೆಗಳು ಕನ್ನಡೇತರ ಮಕ್ಕಳಿಗೆ-ಹೊಸ ಭಾಷೆಯ ಪರಿಚಯ ಚೆನ್ನಾಗಿ ಮಾಡಿಕೊಡುವುದಕ್ಕೆ ಸಾಧನವಾಗುತ್ತವೆ. ಶಬ್ದ ಪ್ರಯೋಗಗಳ ರೀತಿಯನ್ನು ಮಗುವಿನ ತಾಳ್ಮೆಯನ್ನು ಕೆಡಿಸದೆಯೇ ತಿಳಿಸಿದಂತಾಗುತ್ತದೆ. ಅವರು ಬರೆದ ಒಂದು ಕತೆಯ ಹೆಸರು 'ಬೆಲ್ಲದ ಬೈಲಿನ ಬೆರ್ಚಪ್ಪ' ಎಂದು. ಇದು ಅಜ್ಜಿಕತೆಯಲ್ಲ. ಈ ಕತೆಯಲ್ಲಿ ಶಬ್ದ, ಧ್ವನಿಗಳ ಪುನರಾವರ್ತನೆಯನ್ನು ಕ್ರಿಯಾಪದಗಳ ಸಮನಾದ ಬಳಕೆ ಕಲಿಯಲು ಸಹಾಯವಾಗುವಂತೆ, ಒಂದು ವ್ಯಾಕರಣದ ಅಭ್ಯಾಸವನ್ನಾಗಿ ರಚಿಸಿದ್ದಾರೆ.

ಅವರು ಬರೆದ ಇಂಥ ಕತೆಗಳಲ್ಲಿ, ಮಕ್ಕಳ ಕತೆಗಳಲ್ಲಿ ಹೆಚ್ಚಾಗಿ ಕಾಣುವ ಅತಿಮಾನವ ಇಲ್ಲವೆ ದೇವತಾ ಪಾತ್ರಗಳಿಲ್ಲ. ಇಂಗ್ಲಿಷ್ ಕತೆಗಳಲ್ಲಿ ಹೆಚ್ಚಾಗಿ ದೇವತೆಗಳೂ, ಕುಬ್ಜರೂ, ವಿಚಿತ್ರಾಕಾರದ ಇತರ ಅತಿಮಾನವ ವ್ಯಕ್ತಿಗಳೂ ಮಗುವಿನ ಮನಸ್ಸನ್ನು ಬೆರಗುಗೊಳಿಸುತ್ತವೆ; ಊಹೆ ಕೆರಳಿಸುತ್ತವೆ. ಇದು ಪ್ರಾಯಶ: ಆದಿವಾಸಿಯುಗದ ಮನೋವೃತ್ತಿಯ ಅವಶೇಷ. ಇತಿಹಾಸ ಪೂರ್ವಯುಗದ ಮನುಷ್ಯನಿಗೆ ಪ್ರಪಂಚ ನಿಗೂಢವಾಗಿತ್ತು. ಆತನ ಪ್ರತಿಯೊಂದು ಕ್ರಿಯೆಯೂ ಒಂದು ಸಾಹಸವಾಗಿತ್ತು. ಭಾರತದ ಹೆಚ್ಚಿನ ಕತೆಗಳಲ್ಲಿ ಪವಾಡಗಳು, ದೇವ, ದಾನವರುಗಳು ತುಂಬಿದ್ದಾರೆ. ನಮ್ಮ ತಂದೆ ಅವುಗಳನ್ನೆಲ್ಲ ದೂರವಿರಿಸಿದವರು. ರಕ್ಕಸರನ್ನೂ, ದೇವತೆಗಳನ್ನೂ, ಪವಾಡಗಳನ್ನೂ ಕತೆಗಳಲ್ಲಿ ತುಂಬಿಸಬೇಕಾದರೆ, ದೇಶೀಯ ಪುರಾಣಗಳಲ್ಲೇ ಬೇಕಾದಷ್ಟು ವಸ್ತುಗಳಿವೆ. ಮಕ್ಕಳ ಕತೆಗಳಲ್ಲಿ, ನಮ್ಮ ತಂದೆಯವರು ಅವರ ಆಟಕ್ಕೆ ಒದಗಿಸಿಕೊಟ್ಟ ಮಿತ್ರರು-ಪಶು ಪಕ್ಷಿಗಳು. ಇಂದಿನ ಅತ್ಯಾಧುನಿಕ ಇಂಗ್ಲಿಷ್ ಕತೆಗಳೆಲ್ಲ ಹಾಗಿನವು. ಈಸೋಫನ ನೀತಿ ಕತೆಗಳ ಸಂಪ್ರದಾಯದ ಸುಧಾರಣೆ ಇದು.

ನಮ್ಮ ತಂದೆಯವರು, ಉಪಾಧ್ಯಾಯ ಮಕ್ಕಳಿಗೆ ಹೇಳಿಕೊಡಬೇಕಾದ ಅನೇಕ ಸಂಗತಿಗಳನ್ನು ಕತೆಗಳ ಮೂಲಕ ಹೇಳಿಕೊಡುವುದು ಸಾಧ್ಯವೆಂದು ಯೋಚಿಸಿದ್ದರಾದರೂ, ಅವುಗಳಲ್ಲಿ ನೀತಿಬೋಧೆಯು ಇರಲೇಬೇಕೆಂದು ಎಣಿಸಿದವರಲ್ಲ. ಆದುದರಿಂದ ಅವರ ಈ ಕತೆಗಳು ವಾಸ್ತವಿಕವಾಗಿ ಕಾಣುತ್ತವೆ; ನೇರಾಗಿ ಮಕ್ಕಳ ಮನಸ್ಸಿಗೆ ಒಪ್ಪುತ್ತವೆ. ಮಕ್ಕಳಿಗೂ-ಅಂತರಂಗದಲ್ಲಿ ನೀತಿ ಬೋಧೆಯ ಗುಳಿಗೆಗಳಿಗೆ ಕತೆಯ ಸಿಹಿ ಕವಚ ಅಷ್ಟೊಂದು ಸ್ವಾಭಾವಿಕವಾಗಿ ರುಚಿಸದೆಂದು ಕಾಣುತ್ತದೆ. ಅವರು ಕತೆಗಳಲ್ಲಿ ದೇವರ ಅದ್ಭುತ ಶಕ್ತಿಯನ್ನು ಬೋಧಿಸುವ ಉದ್ದೇಶವನ್ನು ಇರಿಸಿಕೊಳ್ಳಲಿಲ್ಲ. ಅವರ ಕತೆಗಳಲ್ಲಿನ ಇನ್ನೊಂದು ಹೆಚ್ಚಳವೆಂದರೆ-ಅವುಗಳಲ್ಲಿ ಕೇಡಿಗನ ಪಾತ್ರವಿಲ್ಲ. ದುಷ್ಟರಿಗೆ ತಕ್ಕ ದಂಡನೆಯಾಗುತ್ತದೆ ಎಂಬ ಸಿದ್ಧಾಂತವಿಲ್ಲ. ಸಾಮಾನ್ಯವಾಗಿ ಪ್ರಪಂಚದ ಎಲ್ಲ ಕತೆಗಳಲ್ಲೂ-ಕಥಾವಸ್ತುವಿನಲ್ಲಿ ಅಸೂಯೆ, ಸ್ವಾರ್ಥ ಮೊದಲಾದ ಮಾನವನ ಹುಟ್ಟುಗುಣಗಳು ತಕ್ಕ ಪ್ರತೀಕಾರವನ್ನು ಬಯಸುವಂಥ ಚಿತ್ರ ಕಾಣುತ್ತದೆ. ನಮ್ಮ ತಂದೆಯು ಅಂತಹ ಕತೆಗಳನ್ನು ಬಳಸಿದಾಗಲೂ ಕೂಡ, ಈ ಬಗೆಯ ಸೇಡಿನ ಕಾಂಕ್ಷೆಯನ್ನು ಅವುಗಳಿಂದ ಕಿತ್ತುತೆಗೆದು, ಬಳಸಿದರು. ಕತೆಗಳಲ್ಲಿ ಪ್ರತಿನಾಯಕ, ಮರು ಶಾಪ, ದಂಡನೆಗಳು ಬಂದರೂ, ಅವು ಪರೋಕ್ಷವಾದುವು, ಪ್ರತ್ಯಕ್ಷ ಮನಸೆಳೆಯುವುದಿಲ್ಲ.

ನಮ್ಮ ತಂದೆಯ ಜೀವನದಲ್ಲಿ ಯಾವ ಬಗೆಯ ಪ್ರದರ್ಶನ ಪ್ರಿಯತೆಯಾಗಲೀ ಜಂಭವಾಗಲೀ ಇಲ್ಲದಿದ್ದುದರಿಂದ ಅವರು ಇಂತಹ ಕತೆಗಳನ್ನು ಬರೆದಾಗ, ಅವುಗಳಲ್ಲಿ ಅಡಕವಾಗಿರುವ ತತ್ವಗಳನ್ನು ಕುರಿತು ಮುನ್ನುಡಿಯನ್ನು ಬರೆದವರಲ್ಲ. ಇದನ್ನು ಹೇಗೆ ಬರೆದಿದ್ದೇನೆ, ಏಕೆ, ಮಕ್ಕಳ ಕತೆ ಹೇಗಿರಬೇಕು, ಅವುಗಳನ್ನು ಹೇಗೆ ಹೇಳಿಕೊಡಬೇಕು ಎನ್ನುವ ಯಾವ ಗೊಡವೆಗೂ ಹೋದವರಲ್ಲ. ಅವುಗಳನ್ನು ಕುರಿತಾಗಿ ನಾನು ಮೇಲಿನ ಸಂಗತಿಗಳನ್ನು ಹೇಳಿದ್ದಾದರೆ, ಅದು ನನ್ನ ಊಹೆ, ಅಪೂರ್ವ ಸಿದ್ಧಾಂತಗಳಷ್ಟೇ ಆಗಿವೆ. ಆದರೆ ಶಿಶು ಸಾಹಿತ್ಯದಲ್ಲಿ ಅವರು ಬರೆದ ಈ ಕತೆಗಳು ತುಂಬ ಮೇಲ್ಮಟ್ಟದುವಾಗಿ ನನಗೆ ಕಾಣಿಸುತ್ತವೆ.

ಶಿಕ್ಷಣ ಸುಧಾರಣೆಯಲ್ಲಿ ನಮ್ಮ ತಂದೆಗೆ ಹೆಚ್ಚಾದ ಅಭಿರುಚಿಯಿದ್ದರೂ, ಅದನ್ನು ಅತಿರೇಕಕ್ಕೆಳೆದುಕೊಂಡು ಹೋದವರಲ್ಲ. ಅವರ ಪ್ರಿಯವಾದ "ನೇರಾದ ಶಿಕ್ಷಣ" ಪದ್ಧತಿಯನ್ನು ಅತಿರೇಕ ಎನ್ನುವವರು ಅನ್ನಲಿ. ಅವರಿಗೆ ವಿದ್ಯಾಸಿದ್ಧಾಂತಗಳಿಗಿಂತ ಹೆಚ್ಚು ಪ್ರಿಯವಾದದ್ದು, ಶಿಕ್ಷಣದಲ್ಲಿ ಕಾರ್ಯಕ್ಕೆ ಬರುವ ಅಂಶ. ಅವರು ತಮ್ಮ ಕಾಲದ ಶಿಕ್ಷಣ ಸಿದ್ಧಾಂತಗಳನ್ನೆಲ್ಲ ಓದಿದವರಾದರೂ, ಮನ:ಶಾಸ್ತ್ರದ ಅಭ್ಯಾಸಿಗಳಾಗಿದ್ದರೂ ಇತರರ ಸಿದ್ಧಾಂತಗಳನ್ನು ಅಲ್ಲಗಳೆದವರಲ್ಲ; ಮೂದಲಿಸಿದವರಲ್ಲ. ಅಂಥವರ ಬಗ್ಗೆ—ಹತ್ತು ಆಡುವುದಕ್ಕಿಂತ ಒಂದು ಮಾಡುವುದು ಮೇಲು ಎಂದವರಲ್ಲ. ಅವರ ದಿನಗಳಲ್ಲಿ ಹೊಸ ಶಿಕ್ಷಣ ಪ್ರಯೋಗಗಳಿಗೆ, ತತ್ವಗಳಿಗೆ ಬರಗಾಲವಿದ್ದಿರಲಿಲ್ಲವಾದರೂ ಅವರು ನೇರಾದ ಶಿಕ್ಷಣ ಕ್ರಮ ಒಂದನ್ನು ಬಿಟ್ಟು ಉಳಿದುವನ್ನು ಪ್ರಯೋಗಿಸಿ ನೋಡುವುದು ಸಾಧ್ಯವಿದ್ದಿಲ್ಲ.

ಅವಕ್ಕೆಲ್ಲ ತುಂಬ ಖರ್ಚು ವೆಚ್ಚದ ಸಲಕರಣೆ, ಸಾಧನಗಳು ಬೇಕು. ಸಾಮಾನ್ಯ ಶಿಕ್ಷಣ ಸಮಸ್ಯೆಗಳಿಗಿಂತ ತುಸು ಭಿನ್ನ ವಾದ ಸಮಸ್ಯೆಗಳನ್ನು ಅವರು ಎದುರಿಸಬೇಕಾಗಿತ್ತು.

ಈ ವಿಚಾರದಲ್ಲಿ ತಾವು ಯೋಗ್ಯವೆಂದು ನಂಬಿದುದನ್ನು, ಅವರಿಗೆ ಹಾಗೆ ನಂಬದಿರಲಿಕ್ಕೂ ಸಾಧ್ಯವಿರಲಿಲ್ಲ, ಕಾರ್ಯ ರೂಪಕ್ಕೆತರಲು ಯತ್ನಿಸಿದರು. ಅವರು ಕಲಿಸುವಾಗಲುತ್ಸಾಹ, ಆಸಕ್ತಿ, ತನ್ಮಯತೆಗಳಿಂದ ಕೆಲಸವನ್ನು ಮಾಡಿದರು. ಮಕ್ಕಳ ಕ್ಲಾಸಿಗೆ ಕಾಲಿರಿಸಿದರೆಂದರೆ ತಾವೇ ಮಕ್ಕಳಾದರು; ಮಕ್ಕಳಾ ಟಿಕೆಯಿಂದ ವರ್ತಿಸಿ ಸುತ್ತಲಿನ ಮಕ್ಕಳ ಮನಸ್ಸನ್ನು ಸೆರೆ ಹಿಡಿದರು. ಅವರು ಪಾಠಹೇಳುವುದನ್ನು ಕಂಡವರಿಗೆ ಅವರ ಸುತ್ತಲಿನ ಮಕ್ಕಳು-ಅವರಲ್ಲಿರುವ ಉತ್ಸಾಹ, ಉಲ್ಲಾಸಗಳಿಗೆ ಸಮನಾಗಿ ಹೇಗೆ ತಲ್ಲೀನರಾಗುತ್ತಿದ್ದರು- ಎಂದು ತಿಳಿಯು ತ್ತಿತ್ತು. ಇದು ಅವರ ಸ್ವಭಾವ. ಮಕ್ಕಳಿಗೆ ಪಾಠ ಹೇಳುವಾಗ ಈ ಸ್ವಭಾವ ಪ್ರಕಟವಾಗುತ್ತಿದ್ದ ಬಗೆಯಲ್ಲೇ, ಹಿರಿಯರಿಗೆ ಪಾಠ ಹೇಳುವಾಗ, ಪಠ್ಯೇತರ ವಿಷಯಗಳನ್ನು ಬೋಧಿಸುತ್ತಿ ದ್ದಾಗಲೂ ಪ್ರಕಟವಾಗುತ್ತಿತ್ತು. ತಾನು ಹೇಳುತ್ತಿರುವ ವಿಷಯ ದಲ್ಲಿ ತದಾತ್ಮ್ಯ ಹೊಂದಿ, ವಿಷಯ ವಿಸ್ತರಣ ಮಾಡುವುದು ಅವರ ಹೆಚ್ಚಿನ ಗುಣ.

ನಾನು ಮಂಗಳೂರಿನಲ್ಲಿ ಓದುವಾಗ, ನಮ್ಮ ಹುಡು ಗರು ಕನ್ನಡಕ್ಕೆ ಹೆಚ್ಚಾಗಿ ಮನಸ್ಸನ್ನು ಕೊಟ್ಟವರಲ್ಲ. ಕನ್ನಡ ಪಾಠಗಳಿಂದ ಓಡುವವರು ಹೆಚ್ಚು. ಕ್ಲಾಸಿನಲ್ಲಿ ಕುಳಿತರೂ, ತೂಕಡಿಸುವವರು, ಚೇಷ್ಟೆಗೆ ಸಂದರ್ಭ ಹುಡುಕುವವರು, ಹೆಚ್ಚು. ನಮ್ಮ ತಂದೆ ಪಾಠ ಹೇಳುವಾಗಲಾಗಲೀ, ಏನಾದ ರೊಂದು ಸಂಘದಲ್ಲಿ ಉಪನ್ಯಾಸವನ್ನು ಮಾಡುವಾಗಲಾಗಲೀ ಯಾರೂ ಹಾಗೆ ಮಾಡುತ್ತಿರಲಿಲ್ಲ. ಅವರ ಮೇಲಿನ ಗೌರವಕ್ಕೆ ಅವರನ್ನು ಕರೆದಿದ್ದರೂ ಸರಿಯೆ, ಒಣ ಕುತೂಹಲದಿಂದ ಅವರು ಬಂದಿದ್ದರೂ ಸರಿಯೆ, ಕರೆತರಿಸಿದ ಉಪಚಾರಕ್ಕೆ ಒಲಿದು ಸ್ಥಾನ ವಹಿಸಿದರೂ ಸರಿಯೆ- ಸುತ್ತ ಕಲೆತಿದ್ದ ವಿದ್ಯಾ ರ್ಥಿಗಳು ಸ್ಥಳ ಬಿಟ್ಟೇಳುತ್ತಿರಲಿಲ್ಲ. ನಮ್ಮ ತಂದೆ ಉಪಚಾರದ ಪೀಠಿಕೆಯಿಲ್ಲವೇ ಒಮ್ಮೆಗೆ, ಏನಾದರೂ ಕನ್ನಡ ಕಾವ್ಯವನ್ನು ಬಣ್ಣಿಸುತ್ತಿದ್ದರು. ಇವರು ಏನು ಹೇಳುತ್ತಾರೆ ನೋಡುವ ಎಂದು ತಮಾಷೆಗೆ ಕಿವಿಗೊಡುವ ವ್ಯಕ್ತಿಯು, ಮುಂದೆ ವಿಷಯ ತಲ್ಲೀನನಾಗಿ ಬಾಹ್ಯ ಪ್ರಪಂಚವನ್ನು ಮರೆತುಬಿಡುತ್ತಾನೆ. ವಿಷಯ ಹಾಗೇಮುಂದುವರಿಯುತ್ತದೆ ಅವರ ಮಾತುಗಳನ್ನು ಕೇಳಿ ತಲ್ಲೀನವಾದ ಸಭೆ, ನಡುನಡುವೆ ಅವರು ಎಸೆಯುತ್ತಿದ್ದ ಹಾಸ್ಯದ ಬಾಣಗಳಿಂದ ನಗುವಿನಲ್ಲಿ ತೇಲುತ್ತದೆ. ಹೀಗೆ ನಗುವಿಂದ ನಗುವಿಗೆ, ಅವರನ್ನು ತೇಲಿಸುತ್ತ, ಸನ್ನಿವೇಷದಿಂದ ಸನ್ನಿವೇಷಕ್ಕೂ, ಪದ್ಯದಿಂದ ಪದ್ಯಕ್ಕೂ, ಟೀಕೆಯಿಂದ ಟೀಕೆ ಗೂ-ಸಭೆಯನ್ನೆ ತಮ್ಮಜತೆಗೆ ಎಳೆದುಕೊಂಡು ಹೋಗುತ್ತಿದ್ದು ಎಲ್ಲರ ಮನಸ್ಸನ್ನೂ ಮೌನದಲ್ಲಿ ಮುಳುಗಿಸಿ, ತಮ್ಮ ಚೈತನ್ಯ ಶೀಲ ತುಂಬು ಕಂಠದಿಂದ ನಗಿಸುತ್ತಿದ್ದರು. ಅವರ ಮುಖ ವನ್ನೇ ಬೆರಗಿನಿಂದ ಎವೆ ಮಡಿಸದೆ ಕೇಳುತ್ತಿರುವ ಸಭಿಕರಿಗೆ, ಹೊತ್ತು ಸರಿದದ್ದೇ ತಿಳಿಯದೆ ಹೋಗುತ್ತಿತ್ತು. ಹಾಗೆ ಕಾವ್ಯ ಪ್ರವಚನೆಮಾಡುತ್ತ, ಕವಿಯ ರಸಸಿದ್ಧಿಯನ್ನುಪ್ರತಿಪಾದಿಸುತ್ತ ತಮ್ಮ ಲಲಿತ ಕಂಠದಿಂದ ಕಾವ್ಯದ ಪದ್ಯಗಳನ್ನು ಹೇಳುತ್ತ, ಮುಂದುವರಿಯುವಾಗ-ಕಾವ್ಯಜೀವಿಗಳಾದ ಕರ್ಣ, ಕುಂತಿ, ದುರ್ಯೋಧನರೆಲ್ಲರು ಸಚೇತನರಾಗಿ ನಲಿಯುತ್ತಾರೆ ಅವರ ಸುಖ, ದುಃಖಗಳಲ್ಲಿ, ಭಾವಾವೇಶಗಳಲ್ಲಿ, ನೋವು, ನರಳು ವಿಕೆಗಳಲ್ಲಿ ಸಭಿಕರು ಅನುಕಂಪ ತಾಳುತ್ತಾರೆ; ಪಕ್ಷ ವಹಿಸು ತ್ತಾರೆ. ಹೀಗೆ ಪುರಾಣಯುಗದ ಒಂದು ಕಲ್ಪನಾರಾಜ್ಯವನ್ನು ಕಣ್ಣಮುಂದೆ ಕಟ್ಟುತ್ತಿದ್ದುದು ಮಾತ್ರವಲ್ಲ; ಅದರ ಜತೆಗೆ ನಮ್ಮ ನಿತ್ಯಜೀವನದಲ್ಲಿ, ಅನುಭವಗಳ ಎಟುಕಿನಲ್ಲಿ ದೊರೆಯತಕ್ಕ ನಿದರ್ಶನಗಳನ್ನು ಹೇಳಿ, ಕತೆಯಲ್ಲಿ ಕಾಣಿಸುವ ರಸ, ಭಾವನೆ ಗಳಿಗೆ ಪುಷ್ಟಿಯನ್ನು ಹೆಚ್ಚಿಸಿ, ಉದ್ವೇಗವನ್ನು ತುಂಬಿಸಿ, ಕೇಳುವವರ ಹೃದಯದಿಂದ ಮರುಕವು ಉಲ್ಬಣಿಸಿ ಕಣ್ಣಿಂದ ಕಂಬನಿಗಳು ಉದುರುವಂತೆ ಮಾಡುತ್ತಿದ್ದರು. ಅವರ ಮಾತು ಗಾರಿಕೆಯೂ ಅಷ್ಟೇ ವಿಚಿತ್ರವಾಗಿತ್ತು, ವೈವಿಧ್ಯವುಳ್ಳದಾಗಿತ್ತು. ಹಾಡಾಗಲೀ, ಮಾತಾಗಲೀ ಪ್ರಶ್ನೆ ಬಂದಾಗ ಮೊನಚಾಗು ತ್ತದೆ; ವಿಸ್ಮಯ ಬಂದಾಗ ಮೆಲ್ಲಿತಾಗುತ್ತದೆ, ಭಾವಾವೇಶ ತೊಟ್ಟಾಗ ಪಕ್ಕವನ್ನು ಬೆಳೆಸಿ ಹಾರುತ್ತದೆ. ವಿಚಾರ ತರಂಗಗಳು ಉಂಟಾದಾಗ ಮಾತು ತೆರೆ ತೆರೆಯಾಗಿ ಹರಿಯುತ್ತದೆ. ಮೃದು ಭಾವನೆಗಳಿಗೆ ತಕ್ಕಂತೆ ಶಾಂತ ಪ್ರವಾಹವಾಗುತ್ತದೆ. ಆವೇಶದ ಕಾಲದಲ್ಲಿ ಮಾತು ಕಲ್ಲೋಲಗೊಳ್ಳುತ್ತದೆ. ಕೇಳುವ ವ್ಯಕ್ತಿಗೆ ಬೇಸರ ಬಾರದೇ ಬಾರದು. ಶರೀರ ದಣಿದು, ಗಲ್ಲಕ್ಕೆ ಕೊಟ್ಟ ಎಡಗೈ ಬಲಗೈಗಳು ಈಚೆಂದಾಚೆಗೆ ಸರಿಯಲೂ ಬಹುದು; ಗಡಿಯಾರದ ಗಂಟೆ ಪ್ರದಕ್ಷಿಣೆ ಸುತ್ತಬಹುದು. ಆಗ ಥಟ್ಟನೆ ಅವರು 'ಇಷ್ಟು ಹೊತ್ತಾಯಿತೇ? ಕ್ಷಮಿಸಿ' ಎನ್ನುವುದುಂಟು. ನಿಲ್ಲಿಸುವುದಕ್ಕೆ ಯಾರೂ ಒಪ್ಪರು. ಇನ್ನೂ ಮಾತುಗಳನ್ನು ಕೇಳುವ ಬಯಕೆ ಎಲ್ಲರಿಗೆ. ಅಧ್ಯಕ್ಷರಾದಿಯಾಗಿ ಎಲ್ಲರೂ ದೀನರಾಗಿ ಅವರನ್ನು ನೋಡತೊಡಗಿದರೆಂದರೆ, ತಿರುಗಿ ಸಂ ತೋಷದಿಂದ ನಕ್ಕು, ಬಿಟ್ಟ ಕತೆಯನ್ನು ಬಿಟ್ಟಲ್ಲಿಂದ ತೊಡಗು ತ್ತಾರೆ. ತಾವೆತ್ತಿಕೊಂಡ ಕಾವ್ಯದಲ್ಲಿನ ಸೂಕ್ಷ್ಮ ಚೆಲುವನ್ನು ಬಣ್ಣಿಸುತ್ತಾರೆ. ಈ ಕಾವ್ಯದೊಡನೆ ಇಂಗ್ಲಿಷ್ ಕಾವ್ಯಗಳಿಂದ ಪ್ರತಿ ಪಂಕ್ತಿಗಳನ್ನು ಪದ್ಯ, ಪದ್ಯವಾಗಿ ಹೇಳುತ್ತಾರೆ. ನಾಡ ನುಡಿಗಳನ್ನು, ದೇಸಿಗಳನ್ನೂ ಕೊಂಕಣಿ, ತುಳು ಭಾಷೆಗಳಿಂದ ಆರಿಸಿಕೊಂಡು, ಪರ್ಯಾಯವಾಗಿ ಹೇಳುತ್ತ ಶ್ರೋತಾರರು ತಾವೀತನಕ ಅನುಭವಿಸದ ಕಾವ್ಯ ಸೌಂದರ್ಯವನ್ನು ಅನು ಭವಿಸುವಂತೆ ಮಾಡುತ್ತಾರೆ. ಎಷ್ಟೋ ಬಾರಿ ನಮಗೆ ಕೇಳಿದ

ಭಾಷೆಯ ಚೆಲುವೇ ಹೊಳೆದಿರುವುದಿಲ್ಲ, ನೋಡಿದ ನಾಡಿನ ಸೊಗಸೇ ರಂಜಿಸುವುದಿಲ್ಲ; ಬಳಕೆಯಲ್ಲಿರುವ ಸಂಪ್ರದಾಯ, ಸಂಸ್ಕೃತಿಗಳ ದತ್ತಸಂಪತ್ತುನಮ್ಮಬಾಳಿನಲ್ಲಿ ಎಷ್ಟುಅನೋಘ ವಾಗಿರಬಹುದು ಎಂಬುದರ ಅರಿವೂ ನಮಗಾಗಿರುವುದಿಲ್ಲ. ಒಂದು ಕಾವ್ಯದ ಪರಿಚಯದಿಂದಾಗಿ, ಹಿರಿಮೆಯಿಂದಾಗಿ, ಅವೆ ಲ್ಲವುಗಳು ಈಗ ಸಾಧ್ಯವಾಗುತ್ತವೆ. ಇಂಥ ದಾರಿ ರಾಜಕೀಯ ವಕ್ತಾರನ ದಾರಿಯಲ್ಲ. ಸುತ್ತಲಿನ ಜನತೆಯ ಮೇಲೆ ರಾಷ್ಟ್ರ ಭಕ್ತಿಯ ವಾಗ್‌ಜ್ವಾಲೆಗಳನ್ನು ಕಾರುತ್ತ, ತನ್ನ ಹಿರಿಮೆಯನ್ನು ಮೆರೆಯಿಸುವ ದಾರಿ ಅಲ್ಲ. ಅವರ ಉಪನ್ಯಾಸ ಮುಗಿಯು ವಾಗ ಸಭೆ, ಮೆಲ್ಲ ಮೆಲ್ಲಗೆ ಮೌನವಾಗುತ್ತದೆ; ಶಾಂತವಾಗು ತ್ತದೆ; ತಂತಮ್ಮ ವಿಚಾರ ಭಾವನೆಗಳಿಂದ ಪ್ರೇರಿತವಾಗುತ್ತದೆ. ಅನಂತರ ಯಾವ ಆಡಂಬರವಿಲ್ಲದೆ ಉಪನ್ಯಾಸ ಮುಕ್ತಾಯ ವಾಗುತ್ತದೆ. ಕೇಳುತ್ತಿದ್ದ ಜನರು ಅಧ್ಯಕ್ಷರ ಭಾಷಣ ಮುಗಿದು ಏಳುವ ವೇಳೆಗೆ, ಅಷ್ಟು ಹೊತ್ತಾದುದನ್ನೇ ಅರಿಯದೆ, ನೆಲ ದಿಂದೆದ್ದು, ಗಗನವನ್ನೇರಿ ಚಲಿಸುವ ಮುಗಿಲುಗಳಂತೆ, ಮೆಲ್ಲ ಮೆಲ್ಲಗೆ ಸರಿದುಹೋಗುತ್ತಾರೆ. ಅಂತಹ ಒಂದು ಭಾಷಣ ಅವರ ಜೀವನದಲ್ಲೇ ಒಂದು ಸುಗಳಿಗೆ. ಅವರು ಕನ್ನಡ ಓದಿರಲಿ, ಓದದಿರಲಿ, ಕನ್ನಡ ಸಾಹಿತ್ಯವನ್ನು ಕುರಿತಾಗಿ ಅವರಿಗಿದ್ದ ಅಭಿಪ್ರಾಯ ಬದಲಾಗಿಯೇ ಆಗುತ್ತದೆ; ಗೌರವ ಆ ವಿಷಯ ದಲ್ಲಿ ಹುಟ್ಟಿಯೇ ಹುಟ್ಟುತ್ತದೆ. ಉಪನ್ಯಾಸ ಮಾಡಿದ ತಂದೆ ಯವರೂ ಸಹ, ದಣಿದರೂ ಸಂತುಷ್ಟರಾಗಿಯೇ ಹೊರಡು ತ್ತಾರೆ.

ಅವರ ರೀತಿಯೇ ಅಂತಹದು. ಒಂದು ವಿಷಯವನ್ನು ಮೆಚ್ಚಿದರಾದರೆ, ಅವರು ಅದನ್ನು ಹೀರಿ ತುಂಬಿಕೊಂಡಂತೆ, ತಮ್ಮ ಸರ್ವಸ್ವವನ್ನೂ ಆ ವಿಷಯದಲ್ಲಿ ತುಂಬಬಲ್ಲರು. ಹಾಗೇ ತದಾತ್ಮ್ಯಹೊಂದಿದಾಗ, ಅವರು ಬಣ್ಣಿಸುವ ವಾತಾವರಣ ಪ್ರತಿಸೃಷ್ಟಿಗೊಳ್ಳುತ್ತದೆ. ಕಾವ್ಯ ಕರ್ತೃವಿನ ವಿಚಾರ, ಆಸೆ, ನಿರಾಸೆ, ರಸೋದ್ವೇಗಗಳೆಲ್ಲ ಅವರ ಮೂಲಕವಾಗಿ ಸಭಿಕರಿಗೆ ಜೀವಂತವಾಗಿ ದೊರೆಯುತ್ತದೆ. ಸಹೃದಯನಾದ ಒಬ್ಬ ರಸಿಕ ಒಂದು ಕಾವ್ಯವನ್ನು ಮೆಚ್ಚುವಾಗ ಅದನ್ನು ಬಣ್ಣಿಸುವಲ್ಲಿ, ಪ್ರತಿಯೊಂದು ಶಬ್ದ, ಹಾವ, ಭಾವ ಅವನ ಪ್ರಾಮಾಣಿಕತೆ ಯನ್ನು, ಭಾವದ ಆಳವನ್ನೂ ಹೇಳುತ್ತದೆ. ಕೇಳುವವರನ್ನು ಮಂತ್ರಮುಗ್ಧವಾಗಿ ಮಾಡುತ್ತದೆ. ನಮ್ಮ ತಂದೆಯಲ್ಲಿನ ಈ ಗುಣ ಅತ್ಯಪೂರ್ವವಾದ ಗುಣ. ಅವರು ಪ್ರಾಮಾಣಿಕತೆಯ ಪ್ರತೀಕ.

ಅವರ ಪರಿಚಯವಿದ್ದವರಿಗೆ ಅವರ ಪ್ರಾಮಾಣಿಕತೆಯ ಆಳವೆಲ್ಲ ಗೊತ್ತು. ಅವರ ಕವಿತಾ ಶಕ್ತಿಗೂ, ಶಿಕ್ಷಣಶಕ್ತಿಗೂ ಕಡಿಮೆಯಿಲ್ಲದಂತಹ ಮಾನವತೆಗೆ ಅಮೂಲ್ಯವಾದ ಈ ಗುಣ ಅವರಲ್ಲಿತ್ತು. ಇವೆಲ್ಲ ಪರಸ್ಪರ ಒಂದಕ್ಕೊಂದು ಹೊಂದಿದುವು. ಅವರು ಉಪಾಧ್ಯಾಯರಾಗುವುದಕ್ಕೆ ಮೂಲ ಕಾರಣವೆಂದರೆ ಅವರಲ್ಲಿನ ಮಾನವತೆ ಅಥವಾ ಮಾನವ ಕುಟುಂಬದ ಮೇ ಲಿನ ಮಮತೆ. ತನ್ನ ಸುತ್ತಲಿನ ಪ್ರಪಂಚದ ಮೇಲೆ ಎಷ್ಟು ಕರುಣೆಯಿದ್ದರೂ, ದುಡ್ಡಿಂದ ದಾನ ಮಾಡುವ ಶಕ್ತಿ ಇರಲಿಲ್ಲ; ಅಧಿಕಾರದಿಂದ ಸುತ್ತಲಿನ ಜನತೆಯ ಬಡತನವನ್ನು ನಿವಾರಿ ಸುವ ಶಕ್ತಿ ಇರಲಿಲ್ಲ. ಅವರ ಜೀವನದ ಅರ್ಧಾಂಶಕ್ಕಿಂತ ಹೆಚ್ಚಿನ ಭಾಗವು ಕಷ್ಟಕಾರ್ಪಣ್ಯಗಳಿಂದ ಕಳೆದಿತ್ತು. ಅಂಥ ವ್ಯಕ್ತಿ ನಿಸ್ಸಹಾಯರಿಗೆ ಆಡಂಬರವಿಲ್ಲದೆ ಸಹಾಯಮಾಡುವ ದಾರಿಯೇನು? ಹಣವೇ, ಬಟ್ಟೆಬರೆಯೆ? ಅವಿಲ್ಲದಾಗ-ತನ್ನನ್ನು ಯಾವ ಬಗೆಯ ಜೀವನದ ಸೊಗಸುಗಳು ಕಷ್ಟಕಾರ್ಪಣ್ಯ ದಲ್ಲೂ ಸಂತುಷ್ಟಿಗೊಳಿಸಿದುವೊ, ಸಂತೋಷಗೊಳಿಸಿದುವೊ ಅಂಥ ವಸ್ತುಗಳ ಜ್ಞಾನ ಇತರರಿಗಾಗುವಂತೆ ಮಾಡುವುದು.

ಅವರಿಗೆ ಭಾಷೆಯ ಮೇಲಿನ ಪ್ರೀತಿ ಅತೀವ. ಕನ್ನಡದ ಮೇಲಿನ ಮಮತೆ ಅತ್ಯಧಿಕ. ಜ್ಞಾನದ ಮೇಲಿನ ಮೋಹ ಅಪಾರ. ತಾನು ಇಂಥವುಗಳನ್ನು ಮೆಚ್ಚಿದ್ದಾದರೆ ಅವುಗಳಿಂದ ಸುಖಿಯಾಗಬಲ್ಲೆ ಎಂದು ಕಲಿತ ವ್ಯಕ್ತಿ, ಉಳಿದವರಿಗೂ ಅಂಥ ಸೊಗಸುಗಳ ಕಡೆಗೆ ಕಣ್ಣು ತೆರೆಯುವಂತೆ ಮಾಡುವುದೂ, ಅವರು ಅವುಗಳಿಂದ ಆನಂದ ಪುಲಕಿತರಾಗುವಂತೆ ಮಾಡು ವುದೂ ಆಶ್ಚರ್ಯವಲ್ಲ. ಅವರ ಪಾಲಿಗೆ ನಿಸರ್ಗವು ಒಂದು ದೈವ ವಾಗಿತ್ತು. ನಿಸರ್ಗದ ನಾದ, ಉಲಿ, ಗೀತಗಳಲ್ಲಿ ದೈವದ ವಾಣಿ ಕೇಳುತಿತ್ತು. ಮಾನವ ಕೋಟಿಯ ಸುಖಸಂತುಷ್ಟಿ ಯಲ್ಲಿ ದೈವದ ಹೃದಯವು ಪ್ರಕಟವಾಗುತಿತ್ತು. ತನ್ನಲ್ಲಿ ನಿಸ ರ್ಗದ ಚೆಲುವು ಯಾವೆಲ್ಲ ಭಾವನೆಗಳನ್ನು ಪ್ರೇರಿಸಿ, ಎಂಥೆಲ್ಲ ಸೌಂದರ್ಯ ಭಂಡಾರವನ್ನು ಒದಗಿಸಿ ಕೊಟ್ಟಿದೆಯೊ, ತನ್ನ ಆವರಣದಿಂದ ತನು ಮನಗಳು ಹೇಗೆ ತುಂಬಿ ಬಂದಿವೆಯೊ, ಹಾಗೆಯೇ ಇತರರ ಭಾವನೆಗಳೂ ಬೆಳೆಯಲಿ, ಹೃದಯಗಳೂ ತುಂಬಲಿ–ಎಂದು ಆಶಿಸಿದವರು ಅವರು. ಇಂತಹ ನಿಸರ್ಗ ಪ್ರೇರಿತ ಸೌಂದರ್ಯದಲ್ಲೇ ನಿರಾಕರ್ಷಕವಾದ ಮಾನವನ ಇರಕ್ಕೆ ಕಳೆ ಬರಬೇಕು; ಉತ್ಸಾಹ ಹುಟ್ಟಬೇಕು. ಹೃದಯ ಮಿದುಗೊಂಡು ಜೀವನ ಸುಂದರವಾಗಬೇಕು. ಕವಿಯಾದ ಅವರು ಕಣ್ಣಿನಿಂದ ಕಂಡರು. ಅಂತಃಕರಣದಿಂದ ಅನುಭವಿಸಿ ದರು. ಶಿಕ್ಷಕರಾದ ಅವರು ತಾವು ಕಂಡುಂಡ ಸೊಗಸನ್ನು, ಅದರಿಂದ ಉದ್ಭೂತವಾದ ವಿಚಾರ, ಭಾವನೆ, ಅನುಕಂಪ ಗಳನ್ನು ತಮ್ಮ ಸುತ್ತಲೂ ಪಸರಿಸಿದರು. ಅವರಲ್ಲಿದ್ದ ಮಾನ ವತೆಯ ಪ್ರೇಮ ಎಷ್ಟು ತಿಳಿಯೂ ಪರಮವೂ ಆಗಿತ್ತೆಂದು ಜೀವನದ ಸೊಗಸುಗಳನ್ನು ಅನುಭವಿಸುವ ಶಕ್ತಿಯು ಎಷ್ಟು ಸೂಕ್ಷ್ಮವಾಗಿತ್ತೆಂದು ನಾನಿಂದು ಮನಗಾಣುತ್ತಿದ್ದೇನೆ. ಅವರು ಜೀವನದಲ್ಲಿ ಇದಿರುಗೊಂಡ ತಡೆ, ತೊಡರುಗಳನ್ನು ಎಣಿಸಿ ದಲ್ಲಿ, ಬಾಳ್ವೆಯ ತರುಣದಲ್ಲೇ ಅವರನ್ನು ಕದಲಿಸಿದ ಸುಳಿವು

ಸೆಳೆತಗಳನ್ನು ಎಣಿಸಿಕೊಂಡಲ್ಲಿ, ಕಡಿಮೆ ತೆರನ ಮನಃಶಕ್ತಿಯ ಇನ್ನೊಬ್ಬನಾದರೆ ಕುಸಿದು ಹೋಗುತ್ತಿದ್ದ, ಕಂಗಾಲಾಗುತ್ತಿದ್ದ. ಮನಸ್ಸು ಮುದುರಿ, ಕಹಿಗೊಂಡು ವಿಕೃತಗೊಳ್ಳುತ್ತಿತ್ತು. ಅವರು ಇದಿರು ಹಾಯ್ದ ಪ್ರತಿಯೊಂದು ಕಷ್ಟನಿಷ್ಠುರಗಳನ್ನು ಇಲ್ಲಿ ವಿವರಿಸುವುದು ನನ್ನ ಉದ್ದೇಶವಲ್ಲ. ಅವುಗಳನ್ನು ತಿರುಗಿ ಮೆಲುಕಾಡುವುದು ಸಲ್ಲದು. ಅವರೆಂದಿಗೂ ಹಾಗೆ ಮಾಡಿದವರಲ್ಲ. ತನ್ನ ಕೈ ಬರಿದಾಗಿದ್ದಾಗ, ತನಗೆ ಅನ್ಯಾಯ ವಾಗಿದ್ದಾಗ, ಅವರು ಅನ್ಯರ ಮೇಲೆ ಅಸೂಯೆಗೊಂಡವರಲ್ಲ, ಅನ್ಯಾಯದ ಕಹಿಯನ್ನುಳಿಸಿಕೊಂಡು ನಂಜು ಕಾರಿದವರಲ್ಲ. ಅವರಿಂದ—ಬಾಯಿಯಿಂದಲಾಗಲೀ ಕೃತಿಯಿಂದಲಾಗಲೀ ಅವರು ತನ್ನಸಲುವಾಗಿ ಸಹ ಎಂದೂ ಮರುಕತೋರಿದವರಲ್ಲ. ಅಂಥವರ ಜೀವನ ಚಿತ್ರಕ್ಕೆ ಅದೇಕೆ ಬೇಕು? ಅವರ ಶ್ರದ್ಧೆ, ವಿಶ್ವಾಸಗಳಷ್ಟು ದೊಡ್ಡವು; ನೋಟ ಅಷ್ಟು ವಿಸ್ತಾರ. ಜನ ಪ್ರೇಮ ಅಷ್ಟು ಧಾರಾಳವಾಗಿದ್ದುದರಿಂದಲೇ ಕಿರು ನಡತೆಗೆ, ಕಠಿಣ ಮಾತಿಗೆ ಇಂಬುಗೊಟ್ಟವರಲ್ಲ.

ದೀನರಾಗಿಯೇ ಹುಟ್ಟಿದ ಅವರು ದೀನರಾಗಿಯೇ ಬಾಳಿದರು. ಅವರು ಸಾಧಿಸಿದ ಕೆಲಸ ಏನೇ ಇರಲಿ; ಏರಿದ ಮಟ್ಟ ಯಾವುದೇ ಇರಲಿ, ಹೆಮ್ಮೆ, ಪ್ರತಿಷ್ಠೆಗಳು ಅವರ ಬಳಿ ಸುಳಿಯಲಿಲ್ಲ. ಅವರ ಮನೋವಾಕ್ಕಾಯಗಳೆಲ್ಲ ಶುಚಿಯಾಗಿದ್ದವು, ಶುದ್ಧವಾಗಿದ್ದವು, ಪ್ರಾಮಾಣಿಕವಾಗಿದ್ದವು. ಇದಕ್ಕಿಂತ ಹೆಚ್ಚಿನದೇನು ಬೇಕು? ಇಷ್ಟೆಲ್ಲ ಗುಣಗಳಿದ್ದರೂ—ಇದ್ದಂತೆ ಕಾಣಿಸದಿತ್ತು ಅವರ ಬಾಳು. ಇಲ್ಲದ ಸೋಗನ್ನು ಧರಿಸಿದವರಲ್ಲ, ಇಲ್ಲದ ಗುಣವನ್ನು ತೋರಿಸಿದವರಲ್ಲ, ತಪ್ಪಿದ ಜನರನ್ನು ಕಂಡು ತಿರಸ್ಕಾರ ಬುದ್ಧಿ ತಾಳಿದವರಲ್ಲ. ತಾವು ಮಾತನಾಡುತ್ತಿರುವ ವ್ಯಕ್ತಿ—ಬಡವನಿರಲಿ, ದೊಡ್ಡವನಿರಲಿ, ಒಳ್ಳೆಯವನಿರಲಿ, ಕೆಟ್ಟವನಿರಲಿ, ಪಂಡಿತನಿರಲಿ, ಪಾಮರನಿರಲಿ, ಶ್ರೇಷ್ಠನಿರಲಿ, ಕನಿಷ್ಠನಿರಲಿ, ಠಕ್ಕನಿರಲಿ, ಸರಳನಿರಲಿ—ಎಲ್ಲರನ್ನೂ ಒಂದೇ ಬಗೆಯ ನಯವಿನಯಗಳಿಂದ ಕಾಣುವ ಶೀಲ ಅವರದ್ದು. ಉದಾಹರಣೆಗೊಂದು ಮಾತು ಹೇಳುತ್ತೇನೆ—ನಾವು ಕೆಲವರು ಮಾತನಾಡುತ್ತಿದ್ದಾಗ ನಮ್ಮ ಜತೆಯಲ್ಲಿಲ್ಲದವರನ್ನು ಕುರಿತು ಟೀಕೆ ಬಂದಿತೆನ್ನುವ. ಅಂತಹ ವೇಳೆಯಲ್ಲಿ ನಾವೇನು ಮಾಡಬೇಕು? ಒಂದೂ ಅವರ ನಿಂದೆಯೊಡನೆ ಸೇರಿಕೊಳ್ಳುವುದು, ಇಲ್ಲವೆ ಅದನ್ನು ವಿರೋಧಿಸುವುದು, ಅಥವಾ ಬುದ್ಧಿವಂತಿಕೆಯಿಂದ 'ಆ ವಿಷಯ ಸಾಕು' ಎಂದು ವಿಷಯಾಂತರಕ್ಕೆ ಹೋಗುವುದು. ಕೊನೆಯ ನಾಜೂಕಿನ ದಾರಿಯಿಂದ 'ನೀವೆಲ್ಲ ಹಾದಿ ತಪ್ಪಿದ್ದೀರಿ'—ಎಂದು ಹೇಳಿದಂತೆ ಆಗುತ್ತದೆ. ನಾವು ಮಾತನಾಡುತ್ತಿದ್ದ ವ್ಯಕ್ತಿ ಟೀಕೆಗೊ ನಿಂದೆಗೊ ತಕ್ಕವನಾಗಿದ್ದರೆ ಆಗೇನು ಮಾಡಬೇಕು? ಅಂಥ ಸಂದರ್ಭಗಳಲ್ಲಿ ನಮ್ಮ ತಂದೆ ಈ ಮೂರೂ ದಾರಿ ಹಿಡಿಯುತ್ತಿರಲಿಲ್ಲ. ಮಾತುಗಳಾಗುತ್ತಿರುವಾಗ ಅವರು ಅದರಲ್ಲಿ ಸೇರಿದ್ದಾರೋ ಇಲ್ಲವೋ ಎಂಬಷ್ಟು ಜಾಣ್ಮೆಯಿಂದ ವರ್ತಿಸುತ್ತಿದ್ದರು. ಪರನಿಂದೆ ಅವರಿಗೆ ಸಹಿಸುತ್ತಿರಲಿಲ್ಲವಾದರೂ ತನ್ನ ಸುತ್ತಲಿನ ಇತರರಿಗಿಂತ ತಾನು ಹೆಚ್ಚಿನ ಯೋಗ್ಯ ಎಂದು ನಟಿಸುವುದಕ್ಕೂ ಅವರಿಗೆ ಇಷ್ಟವಿರಲಿಲ್ಲ. ಆದರಿಂದ ಉಳಿದವರಿಗೂ ಸಂಕೋಚವು ತಪ್ಪುತ್ತಿತ್ತು. ಇವರ ಜಾಣ್ಮೆಯಿಂದ ನಯ, ವಿನಯ ಔದಾರ್ಯಕ್ಕೂ ತೊಡಕು ಬರುತ್ತಿರಲಿಲ್ಲ.

ಅವರ ಅತಿ ಹೆಚ್ಚಿನ ಗುಣವೆಂದರೆ—ಯಾರೊಬ್ಬರ ಮೇಲೂ, ತಮಗೆ ಎಷ್ಟು ಕೇಡು ಮಾಡಿದವರ ಮೇಲೂ ಪ್ರತೀಕಾರದಬಯಕೆಯನ್ನು ಎಂದೂ ತೋರಿದವರಲ್ಲ. ಬದಲು ಎಷ್ಟೋ ವೇಳೆ, ಹಾನಿ ಮಾಡಿದವರಿಗೆ ಒಳಿತನ್ನೇ ಎಸಗಿದ್ದುಂಟು. ಅವರಲ್ಲಿದ್ದ ಈ ಗುಣವನ್ನು ನಾನು ಬದುಕಿದ್ದಾಗ ಚೆನ್ನಾಗಿ ಪರಿಶೀಲಿಸಿದವನಲ್ಲ, ಅಂಥ ಗುಣವಿತ್ತೆಂದೇ ನನಗೆ ಅನಿಸಿರಲಿಲ್ಲ. ಒಂದು ಸಂದರ್ಭದಲ್ಲಿ ನನ್ನ ಅತ್ತೆಯೊಬ್ಬಳು, ಅವರ ವಿಚಾರದಲ್ಲಿ ಹೇಳುವಾಗ ಅವರು ಹೀಗೂ ಇರುತ್ತಿದ್ದರು—ಎಂದಳು. ನಮ್ಮ ತಂದೆಯ ಎಷ್ಟೋ ನಡತೆಗಳು, ಕೃತ್ಯಗಳು ನನಗೆ ಅರ್ಥವಾಗಿರಲಿಲ್ಲ. ಸಮನೆಂದೂ ಅನಿಸಿರಲಿಲ್ಲ. ನನ ಅತ್ತೆ ತೋರಿಸಿಕೊಟ್ಟ ಈ ಗುಣದ ದೃಷ್ಟಿಯಿಂದ ಅವರನ್ನಳೆಯುವಾಗ, ನನಗೆ ಅಂತಹ ನಡತೆಗಳ ಮತ್ತು ಕೃತ್ಯಗಳ ಅರ್ಥವಾಗತೊಡಗಿದೆ. ಮೇಲಿನ ಘಟನೆಗಳಾಗಲೀ, ನಡತೆಗಳಾಗಲೀ ಯಾರನ್ನು ಕುರಿತು ನಡೆದವುಗಳು ಎಂಬುದನ್ನೆಲ್ಲ ಇಲ್ಲಿ ಹೇಳುವುದು ಸಮನಲ್ಲ. ಹಾಗೆ ಪ್ರಚಾರಮಾಡುವುದು ನಮ್ಮ ತಂದೆಯವರ ಇಷ್ಟಕ್ಕೆ ಬರಲಾರದು. ಆದರೆ ಅವು ತೀರ ಗಮನಾರ್ಹವಾದ ಗುಣವೆಂದು ಮಾತ್ರ ಹೇಳದೆ ಉಪಾಯವಿಲ್ಲ.

ನಾನು ಮೇಲೆ ಹೇಳಿದ ಗುಣ ಯಾವ ಬಗೆಯಲ್ಲಿ ಉದಾತ್ತವಾಗಿದೆ ಎಂದು ಹೇಳುವುದೂ ಕಷ್ಟ. ಕೇಡು ಮಾಡಿದವರಿಗೆ ಒಳಿತನ್ನು ಮಾಡಬೇಕೆಂಬ ಬೋಧಕ ಬುದ್ಧಿ ಅಲ್ಲಿರಲಿಲ್ಲ. ಒಳಿತು ಮಾಡುವುದಕ್ಕಾಗಿ ದಾರಿ ಸರಿದು, ದೂರ ಹೋಗಿ, ಅದನ್ನು ಮಾಡುವುದಕ್ಕೂ ಹೋದವರಲ್ಲ. ಅಥವಾ ಕೆಟ್ಟದು ಮಾಡಿದವನಿಗೆ—ತನಗೆ ಪ್ರತಿಯಾಗಿ ಒಳಿತೇ ಮಾಡಿದರು—ಎಂಬ ಪ್ರಜ್ಞೆಯು ಉಂಟಾಗಲಿ ಎಂಬ ಭಾವನೆಯೂ ಅವರಲ್ಲಿರಲಿಲ್ಲ. ತಾವು ಮಾಡಿದ ಒಳಿತು ಮಂದಿಗೆ ತಿಳಿಯಬೇಕೆಂಬ ಆಸೆಯು ಉದ್ದೇಶವಾದರೆ ಆ ಒಳಿತಿಗೆ ಬೆಲೆಯಿಲ್ಲ. ಆದರೆ ಈ ಬಗೆಯಲ್ಲಿ ಒಳಿತುಮಾಡಿ ತೃಪ್ತಿ ತಂದುಕೊಳ್ಳುವ ಅವಕಾಶ ಬಹಳ ದೊರೆಯಲಾರದು. ಒಳಿತಿಗೆ ಗುರಿಯಾದ ಮನುಷ್ಯ, ಅವರನ್ನು ಸಂಧಿಸಿದಾಗ ಹೆಚ್ಚೇನೂ ನಡೆದಿರದಂತೆ ಅವರು ವರ್ತಿಸುತ್ತಿದ್ದರು.

ಇದನ್ನೆಲ್ಲ ಕಾಣುವಾಗ ನಮ್ಮ ಸಮಾಜದಲ್ಲಿ ಕಾಣುವ

ನೀತಿಯ ಆದರ್ಶಕ್ಕೆ ತಳವೇ ಇದ್ದಂತೆ ಅನಿಸುವುದಿಲ್ಲ. ನಾವು ಮಾಡಲಿ, ಮಾಡದಿರಲಿ–ನಮಗೆಲ್ಲ ಗೊತ್ತಿರುವ ಸಂಗತಿ ಎಂದರೆ—ವೈರ, ದ್ವೇಶ, ಕೆಡುಕುಗಳನ್ನು ದಂಡನೆಯಿಂದ, ಪ್ರತೀಕಾರದಿಂದ, ಬಲವಂತದಿಂದ, ದೂರ ತಳ್ಳುವುದರಿಂದ ನಾವು ಗೆಲ್ಲಲಾರೆವೆಂದು. ಅದರಿಂದ ದುಷ್ಟತನವು ಸಾಯುವುದಿಲ್ಲ. ಅದು ದುಷ್ಟನಿಂದ ಶಿಕ್ಷಿಸುವವನನ್ನು, ಸೇರಿಕೊಳ್ಳುತ್ತದೆ. ಆದುದರಿಂದ ಕೆಡುಕನ್ನೂ, ವೈರವನ್ನೂ ಒಳಿತಿನಿಂದಲೇ, ಪ್ರೀತಿಯಿಂದಲೇ ಗೆಲ್ಲಬೇಕೆಂಬ ಮಾತು ಸಿದ್ಧಾಂತಕ್ಕೆ ಸಮನಾಯಿತು. ಕೆಟ್ಟದು ಮಾಡಿದವನಿಗೆ ಪ್ರತಿಯಾಗಿ ಸಲಿಸತಕ್ಕ ಒಳಿತಿನಿಂದ ಕೆಡುಕಿಯು ಪಶ್ಚಾತ್ತಾಪಗೊಳ್ಳುವಂತೆ ಮಾಡುವುದಲ್ಲ–ಎಂಬುದು ಇನ್ನೂ ಹೆಚ್ಚಿನ ಗುಣವಲ್ಲವೆ? ಒಳಿತನ್ನು ಒಳಿತಿಗಾಗಿಯೇ ಸಾಧಿಸಬೇಕು. ಅದು ನಮಗೆ ತಂದುಕೊಡುವ ಆತ್ಮತೃಪ್ತಿಗಾಗಿ ಮಾಡಬೇಕಾದಂಥ ಕರ್ತವ್ಯವೇ ಹೊರತು, ಕೆಡುಕಿಗೆ ಪಶ್ಚಾತ್ತಾಪ ಬರಲಿ, ಕೆಡುಕಿಯ ದಾರಿ ಬಲವಂತದಿಂದ ಬದಲಿಸಲಿ, ಜನತೆಯು ಕೇಡಿಗರಿಗೆ ಆಶ್ರಯ ಕೊಡದಿರಲಿ–ಎಂಬುದರ ಸಲುವಾಗಿ ಒಳ್ಳಿತು ಮಾಡುವುದಲ್ಲ.

ಈ ಬಗೆಯ ದಾರಿಯು ಇನ್ನೂ ಹೆಚ್ಚಿನ ನೀತಿಯಾಗಿದೆ. ನಮ್ಮ ತಂದೆಯನ್ನು ನಡೆಯಿಸಿಕೊಂಡುಹೋದ ನೋಟ, ಆದರ್ಶಗಳು ಇಂತಹವೆಂದು ನನಗನಿಸುತ್ತಿದೆ. ಆ ಆದರ್ಶಗಳನ್ನು ಅವರು ಎಂದೂ ಮೆರೆಯಿಸಿದವರಲ್ಲ. ಯಾವ ತರದ ಪ್ರದರ್ಶನವೂ ಸಲ್ಲದವರು ಅವರು. ಇತರರಿಗಿಂತ ತಾನು ಹೆಚ್ಚು–ಎಂದು ತೋರಿಸಿಕೊಂಡವರಲ್ಲ. ಈ ಸಂದರ್ಭದಲ್ಲಿ ಅವರು ವಿ. ಸಿ. ಯವರ 'ಹಾಳೂರು' ಎಂಬ ಕವನದ ಕೆಲವು ಪಂಕ್ತಿಗಳನ್ನು ಉಳಿದ ಪದ್ಯಗಳಿಗಿಂತ ಹೆಚ್ಚಾಗಿ ಏಕೆ ತಮ್ಮಷ್ಟಕ್ಕೆ ಹಾಡುತ್ತಿದ್ದರು, ಗೊಣಗುತ್ತಿದ್ದರು–ಎಂದು ಯೋಚಿಸುವುದೊಳಿತು. ಅವರ ನೈತಿಕ ಆದರ್ಶಕ್ಕೂ ಇದಕ್ಕೂ ಮೇಳವಿತ್ತೆ?

"ಇಂದು ಈ ಊರಿಗೆ ಹಗೆಗಳಿಲ್ಲ,
ತನ್ನದಿನ ಬಂತೆಂದು ಕಣ್ಣುಗಳ ಮುಚ್ಚಿ,
ಇನ್ನೆನಗೆ ಸಾಕೆಂದು ತಣ್ಣಗಾಯಿತೂರು"

ಏಕೋ ಈ ಮೇಲಿನ ಪದ್ಯ, ಪಂಕ್ತಿಗಳೆಂದರೆ ಅವರಿಗೆ ಪಂಚಪ್ರಾಣವಾಗಿದ್ದುವು. ಆ ಪದ್ಯಗಳನ್ನು ಹೇಳಿರುವ ಸಂದರ್ಭಗಳನ್ನು ಕಂಡಲ್ಲಿ–ದೌಷ್ಟ್ಯ, ವೈರಗಳು ಕೊನೆಗೊಂಡಾಗ (ಪ್ರತಿಯಾಗಿ ಒಳಿತನ್ನು ಸಲಿಸುವುದರಿಂದ) ಬಾಳ್ವೆಯ ಕೆಲಸ ಮುಗಿಯಿತೆಂದು ಸಿದ್ಧಾಂತವಾಗುತ್ತದೆ.

ಈ ಲೇಖದಲ್ಲಿ ನಾನು ನನ್ನ ತಂದೆಯವರನ್ನು ಕುರಿತಾಗಿ ನನಗಿರುವ ಅಲ್ಪ ಪರಿಚಯವನ್ನು ಹೇಳಿದ್ದೇನಾದರೂ, ನನ್ನ ಭಾವನೆಗಳಿಗೆ ತಕ್ಕ ಮಾತುಗಳ ಬಿಂಬ ಇದಕ್ಕೆ ಬಂದಿಲ್ಲ–ಎಂದು ನನಗೇನೆ ಅನಿಸುತ್ತದೆ. ದಿನ ಸರಿದ ಹಾಗೆ, ಅವರನ್ನು ಕುರಿತು ನೆನೆದ ಹಾಗೆ, ಎಷ್ಟೊಂದು ಸರಳ, ಶ್ರೇಷ್ಠ ಜೀವವೊಂದು ಇದ್ದು ಕಳೆಯಿತು ಎಂದು ಅನಿಸುತ್ತದೆ. ಅವರು ನಮ್ಮನ್ನೆಲ್ಲ ಹರಸಿ, ಮೃತಿಯನ್ನೈದಿ ಹದಿನಾಲ್ಕು ವರ್ಷಗಳು ಸಂದಿವೆಯಾದರೂ, ಆದ ನಷ್ಟದ ನೋವು ಅಷ್ಟೇ ತೀವ್ರವಾಗಿ ಉಳಿದಿದೆ. ಈ ವಿಶಾಲ ಪ್ರಪಂಚದಲ್ಲಿ, ತನ್ನ ಮಿತವಾದ ಆವರಣದಲ್ಲಿ, ಆ ಒಂದು ಜೀವ–ನಮ್ರವಾದ ಚೇತನಮಯವಾದ, ಸಾಧುತರವಾದ ಜೀವ, ಬಂದು–ಎಷ್ಟೆಲ್ಲ ಬೆಳಗಿತು. ಆದರೆ ಎಷ್ಟು ಅಲ್ಪಕಾಲ ಇದ್ದು ಹೋಯಿತು–ಎಂದು ಮನಸ್ಸಿಗೆ ಅನಿಸುತ್ತದೆ. ಹೂದೋಟವನ್ನು ಸದ್ದಿಲ್ಲದೆ ಹೊಕ್ಕು, ತನ್ನ ಲಘುವಾದ, ಸುಂದರವಾದ, ನಿಶ್ಶಬ್ದವಾದ ಕುಣಿತ, ಹಾರಾಟ, ಬಣ್ಣ ಬೆಡಗಿಂದ ನಲಿದು ಮಾಯವಾಗುವ ಪತಂಗನೊಂದರಂತೆ ಅವರು ಈ ಇಳೆಗೆ ಬಂದರು; ನಲಿದು ಬೆಳಗಿದರು. ಗೆದ್ದರೂ ಗೆದ್ದಂತೆ ತೋರಿಸದೆ, ತನ್ನ ಕರ್ತವ್ಯಮಾಡಿ, ತನ್ನ ಹಿರಿಯರ ಪ್ರೀತಿಯ ಕಾಂಕ್ಷೆಗಳನ್ನು ಸಲ್ಲಿಸಿ, ತನ್ನ ಸುತ್ತಲಿನ ಪ್ರಪಂಚಕ್ಕೆ ಸಲುವ ಋಣವನ್ನು ಸಲ್ಲಿಸಿ ಸದ್ದಿಲ್ಲದೆ ಅದೃಶ್ಯರಾದರು. ತಾವು ನಾಟ್ಯವಾಡಬೇಕಾಗಿ ಬಂದ ಇಳೆಯೆಂಬ ನಾಟ್ಯರಂಗ ಅವರ ಕಣ್ಣಿಗೆ ಒಪ್ಪಿತೋ ಇಲ್ಲವೋ ತಿಳಿಯೆ. ಅದು ಇರಬೇಕಾದ ರೀತಿಯಲ್ಲಿ ಇಲ್ಲದಿದ್ದರೂ, ನಿರಾಶರಾಗದೆ, ಜೀವನ ನಾಟ್ಯ ಸಾಗಿಸಿದರು. ಬಂದ ಬದುಕನ್ನು ಸ್ವೀಕರಿಸಿದರು. ಅದರಲ್ಲಿನ ಅನೇಕಾನೇಕ ಸವಿಸೊಗಸುಗಳಿಗೆ ಕಣ್ಣು ಮುಚ್ಚಲಿಲ್ಲ. ಬದುಕಿನಲ್ಲಿ ಕೊರತೆಯಿದ್ದರೆ ದುಡಿದು ತುಂಬಿಸಬಾರದೇಕೆ? ಅಜ್ಞಾನ ಕಾಣಿಸುತಿದ್ದರೆ ಜ್ಞಾನ, ವಿಚಾರಗಳಿಂದ ಹೋಗಲಾಡಿಸಬಾರದೇಕೆ? ಕೆಡುಕು ತುಂಬಿದ್ದರೆ ಒಳಿತಿನಿಂದ ಶುಚಿಗೊಳಿಸಬಾರದೇಕೆ? ತನ್ನ ಬದುಕಿನ ತೋಟವನ್ನು ನಗು, ಪ್ರೀತಿ, ಹರ್ಷ, ಗೀತ, ಪ್ರಾಮಾಣಿಕತೆಗಂಳಿದ ಸಿಂಗರಿಸಬಾರದೇಕೆ? ಅಂತಹ ಜೀವನದ ನಾಟ್ಯವು ಅವರದಿತ್ತು. ಹೆಚ್ಚಿನ ಅಭಿಲಾಷೆ, ಆದರ್ಶಗಳಿರಲಿಲ್ಲ. ಇರುವ ಸಾಮಾನ್ಯ ಆದರ್ಶಗಳನ್ನೂ, ಸರಳ ಕೋರಿಕೆಗಳನ್ನೂ, ನಮ್ರ ಬಯಕೆಗಳನ್ನೂ ಸಾಧಿಸಿಕೊಂಡರು. ಅಂಥ ಬಾಳು ವ್ಯರ್ಥವಲ್ಲ. ಕೆಡುಕಿಗೆ ಒಳಿತೆಣಿಸುವ ಬಾಳದು.

---

# ಕನಸಾದ ನನಸು

೧೮೯೩ನೆಯ ಇಸವಿಯ ಅಕ್ಟೋಬರ–ನವಂಬರ. ಹೇಗೂ ಆವಾಗಣ ಪದ್ಧತಿಯ ಮೇರೆಗೆ ಬಣ್ಣಬಣ್ಣದ ಕಾಗದಗಳಿಂದ ಸಮೆದ ಆಗಸಗೂಡುಗಳನ್ನು ರಾತ್ರಿ ಮನೆಮನೆಯ ಮುಂಗಡೆ ತೂಗಾಡಿಸುತ್ತಿದ್ದ ಆಶ್ವಯುಜ–ಕಾರ್ತಿಕ ಮಾಸ. ಏಕೆಂದರೆ ಆವತ್ತು ಮಂಗಳೂರಲ್ಲಿ ನಾನು ಕಲಿಯುತಿದ್ದ ಶಾಲೆಗೆ ಹೋಗುತಿದ್ದ ಬೀದಿಯಾಗೆ ಪಕ್ಕದ ಅಂಗಡಿಯಲ್ಲಿ ಬಿಳಿಯ ಹಾಳೆ ದೊರೆಯದೆ ಗೂಡುದೀಪಗಳಿಗೆ ಮಾರಲೆಂದು ತಂದಿಟ್ಟ ಕೆಂಪು ಕಾಗದವನ್ನು ಕೊಂಡುಕೊಂಡ ನೆನಪು ನನ್ನ ಮನಸ್ಸಿನಲ್ಲಿ ಬಾಂದುಗಲ್ಲಿನಂತಿದೆ. ಆ ಕಾಗದವಾದರೆ ನನಗೆ ಏಕೆ ಬೇಕಾಯಿತು? ಅದರ ಹಿಂಗತೆ ಹೀಗದೆ–

ನಮ್ಮ ಹತ್ತಿರದ ನೆಂಟರೂ ಸಲುಗೆಯ ಗೆಳೆಯರೂ ಆದ ಕುಂಬಳೆಯ ಮೊದಲನೆಯ ಮನೆತನದ ಮೂವರು ನಾಯಕ ಬಂಧುಗಳು–ವೈ. ವಾ. ಗಣಪತಿ ನಾಯಕ, ಜನಾರ್ದನ ನಾಯಕ ಮತ್ತು ವಾಮನ ನಾಯಕ, ಇವರು–ಮಂಗಳೂರಿನಲ್ಲಿ ಗಣಪತಿ ದೇವಸ್ಥಾನದ ಕೇರಿಯಲ್ಲಿಯ ಕಾತ್ಯಾಯನೀ ಮಠದಲ್ಲಿ ಬಿಡಾರವಿದ್ದು, ಅವರಲ್ಲಿ ಮೊದಲನೆಯವರು ಅಲ್ಲಿಯ ಗವರ್ನಮೆಂಟ್ ಕಾಲೇಜಿನಲ್ಲಿ (Government College) ಎಫ್. ಏ. (F. A.) ಪರೀಕ್ಷೆಗೂ, ಮಿಕ್ಕವರಿಬ್ಬರು ಮಿಶ್ಶನ್‌ಹೈಸ್ಕೂಲಿನಲ್ಲಿ (Mission HighSchool) ಮೆಟ್ರಿಕ್ಯುಲೇಶನ್ (Matriculation) ಪರೀಕ್ಷೆಗೂ ಓದುತಿದ್ದಾಗ, ಆಗ್ಗೆ ಅಲ್ಲಿಯ ಎಲೋಯ್‌ಶಿಯಸ್ ಕಾಲೇಜಿನಲ್ಲಿ (Aloysius collage) ಬಿ. ಏ. ಗೆ (B. A.) ಓದುತಿದ್ದ ಕೈ. ವಾ. ಪಂಜೆ ಮಂಗೇಶರಾಯರು ವಾರಕ್ಕೆ ಒಂದೆರಡಾದರೂ ಬಾರಿ ಅವರಲ್ಲಿ ಬಂದು ಹೋಗುತ್ತಲಿದ್ದರು. ನಾನೂ ಆಗಾಗ ಅಲ್ಲಿಗೆ ಹೋಗುತಿದ್ದೆ. ಅಲ್ಲಿ ತಾನೆ ನಾನು ಪಂಜೆಯವರನ್ನು ಪ್ರಥಮತ: ಪರಿಚಿಸಿದೆ. ಪಂಜೆಯವರು ಅಲ್ಲಿಗೆ ಬಂದಾಗ ಒಂತು ಒಂತಿಗೂ ಹಾಡುತಿದ್ದರು. ಹೆಚ್ಚಾಗಿ ಕೈ. ವಾ. ಕಿರ್ಲೋಸ್ಕರರ ಮರಾಟೀ ನಾಟಕಗಳಿಂದ; ಬಹಳ ಇಂಪಾದ ಕಂಠ, ಮರೆಗೆ ನಿಂತು ಕೇಳಿದರೆ ಹೆಂಗಸಿನ ಕೊರಳೆನ್ನಬೇಕು, ಮತ್ತೂ ಕೇಳೋಣ, ಮತ್ತೊಂದು ಕೇಳೋಣ ಎನ್ನಬೇಕು. ಮರಾಟಿ ಹಾಡುಗಳ ಜತೆಗೆ ಕ್ವಚಿತ್ತಾಗಿಯೇ ಆದರೂ ಅವರು ಬೇರೆ ಕೆಲವನ್ನೂ ಹಾಡುತಿದ್ದರು. ಅವರು ಹಾಡುತಿದ್ದ ಮರಾಟಿ ಹಾಡುಗಳೆಲ್ಲವೂ ನಾನು ಬಹುಧಾ ಕೇಳಿಬಲ್ಲವು. ಅತಏವ ಅವಲ್ಲಿ ನನಗೆ ಹೊಸತನವಿದ್ದಿಲ್ಲ. ಆ ಮತ್ತಿನವಲ್ಲಾದರೆ ಕೆಲವು ಹೊಸತಾಗಿದ್ದುವು; ಒಂದೆರಡು ಹೊಸತೇ ಅಲ್ಲ, ತೀರ ಕೌತುಕವೂ ಆಗಿದ್ದುವು, ಅವು ಸಹಸಾ ನನ್ನ ಮನಸ್ಸಿನಲ್ಲಿ ನಾಟಿಕೊಂಡವು. ಆದರೆ ಅವನ್ನು ನನಗೆ ಬರೆದು ಕೊಡಿ ಎನ್ನುವಷ್ಟರ ಕಡ್ಡವೂ ಆ ಚಿಕ್ಕಂದಿನಲ್ಲಿ ನನಗಿರಲಿಲ್ಲ, ಅಷ್ಟರ ಸಲುಗೆಯೂ ಇರಲಿಲ್ಲ. ಹಾಗಾಗಿ ಅವರು ಹಾಡಿದೆಲ್ಲವನ್ನು ನಾನು ಹೊರಗೊಳಗೆ ಕಿವಿಯಾಗಿ ಸುಮ್ಮನೆ ಕೇಳುತ್ತಿದ್ದೆನಷ್ಟೆ. ಹಾಗೆ ಒಂದೆರಡು ತಿಂಗಳೇನೋ ಸಂದಿತು. ಅಕ್ಟೋಬರ–ನವಂಬರ ಮಾಸ ಬಂದಿತು.

ಅಂದು ಶಾಲೆಯ ದಿನ. ಎಂದಿನಂತೆ ಹೊತ್ತುಂಟಲೆ ಗಂಜಿಯುಂಡು ಬೆಳಿಗ್ಗೆ ೮.೩೦ ಗಂಟೆಗೇನೋ ನಾನು ಶಾಲೆಗೆ ಹೋಗುತಿದ್ದಾಗ ಅಲ್ಲಿ ಬಾಗಿಲ ಬಳಿಯಲ್ಲಿ ಪಂಜೆಯವರನ್ನು ಎದುರುಗೊಂಡೆ. ಕೂಡಲೆ ನನ್ನ ಮನಸಂದ ಆ ಹಾಡುಗಳ ನೆನಪಾಯಿತು. 'ಏನೇ ಆಗಲಿ, ಈಗ ಇವರನ್ನು ಕೇಳಿಯೇ ಬಿಡೋಣ, ಎಣ್ಣೆ ಸಿಕ್ಕಿದ್ದೇ ಶನಿವಾರ' ಎಂದುಕೊಂಡೆ, ಕೈ ಮುಗಿದೆ. ಅಲ್ಲೇ ತಡೆದರು. "ಅಂದು ತಾವು ಹಾಡಿದ 'ತ್ವಂ ರಾಮಚಂದ್ರ' ಮತ್ತು 'ಮೆಚ್ಚಿದೇನು ಗಾನಲೋಲೆ' ಎಂಬ ಅವೆರಡು ಹಾಡುಗಳನ್ನು ಬರೆದುಕೊಡುವಿರಾ?" ಎಂದೆ. 'ಅಗತ್ಯವಾಗಿ ಕೊಡುವೆ, ಆದರೆ ನನ್ನೊಂದಿಗೆ ಕಾಗದವಿಲ್ಲವಲ್ಲಾ!' ಎಂದರು. ನನ್ನ ಕೈಯ್ಯಲ್ಲಿದ್ದ ಕರಡು ಪುಸ್ತಕದ ಪಾನನ್ನು ಹರಿಯಲೇ? ಅಂದರೆ, ಲೆಕ್ಕ ಬರೆದಿರುವ ಅದರ ನಿುಕ್ಕ ಅರೆವಾಸಿಯೂ ಕಿತ್ತುಹೋಗುತ್ತದೆಂದು ಅಳುಕಿ, ಎದುರಿಗಿರುವ ಅಂಗಡಿಗೆ ಹೋಗಿ ಕೇಳಿದೆ. ಬಿಳೇ ಕಾಗದವಿಲ್ಲ, ಕೆಂಪಾದರೆ ಇದೆ ಎಂದಾಯಿತು. ಕೆಂಪಾದರೆ ಕೆಂಪೆಂದು ಇಸಕೊಂಡೆ, ತಂದು ಅವರ ಕೈಯ್ಗಿತ್ತೆ. ಅದರಲ್ಲಿ ನನ್ನ ಸೀಸದ ಕಡ್ಡಿಯನ್ನು ಎರಕೊಂಡು ಪಂಜೆಯವರು ಅದೇ ಅಂಗಡಿಯ ಹೊರಗೆ ಚಾಚಿಟ್ಟ ಬಾಗಲಿನ ಪಡಿಯಲ್ಲಿ ನನ್ನ ಕರಡು ಪುಸ್ತಕವನ್ನು ಅಡಿಯೊತ್ತಾಗಿಟ್ಟು, ತಮ್ಮ ತೆಳ್ಳಾನೆ ಉದ್ದುದ್ದ ಬರೆಹದಲ್ಲಿ (ಕೊನೆಯ ವರೆಗೂ ಅದೇ ಅವರ ಬೇರ್ಪಡದ ಬರೆಹ) ಅವೆರಡು ಹಾಡುಗಳನ್ನು ಹೀಗೆ ಬರಕೊಟ್ಟರು. (ಆ ಕೆಂಪು ಕಾಗದ ಮೊನ್ನೆಮೊನ್ನೆಯ ತನಕ ನನ್ನೊಂದಿಗಿತ್ತು)–

೧

೧) ತ್ವಂ ರಾಮಚಂದ್ರ ಇನಕುಲೇಶ ಪಾಹಿ ಪಾಹಿ ಮಾಮ್;
೨) Thy fame the flower is spreading hither and thither its purest balm;
೩) ಈ ಪೀದಮಿದಾ ತುಮಕು ದಯಾ ರಾಣ ಇವುಡು ರಾಮ್;
೪) ಪಾರ್ಥನೋ ಸುದಾಮನಿವನ್ ಪಾರ್ಕು ವಂದನಾಮ್;
೫) ಆಪನೇಕ ಮಾಂಗತಾಹುಂ ಖುದಾ ದೀಜೆ ಮುಜೇ ಧಾಮ್;
೬) ಬಹಳ ಅಧಿಕ ಬೆಂದು ನೊಂದೆ ಲೋಕಬಂಧದಿಂ;
೭) ಗಹಿವರೂನಿ ಶಿವಸುತಾಚೆ ಪೂರಪಿ ಪ್ರಭು ಶಾಮ್.

೨

ಮೆಚ್ಚಿದೆ(ೇ)ನು ಗಾನಲೋಲೆ
ಮೋಹಿಸಿದೆನು ಧ್ವನಿಗೆ ನಾ ॥
ಚಿನ್ನ ನಿನ್ನ ಕಂಠನಾದ
ಕೋಕಿಲ ಸ್ವರ ಜರೆವುದು ।
ನಾಕಲೋಕ ಕಲಿಲನೇ ।
ಪೂರ್ಣಚಂದ್ರಾನನೆ ಚಿನ್ಮಸುಹಾರಿಣಿ ।
ಮನ್ಮಥನಾದಿನಿ ಮೋಹಿನೀ ॥

ಇವಲ್ಲಿ ೧ನೆಯ ಹಾಡಿನ ಚರಣಗಳ ಸಂಖ್ಯೆ ೭ ಅಂದರೆ ಬೆಸಿ. ಹಾಗೂ ಒಂದೊಂದು ಚರಣ ಒಂದೊಂದು ಭಾಷೆಯಲ್ಲಿದೆ. ೧ನೆಯ ಚರಣ ಸಂಸ್ಕೃತ; ೨ನೆಯದು ಇಂಗ್ಲೀಷು; ೩-೪ನೆಯವು ಇಂಥವೇ ಎಂದು ಹೇಳಬರುವುದಿಲ್ಲ, ಪ್ರಾಯಶ: ೩ನೆದು ತೆಲುಗು, ೪ನೆಯದು ತಮಿಳಾಗಿರಬಹುದು. ಹಾಗಾದರೆ ಈ ಪಾಠಗಳು ಅಶುದ್ಧವಾಗಿರಬೇಕು; ೫ನೇಯದು ಹಿಂದೀ; ೬ನೆಯದು ಕನ್ನಡ; ಕೊನೆಯ ೭ನೆಯದು ಮರಾಟಿ. ಈ ಹಾಡಿನಲ್ಲಿ ಇಂಗ್ಲಿಷು ಇದ್ದಿರುವ ಕಾರಣ, ಇದು ೧೮೯೩ರಲ್ಲಿ ಈಚೆಯದಾಗಿರಬೇಕಲ್ಲದೆ ಹೆಚ್ಚು ಹಳೆಯದಾಗಿರದು. ಹಾಗೂ ಇದರ ಕವಿ 'ಶಿವಸುತ' ಎಂದು ತನ್ನ ಅಂಕಿತವನ್ನು ಕೊನೆಯ ಮರಾಟೀ ಚರಣದಲ್ಲಿ ಹೇಳಿಕೊಂಡಿರುವುದರಿಂದ, ಆತನು ಮಹಾರಾಷ್ಟ್ರೀಯನಾಗಿರಬೇಕು.

೨ನೆಯ ಹಾಡಿನ ಮಾತು ಕನ್ನಡ. ೬-೭ನೆಯ ಚರಣಗಳ ಪಾಠದಲ್ಲಿ ಅಶುದ್ಧಿ ಇರಬೇಕು, ಇದ್ದಕ್ಕಿದ್ದಂತೆ ಅವುಗಳ ಅರ್ಥವಾಗುವುದಿಲ್ಲ. ಇದರಲ್ಲಿ ಪ್ರಾಸವಿಲ್ಲ. ೬೦ ವರ್ಷಗಳಿಗೂ ಮಿಕ್ಕು ಹಿಂದಿನ ಕವನದಲ್ಲಿ ಇದು ಗಮನಿಸತಕ್ಕ ವಿಷಯ. ಆದರೆ ಅಂದಿನಿಂದ ೧೦-೧೨ವರ್ಷಗಳ ಮೇಲೆ ಕನ್ನಡದಲ್ಲಿ ಪ್ರಾಸಬಿಟ್ಟು ಕವನಿಸಿದರೆ ಹೇಗೆ? ಎಂದು ಕೇಳಿದಾಗ ನನ್ನನ್ನು ಎದೆಗುಂದಿಸಿದ, ನನ್ನ ಉತ್ಸಾಹದಲ್ಲಿ ತಣ್ಣೀರು ಎರಚಿದ, ಹಾಗೂ ೧೯೧೧ರಲ್ಲಿ ನಾನು ಪ್ರಾಸವಿಲ್ಲದೆ ಬರೆದ ಕವಿತೆಗಳು ವಾರಪತ್ರಿಕೆಯಲ್ಲಿ ಪ್ರಕಟವಾದಾಗ ನನ್ನನ್ನು ಎಂದೂ ಇಲ್ಲದಂತೆ ದೂರಿದ, ಅಂದರೆ ಅಷ್ಟರ ಮಟ್ಟಿಗೆ ಪ್ರಾಸಕ್ಕೆ, ಹಳೆಯ ಸಂಪ್ರದಾಯಕ್ಕೆ ಮಾರುವೋದ ಪಂಜೆಯವರೇ ಈ ಪದ್ಯವನ್ನು ರಚಿಸಿರಬಹುದೆಂದು ಸ್ವಪ್ನೇಪಿ ನನಗೆನಿಸುವುದಿಲ್ಲ.

*　　　*　　　*　　　*

ಅದೇ ಅಕ್ಟೋಬರ— ನವಂಬರಕ್ಕೆ ಸರಿಯಾಗಿ ಆಗ್ಗೆ ಮದ್ರಾಸಿನ ಗವರ್ನರರಾಗಿದ್ದ ಲಾರ್ಡ್ ವೆನ್‌ಲೋಕರು (Lord Wenlock) ಮಂಗಳೂರಿಗೆ ಆಗಮಿಸಿದಾಗ ಅವರನ್ನು ಸತ್ಕರಿಸುವ ಬಗ್ಗೆ ಕೆಲವು ಸಾರಸ್ವತ ಬ್ರಾಹ್ಮಣ ವಿದ್ಯಾರ್ಥಿಗಳು ಸೇರಿ ಕೈ. ವಾ. ಕುಂದಾಪುರ ಕೃಷ್ಣರಾಯರು (Retired Sub-judge) ಗದ್ಯಪದ್ಯಾತ್ಮಕವಾಗಿ ಇಂಗ್ಲೀಷಿನಲ್ಲಿ ರಚಿಸಿದ 'ಚಂದ್ರಹಾಸ' ನಾಟಕವನ್ನು ಅಭಿನಯಿಸಿದರು. ಆ ಸತ್ಕಾರಕೂಟದ ಗಜರಗಳೆಯಲ್ಲಿ ಎಲ್ಲರಿಗೂ ಆ ನಾಟಕವನ್ನು ನೋಡತಕ್ಕ ಸಲವು ದೊರೆಯದ ಕಾರಣ, ನನಗೂ ಆ ಸಂಧಿ ದೊರೆಯಲಿಲ್ಲ. ಕೆಲ ಕಾಲಾನಂತರ ಅದೇ ನಾಟಕವನ್ನು, ಪ್ರಾಯಶ: ಮಂಗಳೂರಿನ ಗಣಪತಿ ಮಿಡಲ್ ಶಾಲೆಯಲ್ಲೆಂದು (Ganapathy Middle School) ತೋರುತ್ತದೆ, ಅವರು ಆಡಿದಾಗ ನನಗೆ ನೋಡಸಿಕ್ಕಿತು. ನಾಟಕ ಸೊಗಸಾಗಿತ್ತು. ಅದರಲ್ಲಿ ಪಂಜೆಯವರು ದುಷ್ಟಬುದ್ಧಿಯ ಭೂಮಿಕೆಯನ್ನು ವಹಿಸಿದ್ದರು. ಆ ಪಾತ್ರವಾದರೊ ಅಭಿನಯದ ತುತ್ತತುದಿಗೆ ಮುಟ್ಟುವಂತಿತ್ತು. ನಾನು ಅನಂತರ ಓದಿ ಬಲ್ಲಷ್ಟರ ಮಟ್ಟಿಗೆ ಶೇಕ್‌ಸ್ಪೀಯರನ(Shakespeare) ಒಥೆಲ್ಲೊ (Othello) ನಾಟಕದಲ್ಲಿ ಸರ್ ಹೆನ್ರಿ ಅರ್ವಿಂಗನ (Sir Henry Irving) ಯಾಗೋನ (Iago) ಪಾತ್ರವನ್ನು ಮನವರಿಸುವಂತಿತ್ತು. ಆದರೆ ಪಂಜೆಯವರು ಅದೊಂದೇ ವಿನಾ ಬೇರೆ ಪಾತ್ರವನ್ನು ಅಭಿನಯಿಸದೆ, ಅವರ ಅಭಿನಯಕಲೆ ಕೊನೆವರೆಗೂ ಕಾಕವಂಧ್ಯೆಯಾಗಿ ಉಳಿಯಿತು.

*　　　*　　　*　　　*

೧೮೯೫ರಲ್ಲಿ ಪಂಜೆಯವರು ಮಂಗಳೂರಿನ ಗವರ್ನ್‌ಮೆಂಟ್ ಕಾಲೇಜಿನಲ್ಲಿ ಕನ್ನಡಪಂಡಿತರಾಗಿ ನೇಮಿಸಲ್ಪಟ್ಟರು. ಆ ವರ್ಷದ ಎಫ್. ಏ. ಪರೀಕ್ಷೆಯ ವಿದ್ಯಾರ್ಥಿಗಳ ಕನ್ನಡ ಪಠ್ಯ ಪುಸ್ತಕಗಳಲ್ಲಿ ವೈ. ವಾ. ಗರಣೀ ವೈಯಾಕರಣ ಕೃಷ್ಣಾಚಾರ್ಯರ 'ಮೃಚ್ಛಕಟಿಕ ನಾಟಕ'ದ ಕನ್ನಡ ಅನುವಾದ ಒಂದಾಗಿತ್ತು. ಒಂದೇ ವರ್ಷದ ಹಿಂದೇನೋ ಅದೇ ನಾಟಕ ಪಂಜೆಯವರ ಬಿ. ಏ. ಪರೀಕ್ಷೆಗೂ ಒಂದು ಪಠ್ಯ ಪುಸ್ತಕವಾಗಿತ್ತು. ಆ ನಾಟಕದ ನಾಂದೀ ಪದ್ಯದಲ್ಲಿ ಪರ್ಯಂಕಾಸನ ಕಟ್ಟಿ ಯೋಗಾರೂಢನಾಗಿ ಸಮಾಧಿಯಲ್ಲಿದ್ದ ಶ್ರೀ ಶಿವನ ವರ್ಣನೆಯು ಈ ಮಹಾಸ್ರಗ್ಧರೆ ಇದೆ—

ನೆರ ಪರ್ಯಂಕಾಸನಕ್ಕೀರೆಳೆಯೆಲರುಣಿಯಂ ಜಾನುವೊಳ್ ಸುತ್ತಿಯುಭ್ಯಂ
ತರದೊಳ್ ಪ್ರಾಣಂಗಳಂ ಕಟ್ಟಿ ವಿಷಯವಿಮುಖಂಗೊಳ್ಳಿ ಸರ್ವೇಂದ್ರಿಯಂಗಳ್ ।
ಕರಣಂ ಬಿಟ್ಟಾತ್ಮನಂ ತನ್ನೊಳೆ ಚಲಿಸದೆ ತಾಂ ತತ್ತ್ವದೃಕ್ಕಿಂದೆ ನೋಳ್ಪಾ
ಹರನಾ ಶೂನ್ಯಾಕ್ಷಿಯುಕ್ತ ಪ್ರಲಯಕೃತ ಸಮಾಧಿಕ್ರಮಂ ಕಾಗೆ ನಿಮ್ಮಂ ॥

ಮೊದಲನೆಯ ಪಂಕ್ತಿಯಲ್ಲಿ ಹಂಸಪಾದವಾದಂತೆ ಅದರ ಅರ್ಥ ಪಂಜೆಯವರಿಗೆ ಕಲಿಸಿದ ಎಲೊಯ್‌ಶಿಯಸ್ ಕಾಲೇಜಿನ ಕನ್ನಡ ಪಂಡಿತರಿಗೂ ಆಗಿರಲಿಲ್ಲ, ಪಂಜೆಯವರ ಹಿಂದಣ ಗವರ್ನಮೆಂಟ್ ಕಾಲೇಜಿನ ಪಂಡಿತರಿಗೂ ಆಗಲಿಲ್ಲ. ಹಾಗಾಗಿ ಅವರಿಬ್ಬರೂ ಅದನ್ನು ಮುಟ್ಟದೆ ಬಿಟ್ಟಿದ್ದರು. ಆ

ಪಾರಿಭಾಷಿಕ ಪದ್ಯವನ್ನು ವಿವರಿಸುವ ಕೆಲಸ ಈಗ ಪಂಜೆಯವರ ಪಾಲಿಗೆ ಬಂತು. ಅವರಿಗೂ ಊಹೂಂ. ಅವರಾಗ ವಿಲ್ಸನರು (Horace Hayman Wilson) ಮಾಡಿದ ಮೃಚ್ಛಕಟಿಕದ ಆಂಗ್ಲ ಅನುವಾದವನ್ನು ತೆರೆದು ನೋಡಿದರಂತೆ. ತುಸಾ ಗುಣ ಸಿಕ್ಕಿತು, ಆದರೂ ಮೂಕನ ಹೋಳಿಗೆಯಂತೆ. ಕೊನೆಗೆ ಆ ವೃತ್ತದ ವಿಲ್ಸನರ ಭಾಷಾಂತರವನ್ನೇ ವಿದ್ಯಾರ್ಥಿಗಳಿಗೆ ಓದಿ ಹೇಳಿ, ಅದು ಮೊತ್ತಮೊದಲಿನ ಪದ್ಯವಾದ್ದರಿಂದ ಪರೀಕ್ಷೆಗೆ ಬಾರದು, ಅದರ ಗೋಜನ್ನು ಬಿಟ್ಟುಬಿಡಿ ಎಂದರಂತೆ. ಆದರೆ ಆ ದಶಂಬರದಲ್ಲಾದ ಮದ್ರಾಸು ಯೂನಿವರ್ಸಿಟಿಯ ಪರೀಕ್ಷೆಯ ಪತ್ರದಲ್ಲಿ ಅದೇ ವೃತ್ತವನ್ನು ಸರಳಾನುವಾದಿಸಲಿಕ್ಕೆ ಕೇಳಬೇಕೇ? ಒಬ್ಬಿಬ್ಬರೇನೊ ಅದನ್ನು ಪ್ರಯತ್ನಿಸಿರಬಹುದಲ್ಲದೆ, ಮಿಕ್ಕವರೆಲ್ಲರೂ ಆ ಮಟ್ಟಿಗೆ ಪೂಜ್ಯ ಎಂದರು ಪಂಜೆಯವರು.

* * * *

ನನ್ನ ಮನೆತನ ಮಂಗಳೂರಿನದಾದರೂ, ತಂದೆಯ ಮನೆ ಮಂಗಳೂರಿನಲ್ಲಿದ್ದರೂ, ನಾವು ಹುಟ್ಟಿದುದೂ ಬೆಳೆದುದೂ ಇಲ್ಲಿ ಮಂಜೇಶ್ವರದಲ್ಲಿ, ನಮ್ಮ ತಾಯಿಯ ಚಿಕ್ಕಪ್ಪ ವೈ. ವಾ. ನರಸಯ್ಯ ಶಾನುಭಾಗರ ಮನೆಯಲ್ಲಿ. ಮಂಜೇಶ್ವರದಲ್ಲಿ ಶಾಲೆ ಮುಗಿಸಿ ಮಂಗಳೂರಿಗೆ ಹೋಗಿ ಅಲ್ಲಿ ನಮ್ಮ ಮನೆಯಲ್ಲಿದ್ದು ಮೇಲು ಸಾಲೆಯಲ್ಲಿ ಕಲಿಯುತಿದ್ದಾಗಲೂ ಬಿಡುಗಾಲದಲ್ಲಿ ಬಂದು ಉಳಿಯುತ್ತಿದ್ದುದೂ ಮಂಜೇಶ್ವರದಲ್ಲಿ. ಹಾಗೆ ೧೮೯೭ರ ಏಪ್ರೀಲ್-ಮೇ ತಿಂಗಳಿನ ರಜೆಯಲ್ಲಿ ನಾನು ಮಂಜೇಶ್ವರಕ್ಕೆ ಬಂದಿದ್ದಾಗ, ಇಲ್ಲಿಯ ಮನೆತನದ, ಮಾನತನದ ಶ್ರೀಮಂತರಲ್ಲಿ ಒಂದು ಮದುವೆಯಾಯಿತು. ಬಂಟವಾಳದಿಂದ ಇಲ್ಲಿಗೆ ಬಂದಿದ್ದ ಮದವಳಿಗನ ಕಡೆಯ ದಿಬ್ಬಣದಲ್ಲಿ ಪಂಜೆಯವರೂ ಬಂದಿದ್ದರು. ಲಗ್ನವಾದ ಮಾರನೆಯ ಬೆಳಗಾತ ನನ್ನ ಅಜ್ಜನ ಭೇಟಿಗೆಂದು ಅವರು ನಮ್ಮಲ್ಲಿಗೆ ಬಂದರು. ನನ್ನ ಅಜ್ಜನವರು ಕನ್ನಡ, ಮರಾಟಿ ಹಾಗೂ ಹಿಂದಿಯಲ್ಲಿ ಸಮಸಾಮಯಿಕ ಗ್ರಂಥಗಳನ್ನೂ, ವರ್ತಮಾನ ಪತ್ರಿಕೆಗಳನ್ನು ಚೆನ್ನಾಗಿ ಓದಬಲ್ಲವರು. ಮರಾಟೀ ಮತ್ತು ಹಿಂದೀ ಪುಸ್ತಕಗಳನ್ನು ಆಯಾ ಪತ್ರಿಕೆಗಳಲ್ಲಿ ಜಾಹೀರಾತನ್ನು ನೋಡಿ ಹೇಗೆ ಹೊರಗಿನಿಂದ ತರಿಸಿಕೊಳ್ಳಬೇಕೋ, ಹಾಗೆ ಯಾವ ಕನ್ನಡ ಹೊಸ ಪುಸ್ತಕ ಮಂಗಳೂರಿನ ಬಾಸೆಲ್ ಮಿಶ್ಯನ್ ಪುಸ್ತಕಾಲಯಕ್ಕೆ (Basel Mission Book Depot) ಬಂತೊ ಅದು ಅವರಲ್ಲಿರಬೇಕು. ಅಂದಿಗೆ ಕೆಲವೇ ದಿನಗಳ ಹಿಂದೆ ಅಲ್ಲಿಂದ ಕೊಂಡುಕೊಂಡ ಮೈಸೂರಿನ ಶ್ರೀ ಶ್ರೀಕಂಠ ಗೌಡರೆಂಬವರು ಶೇಕ್‌ಸ್ಪೀಯರನ 'ಮೆಕ್‌ಬೆತ್' (Macbeth) ನಾಟಕಕ್ಕೆ ರಚಿಸಿದ 'ಪ್ರತಾಪರುದ್ರ ದೇವ' ಎಂಬ ಕನ್ನಡ ಅನುವಾದವನ್ನು ಅವರು ಪಂಜೆಯವರ ಕಯ್ಗಿತ್ತರು. ಪಂಜೆಯವರು ಅದರಿಂದ ಯಕ್ಷಿಣಿಯರ (Witches) ಹಾಡುಗಳೇ ಮೊದಲಾದ ಕೆಲವು ರೋಚಕವಾದ ತೊಳೆಗಳನ್ನು ಆಯ್ದು ಓದಿದ ಓದೋ! ಹಾಡಿದ ಹಾಡೋ! ಕುಳಿತಲ್ಲಿಯೇ ಕೆಯ್ಯಾಡಿಸಿ, ಕಣ್ಣು ಮೋಡಿಸಿ ನಟಿಸಿದ ನಟನೆಯೋ! ಅದನ್ನು ಮರೆಯುವಂತಿಲ್ಲ. ಆಗ ಅಲ್ಲಿ ಹಲ ಮಂದಿ ಇದ್ದರು. ಅವರೆಲ್ಲರೂ ಮೆಚ್ಚಿ ತಲೆದೂಗಿನರು, - ಮುಗ್ಧರಾದರು. ನನ್ನ ಅಜ್ಜನವರು ಸೈ ಸೈ ಎಂದರು. ಆಮೇಲೆಯೂ ಎಷ್ಟೋ ಸಲ ಅದನ್ನು ನೆನವರಿಸಿ ಭಾಪು! ಭಾಪು! ಎನ್ನುತ್ತಿದ್ದರು.

* * * *

೧೮೯೭ರ ಉತ್ತರಾರ್ಧದಲ್ಲಿ ನಾನು ಮೈಸೂರಿನ 'ಕರ್ಣಾಟಕ ಗ್ರಂಥಮಾಲೆ' ಎಂಬೊಂದು ಮಾಸಪತ್ರಿಕೆಯ ಚಂದಾದಾರನಾದೆ. ಹಾಗೂ ಅದರ ಆವಂದಿನ ೧-೨ ಸಂಚಿಕೆಗಳನ್ನು ಕಾಣುತ್ತಲೆ ತುಂಬ ಮೆಚ್ಚಿ, ಆಗ್ಗೆ ೨ನೆಯ ವರ್ಷದಲ್ಲೇನೋ ಇದ್ದ ಆ ಪತ್ರಿಕೆಯ ಮೊತ್ತಮೊದಲಿನಿಂದ ಹಿಂದಣ ಸಂಚಿಕೆಗಳನ್ನೆಲ್ಲ ತರಿಸಿಕೊಂಡೆ. ಅದರಲ್ಲಿ 'Sandford and Merton' ಎಂಬ ಆಂಗ್ಲ ಮಕ್ಕಳ ಕಾದಂಬರಿಯ 'ಸುಮತಿ ಮದನಕುಮಾರ ಚರಿತ್ರೆ' ಎಂಬ ಬಹಳ ಚಲೋ ಅನುವಾದ, Sicilian summer ಎಂಬ ಆಂಗ್ಲ ನಾಟಕದ 'ಕನ್ಯಾವಿತಂತು' ಎಂಬ ಕಥಾರೂಪವಾದ ಅನುವಾದ ಮೊದಲಾದ ಕನ್ನಡ ಅನುವಾದಗಳೊಂದಿಗೆ 'ಪ್ರಿಯ ಭಾರ್ಯೆ' ಎಂಬ ಅದೊಂದೇ ಹೆಸರಿನ ಕೆಲವು ಏಕಾಂಕ ಗದ್ಯ ನಾಟಕಗಳೇ ಮೊದಲಾಗಿ ಹಲವು ಕನ್ನಡ ಗ್ರಂಥಗಳು ಮಾಸ ಮಾಸಕ್ಕೆ ಕ್ರಮಾಗತವಾಗಿ ಬರುತಿದ್ದುವು. ಪಂಜೆಯವರು ಅನಂತರ ಹೇಳಿರುವಂತೆ ನಮ್ಮ ಜಿಲ್ಲೆಯಲ್ಲಿ ಆ ಪತ್ರಿಕೆ ನನಗೊಬ್ಬನಿಗೆ ಮಾತ್ರ ಬರುತಿತ್ತಂತೆ. ಆದರೆ ನಾನು ಅದರ ಚಂದಾದಾರನೆಂದು ನಾಲ್ಕು ಮಂದಿಯೊಂದಿಗೆ ನಾನೇನೂ ತುತೂರಿಸಲಿಲ್ಲ, ಆ ಚಿಕ್ಕಂದಿನಲ್ಲಿ ನನಗದು ಹೊಳೆಯಲೂ ಇಲ್ಲ, ಅತಏವ ನನ್ನ ಸಹಪಾಠಿಗಳಿಗಾದರೂ ಆ ಸಂಗತಿ ಗೊತ್ತಿರಲಿಲ್ಲ. ಆದರೂ ಪಂಜೆಯವರಿಗೆ ಎಲ್ಲಿಯ ಕನಸು ಬಿತ್ತೇನೋ, ಹೇಗೆ ತಿಳಿಯಿತೇನೋ, ಒಮ್ಮೆ ನಮ್ಮಲ್ಲಿಗೆ ಬಂದರು, ಅವೆಲ್ಲ ಸಂಚಿಕೆಗಳನ್ನು ನನ್ನಿಂದ ಇಸಕೊಂಡು ಹೋದರು. ಓದಿದಂತೆ ಅವನ್ನು ನನಗೆ ತಂದುಕೊಟ್ಟರು. ಆಮೇಲೆ ಪ್ರತಿ ಸಂಚಿಕೆ ಬಂದಂತೆ ಕೊಂಡುಹೋಗಿ ಓದಿಕೊಡುತ್ತಿದ್ದರು. ಅಲ್ಲಿಂದಲೇನೋ ನಮಗಿಬ್ಬರಿಗೂ ತಿಳಿಯದೆ ನಮ್ಮೊಳಗಣ ಸಾಹಿತ್ಯಬಾಂಧವ್ಯದ ಗೊಣಸುಗಳು ಬಿಗುವಾಗುತ್ತ ಬಂದುವು. ಆಗ್ಗೆ ೧೮೭೪ರ ಫೆಬ್ರವರಿಯಲ್ಲೇನೋ ಹುಟ್ಟಿದ ಪಂಜೆಯವರಿಗೆ ೨೨ ವರ್ಷ ಪ್ರಾಯ, ನನಗೆ ೧೪ ವರ್ಷ.

* * * *

ಆಗ್ಗೆ ಪಂಜೆಯವರು ತಮ್ಮ ಬಿಡಾರವನ್ನು ಪ್ರಾಯಶಃ

ಇನ್ನೂ ಮಂಗಳೂರಿಗೆ ತಂದಿರಲಿಲ್ಲವೆಂದು ಕಾಣುತ್ತದೆ. ಏಕೆಂದರೆ, ಗಣಪತಿ ದೇವಸ್ಥಾನದ ಕೇರಿಯಲ್ಲಿ ಶ್ರೀ ವೇಣುಗೋಪಾಲ ದೇವರ ಮಠದ ಪಕ್ಕದಲ್ಲಿಯ ತಮ್ಮ ತಂಗಿಯ ಮನೆಯಲ್ಲಿ ಅವರ ಎರಡೂಟ, ಆ ಮಠದ ಬಲ ಬದಿಯ ಶ್ರೀ ಉಮಾ ಮಹೇಶ್ವರ ದೇವಸ್ಥಾನದ ಹೊದ್ದಿನಲ್ಲಿದ್ದ ವಿಟ್ಟುಮಾಮು ಎಂಬ ಚಿಕ್ಕ ಹೆಸರಿನಿಂದ ಪ್ರಖ್ಯಾತರಾಗಿದ್ದ ಕೈ. ವಾ. ಪಾಣೆ ಮಂಗಳೂರು ವಿಟ್ಠಲ ರಾಯರ ಹೊಟೇಲಿನಲ್ಲಿ ಇಪ್ಪೊತ್ತಿನ ತಿಂಡಿತೀರ್ಥ, ಗೌರೀ ಮಠದ ಕೇರಿಯಲ್ಲಿದ್ದ ಕೈ. ವಾ. ನಯಂಪಳ್ಳಿ ಶಂಕರನಾರಾಯಣ ರಾಯರ ಮನೆಯಲ್ಲಿ ಅವರ ಕೂರು ಮಲಗು. ಇದೇ ಅವರ ದಿನಾಗಲಿನ ಕ್ರಮ. ಅವರನ್ನು ಕಾಣಬೇಕಾದರೆ ಶಂಕರನಾರಾಯಣ ರಾಯರ ಮನೆಗೆ ಹೋಗಬೇಕು. ಅಲ್ಲಿ ಮನೆಯ ಅಂಗಳದಲ್ಲಿ ಏರಿಸಿದ ಹಂದರದಲ್ಲಿ ಅವರೊಡನೆ ಮಾತನಾಡಬೇಕು, ಅವರ ಓದುಬರೆಹದ ಮುಟ್ಟುಗಳನ್ನು ಅಲ್ಲಿ ನೋಡಬೇಕು. ಪ್ರತ್ಯೇಕ ಶನಿವಾರ ಅಥವಾ ಆದಿತ್ಯವಾರ ನಾನು ಅಲ್ಲಿಗೆ ಹೋಗಿ, ಅಲ್ಲಿ ಒಂದೆರಡು ತಾಸಿನ ಹೊತ್ತು ಹಾಕಿ, ಅವರೊಂದಿಗೂ ನನ್ನಂತೆಯೇ ಅಲ್ಲಿ ಬಂದು ನೆರೆದ ಮಿಕ್ಕವರೊಂದಿಗೂ ಪಟ್ಟಾಂಗ ಹೊಡೆದು ಬರುತ್ತಿದ್ದೆ. ಅವರೊಂದಿಗೆ ಮಾತನಾಡುವುದೆಂದರೆ ಅದೊಂದು ಚಿಕ್ಕ ಸಮಾರಾಧನೆ. ಮಾತಿದೆ, ಕಥೆಯಿದೆ, ಕಟಕಿಯಿದೆ, ಗಾದೆಯಿದೆ, ಗಾನವಿದೆ, ಗೇಲಿಯಿದೆ, ಎಲ್ಲಾ ವಿವಿಧ ಭಕ್ಷ್ಯ ಭೋಜ್ಯಗಳಿವೆ ಅಲ್ಲಿ. ನನ್ನ ಆ ಚಿಕ್ಕಂದಿನಲ್ಲಿ ಅದನ್ನು ಬಿಟ್ಟರೆ ನನಗೆ ಬೇರೆ ಪ್ರಸ್ತವಿದ್ದಿಲ್ಲ, ಹಬ್ಬವಿದ್ದಿಲ್ಲ.

* * * *

೧೮೯೯ರ ಜನವರಿಯಲ್ಲಿ ನಾನು ಗವರ್ನ್‌ಮೆಂಟ್ ಕಾಲೇಜಿನಲ್ಲಿ ಎಫ್. ಏ. ತರಗತಿಗೆ ಸೇರಿದೆ. ಆಗ ಪಂಜೆಯವರು ನನ್ನ ಕನ್ನಡ ಅಧ್ಯಾಪಕರಾದರು. ಜೈಮಿನಿ ಭಾರತದ ಸುಧನ್ವಾಖ್ಯಾನವನ್ನು ನಮಗೆ ಜನವರಿಯಿಂದ ಎಪ್ರೀಲಿನೊಳಗೆ ಕಲಿಸಿ ಮುಗಿಸಿದರು. ಕುಳಿತು ಕಲಿಸುವುದೆಂದರೆ ಅವರಿಗೆ ಸರ್ವಥಾ ಆಗದು. ವಿದ್ಯಾರ್ಥಿಗಳ ಸಮಿತಿಯ ಸಾಪ್ತಾಹಿಕ ಸಭೆಗಳಲ್ಲಿ ಒಮ್ಮೊಮ್ಮೆ ಅಧ್ಯಕ್ಷರಾಗಬೇಕಾದಾಗ, ಗವನಿಯಲ್ಲಿ ಕಟ್ಟಿದ ಗೋವಿನಂತೆ ನಿರ್ವಾಹವಿಲ್ಲದೆ ಕುರ್ಚಿಯನ್ನು ಅಲಂಕರಿಸಬೇಕಲ್ಲದೆ, ಅನ್ಯಥಾ ಮೃಗಶಾಲೆಯ ಸಿಂಹದಂತೆ ಮೇಜಿನ ಕೆಳಗಡೆಯ ಜಾಗದಲ್ಲಿ ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ ಕೊಕ್ಕರೆಯ ಕಾಲಿನಿಂದ ದಾಪು ಹಾಕುತ್ತ ನಡೆದಾಡುತ್ತಿರಬೇಕು, ತಮ್ಮ ಬಳಕೆಯ ಕಿರ್ಲೋಸ್ಕರರ ಮರಾಟೀ ನಾಟಕಗಳ ಆಯಾ ಧಾಟಿಗಳಲ್ಲಿ ಪಠ್ಯಪುಸ್ತಕದ ಪದ್ಯಗಳನ್ನು ಹಾಡುತ್ತಿರಬೇಕು, ಹಾಡು ಹಾಡುತ್ತ ಕಲಿಸುತ್ತಿರಬೇಕು. ಇದೇ ಅವರ ದೈನಂದಿನದ ಚಾಳಿ.

೧೮೯೯ರ ನಡುಬೇಸಗೆಯ ಬಿಡುಗಾಲ ಮುಗಿಯಿತು. ಜೂನ್ ತಿಂಗಳಲ್ಲಿ ಮಳೆ ಬರಹತ್ತಿತು. ಶಾಲೆ ಮರಳಿ ತೆರೆಯಿತು. ಪಂಜೆಯವರು ಆ ತನಕ ಬಿ. ಏ. ಯನ್ನು ಪೂರಾ ಮುಗಿಸಿರಲಿಲ್ಲ. ಇಂಗ್ಲೀಷು–ಕನ್ನಡಗಳಲ್ಲಿ ಮಾತ್ರ ತೇರಿದ್ದರಲ್ಲದೆ ೩ ನೆಯ ಅವರ ಐಚ್ಛಿಕ ವಿಷಯವಾದ ಇತಿಹಾಸದಲ್ಲಿ ಪರೀಕ್ಷೆಯನ್ನು ಕೊಟ್ಟಿರಲಿಲ್ಲ. ಅದನ್ನು ತೀರಿಸದ ವರೆಗೆ ಅವರಿಗೆ ಬಡತಿ ಬಾರದು, ಅವರು ಆ ಮುಂದಣ ಎಲ್. ಟಿಗೂ ಕಲಿಯಲಾಗದು. ಕೊನೆವರೆಗೂ ಪಂಡಿತನಾಗಿಯೇ ಇದ್ದು ಆ ೩೦-೪೦, ಅಥವಾ ಹೆಚ್ಚಾದರೆ ೫೦-೬೦ ರೂಪಾಯಿಗಳ ಸಂಬಳದಲ್ಲಿ ರಾಯನ ಕುದುರೆ ಲಾಯದಲ್ಲೇ ಮುಪ್ಪಾಗಬೇಕಲ್ಲದೆ ವಿದ್ಯಾ ಇಲಾಖೆಯಲ್ಲಿ ಮತ್ತೂ ಮೇಲಕ್ಕೆ ಏರಕೂಡದು. ಆ ಕಾರಣ ಅದೇ ದಶಂಬರದಲ್ಲಿ ಜರಗತಕ್ಕ ಬಿ. ಏ. ಪರೀಕ್ಷೆಗೆ ಓದುವರೆ ಅವರು ೫–೬ ತಿಂಗಳು ಮದ್ರಾಸಿನಲ್ಲಿ ಉಳಕೊಂಡು ಕಲಿಯೋಣ ಎಂದು ರಜಾ ಪಡಕೊಂಡು ಆ ಜೂನಿನಲ್ಲಿ ನಮ್ಮಿಂದ ಅಷ್ಟುಕಾಲಕ್ಕೆ ಅಗಲಿಹೋದರು. ಅವರ ಜಾಗದಲ್ಲಿ ಕನ್ನಡ ಪಂಡಿತರಾಗಿ ನೇಮಕವಾಗಿದ್ದ ಕೈ. ವಾ. ಮುನ್ನೂರು ಶಿವರಾಮಯ್ಯನವರು ಆಮುಂಚೆ ಪಂಜೆಯವರು ಕಲಿಸತೊಡಗಿದ್ದ ವೈ. ವಾ. ಆರ್. ನರಸಿಂಹಾಚಾರ್ಯರ 'ನೀತಿಮಂಜರಿ' (ಭಾಗ ೧) ಎಂಬ ತಮಿಳು ಮೂಲದಿಂದ ಕಂದ ಪದ್ಯಗಳಲ್ಲಿ ಕನ್ನಡಿಸಿದ ಕವಿತೆಯನ್ನು ನಮಗೆ ದಶಂಬರದ ವರೆಗೆ ಕಲಿಸಿದರು. ಆಗ ಆ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಬಿ. ಏ. ಪದವಿಯನ್ನು ಪಡೆದು ಬಂದ ಪಂಜೆಯವರು ೧೯೦೦ರ ಜನವರಿಯಲ್ಲಿ ಮರಳಿ ನಮ್ಮ ಕನ್ನಡ ಪಂಡಿತರಾಗಿ, ಶ್ರೀಕೃಷ್ಣರಾಜ ವಾಣೀ ವಿಲಾಸವೆಂಬ ಕನ್ನಡ ಮಹಾಭಾರತದ ಸಭಾಪರ್ವದಿಂದ ಆಯ್ದು ನಮ್ಮ ಗದ್ಯ ಪಠ್ಯಪುಸ್ತಕವಾಗಿ ಏರ್ಪಟ್ಟ ಆ ಕೆಲವು ಅಧ್ಯಾಯಗಳನ್ನು ನಮಗೆ ಕಲಿಸಿ ಮುಗಿಸಿದರು. ನಮ್ಮ ಮತ್ತೊಂದು ಪಠ್ಯಪುಸ್ತಕವೆಂದರೆ ಮುದ್ದಣನೆಂಬ ಕೈ. ವಾ. ನಂದಳಿಕೆ ಲಕ್ಷ್ಮೀನಾರಣಪ್ಪನವರು ಸಮಯಾನುಸಾರವಾಗಿ ಮಹಾಲಕ್ಷ್ಮಿ ಎಂದು ಬೃಹನ್ನಳಿಸಿಕೊಂಡು ರಚಿಸಿದ 'ಶ್ರೀ ರಾಮಪಟ್ಟಾಭಿಷೇಕ' ಎಂಬ ವಾರ್ಧಿಕ ಷಟ್ಪದಿಯ ಕಾವ್ಯ. ಅದನ್ನು ಎತ್ತಿಕೊಂಡು ಎಂದಿನಂತೆಯೇ ಆಚೀಚೆ ನಡೆದಾಡುತ್ತ ಆಯಾ ರಾಗಗಳಲ್ಲಿ ಹಾಡುತ್ತ ಕಲಿಸ ಹತ್ತಿದರು. ಪಂಜೆಯವರಿಗೂ ನಂದಳಿಕೆಯವರಿಗೂ ಮುಖಾಮುಖಿಯಾಗಿ ಮೊಗವರಿಕೆ ಇತ್ತೊ ಇಲ್ಲವೊ ತಿಳಿಯದಾದರೂ, ಅವರೊಳಗೆ ಓಲೆಗೀಲೆಯ ನಂಟತನವಿದ್ದಿತೆಂದು ತೋರುತ್ತದೆ. (ನಂದಳಿಕೆಯವರು ದಿವಂಗತರಾದುದು ೧೯೦೧ನೆಯ ಫೆಬ್ರವರಿಯಲ್ಲಿ.) ಅವರ ಕಾವ್ಯವನ್ನು ಉತ್ಸಾಹದಿಂದ ಕಲಿಸುವಾಗ ಆಯಾ ಎಡೆಗಳಲ್ಲಿ ಪಂಜೆಯವರು ಅವರನ್ನು ಮೆಚ್ಚು ಮಾತುಗಳಿಂದ ಮರ್ಯಾದೆಯಲ್ಲಿ ಶ್ಲಾಘಿಸುತ್ತಿದ್ದರು. ನಂದ

ಳಿಕೆಯುವರಾದರೆ ಆಗ್ಗೆ ಅವರ ಸರ್ವಶ್ರೇಷ್ಠ ಗ್ರಂಥವಾದ ರಾಮಾಶ್ವಮೇಧವಿನ್ನೂ ಪ್ರಕಟಿಸಲ್ಪಡದೆ, ಅವರು ಚಾಣ ಹಿಡಿದಿಲ್ಲದ ರತ್ನದಂತೆ ಇನ್ನೂ ಹೆಚ್ಚುಮಂದಿಯ ತಿಳುವಳಿಕೆಗೆ ಬಂದಿರಲಿಲ್ಲ. ಅದು ಕಾರಣ ಪಂಜೆಯವರು ಮಾಡುತ್ತಿದ್ದ ಅವರ ಪ್ರಶಂಸೆ ನನ್ನ ಈ ಕಿವಿಯಿಂದ ಹೊಕ್ಕು ಆ ಕಿವಿಯಿಂದ ಬಿದ್ದುಹೋಯಿತಲ್ಲದೆ ನೆನಪಿನಲ್ಲಿ ಹಿಂದುಳಿಯಲಿಲ್ಲ.

ಅಷ್ಟರಲ್ಲಿ ಆ ಸಲದ ಬೇಸಗೆಯ ರಜೆಗೆ ಶಾಲೆ ಮುಚ್ಚಿತು.

* * * *

೧೯೦೦ರ ಬೇಸಗೆಯ ಬಿಡುವಿನಲ್ಲಿ ಪಂಜೆಯವರ ಭಾವ, ಮದ್ರಾಸು ಸರಕಾರದ ಭಾಷಾಂತರ ಇಲಾಖೆಯಲ್ಲಿ ಕನ್ನಡ ಭಾಷಾಂತರಕಾರರಾಗಿದ್ದ ಕೈ. ವಾ. ಬೆನಗಲ್‌ರಾಮರಾಯರು ಮಂಗಳೂರಿಗೆ ಬಂದಿದ್ದರು. ಅವರು ಪ್ರಮುಖ ಆಂಧ್ರ ಸಾಹಿತಿಯಾದ ಶ್ರೀಶ್ರೀ ವೀರೇಶಲಿಂಗಂ ಪಂತುಲುರವರ 'ಸತ್ಯರಾಜಾ ಪೂರ್ವದೇಶ ಯಾತ್ರೆಗಳು' ಮುಂತಾದ ಕೆಲವು ಕಟ್ಟುಕಥೆಗಳನ್ನೂ ಪ್ರಹಸನಗಳನ್ನೂ ತೆಲುಗಿನಿಂದ ಕನ್ನಡಿಸಿ ಅಂದಿನ ಕನ್ನಡ ಸಾಹಿತ್ಯದಲ್ಲಿ ಹೆಸರನ್ನು ಗಳಿಸಿದ್ದರು. ಪಂಜೆಯವರನ್ನು ಚೆನ್ನಾಗಿ ಬಲ್ಲವರಾದರೂ ಅವರೊಬ್ಬ ಮುಂದಣ ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಎಂಬ ಬೆಳಕನ್ನು ಬೀರಲುಳ್ಳ ಅಂದಿನ ನನೆದೀವಿಗೆ ಎಂದು ಅರಿತಿದ್ದರು. ಅವರಿಬ್ಬರೂ ಸೇರಿ ಮಂಗಳೂರಿನ ಪ್ರಮುಖರೊಬ್ಬರಾದ ಶ್ರೀ ಬೋಳಾರ ವಿಟ್ಠಲ ರಾಯರ ಹವಿರ್ಮೂಣಿಯ ಸಹಾಯದಿಂದ ಹಾಗೂ ಅವರ ನಾಮ ಮಾತ್ರದ ಸಂಪಾದಕತ್ವದಲ್ಲಿ ಒಂದು ಮಾಸಪತ್ರಿಕೆಯನ್ನು ಹೊರಡಿಸುವುದೆಂದು ನಿಶ್ಚಯಿಸಿದರು. ಆ ಪತ್ರಿಕೆ 'ಸುವಾಸಿನಿ' ಅದೇ ಜುಲಾಯಿ ೧ನೆಯ ತಾರೀಕಿಗೆ ಮೊದಲ ಬೆಳಕನ್ನು ಕಂಡಿತು. ಅದರ ಸಂಪಾದಕತ್ವದ ವಾಸ್ತವಿಕವಾದ ಭಾರವನ್ನೆಲ್ಲ ಪ್ರಾಯಶಃ ಪಂಜೆಯುವರೇ ಹೊತ್ತಿದ್ದಂತೆ ತೋರುತ್ತದೆ.

ಅದರಲ್ಲಿ ಪಂಜೆಯುವರು 'ಭೀಷ್ಮನಿರ್ಯಾಣ','ಚಂದ್ರ', 'ಲಕ್ಷ್ಮೀಶ', 'ಕಮಲ' ಮೊದಲಾದ ಸೊಗಸಾದ ಕವಿತೆಗಳನ್ನಲ್ಲದೆ, ಮೊತ್ತಮೊದಲಿನ ಸಂಚಿಕೆಯಿಂದಲೇ ಸಣ್ಣಕಥೆಗಳನ್ನೂ ಬರೆಯತೊಡಗಿದರು. ಮೊದಲು ನಗು ಕಥೆಗಳು, ಆಮೇಲೆ ಐತಿಹಾಸಿಕ ಕಥೆಗಳು. ನಗುಕಥೆಗಳಲ್ಲಿ,'ನನ್ನ ಚಿಕ್ಕತಾಯಿ', 'ನನ್ನ ಚಿಕ್ಕತಂದೆ', 'ನನ್ನ ಚಿಕ್ಕಪ್ಪನ ಉಯಿಲು', 'ನನ್ನ ಹೆಂಡತಿ', 'ಭಾರತ ಶ್ರವಣ' ಇ೩. ಐತಿಹಾಸಿಕ ಕಥೆಗಳಲ್ಲಿ, 'ಪೃಥುಲಾ', 'ಶೈಲಿನಿ', 'ದುರ್ಗಾವತಿ' ಇ೩. ಇವುಗಳಲ್ಲಿ 'ಭಾರತ ಶ್ರವಣ'ದ ಕಥಾವಸ್ತುವನ್ನು ನನ್ನ ೪-೫ ವರ್ಷಗಳ ಚಿಕ್ಕಂದಿನಲ್ಲಿ ನಮ್ಮ ಮನೆಯಲ್ಲಿ ಕೇಳಿರುತ್ತೇನೆ. 'ನನ್ನ ಚಿಕ್ಕತಂದೆ'ಯ ಮೂಲಪುರುಷರು ಆ ಕಥೆಯಲ್ಲಿ ಹೇಳಿರುವ ಎಲ್ಲಾ ಲಕ್ಷಣಗಳುಳ್ಳ, ಆಗ್ಗೆ ಸಾಕಷ್ಟು ಮುದುಕರಾಗಿದ್ದ ಮಂಗಳೂರಿನ ಕೃಷ್ಣಯ್ಯ ಎಂಬ ಒಬ್ಬ ವ್ಯಕ್ತಿ. 'ನನ್ನ ಚಿಕ್ಕತಾಯಿ' ಮತ್ತು 'ನನ್ನ ಹೆಂಡತಿ'ಯ ಮೂಲವ್ಯಕ್ತಿಗಳಾರೊ ನಾನರಿಯೆ. ಅವುಗಳಿಗಾದರೂ ಮೂಲವ್ಯಕ್ತಿಗಳು ಇದ್ದೇ ಇರಬೇಕು. ಏಕೆಂದರೆ ಅಂಗುಷ್ಠ ಕಂಡು ರಾವಣನನ್ನು ಬರೆವ ಶಕ್ತಿ ಪಂಜೆಯವರಿಗೆ ಬೇಕಾದಷ್ಟು ಇತ್ತು. 'ನನ್ನ ಚಿಕ್ಕಪ್ಪನ ಉಯಿಲು' ಎಂಬ ಕಥೆಯಲ್ಲಿ 'ಚಿನ್ನ ಮಾರಿದ್ದು' ಎಂಬುದನ್ನು 'ಜನ್ನ ಮದ್ದಿದ್ದು' ಎಂದು ತಪ್ಪಾಗಿ ಓದಿತೆಂದು ಇದೆಯಷ್ಟೆ. ಅದು ಮಂಗಳೂರಿನ ಯಾವೊಂದು ಕೋರ್ಟಿನಲ್ಲಿ ಆವತ್ತಿಗೆ ಕೆಲ ವರ್ಷಗಳ ಹಿಂದೆ ನಡೆದಿದ್ದ ಯಾವೊಂದು ದಾವೆಯಲ್ಲಿ ಅವೇ ಮಾತುಗಳನ್ನು ಅದೇ ತಪ್ಪಾಗಿ ಓದಿದ್ದ ಯಥಾರ್ಥವಾದ ಸಂಗತಿ. ಅಲ್ಲಿಯ 'ಜನ್ನ' ಎಂಬುದಕ್ಕೆ ಸರಿಯಾಗಿ ಆ ದಾವೆಯಲ್ಲಿ ಆ ಕಡೆಗೊ ಈ ಕಡೆಗೊ 'ಜನ್ನ (ಹೆಗ್ಗಡೆ)' ಎಂಬವರಿದ್ದರು. 'ಕಮಲಪುರದ ಹೊಟ್ಲಿನಲ್ಲಿ' ಎಂಬ ಕಥೆಯ ಕಮಲಪುರವೆಂದರೆ ಮಂಗಳೂರು, ಹೊಟೇಲುಕಾರನೆಂದರೆ ಅವರಿಗೆ ತಿಂಡಿತೀರ್ಥಗಳನ್ನು ಒದವಿಸುತಿದ್ದ ವ್ಯಕ್ತಿ ತಾನೆ. ಅವರ ಬೇರೊಂದು ಕಥೆಯಲ್ಲಿಯ ವೀರಪುರವೆಂದರೆ ಬಂಟವಾಳ. ಐತಿಹಾಸಿಕ ಕಥೆಗಳಲ್ಲಿ 'ಪೃಥುಲಾ' ಎಂಬುದಕ್ಕೆ Sewell's Forgotten Empire ಎಂಬ ವಿಜಯನಗರದ ಚಾರಿತ್ರಿಕ ಗ್ರಂಥದಲ್ಲಿ ಆ ಸಂದರ್ಭದಲ್ಲಿ ಹೇಳಿದ ಕೆಲವು ವಾಕ್ಯಗಳೇ ಕೆಸರುಗಲ್ಲಾದವು. ಅದರಲ್ಲಿ ನಾಯಿಕೆಯನ್ನು 'ಪೆರ್ತಾಲ್' ಎಂದಿರುವಂತೆ ನನ್ನನೆನಪು. ಅದು ಸರಿಯಾದರೆ ಪಂಜೆಯವರು ಯಾವ ಆಧಾರದ ಮೇಲೆ ಆ ಹೆಸರನ್ನು 'ಪೃಥುಲಾ' ಎಂದು ಸಂಸ್ಕೃತಿಸಿದರೊ ತಿಳಿಯದು. 'ಶೈಲಿನಿ'ಯ ಕಥೆಯನ್ನು Grant Duff's History of the Marathas 'ದುರ್ಗಾವತಿ'ಯನ್ನು Tod's History of Rajasthan ಎಂಬ ಆಯಾ ಆಂಗ್ಲ ಗ್ರಂಥಗಳಿಂದ ಎತ್ತಿಕೊಂಡೆನೆಂದು ಅವರು ಹೇಳಿದಂತೆ ನನಗೆ ನೆನಪಿದೆ.

ಹೀಗೆ ಕನ್ನಡದಲ್ಲಿ ಮೊತ್ತಮೊದಲಿನ ಸಣ್ಣ ಕಥೆ ಮೂಡಿದುದು ಮಂಗಳೂರಿನ 'ಸುವಾಸಿನಿ'ಯಲ್ಲಿ, ೧೯೦೦ ರಲ್ಲಿ. ಅದನ್ನು ಬರೆದವರು, ಅತಏವ ಕನ್ನಡದಲ್ಲಿ ಸಣ್ಣ ಕಥೆಗಳನ್ನು ಮೊದಲು ಮಾಡಿದವರು, ಪಂಜೆ ಮಂಗೇಶರಾಯರು. ಅವರಿಗೂ ಅವರ ಜತೆಯ ಕಥೆಗಾರರಾದ ಕೈ. ವಾ. ಉಳ್ಳಾಲ ಮಂಗೇಶರಾಯರಿಗೂ ಗೊತ್ತಿದ್ದುವೆಂದರೆ ಆವಂದಿನ Strand Magazine ಇತ್ಯಾದಿ ಆಂಗ್ಲ ಮಾಸಿಕ ಪತ್ರಿಕೆಗಳಲ್ಲಿ ಪ್ರಕಟವಾಗುತಿದ್ದ ಆ ಸಣ್ಣ ಕಥೆಗಳೇ, ಹಾಗೂ ಅವಕ್ಕಿಂತಲೂ ಕೊಂಚ ಉದ್ದವಾದುವೆಂದರೆ ವೈ. ವಾ. ಬಂಕಿಂಚಂದ್ರ ಚಟ್ಟೋಪಾಧ್ಯಾಯರ ಬಂಗಾಳೀ 'ಯುಗಳಾಂಗುರೀಯ' ಮತ್ತು 'ರಾಧಾರಾಣಿ'ಯ ವೈ. ವಾ. ವೆಂಕಟಾಚಾರ್ಯರ ಕನ್ನಡ ಅನುವಾದಗಳೇ ವಿನಾ ಬೇರೆ ಕೆಯ್ಸೆರವು ಇರಲಿಲ್ಲ, ಬೇರೆ ಗೊತ್ತೂ ಇರಲಿಲ್ಲ. ಇದೇನೂ ಸೋಜಿಗವಲ್ಲ. ಏಕೆಂ

ದರೆ ಆಗಣ ಆಂಗ್ಲ ಕಥಾನಕ ಸಾಹಿತ್ಯವೂ ಇಂದಿನಂತೆ ಹೇರಳವಾಗಿರಲಿಲ್ಲ, ಇದ್ದ ವಿರಳವೂ ಆ ಸಾಹಿತ್ಯದ್ದೇ ತೀರ ಅಭ್ಯಾಸಿಗಳಿಗಲ್ಲದೆ ಮಿಕ್ಕವರ ದೃಷ್ಟಿಗೆ ಗೋಚರಿಸುತ್ತಿರಲಿಲ್ಲ, ಅತವಿವ ಎಲ್ಲಾ ಕೆಯ್ಗಳಿಗೂ ಎಟಕುತ್ತಿರಲಿಲ್ಲ. ಹೆಚ್ಚಿನ ಓದುಗರಿಗೆ ಇದ್ದುವೆಂದರೆ, ಮಂಗಳೂರಿನ ಒಂದೆರಡು ಉಚ್ಚ ಶಾಲೆಗಳಲ್ಲಿ ತರಿಸುತಿದ್ದ ಕೆಲವು ಆಂಗ್ಲ ಮಾಸ ಪತ್ರಿಕೆಗಳಲ್ಲಿಯ ಆ ಸಣ್ಣ ಕಥೆಗಳೇ. ಪಂಜೆಯವರು ತಾವು ಓದಿದ ಕಥೆಗಳನ್ನು ಇದ್ದಕಿದ್ದಂತೆ ಕನ್ನಡಿಸದೆ ಆ ಕಥಾಕಲೆಯನ್ನೇ ಕನ್ನಡಿಸಿದ ಕಾರಣ, ಕನ್ನಡ ಸಾಹಿತ್ಯದಲ್ಲಿ ಬರುವಂದೇ ಸಣ್ಣ ಕಥೆ ಕನ್ನಡಿನಾಗಿಯೇ ಬಂದಿತು, ಕನ್ನಡಿಗನಾಗಿಯೇ ನಿಂದಿತು. ಆದರೆ ಅವರು ಬಾರಿಸಿದ ಆ ಅಪೂರ್ವ ಉದಯರಾಗದ ಪಲ್ಲವಿಯೇ ಮುಗಿಯದಷ್ಟರಲ್ಲಿ, ಅದಕ್ಕೆ ಸುತ್ತುಮುತ್ತಣ ಸಾಕಷ್ಟು ಮಂದಿಯ ಕಿವಿಗಳು ನಿಗುರುವಷ್ಟರಲ್ಲಿ ಅವರ ಕಿನ್ನರಿಯ ತಂತಿ ಕಡಿಯಿತು, ಅವರು ಹಾಡುತಿದ್ದ ಹಾಡು ತಡೆಯಿತು. ೧೯೦೩ರಲ್ಲೇನೋ 'ಸುವಾಸಿನಿ' ನಿಂತಿತು, ಅದರೊಂದಿಗೆ ಪಂಜೆಯವರ ಲೇಖನಿಯೂ ನಿಂತಿತು. ಆ ಬಳಿಕ ನಾನು ಬಲ್ಲಷ್ಟರ ಮಟ್ಟಿಗೆ ಹೆಚ್ಚುಕಡಿಮೆ ೩೦ ವರ್ಷಗಳಿಗೇನೋ ಅವರು ಬೇರೆ ಕಥೆಗಳನ್ನು ಬರೆಯಲೂ ಇಲ್ಲ, ಬರೆದಿದ್ದರೆ ಪ್ರಕಟಿಸಲೂ ಇಲ್ಲ. ತಾವು ತೊಡಗಿದ ಜೇನ ಹುಟ್ಟನ್ನು ಕಟ್ಟಿದಷ್ಟಕ್ಕೆ ಬಿಟ್ಟುಬಿಟ್ಟರು. ಮುಂದೆ ಆ ಜೇನಗೂಡು ಕನ್ನಡ ನಾಡಿಗೆ ಒಂದಾಯಿತು.

ಹೀಗೆ ಪಂಜೆಯವರೇ ಕನ್ನಡ ಸಣ್ಣ ಕಥೆಗಳ ಮೂಲ ಪುರುಷರು. ಇದಕ್ಕೆ ಎದುರು ಮಾತಿಲ್ಲ. ಆದರೆ ಪ್ರಾಯಶಃ ಪಂಜೆಯವರೇ ಅದನ್ನು ಅರಿತಿರಲಿಲ್ಲ. ಅಥವಾ ಅರಿತಿದ್ದರೆ ಅವರಿಗೆ ತುಸವೂ ಅದರ ಗೊಡವೆಯೂ ಇರಲಿಲ್ಲ. ಅದರಿಂದೇನು ಬಹುಮಾನ? ಏನು ಅಮರಾವತಿ? ಎಂದಿತ್ತು ಅವರ ನಿರೀಹತೆ. ಹಾಗೆ ಹೆತ್ತವಳೇ ಹೆಣ್ಣು ಎನ್ನುವಾಗ ಈಚೇಲಿದ್ದವಳು ಗಂಡು ಎಂದಂತೆ ಈ ಇತ್ಯರ್ಥ ಮೊದಲ ನೋಟಕ್ಕೆ ಅಗ್ರಾಹ್ಯವೆನಿಸಬಹುದಾದರೂ, ಕಾಲಕ್ರಮದಿಂದ ಸಿದ್ಧವಾದ ಆ ತ್ರಿಸತ್ಯವನ್ನು ಸರ್ವಥಾ ಅಲ್ಲಗಳೆಯಲಾಗುವುದಿಲ್ಲ. ಬಡಿಸಿದ್ದು ಬೀಸಳಿಗೆಯಾದರೂ ಅಟ್ಟದ್ದು ಗುಂಡಳಿಗೆ ತಾನೆ ಎಂಬ ಯಾಥಾತಥ್ಯವನ್ನು ತಿಳಕೊಳ್ಳಬೇಕೆಂಬವರ ಸಲುವಾಗಿ ಕೊಟ್ಟಕೊನೆಗೊಮ್ಮೆ ಅದನ್ನಿಲ್ಲಿ ಹೇಳಿಬಿಡುತ್ತೇನೆ. ಇತ್ಯಲಮ್.

* * * *

೧೮೯೯-೧೯೦೦ರಲ್ಲಿ ಪಂಜೆಯವರು ನನ್ನ ಕನ್ನಡ ಉಪಾಧ್ಯಾಯರಾಗಿದ್ದರೆಂದೆನಷ್ಟೇ. ಅದಕ್ಕೆ ಕೊಂಚ ಹಿಂದಿನಿಂದಲೆ ಪ್ರಾಸಬಿಟ್ಟು ಕನ್ನಡದಲ್ಲಿ ಕವನಿಸಬೇಕು, ಹೊಸ ಛಂದಸ್ಸುಗಳನ್ನು, ಮಾದರಿಗಾಗಿ ಮುಂಚೆ Sonnet ಎಂಬ ಚತುರ್ದಶ ಪದಿಯನ್ನು, ಕನ್ನಡದಲ್ಲಿ ಮೊದಲುಮಾಡಬೇಕು ಎಂದು ನನಗೆ ಪದೇ ಪದೇ ಸ್ಫುರಿಸುತಿತ್ತು. ಆದರೆ ಆ ಬಗ್ಗೆ ಬಲ್ಲವರು ಬೆನ್ನು ಚಪ್ಪಳಿಸಿದಲ್ಲದೆ ಹಾಗೆ ತೊಡಗಲಿಕ್ಕೆ ಮನಸ್ಸು ಹಿಂಜರಿಯುತಿತ್ತು. ಆ ಕಾರಣ ಆಯೊ ಕೆಲವು ಕವನಗಾರರನ್ನು ಕೇಳಿದರೆ, ಬಂಜೆಯನ್ನ ಮಗನ ಜಾತಕಾ ಕೇಳಿದಂತಾಗಿ, ಕೊನೆಗೆ ಪಂಜೆಯವರನ್ನು ಕೇಳಿದೆ, ಪ್ರಾಸವನ್ನು ಬಿಟ್ಟರೆ ಹೇಗೆ? Sonnet ಎಂಬ ಚತುರ್ದಶಪದಿಯನ್ನು ಕನ್ನಡದಲ್ಲಿ ತಂದರೆ ಹೇಗೆ? ಎಂದು. ಅವರು ಹುಸಿನಗೆಯಲ್ಲಿ ಏನೇನೋ ಕೊಕ್ಕೆ ಮಾತನಾಡಿ, ನನ್ನ ಪ್ರಶ್ನೆಯನ್ನು ತೇಲಿಸಿಬಿಟ್ಟರು. ಅದರ ಮರ್ಮವಾದರೆ, ಪ್ರಾಸಬಿಡದೆ ರಚಿಸಲಾರದವನಿಗೆ ಪದ್ಯದ ಬಲೆಗಾರಿಕೆ ಏಕೆ? ಗದ್ಯದ ಗಾಳ ಸಾಕಾಗದೆ? ಕನ್ನಡದಲ್ಲಿ ಸಂಸ್ಕೃತದ ಬೇರೆ, ಕನ್ನಡದ ಬೇರೆ ಎಷ್ಟೋ ಛಂದಸ್ಸುಗಳಿದ್ದು ಅವಷ್ಟು ಸಾಲದಾದುವೆ? ಆ ಮಾತು ನನಗೆ ಸೇರಲಿಲ್ಲ. ನಟಿಕೆ ಮುರಕೊಂಡೆ, ಬೂರುಗದ ಮರ ಕಾದ ಗಿಣಿಯಂತಾಗಿ, ಇನ್ನು ನನ್ನ ಬೇಳೆ ಅವರಲ್ಲಿ ಬೇಯದೆಂದು ಆ ಮಾತನ್ನು ಅಲ್ಲಿಯೇ ಬಿಟ್ಟು, ಕೆಯ್ತೋರಿಸಿ ಅವಲಕ್ಷಣ ಎನಿಸಿಕೊಳ್ಳುವುದಕ್ಕಿಂತ ತೋರಿಸದಿರುವುದೇ ಲೇಸೆಂದು ನಾನು ಹಿಡಿದ ದಾರಿಯಲ್ಲೇ ಮುಂದರಿದೆ.

* * * *

೧೮೯೬ರಿಂದ ತೊಡಗಿ ೧೯೧೪ರ ವರೆಗೆ ಮಂಗಳೂರಲ್ಲಿ ಪ್ರಕಟವಾಗುತಿದ್ದ 'ಸತ್ಯ ದೀಪಿಕೆ' ಎಂಬ ಕ್ರೈಸ್ತಧರ್ಮದ ವಾರಪತ್ರಿಕೆಯ ಹಲವಾರು ಸಂಚಿಕೆಗಳಲ್ಲಿ ಪಂಜೆಯವರು ಹೆಚ್ಚುಕಡಿಮೆ ೧೯೦೩ರಿಂದ ೧೯೧೧ರ ವರೆಗೇನೋ ವಿವಿಧ ಬಗೆಯ ಲೇಖಗಳನ್ನು ಬರೆಯುತಿದ್ದರು. ಅವುಗಳಲ್ಲಿ 'ಹರಟೆಯ ಮಲ್ಲ' ಎಂಬ ಗುಟ್ಟು ಹೆಸರಿನಿಂದ, 'ಸಂ. ಭ್ರಾಂ. ತಂ. ಎಂಬ ಸಹಿಯಿಂದ, ಅವರು ಬರೆದ ಪತ್ರಗಳಿಗಾದರೊ ಮನವೊಲಿಯದ ಓದುಗರಿಲ್ಲ. ಆ ಪತ್ರಗಳಲ್ಲಿ ಊದೂದಿ ಹೆಜ್ಜೆ ಇಡುವಷ್ಟು ಜಾಗ್ರತೆಯಾಗಿ, ಕಾಯಿದೆಯ ಚೌಮೂಲೆಗೆ ಒಂದಡಿಯೂ ಹೊರಗಾಗದಷ್ಟು ಜೋಕೆಯಿಂದ, ತಮ್ಮ ಕರ್ತವ್ಯದಲ್ಲಿ ಪರಾಙ್ಮುಖರಾದ ಸಂಸ್ಥೆಗಳ ಸಭಾಸದರಿಗೂ, ಹಲವರಿಂದ ಹಣಗಳನ್ನು ಪಡಕೊಂಡು ಅವನ್ನು ನೇರಾಗಿ ವಿನಿಯೋಗಿಸದ ಸಮಿತಿಗಳ ಸದಸ್ಯರಿಗೂ, ಪಯಣಿಗರ ಉಪಕಾರಕ್ಕೆಂದು ಕುದುರೆಯ ಬಂಡಿಗಳನ್ನು ಅತ್ತಿತ್ತ ಓಡಾಡಿಸುವಲ್ಲಿ ಅವರಿಗೆ ವೀಸ ತೂಕದ ಸೌಕರ್ಯವನ್ನು ಕಲ್ಪಿಸಿಕೊಡದ ಅವುಗಳ ಮಾಲೀಕರಿಗೂ ಮೊದಲಾದ ಜಿಗಳೆಗಳ ಜಾತಿಗೆ ಪಂಜೆಯವರು ಚೇಳು ಚುಚ್ಚಿಸದ ಪತ್ರವಿಲ್ಲ. ಒಮ್ಮೆ ಹೀಗೊಂದು ನಗೆಗೀಡಾಯಿತು—

ಆಗ್ಗೆ ಶಾಲೆಗಳ ಸಬ್ ಅಸಿಸ್ಟಾಂಟ್ ಇನ್‌ಸ್ಪೆಕ್ಟರರಾಗಿದ್ದ (Sub-assistant Inspector) ಪಂಜೆಯವರಿಗೆ ಮಂಗಳೂರಿಂದ ೧೪ ಮೈಲು ದೂರದ ಮೂಲ್ಕಿಗೇನೋ

ಹೋಗಬೇಕಾಗಿ ಆ ಬಗ್ಗೆ ಅವರು ಮ್ಯೂಲ್ಕಿಗೆ ಹೋಗುವ ಕುದುರೆಗಳ ಬಂಡಿಯಲ್ಲಿ ಹತ್ತಿದರಂತೆ. ಅದರಲ್ಲಿ ಒಟ್ಟಾರೆ ಎಷ್ಟು ಮಂದಿ ಇದ್ದರೆಂದು ಲೆಕ್ಕವಿಲ್ಲ, ಪ್ರತ್ಯೇಕ ವ್ಯಕ್ತಿಯ ಎರಡು ಕಾಲುಗಳ ನಡುವೆ ಮಂಡಿಗೆ ಮಂಡಿಯೊತ್ತಿ ಮತ್ತೊಬ್ಬನ ಕಾಲಿದ್ದು, ಬಂಡಿ ತುಂಬ ಕಾಲುಗಳ ಸಾಲೇ ಸಾಲಂತೆ. ನಡುವೆ ಸಾಸಿವೆ ಹಾಕುವಷ್ಟು ಎಡೆಯಿಲ್ಲ. ಬಂಡಿ ನಿಂತಿತು. ಮಂದಿ ಒಬ್ಬೊಬ್ಬರೇ ಕೆಳಗೆ ಇಳಿದರು. ಕಾಲನ್ನು ನೆಲದಲ್ಲಿ ಊರೋಣ ಎಂದರೆ ಯಾರೊಬ್ಬನಿಗೂ ಕೆಳಗಾಲಿಲ್ಲ, ಅಂದರೆ ಯಾರ ಅಂಗಾಲಿಗೂ ನೆಲವನ್ನು ಮುಟ್ಟಿದ ಸ್ಪರ್ಶಜ್ಞಾನವಿಲ್ಲ. ಕೊನೆಗೆ ಎಲ್ಲರಿಗೂ ತಂತಮ್ಮ ಕೆಳಗಾಲುಗಳು ಮೊಣಕಾಲಿನಿಂದ ಕೆಳಗೆ ಚಿಗುರಿದಂತೆ ಬೋಧೆಯಾಗಿ ಅವರು ಮುಂದೆ ನಡೆದರಂತೆ. ಹೀಗೆಂದು ಪಂಜೆಯವರು 'ಹರಟೆ ಮಲ್ಲನ' ಒಂದು ಪತ್ರದಲ್ಲಿ ಬರೆದುದನ್ನು ಕಂಡು ಆ ಬಂಡಿಗಳ ಮಾಲೀಕರು ಕೆರಳಿ ಸಿಟ್ಟಿಗೆದ್ದು, ನ್ಯಾಯಸ್ಥಾನಕ್ಕೆ ಅವರನ್ನುಎಳೆಯಲಾರೆನೆಂದು ತಿಳಿಯುತ್ತಲೆ,ಅವರಿಗೆ ಪುಂಡರಿಂದ ಹಣ್ಣುಮಾಡಿಸಿ ಬುದ್ಧಿ ಕಲಿಸುವೆನೆಂದು ಮೀಸೆ ತಿರುಹಿ, ರಣವಾತನ್ನು ಹೇಳಿ ಕಳುಹಿಸಿದರಂತೆ. ಆದರೆ ಕಾರಣವೇನೋ ತಿಳಿಯದಾದರೂ, ಅವರ ವೀರಾವೇಶ ಉತ್ತರನ ಪಂತದಂತೆ ಒಲೆಯ ಮುಂದೆಯೇ ಇಂಗಿಹೋಯಿತು.

ಪಂಜೆಯವರು 'ಹರಟೆ ಮಲ್ಲ'ನ ಪತ್ರಗಳನ್ನೇ ಅಲ್ಲ, ಕೆಲವು ಆಂಗ್ಲ ಗೀತಗಳನ್ನೂ ಬಹಳ ಸೊಗಸಾಗಿ, ಬಹಳ ಸುಲಭವಾಗಿ ಕನ್ನಡಿಸಿ, 'ರಾ. ಮ. ಪಂ.' ಎಂಬ ಅಂಕಿತದಿಂದ 'ಸತ್ಯದೀಪಿಕೆ'ಯಲ್ಲಿ ಪ್ರಕಟಿಸಿದ್ದಾರೆ; ಉದಾ:— 'Better Land', 'Twinkle twinkle little star', (= 'ಮಿನುಗೆಲೆ, ಮಿನುಗೆಲೆ ನಕ್ಷತ್ರ'), 'Oh, call my brother back to me!' (= 'ಮರಳಿ ನೀ ತಮ್ಮನ ಕರೆಯವ್ವಾ!') ಇ.ಇ. ಪ್ರಾಯಶಃ ಇವೆಲ್ಲವನ್ನು ಎಂಬಂತೆ ಅವರು ಸಂಗ್ರಹಿಸಿ,ಬಾಸೆಲ್ ಮಿಶ್ಶನ್ ಪುಸ್ತಕಾಲಯದವರು (Basel Mission Book Depot) ಪ್ರಕಟಿಸಿದ 'ಕನ್ನಡ ಪದ್ಯಪುಸ್ತಕ'ಗಳಲ್ಲಿ ಅಡಕಿರಬಹುದು.

'ಹರಟೆಮಲ್ಲ'ನ ಪತ್ರಗಳಲ್ಲಿ ಸಮಸಾಮಯಿಕ ವಿಷಯಗಳನ್ನು ಕುರಿತ ಕಾರಣ ಅವು ಓದುಗರನ್ನು ಹೊರಗೂ ಒಳಗೂ ನಗಿಸುವವಾದರೂ, ತದಾಕಾಲಕ್ಕೆ ಬಾಳಿದ ಬೆಲೆಯನ್ನು ಅವು ಕದಾಕಾಲಕ್ಕೆ ಬಾಳವು, ಅತಏವ ಅವು ಸಾಹಿತ್ಯವೂ ಆಗಲಾರವು. ಆದರೆ 'ಸತ್ಯದೀಪಿಕೆ'ಯಲ್ಲೇ ಬರೆದ ಅವರ 'ಹಲ್ಲಿ' ಮತ್ತು 'ಬಂದಣಿಗೆ' ಎಂಬ ಎರಡಾದರೂ ಪ್ರಬಂಧಗಳು (ಅವಲ್ಲದೆ ಮತ್ತೂ ಇದ್ದುವೊ ನನ್ನ ನೆನಪಿಗೆ ಬಾರದು) ಬಹಳ ಉತ್ಕೃಷ್ಟವಾಗಿವೆ, ಯಾವ ಕಾಲಕ್ಕೂ ಸಲತಕ್ಕಂತಿವೆ. ಅವನ್ನು ಬರೆಯತಕ್ಕ ಸ್ಫೂರ್ತಿ ಅವರಿಗೆ ಪ್ರಾಯಶಃ ಬಂಗಾಳಿಯಿಂದ ಬಿ. ವೆಂಕಟಾಚಾರ್ಯರು ಕನ್ನಡಿಸಿದ 'ಕಾಗೆ' ಮುಂತಾದ ಪ್ರಬಂಧಗಳಿಂದ ಬಂದಿರಬೇಕು. ೧೯೦೦ರ ಹಿಂದೆ ಆಂಗ್ಲ ಪ್ರಬಂಧದ ಧೋರಣೆಯ ಪ್ರಬಂಧಗಳು ಕನ್ನಡದಲ್ಲಿ ಇದ್ದಿಲ್ಲವಷ್ಟೇ. ಅಲ್ಲಿಂದ೧೯೧೧ರೊಳಗೆ ಕನ್ನಡದಲ್ಲಿ ಬೆಳಕಿಗೆ ಬಂದ ಹಾಗೂ ಉತ್ತಮವೂ ಆದ ಅಂಥಾ ೫-೬ ಪ್ರಬಂಧಗಳಲ್ಲಿ ಇವೆರಡು ಬಹಳ ಮೇಲ್ತರದವು. ಅಲ್ಲಿಂದ ಮೇಲಣ ಈ ೪೦ ವರ್ಷಗಳಲ್ಲಿ ಅಂಥವೇ ವಿಷಯಗಳ ಮೇಲೆ ಅವಕ್ಕೆ ಸರಿಬರಿಯಾದ ಪ್ರಬಂಧಗಳು ಹುಟ್ಟಿವೆಯಾದರೆ, ಅದೇನೂ ಸೋಜಿಗವಲ್ಲ. ಪಾಶ್ಚಾತ್ಯ ಬಹುಭಾಷೆಗಳಲ್ಲಿಯ ಪ್ರಬಂಧಗಳ ಬಾಹುಳ್ಯವೂ, ಕನ್ನಡದಲ್ಲಿ ಲೇಖಕರ ಪ್ರಾಚುರ್ಯವೂ ಅದರ ಕಾರಣವಷ್ಟೇ. ಇಂದಿಗೆ ೪೦ವರ್ಷಗಳ ಹಿಂದೆಯೂ ದರೆ ಅವುಗಳಂಥಾ ಪ್ರಬಂಧಗಳು ನಮ್ಮ ಜಿಲ್ಲೆಯಲ್ಲೇ ಅಲ್ಲ, ಕನ್ನಡ ನಾಡಿನಲ್ಲಿ ಬೇರೆ ಹುಟ್ಟಿರಲಿಲ್ಲ. ಪಂಜೆಯವರ ಪ್ರಬಂಧಗಳಲ್ಲಿ 'ಹಲ್ಲಿ'ಯನ್ನು ಮಾತ್ರ ಈ ಗ್ರಂಥದಲ್ಲಿ ದೊರಕಿಸಿಕೊಂಡದೆ. ಮಿಕ್ಕವು ಮುಂದೆ ದಕ್ಕಲಿವೆಯೊ ಇಲ್ಲವೊ, ಅವನ್ನು ತನ್ನ ವಜ್ರಮುಷ್ಟಿಯಲ್ಲಿ ಸೆರೆಗಟ್ಟಿರುವ ಆ ಕಾಲವೇ ಬಲ್ಲ!

*    *    *    *

೧೯೦೭ರಲ್ಲಿ ನಮ್ಮ ಜಿಲ್ಲೆಯ ಆಯಾ ಕಡೆಯ ವಿದ್ಯಾರ್ಥಿಗಳು ಕೂಡಿ ಮದ್ರಾಸಿನಲ್ಲಿ ಒಂದೊಂದು ಬಿಡಾರವನ್ನು ಹೂಡಿ ಆಯಾ ಕಾಲೇಜುಗಳಲ್ಲಿ ಓದುತಿದ್ದಾಗ, ನಾನಿದ್ದ ಬಿಡಾರದಲ್ಲಿ ದಿನಾಲೂ ರಾತ್ರಿಯ ಊಟವಾದ ಮೇಲೆ ನಮ್ಮ ನಮ್ಮ ಕೋಣೆಗಳನ್ನು ಸೇರುವ ಮುಂಚಿನ ನಮ್ಮ ಅರೆತಾಸಿನ ಮಾತುಕಥೆಯಲ್ಲಿ ಒಮ್ಮೊಮ್ಮೆ ಪಂಜೆಯವರ ಕೃತಿಗಳನ್ನು ಕುರಿತೂ ಪ್ರಸ್ತಾವ ಬರುತಿತ್ತು. ಆ ಕೂಟದಲ್ಲಿ ಪಂಜೆಯವರನ್ನೂ ಅವರ ಕೃತಿಗಳನ್ನೂ ನನ್ನಷ್ಟು ನಿಕಟವಾಗಿ ಪರಿಚಿಸಿದಾತನು ಬೇರೊಬ್ಬನಿರಲಿಲ್ಲ. ನನಗೆ ಚೆನ್ನಾಗಿ ನೆನವಿದೆ—ಒಮ್ಮೆ ಪಂಜೆಯವರ 'ಪೃಥುಲಾ' ಎಂಬ ಕಥೆಯನ್ನು ನಾನು ಅವರ ಮುಂದೆ ಹೇಳಿ, ಅದರಲ್ಲಿ ಆಕೆ ಕುಣಿಕುಣಿಯುತ್ತ ತಿಮ್ಮ ನಾಯಕನನ್ನು ಇರಿದು ತನ್ನನ್ನು ಇರಕೊಳ್ಳುವ ಪ್ರಸಂಗದಲ್ಲಿ ಹಾಡುವ

ಒಂದೊಂದು ಪೂವೊಳು ನಿಂದು ಪಾರುವ ತುಂಬಿ
ಯಂದದ ಪ್ರಣಯವು ಪ್ರಣಯವೆನಿಸದ್ಯೆ ।
ಸುಂದರಿಯೊರ್ವಳ ಚಂದದಿಂದಲಿ ನಂಬಿ
ಒಂದಾಗಿ ಬಾಳ್ವುದೆ ನಿಜದನುರಾಗಂ ॥

ಎಂಬ ಚರಣವನ್ನೂ, ಕೊನೆಯ

ರಾಜನ ಬಳಿಯಣ ದುರ್ಜನರನು ಕೊಲ್ಲಲ್
ಮೂಜಗದೊಳು ಕೀರ್ತಿ ಪಸರಿಪುದಯ್ಯಾ ॥

ಎಂಬ ಚರಣಾರ್ಧವನ್ನೂ ಹಾಡುತ್ತಲೆ, ನನ್ನ ಗೆಳೆಯರೆಲ್ಲರ ಕಣ್ಣುಗಳು ತಟ್ಟನೆ ಅರಳಿದುವು, ಮೋರೆಗಳು ಕೆಂಪೇರಿದುವು.

ಆಗ್ಗೆ ಅಲ್ಲೇ ಬಳಿಯಣ ಸೈದಾಪೇಟೆಯಲ್ಲಿ ಪಂಜೆಯವರು ಎಲ್. ಟಿ. ಕಾಲೇಜಿನಲ್ಲಿ ಓದುತಿದ್ದರು. ಅವರಿಗೆ ನಮ್ಮ ಬಿಡಾರಕ್ಕೆ ಹಲವು ಸಲ ಔತಣವಿತ್ತೆವು. ಪ್ರತಿ ಸಾರಿಯೂ ಒತ್ತಾಯದ ಬೇರೆ ಕೆಲಸವಿಲ್ಲದಿದ್ದರೆ ಅವರು ಬಂದೇ ಬರುವರು. ಕೊಂಚ ಕೇಳಿಕೊಂಡರಷ್ಟೇ ಸಾಕು, ತಮ್ಮ ಕವನಗಳನ್ನು ಹಾಡುವುದೇನು! ಕಥೆಗಳನ್ನು ಹೇಳುವುದೇನು! ಆಯಾ ಪ್ರಸಂಗಕ್ಕೆ ತಕ್ಕಂತೆ ಉಪಕಥೆಗಳನ್ನು ಕೇಳಿಸುವುದೇನು! ಅದೊಂದು ಅಮಗ ತಾನೆ.

ಆ ಸಂದರ್ಭಗಳಲ್ಲಿ ಅವಸರ ದೊರಕಿದಾಗ ನಾನು ಪ್ರಾಸಬಿಟ್ಟು ಆಗಾಗ ಬರೆದಿದ್ದ ಒಂದೆರಡು ಹಾಡುಗಳನ್ನೂ ಇತರ ಕವನಗಳನ್ನೂ ತೋರಿಸಿದೆ. ಹೊರನೋಟಕ್ಕೆ ತಲೆ ದೂಗಿದರು, ಆದರೆ ಮನಸ್ಸಿನಲ್ಲಿ ಮೂಗು ಮುರುಟಿರಬೇಕು.

*  *  *  *

೧೯೦೮ರಲ್ಲಿ ಪಂಜೆಯವರು ದಕ್ಷಿಣ ಕನ್ನಡ ಜಿಲ್ಲೆಯ ನಮ್ಮ ಕಾಸರಗೋಡು ತಾಲೂಕಿನ ಸಬ್ ಅಸಿಸ್ಟಾಂಟ್ ಇನ್ಸ್ಪೆಕ್ಟರರಾಗಿದ್ದರು. ಆಗ್ಗೆ ಅವರು ವಿಲಾಯಿತಿಯ ಮೆಕ್ಮಿಲ್ಲನ್ ಕಂಪೆನಿಯ (Macmillan and Co) ಪರವಾಗಿ ಮಂಗಳೂರಿನ ಬಾಸೆಲ್ ಮಿಶ್ಶನ್ ಪುಸ್ತಕಾಲಯಕ್ಕೋಸ್ಕರ ಮಧ್ಯಮ ತರಗತಿಗಳ ಕನ್ನಡ ಪಾಠಕಗಳನ್ನೂ ದಕ್ಷಿಣ ಕನ್ನಡದ ಭೂವಿವರಣೆಯನ್ನೂ ಇತ್ಯಾದಿ ಕೆಲವು ಪುಸ್ತಕಗಳನ್ನು ಬರೆಯಲಿಕ್ಕೆ ಒಪ್ಪಿಕೊಂಡು, ಆ ಬಗ್ಗೆ ಬಿಡುವು ಬೇಕಾಗಿ ೧–೨ ತಿಂಗಳಿಗೇನೋ ರಜಾ ಪಡಕೊಂಡು ಅವರ ಸಹಲೇಖಕರಾದ ಉಳ್ಳಾಲ ಮಂಗೇಶರಾಯರೊಂದಿಗೆ ಮಂಜೇಶ್ವರದಲ್ಲಿ ಬಂದು ಉಳಕೊಂಡಿದ್ದರು. ಆಗ ತಾನೆ ಅವರ ಕವನಗಳಲ್ಲಿ ಸರ್ವೋತ್ತಮವಾದ

ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ?
ಸಾಕು, ಸುತ್ತಲು ನೋಡು ಕಣ್ದೆರೆದು ನಿಂದು! ।
ಲೋಕದಲಿ ವಂದೇ ಮಾತರಮೆಂಬುದೊಂದೆ ಮಾ
ತೀ ಕಿವಿಯನೊಡೆಯುತಿರೆ ಉಚ್ಚಳಿಸಿ ಬಂದು ॥ ೧ ॥

ಎಂದು ಮೊದಲಾಗುವ ಆ ಹಾಡನ್ನು ಅವರು ಪ್ರಾಯಶಃ ಇಲ್ಲಿ ಮಂಜೇಶ್ವರದಲ್ಲೇ ರಚಿಸಿದರು. ಹಾಗೂ ಕುಂಬಾರ ಹುಳು ತಾನಿಟ್ಟ ತತ್ತಿಗೆ ಮಣ್ಣು ಮೆತ್ತುವಂತೆ ಅದನ್ನು ಬಹಳ ಗೋಪ್ಯದಲ್ಲಿ ಇಟ್ಟರು. ಹೇಗೋ ಆ ಸುದ್ದಿ ನಮ್ಮ ಕಿವಿಗೆ ಮುಟ್ಟಿತು. ಆಗ್ಗೆ ೨–೩ ದಿನಕ್ಕೊಮ್ಮೆ ನಮ್ಮಲ್ಲಿಗೆ ಬರುತ್ತಿರುವಂತೆ, ಅದನ್ನು ರಚಿಸಿದವರೂ ನಮ್ಮಲ್ಲಿಗೆ ಬಂದರು. ಎಂದಿನಂತೆ ಪಡಸಾಲೆಯಲ್ಲಿ ಕೂತರು. ಆ ಹಾಡಿನ ಮಾತೆತ್ತಿದರೆ ಮುಗುಳುನಗುವರಲ್ಲದೆ ಬಾಯಿ ಬಿಚ್ಚರು. ಹೇಗೂ ಹಟಾ ಹಿಡಿದು ಅದನ್ನು ಹೇಳಿಸಬೇಕಾದರೆ ನಮ್ಮ ಜೀವದ ಸುತ್ತ ಬಂತು. ಕೊನೆಗೆ ಕಿಟಿಕಿಯ ಪಡಿಗಳನ್ನು ಮುಚ್ಚಿಸಿ, ಆ ಕಡೆ ಈ ಕಡೆ ಹಣಕಾಡುತ್ತ, ಕುಗ್ಗು ಕೊರಳಿನಲ್ಲಿ ಅದನ್ನು ನಾಗಾಲೋಟದಿಂದ ಹಾಡಿದರು. ಕೇಳಿದವರಿಗೆ ನಂಜಲಿಕ್ಕೆ ಸಿಕ್ಕಿತಲ್ಲದೆ ಮೆಲ್ಲಲಿಕ್ಕೆ ಸಾಲದು. ಅಷ್ಟಾದರೂ ನಾವೆಲ್ಲರೂ ಮೆಚ್ಚಿ ಸಹಸಾ ಮನಸೋತೆವು. ಅದರ ಬಗ್ಗೆ ಮನಸ್ಸು ಲೋಲುಭವಾಗಿ 'ಅದನ್ನು ನಿದಾನವಾಗಿ ಮತ್ತೊಮ್ಮೆ ಹೇಳಿ, ಬರೆದು ಕೊಂಬೆ' ಎಂದೆ. ಎಷ್ಟು ಬೇಡಿದರೂ ಒಪ್ಪಲಿಲ್ಲ. ಕಾರಣ ಇಷ್ಟೇ, ಒಪ್ಪಿದರೆ ತನ್ನ ಕೆಲಸಕ್ಕೆ ಸಂಚಕಾರ, ಜೀವಕ್ಕೆ ಮೋಸ ಎಂದೇ. ಸರಕಾರವೆಂದರೆ ಅವರಿಗೆ ಕನ್ನಡಿಯಲ್ಲಿರುವ ಯಮ, ಕರುಳು ನಡುಗುವಷ್ಟು ಭೀತಿ. ಆ ಮಟ್ಟಿಗೆ ಅವರು ಯಾರನ್ನೂ ನಂಬರು.

ಮೂರನೆಯ ಸಾರಿ ನಾವೊಂದು ಹಂಚಿಕೆ ತೆಗೆದೆವು. ಎಂದಿನಂತೆ ದೀಪ ಹಚ್ಚಿಸುವಹೊತ್ತಿಗೆ ಅವರ ಬರುವಿಕೆಯನ್ನು ನಿರೀಕ್ಷಿಸಿ, ನಾನೂ ನನ್ನ ತಮ್ಮಂದಿರು ಚಿ। ನಾರಾಯಣನೂ ಅನಂತನೂ, ಕೆಳತರಗತಿಯ ವಿದ್ಯಾರ್ಥಿಯಾಗಿದ್ದ ನನ್ನ ಕೊನೆಯ ತಮ್ಮ ಚಿ। ಸುಬ್ಬರಾಯನೂ, ಅವನಂತೆಯೇ ಚಿಕ್ಕ ವಿದ್ಯಾರ್ಥಿಗಳಾಗಿದ್ದ ನಮ್ಮ ಇಬ್ಬರು ಸೋದರಳಿಯಂದಿರು ಚಿ। ಮಾಧವನೂ ಕೇಶವನೂ, ಬೇರೆ ಕೆಲವರೂ ನೆರೆದಿದ್ದೆವು. ಅವರು ಬಂದರು. ಅವರಿಂದ ಆ ಹಾಡನ್ನು ಹಾಡಿಸಿದೆವು, ಒಬ್ಬೊಬ್ಬನು ಒಂದೊಂದು ಸಲದಂತೆ ಐದಾರಾದರೂ ಸಲ. ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ನಮ್ಮ ಸುದೈವದಿಂದ, ಕನ್ನಡ ಸಾಹಿತ್ಯದ ಸುದೈವದಿಂದ, ಅಷ್ಟೂ ಸಲ ಹಾಡಿದರು. ಆಗ ಆ ಮೂವರು ವಿದ್ಯಾರ್ಥಿಗಳು ಒಬ್ಬೊಬ್ಬನೇ ಆ ಪಡಸಾಲೆಯ ಹಿಂದಣ ಚೌಕಮನೆಯೊಳಗೆ ನುಸುಳಿ, ತಂತಮಗೆ ಕೇಳಿಸಿದುದನ್ನು ಬರಕೊಂಡರು. ನಮ್ಮ ಚಾರಿ ಹಿಡಿಯಿತು. ಆ ಇಡೀ ಹಾಡನ್ನು ನಾವು ಹೇಗೂ ಗಿಟ್ಟಿಸಿಕೊಂಡೆವು. ಹಾಗೂ ಜೀವಾ ಅಟ್ಟಿಸಿಕೊಂಡು ಅದನ್ನು ಜೋಪಾನ ಮಾಡಿದೆವು. ಅವರ ರಜಾ ಮುಗಿಯಿತು, ಅವರು ಹೊರಟು ಹೋದರು.

ಕೆಲವು ತಿಂಗಳ ಮೇಲೆ ಪಂಜೆಯವರು ಇತ್ತಣ ಶಾಲೆಗಳ ಪರೀಕ್ಷೆಯ ಬಗ್ಗೆ ಇಲ್ಲಿಗೆ ಬಂದಾಗ, ಯಥಾಪ್ರಕಾರ ನಮ್ಮಲ್ಲಿಗೆ ಬಂದರು. ನಮ್ಮ ಹುಡುಗರಿಗಾದರೂ ಆ ಹಾಡು ತಮಗೆ ದಕ್ಕಿದೆ ಎಂದು ಪಂಜೆಯವರು ಅರಿಯುವನಕಾ ಮನಸ್ಸು ಚಕ್ಕಲಗುಳಿಸುತಿದ್ದುದು ಅಷ್ಟಿಷ್ಟಲ್ಲ. ಅವರಿಂದ ಹಾಡಿಸಿ ಎಂದು ಒಬ್ಬೊಬ್ಬರೇ ನನಗೆ ಬೆರಳು ಕುಕ್ಕಿದರು. ನಾನು ಹಾಡಿರೆಂದೆ. ಎಷ್ಟಕ್ಕೂ ಒಲ್ಲರು. 'ಏನು ಸ್ವಾಮಿ, ಬಾಣಂತಿಗೆ ಮಾಸನ್ನು ಮರೆಸುವಿರಾ?' ಎಂದೆ. ಆ ಮಾತು ನನ್ನ ಬಾಯಲ್ಲೇ ಇದೆ, ಅಷ್ಟರಲ್ಲಿ ಆ ಮಕ್ಕಳು ಅದನ್ನು ಹಾಡಿಯೇ ಬಿಟ್ಟರು. ಪಂಜೆಯವರಿಗೆ ಒಮ್ಮೆ ತಬ್ಬಿಬ್ಬಾಯಿತು. ಆದರೆ ಮಾಡಲೇನು? ಕಾರ್ಯ ಕೆಯ್ಮಿಂಚಿದೆ, ಬೆಕ್ಕು ಚೀಲದಿಂದ ಹೊರಕ್ಕೆ ದುಮುಕಿದೆ. ಕೇಳಿದರು, ಮೂಗಿನ ಮೇಲೆ ಬೆರಳಿ

ಟ್ಟರು, ಸುಮ್ಮನಾದರು.

ಆ ಹಾಡು ಅಲ್ಲಿಂದ ಮೊನ್ನೆ ಮೊನ್ನೆಯ ವರೆಗೆ ಬೆಳಕಿಗೆ ಬಾರದೆ, ಬರಲೂ ಆರದೆ, ಅಲ್ಲಿಯ ಅಲ್ಲಿಗೇ ಆರಿಹೋಗಿ, ಅಂತಹದೊಂದು ರಣಗವಿತೆ ಕನ್ನಡದಲ್ಲಿ ಇತ್ತೆಂದು ಕೂಡ ನಮ್ಮಂದಿನ ಮಂದಿ ಮರೆತಿತ್ತು, ಬಳಿಕಣ ಮಂದಿಗೆ ಅದರ ಸುದ್ದಿಯೇ ತೀರ ತಿಳಿಯದಿತ್ತು. ೧೯೪೭ರಲ್ಲಿ ನಮ್ಮ ಹಿಂದು ಸ್ಥಾನವು ಸ್ವತಂತ್ರವಾದ ಮೇಲೆ ನಮ್ಮಲ್ಲಿಯ ಕೆಲವು ಪಠ್ಯ ಪುಸ್ತಕಗಳಲ್ಲೂ ಕೆಲವು ಕವಿತಾ ಸಂಗ್ರಹಗಳಲ್ಲೂ ಅದೀಗ ಅಚ್ಚಿನಲ್ಲಿ ಮೂಡಿದೆಯಾದರೆ ನಾವು ಕೊಟ್ಟ ಪ್ರತಿಯಿಂದ ತಾನೆ. ಏಕೆಂದರೆ ಪಂಜೆಯವರು ಅದರ ಪ್ರತಿಯನ್ನು ಇಟ್ಟು ಕೊಂಡಿರಲಿಲ್ಲ. ಏನೋ ಪುಣ್ಯದಿಂದ ನಾವದನ್ನು ಸವನಿಸಿ ಕೊಂಡಿಲ್ಲದಿದ್ದರೆ, ಅಂತಹದೊಂದು ವೀರಗವಿತೆ ಇತ್ತೆಂದು ಕೂಡಾ ನೆನಸೂ ಲೇದು, ಕನಸೂ ಲೇದು. ಆ ಹಾಡೆಂದರೆ ಭಾರತದ ವೀರಗೀತಗಳ ಆ ೧ನೆಯವಲ್ಲಿ ಒಂದು. ಅದನ್ನು ಕೇಳಿ ಮೆಚ್ಚಬೇಕು,ಮೆಚ್ಚಿ ಕೇಳಬೇಕು.ಅದನ್ನು ಕೇಳಿದಾತನ, ಅದನ್ನು ಓದಿದಾತನ— ಅವನು ಹೇಂಬೇಡಿಯೇ ಆಗಿರಲಿ— ಮನಸ್ಸು ತನಗೆ ತಾನೆ ಒಂದು ಒರೆಯಾಗುತ್ತದೆ, ಅದರಿಂದ ಉಕ್ಕುವ ಆ ರಣಸ್ಫೂರ್ತಿ, ಮೆಯ್ತುಂಬುವ ಆ ರಣಾವೇಶ, ಅವೇ ಆತನ ಮಸೆಗತ್ತಿಯಾಗುತ್ತವೆ. ಇದಕ್ಕಿಂತ ಹೆಚ್ಚು ಏನು ಬೇಕು?

ಈ ರಣಗೀತವನ್ನು ಪಂಜೆಯವರು ರಚಿಸಿದುದಾದರೆ ಅದೊಂದು ಆಶ್ಚರ್ಯವೇ. ಏಕೆಂದರೆ ಬೀದಿಯಲ್ಲಿ ಹೋಗು ವಾಗ ಬಿರ್ರನೆ ಒಂದು ಬಂಡಿ ಬಂತೆಂದರೆ ಮಿಟಿಮಿಟಿ ನೋ ಡುತ್ತ ಅಲ್ಲೇ ಬೆಪ್ಪಾಗುವ, ಭೋಂಕನೆ ಒಂದು ಮೋಟರು ಕಾರು ಅಡ್ಡ ಬಂತೆಂದರೆ ತಲ್ಲಣಿಸಿ ಕಾಲು ಗೊಂದಳಿಸುವ ಅಂಥಾ ಭೀರು ಈ ರಣಗಾಳೆಯನ್ನು ಹೇಗೆ ಊದಿದರೊ ಹೇ ಳಲಾಸ. ಆದರೆ ಎಷ್ಟೋ ಯುದ್ಧಗಳನ್ನು ತಾನು ಕುಳಿತಲ್ಲಿಂದ ಕಾದಿಸಿದ ನಾನಾ ಫಡನವೀಸನು ಯಾವ ಕಾಳಗದಲ್ಲಾದರೂ ಕಾದಿಲ್ಲವಷ್ಟೇ, ಒಂದು ಕಳಕ್ಕಾದರೂ ಹೋಗಲೂ ಇಲ್ಲ, ಒಂದು ಕೆಯ್ದನ್ನಾದರೂ ಎತ್ತಲೂ ಇಲ್ಲದಷ್ಟು ರಣಭೀರುವಾಗಿ ದ್ದನಂತೆ. ಆ ಉದಾಹರಣೆಯಿಂದ ಸಮಾಧಾನವನ್ನು ತಂದು ಕೊಳ್ಳಬೇಕು.

* * * *

೧೯೦೩ರಿಂದ ೧೯೧೧ರ ವರೆಗೆ ನಾನು ಪ್ರಾಸವನ್ನು ಇಟ್ಟೂ ಬಿಟ್ಟೂ ಬರೆಯುತಿದ್ದೆ. ಒಲ್ಲದುದನ್ನು ಹರಿದು ಹಾ ಕಿದೆ, ಒಪ್ಪಿದುದನ್ನಾದರೂ ಪ್ರಕಟಿಸಲಿಲ್ಲ. ೧೯೧೧ರಲ್ಲಿ ನನ್ನ ಪ್ರಾಸವಿಲ್ಲದ ಕೆಲವು ಕವನಗಳು ಮಂಗಳೂರಿನ 'ಸ್ವದೇಶಾಭಿ ಮಾನಿ'ಯಲ್ಲಿ ಪ್ರಕಟವಾದಾಗ, ಅವನ್ನು ಕಂಡ ಪಂಜೆಯ ವರು ಕೊಂಚ ಕಟಕಿಯಾಡಿದರಂತೆ, ಕೊಂಚ ಟೀಕಿಸಿದರಂತೆ. ಅಂತೆ, ಅಂತೆ, ಅಂತೆ. ಆ ಸಂಗತಿ ದೂರಾಗಿ ಅಲ್ಲ, ಬರೀ ಸುದ್ದಿಯಾಗಿ ನನಗೆ ಕಿವಿಚಾಟಾಯಿತು. ಕರ್ಣಾಕರ್ಣಿಕೆ ಎಂದರೆ ತಂತಿ ಇಲ್ಲದ ತಂತಿ ತಾನೆ. ಭೇದವಿಷ್ಟೇ; ಇದರಲ್ಲಿ ಆಡಿದಷ್ಟೇ ಕೇಳಿಸುತ್ತದಾದರೆ, ಅದರಲ್ಲಿ ಹಾಗಲ್ಲ, ಕಿವಿ ಯಿಂದ ಕಿವಿಗೆ ಮುಟ್ಟುವಾಗ ಹಿಗ್ಗಿ ಹಿಗ್ಗಿ ಕೊನೆಗೆ ಹಿಡಿಯಷ್ಟು ಕಾಳು ಮುಡಿಯಷ್ಟು ಹೊಟ್ಟಿನಲ್ಲಿ ಬೆರಸಿ ಹೋಗುತ್ತದೆ. ಕೇಳಿದ್ದೆಲ್ಲಾ ನಂಬಬೇಡ ಎಂದಿದೆಯಷ್ಟೇ. ನಾನದನ್ನು ಗಮ ನಿಸದೆ ಸುಮ್ಮನಿದ್ದೆ.

೧೯೨೬ರಲ್ಲಿ ಕೈ. ವಾ. ಬಿ. ಎಮ್. ಶ್ರೀ ಕಂಠಯ್ಯ ನವರ 'ಇಂಗ್ಲೀಷು ಗೀತಗಳು' ಎಂಬ ಆಂಗ್ಲ ಪದ್ಯಗಳನ್ನು ಕನ್ನಡಿಸಿದ ಸಂಗ್ರಹ ಪ್ರಕಟವಾಯಿತು. ಕೆಲ ಕಾಲಾನಂತರ ಮಂಗಳೂರಿನಲ್ಲಿ ನಾನೊಮ್ಮೆ ನನ್ನ ಸಹಪಾಠಿಯಾಗಿದ್ದ ಎಡ್ವೊಕೇಟ್ ವೈ. ವಾ. ಎಮ್ ಎನ್. ಪ್ರಭುಗಳ ಮನೆಯ ಹೊರಚಾವಡಿಯಲ್ಲಿ ಕುಳಿತು ಅವರೊಂದಿಗೆ ಮಾತನಾಡು ತಿದ್ದಾಗ, ಬೀದಿಯಾಗೆ ಹೋಗುತಿದ್ದ ಪಂಜೆಯವರನ್ನು ಕಂಡು ಅವರು ಮೇಲಕ್ಕೆ ಕರೆದರು. ಪಂಜೆಯವರು ಕೇಳಿ ಬಂದು ಕೂತರು. ಆಯಾ ಪ್ರಸ್ತಾವವಾಗಿ ಅವರು ಹೋಗಲೆದ್ದಾಗ, ಅವರ ಕಿಸೆಯಿಂದ ಹೊಂಚುತಿದ್ದ ಒಂದು ಕನ್ನಡ ಪುಸ್ತಕದ ಮೇಲೆ ನನ್ನ ಕಣ್ಣು ಬಿತ್ತು. ಅದೇನು ಪುಸ್ತಕ? ಎಂದೆ. ತಟ್ಟನೆ ಅವರಿಗೇನೋ ಹೊಳೆಯಿತು. ನಕ್ಕರು, 'ನೀನದನ್ನು ನೋಡಬಾರದು' ಎಂದರು, ಕಿಸೆಯನ್ನು ಮುಚ್ಚಿ ಹಿಡಿದು ಇಳಿಯಲಾದರು. ಅಷ್ಟರಲ್ಲಿ ಪ್ರಭುಗಳು—ತುಸಾ ತುಂಟರು, ನನ್ನಂತೆಯೇ ಅವರೂ ಪಂಜೆಯವರ ಛಾತ್ರರು—ಅವರನ್ನು ತಡೆಗಟ್ಟಿ, ಆ ಪುಸ್ತಕವನ್ನು ಕಿತ್ತುಕೊಂಡು ನನ್ನ ಕೆಯ್ಗಿತ್ತರು. ನೋಡಿದೆ, ಶ್ರೀಯವರ 'ಇಂಗ್ಲೀಷು ಗೀತಗಳು.' ಅವರೆಗೆ ನಾನದನ್ನು ಕಂಡಿರಲಿಲ್ಲ. ತೆರೆದೆ, ಪುಟಾನುಪುಟವಾಗಿ ಕಣ್ಣಾಡಿಸುತ್ತ ಹೋದೆ. ತುದಿಯಿಂದ ತುದಿ ವರೆಗೆ ಪ್ರಾಸದ ತಂಟೆ ಇಲ್ಲ. 'ಏನು ಸ್ವಾಮಿ, ಮುಖಾ ನೋಡಿ ಮಣೆಯೇ? ಅಲ್ಲ, ಅತ್ತೆ ಒಡೆದ ಪಾತ್ರವೇ? ಇನ್ನಾದರೂ ಒಪ್ಪುವಿರಾ?' ಎಂದೆ.(ನಮ್ಮ ಮಾತಾಟದ ವಿಧಾನವೇ ಹಾಗಿತ್ತು.)ಬಾಯಾರೆ ನಕ್ಕರು, 'ಇನ್ನು ನೀನು ಗೆದ್ದಿ' ಎಂದರು.

* * * *

ಆ ನಡುವೆ ಬಾಸೆಲ್ ಮಿಶ್ಶನ್ ಪುಸ್ತಕಾಲಯದ ಪರ ವಾಗಿ ಪಂಜೆಯವರು 'ಕನ್ನಡ ಪದ್ಯ ಪುಸ್ತಕ'ದ ೨ ಭಾಗ ಗಳನ್ನು ಕ್ರಮಶಃ ಪ್ರಕಟಿಸಿದರು. ಅದರಲ್ಲಿರುವ ಅವರ ಕವಿತೆ ಗಳೆಲ್ಲವೂ ಮನೋಜ್ಞವಾಗಿವೆ; ಉದಾ: 'ಅಣ್ಣನ ವಿಲಾಪ'ದ ಕೊನೆಯ

'ಚಂದು ಕೇಳ್, ದಾರಿಯಲಿ ನಾ ಪೋಪೆ ಮುಂದೆ,
ಬಂದಪನು ಬಳಿಕ ನಿನ್ನಯ ಮುದ್ದು ತಂದೆ;

ಮಂದಿ ಮಕ್ಕಳ ಪಡೆದು ನೀ ಬಾರ ಹಿಂದೆ!'
ಎಂದವನ ಬಾಯ ಬಿಗಿದಳು ಮುತ್ತಿನಿಂದೆ.

ಎಂಬ ಪದ್ಯವು ಭಾರತೀಯ ತಾಯಂದಿರ ಹೃಚ್ಛಯವಾದ ಹೆಬ್ಬಯಕೆಯನ್ನು ಎಷ್ಟು ಯಥಾವತ್ತಾಗಿ ಬಿಂಬಿಸುತ್ತದೆ! ಅವೆಲ್ಲವಲ್ಲಿ 'ಹಾವಿನ ಹಾಡು' ಎಂಬ ಕವಿತೆಯಾದರೊ,

ಅನಾಘ್ರಾತಂ ಪುಷ್ಪಂ ಕಿಸಲಯಮಲೂನಂ ಕರರುಹೈ: ।

ಒಮ್ಮೆ ಆ ಹಾಡನ್ನು ಪಂಜೆಯವರಿಂದ ಹಾಡಿಸಿ ಕೇಳಿ, ನನ್ನ ಮಾನ್ಯ ಮಿತ್ರರಾದ ಹಾಗೂ ಆಂಗ್ಲ ಸಾಹಿತ್ಯದ ಅಭ್ಯಾಸದಲ್ಲಿ ಅದರ ವ್ಯಾಸಂಗದಲ್ಲಿ ನಿಷ್ಣಾತರಾದ, ಅದ್ವಿತೀಯರೆನಿಸಿದ ವೈ. ವಾ. ಅಮ್ಮೆಂಬಳ ವಾಮನ ಪೈಯವರು, ಅದರಲ್ಲಿ ನಾಗ ಲೋಕದ ಜೀವಕಳೆಯನ್ನು ಸೋರಿಯ ಪುಂಗಿಯಲ್ಲಿ ಊದಿ ದಂತಿದೆ ಎಂದು ತಲೆದೂಗಿ ಹೊಗಳಿದ ಮಾತು ಅದಕ್ಕೆ ಎಂದಿಗೂ ಒಪ್ಪುತ್ತದೆ.

*　　*　　*　　*

೧೯೨೭ ನೆಯ ಮೇ ತಿಂಗಳಲ್ಲಿ ಮಂಗಳೂರಿನಲ್ಲಿ ಕರ್ಣಾಟಕ ಸಾಹಿತ್ಯ ಸಮ್ಮೇಲನದ ಅಧಿವೇಶನ ನೆರೆಯಿತು. ಅದನ್ನು ಮಂಗಳೂರಿಗೆ ಕರೆವರೆ ಕಾರಣಪುರುಷರೆಂದರೆ ಪಂಜೆಯವರೇ. ಅದರ ಅಧ್ಯಕ್ಷರು ವೈ. ವಾ. ತಾತಾಚಾರ್ಯರು, ಆ ಅಧಿವೇಶನದ ಸ್ಮಾರಕವಾಗಿ ನಮ್ಮ ಜಿಲ್ಲೆಯ ಹಲ ಮಂದಿ ಲೇಖಕ ಮಹಾಶಯರ ಗದ್ಯ–ಪದ್ಯಾತ್ಮಕವಾದ ಲೇಖಗಳುಳ್ಳ ತಕ್ಕಷ್ಟು ಗಾತ್ರದೊಂದು ಗ್ರಂಥವನ್ನು ಕಾಣಿಕೆಯಾಗಿ, ಒಪ್ಪಿಸಬೇಕೆಂದು ನಿಶ್ಚಯಿಸಲಾಯಿತು, 'ಪಂಚಕಜ್ಜಾಯ' ಎಂಬ ಹೆಸರಿನಿಂದ ಆ ಗ್ರಂಥವು ಪ್ರಕಟವಾಯಿತು. ಅದರಲ್ಲಿ ಪಂಜೆಯವರು 'ಮೂಡಬಿದರೆಯ ಹೊಸ ಬಸದಿಯ ಶಿಲಾಶಾಸನಗಳು' ಎಂಬ ಉತ್ಕೃಷ್ಟವಾದೊಂದು ಲೇಖವನ್ನು ಬರೆದಿದ್ದರು. ಆ ಲೇಖದಲ್ಲಿ ಅವರು ಮಾಡಿರುವ ಗಭೀರವಾದ ಆ ಸಂಶೋಧನ,ಅದರಿಂದ ಕಂಡುಕೊಂಡಿರುವ ವಿವಿಧವಾದ, ಆ ಅನುಮಾನ, ಇವನ್ನೆಲ್ಲ ಅವಲೋಕಿಸುವಲ್ಲಿ, ಸಾಗರಮಧ್ಯದಲ್ಲಿ ರಂಪಣಿ ಬಲೆಯನ್ನು ಬೀಸಿ ಹಿಂಡುಮೀನನ್ನು ಮೇಲಕ್ಕೆ ಎತ್ತಿದುದನ್ನು ಕಂಡ ನೆನಪಾಗುತ್ತದೆ.

*　　*　　*　　*

೧೯೨೮ರಲ್ಲಿ ನಾನು ಕನ್ನಡ ಜೈಮಿನಿ ಭಾರತದ ಲಕ್ಷ್ಮೀಶ ಕವಿಯ ಕಾಲ–ದೇಶ–ಮತ ವಿಚಾರಗಳನ್ನು ಕುರಿತು ಒಂದು ಕನ್ನಡ ಲೇಖವನ್ನು ಬರೆದೆ. ಅದನ್ನು ನಮ್ಮ ಜಿಲ್ಲೆಯ ಪುತ್ತೂರಿನಲ್ಲಿ ಪ್ರಕಟವಾಗುತಿದ್ದ 'ಕರ್ಣಾಟಕ ಕೇಸರಿ' ಎಂಬ ಮಾಸ ಪತ್ರಿಕೆಯ ಸಂಪಾದಕರಾಗಿದ್ದ ನನ್ನ ಮಿತ್ರವರ್ಯ ಕೈ. ವಾ. ಮಂಜೇಶ್ವರ ಅನಂತರಾಯರಿಗೆ ಕಳುಹಿಸಿಕೊಟ್ಟು, ನನ್ನ ಕೆಯ್ಹಿಡಿದಾಕೆಯ ಅಸ್ಥಿಗಳನ್ನು ಗಂಗೆಯಲ್ಲಿ ನಿಕ್ಷೇಪಿಸುವ, ಹಾಗೂ ಗಯೆಯ ವಿಷ್ಣುಪಾದದಲ್ಲಿ ಆಕೆಯ ಪ್ರಥಮಾಬ್ದಿಕ ಶ್ರಾದ್ಧವನ್ನು ಮಾಡುವ ಉದ್ದೇಶದಿಂದ ನಾನು ಉತ್ತರಾಪಥಕ್ಕೆ ಹೊರಟುಹೋದೆ. ೩ ತಿಂಗಳ ಮೇಲೆ ನವಂಬರದ ನಡುವಂತರದಲ್ಲಿ ನಾನು ಮನೆಗೆ ಮರಳುವದೆ ನೋಡಲೇನು? ಮದ್ರಾಸು ವಿಶ್ವವಿದ್ಯಾನಿಲಯದ ಆ ವರ್ಷದೊಂದು ಕೆಲೆಂಡರ್ (Calendar) ಬಂದದೆ, ದಶಂಬರದ ೨ನೆಯ ವಾರದಲ್ಲಿ ಜರಗುವ ಅದರ ಕನ್ನಡ ಪಠ್ಯಪುಸ್ತಕ ಸಮಿತಿಯ (Kannada Text book Committee.) ಕೂಟಕ್ಕೆ ಬರಬೇಕೆಂಬ ಆಮಂತ್ರಣವೂ ಬಂದದೆ, ಆ ಕೂಟದ ವಿಷಯ ಸೂಚಿಯೂ ಬಂದದೆ. ನನಗೆ ವಿಸ್ಮಯವಾಯಿತು, ಇದೆತ್ತಣ ತಂಟೆ? ಎಂದು. ಕೂಡಲೆ ಹೊಳೆಯಿತು ಮನಸ್ಸಿಗೆ, ಇದು ಪಂಜೆಯವರ ಕೈಚಳಕವೆಂದು. ಕೆಲವೇ ದಿನಗಳ ಬಳಿಕ ದಶಂಬರದ ೧ನೆಯ ವಾರದಲ್ಲಿ ಮಂಗಳೂರಲ್ಲಿ ಜರುಗಿದ ನನ್ನ ತಮ್ಮ ಚಿ। ನಾರಾಯಣನ ಹಿರೀ ಮಗಳು ವೈ. ವಾ. ಸೌ। ದೇವಕೀ ಬಾಯಿಯ ವಿವಾಹೋತ್ಸವಕ್ಕೆ ಬಂದಿದ್ದ ಪಂಜೆಯವರನ್ನು ಕೇಳಿದೆ, 'ಲಾವಂಚದ ಸೂಡಿನಲ್ಲಿ ಒಣ ಹುಲ್ಲೇಕೆ?' ಎಂದು. ತಿಳಿಯಿತವರಿಗೆ 'ಛೀ ನೀನು ಬೇಡವೊ ಮತ್ತೆ? ಆದರೆ ನಾನಲ್ಲ, ಬೆನಗಲ್ ರಾಮರಾಯರು' ಎಂದರು. 'ಮುಂಗೈ ಆಡಿದರೆ ಮೊಳಕೈ ಆಡುತ್ತದೆ. ಆದರೆ ಏನು ಮಾಡಬೇಕೆಂದು ಅರಿಯೆನಲ್ಲಾ!' ಎಂದೆ. 'ಮೀನಿನ ಮರಿಗೆ ಈಜು ಕಲಿಸಬೇಕೆ?' ಎಂದರು. ನಾನು ಸುಮ್ಮನಾದೆ.

ಆ ಮದುವೆ ಮುಗಿಯುವುದೆ ಅವರ ಜತೆಯಲ್ಲಿ ನಾನೂ ಮದ್ರಾಸಿಗೆ ಹೋದೆ. ಅಲ್ಲಿಗೆ ಮುಟ್ಟಿದಂದು ಆ ಸಮಿತಿಯ ಕೂಟ ತೀರುವುದೆ ಆ ರಾತ್ರಿ ನಾವಿಬ್ಬರೂ ಬೆನಗಲ್ ರಾಮರಾಯರಲ್ಲಿ ಉಳಕೊಂಡೆವು. ಮುಂಜಾವದ ಹಕ್ಕಿಗಳು ಚಿಲಿಮಿಲಿಸುವನಕಾ ನಮ್ಮ ಮೂವರ ಮಾತುಕಥೆಯೇ. ಅದರಲ್ಲಿ ನಾವು ಮುಟ್ಟದ ವಿಷಯವಿಲ್ಲ, ಎತ್ತದ ಪ್ರಸ್ತಾವವಿಲ್ಲ. ಬಳಿಯಲ್ಲಿದ್ದ ರೊಕ್ಕ ಮುಗಿದ ಮೇಲೆ, ಕೊನೆಗೆ ಒಬ್ಬ ಅರಸನನ್ನು ತೆಗೆವುದು, ಮತ್ತೊಬ್ಬನನ್ನು ಇಡುವುದು. ಹಾಗೆಯೇ ಆ ಇರುಳು ಸಂದಿತು–

ಅವಿದಿತ ಗತಯಾಮಾ ರಾತ್ರಿರೇವ ವ್ಯರಂಸೀತ್ ॥

ಅಲ್ಲಿಂದ ೩ ವರ್ಷಗಳ ವರೆಗೆ ವರ್ಷಂಪ್ರತಿ ಜರುಗಿದ ೨–೩ ಕೂಟಗಳಿಗೆ ಹೆಚ್ಚಾಗಿ ನಾವಿಬ್ಬರೂ ಜತೆಯಲ್ಲೇ ಮದ್ರಾಸಿಗೆ ಹೋಗಿ, ಆ ಕೂಟದಂದಿನ ರಾತ್ರಿ ರಾಮರಾಯರಲ್ಲೇ ಉಳಿಯುತ್ತಿದ್ದೆವು, ಬೆಳಗಾನಾ ಮಾತುಕಥೆಯಲ್ಲೇ ಕಳೆಯುತ್ತಿದ್ದೆವು. ಆ ಜತೆಯ ಪಯಣದ ಸಹವಾಸ, ಇರುಳು ನಿದ್ದೆಯ ಉಪವಾಸ ಅದೆಲ್ಲವೂ ನನ್ನ ಪಾಲಿಗಾದರೊ ಒಂದು ಅಮುಗವಾಗಿತ್ತು.

*　　*　　*　　*

೧೯೩೮ರಲ್ಲಿ ಲಕ್ಷ್ಮೀಶನ ದೇಶ–ಕಾಲ–ಮತ ವಿಚಾರಗಳನ್ನು ಕುರಿತ ಲೇಖ 'ಕರ್ಣಾಟಕ ಕೇಸರಿ'ಯಲ್ಲಿ ಪ್ರಕಟ

ವಾಯಿತೆಂದೆನಲ್ಲ? ಆ ಲೇಖವನ್ನು ಕುರಿತು (ಮುಖ್ಯವಾಗಿ ಕಾಲವಿಚಾರವನ್ನು ಕುರಿತು)ಆಗಾಗ ಮಂಗಳೂರಿನಲ್ಲಿ ಕಂಡಾಗಲೆಲ್ಲ ಪಂಜೆಯವರು ಅದು ಹೇಗೆ? ಇದು ಹೇಗೆ? ಎಂದು ಹಲವಾರು ಹೇಗೆಗಳನ್ನು ಎತ್ತಿ, ಅವಕ್ಕೆ ಉತ್ತರವಾಗಿ ನನ್ನಿಂದ ಹಾಗೆ—ಹೀಗೆಗಳನ್ನು ವಿವರವಾಗಿ ಮಾರ್ನುಡಿಸಿಕೊಂಡು ನನ್ನ ಮಥಿತಾರ್ಥಗಳನ್ನು ತಮ್ಮ ತರ್ಕದ ಒರೆಗಲ್ಲಿಗೆ ಹಚ್ಚಿ ಮನವರಿಸಿಕೊಳ್ಳುತಿದ್ದರು.

೧೯೨೮–೨೯ರಲ್ಲಿ ಮಂಗಳೂರಲ್ಲಿ ತೀರ ಅಲ್ಪಾಯುಷಿಯಾದೊಂದು ಕರ್ಣಾಟಕ ಸಾಹಿತ್ಯ ಸಂಘ ಸ್ಥಾಪಿತವಾಯಿತು. ಅದು ಕೂಡಿತೆಂದರೆ ಒಟ್ಟಿಗೆ ಮೂರೇ ಸಲ. ಒಮ್ಮೆ ಕೈ. ವಾ. ಟಿ. ಪಿ. ಕೈಲಾಸರವರಿಗೆ ಮಾನಪತ್ರವನ್ನು ನೀಡುವ ಬಗ್ಗೆ; ಆ ಮೇಲೆ ಇಮ್ಮೆ ಲಕ್ಷ್ಮೀಶನನ್ನು ಕುರಿತ ನನ್ನ ಲೇಖ ತಕ್ಕಷ್ಟು ಉದ್ದವಿದ್ದುದರಿಂದ ಅದನ್ನು ಇಬ್ಭಾಗಿಸಿ ನನ್ನಿಂದ ಓದಿಸಲಿಕ್ಕೆ. ೧೯೨೯ರ ಸಪ್ತಂಬರದಲ್ಲಿ ನಾನದರ ಪೂರ್ವಾರ್ಧವನ್ನು ಓದಿದಾಗ ತಾತಾಚಾರ್ಯರು ಅಧ್ಯಕ್ಷರಾಗಿದ್ದರು, ಎರುತಿಂಗಳಲ್ಲಿ ಅದರ ಉತ್ತರಾರ್ಧವನ್ನು ಓದಿದಾಗ ಪಂಜೆಯವರು ಅಧ್ಯಕ್ಷತೆಯನ್ನು ವಹಿಸಿದರು. ಇವರು ತಮ್ಮದೇ ಆದ ರೀತಿಯಲ್ಲಿ ಮಾಡಿದ ಬಹಳ ಗೆಲುವಿನ ಭಾಷಣದಲ್ಲಿ ನನ್ನ ನಿರ್ಣಯಗಳನ್ನು ಸಂಕೋಚವಾಗಿ ತರ್ಕಿಸಿ, ಅವುಗಳ ಸತ್ಯಾರ್ಥವನ್ನು ವಿವರಿಸಿ ನನ್ನ ಬೆನ್ನು ತಟ್ಟಿದರು.

* * * *

೧೯೩೦ರಲ್ಲಿ ಪಂಜೆಯವರ ಸಂಗಾತ ಪಠ್ಯಪುಸ್ತಕ ಸಮಿತಿಯ ಕೂಟಕ್ಕೆ ನಾನು ಮದ್ರಾಸಿಗೆ ಹೋಗುತಿದ್ದಾಗ, ಮಾತಿಗೆ ಮಾತು ಹೊರಟು ನನ್ನ ಆ ವರೆಗಣ ಕವಿತೆಗಳನ್ನು ಸಂಗ್ರಹಿಸಿ ಪುಸ್ತಕರೂಪವಾಗಿ ಪ್ರಕಟಿಸಬೇಕೆಂದು ಅವರು ಹಟತೊಟ್ಟರು. ಅಲ್ಲಿಂದ ಮರಳಿದವರೇ ಅವನ್ನು ನನ್ನಿಂದ ಇಸಕೊಂಡರು. ಅದರ ಫಲವಾಗಿ ೧೯೩೧ನೆಯ ಜನವರಿಯಲ್ಲಿ ಅವರ ಬಾಲಸಾಹಿತ್ಯ ಮಂಡಲದ ದ್ವಾರಾ ಅವೆಲ್ಲವನ್ನು ಒಳಕೊಂಡ ನನ್ನ 'ಗಿಳಿವಿಂಡು' ಬೆಳಕನ್ನು ಕಂಡಿತು. ನಾನೊಂದು ಕಟ್ಟುಮಾಡಿದ್ದೆ. ನನ್ನ ಕವಿತೆಗಳನ್ನು 'ಸ್ವಾಂತ: ಸುಖಾಯ'ತಾನೆ ಬರೆದಿಡುವೆನೆಂದು ನಾನು ಸಂಕಲ್ಪಿಸಿರುವುದರಿಂದ, ಆ ಪುಸ್ತಕದ ೨೫೦ಕ್ಕಿಂತ ಹೆಚ್ಚು ಪ್ರತಿಗಳನ್ನು ಅಚ್ಚು ಹಾಕಬಾರದೆಂದು. ಆ ಮಂಡಲದವರಾದರೆ ೫೦೦ ಏನೋ ಪ್ರತಿಗಳನ್ನು ಅಚ್ಚುಹಾಕಿಸಿರಬೇಕು. ಅಷ್ಟೇ ಅಲ್ಲ, ಯಾರೊ ಒಬ್ಬ ಕುತೂಹಲಿ ಒಳಗಿಂದೊಳಗೆ ಗಡಿಯಾರದ ಮುಳ್ಳುಗಳಲ್ಲಿ ಕೈಯ್ಯಾಡಿಸಿರಬೇಕು. ಏಕೆಂದರೆ ಅವರ ಪ್ರಕಟನೆಯ ಪುಸ್ತಕಗಳ ಪಟ್ಟಿಯಲ್ಲಿ ನನ್ನ ಗಿಳಿವಿಂಡಿನ ಹೆಸರು ವರ್ಷೇ ವರ್ಷೇ ಅಭಾವದಿಂದ ವ್ಯಕ್ತವಾಗಿತ್ತು. ಆ ಕೊರತೆಯ ಕಡೆಗೆ ಪಂಜೆಯವರ ದೃಷ್ಟಿಯನ್ನು ಸೆಳೆದೆ. 'ಸರಿ ಸರಿ, ಅದನ್ನು ತಿದ್ದೋಣ' ಎಂದರು. ಮತ್ತೂ ಮತ್ತೂ ಅದೇ ಗತಿಯಾಗಲಿಕ್ಕೆ ಆ ಕಿರುಕುಳವ ತಳ್ಳಿಯನ್ನೇ ಬಿಟ್ಟೆ. ಕೊನೆಗೆ ೧೯೩೭ರ ಕೊನೆಯ ತಿಂಗಳಲ್ಲಿ ಪಂಜೆಯವರು ಆ ಮಂಡಲದಿಂದ ಪಾಲು ತೀರಿಸಿ ಹೋಗುವಂದೇನೋ ನನಗೆ ಅಲ್ಲಿಂದ ಬರೆದು ಬಂತು, ಗಿಳಿವಿಂಡು ಮಾರಿಹೋಗದೆ ಹೆಚ್ಚು ಕಡಿಮೆ ೧೫೦ ಪ್ರತಿಗಳು ಅಲ್ಲಿ ಸುಮ್ಮನಿವೆ; ಅವನ್ನು ತರಿಸಿಕೊಳ್ಳಬೇಕು, ಅವುಗಳ ಬೆಲೆಯನ್ನು ಕೊಟ್ಟು ಕಳಿಸಬೇಕು ಎಂದು. ಚಕಾರ ಶಬ್ದವೆತ್ತದೆ ಬೆಲೆ ತೆತ್ತೆ, ಅವನ್ನು ತರಿಸಿಕೊಂಡೆ. ಹೂವು ಮೂಸಿದರೆ ಒಂದು ವಾಸನೆ, ತಿಕ್ಕಿದರೆ ಒಂದು ವಾಸನೆ.

* * * *

ಆ ನಡುವೆ ಪಂಜೆಯವರು ಶಿಶು ಸಾಹಿತ್ಯಕ್ಕೆ ಕೈಹಾಕಿ ಮಕ್ಕಳ ಓದಿನ ಬಗ್ಗೆ ದುಡ್ಡು-ದುಗ್ಗಾಣಿಯ ಅನೇಕ ಪುಸ್ತಕಗಳನ್ನು ಕನ್ನಡದಲ್ಲೇ ಅಲ್ಲ, ಕೆಲವನ್ನು ಇಂಗ್ಲೀಷಿನಲ್ಲಿಯೂ ರಚಿಸಿ ಅವನ್ನು ಬಾಲಸಾಹಿತ್ಯ ಮಂಡಲದ ದ್ವಾರಾ ಪ್ರಕಟಿಸಿದರು. ಅವಲ್ಲಿ ನಮ್ಮ ತಲೆಮಾರಿನಲ್ಲೇ ಖಿಲವಾಗುತಿದ್ದ, ಅತಏವ ಮುಂದಣ ತಲೆಮಾರುಗಳಿಗೆ ಹೇಗೂ ನಾಸ್ತಿಯಾಗುತಿದ್ದ, ತಲತಲಾಂತರಗಳಿಂದ ಹೊತ್ತು ಕಂತುವುದೆ, ಮನೆಮನೆಗಳಲ್ಲಿ ದೀಪ ಹಚ್ಚುವುದೆ ಮಕ್ಕಳಿಗೆ ಹೇಳಿ ಬರುತಿದ್ದ, ಆ ವರೆಗೆ ಮಂದಿಯ ಬಾಯಲ್ಲಿದ್ದುವೇ ವಿನಾ ಸದಾಕಾಲಕ್ಕಾಗಿ ಅಚ್ಚಿನಲ್ಲಿ ರಕ್ಷಿಸಿಲ್ಲದ, ಹಾಗೂ ಎಂದಿಗೂ ಸವಿಯೂ ಕುಂದದ ಬಣ್ಣವೂ ಕಂದದ ಅನೇಕ ಅಜ್ಜಿಕಥೆಗಳನ್ನು ಜೋಪಾನ ಮಾಡಿ ಸದಾಕಾಲಕ್ಕೆ ಕಾದಿರಿಸಿಕೊಂಡದೆ. ಆ ಕಥೆಗಳೆಲ್ಲವೂ ಕಿರಿಯರೇ ಅಲ್ಲ, ಹಿರಿಯರೂ ಓದಿ ಮೆಚ್ಚುವಷ್ಟು ಸೊಂಪಾಗಿ ಬರೆಯಲ್ಪಟ್ಟಿವೆ, ಮೆಚ್ಚಿ ಅರಗಿಸುವಷ್ಟು ಇಂಪಾಗಿ ಬರೆಯಲ್ಪಟ್ಟಿವೆ. ಅವನ್ನು ಓದಿಯೇ ತಿಳಕೊಳ್ಳಬೇಕು ರುಚಿಯನ್ನ, ರುಚಿಸಿಯೇ ಚಪ್ಪರಿಸಬೇಕು ಮನವನ್ನ.

ಇಲ್ಲಿಯೂ ಪ್ರಾಸಂಗಿಕವಾಗಿ ಹೇಳಬಹುದು, ಕನ್ನಡ ಸಣ್ಣ ಕಥೆಗಳಿಗೆ ಹೇಗೋ ಹಾಗೆಯೇ ಕನ್ನಡದಲ್ಲಿ ಶಿಶು ಸಾಹಿತ್ಯಕ್ಕೂ (ನಾನು ಬಲ್ಲಷ್ಟರ ಮಟ್ಟಿಗೆ) ಪಂಜೆಯವರೇ ಮೂಲಪುರುಷರೆಂದು, ಅವರೇ ಜನ್ಮದಾತರೆಂದು.

* * * *

ಮಂಗಳೂರಿನ 'ಸ್ವದೇಶಾಭಿಮಾನಿ'ಯ ೧೯೩೧ನೆಯ ಇಸವಿಯ ರಜತೋತ್ಸವ ಸಂಚಿಕೆಯಲ್ಲಿ ಪಂಜೆಯವರು ತಮ್ಮ ಸಂಶೋಧಕ ಶಕ್ತಿಯನ್ನು ಪುನರುದ್ದೀಪಿಸಿ, 'ಸ್ಥಳನಾಮ' ಎಂಬ ವಿಶಿಷ್ಟವಾದೊಂದು ಲೇಖವನ್ನು ಬರೆದರು. ಅದರಲ್ಲಿ ನೂರಾರು ಊರುಗಳ ಹೆಸರುಗಳು ಹೇಗೆ ಬಂದುವೆಂದು ಕಂಡು ಹಿಡಿಯಲಿಕ್ಕೆ ಯತ್ನಿಸಿದ್ದಾರೆ. ಲೇಖ ಬಹಳ ಚಲೋದಿದೆ; ತುಂಬ ಪಠನೀಯವಿದೆ.

ಮಂಗಳೂರಿನ 'ಕಂಠೀರವ'ದ ೧೯೩೭ರ ದಸರಾ ಸಂಚಿಕೆಯಲ್ಲಿ ಪ್ರಕಟವಾದ ಅವರ 'ಸರ್ವಜ್ಞನ ಓನಾಮ ಪದ್ಧತಿ' ಎಂಬ ಉತ್ಕೃಷ್ಟವಾದ ಮತ್ತೊಂದು ಲೇಖದಲ್ಲಿ

ಈಗಣವರು ಬಗೆವಂತೆ ಶಿಕ್ಷಣ ಪದ್ಧತಿ ನಮಗೇನೂ ಆಂಗ್ಲರಿಂದ ಹೊಸತಾಗಿ ಬಂದುದಲ್ಲ, ಅದು ಬಹಳ ಹಳಗಾಲದಿಂದ ತಾನೆ ನಮ್ಮ ಭಾರತ ಭೂಮಿಯಲ್ಲಿ ರೂಢಿಯಾಗಿರಬೇಕು, ಆ ಕುರಿತ ಅನೇಕ ಗ್ರಂಥಗಳೂ ಇದ್ದಿರಬೇಕು; ಉದಾಹರಣೆಗಾಗಿ ಹೇಳುವುದಾದರೆ, ಕನ್ನಡ ಕವಿ ಸರ್ವಜ್ಞನ ವಚನಗಳಲ್ಲಿ ಶಿಕ್ಷಣ ಕ್ರಮವನ್ನೂ ಶಿಕ್ಷಕನನ್ನೂ ಕುರಿತು ಅನುಭವಿಯ ವಚನಗಳಿವೆ, ಅತಏವ ಆತನೊಬ್ಬ ಮನಃಶಾಸ್ತ್ರಜ್ಞನೆಂದು ಸಹಸಾ ಬೋಧೆಯಾಗುತ್ತದೆ ಎಂದು ಅವುಗಳಿಂದ ಹಲವಾರು ವಚನಗಳನ್ನು ಎತ್ತಿ ದೃಢೀಕರಿಸಿದ್ದಾರೆ.ಅದೂ ಅವರದೊಂದು ಮೇಲಾದ ಸಂಶೋಧನಾತ್ಮಕವಾದ ಲೇಖವೇ ಸರಿ.

ಕಂಠೀರವದ ೧೯೩೩ರ ದಸರಾ ಸಂಚಿಕೆಯಲ್ಲಿ ಪಂಜೆಯವರು ಮತ್ತೆ ಬರೆದ 'ಹಳೆಯ ಸಬ್ ಅಸಿಸ್ಟಾಂಟನ ಸುಳ್ಳು ಡೈರಿಯಿಂದ' ಎಂಬ ಲೇಖವಾದರೊ, ಅದೊಂದು ನಗಾಟದ ಆಂದೋಲನ. ಅದು ಕಥೆಗೆ ಕಥೆಯೂ ಸೈ, ನೆನವರಿಕೆಗೆ ನೆನವರಿಕೆಯೂ ಸೈ. ೧೯೦೩ರಲ್ಲಿ 'ಸುವಾಸಿನಿ' ಮೋಡದ ಮರೆಯಾದೊಂದಿಗೆ ತಾನು ಗೂಡಿನ ಮರೆಯಾದ ಅವರ ಕಥೆಗಾರಿಕೆಯ ಲೇಖನಿ ೩೦ ವರ್ಷಗಳ ಮತ್ತೆ ಮರಳಿ ಒಮ್ಮೆಯಾದರೂ ರೆಕ್ಕೆಯರಳಿಸಿ ಹಿಂದಣ ಅದೇ ಗೆಲುವಿನಿಂದ ಬರೆಯಿತೆಂದರೆ, ಅದು ಅಪೂರ್ವವೂ ಸರಿ ಆಶ್ಚರ್ಯವೂ ಸರಿ ಎನ್ನಬೇಕು. ಆ ಆಶ್ಚರ್ಯವನ್ನು ಕನ್ನಡ ನಾಡು ಕಂಡಿತು. ಹುಣಸೆ ಮುಪ್ಪಾದರೂ ಹುಳಿ ಮುಪ್ಪಾಗದು.

* * * *

೧೯೩೦-೩೧ರಿಂದೇನೋ ತೊಡಗಿ ವರ್ಷಂಪ್ರತಿಯ ದಸರಾ ಹಬ್ಬದ ೧೦ ದಿನಗಳಲ್ಲಿ ಮಿತ್ರವರ್ಯ ಶ್ರೀ ಶಿವರಾಮ ಕಾರಂತರು ಪುತ್ತೂರಿನಲ್ಲಿ ಕನ್ನಡ ಸಾಹಿತ್ಯೋತ್ಸವವನು ನೆರಸುತಿದ್ದರಷ್ಟೇ. ೧೯೩೪ರಲ್ಲಿ ಆ ಬಗ್ಗೆ ನಿಮಂತ್ರಿತರಾಗಿ ಅಲ್ಲಿಗೆ ಬಂದಿದ್ದ ಕೈ. ವಾ. ಬಿ. ಎಮ್. ಶ್ರೀ ಕಂಠಯ್ಯನವರೂ, ಕೈ. ವಾ. ಟಿ. ಎಸ್. ವೆಂಕಣ್ಣಯ್ಯನವರೂ, ಶ್ರೀ ವಿ. ಸೀತಾರಾಮಯ್ಯನವರೂ ಅಲ್ಲಿಯ ಕೆಲಸ ಮುಗಿಯುತ್ತಲೆ ಪಂಜೆಯವರನ್ನೂ, ಉಳ್ಳಾಲ ಮಂಗೇಶರಾಯರನ್ನೂ, ಕಾರಂತರನ್ನೂ ಒಡಗೂಡಿ ಮಂಗಳೂರಿನ ಮೇಲಿಂದ ಮಂಜೇಶ್ವರಕ್ಕೆ ಬಂದರು. ಚೂಣಿಯಲ್ಲಿ ಸಮುದ್ರ ದರ್ಶನವಾಯಿತು. ಕಡಲ ದಂಡೆಯಲ್ಲಿ ಕುಳಿತು ೧-೧॥ ತಾಸಿನ ಮಟ್ಟಿಗೆ ಸುಖಸಂಕಥಾಲಾಪವಾಯಿತು. ಅಲ್ಲಿಂದ ನಮ್ಮ ಮನೆಗೆ ಬಿಜಯವಾಯಿತು. ಮನೆಯಲ್ಲಿ ಮತ್ತೆಷ್ಟೋ ಮಾತುಕಥೆಯ ಗಾದು. ಅದರಲ್ಲಿ ದಿಗ್ದರ್ಶಿಸದಿದ್ದ ಹೊರಗೊಳಗಣ ಸಾಹಿತ್ಯ ವಿಷಯ, ಹೆಚ್ಚಾಗಿ ಆಧುನಿಕ ಸಾಹಿತ್ಯ ವಿಷಯ, ಮುಖ್ಯತಃ ಕವಿತಾ ವಿಷಯ, ಒಂದೂ ಇಲ್ಲ. ಮತ್ತೂ ಎಷ್ಟೋ ಅದಾಯಿತು, ಇದಾಯಿತು.

ಕೊನೆಗೆ ಆ ಸಾರಿಯ ಕನ್ನಡ ಸಾಹಿತ್ಯ ಸಮ್ಮೇಲನದ ವಿಚಾರ ಬಂತು. 'ಎಲ್ಲಿ?' ಎಂದೆ. 'ರಾಯಚೂರಿನಲ್ಲಿ' ಎಂಬುದರೊಂದಿಗೆ ಅದರ ಅಧ್ಯಕ್ಷತೆಯ ಮಾತು ಸಾಹಜಿಕವಾಗಿ ಬಂತು. 'ಯಾರನ್ನು ಯಾಚಿಸಿದರೂ ಒಪ್ಪುವುದಿಲ್ಲ. ಇದೊಂದು ಗಂಟಲಿನ ಗಾಳವಾಗಿದೆ' ಅಂದರು ಶ್ರೀಯವರು. ನಾನದಕ್ಕೆ 'ಅದೇಕೆ ಅಷ್ಟು ಆಯಾಸ? ತಾವು ಬೆಣ್ಣೆ ಇಟ್ಟುಕೊಂಡು ತುಪ್ಪಕ್ಕೆ ಅಲೆಯುತ್ತೀರಿ. ಪಂಜೆಯವರಿಲ್ಲವೇ?' ಎಂದೆ. 'ಎಷ್ಟು ವರ್ಷದಿಂದ ಬಾರಿಬಾರಿಗೆ ಬೇಡಿದರೂ ಒಲ್ಲದ್ದೆ, ಏನೋ ಕೊನೆಗೊಮ್ಮೆ ಈ ಸಾರಿ ಒಪ್ಪಿಕೊಂಡಿದ್ದಾರೆ' ಎಂದೆರವರು. ಒಡನೆಯೇ ನಾನು ಪಂಜೆಯವರನ್ನು ಮುಂಚೆ ಮನವಾರೆ ಅಭಿನಂದಿಸಿದೆ, ಮತ್ತೆ ನಗುನಗುತ್ತ ಅವರ ಮೇಲೆ ತೆಗೆದೆ ಎರಡು ಹುಸಿಕುದುರೆಯನ್ನ. ಅವರೂ ಸುಮ್ಮಸುಮ್ಮಗೆ ನಕ್ಕರು. ಹಾಗೆಯೇ ಕೂಟ ಹರಿಯಿತು. ಅವರೆಲ್ಲರೂ ಮಂಗಳೂರಿಗೆ ಹಿಂದೆರಳಿದರು.

ಪಂಜೆಯವರು ಮಂಜೇಶ್ವರಕ್ಕೆ ಬಂದುದಾದರೆ, ಅದೇ ಕೊನೆಯ ಸಲ.

* * * *

ತುಸವೇ ಬಳಿಕ (೧೯೩೪)ಪಂಜೆಯವರು ಮಂಗಳೂರಿನಿಂದ ಬಿಡಾರ ಮಡಚಿ, ಅವರ ಮಗನಿದ್ದಲ್ಲಿಗೆ ಬೇಗನೆ ಹೊರಡಲಿದ್ದಾರೆಂದು ಕೇಳಿದೆ. ಅವರನ್ನು ಕಾಣಲೆಂದು ಅಲ್ಲಿಗೆ ಹೋದೆ. ಅಲ್ಲಿ ಇಳಿದವನೇ ಬಾಲಸಾಹಿತ್ಯ ಮಂಡಲಕ್ಕೆ ನಡೆದೆ. ಅಲ್ಲಿ ಅವರನ್ನು ಕಂಡೆ. 'ನಾನು ಹೋಗುವೆ, ಗೋವಿಂದಾ' ಎಂದರು. 'ಹೋಗುವೆನೆನ್ನಬೇಡಿ, ಹೋಗಿ ಬರುವೆನೆನ್ನಿ. ಇನ್ನು ಎಷ್ಟೋ ಸಲ ತಾವು ಇಲ್ಲಿಗೆ ಆಗಾಗ್ಗೆ ಬರುತ್ತಿರಬೇಕು' ಎಂದೆ. ನಕ್ಕರು, 'ಹಿಂದೆ ನಾನು ನಿನಗೆ ಕಲಿಸಿದೆ. ಈಗ ನೀನು ನನಗೆ ಕಲಿಸಿ ಸಾಲ ತಿದ್ದಿದಿ. ಆಗಲಿ, ತಿದ್ದುಕೊಂಬೆ. ಹೋಗಿ ಬರುತ್ತೇನೆ' ಎಂದರು. ನಾನೂ ನಕ್ಕೆ. 'ಯಾವಂದು ಹೊರಡುವಿರಿ?' ಎಂದೆ. 'ಇನ್ನು ೪-೫ ದಿನಗಳಲ್ಲಿ, ಸಾಮಾನು ಇನ್ನೂ ಕಟ್ಟಿ ಮುಗಿದಿಲ್ಲ' ಎಂದರು. ಅವರಿಂದ ಎರಕೊಂಡ ಈ ೪ ಕನ್ನಡ ಪುಸ್ತಕಗಳು—ಕರ್ಣಾಟಕ ಕವಿಚರಿತೆ ೧-೩, ಕಾವ್ಯಾವಲೋಕನ-ಭಾಷಾಭೂಷಣ, ಮತ್ತು ಉದ್ಭಟ ಕಾವ್ಯ—ನನ್ನೊಂದಿಗಿದ್ದವು. ಆವತ್ತು ಜತೆಯಲ್ಲಿ ಕೊಂಡುಹೋಗಲಿಕ್ಕೆ ಮರೆತುಹೋಗಿತ್ತು. ಅವನ್ನು ನಾಳೆಯೇ ಕಳುಹಿಸಿ ಕೊಡುವೆನೆಂದೆ. 'ಬೇಡ ಬೇಡ, ನನ್ನ ಎಲ್ಲಾ ಪುಸ್ತಕಗಳನ್ನು ಹಂಚಿಬಿಟ್ಟೆ.ಒಂದನ್ನೂ ಇಟ್ಟುಕೊಂಡಿಲ್ಲ.ಅವು ನಿನ್ನೊಂದಿಗೇ ಇರಲಿ, ನನ್ನ ನೆನಪಿಗಾಗಿ ಇಟ್ಟುಕೋ,ಗೋವಿಂದಾ'ಎಂದರು. ಹಾಗೆನ್ನುವಾಗ ಅವರ ಕಣ್ಣು ನೆನೆಯಿತು, ಕೊರಳು ಕಟ್ಟಿತು.

ಕಂಠಃ ಸ್ತಂಭಿತ ಬಾಷ್ಪವೃತ್ತಿ ಕಲುಷಶ್ಚಿಂತಾಜಡಂ ದರ್ಶನಮ್ ।

ಪರಸ್ಪರ ಅಕ್ಕರೆಯುಳ್ಳವರ ಅಗಲಿಕೆಯಲ್ಲಿ ಅದೊಂದು ಸೊಗಡಿದೆ. ಮನೆಯಿಂದ ಹೊರಡುವಾಗಲೆ ಹಳವಳಿಸುತಿದ್ದ ನನ್ನ ಮನಸ್ಸೂ ಮುಗ್ಗಿತು. ನಾನು ಸೊಪ್ಪಾದೇನೆಂದು ಅಳುಕಿ ಮನಸ್ಸನ್ನು ಗಟ್ಟಿಯಾಗಿ ಹಿಡಕೊಂಡು, 'ಹಾಗಾದರೆ ಹೋಗಿ

ಬಲ್ಲಿರಾ?' ಎಂದೆ. ತಲೆಯಲ್ಲಾಡಿಸಿದರು, ಮಾತು ಹೊರಡದು. ನನ್ನ ಕೈಯನ್ನು ಸೆಳೆದು ಕೈಯ್ಲಾದಷ್ಟು ಬಿಗುವಾಗಿ ತಮ್ಮ ಕೈಯ್ಯಲ್ಲಿ ಹಿಡಕೊಂಡು ಕೆಲ ನಿಮಿಷಕ್ಕೆ ಅಲುಗಲುಗಿಸಿ ಹಸ್ತಲಾಗಿಸಿದರು. ಆ ಬಿಸುಪು ತಕ್ಕಷ್ಟು ಹೊತ್ತಿನ ವರೆಗೂ ನನಗಾರಲಿಲ್ಲ. ಬಳಿಯಲ್ಲಿ ಮಿಕ್ಕ ಮಂದಿಯೂ ಇದ್ದ ಗೋಚರ ಅವರಿಗೂ ಇದ್ದಿಲ್ಲ, ನನಗೂ ಇರಲಿಲ್ಲ. ಥಟ್ಟನೆ ಅವರ ಕಾದ ಕಣ್ಣುಗಳಿಂದ ಎರಡು ಹೆಬ್ಬನಿಗಳು ಉರುಳಿದವು. ಅವರ ಕೆಂಪೇರಿದ ಮೋರೆಯನ್ನು ಕಾಂಬಾಗ ನನಗೇನೋ ಹೀಗೆ ಹೊಳೆಯಿತು, ಇನ್ನು ನಮ್ಮೊಳಗೆ ಪುನರ್ಮಿಲನವಿಲ್ಲವೆಂದು. ಎಷ್ಟು ಎಳಕೊಂಡರೂ, ಎಷ್ಟು ಅವುಕಿ ಹಿಡಿದರೂ ನನ್ನ ಮನಸ್ಸು ತನಗಲ್ಲವೆಂದಿತು. ಕಣ್ಣು ತೊಯ್ದುವು. ಹುಯ್ದಾವು ಎಂಬಷ್ಟರಲ್ಲಿ ಆ ಕರುಳ ನುಲಿತವನ್ನು ತಡಕೊಳ್ಳಲಾರದೆ ಅವರು ಒಳಗೆ ಹೋದರು, ನಾನು ಇಳಿದು ಬಂದೆ. ಅಲ್ಲಿಗೆ ತೀರಿತು ನಮ್ಮ ವಿದಾಯ ಎರಡೇ ಮಾತಿನಲ್ಲಿ. ಆದರೆ ತುಟಿ ಸುಮ್ಮನಾದರೂ ಕರುಳು ಸುಮ್ಮನಾಗದು.

ಅಲ್ಲಿಂದ ಕೆಲಸವಿದ್ದರೂ ಬೇರೆಲ್ಲಿಗೂ ಹೋಗಲಾರದೆ, ಮರು ಬಂಡಿಯಲ್ಲಿ ನಾನು ನೆಟ್ಟಗೆ ಮನೆಗೆ ಮರಳಿದೆ. ಮನಸ್ಸು ತೀರ ಶೂನ್ಯ. ಯಾವ ಕೆಲಸಕ್ಕೆ ಕೈ ಹಾಕಿದರೂ ಆ ಕೆಲವಾಗದು, ಯಾವ ಬಗೆತಕ್ಕೆ ಮನಸ್ಸು ಹಚ್ಚಿದರೂ ಮನಸ್ಸು ಸಾಗದು. ಎತ್ತ ಕಣ್ಣಾಡಿಸಿದರೂ ಅದೇ ವ್ಯಕ್ತಿ, ಎತ್ತ ಕಿವಿಯಾಡಿಸಿದರೂ ಅದೇ ಧ್ವನಿ. ಹಾಗೂ ಹೀಗೂ ಆ ಹಗಲು ಸರಿದು ಇರುಳಾಯಿತು, ಇರುಳು ಮಾರನೆಯ ದಿನವಾಯಿತು. ಹೀಗೆ ದಿನದ ಹಿಂದೆ ದಿನ ಹೋಗುತ್ತ ಅವರ ವ್ಯಕ್ತಿತ್ವ ಕಣ್ಣರಿಕೆಯಿಂದ ದೂರ ಕಳಿಯಿತು, ಅವರ ಸ್ನೇಹ ಮಾತ್ರ ನೆನವರಿಕೆಯಲ್ಲಿ ನನಗುಳಿಯಿತು.

* * * *

೧೯೩೭ರ ಫೆಬ್ರವರಿ—ಮಾರ್ಚಿಯಲ್ಲಿ ಕೆಲ ದಿನಗಳಿಗೆ ನಾನು ಮೈಸೂರಿಗೆ ಹೋಗಿದ್ದೆ. ಅಲ್ಲಿಂದ ಹೊರಡುವ ನಿನ್ನೆ ಡಾ। ಏ. ನರಸಿಂಹಯ್ಯನವರನ್ನು ಕಾಣಲೆಂದು ಅಲ್ಲಿಯ ಸರಸ್ವತೀ ಭಂಡಾರಕ್ಕೆ (Library) ಹೋದೆ. ನನ್ನ ಜತೆಯಲ್ಲಿ ಹಲ ವರ್ಷಗಳಿಂದ ಮೈಸೂರಲ್ಲೇ ಇದ್ದಿರುವ ಆಯುರ್ವೈದ್ಯ ಶ್ರೀ ಕಾರ್ಕಳ ಪದ್ಮನಾಭ ಪುರಾಣಿಕರಿದ್ದರು. ನರಸಿಂಹಯ್ಯರೊಡನೆ ಮಾತು ಮುಗಿಸಿ ಹೊರಗೆ ಬಂದವರೇ ನಾವು ೧೦-೨೦ ಮಾರು ಸರಿಯುವಷ್ಟರಲ್ಲಿ ನಮ್ಮ ಕಡೆಗೆ ಒಬ್ಬರೇ ಬರುತ್ತಿರುವ ಪಂಜೆಯವರನ್ನು ಕಂಡೆವು--ಸ್ವಪ್ನೋನು ಮಾಯಾನು ಮತಿ ಭ್ರಮೋನು! ನನ್ನ ಕಣ್ಣುಗಳನ್ನೊಮ್ಮೆ ನಂಬಲಾಗಲಿಲ್ಲ. ಕಂಕುಳಲ್ಲಿ ಹರಕು ಕೊಡೆ, ನಡೆವಾಗಲೂ ನೆಲದಲ್ಲಿ ನಟ್ಟ ದೃಷ್ಟಿ, ಮನಸ್ಸಿನಲ್ಲೇ ಮಾತುಕಥೆ, ಅದೇ ಯಾವಂದಿನ ಜೂಗುನಡೆ. ಪುಷ್ಯ ಮಾಸದಲ್ಲಿ ಮಿಂಚನ್ನು ಕಂಡಂತಾಯಿತು. ಸಂತೋಷ ಬೇರೆ, ಆಶ್ಚರ್ಯ ಬೇರೆ. ನನಗೊಮ್ಮೆ ಜಲ್ಲೆನಿಸಿತು, ೩ ವರ್ಷ ಕಾಣದವರನ್ನು ಆವಂದು ಅಕಾಂಡವಾಗಿ ಕಂಡು, ಸ್ವಪ್ನೇಪಿ ನಿರೀಕ್ಷಿಸದವರನ್ನು ಆವಾಗ ಜಗ್ಗನೆ ಸವಿಾಕ್ಷಿಸಿ. ನಗಾಡಿದರು, ಕೈ ಹಿಸುಕಿದರು, ಕ್ಷೇಮ ಕುಶಲವನ್ನು ವಿಚಾರಿಸಿದರು. ಅಲ್ಲಿ ನಿಂತಲ್ಲಿಯೇ ನಮಗಾದ ಮಾತುಕಥೆಯಲ್ಲಿ ಅವರು ಮೈಸೂರಿನಲ್ಲಿ ಇನ್ನೂ ಕೆಲವು ದಿನ ಇರುವರೆಂದು ನನಗೆ ತಿಳಿಯಿತು, ನಾನು ನಾಳೆಯೇ ಮೈಸೂರನ್ನು ಬಿಡುವೆನೆಂದು ಅವರಿಗೆ ತಿಳಿಯಿತು. 'ಇನ್ನು ಎಂದಿಗೆ ಕಾಣೋಣ,ಗೋವಿಂದಾ?' ಎಂದು ಅವರು ಎನುವಷ್ಟರಲ್ಲಿ ಪುರಾಣಿಕರು 'ಇವತ್ತೇ ೪ ಗಂಟೆಗೆ, ನಮ್ಮ ಮನೆಯಲ್ಲಿ' ಎಂದರು, ಶ್ರೀರಾಮ ಪೇಟೆಯಲ್ಲಿರುವ ತಮ್ಮ ಮನೆಯ ಗುರುತನ್ನು ತಿಳಿಸಿದರು. ಮತ್ತೆ ನಾವು ಅಗಲಿದೆವು.

೪ ಗಂಟೆಯ ಸರಿ ಹೊತ್ತಿಗೆ ಪಂಜೆಯವರು ಶ್ರೀರಾಮ ಪೇಟೆಯಲ್ಲಿ ಶ್ರೀ ಪುರಾಣಿಕರು ಇದ್ದ ಅವರ ಭಾವ ಶ್ರೀ ಅಣ್ಣಾಜಿರಾಯರ ಮನೆಗೆ ಬಂದರು. ನಾವೆಲ್ಲರು ಮಾಳಿಗೆಯಲ್ಲಿ ಕೂಡಿದೆವು. ತಿಂಡಿ ತೀರ್ಥವಾಯಿತು. ಆ ಮೇಲೆ, ನಾವು ಮುಟ್ಟಲೊಲ್ಲೆವೆಂದು ದೂರೀಕರಿಸಿದ ಹರಿಜನರನ್ನು ನಮ್ಮ ಸರಿಕತನಕ್ಕೆ ಎತ್ತಿಕೊಂಡಲ್ಲದೆ ಹಿಂದುಸ್ಥಾನಕ್ಕೆ ಏಳಿಗೆ ಇಲ್ಲ, ಹಿಂದೂ ಸಮಾಜಕ್ಕೆ ಉಳಿಗಾಲವಿಲ್ಲ ಎಂಬ ತತ್ತ್ವವನ್ನು ಸಾರಲೆಂದು ಪಂಜೆಯವರು ರಚಿಸಿದ 'ಉಳ್ಳಯ್ಯಾ, ದಯೆಗೊಳ್ಳಯ್ಯಾ' ಎಂದು ಮೊದಲಾಗುವ 'ಹೊಲೆಯನ ಹಾಡು' ಉಳ್ಳ ರಿಕಾರ್ಡನ್ನು (record) ಪುರಾಣಿಕರು ತಮ್ಮ ಗ್ರಾಮಫೋನಿನಲ್ಲಿ (gramaphone) ಇಟ್ಟರು. ಅದನ್ನು ಕೇಳಿದ ಪಂಜೆಯವರು ಅತ್ಯಂತ ವಿಸ್ಮಿತರಾದರು. ಆ ಹಾಡುಗಾರ ಯಾರು? ತೆಗೆದು ಕೊಂಡವರು ಯಾರು? ಮತ್ತು ಯಾವಾಗ? ಎಂದೆಲ್ಲ ಪ್ರಶ್ನಿಸಿದರು. ಅವರಿಗೆ ಆ ಕುರಿತು ರವೇಸೂ ಗೊತ್ತಿರಲಿಲ್ಲವಂತೆ.

ಆ ಮೇಲೆ ಅನೇಕ ವಿಷಯಗಳಲ್ಲಿ ಸುಳಿದಾಡಿ ನಮ್ಮ ಮಾತುಕಥೆ ಹೇಗೂ ಮುಗಿಯಿತು. ಇಳಿಹೊತ್ತಾಯಿತು. ಪಂಜೆಯವರು ಹೋಗಲೆದ್ದರು. ಹೊರಬಾಗಲ ವರೆಗೆ ನಾವೆಲ್ಲರೂ ಅವರೊಂದಿಗೆ ಹೋಗಿ ಅವರನ್ನು ಬೀಳುಕೊಟ್ಟೆವು. ಬೀದಿಗೆ ಇಳಿವಂದು 'ಹೋಗುವೆ' ಎಂದು ಅವರು ಎಲ್ಲರಿಗೂ ಕೈಮುಗಿದರು, ನಾವೆಲ್ಲರೂ ಅವರಿಗೆ ಕೈಮುಗಿದೆವು. ಕೆಲವೇ ನಿಮಿಷದಲ್ಲಿ ಶ್ರೀ ರಾಮ ಪೇಟೆಯ ಹೆಬ್ಬೀದಿಯ ದಟ್ಟಾನೆ ಯಾತಾಯಾತದಲ್ಲಿ ಪಂಜೆಯವರು ಕಣ್ಮರೆಯಾದರು.

ಪಂಜೆಯವರು ಇಳಿದು ಹೋಗುವುದೆ, ನಾವು ಮರಳಿ ಮಾಳಿಗೆಗೆ ಬಂದು, ಅವರನ್ನೇ ಕುರಿತು, ಅವರ ಗುಣಗಳನ್ನು ಅವರ ಸೌಜನ್ಯವನ್ನು, ಅವರ ಸೌಲಭ್ಯವನ್ನು, ಅವರ ವೈದುಷ್ಯವನ್ನು, ಅವರ ಸಂಭಾಷಣ ಚಾತುರ್ಯವನ್ನು ಕುರಿತು ಪ್ರಸ್ತಾವಿಸುತ್ತಿರುವಲ್ಲಿ, ಇರುಳು ೮ ಗಂಟೆಯ ಸಂದಿಗೆ ಶ್ರೀ ತೀ

ಸೇಂ. ಶ್ರೀಕಂಠಯ್ಯನವರು, ಶ್ರೀ ಡಿ. ಎಲ್. ನರಸಿಂಹಾಚಾರ್ಯರು, ಮತ್ತು ಶ್ರೀ ಅನಂತ ರಂಗಾಚಾರ್ಯರು ಮೇಲಕ್ಕೆ ಬಂದರು. ಪಂಜೆಯವರು ಈ ತನಕ ಇಲ್ಲಿ ಇದ್ದವರು ಈಗ ಹೊರಟು ಹೋದರಷ್ಟೇ ಎಂದು ಕೇಳುವುದೆ, ತಾವೂ ಆಗ್ಗೆ ಇಲ್ಲಿ ಇರಲಿಲ್ಲವಲ್ಲಾ! ಎಂದು ಅವರು ಮನವಾರಿ ಮರುಗಿದರು. ಅವರು ಏನೆಲ್ಲ ಮಾತಾಡಲೆಣಿಸಿ ಬಂದಿದ್ದರೊ, ಅದರ ಮುಕ್ಕಾಲು ಪಾಲು ಅವರ ನೆನವಿನಿಂದ ಒಸರಿ ಹೋಗಿರಬೇಕು. ಏಕೆಂದರೆ ನಮ್ಮ ಆಗಳಿನ ಭಾಷಣದ ಕೇಂದ್ರ ವಿಷಯವೂ ಪಂಜೆಯವರೇ,ನಮ್ಮ ಮಾತುಕಥೆಯಲ್ಲಿ ಸಿಂಹದ ಪಾಲೂ ಪಂಜೆಯವರಿಗೆ ತಾನೆ. ೧೦ ಗಂಟೆ ಹೊಡೆಯಲಿಕ್ಕೆ ಅವರೂ ಇಳಿದು ಹೋದರು. ಆಮೇಲೂ ನಾನೂ ಪುರಾಣಿಕರೂ ಪಂಜೆಯವರ ವಿಷಯವಾಗಿ ನಡಿಸಿದ ಮಾತುಕಥೆ ಸರಿರಾತ್ರಿಯನಕಾ ಲಂಬಿಸಿತು. ಬೆಳಗಾತ ನಾನೆದ್ದು ಮಂಗಳೂರಿನ ಬಸ್ಸಿನಲ್ಲಿ ಈಚೆಗೆ ಹೊರಟು ಬಂದೆ.

ಅಂದಿನ ಮುಖಾಮುಖಿಯಲ್ಲಿ ಸೋಜಿಗವೇನೆಂದರೆ, ಬಾಳ್ವೆಯ ಈ ಬಗಲಾಗೆ ಅಂದಿನದೇ ನನಗೆ ಪಂಜೆಯವರ ಚರಮದರ್ಶನವೆಂಬುದರ ಸುಳುಹಾದರೂ ನನ್ನ ಮನಸ್ಸಿಗೆ ಸ್ಫುರಿಸಲಿಲ್ಲ, ಅಂದಿಗೆ ೩ವರ್ಷಗಳ ಹಿಂದೆ (೧೯೩೪) ಮಂಗಳೂರಿನಲ್ಲಿ ಅವರನ್ನು ಬೀಳುಕೊಡುವಂದು ಆದ ಮೇರೆಗೆ ಅಂದು ಕರುಳೂ ನುಲಿಯಲಿಲ್ಲ. ಏಕೆಂದರೆ ಕೊನೆಯದೆಂದು ಶಂಕಿಸದ ಆಕೊನೆಯ ವಿದಾಯದಲ್ಲಿ ಅವರನ್ನು ಮತ್ತೊಮ್ಮೆ ಕಂಡೆನೆಂಬ ಆನಂದದಲ್ಲೇ ಮನಸ್ಸು ಲೀನವಾಯಿತು, ಆ ಉತ್ಸಾಹದಲ್ಲೇ ಶಂಕೆ ತೇಲಿಹೋಯಿತು.

ಆದರೆ ಅಂದಿನಿಂದ ೭-೮ತಿಂಗಳ ಕಿರುಗಾಲದಲ್ಲಿ,ಅದೇ ೧೯೩೭ರ ಅಕ್ಟೋಬರ ೨೪ನೆಯ ತಾರೀಕು (ಈಶ್ವರ ಸಂವತ್ಸರದ ಆಶ್ವಯುಜ ಬಹುಳ ಷಷ್ಠಿ)ಸೋಮವಾರದ ರಾತ್ರಿ ಪಂಜೆಯವರು ಹೈದರಾಬಾದಿನಲ್ಲಿ ಕೈಲಾಸವಾಸಿಯಾದರು. ನಮ್ಮ ತುಳುನಾಡಿನ ಕನ್ನಡಸಾಹಿತ್ಯದ'ವಿಗಡಸ್ತಂಭದೀಪ'ವಾರಿತು, ಬೆಳಕು ಬೆಳಕಿಗೆ ಸಾರಿತು. ಓಂ ಶಾಂತಿ: ಶಾಂತಿ: ಶಾಂತಿ:

* * * *

ಇವಷ್ಟೇ ಅಲ್ಲ, ಇನ್ನೂ ಇವೆ. ಆ ೪೪ ವರ್ಷಗಳಲ್ಲಿ (೧೮೯೩-೧೯೩೭)ನಾವು ಒಬ್ಬರನ್ನೊಬ್ಬರು ಕಂಡಿದ್ದ ಕೂಡಿದ್ದ ಸಂದರ್ಭಗಳು, ಒಬ್ಬರೊಂದಿಗೊಬ್ಬರು ಸಲ್ಲಾಪಿಸಿದ ವಿಷಯಗಳು. ನೀರಿನಲ್ಲಿ ಮುಳುಗಿ ಹೋಗುವಾತನಿಗೆ ಕಾಣಿಸಿಕೊಂಡು ಹೋಗುವ ಆತನ ಜೀವಮಾನದ ಘಟನೆಗಳು ಆತನು ಮೇಲಿದ್ದರೆ ಆತನ ನೆನಪಿಗೆ ಸಿಲುಕದಂತೆ, ಆ ಸಂದರ್ಭಗಳು ಈಗಲೂ ಆಗಾಗ ನನ್ನ ಕಣ್ಣ ಮುಂದೆ ಹಾದು ಹೋಗುತ್ತವಾದರೂ, ಆ ಸಲ್ಲಾಪಗಳಾದರೊ ನೆನಪಿನಿಂದ ಜಗುಳಿ ಹೋಗಿವೆ, ಇಲ್ಲವೆ ನೇರಾಗಿ ಅವಿಚ್ಛಿನ್ನವಾಗಿ ನೆನವಿಗೆ ಬಾರವು. ಕೆಲವು ನೆನವರಿಕೆಗಳ ಹಂತಿ ಹಂತಿಗಳಲ್ಲಿ ನಡುವಣ ಚಕ್ಕೆಗಳು ಎದ್ದು ಹೋಗಿ ಆ ವಿಷಯಗಳು ತ್ರುಟಿತವಾದ ಶಿಲಾಲೇಖಗಳಂತೆ ನಿರುಪಯೋಗವಾಗಿವೆ. ಮತ್ತೆ ಕೆಲವು ತೀರ ಮಾಸಿ ಹೋಗಿ ಆ ಮಟ್ಟಿಗೆ ನೆನವು ನುಣ್ಣಗಾಗಿ ಅಗಸಗಲ್ಲಿನಂತಾಗಿದೆ. ವಯಸ್ಸು ಹೋಗುತ್ತ ನೆನವು ಜರಡೆಯಂತೆ ಜಾಲಾಕ್ಷವಾಗುತ್ತದೆ. ಅದರಲ್ಲಿ ಹೊಸ ಹೊಸ ವಿಷಯಗಳನ್ನು ಹಿಡಿಸುವಂತೆ ಅವು ತಟತಟನೆ ಸ್ರವಿಸಿ ಹೋಗುತ್ತವೆ. ಹಿಂದು ಹಿಂದಣ ನೆನಹುಗಳ ತೇವ ಬಹುತೇಕವಾಗಿ ಇಳಿವಯಸ್ಸಿನಲ್ಲೂ ಬಾಳಬಹುದಾದರೂ, ಈಚೀಚೆಯವು ಹೇಗೂ ಮತ್ತುಮತ್ತಿನ ನೀರಿನಂತೆ ಎರೆದ ರಭಸಕ್ಕೇ ಸುರಿದು ಹೋಗುತ್ತವೆ. ಈ ಕಾರಣ ನೆನವಿಗೆ ಸಿಕ್ಕದವನ್ನೂ ದಕ್ಕಿದ ಒಡಮುರುಕುಗಳನ್ನೂ ಬಿಟ್ಟು ಬಿಟ್ಟು, ನೆನವರಿಸಬಲ್ಲ ಕೆಲವುಗಳ ಮಟ್ಟಿಗಾದರೂ ತೂಲಿಕೆಯನ್ನು ಹೌದೊ, ಅಲ್ಲವೊ ಎಂಬಷ್ಟು ತೆಳ್ಳಗೆ ಮುಟ್ಟಿಸಿ ಬಿಟ್ಟಿರುವೆನಷ್ಟೇ.

* * * *

ಕೊನೆಯ ಮಾತು. ಈ ನೆನವರಿಕೆಯಲ್ಲಿ ಬರೆದಿಟ್ಟ ನೆನಹುಗಳಲ್ಲಿ ವಿಷಯಗಳ ಮಟ್ಟಿಗೆ ಹೆಚ್ಚುಕುಂದುಗಳು ಇಲ್ಲವಾದರೂ, ಅಲ್ಲಲ್ಲಿ ಕಥಿಸಿರುವ ಸ್ತೋಕಮಾತ್ರವಾದ ಸಂಭಾಷಣೆಗಳಾದರೆ ಸರ್ವಥಾ ಇಲ್ಲಿ ಹೇಳಿರುವ ಮಾತುಗಳಲ್ಲೇ ನಡೆದುವಲ್ಲ. ಅವುಗಳ ಆಶಯ ಮಾತ್ರ ನೆನವಿನಲ್ಲಿ ಇದೆಯಲ್ಲದೆ, ಅವುಗಳ ಆಯಾವಂದಿನ ಅದೇ ನುಡಿಗಟ್ಟಿನ, ಅವೇ ಮಾತುಗಳ ನೆನಪಿಲ್ಲ. ಹೀಗಾಗಿ ಅವನ್ನು ಇಲ್ಲಿ ಮರುಕಳಿಸುವಲ್ಲಿ ಆಯಾ ಅವಸರದ ಭಾವಕ್ಕೆ ತಕ್ಕಂತೆ ಅವಕ್ಕೆ ಇಲ್ಲಿ ಬೇರೆ ಹೊದಿಸಬೇಕಾಯಿತು, ಆ ಬಗ್ಗೆ ಮಾತುಗಳನ್ನು ಪುನಃ ಸೃಷ್ಟಿಸಬೇಕಾಯಿತು (ಹಾಗೆ ಸೃಷ್ಟಿಸುವಲ್ಲಿ ಅಂದವನ್ನೂ ಧ್ಯಾನಕ್ಕೆ ತಂದುಕೊಳ್ಳಬೇಕಾಯಿತು.) ಹಾಗೆಯೇ ಇಂಥಾ ಸರಸ ಸಲ್ಲಾಪಗಳನ್ನು ನಿರ್ಜೀವವಾದ ಪರೋಕ್ಷ ಕಥನದಲ್ಲಿ ಪುನರುಕ್ತಿಸುವುದಕ್ಕಿಂತ, ಸಜೀವವಾದ ಪ್ರತ್ಯಕ್ಷ ಕಥನದಲ್ಲಿ ನುಡಿಸಿದರೆ ಲೇಸು ಎನಿಸಿದುದರಿಂದ, ಆ ಕಥನವನ್ನೂ ಅದರ ಸಜೀವತೆಗೆ ಒಪ್ಪತಕ್ಕಂತೆ ನಮ್ಮೊಳಗಣ ಮಾತಾಟದ ಆ ವಿಶಿಷ್ಟ ಕ್ರಮವನ್ನೂ ಬಳಸಬೇಕಾಯಿತು. ಆ ಕಾರಣ ಈ ಸಂಭಾಷಣೆಗಳ ನುಡಿಗಟ್ಟು ಕೊಂಚ ವಿಲಕ್ಷಣವೆನಿಸಿದರೆ, ಆ ಬಗ್ಗೆ ಮೆಯ್ಬೆತ್ತಿಗೆಯಬೇಕಾಗಿಲ್ಲ. ಏಕೆಂದರೆ ನಮ್ಮೊಳಗಣ ಮಾತಾಟದ ವಿಧಾನವೂ ಹಾಗೆ, ಅದರ ಸಲುಗೆಯ ಶೈಲಿಯೂ ಹಾಗೆ. ಅದೇ ನಮ್ಮೊಳಗೆ ನಡೆದು ಬಂದ ಬಳಕೆ. ಮೇಲಾಗಿ ಯಾವ ನೈಜ ಸಂಭಾಷಣೆಯಾದರೂ, ಮಾತಿನಲ್ಲಿ ಎಷ್ಟೇ ಬಡವಾಗಿರಲಿ, ಅದು ಉಟ್ಟೋ ತೊಟ್ಟೋ ಅಲ್ಲದೆ ತನ್ನ ನಿಜರೂಪದಿಂದ ಸಾಹಿತ್ಯದಲ್ಲಿ ಕಾಲೂರದು. ಅತ ಏವ ಇದೊಂದು ಕೌತುಕವೆನಿಸಲಾರದೆಂದು ಕೋರುತ್ತೇನೆ.

**ಗೋವಿಂದ ಪೈ.**

---

# ಮೂಡಬಿದಿರೆಯ ಹೊಸ ಬಸದಿಯ ಶಿಲಾ ಶಾಸನಗಳು.

(೧೯೩೭ನೆಯ ಇಸವಿಯ ಸಾಹಿತ್ಯ ಸಮ್ಮೇಳನದ ಕಾಲದಲ್ಲಿ ಪ್ರಕಟವಾದ ಪಂಚಕಜ್ಜಾಯದಿಂದ)



ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದರೆಯ ಹೊಸ ಬಸದಿಯ ಶಾಸನಗಳಿಗೆ ವಿಶೇಷ ತರದ ಮಹತ್ವವಿದೆ. ಇವು ಬಾರಕೂರು, ಉದಿಯಾವರ, ಕದರೆ ಮುಂತಾದ ಜಿಲ್ಲೆಯ ಇತರ ಭಾಗಗಳಲ್ಲಿಯ ಶಾಸನಗಳಷ್ಟು ಹಳೆಯವಲ್ಲದಿದ್ದರೂ, ತುಳುದೇಶದ ಚರಿತ್ರೆಗೆ ಅವುಗಳಷ್ಟೇ ಉಪಯುಕ್ತವಾಗಿವೆ; ಮತ್ತು ಕ್ರಿಸ್ತಶಕದ ೧೫ನೆಯ ಶತಮಾನದ ಕನ್ನಡ ಪದ್ಯ ಸರಣಿಯನ್ನು ತಿಳಿಯುವುದಕ್ಕೆ ಇವುಗಳಿಗಿಂತ ಉತ್ತಮವಾದ ಶಾಸನಗಳು ಜಿಲ್ಲೆಯ ಬೇರೆ ಕಡೆಗಳಲ್ಲಿ ಇದುವರೆಗೆ ದೊರೆತಿಲ್ಲ. ಮದರಾಸಿನ ಶಾಸನ ಇಲಾಖೆಯವರು ಸುಮಾರು ಎಂಟು ವರ್ಷಗಳ ಹಿಂದೆ ಮೂಡಬಿದರೆಯಿಂದ ಇವುಗಳ ನಕಲು ಮಾಡಿಕೊಂಡು ಹೋದರು. ಸುಮಾರು ನೂರು ವರ್ಷಗಳ ಹಿಂದೆಯೇ ಇವುಗಳ ಒಂದು ಪ್ರತಿಯು "ಮದ್ರಾಸ್ ಓರಿಯಂಟಲ್ ಲೈಬ್ರೆರಿಯ ಲೋಕಲ್ ರಿಕಾರ್ಡುಗಳ ೩೨ನೆಯ ಸಂಪುಟದಲ್ಲಿ" ಅಡಕವಾಗಿರುವ ಸಂಗತಿಯು ಹಲವರಿಗೆ ಹೊಸತಲ್ಲ. ಈ ಶಾಸನಗಳ ಪ್ರತಿಗಳನ್ನು ಮದರಾಸ್ ಶಾಸನ ಇಲಾಖೆಯ ಅಧಿಕಾರಿಗಳೂ ಓರಿಯಂಟಲ್ ಲೈಬ್ರೆರಿಯ ಅಧಿಕಾರಿಗಳೂ ನನಗೆ ನೋಡುವುದಕ್ಕೆ ಬಿಟ್ಟು ಅವುಗಳಿಂದ ಅನುವಾದ ಮಾಡುವುದಕ್ಕೆ ಅನುಮತಿಯನ್ನು ಕೊಟ್ಟುದಕ್ಕಾಗಿ ಅವರ ಉಪಕಾರಸ್ಮರಣೆಯನ್ನು ಮಾಡಿ, ಈ ಶಾಸನಗಳನ್ನು ಕುರಿತು ಎರಡು ಮಾತುಗಳನ್ನು ಹೇಳಬೇಕೆಂದಿರುತ್ತೇನೆ.

ಮೂಡಬಿದರೆಯ ಹೊಸ ಬಸದಿಯ ಗದ್ದಿಗೆಯ ಮಂಟಪದ್ವಾರದ ಇಕ್ಕಡೆಗಳಲ್ಲಿ ಮತ್ತು ಬೈರಾದೇವಿ ಮಂಟಪದ ಕಂಬದ ಮುಕ್ಕಡೆಗಳಲ್ಲಿ ಲಿಖಿತವಾಗಿರುವ ಈ ಶಾಸನಗಳಲ್ಲಿ ಪ್ರತಿ ಒಂದು ಇತರ ಜಿನ ಶಾಸನಗಳಂತೆಯೇ ಕೆಳಗಿನ ಶ್ಲೋಕದಿಂದ ಪ್ರಾರಂಭವಾಗುತ್ತದೆ:-

ಶ್ರೀಮತ್ಪರಮ ಗಂಭೀರಸ್ಯಾದ್ವಾದಾಮೋಘ ಲಾಂಛನಂ ।
ಜೀಯಾ ತ್ರೈಲೋಕನಾಥಸ್ಯ ಶಾಸನಂ ಜಿನ ಶಾಸನಂ ॥

ಅನಂತರ ಚಂದ್ರನಾಥಪರವಾದ ಮಂಗಲಾಚರಣ, ಜಂಬೂ ದ್ವೀಪ ಮೇರುಶೈಲ ಆರ್ಯಾಖಂಡ ತುಳುದೇಶ ಇತ್ಯಾದಿಗಳ ಉಲ್ಲೇಖ, ಶಾಸನಕಾಲದಲ್ಲಿದ್ದ ವಿಜಯನಗರದ ನರಪತಿಗಳ ಪ್ರಸ್ತಾಪ, ಬಸದಿಗೆ ದತ್ತಿಯನ್ನು ಬಿಟ್ಟವರ ವಂಶಾವಳಿ, ರಾಜರ ಪ್ರತಾಪವರ್ಣನ ಮೊದಲಾದ ವಿಷಯಗಳೂ ಗದ್ಯ ಪದ್ಯ ಸರಣಿಯಲ್ಲಿ ನಾಲ್ಕು ಶಾಸನಗಳಲ್ಲಿ ವರ್ಣಿತವಾಗಿವೆ. ಚಿಕ್ಕ ಚಂಪೂ ಗ್ರಂಥಗಳಂತಿರುವ ಆ ನಾಲ್ಕು ಶಾಸನಗಳ ಒಟ್ಟುಪದ್ಯ ಸಂಖ್ಯೆ ೮೫. ಆದರೆ ಪದ್ಯಗಳನ್ನು ಕಟ್ಟಿದ ಕವಿಗಳ ನಾಮಾಂಕಿತಗಳಾಗಲಿ ಅವನ್ನು ಕಲ್ಲಿನಲ್ಲಿ ಕೆತ್ತಿದ ಶಿಲ್ಪಿಗಳ ಹೆಸರುಗಳಾಗಲಿ (ಒಂದರಲ್ಲಿ ಹೊರತು) ಶಾಸನಗಳಿಂದ ವ್ಯಕ್ತವಾಗುವುದಿಲ್ಲ. ಪದ್ಯಗಳಲ್ಲಿ ಟಿಕಾರ ವಿಚಾರವನ್ನು ಮಾಡಿಲ್ಲ. ಟಿಕಾರವು ಬಹುಮಟ್ಟಿಗೆ ಪ್ರಾಸನಿಯಮದಲ್ಲಿ ಲಕ್ಷಿಸಲ್ಪಟ್ಟಿದೆ. ಶಾಸನಗಳ ಕಾಲಾವಧಿಯು ಕ್ರಿಸ್ತ ಶಕದ ೧೪೨೯ ರಿಂದ ೧೫೪೯ರ ವರೆಗಿನ ಸುಮಾರು ನೂರು ವರ್ಷ. ಈ ಲೇಖನದಲ್ಲಿ ಆ ಶಾಸನಗಳನ್ನು ಸಮಗ್ರವಾಗಿ ನಕಲುಮಾಡುವುದು ಅನಾವಶ್ಯಕವಾದುದರಿಂದ ತುಳುನಾಡಿನ ಚರಿತ್ರೆಗೂ ಕನ್ನಡ ಕವಿತಾಕ್ರಮದ ಅವಗಾಹನೆಗೂ ಸಂಬಂಧವಾದ ಪದ್ಯಗಳನ್ನು ಮಾತ್ರ ಅನುವಾದಮಾಡಿ, ಒಂದೊಂದೇ ಶಾಸನವನ್ನು ಕುರಿತು ವಿಚಾರಮಾಡುತ್ತೇನೆ. ಹಾಗೆ ಮಾಡುವ ಮೊದಲು ನಾನು ಒಂದು ಸಂಗತಿಯನ್ನು ವಾಚಕರಿಗೆ ಹೇಳಬೇಕಾಗಿದೆ. ಶಾಸನ ಕವಿಗಳು ಮೂಡಬಿದರೆಯನ್ನು ವೇಣುಪುರ, ವಂಶಪುರ ಎಂಬೀ ಹೆಸರುಗಳಿಂದ ಕರೆಯುವರೆಂಬುದನ್ನೂ, ಉತ್ತರಕನ್ನಡ ಜಿಲ್ಲೆಯ ಹೊನ್ನಾವರದಿಂದ ೧೮ ಮೈಲು ಪೂರ್ವಕ್ಕೆ ಇರುವ ಗೇರುಸೊಪ್ಪೆಗೆ ಸಂಗೀತಪುರ ಭಲ್ಲಾತಕೀಪುರ ಎಂಬ ನಾಮಾಂತರಗಳಿವೆಯೆಂಬುದನ್ನೂ, ನಗಿರ ರಾಜ್ಯದ ರಾಜಧಾನಿಯಾಗಿದ್ದ ಈ ಗೇರುಸೊಪ್ಪೆಯಲ್ಲಿ ಜೈನರಾಜರು ವಿಜಯನಗರದ ನರಪತಿಗಳ ಮಾಂಡಳಿಕರಾಗಿದ್ದು, ಕಾಲಾನಂತರ ಸ್ವತಂತ್ರರಾಗಿ ಆಳಿ ಕೆಳದಿ ನಾಯಕರ ಕಾಲದಲ್ಲಿ ಹೆಸರಡಗಿಹೋದರೆಂಬುದನ್ನೂ ಲಕ್ಷ್ಯದಲ್ಲಿಟ್ಟರೆ, ಈ ಶಾಸನ ಪದ್ಯಗಳಿಗೆ ಬೇರೆ ಟಿಪ್ಪಣಿಗಳನ್ನು ಕೊಡುವ ಆವಶ್ಯಕತೆ ಇರಲಾರದು.

**Iನೆಯ ಶಾಸನ:–** ಇದು ಬಸದಿಯ ಗದ್ದಿಗೆ ಮಂಟಪ ದ್ವಾರದ ಬಡಗು ಗೋಡೆಯಲ್ಲಿ ಬಲಗಡೆ ಇದೆ. ಚಂದ್ರಪ್ರಭಪರವಾದ ನಾಂದಿಶ್ಲೋಕದ ನಂತರ ಅದರಲ್ಲಿ ಹೇಳಿದ ತುಳುನಾಡಿನ ವರ್ಣನೆ ಹೀಗಿದೆ:–

"ಸಾರತರ ದ್ರುಮತತಿಯಿಂ ಪರಿಶೋಭಿಪ ಗೋಪ್ರತಾನದಿಂ
ಕೀರ ಮರಾಳ ಸಾರಸದಿನೊಪ್ಪುವ ನಂದನ ಷಂಡದಿಂ ಪಯಃ
ಪೂರ ಸರಸ್ಸರೋಜವನದಿಂ ಬಿನದಕ್ಕೆಡೆಯಾದ ತಾಣದಿಂ
ದಾರ ಮನಕ್ಕೆ ಮಾಡದೊಲವಂ ತುಳುದೇಶಮನೇಕ
ದೇಶದೊಳ್

ಆ ತುಳುದೇಶದಲ್ಲಿ:

"ಚಲದೂರ್ಮಿವ್ರಾತಜಾತ ಪ್ರಹರಣ ರಣತ್ಪದ್ವಾರ್ಧಿಯಿಂ
ಮುಂದೆ ಸಾಲಂ
ಬಳಸಲ್ ನಾನಾಮಣಿಪ್ರಸ್ಫುರಿತ ಪರಿವೃಢಾಗಾರದಿಂ ವಾರನಾರೀ
ಕುಲದಿಂ ಸ್ವರ್ಣಾದಿ ಪೂರ್ಣಾಪಣಗಣದಿನಣಂ ಶೋಭಿಕುಂ
ಮಂಗಲೂರಾ
ಸ್ಥಳದೊಳ್ ವ್ರೀಹ್ಯಾದಿ ಸಸ್ಯೋತ್ಕರುಷ ಹರುಷಿತಾತ್ಮೀಯ
ಪೌರಪ್ರತಾನಂ" ॥

"ಪುರವೊಪ್ಪಿಪ್ಪುದು ವಂಶಮೆಂಬ ಪೆಸರಿಂ ಬಾಹ್ಯಪ್ರದೇಶಂ
ಗಳೊಳ್
ವರಶಾಲೇಯುದಿಸಿಕ್ಷುರಾತಟದಿನಾರಾಮಂಗಳಿಂ ಸುತ್ತಿದಾ
ಪರಿಖಾಂತಃ ಪರಿಧಿಪ್ರಕೋಷ್ಠಗಳಿನುದ್ಯತ್ಕೇತನವ್ರಾತದಿಂ
ದುರು ಜೈನಾಲಯ ರಮ್ಯಹರ್ಮ್ಯಚಯದಿಂ ಪುಣ್ಯಾಂಗನಾ
ಸಂಗದಿಂ" ॥

"ಘನ ವಕ್ಷೋರುಹ ಹಾರಭಾರ ವಿಚಲನ್ಮಧ್ಯಂ ಪುನಃ ಪ್ರೀತರೊಂ
ದನುರಾಗಕ್ಕೆಡೆಯಾಗೆ ಸಂಚರಿಪ ನಾರೀವೃಂದದಿಂ ಸಾರ ಕಾ-
ವ್ಯನವಾರ್ಥಾಮೃತ ಸೇವೆಯಿಂ ತಣಿದ ಕಾವ್ಯ ಪ್ರೌಢರಿಂ ರತ್ನಕಾಂ
ಚನ ಚೀನಾಂಬರ ವಿಕ್ರಯ ಕ್ರಯಿಕರಿಂ ಚೆಲ್ವಾದುದೇಂ
ತತ್ಪುರಂ" ।

"ಅಂತಾಪುರವಾಸ್ತವ್ಯರ್ । ಕಂತುಗೆ ರೂಪಿಂದೆ ಧನದಗಂ
ಸಿರಿಯಿಂದ
ತ್ಯಂತ ವಿತರಣದಿನಾ ದಿನ । ಕಾಂತ ತನುಜಂಗೆ ಮಾಡುವರ್
ಕೌತುಕವಂ" ॥

"ಬಾಲಕರೆಲ್ಲರುದ್ಗ ಜಿನ ಧರ್ಮರತರ್ ವರದಾನ ಪೂಜೆಯೊಳ್
ಲೀಲೆಯಿನಿರ್ಪುಪಾಸಕರನಿಂದ್ಯ ಜಿನೋದಿತ ಶಾಸ್ತ್ರಶಾಲಿಗಳ್
ಬಾಲೆಯರಾತ್ಮನಾಥರ್ಗನುಕೂಲೆಯರಾಗಿರುತಿರ್ಪರೆಂದೊಡಾ
ನಾಲಗೆಯಾರಿಗುಂಟು ಪೊಗಳಲ್ ನೆರೆ ವೇಣುಪುರ ಪ್ರಭಾವಮಂ"

"ವಿಜಯರಾಯ ಕ್ಷಿತೀಶಾತ್ಮಜಾತನಾದ" ದೇವರಾಯನ ಮಗನಾದ ಪ್ರೌಢದೇವರಾಯಂ "ಸುರಲೋಕೇಶ್ವರ ವೈಭವಂ ಧರಿಸಿರಲ್ ತದ್ರಾಜ್ಯಮಂ ಪೂಜ್ಯಮಂ," ಆತನ "ಮಹಾ ಪ್ರಧಾನ ಪೆರುಮಾಳ ದೇವದಂಡನಾಯಕರು ಸಮುಸ್ತ ರಾಜ್ಯಮಂ ಪ್ರತಿಪಾಲಿಸುವ ಕಾಲದಲ್ಲಿ ಶ್ರೀ ಪೃಥ್ವೀಕಾಂತೆಗೆ ಮಂಗಲಾಭರಣಮೆನಿಸಿದ ಮಂಗಲೂರ ರಾಜ್ಯಮಂ ನಾಗ ಮಂಗಲದ ದೇವರಾಜೊಡೆಯರು ಆಳುತ್ತಿರ್ದ ಶಕ ನೃಪಕಾಲ ೧೩೫೯ನೆಯ ಸೌಮ್ಯ ಸಂವತ್ಸರದ ಮಾಘ ಶು. ೫ಯು ಗುರುವಾರದಲ್ಲು (ಕ್ರಿಸ್ತಶಕ ೧೪೩೦ ಜನವರಿ ೨೯,)

"ವೇಣುಪುರದ ಎಂಟು ಪ್ರಜೆ ಸೆಟ್ಟಿಗಾರರು ನಾಲ್ವರಿಳಮೆಗೊಳಗಾದ ಸಮಸ್ತ ಹಲರು ದೇವರಾಯ ಮಹಾರಾಯರ ನಿರೂಪದಿಂ ಅಭಿನವ ಚಾರುಕೀರ್ತಿ ಪಂಡಿತ ದೇವರುಗಳಿಗೆ ಚೈತ್ಯಾಲಯ ನಿರ್ಮಾಣಾರ್ಥವಾಗಿ ಕೋಟೀಶ್ವರದಲ್ಲಿ ಶಾಲಿಕೆನಾಡು ಚವುಟರು ಮುಖ್ಯವಾದ ಅರುವರು ಬಲ್ಲಾಳುಗಳ ಸಹಾಯದಿಂ ತ್ರಿಭುವನ ಚೂಡಾಮಣಿಯೆಂಬ ಮಹಾಚೈತ್ಯಾಲಯಮಂ ಜಗದಾಶ್ಚರ್ಯಮಪ್ಪಂತು ಮಾಡಿಸಿದರ್".

ಈ ಚೈತ್ಯಾಲಯವನ್ನು ಮೂರು ಪದ್ಯಗಳಲ್ಲಿ ಬಣ್ಣಿಸಿ ಶಾಸನವು ಹೀಗೆ ಮುಂದುವರಿಯುತ್ತದೆ:-

"ಆ ಮೂಡಬಿದರೆಯ ಹಲರು ತ್ರಿಭುವನ ಚೂಡಾಮಣಿ ಚೈತ್ಯಾಲಯಕ್ಕೆ ಶ್ರೀ ಚಂದ್ರಪ್ರಭತೀರ್ಥೇಶ್ವರರ ಪರವೋದಾರಿತ ದಿವ್ಯ ಮೂರ್ತಿಯಂ ಕಂಚಿನಿಂದಷ್ಟ ಮಹಾ ಪ್ರತಿಹಾರೀ ಸಮೇತವಾಗಿ ಕರಮೆಸೆವಪ್ಪಂತು ನಿರ್ಮಾಪಿಸಿದರ್."

ದಿವ್ಯಮೂರ್ತಿಯನ್ನು ವರ್ಣಿಸುವ ಮೂರು ಪದ್ಯಗಳ ನಂತರ ಹೀಗಿದೆ:—

"ಮತ್ತಮಾ ಪ್ರೌಢದೇವರಾಯ ಮಹಾರಾಯರುಂ ಸಮಸ್ತ ರಾಜ್ಯಮಂ ಪ್ರತಿಪಾಲಿಸುವ ಕಾಲದಲ್ಲಿ ಅವರ ಅಜ್ಞಾಧಾರಕರುಮಪ್ಪಗಣಪಂಣೊಡೆಯರು ಮಂಗಲೂರು ರಾಜ್ಯವನ್ನಾಳುತಿರ್ದ ಶಾಲಿವಾಹನ ಶಕ ವರ್ಷ ೧೩೭೩ನೆಯ ಪ್ರಜೋತ್ಪತ್ತಿ ಸಂವತ್ಸರದ ವೈಶಾಖ ಶುದ್ಧ ೭ಯು ಗುರುವಾರದಲ್ಲು ತ್ರಿಭುವನ ಚೂಡಾಮಣಿಯ ಮುಖ ಮಂಟಪಮಂ..... ಮಾಡಿಸಿದರಾ ಭವ್ಯ ಜನಂಗಳಾರೆಂದೊಡೆ" —

ಮೂಡಬಿದರೆಯ ಹೊಸ ಬಸದಿಯನ್ನು ಕ್ರಿಸ್ತಶಕದ 1430ರಲ್ಲಿ ಮಾಡಿಸಿದರೂ, ಅದರ ಮುಖಮಂಟಪದ ಕೆಲಸವು ಕ್ರಿಸ್ತಶಕದ 1451ನೆಯ ಎಪ್ರಿಲ್ 7ರಲ್ಲಿ ಜರಗಿತು. ಈ ಶಾಸನದ ವರ್ಷವು ಅದೇಯಾಗಿರಬೇಕು. ಈ ಮುಖ ಮಂಟಪವನ್ನು ಮಾಡಿಸಿ, ಪುಣ್ಯವನ್ನು ಸಂಪಾದಿಸಿಕೊಂಡ ಭವ್ಯಜನಗಳನ್ನು ಹೆಸರಿಸಿ, ಈ ಶಾಸನವು ಮುಗಿಯುತ್ತದೆ. ಈ ಭವ್ಯಜನಗಳೆಲ್ಲಾ ಸೆಟ್ಟಿಗಳಾದುದರಿಂದ, ಹೊಸಬಸದಿಗೆ ಸೆಟ್ಟಿಬಸದಿ ಎಂಬಿರುವ ಹೆಸರು ಚೆನ್ನಾಗಿ ಒಪ್ಪುತ್ತದೆ. ಆ ಜನಗಳ ಹೆಸರುಗಳು ಹೇಳತಕ್ಕವಾಗಿವೆ—

ಕಕ್ಕೆ ದೇವರುಶೆಟ್ಟಿಯರಾದ ಚಳ್ಳಶೆಟ್ಟಿ, ಸೇನಾಪತಿ ಬೆಂಜಣ ದೇವಶೆಟ್ಟಿ, ಬೆಟ್ಟಕೆರೆಯ ಶಾಂತಿಶೆಟ್ಟಿ, ಮುಂಡೆಕಾಂತ ಶೆಟ್ಟಿ, ಯದಮ್ಮೆಂದಶೆಟ್ಟಿ, ಬಾಣತ್ತಿಮ್ಮೆಂದಶೆಟ್ಟಿ, ಆಳುವ ನಾರಾಯಣಶೆಟ್ಟಿ, ಕುಡವು ಉತ್ತಮಶೆಟ್ಟಿ, ಹೆಗ್ಗಡೆ ದೇವಶೆಟ್ಟಿ, ಬಿಳಿಯ ಮ್ಯೆಂದಶೆಟ್ಟರ ಅಳಿಯಂದಿರು, ಕಾಜವ ದೇವಶೆಟ್ಟಿ ಗುಮ್ಮಟಶೆಟ್ಟಿ, ನೊಟದ ಚೌಳಿಶೆಟ್ಟಿ, ಭಂಡಾರಿ ಕಾಮದೇವ ಶೆಟ್ಟಿ, ಕಕ್ಕೆ ಕಾಮನಶೆಟ್ಟಿ, ನಾರಾವಿ ಮ್ಯೆಂದಶೆಟ್ಟಿ, ಅಜಳಿ ಕೋಟಿಶೆಟ್ಟಿ, ಬಂಗ ಬ್ರಹ್ಮಶೆಟ್ಟಿ, ಕುರಿಕಾರ ದೇವರಶೆಟ್ಟಿ, ಕೊಂಡೆದೇವತಣ್ಣ, ಸೆರಮುಂಡೆ ಪಾಂಡಿಶೆಟ್ಟಿ, ನಂದಕುಜುಂಬ

ಶೆಟ್ಟರ ಅಳಿಯಂದಿರು, ಕಕ್ಕೆದಾಸಶೆಟ್ಟಿ ಅಳಿಯಂದಿರು, ಶೆಟ್ಟಿ ಪುರದಶೆಟ್ಟಿ ಅಳಿಯಂದಿರು, ಪುಂಜ ಪೊಸಬು ಶೆಟ್ಟಿ, ಚೌಕಿ ದೇವರುಶೆಟ್ಟಿ, ನಾರಾವಿ ಬ್ರಹ್ಮದಾಸಶೆಟ್ಟಿ ಇರವಿ ದೇವರಶೆಟ್ಟಿ, ಬಿರುಮಣಿತಿಕಾರಿ, ನಾರಾವಿ ಪದುಮಣ್ಣ ಶೆಟ್ಟಿ, ಕಾಜವ ಬಿರುಮಣಶೆಟ್ಟಿ, ನಾರಾವಿ ಸಾಂತುಶೆಟ್ಟಿ, ಕುಡೆರು ಬಾಲಮ್ಮ ಶೆಟ್ಟಿ, ಬಾಣಸಿ ಪೈವಶೆಟ್ಟಿ, ಕಾಜವ ಚೌಳಶೆಟ್ಟಿ, ಮಲೆಯ ಆದಣಶೆಟ್ಟಿ, ಬೆಟ್ಟಿಗರೆ ವರ್ಧಮಾನಶೆಟ್ಟಿ, ನೆಲ್ಲಿ ದೇವರಶೆಟ್ಟಿ, ವಾಲಪಾಡಿ ದೇವರಶೆಟ್ಟಿ, ಬೆಟ್ಟಿಗರೆ ಕೋಟಿಶೆಟ್ಟಿ, ಶೀನಪ್ಪ ದೇವರಶೆಟ್ಟಿ, ಮಂಜುಶೆಟ್ಟಿ, ತೊಲಾರಿ ದೇವರಶೆಟ್ಟಿ. ಆತನ ಅಳಿಯ ಕುದುರೆ ದೇವಣ್ಣಶೆಟ್ಟಿ, ಆಯಂತ ಪಾಂಡಿ ಶೆಟ್ಟಿ ಆತನ ಅಳಿಯ ಕಾಂತಣ್ಣಶೆಟ್ಟಿ, ನಾರ್ಯ ಕಡಂಬಶೆಟ್ಟಿ, ಮಹೇಶಶೆಟ್ಟಿ, ನಂದ ದೇವರಶೆಟ್ಟಿ, ಆತನ ಅಳಿಯ ಬುಟ್ಟಿ ಕಾಂತಣ್ಣಶೆಟ್ಟಿ, ಕೊಂಡೆ ಕಾಂತಣ್ಣಶೆಟ್ಟಿ, ಸಾಲ್ಗಿ ಕಾಂತಣ್ಣ ಶೆಟ್ಟಿ, ಅಮಚಕಾಂತಣ್ಣಶೆಟ್ಟಿ, ಬಾಣತಿ ದೇವರಶೆಟ್ಟಿ ಸೊಸೆ ಕರ್ಪೂರಶೆಟ್ಟಿ, ಭಂಡಾರಿ ದೇವಣ್ಣ ಶೆಟ್ಟಿಯವರ ತಾಯಿ ಬಾಲೆ ಮುದ್ದುಶೆಟ್ಟಿ, ಹಿತ್ತಿಲ ಕುಂದಶೆಟ್ಟಿ ಅಳಿಯಂದಿರು ಮಲತಪ ಹುಮ್ಮೈಶೆಟ್ಟಿ, ಅವರ ತಮ್ಮ ದೇವರುಶೆಟ್ಟಿ, ಹಿತ್ತಿಲ ಕಂದಿ ಶೆಟ್ಟಿ ಅಳಿಯ ಚೌಟ ದೇವರು ಶೆಟ್ಟಿ, ಮುದ್ದ ಶೆಟ್ಟಿ ಯಮಗ ಮಾರ್ಕಾಂಡ ಶೆಟ್ಟಿ, ಎಳಮೆಯನ ರಂಗ ಶೆಟ್ಟಿ, ಆಯಿರಿ ನಾರ್ಣಶೆಟ್ಟಿ,ನೊಪ್ಪದ ಮಂಜಂಣ ಶೆಟ್ಟಿಯ ಮಕ್ಕಳು ದೇವರುಶೆಟ್ಟಿ, ಕೇಶವಶೆಟ್ಟಿ, ತಂಮಿಟ್ಟಿಯ ಮಗ ಮಲ್ಲುಶೆಟ್ಟಿ, ಉಳಿರಿ ಕಾಂತಣ್ಣಶೆಟ್ಟಿಯ ಮಕ್ಕಳು ಬ್ರಹ್ಮಶೆಟ್ಟಿ, ಶೆಟ್ಟಿ ಕೋಟ್ಯಣ್ಣಶೆಟ್ಟಿ, ಉಳಿರಿ ಪದುಮಶೆಟ್ಟಿ ಅಳಿಯ ಬ್ರಹ್ಮಶೆಟ್ಟಿ.

**IIನೆಯ ಶಾಸನ**:- ಈ ಶಾಸನವು ಅದೇ ಮಂಟಪದ್ವಾರದ ಬಡಗುಗೋಡೆಯ ಎಡಭಾಗದಲ್ಲಿದೆ. ಇದರಲ್ಲಿ ಒಟ್ಟು ಳಳ ಪದ್ಯಗಳಿವೆ. ಮೊದಲನೆಯ ಪದ್ಯವು "ಶ್ರೀ ಚಂದ್ರನಾಥಂ ಕೊಡುಗಭಿಮತಮಂ ಭೈರವಕ್ಷ್ಮಾಪಗೆಂದುಂ" ಎಂಬ ಚರಣ ದಿಂದ ಅಂತ್ಯವಾಗುತ್ತದೆ. ಈ ಭೈರವರಸನು ಯಾರೆಂಬುದನ್ನು ಮುಂದೆ ನಿಷ್ಕರ್ಷೆ ಮಾಡಿದ್ದೇನೆ. ಮಂಗಲಾಚರಣದ ಹಿಂದೆ ಬರುವ ೯ಪದ್ಯಗಳಲ್ಲಿ 1ನೆಯ ಶಾಸನದಲ್ಲಿ ವಿಸ್ತರಿತವಾದಂತೆ ಯೇ ತುಳುದೇಶದ ಕೀರ್ತಿ, ವೇಣುಪುರ ಜನಗಳ ನಡತೆ, ಅಭಿನವ ಚಾರುಕೀರ್ತಿಗಳ ಆಜ್ಞಾನುಸಾರವಾಗಿ ಹಲರು ಮಾಡಿಸಿದ 'ತ್ರಿಭುವನ ಚೂಡಾಮಣಿ' ಎಂಬ ಬಸದಿಯ ನಿರ್ಮಾಣ, ಇತ್ಯಾದಿ ವಿಷಯಗಳು ಅಡಕವಾಗಿವೆ. ಮುಂದೆ ಗೇರುಸೊಪ್ಪೆಯೇ ರಾಜಧಾನಿಯಾಗಿದ್ದ ನಗಿರರಾಜ್ಯವು "ತುಳು ದೇಶಮೆಂಬ ಕಾಂತೆಯ ವಿಳಸನ್ಮುಖ ಕಮಲಕೆಸೆವತಿಲಕಮೆನಿಪ್ಪಾ ಚೆಲುವಂ ತಳೆದ" ವರ್ಣನೆಯಿದೆ.

**"ಸರದಿಂ ಪುಷ್ಕರದಿಂ ಸರಿಪ್ರತತಿಯಿಂ ಮಾಕಂದ ಚೆಂದೆಂಗಿನಿಂ**
**ಪರಪುಷ್ಪಭ್ರಮರಂಗಳಿಂ ಕಳಮೆ ಸತ್ಕೇದಾರ ಸಂಘಾತದಿಂ**
**ಗಿರಿಯಿಂ ನಿರ್ಝರದಿಂ ಮಡಂಬಕುಲದಿಂ ಖೇಡಂಗಳಿಂ ಖರ್ವಡೋ**
**ತ್ಕರದಿಂ ಗ್ರಾಮದಿನೇನಮೊಪ್ಪುಗು ನಗಿರ್ ತಾನೆಂಬ ಸನ್ನಾಮದಿಂ**
**ಇಂತೆಸೆವ ನಗಿರರಾಜ್ಯದ ಮಧ್ಯಪ್ರದೇಶದೊಳ್**
**"ಬಳಸಿರ್ದೊಪ್ಪುವ ನಂದನಾವಳಿಗಳಿಂ ಕಾಸಾರ ನೀರೇಜದಿಂ**
**ಕಳಧೌತೋಜ್ವಲ ಸಾಲಕೊತ್ತಲಗಳಿಂದಟ್ಟಾಲ ಜಾಲಂಗಳಿಂ**
**ವಿಲಸದ್ಗೋಪುರದಿಂ ಸುಹರ್ಮ್ಯಚಯದಿಂ ಶ್ರೀ ಜೈನಗೇಹಂಗಳಿಂ**
**ಚೆಲುವಂ ತಾಳ್ದಿದ ಗೇರುಸೊಪ್ಪೆನಗರಂ ಕೊಂಡಾಡಲಾರ್ಬಲ್ಲರೈ"**

ದಕ್ಷಿಣ ಕನ್ನಡ ಜಿಲ್ಲೆಯ ಐತಿಹಾಸಿಕ ಪುರುಷರಲ್ಲಿ ಹಲವು ಮಂದಿ ಭೈರರಸರು ಇರುವುದರಿಂದ, ಗೇರುಸೊಪ್ಪೆ ಯಲ್ಲಿ ರಾಜ್ಯವಾಳಿದ ಈ ಭೈರವನೃಪೇಂದ್ರನು ಯಾರೆಂಬ ಪ್ರಶ್ನೆಯು ವಿಚಾರಣೀಯವಾಗಿದೆ. ಈತನು ಕ್ರಿಸ್ತಶಕದ 1432ರಲ್ಲಿ ಗೋಮಟೇಶ್ವರನನ್ನು ಕಾರ್ಕಳದಲ್ಲಿ ಸ್ಥಾಪಿಸಿ ಪ್ರಸಿದ್ಧಿಪಡೆದ ಭೈರರಸನೂ ಅಲ್ಲ, ಕ್ರಿಸ್ತಶಕದ 1584ರಲ್ಲಿ ಚತುರ್ಮುಖ ಬಸದಿಯನ್ನು ಅಲ್ಲಿ ಪ್ರತಿಷ್ಠಿಸಿ ಹೆಸರುವಾಸಿ ಪಡೆದ ಇಮ್ಮಡಿ ಭೈರರಸನೂ ಅಲ್ಲ. ಈತನ ಮನೆತನವೇ ಬೇರೆ. ಕಾರ್ಕಳದ ಭೈರರಸರು ಶಿವಮುಗ್ಗಿ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಹುಮ್ಮುಚ್ಚದಿಂದ ಬಂದವರು; ಗಟ್ಟದ ಮೇಲೆ, ಗಟ್ಟದಕೆಳಗೆ ಇರುವ ಕಳಸ ಕಾರ್ಕಳ ರಾಜ್ಯವನ್ನು ಆಳಿದವರು; 'ಅರಿರಾಯರ ಗಂಡದಾವಣಿ' ಎಂಬ ಬಿರುದು ಪಡೆದವರು; ಕಾಳಲೆ ದೇವಿಯಮಗ ವೀರಪಾಂಡ್ಯನ (ಕ್ರಿ. ಶ. 1291)ಸಂತತಿಯವರು. ಆದರೆ ಮೂಡುಬಿದರೆಯ ಶಾಸನದ ಈ ಭೈರವನು ನಗಿರರಾಜ್ಯದ ಅರಸನಾಗಿ ಗೇರುಸೊಪ್ಪೆಯಲ್ಲಿ ಇದ್ದವನು, ಚಂದ್ರವಂಶದವನು, "ರಿಪು ಕಟಕ ಚೂರಕಾರ, ಸಾಳುವದಟ್ಟ ವಿಬಾಡ, ಸಿಂಗಣದಟ್ಟ ವಿಬಾಡ, ಮಲವರ ಗಂಡ" ಎಂಬೀ ಬಿರುದುಗಳುಳ್ಳವನು. ಆತನ ಅನ್ವಯ ವಿಸ್ತರಣೆಯು ಈ ಶಾಸನದಲ್ಲಿದೆ.

"ಮಲವರ ಗಂಡರುಂ ಕವಿಮುಖಾಂಬುಜ ಹಸ್ತರನೇಕ ಭೂಪರುಂ ಸಲೆ ನಗಿರಾಳ್ದು ಪೋದರವರಿಂ ಬಳಿಕಂ ಕಲಿ ಹೊನ್ನ ಭೂಪಗೆ" ಕಾಮನೃಪನು ಅಳಿಯನಾದನು. ಕಾಮನ ಅಳಿಯ ಮಂಗರಸ, ಮಂಗರಸನ ಅಳಿಯ ಹೈವ, ಹೈವನ ಜಾಮಾತೃ ಸಂಗಮ, ಸಂಗಮನ ಅಳಿಯ ಕೇಶವ, ಕೇಶವನ ಅಳಿಯ ಸಂಗಮ, ಸಂಗಮನ ಸೋದರಿ ಲಕ್ಷ್ಮೀಮತಿ ಯನ್ನು ಚಂದ್ರಗುತ್ತಿಯ ನಾಡಿನ ತಿಳುವಳ್ಳಿಪುರದ ಅಧೀಶ್ವರ ನಾದ ಭೈರವ ಭೂಪನ ತಮ್ಮ ಕಾಯಪ್ಪನಿಗೆ "ವಿವಾಹವಿಧಿ ಯಿಂ ಕೊಡಲಾ ಕಾಯಪ್ಪ ಭೂಪಾಲಂಗಂ ಲಕ್ಷ್ಮೀಮತಿ ದೇವಿಗಂ ಭೈರವ ಭೂಪಾಲನುಂ, ಚಿಕ್ಕ ಭೈರರಸನುಂ, ತಿಪ್ಪ ರಸನಂ, ಅಂಬಿರಾಯನುಂ, ಕೇಶವದೇವಿ, ಸಿರಿಯಳಸಿಯ

ರೆಂಬ ಅಪತ್ಯರಾದರವಱೊಳು ಭೈರವ ಮಹೀಪಾಲಂಗೆ ಸಂಗಮನೃಪಾಲಂ ನಿಜಕುಮಾರಿ ಮಾಣಿಕ ದೇವಿಯಂ ವಿವಾಹಮಂ ಮಾಡಿಕುಡೆ, ಮತ್ತಮಾ ಕಾಯಪ್ಪರಸಂ ತನ್ನ ಸಹೋದರಿ ಬೊಮ್ಮರಸಿಯ ಕುಮಾರಿ ರೂಪಲಾವಣ್ಯದಿಂ ಚೆಲುವೆಯಾಗಿದ್ದ ನಾಗಲದೇವಿಯಂ ಮಗಲೋತ್ಸಾಹದಿಂ ಕುಡಲಾ ಭೈರವ ಮಹೀಪಾಲಂ ಮಾಣಿಕ ಮಹಾದೇವಿ ನಾಗಲದೇವಿಯರೆಂಬ ಪಟ್ಟ ಮಹಾದೇವಿಯರಿಂದನೇ ಕಾಂತ:ಪುರಂಧ್ರಿಯರೊಳ್ ಕೂಡಿ, ನಿಜರಾಜ್ಯಭಾರಧುರಂಧರನಾಗಿ ಸುಖಸಂಕಥಾವಿನೋದದಿಂ ರಾಜ್ಯಂಗೈಯುತ್ತಿರ್ದ್ದು"

'ಶಶಿರವಿಯನ್ನರಪ್ಪವರ ಸಂಗಮನಂ ಗುರುರಾಯನೆಂಬರಂ
ಪೆಸರ್ವಡೆದಾ ತನೂಭವರ ತಾಂ ಪಡೆದಿರ್ದನತಿ ಪ್ರಮೋದದಿಂ'

ಈ ಭೈರವ ರಾಜನಿಗೆ ಸಂಗಮ, ಗುರುರಾಯ ಎಂಬ ಇಬ್ಬರು ಗಂಡುಮಕ್ಕಳು ಅಲ್ಲದೆ ಲಕ್ಷ್ಮೀದೇವಿ ಮತ್ತು ಪಂಡಿತ ದೇವಿ ಎಂಬಿಬ್ಬರು ಹೆಣ್ಣುಮಕ್ಕಳೂ ಇದ್ದರೆಂದು ಇದೇ ಶಾಸನದ ಕಡೆಯ ಪದ್ಯದಲ್ಲಿ ಹೇಳಿದೆ. ಈ ನಾಲ್ವರಲ್ಲಿ ನಾಗಲ ದೇವಿಯ ಮಕ್ಕಳು ಯಾರು, ಮಾಣಿಕ ದೇವಿಯ ಮಕ್ಕಳು ಯಾರು ಎಂಬದು ಮಾತ್ರ ಸ್ಪಷ್ಟವಾಗುವುದಿಲ್ಲ. ಒಂದು ಕಡೆಯಲ್ಲಿ "ಲಲನಾರತ್ನಂ ಪ್ರಿಯಳ್ ನಾಗರಸಿಯಣುಗಿನಾತ್ಮೋದ್ಭವಂ ಸಂಗಮಾಖ್ಯಂ" ಎಂದುಹೇಳಿ, ಶಾಸನಕಾರನು ಗುರುರಾಯನನ್ನು ಅಲ್ಲಿ ಉಲ್ಲೇಖಿಸದೆ ಇದ್ದುದರಿಂದ ಸಂಗಮನೇ ಭೈರವನಿಗೆ ನಾಗಲಾದೇವಿಯಿಂದ ಜನಿಸಿದವನೆಂಬದಾಗಿ ಊಹಿಸಬೇಕಾಗಿದೆ.

ಈತನ ಬಿರುದುಗಳಲ್ಲಿ 'ಸಿಂಗಣ ದಟ್ಟವಿಭಾಡ, ಎಂದಿದೆ. ಈ ಸಿಂಗಣನು ಕ್ರಿಸ್ತಶಕ 1436-1444ರ ವರೆಗೆ ವಿಜಯನಗರದ ದೇವರಾಯನ ಡಣಾಯಕನಾಗಿದ್ದ ಸಿಂಗಣ ನಲ್ಲ. ವಿರೂಪಾಕ್ಷನ ಕಾಲದಲ್ಲಿ ಆತನ (1465-1479) ಡಣಾಯಕನಾಗಿದ್ದ ಸಿಂಗಣ್ಣ ನಿರಬಹುದು.

ಈತನ ಪ್ರತಾಪವೂ ಧರ್ಮಶ್ರದ್ಧೆಯೂ ಶಾಸನದಲ್ಲಿ ಹೀಗೆ ವರ್ಣಿತವಾಗಿವೆ:-

ಕಡಲುರೆ ತುಳ್ಕೆ ದಿಕ್ಪತಿಗಳಳ್ಕೆ ದಿಶಾಗಜ ಮುಳ್ಕೆ ಭೂತಳಂ
ಜಡಿಯೆ ಕುಲಾಚಲಂ ಕೆಡೆಯೆ ವೈರಿನೃಪಾಲರ ಹೃದ್ಘಟಂಗಳಂ
ಕೊಡೆಯೆ ಧಡಂ ಧಡಂಧಡ ಧಡೆಂದುದು ಭೂರಿ ಗಭೀರಭೇರಿ ಧೀಂ
ಕಿಡೆ ವಿಜಯ ಪ್ರಯಾಣದೊಳು ಭೈರವಭೂವರನೇಂಪ್ರತಾಪಿಯೋ

ಮರೆವುಗೆ ಕಾವರೆಂಬರಿದು ಗಣ್ಯವೆ ನಿರ್ಮ್ಮರ ಪುತ್ತು ಪುಲ್ಗಳುಂ
ಮರೆವುಗೆ ಕಾಯುವೇ ದಿಟ ದರಿದ್ರರ ಕೋಟಲೆಗಳ್ಕೆ ಬಳ್ಕಿ ಬಂ
ದರನುರೆಕಾಯ್ದು ತನ್ನಸಮನಾಗಿಯೆ ಮಾಳ್ಪಮಹಾತ್ಮ್ಯ ಗೀತತಾ
ನೆರೆಯನೆನುತ್ತ ಸಾರುವುದು ಭೈರವರಾಜನ ಕೀರ್ತಿ ಡಂಗುರಂ

ಅರಿಭೂಪಾಲರ ದೇಶಮಂ ನಗರಮಂಭಂಡಾರಮಂಕೊಂಡು ಸಂ
ಗರದೊಳ್ ಜೀವವನಿತ್ತೊಡಾರಿಪು ನೃಪರ್ ದೇಶಾಂತರಂ ಪೋಗಿ ಸಂ
ಚರಿಪರ್ ದಂಡಕಮುಂಡಲಾಜಿನಜಟಾ ಭಸ್ಮಾಂಗದಿಂದಾವಗಂ
ತಿರಿವರ್ ಭೈರವ ಭೈರವೆಂದು ಭಯದಿಂ ಶ್ರೀ ಭೈರವ ಕ್ಷೋಣಿಪಾ

"ಅವಗನ್ನದಾನಮನಖಂಡಿತ ಮಾಡಿಯೆಸರ್ವ ಜೀವಮಂ
ಕಾವಭಯ ಪ್ರದಾನದೊಳೆ ರಕ್ಷಿಸಿ ರೋಗದೊಳೊಂದಿದರ್ಗೆ ಸಂ
ಜೀವನಮಪ್ಪ ಭೇಷಜಗಳಂ ಬಿಡದಿತ್ತುಸಮಸ್ತ ಶಾಸ್ತ್ರ ನಾ
ನಾವಿಧ ದಾನಮಂ ಮುದದಿ ಮಾಳ್ಪನು ಭೈರವ ಭೂವರೇಶ್ವರಂ"

"ಸುರರಾಜಂ ಪಂಚಕಲ್ಯಾಣ ಮನೊಡರಿಸಿದಾ ಮಾಳ್ಕೆಯಿಂದಾವ ಕಾಲಂ
ಪರಮ ಶ್ರೀ ಜೈನಗೇಹಾಂತರದೊಳೆ ಸರ್ವಕಲ್ಯಾಣ ಪೂಜಾದಿ ಯಂ ವಿ
ಸ್ತರದಿಂ ಸಾಶ್ಚರ್ಯಮಪ್ಪಂತೆಸಗೆ ವಿಬುಧರಿಂ ಕೀರ್ತಿಯಂ ತಾಳ್ದಿ ನಾದಂ
ಧರೆಯೊಳ್ ಶ್ರೀ ಭೈರವೇಂದ್ರಂ ಸುಕವಿಜನಮನಃ ಪದ್ಮಿನೀರಾಜಹಂಸಂ

ದಾನಶ್ರೇಯಾಂಸನೆಂಬರ್ ಮುನಿಜನಕಿರದಾಹಾರವೀವಲ್ಲಿಮತ್ತಂ
ಸಾನಂದಂ ಶಕ್ರನೆಂಬರ್ ಜನಪತಿ ಸವನೋದ್ಯೋಗದೊಳ್ ನಿಚ್ಚನಿಚ್ಚಂ
ದೀನಾನಾಥಾದಿ ವಂದಿಪ್ರತತಿ ಬಯಸಿದಂತೀವ ಕಾರುಣ್ಯದಿಂದಂ
ಕಾನೀನಂ ತಾನೆನುತ್ತಂ ಪೊಗಳ್ವರಿಳೆಯೊಳಂ ಭೈರವಕ್ಷ್ಮಾಪ ನಿನ್ನಂ"॥

ಮೇಲೆ ಹೇಳಿದ ಚರಿತಾಂಶಗಳಿಗೆ Vನೆಯ ಶಾಸನದಲ್ಲಿಯೂ ಆಧಾರವಿದೆ. ಮುಂದೆ ವಿಚಾರಿಸಲಿಕ್ಕಿರುವ ಈ ಭೈರವನ ರಕ್ತಸಂಬಂಧಿಯಾದ ಸಾಳ್ವಮಲ್ಲ ಎಂಬ ಅರಸನ ವಂಶಾವಳಿಯ ಪ್ರಸ್ತಾಪದಲ್ಲಿ Vನೆಯ ಶಾಸನವು ಹೀಗೆ ಹೇಳುತ್ತದೆ:-

"ಪಂಚಮ ಕಾಲದಿಂ ಸದ್ಧರ್ಮ ಪ್ರವರ್ತನದಿಂ ಚತುರ್ಥ ಕಾಲಮಾಗಿ ನೆಗಳ್ದ ರಾಜಾನ್ವಯ ಚೂಡಾಮಣಿಗಳುಂ ಕ್ಷೇಮಪುರದ ಶ್ರೀ ಚಂಡೋಗ್ರಪಾರ್ಶ್ವತೀರ್ಥೇಶ್ವರರ ಚರಣಕಿಂಕರರುಂ ಶ್ರೀಮತ್ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಪದಪದ್ಮ ಭೃಂಗಾಯಮಾನಸರುಮಪ್ಪ **ಸಾಳುವನಾರಣಾಂಕನಾ** ನಾರಣಾಂಕನರಪತಿಗಳ ಮೊದಲಾದ ಪಲಂಬರರಸುಗಳಾ ರಾಜ್ಯಾಧಿಪತಿಗಳಾಗಿ ಅನುಕ್ರಮದಿಂ ಪ್ರವರ್ತಿಸಿದ ನಂತರಂ ತದ್ವಂಶಾವತಂಸರಪ್ಪ ಸಮ್ಯಕ್ತ್ವ ಚೂಡಾಮಣಿಗಳೆನಿಸಿದ **ಹೊನ್ನ**ನರೇಂದ್ರರುಂ, ಸನ್ಮಾರ್ಗನಿರತಪ್ಪ **ಕಾಮ**ನೃಪಾಲರುಂ ಸದಾಚಾರ ಸಂಪನ್ನರುಮಪ್ಪ **ಮಂಗರಸ** ಭೂವರರುಂ, ಜಿನಪೂಜಾಪುರಂದರರುಮಪ್ಪ **ಹೈವ** ರಾಜೇಂದ್ರರುಂ, ದಾನಶ್ರೇಯಾಂಸರುಮಪ್ಪ ಸಂಗಮಹೀಪಾಲರುಂ, **ಸುಗು**

ಣಾಭರಣಭೂಷಿತರುಮಪ್ಪ **ಕೇಶವ**ರಾಯರುಂ, ಮಾನಸ್ತಂಭೋತ್ತಂಭನ ಜಂಭಾರಿಗಳುಮಪ್ಪ **ಸಂಗಮೇಂ**ದ್ರರುಂ, ಸದ್ಧರ್ಮಪ್ರತಿಪಾಲಕ ಜೀರ್ಣಜಿನ ಚೈತ್ಯಾಲಯೋದ್ಧರಣ ಧುರೀಣರುಮಪ್ಪ **ಭೈರವ**ಧರಾಧೀಶರಂ, ಜಿನಧರ್ಮ ಪ್ರವರ್ತನನಿರತರುಮಪ್ಪ **ಇಮ್ಮಡಿ ಭೈರವೇಶ್ವ**ರರುಂ, ಅವರ ಯುವರಾಜಪದವಿಯೋಳ್ ವಿರಾಜಮಾನರುಮನೇಕ ಗುಣಕದಂಬಾಲಂ ಬರುಮಪ್ಪ **ಅಂಬಿರಾಯ**ರಸರುಂ ಯಥೋಚಿತಕ್ರಮದಿಂ ರಾಜ್ಯಂ ಗೈದರ್."

ಹಿರಿಯ ಭೈರವರಾಯನು ವಿಜಯನಗರದ ಮಹಾಮಂಡಲೇಶ್ವರನಾಗಿದ್ದು ತೌಳವ ಹೈವ ಕೊಂಕಣದೇಶದ ಅಧಿನಾಥನಾಗಿ ನಗಿರನಗರದಲ್ಲಿ ಆಳಿದನೆಂದೂ,ಅವನ ತರುವಾಯ ಅವನ ತಮ್ಮ ಚಿಕ್ಕ ಭೈರವರಾಯನು ಪಟ್ಟಕ್ಕೆ ಬಂದನೆಂದೂ, ಸಾಳ್ವಭಾರತ ಎಂಬ ಗ್ರಂಥದಿಂದ ತಿಳಿದು ಬರುತ್ತದೆಂಬದಾಗಿ ಕವಿಚರಿತೆಯ ಎರಡನೆಯ ಸಂಪುಟದ ೨೪೩--೨೪೪ ಪುಟಗಳಲ್ಲಿ ಹೇಳಿದೆ. ಅಲ್ಲಿ ಅಂಬಿರಾಯನ ವಿಷಯವನ್ನು ಮಾತ್ರ ಹೇಳಿಲ್ಲ. ಹಿರಿಯ ಭೈರವನ 'ಚಿಕ್ಕಮ್ಮನಾದ ಶಂಕರಾಂಬಿಕೆಗೂ ಚಂದ್ರವಂಶದ ಬಯ್ಯನೃಪನಿಗೂ ಸಾಳ್ವನೆಂಬ ಮಗನು ಜನಿಸಿದನೆಂಬುದಾಗಿ ಸಾಳ್ವಭಾರತದಿಂದ ಸಂಗ್ರಹಿಸಿ ಕವಿಚರಿತೆಯಲ್ಲಿ ಬರೆಯಲ್ಪಟ್ಟ ಅಂಶವು ಮುಂದೆ ನಾನು ಹೇಳಲಿಕ್ಕಿರುವ Vನೇ ಶಾಸನದಿಂದ ಸಮರ್ಥಿಸಲ್ಪಡುತ್ತದೆ.

IIನೆಯ ಶಾಸನದ ಹಿರಿಯ ಭೈರವನಿಗೂ Vನೆಯ ಶಾಸನದ ಸಾಳ್ವಮಲ್ಲನಿಗೂ ಇದ್ದ ರಕ್ತ ಸಂಬಂಧವನ್ನೂ ಎರಡೂ ಶಾಸನಗಳಿಂದ ತಿಳಿದು ಬರುವ ಅವರ ವಂಶ ಪರಂಪರೆಯನ್ನೂ ಇಲ್ಲಿ ಕೊಟ್ಟಿರುವ ವಂಶವೃಕ್ಷದಿಂದ ಸುಲಭವಾಗಿ ತಿಳಿಯಬಹುದು.*

ಗೇರುಸೊಪ್ಪೆಯ ಹಿರಿಯ ಭೈರವನೂ ಅವನ ರಾಣಿಯರೂ ಅವನ ಮಕ್ಕಳೂ ಜಿನಧರ್ಮದಲ್ಲಿ ಅತ್ಯಂತ ಶ್ರದ್ಧಾಭಕ್ತಿಯನ್ನು ಇಟ್ಟವರಾದುದರಿಂದ ಅನೇಕಾನೇಕ ಧರ್ಮಕಾರ್ಯಗಳನ್ನು ಮಾಡಿದರು. ಇವನ "ಕುಲದೈವಂ ಪಾರ್ಶ್ವನಾಥಂ, ಕುಲ ಗುರುವೆನಿಪಂ ಪಂಡಿತಾಚಾರ್ಯವರ್ಯಂ ವಿಲಸತ್ ಭಲ್ಲಾತಕೀ ಪತ್ತನ ಮಿಹಪುರಮೆಂದೆಲ್ಲರುಂ ಕೀರ್ತಿಸಲ್,"

"ಧರೆಯೊಳಗಂ ಪ್ರಸಿದ್ಧಿ ವಡೆದೊಪ್ಪುವ ವೇಣುಪುರಾಂತರಾಳದೊಳ್
ಕರಚೆಲುವಾದ ಚಂದ್ರಜಿನ ಮಂದಿರದೊಳ್ ಪಿರಿದಪ್ಪ ಧರ್ಮ ಮಂ
ವಿರಚಿಸಲುತ್ತರೋತ್ತರ ಸಮೃದ್ಧಿಗೆ ಕಾರಣಮಪ್ಪುದೆಂದು ತಾಂ
ವರಗುರು **ವೀರಸೇನ**ಮುನಿ ಪೇಳಲು ಕೇಳ್ದನು ಭೈರವೇಶ್ವರಂ"

"ಎಂದಾ ಮುನಿನಾಥಂ ಭೈರವೇಂದ್ರಂಗೆ ಪೇಳೆ ಕೇಳ್ದು ..... ವೇಣುಪುರದ ಭವ್ಯಜನಂಗಳಂ ಕರೆಸಿಯೊಡಂಬಡಿಸಿ" ಆ ತ್ರಿಭುವನ ಚೂಡಾಮಣಿ ಬಸದಿಯ "ತೃತೀಯ ನಿಲಯಕ್ಕೆ ಚೈತ್ಯಗೇಹಾಗ್ರದೊಳ್ ಕರಚೆಲ್ವಾಗಿರೆ ತಾಮ್ರದಿಂ ಪೊದಕೆಯಂ ಮಾಡಿಸಿದಂ. "ಈ ವೀರಸೇನ ಮುನಿ ಯಾರೆಂಬುದು ಗೊತ್ತಾಗುವುದಿಲ್ಲ.

*
ನಗಿರರಾಜ್ಯದ ಗೇರುಸೊಪ್ಪೆಯ ಕೇಶವರಸನ (ಅಳಿಯ)

ಚಂದ್ರಗುತ್ತಿಯ ಕೊಪಣದ ತಿಳುವಳ್ಳಿಯ ಅರಸರು



ಅದೂ ಅಲ್ಲದೆ "ಬೆಳಗುಳಪುರದೊಳಗಂ ಚಂದ್ರಗುಪ್ತಿ ಹೊನ್ನಾವರದೊಳ್ ವರಜಿನಪೂಜೋತ್ಸವಮಂ ವಿರಚಿಸಿ ಶ್ರೀ ಬಲಿವಿಧಾನಮಂ ಮಾಡಿಸಿದಂ"

ಮತ್ತೂ ವೇಣುಪುರದ ಚಂದ್ರನಾಥದೇವರಿಗೆ "ರಜತ ಮಯಂಗಳಪ್ಪ ವಿಪುಲೋಜ್ವಲ ಕುಂಭಘಟೀಗಣಂಗಳಂ ರಜತದೆ ಮಾಡಿದ ದಂಡಿಗೆಯಂ ಪರಿಯಣ ಮನರ್ಥಿಭಕ್ತಿಯಿಂ ರಜತದ ತಾಣದೀವಿಗೆಗಳಂ . . . "

ರಜತದ ಪೃಥುಪೀಠಮುಮಂ
ರಜತದ ಪರಿಪರಿಯ ಬಟ್ಟಲಂ ಗಿಂಡಿಯುಮುಂ
ಯಜನಕ್ಕು ಚಿತಂಗಳನಾ
ನಿಜಭುಜಬಲಶಾಲಿ ಭೈರವೇಶ್ವರನಿತ್ತಂ॥

ಆತನ ಪಟ್ಟದರಸಿ ನಾಗಲದೇವಿ "ಮಾನಸ್ತಂಭಮ ನೊಲ್ದು ಮಾಡಿಸಿದಳೀ ಶ್ರೀ ಚೈತ್ಯಗೇಹಾಗ್ರದೊಳ್"

ಆತನ ಹೆಣ್ಣುಮಕ್ಕಳು ಲಕ್ಷ್ಮೀದೇವಿ ಪಂಡಿತದೇವಿಯರು "ಜಿನಮುನೀಶ್ವರಯುಗ್ಮಕ್ಕೆ,ನಿಚ್ಚದಾಹಾರ ವಿಶಿಷ್ಟದಾನ ಮನವಿಚ್ಛಿದೆ ನಡೆವಂತು ಮಾಡಿದರ್." ಇಲ್ಲಿಗೆ ಈ ಶಾಸನವು ಮುಗಿಯುತ್ತದೆ.

**IIIನೆಯ ಶಾಸನ**: ಹಿರಿಯ ಭೈರವರಸನು ಮಾಡಿದ ಇನ್ನೊಂದು ಧರ್ಮಸೇವೆಯನ್ನು ಪ್ರಕಟಿಸುವ ಈ ಶಾಸನವನ್ನು ಮದರಾಸ್ ಶಾಸನ ಇಲಾಖೆಯವರ ವಶದಲ್ಲಿದ್ದ ಕಲ್ಲುಬರಹದ ಪ್ರತಿಗಳಲ್ಲಿ ನೋಡಿದ ಹಾಗೆ ನನಗೆ ನೆನಪಿಲ್ಲ. ಮದರಾಸ್ ಒರಿಯಂಟಲ್ ಲೈಬ್ರೆರಿಯಲ್ಲಿ 'ಮೂಡಬಿದಿರೆಯ ಶಾಸನಗಳು' ಎಂಬ ಕಾಗದದ ಹರಕು ಪ್ರತಿಯಿಂದ ಈ ಶಾಸನದ ಭಾಗಗಳನ್ನು ಕೆಳಗೆ ಉದ್ಧರಿಸಿರುತ್ತೇನೆ.

"ಜಯಾಭ್ಯುದಯ ಶಾಲಿವಾಹನ ಶಕ ವರುಷ ೧೩೮೪ನೆಯ ವಿಷು ಸಂವತ್ಸರದ ಪುಷ್ಯ ಶು ೧ ಬುಧವಾರ ಮೂಲಾ ನಕ್ಷತ್ರದಲ್ಲಿ ಶ್ರೀ ಮನ್ಮಹಾ ಮಂಡಲೇಶ್ವರ ನಗಿರಿಯ ಹಿರಿಯ ಭೈರವದೇವ ಒಡೆಯರು ನಗಿರ ರಾಜ್ಯಮಂ ಪ್ರತಿಪಾಲಿಸುತ್ತಿದ್ದಲ್ಲಿ ತಮಗೆ ವ್ಯಾಧಿ ಬಲೋತ್ತರವಾದ್ದಲ್ಲಿ ತಮಗೆ ಪರಮಗತಿ ಸಾಧನವಾಗಿ ತಮ್ಮ ತ್ರಿಕರಣಶುದ್ಧಿಯಿಂದ ಬಿದಿರೆಯ ತ್ರಿಭುವನ ಚೂಡಾಮಣಿಯೆಂಬ ಚೈತ್ಯಾಲಯದ ಶ್ರೀ ಚಂದ್ರನಾಥ ಸ್ವಾಮಿಗಳ ಪೂರ್ವಾಹ್ನ ಕಾಲದ ದೇವಪೂಜೆಗೆ ನಡುವಣ ನೆಲೆಯ ಶ್ರೀ ಸುಪಾರ್ಶ್ವತೀರ್ಥಂಕರರ ಮಧ್ಯಾಹ್ನ ಕಾಲದ ಪೂಜೆಗೆ ಮೇಗಣ ನೆಲೆಯ ಸಂಘಸಮುದಾಯದವರ ಮುಂದಿಟ್ಟು ಬರಸಿದ ಧರ್ಮ ಶಾಸನದ ಭಾಷಾಕ್ರಮವೆಂತೆಂದರೆ:—ತಾವು ಆಳುತ್ತಾ ಇರ್ದ ಬಿಲ್ಲೆಸೆಯ ನಾಲ್ಕು ಕಡೆಯಿಂದ ಒಳಗಣ ಸಮಸ್ತವೃತ್ತಿಗೆ ಕಟ್ಟಿದ ಗೇಣಿಗೆ ಅರಮನೆಗೆ ಅಳಿವ ಗೇಣಿಯ ಹನೆಯಲ್ಲು ಮುಡಿ ೧೫೦ ಹನೆ ಮೂವತ್ತರ ಲೆಕ್ಕದಲ್ಲು ಬತ್ತ ಮೂಡೆ ೧೦೦೦ ಸಾವಿರ ಮೂಡೆಯನ್ನು ವರ್ಷಂಪ್ರತಿ ನಡೆಸುವಂತಾಗಿ ಹಿರಣ್ಯೋದಕ ಧಾರಾಪೂರ್ವಕವಾಗಿ ಆಚಂದ್ರಾರ್ಕಸ್ಥಾಯಿಯಾಗಿಮಾಡಿದಂತಾಧರ್ಮಶಾಸನಂ."

ಈ ಶಾಸನದ ಶಕ ಸಂಖ್ಯೆಯಲ್ಲಿಯೋ ವರ್ಷದ ಹೆಸರಿನಲ್ಲಿಯೊ ತಪ್ಪು ಬಿದ್ದಿರಬೇಕು. ಈ ಶಾಶನವು 1462ರಲ್ಲಿ. ಇದೇ ವರ್ಷದಲ್ಲಿ ಹಿರಿಯ ಭೈರವನು ವ್ಯಾಧಿಗ್ರಸ್ತನಾಗಿದ್ದಿರಬಹುದು.

**IVನೆಯ ಶಾಸನ**:— ಇಲ್ಲಿ ಕೊಟ್ಟಿರುವ ಶಾಸನದ ನಕಲು ಮದರಾಸ್ ಒರಿಯಂಟಲ್ ಲೈಬ್ರೆರಿಯ ಕಾಗದದ ಪ್ರತಿಯಿಂದ ಎತ್ತಿದ್ದಾಗಿದೆ.ಶಾಸನ ಇಲಾಖೆಯ ಆಫೀಸಿನಲ್ಲಿ ಇದರ ಪ್ರತಿಯೂ ದೊರೆಯಲಿಲ್ಲ. ಇದರಲ್ಲಿ ಐದೇ ಪದ್ಯಗಳಿವೆ; ಅವುಗಳ ಬಂಧವು ಅಷ್ಟು ಪ್ರೌಢವಾಗಿ ಕಾಣುವುದಿಲ್ಲ. ಶಾಸನ ಕಾಲವನ್ನು ಬರೆಯುವಾಗ ಏನೋ ತಪ್ಪು ಬಿದ್ದಹಾಗೂ ತೋರುತ್ತದೆ. ಶಕ ೧೭೯೪ನೆಯ ಖರ ಸಂವತ್ಸರದ ಕಾರ್ತಿಕ ಶು. ೫ಯು ಗುರುವಾರ ಎಂಬದಾಗಿ ಶಾಸನದಲ್ಲಿದೆ. ಇಲ್ಲಿ ಶಕ ವರ್ಷದ ಸಂಖ್ಯೆಗೂ ಸಂವತ್ಸರದ ಹೆಸರಿಗೂ ಹೊಂದಿಕೆ ಸರಿ ಇಲ್ಲ. ೧೩೯೪ನೆಯ ಶಕವರ್ಷದ ಖರಸಂವತ್ಸರವಲ್ಲ, ನಂದನ ಸಂವತ್ಸರ. ಖರಸಂವತ್ಸರಕ್ಕೆ ಸರಿಯಾದ ಶಕವರ್ಷವು ೧೩೯೩; ಈ ಸಂಖ್ಯೆಯೇ ಸರಿಯೆಂದು ಇಟ್ಟುಕೊಂಡರೆ ಈ ಶಾಸನವು ಕ್ರಿಸ್ತಶಕದ 1471 ಒಕ್ಟೋಬರ್ 17ರಲ್ಲಿ ಬರೆಯಲ್ಪಟ್ಟಿರಬಹುದು. ಶಾಸನವನ್ನು ಬರೆದವನ ಹೆಸರು ಇದರಲ್ಲಿ ಮಾತ್ರ ಕಾಣುತ್ತದೆ. ದೇವರಸ ಶಾನುಭಾಗನು ಇದನ್ನು ಬರೆದನಂತೆ.ಈ ದೇವರಸನು ಯೂರು,ಇವನ ಪೋಷಕನಾದ ಅಣ್ಣ ಸಾವಂತನು ಯೂರು ಎಂಬೀ ಅಂಶಗಳು ಗೊತ್ತಾಗುವುದಿಲ್ಲ. "ಅಣ್ಣ ಸಾವಂತ ನೃಪಂ" ಎಂದು ಒಂದು ಪದ್ಯದಲ್ಲಿದೆ. ಇಲ್ಲಿ 'ನೃಪಂ'ಎಂಬ ಮಾತು ಗೌರವಾರ್ಥವಾಗಿರಬಹುದು. ಎರಡು ಮೂರು ಕಡೆಗಳಲ್ಲಿ ಪದ್ಯ ಚರಣಗಳಿಗೆ ಸರಿಯೂದ ಅರ್ಥವಾಗದಿರುವುದರಿಂದ, ಅಲ್ಲಿಯ ಮಾತುಗಳನ್ನು ಬಿಟ್ಟು ಬಿಟ್ಟಿದ್ದೇನೆ. ಎಂದಿನಂತೆ "ಶ್ರೀಮತ್ .... ಶಾಸನಂ" ಈ ಶ್ಲೋಕದಿಂದ ಶಾಸನವು ಪ್ರಾರಂಭವಾಗಿ ಹೀಗೆ ಮುಂದುವರಿಯುತ್ತದೆ.:—

"ಒಪ್ಪುವ ತವುಳವ ದೇಶದೊ| ಳಿಪ್ಪುದು ಜಿನಧರ್ಮಾಗಾರಂ ತಾನೆನೆ ಲೋ।
ಕಪ್ರಖ್ಯಾತಿತ ಭವ್ಯಜ। ನ ಪ್ರಿಯಮುರು ವೈಭವಾನ್ವಿತಂ ವಂಶಪುರಂ" ॥

ಅಲ್ಲಿಯ ಜಿನಾಲಯಂಗಳ। ನೆಲ್ಲವನತಿ ಭಕ್ತಿಯಿಂದ ವಂದಿಪೆ ನಾನೆಂ।
ಬುಲ್ಲಾಸವೊದವೆ ಬಂದಂ—ಫುಲ್ಲಶರನೋ ಎನಲಂಣ ಸಾವಂತ ನೃಪಂ" ॥

ಆತನ ಕೀರ್ತಿಹಾರ ದರಹಾಸ ವಿನಿರ್ಮಲ ಮೂರ್ತಿ ವಿಕ್ರಮಂ।
ಶ್ರೀತನುಜಾತ ವೈರಿಗತಿ ವಿಸ್ಮಯದಿಂ ಮರಿದೇವ ಮಂತ್ರಿ ಇ।

ನ್ನೇತಕೆ ಮಾತು ...ಪಂಚಗುರುಭಕ್ತಿ ಸುರೇಂದ್ರಗೆ ದಾನ ಸದ್ಗುಣ ಖ್ಯಾತಿಯನಾಂತ ಕರ್ಣಗೆನೆ ಬಣ್ಣಿಸಲಾರ್ಗಳವಣ್ಣ ಭೂಪನಂ ॥
"ಇಂತು ಧರಿತ್ರಿಯೊಳ್ ಪೆಸರನಾಂತೆಸೆವ ಮುದರಾಡಿಯಣ್ಣಸಾವಂತನೃಪಾಲಕಂ ತನಗೆ ಸಂತತ ಸೌಖ್ಯದ ವಾಂಛೆಯಿಂ ಕರಂ ಸಂತಸವಾಗೆ ತತ್ಪುರದ ಪಾರ್ಶ್ವಜಿನೇಂದ್ರಗೆ ಚಂದ್ರನಾಥಗಂ ಸಂತಸ ಪೂಜೆಯಂ ಜಿನಮುನೀಂದ್ರರಿಗನ್ನದನಂತದಾನಮುಂ ಸ್ವಾಂತ ವಿಶುದ್ಧಿಯಿಂದೆಸಪನೆಂದಿಳೆ ..... ..... ... ..... ..... ..... ..... ಶಾಂತ ದಿವಾಕರಂ ಪರಮ ವೃತ್ತಿಯನಾತ್ಮಜನಾಂತ ಮಧ್ಯದೊಳ್ ಕಂತು ಸದೃಕ್ಷಕಾಯ ವಿರೂಪಾಕ್ಷನು(?) ಹಾರಾಯನಾಜ್ಞೆಯಿಂ ತಾಂ ತಳೆದಿರ್ಪ ವಿಟ್ಟರಸ ಭೂವರಕಾಂತನ ರಾಜ್ಯಕಾಲದೊಳ್"

ಕ್ರಿಸ್ತ. (1465-1479) ವಿಜಯನಗರದ ವಿರೂಪಾಕ್ಷ ನರಪತಿಯ ಕೈಕೆಳಗೆ ವಿಟ್ಟರಸನು ಬಾರಕೂರು ರಾಜ್ಯವನ್ನು ಆಳುವ ಕಾಲದಲ್ಲಿ–

ಶಕ ವರ್ಷ ೧೩೯೪ ನೆಯ ಖರಸಂವತ್ಸರದ ಕಾರ್ತಿಕ ಶು। ೫ಯು ಗುರುವಾರದಲ್ಲು ಶ್ರೀಮಚ್ಚಾರುಕೀರ್ತಿ ಪಂಡಿತ ದೇವರುಗಳ ನಿರೂಪದಿಂದ ಬಿದಿರೆ ನಗರದ ಎಂಟು ಪ್ರಜೆಶೆಟ್ಟಿ ಗಾರರು ನಾಲ್ವರಿಳಮೆಗೊಳಗಾದ ಸಮಸ್ತ ಹಲರ ಅನುಮತಿಯಿಂದ ಬಾರಕೂರ ಸ್ಥಳದ ಮುದರಾಡಿಯ ಹೊಸಬು ಸಾವಂತ ಹೆಗ್ಗಡೆಯರ ಮೊಮ್ಮಗಳು ಬಿಮ್ಮಕ್ಕ ಸಾವಂತತಿಯರ ಮಗಳು ಚೆನ್ನಕ್ಕ ಬುಣಂತತಿಯರ ಮಗ ಅಣ್ಣ ಸಾವಂತ ಸಾಂತ ಹೆಗ್ಗಡೆಯರು ತನ್ನ ತಮ್ಮಂದಿರು ಜ್ಯೋತಿ ಸಾವಂತರು ತಿಮಲ ಸಾವಂತರು ನಾಲ್ಕು ಐನೂರು ಸಾವಿರದವರ ಒಡಂಬಡಿಕೆಯಿಂದ ಅರಸಣ್ಣ ಹೆಗ್ಗಡೆಯರು ವಿದ್ಯಾಬುದ್ಧಿ ಕಲಿಸಿದರಿಂದಲೂ ತನಗೆ ಸ್ವರ್ಗಾಪವರ್ಗ ಪ್ರಾಪ್ತಿ ನಿಮಿತ್ತವಾಗಿ ಮಂಗಳೂರ ಸ್ಥಳದ ಬಿದಿರೆಯ ದಣಾಯಕ ಬಸ್ತಿಯ ಚಂಡೋಗ್ರ ಪಾರ್ಶ್ವನಾಥನ ಸನ್ನಿಧಿಯಲ್ಲಿ ನಿತ್ಯದಲ್ಲಿ ನಡೆವ ಸಿದ್ಧಚಕ್ರಾರಾಧನೆ ರತ್ನಮಾಲೆಯ ಪೂಜೆ ತ್ರಿಭುವನ ಚೂಡಾಮಣಿಯೆಂಬ ಚೈತ್ಯಾಲಯದ ಶ್ರೀಚಂದ್ರಪ್ರಭ ಸ್ವಾಮಿಯ ಸನ್ನಿಧಿಯಲ್ಲಿ ನಡೆವ ಪಂಚಾಮೃತಾಭಿಷೇಕ ಅಷ್ಟ ದೀಪಾರ್ಚನೆ ಕಾರ್ತಿಕ ಶು. ೧ರಲ್ಲು ಲಿಖಿತೆತವ ಪ್ರತಿ ಮಾಸದಲ್ಲು ಐದನೆಯಲ್ಲಿ ನಡೆವ ಶಾಸ್ತ್ರದಾನ ಎಂಬದಕ್ಕೆ ಎಡಮಾಂದಿಯ ಸೀಮೆಯೊಳು ಚಂಡೋಗ್ರ ಪಾರ್ಶ್ವ ತೀರ್ಥಂಕರ ಚಂದ್ರಪ್ರಭ ಸ್ವಾಮಿಯ ಮುಂದೆ ಹಿರಣ್ಯೋದಕ ಧಾರಾಪೂರ್ವಕವಾಗಿ ಕೊಟ್ಟಿರುವ ವಿವರ:—

*        *        *        *

ಅಕ್ಕಿಯ ಧರ್ಮವನ್ನು ಆ ಚಂದ್ರಾರ್ಕಸ್ಥಾಯಿಯಾಗಿ ಮಾಡಿ ಬಹಳ ಪುಣ್ಯವನ್ನೂ ಕೀರ್ತಿಯನ್ನೂ ಉಪಾರ್ಜಿಸಿ ಕೊಂಡರು. ಈ ಧರ್ಮವನ್ನು ಅಖಂಡಿತವಾಗಿ ನಡೆಸಿಕೊಡುವಂಥವರು ಹಲರು ಸೆಟ್ಟಿಗಾರರು ಈ ಧರ್ಮಶಾಸನಕ್ಕೆ ಅಳುಪಿದಂಥವರು ಉಜಂತಗಿರಿಯಲ್ಲಿ ಸಾವಿರ ಜಿನಬಿಂಬ ಅಳುಪಿದ ದೋಷಕ್ಕೆ ಹೋಹರು, ವಾರಣಾಸಿಯಲ್ಲಿ ಸಾವಿರ ಕಪಿಲೆಯನ್ನು ವಧಿಸಿದ ದೋಷಕ್ಕೆ ಹೋಹರು. ಅಳುಪಬೇಕೆಂದು ನೆನದವರು ಈ ಭೂಮಿಯುಳ್ಳ ಕಾಲಕ್ಕೆ ನರಕದುಃಖವನ್ನು ಉಂಬರು. ಇಂತೀ ಶಾಸನದ ಒಕ್ಕಣೆಯು ಅಣ್ಣ ಸಾವಂತ ಹೆಗ್ಗಡೆಯರ ಶಾನಭಾಗ ದೇವರಸನ ಬರಹ.

**V ನೆಯ ಶಾಸನ:** ಈ ಶಾಸನದ ಪ್ರಸ್ತಾಪವು ಐದನೆಯ ಪುಟದಲ್ಲಿ ಬಂದಿದೆ. ಹಿರಿಯ ಭೈರವನ ವಂಶಾವಳಿಯ ಸಮರ್ಥನಕ್ಕಾಗಿ ಇದರ ಒಂದಂಶವು ಅಲ್ಲಿ ಅನುವಾದ ಮಾಡಲ್ಪಟ್ಟಿದೆ. ಈ ಶಾಸನವು ಮೂಡಬಿದರೆಯ ಹೊಸ ಬಸದಿಯ ಭೈರಾದೇವಿಯ ಮಂಟಪದ ಕಂಬದ ಮೂಡು ಪಡು ಬಡಗು ಮೈಗಳಲ್ಲಿದೆ. ಇದು ಸಂಪೂರ್ಣವಾಗಿಲ್ಲ: ಸುಮಾರುಇಪ್ಪತ್ತು ಪದ್ಯಗಳ ವರೆಗೆ ಸಮಗ್ರವಾಗಿ ಹೋಗಿ

ಕಡುಪಿಂ ಮಾರಾಂತ ವೈರಿಕ್ಷಿತಿಪರೆಪಿಪ ಬಲ್ವಕ್ಕಿವಿಂಡಂಪೊಡರ್ಪಿಂ ತಡೆಗಟ್ಟುತ್ತಿಟ್ಟಿ ಮೆಚ್ಚುತ್ತಡಸಿ ಪಿಡಿಸಿ ಕವುಂಕುತ್ತೆ ಚುರ್ಚುತ್ತ ಮಾರ್ಪಿಂ
ಪೊಡೆವುತ್ತುರ್ಬಿಂಪೊರಳ್ಚುತ್ತಿರೆ ತರ್ಜನಿಯೊಳ್ ಖಂಡಮಂ ಸೂಸಿ

*        *        *        *

ಎಂಬೀ ವೃತ್ತದ ಮೂರನೆಯ ಚರಣದಲ್ಲಿ ಫಕ್ಕನೆ ನಿಂತುಬಿಟ್ಟಿದೆ. ಅಲ್ಲಿಂದ ಮತ್ತೆ ಶಾಸನದ ಎಷ್ಟು ಭಾಗವು ಲುಪ್ತವಾಗಿದೆಯೋ ಗೊತ್ತಾಗುವುದಿಲ್ಲ; ಇದ್ದ ಅಂಶವು ಸಾಳ್ವಮಲ್ಲ ಎಂಬರಸನ ಶೌರ್ಯಪ್ರತಾಪಗಳನ್ನು ಪ್ರೌಢವಾದ ಪದ್ಯಸರಣಿಯಿಂದ ವರ್ಣಿಸುತ್ತದೆ, ಆದರೆ ಅವನ ಕಾಲವನ್ನಾಗಲಿ ಶಾಸನಕಾಲವನ್ನಾಗಲಿ ಹೇಳುವುದಿಲ್ಲ.

ಈ ಸಾಳ್ವಮಲ್ಲೇಶ್ವರನು 'ಶ್ರೀ ಶಂಕರಾಂಬಾತ್ಮಜಂ,' 'ಭೂಪಾಲೋತ್ತಮ ಬಯ್ಯಣೇಂದ್ರ ತನುಜಂ,' 'ಶ್ರೀ ಪಂಡಿತಾಚಾರ್ಯ ಪಾದಾಬ್ಜ ಭ್ರಮರಂ' 'ಸೋಮವಂಶೋದ್ಭವಂ' 'ಕಾಶ್ಯಪ ಗೋತ್ರದವನು.' 'ಬೊಮ್ಮಲದೇವಿಯು ಈತನ ಪಟ್ಟಮಹಾದೇವಿ,' 'ಮಲ್ಲದೇವಿ ಇವನ ಅಕ್ಕ' ಈ ಮಲ್ಲದೇವಿಯ ಮಗ ಸಾಳ್ವದೇವನು ಇವನ ಸೋದರದಳಿಯನಿದ್ದು ಇವನ ಕಾಲದಲ್ಲಿಯೇ ಯುವರಾಜನಾಗಿದ್ದನು.

ಮೂರನೆಯ ಶಾಸನದಲ್ಲಿ ಹೇಳಿದ ಹಿರಿಯ ಭೈರವ, ಇಮ್ಮಡಿ ಭೈರವೇಶ್ವರ, ಅಂಬಿರಾಯರಸರು "ಕ್ರಮದಿ ರಾಜ್ಯಂಗೈದು ಪಂಚಪರಮೇಷ್ಠಿಗಳ ಚರಣ ಸ್ಮರಣದಿಂ ಪಂಚತ್ವಮನೈದಿ ಸದ್ಗತಿವಡೆದರ್. ಇತ್ತಲ್ ತದನ್ವಯದೊಳ್ ನೆಗೆಳ್ತೆವಡೆದ ಸೋಮ ಕುಲಾರ್ಣವ ಪೂರ್ಣಚಂದ್ರನುಂ ರತ್ನತ್ರಯಾರಾಧಾಕರುಂ ಜಿನಧರ್ಮಧ್ವಜ ಸ್ಥಾಪನಾಚಾರ್ಯರುಂ ಜಿನರಥಯಾತ್ರಾ ಪ್ರವರ್ತಕರುಂ ಕಲಿಯುಗ ಚಕ್ರವರ್ತಿಯರುಂ ಹಿರಣ್ಯ ಚೈತ್ಯಾಲಯ ನಿರ್ಮಾಪಕರುಂ ಸುವರ್ಣ

ಕಲಶಸ್ಥಾಪನಾಚಾರ್ಯರುಂ ರತ್ನಸುವರ್ಣ ರಜತಜಿನಬಿಂಬ ಪ್ರತಿಷ್ಠಾಪನಾಚಾರ್ಯರುಂ ಅಪ್ಪ ಅರಿರಾಯರ ಗಜಗಂಡ ಭೇರುಂಡ ಶ್ರೀ ಮನ್ಮಹಾಮಂಡಳೇಶ್ವರ ಜಿನದಾಸ ಸಾಳುವ ಮಲ್ಲ ಮಹೀವಲ್ಲಭಂ" "ತೌಳವ ದೇಶತಿಲಕಾಯಮಾನ ನಗಿರ ನಗರಸಿದ್ಧ ಸಿಂಹಾಸನಾಧಿಪತಿಯಾಗಿ ಸುವರ್ಣಪುರಿಯಿಂದ (ಹೊನ್ನಾವರ?) ಅಲಂಕೃತವಾದ ಹೈವಕೊಂಕಣ ರಾಜ್ಯಮಂ ಪ್ರತಿಪಾಲಿಸುತಿರ್ದಂ."

ಈತನಿಗೆ "ಕಠಾರಿಸಾಳ್ವ" "ಭಾವಜ್ಞ ಚಕ್ರೇಶ್ವರ" ಎಂಬ ಬಿರುದುಗಳು ಇದ್ದವೆಂದು ಕಾಣುತ್ತದೆ.

"ವಿಪುಳ ಶ್ರೀತಳ್ತು ಚೆಲ್ವಾಗಿರೆ ನೆಲಸಿರಿಪೆತ್ತಿರ್ದ ಬಲ್ದೋರ್ಳ್ಕೃಪಾಲ ಕ್ಷಿಪೊದಳ್ದಿರ್ದಕ್ಷಿ ವಾಗಿಂದಿರೆ ನೆಲಸಿದ ಸೌವ್ಯಾನನಂ ವೀತರಾಗ ಸ್ನಪನಾಂಭೋವಿಳಾಸಂ ಕರಮೆಸೆಯೆಸೆದಂ ಸಾಳ್ವಮಲ್ಲಂ ಲಸತ್ಕಾಶ್ಯಪಗೋತ್ರಂ ಸತ್ಪವಿತ್ರಂ ಸುಲಲಿತ ತರಂಗಾತ್ರಂ ಕಠಾರಿ ತ್ರಿ
ನೇತ್ರಂ.

"ಪರನಾರೀಪುತ್ರನೆಂಬೀ ಬಿರಿದು ನಿನಗೆ ದಲ್ ಸೋಮ ವಂಶಾಧಿಪಾ ನೀ
ಪರವೆಣ್ಣಾದೆನ್ನನಿಂದೇಂ ಪಿಡಿದಪೆ (?) ಪರೆಗುಟ್ಟುತ್ತಿ ತಾಂ ಹಾದರಂಗೈ
ವೆನಿಪ್ಪಂತೆಲ್ಲರುಂ ನಿಟ್ಟಿಸುತಿರೆ ನಡೆಯಿಂ ಬಪ್ಪನೆಂದಾ ಜಯಶ್ರೀ
ಯನೆಕೊಂಡುಂ ಶೋಭಿಯಾಂತಂ ತ್ರಿಣಯನ ಪಟಿಭಲ್ಲಂ ಲಸತ್ಸಾಳ್ವಮಲ್ಲಂ''

"ಪುರುಳೀತಂ ಮರುಳೀತನೀತನುರು ಶಾಸ್ತ್ರೋತ್ತುಂಗನೀತಂ ನಿರಕ್ಷರನೀತಂ ಸುಚರಿತ್ರನೀತನುರೆ ದುಶ್ಚಾರಿತ್ರನೀತಂ ಗುಣೋತ್ಕರನೀತಂ ಗುಣಹೀನನೆಂದವರ್ಗಳಂ ಕಂಡಾಕ್ಷಣಂ ಬಲ್ಲನೀ ಧರೆಯೊಳ್ ಸಾಳುವ ಮಲ್ಲರಾಯನೆ ವಲಂ ಭಾವಜ್ಞ
ಚಕ್ರೇಶ್ವರಂ."

"ಜಗದೊಳ್ ಕ್ಷತ್ರಿಯ ರತ್ನನಂ ಯದುನೃಪಾಲೋತ್ತಂಸ ಮಾಣಿಕ್ಯನಂ
ಮೃಗಲಕ್ಷ್ಮಾನ್ವಯನಂ ಜಿನೇಂದ್ರಪದಪೂಜಾ ಶಕ್ರನಂ ಚಾಗಪೆಂ
ಪಿಗನಂ ಕಾಶ್ಯಪಗೋತ್ರನಂ ಸುಗುಣನಂ ಶ್ರೀಸಾಳ್ವ ಮಲ್ಲೇಶನಂ
ಪೊಗಳ್ವೀ ನಾಲಗೆಯನ್ಮರಂ ಪೊಗಳ್ವುದೇ ಪಾಲುಂಡು ಮೇಲುಂಬುದೇ"

ಕಾಳೆಗದಲ್ಲಿ ಶಕ್ರಸುತನೀವೆಡೆಯಲ್ಲಿನಸೂನು ಮೇದಿನೀ
ಪಾಳನದಲ್ಲಿ ರಾಮನೆಸುತುಂ ಪೊಗಳ್ಗುಂ ಜಗಮೆಂತೊ ಪಂಡನೊಳ್ (?)
.... .... .... .... .... ತದ್ಗುಣಂಗಳಿಂ
ಸಾಳುವಮಲ್ಲರಾಯನವನಿಂದವನಿಂದವನಿಂದ ಮಗ್ಗಳಂ"

ಈತನ ಶೌರ್ಯಸಾಹಸಗಳನ್ನು ಶಾಸನಕವಿಯು ಈ ಪದ್ಯಗಳಲ್ಲಿ ಬಣ್ಣಿಸುತ್ತಾನೆ.

"ಜಡಿಯಲೊಡಂ ರಿಪುಕ್ಷಿತಿಪಗೆಲ್ಲರ ಪಿಂದೊಡನೆಯ್ದಿ ಕಂಪಿಪರ್
ಪೊಡೆಯಲೊಡಂ ತದಂಗನೆಯರೋಲೆಯ ಸಾಲೊಡನಾಂ ತರುಚ್ಛಿದಂ
ಗೆಡವಿ .... ರ್ಪುದೆತ್ತೆ (?) ತೋಳ್ಗೆ ಗೆಲೆವೆಣ್ಣೊಡನೊಂದಿ ವರ್ಪುದಾಜಿಯೊಳ್
ಸೆಡೆಯದ ತೋಳಬಾಳದಟನೇಳ್ಗೆಯ ಸಾಳುವ ಮಲ್ಲರಾಯನಾ" ॥

"ಧುರದೊಳ್ ಪ್ರಾಣಮನೊಕ್ಕರಂಘ್ರಿವಿಡಿದರ್ ಬೆನ್ನಿತ್ತರಿಂದಂ ....
ರ್ದರಿ ಭೂಪಾಳಕರೆಂಬುದಂ ಜನದೊಳಾಂ ಕಣ್ಣಾರೆ ಕಂಡೆಂ ದಿಟಂ
ಸರಿವಂದರ್ಗೆಲೆವಾಂತದಿಂ ಮಲೆವರೀಂಬೀ ಮಾತನಾರ್ ಕೇಳ್ದರೀ
ಧರೆಯೊಳ್ ಧೀಂಕಿಡೆ ಕಾಲರುದ್ರ ಸಮನೇಂ ಶ್ರೀ ಸಾಳ್ವ ಮಲ್ಲಾಧಿಪಂ"

"ನೆಱೆಯದು ಕೈಸೆಱೆವಂದಹಿತರ್ಗೆ ಸಾಲದಾ ....
ಸೆಱೆವನೆ ಕಾದದುರ್ಕ್ಕಿಪಿಡಿತಂದವರ್ಗೆಯ್ದದು ಮಿತ್ರಪತ್ತನಂ
ಪಿಱಿ ಸಿರಿಯೋಡಿದರ್ಗೆ .... ಈ ಜಸಕ್ಕೆ ತಾಂ
ಕಿಱಿದೆ ಜಗತ್ರಯಂ ಘನಮೆದುಂತುಟೊ ಸಾಳುವ ಮಲ್ಲ ರಾಯನಾ"

"ಬಲಿಯಿಂ ಕರ್ನನೆ ಚಾಗಿಯಾ ಬಲಿಯಿನುದ್ಯತ್ಕರ್ನನಿಂ ಭೋಜನಾ
ಬಲಿಯಿಂ ಕರ್ನನಿನಂತೆ ಭೋಜವಿಭುವಿಂ ಮಾಂಧಾತನೀ ಲೋಕದೊಳ್
ಬಲಿಯಿಂ ಕರ್ನನಿನಂತೆ ಭೋಜವಿಭುವಿಂ ಮಾಂಧಾತನೀಂ ಚಾಗದ
ಗ್ಗಲನಾ ..... ಕಲಿಸಾಳ್ವಮಲ್ಲನವನಂತಾರ್ ನೋಂತರೀ ಧಾತ್ರಿಯೊಳ್"

"ಅರಿನೃಪರರ್ಣವಂ ಬೊಕ್ಕುಮಿಳಾಚ್ಯುತರಾದಂ ನಿಜೋರ್ವಿಯಾ (?)
ಳ್ದರಿ ಮತಿ ಭೀತಿಯುಕ್ತರಿರ್ದ ಬೆರ್ಚದೆ ಸ್ಮೈತಿರೆ ಮುಗ್ರವೈರಿ ಭೀ
ಕರನ ಪೊದಳ್ದುದಾತ್ತನ ಭಯಪ್ರದನುನ್ನತಿ ತಿಣ್ಣಮೆಂದು ಬಿ
ತ್ತರಿಸಿ ಜಗಕ್ಕೆ ಸಾಱಿದುದು ಸಾಳುವ ಮಲ್ಲನ ಕೀರ್ತಿ ಡಂಗುರಂ

"ಪರಮಜಿನೇಂದ್ರಭಕ್ತಿಗೆ ಸದುಕ್ತಿಗೆ ಚಾಗಕೆ ಭೋಗಕಾತನೊಳ್
ಸಿರಿಗೆ ಪರಾಕ್ರಮಕ್ಕೆ ಕಡು ನನ್ನಿಗೆ ಸತ್ಕಳೆಗಂ ತ್ರಿಲೋಕದೊಳ್

ಸರಿದೊರೆ ಪಾಡುತೋಡು ಪಡಿಪಾಸಟಿ ಈಡೆಣೆ ಇಲ್ಲೆ
ನುತ್ತಹಂ
ಕರಿಸಿ ಪೊಗಳ್ದು ಬಾಜಿಸಿತು ಸಾಳುವ ಮಲ್ಲನ ಕೀರ್ತಿ
ಡಿಂಡಿಮಂ ॥

ಸಾಳ್ವಮಲ್ಲನ ಸೋದರದಳಿಯನಾದ ಸಾಳ್ವದೇವರ ಸನು ಯುವರಾಜನಾಗಿದ್ದಂತೆ ಈ ಪದ್ಯಗಳಲ್ಲಿ ಹೇಳಿದ್ದಾನೆ:-

"ಯುವರಾಜತ್ವಮೆನಿಪ್ಪ ಮಾತೆ ಅಧಿರಾಜಶ್ರೀಯದಂ
ಕೊರ್ತು ಸಾ
ಳುವ ಮಲ್ಲಂ ಕುಡೆ . . . . ಸಾಳ್ವನ ಮನಂ ತಾನಾಗಿ ದಲ್
ತಾಳ್ದಿದಂ
ಅವನಿಂದೀಚೆಗೆ ಬಾರದೆಂದು ತನತೀ ಪೆಣ್ ಪೊನ್ನೆಲಂಪ್ರಾಣ
ಮೆಂ
ಬಿವು ಬೇಡೆಂಬುದೆ ನೇಮಮಾಗಿ ನೆಗಳ್ದಂ ಶ್ರೀಸಾಳ್ವ ದೇವಾ
ಧಿಪಂ"
"ಜಿನನೊಳ್ ಶ್ರೀಜಿನಶಾಸ್ತ್ರದೊಳ್ ಜಿನಮುನೀಂದ್ರವ್ರಾತ
ದೊಳ್ ತತ್ವಡ
ರ್ಥನಿಕಾಯಂಗಳೊ . . . . ಮನಂಬುಗ . . . . . ಕರ್ಬೊ
ನ್ನುಂಡ ನೀರಂತೆವೊಲ್
. . . ಮಿಕ್ಕು ತಪ್ಪಿದೊಡಮೆಂದುಂ ತಪ್ಪನೀ ಸಾಳ್ವಮ . . .
ಲ್ಲ ನರೇಂದ್ರಂಗೆನೆ ತಾನದೇನಚಳನೋ ಶ್ರೀ ಸಾಳ್ವ
ದೇವಾಧಿಪಂ" ॥
"ವರ ದುಶ್ಶಾಸನನಾ ವಿಭೀಷಣನುದಾತಂ ಲಕ್ಷ್ಮಣಂ ಪ್ರೇಮದಿ
. . . . . . ಗ್ರಜನಲ್ಲಿ ಮಪ್ಪರೊಡನಾ ಪೋದನಾತಂಕ . . . .
. . . . . ರುತ್ತೇಂ ಕೊಂಕಣದಲ್ಲಿ ಗರ್ವಿಸಿದನೆಂದಂತಾವನಿಂ
ಪೋಲ್ವನೀ
ಧರೆಯೊಳ್ ಸಾಳುವ ಮಲ್ಲನೊಳ್ ಪ್ರಣಯದಿರ್ಪಾ ಸಾಳ್ವ
ದೇವೇಂದ್ರನಂ. ॥

ಹಿರಿಯ ಭೈರವನು ಕ್ರಿಸ್ತಶಕದ 1462ರಲ್ಲಿ ಭಲ್ಲಾತಕೀಪುರವೆಂಬ ನಾಮಾಂತರವಿರುವ ಗೇರುಸೊಪ್ಪೆಯಲ್ಲಿ ಇದ್ದನೆಂದೂ, ಅವನ ತರುವಾಯ ಅವನ ತಮ್ಮಂದಿರು ಚಿಕ್ಕ ಭೈರವ, ಅಂಬಿರಾಯರು ಅನುಕ್ರಮವಾಗಿ ಆಳಿದನಂತರ ಅವನ ಚಿಕ್ಕಮ್ಮನ ಮಗ ಜಿನದಾಸನು ಸಾಳ್ವಮಲ್ಲನೆಂಬ ಹೆಸರಿನಿಂದ ರಾಜ್ಯವಾಳಿದನೆಂದೂ 5ನೆಯ ಪುಟದಲ್ಲಿ (II ನೆಯ ಶಾಸನ)ಹೇಳಿದೆಯಷ್ಟೆ. ಈ ಸಂಗತಿಯು ನಿಜವೆಂಬದಾಗಿ ಮೆ। ರಾಯಬಹದೂರ್ ಆರ್. ನರಸಿಂಹಾಚಾರ್ಯ ಕೃತ ಕವಿಚರಿತೆಯ ಎರಡನೆಯ ಪುಸ್ತಕದ ೨೪೪ನೆಯ ಪುಟದಲ್ಲಿ ಸಾಳ್ವ ಭಾರತವೆಂಬ ಕನ್ನಡ ಗ್ರಂಥಭಾಗದಿಂದ ಗೊತ್ತಾಗುತ್ತದೆಂದು ಅಲ್ಲಿಯೇ ಹೇಳಿದೆ. ಹೀಗೆ ಅನುವಾದ ಮಾಡಿದ್ದಲ್ಲಿ ಸಾಳ್ವ ಮಲ್ಲನ ಹೆಸರು ವಸುದಾನ ಮೇರು ಎಂದಿದೆ, ಜಿನದಾಸನೆಂದಿಲ್ಲ; ಅಲ್ಲಿ ಚಿಕ್ಕ ಭೈರವನ ಕಾಲದಲ್ಲಿ ಯುವರಾಜನಾಗಿದ್ದ ಅಂಬಿರಾಯನನ್ನೂ ಹೇಳಿಲ್ಲ. ಸಾಳ್ವಮಲ್ಲನೂ ಅವನ ಸೋದರದಳಿಯ ಸಾಳ್ವದೇವರಾಯನೂ ಸಾಳ್ವಭಾರತವನ್ನು ಬರೆದ ಕನ್ನಡ ಕವಿಯ ಪೋಷಕರಾಗಿದ್ದರೆಂದು ಕವಿಚರಿತೆಯಿಂದ ತಿಳಿದುಬರುತ್ತದೆ. "ಮೈಸೂರು ಶಾಸನದ ಇಲಾಖೆಯ 1916 ನೆಯ ವರ್ಷದ ರಿಪೋರ್ಟಿನ 69ನೆಯ ಪುಟದಲ್ಲಿ ಕ್ರಿಸ್ತಶಕ 1522ರಲ್ಲಿ ಇದ್ದ ಒಬ್ಬ ತೌಳವದೇಶದ ದೇವರಾಯನ ಹೆಸರು ಹೇಳಿದೆ" ಎಂದು ಕವಿಚರಿತೆಯ ೨೪೪ನೆಯ ಪುಟದಲ್ಲಿ ಒಂದು ಟಿಪ್ಪಣಿ ಇದೆ. ಈ ದೇವರಾಯನೂ ಸಾಳ್ವದೇವರಾಯನೂ ಒಬ್ಬನೇ ಆಗಿದ್ದರೆ, ಸಾಳ್ವಮಲ್ಲನ ಕಾಲವನ್ನು ಕಂಡುಹಿಡಿದ ಹಾಗಾಗುತ್ತದೆ. ಮದರಾಸ ಓರಿಯಂಟಲ್ ಲೈಬ್ರರಿಯ ಲೋಕಲ್ ರಿಕಾರ್ಡ್ಸ್ ೩೧ನೆಯ ಪುಸ್ತಕದಲ್ಲಿ ವಿಜಯನಗರದ ಸದಾಶಿವರಾಯನ ಕಾಲದಲ್ಲಿ ಕ್ರಿಸ್ತಶಕ (1542-1576) ತುಳು ಹೈವ ಕೊಂಕಣ ದೇಶಗಳನ್ನು ಆಳುತ್ತಿದ್ದ ಸಾಳ್ವ ಕೃಷ್ಣದೇವರಾಯನು ಗೇರುಸೊಪ್ಪೆಯಲ್ಲಿ ಆಳುತ್ತಿದ್ದಾಗ ಶಕ ವರ್ಷ ೧೪೪೧ನೆಯ ಕಾಳಯುಕ್ತಿ ಸಂವತ್ಸರದ ಆಷಾಢ ಶು. ೧೫ ಯು ಗುರುವಾರದಲ್ಲು (ಕ್ರಿಸ್ತಶಕ 1559) ಧಾರೇಶ್ವರದಲ್ಲಿ ಮಾಡಿದ ದಾನಶಾಸನದ ಒಂದು ನಕಲು ಇದೆ; ಅದೇ ಪುಸ್ತಕದಲ್ಲಿ ಆ ಸಾಳ್ವದೇವರಾಯನ ಪ್ರಧಾನಿ ಹೈವಣ್ಣನಾಯಕನು ಶಕವರ್ಷ ೧೪೬೩ನೆಯ ಪ್ಲವ ಸಂವತ್ಸರದ ಚೈತ್ರ ಶು. ೪ಯು ಗುರುವಾರ (ಕ್ರಿಸ್ತಶಕ 1541) ಭಟ್ಟಕಳದಲ್ಲಿ ಚಂದ್ರನಾಥ ಬಸದಿಯನ್ನು ಪ್ರತಿಷ್ಠಿಸಿ, ಅದಕ್ಕೆ ದತ್ತಿಯನ್ನು ಕೊಟ್ಟನೆಂದೂ ಇದೆ. ಈ ಶಾಸನದ ಜತೆಯಲ್ಲಿ ಕವಿಚರಿತೆಯ ಎರಡನೆಯ ಪುಸ್ತಕದ ೩೪೯ನೆಯ ಪುಟದಲ್ಲಿ ಕವಿಚರಿತಕಾರರು ಭಟ್ಟಾಕಳಂಕನ ವಿಚಾರದಲ್ಲಿ "ವಿಜಯಕೀರ್ತಿಯು ತನ್ನ ಶಿಷ್ಯನಾದ ದೇವರಾಯ ಭೂಪಾಲನಿಗೆ ಪಶ್ಚಿಮ ಸಮುದ್ರ ನಿಕಟದೊಳ್ ಭಟಕಳ ಪಟ್ಟಣವನ್ನು ಕಟ್ಟಿಸಿದನೆಂಬುದಾಗಿ" ಹೇಳಿದ ಬಿಳಿಗಿಯ ಶಾಸನದ ಮಾತುಗಳನ್ನು ಹೊಂದಿಸಿ ನೋಡಿದರೆ, ಈ ಸಾಳ್ವಮಲ್ಲನ ಸೋದರದಳಿಯನಾದ ಸಾಳ್ವದೇವರಾಯನು ವಿಜಯಕೀರ್ತಿಯ ಶಿಷ್ಯನಾಗಿದ್ದು, ಕ್ರಿಸ್ತಶಕ 1541ರಲ್ಲಿ ಚಂದ್ರನಾಥ ಬಸದಿಯನ್ನು ಭಟ್ಟಕಳದಲ್ಲಿ ಕಟ್ಟಿಸಿ, ಅದನ್ನು ಜೈನರ ಪುಣ್ಯಪತ್ತನವನ್ನಾಗಿ ಮಾಡಿದನೆಂಬ ಅಂಶವು ತಾನಾಗಿ ಹೊರಡುತ್ತದೆ. ಕ್ರಿಸ್ತಶಕ 1462ರಲ್ಲಿ ಹಿರಿಯ ಭೈರವನೂ ಕ್ರಿಸ್ತಶಕ 1522, 1541, 1559 ಈ ವರ್ಷಗಳಲ್ಲಿ ಸಾಳ್ವ ದೇವರಾಯನೂ ಇದ್ದರೆಂಬುದು ಈಗ ವ್ಯಕ್ತವಾಯಿತು. ಕ್ರಿಸ್ತಶಕ 1462ರಿಂದ ಕ್ರಿಸ್ತಶಕ 1522ರ ವರೆಗಿನ ೬೦ ವರ್ಷದ ಅವಧಿಯಲ್ಲಿ ಸಾಳ್ವಮಲ್ಲನು ಬಹುಶ: ಬದುಕಿರಬೇಕು. ಅದೇ ಅವಧಿಯಲ್ಲಿ ಹಿರಿಯ ಭೈರವನ ಅವಸಾನವಾಗಿರಬೇಕು;

ಚಿಕ್ಕ ಭೈರವ, ಅಂಬಿರಾಯರ ಆಳಿಕೆ ಮುಗಿದಿರಬೇಕು; ಸಾಳ್ವಮಲ್ಲನು ಪಟ್ಟವನ್ನು ಏರಿರಬೇಕು.

ಕವಿಚರಿತಕಾರರು ವಾದಿವಿದ್ಯಾನಂದನ ಕಾಲ ನಿರ್ಣಯಕ್ಕಾಗಿ ೨೨೮ನೆಯ ಪುಟದಲ್ಲಿ ಉಲ್ಲೇಖಿಸಿದ ನಗರ ತಾಲೂಕಿನ ಶಾಸನದ ಪ್ರಕಾರ ಅಭಿನವವಾದಿ ವಿದ್ಯಾನಂದನು "ಸಾಳ್ವಮಲ್ಲರಾಯ ಗುರು ನೃಪಾಲ ಸಾಳುವ ದೇವರಾಯ ನಗರಿ ರಾಜ್ಯದ ರಾಜರ ಆಸ್ಥಾನಗಳಲ್ಲಿ ವಾದಿಗಳನ್ನು ಜಯಿಸಿದನು" ಎಂದು ಬರೆದಿದ್ದಾರೆ. ನಗರದ ಈ ಶಾಸನದಿಂದ ಸಾಳ್ವಮಲ್ಲ ಸಾಳ್ವದೇವ ಎಂಬಿಬ್ಬರ ನಡುವೆ ಗುರುನೃಪಾಲನೆಂಬವನು ಆಳಿದ್ದು ಸ್ಪಷ್ಟವಾಗುತ್ತದೆ. ಹಿರಿಯ ಭೈರವನಿಗೆ ಗುರುರಾಯನೆಂಬ ಮಗನಿದ್ದ ಅಂಶವು IIನೆಯ ಶಾಸನದ ಆಧಾರದಿಂದ 7 ನೆಯ ಪುಟದಲ್ಲಿ ಕೊಟ್ಟ ವಂಶಾವಳಿಯಿಂದ ತಿಳಿಯುತ್ತದೆ. ಒರಿಯಂಟಲ್ ಲೈಬ್ರೆರಿಯ ಲೋಕಲ್ ರಿಕಾರ್ಡ್ಸ್ ೩೦ ಮತ್ತು೩೧ ಪುಸ್ತಕಗಳಲ್ಲಿ ದೊರೆಯುವ ಮೂರು ಶಾಸನಗಳಲ್ಲಿ ಒಬ್ಬ ಗುರುರಾಯನ ಹೆಸರೂ ಇದೆ.

ಶಕವರ್ಷ ೧೪೪೯ನೆಯ ಸರ್ವಜಿತು ಸಂವತ್ಸರದ ಮಾರ್ಗಶಿರ ಶು। ೨ ಗುರುವಾರ ಗುರುರಾಯ ಒಡೆಯರು ಸಂಗೀತಪುರವನ್ನು ಆಳುತ್ತಿರುವಲ್ಲಿ . . . .(ಭಟ್ಕಳ ೩೨೩) (ಕ್ರಿಸ್ತಶಕ 1527.)

ಶಕವರ್ಷ ೧೪೫೧ನೆಯ ವಿರೋಧಿ ಸಂವತ್ಸರದ ಶ್ರಾವಣ ಬ. ೧೩ಯು ಆದಿತ್ಯವಾರ . . . . . ವಿಜಯನಗರದಲ್ಲಿ ಕೃಷ್ಣರಾಯರು . . . ಗುರುರಾಯ ಒಡೆಯರು ಸಂಗೀತಪುರವನ್ನು ಆಳುತ್ತಿರುವಲ್ಲಿ . . . . . ಗೋವೇ ರಾಜ್ಯದ ದಕ್ಷಿಣಭಾಗದಲ್ಲಿ ಸಾಷಷ್ಟಿಗ್ರಾಮಕ್ಕೆ ಮುಖ್ಯವಾದ ಅಷ್ಟಗ್ರಾಮದೊಳಗೆ (ಭಟ್ಕಳ ೩೨೦) . . . . (ಕ್ರಿಸ್ತಶಕ 1529).

ಶಕವರ್ಷ ೧೪೫೪ನೆಯ ನಂದನ ಸಂವತ್ಸರದ ಜ್ಯೇಷ್ಠ ಬ. ೧೩ಯು ಸಂಗೀತರಾಯ ಒಡೆಯರವರ ವರಕುಮಾರ ಗುರುರಾಯ ಒಡೆಯರು ಸಂಗೀತಪುರ ವರಾಧೀಷ್ಠಿತರಾಗಿ ಭಟ್ಕಳವನ್ನು ಆಳುತ್ತಿರುವಲ್ಲಿ ಗುರುರಾಯ ಒಡೆಯರ ರಾಣಿವಾಸ ವೀರಾಜಮ್ಮದೇವಿಯವರಿಗೆ ಪೊಡಮಟ್ಟು ದೇವಪ್ಪ, ಜೋಗಿಪ್ಪ, ಸಣ್ಣಪ್ಪನವರು . . . . (ಭಟ್ಕಳ ೩೧೯) . . . . (ಕ್ರಿಸ್ತಶಕ 1532).

ಈ ಶಾಸನಗಳ ಆಧಾರದಿಂದ ಗುರುರಾಯನು ಕ್ರಿಸ್ತಶಕ 1527, 1529, 1532 ಈ ವರ್ಷಗಳಲ್ಲಿ ಸಂಗೀತಪುರದಲ್ಲಿ ಆಳುತ್ತಿದ್ದನೆಂಬುದು ದೃಢವಾಗುತ್ತದೆ. ಇದರಿಂದ ಸಾಳ್ವದೇವರಾಯನು ಕ್ರಿಸ್ತಶಕದ 1532ರ ತರುವಾಯ ಪಟ್ಟಕ್ಕೆ ಬಂದು ಕ್ರಿಸ್ತಶಕ 1659ರ ವರೆಗಾದರೂ "ತುಳು ಹೈವ ಕೊಂಕಣ ದೇಶದಧಿಪನಾಗಿ" ಇದ್ದನೆಂದು ಊಹಿಸಬೇಕಾಗುತ್ತದೆ.

ಮೇಲೆ ಹೇಳಿದ ಗುರುರಾಯನಿಗೆ ಸಂಗಮ ಹೆಸರಿನ ಒಬ್ಬ ಅಣ್ಣನಿದ್ದನೆಂಬ ಅಂಶವನ್ನು 154ನೆಯ ಪುಟದಲ್ಲಿಯೂ ವಂಶವೃಕ್ಷದಲ್ಲಿಯೂ ಹೇಳಿದ್ದೇನೆ. ಕವಿಚರಿತೆಯವರು ಭಟ್ಟಾಕಳಂಕನ ವಿಚಾರದಲ್ಲಿ ನಿರ್ದೇಶಿಸಿದ "ಸಂಗೀತ ಪುರಾಧೀಶನಾಗಿ ಶ್ರುತಕೀರ್ತಿಯು ಪ್ರತಿಷ್ಠಿಸಿದ ಸಂಗಮ ಭೂಪನು" ಗುರುರಾಯನ ಅಣ್ಣನಲ್ಲ. ಇವನು ಬಹುಶಃ 155ನೆಯ ಪುಟದಲ್ಲಿ ಹೆಸರಿಸಿದ ಹೈವರಾಜನಿಗೂ ಕೇಶವರಾಜನಿಗೂ ನಡುವೆ ಆಳಿದ ಸಂಗಮನಾಗಿರಬಹುದು. ಹೀಗೆ ವಿಚಾರಿಸಿದರೆ "ಗಂಡುಗಲಿಗಳ ಗಂಡಮಂಡಳೇಶ್ವರ ಹೈವ ನೃಪಸುತ" ಸಂಗೀತಪುರದ ದೊರೆಯ ಮಗನಾದ ಈ ಸಂಗಮನ ಆಜ್ಞಾನುಸಾರವಾಗಿ ಕೋಟೀಶ್ವರ ಕವಿಯು ಬರೆದ ಜೀವಂಧರ ಷಟ್ಪದಿಯ ಕಾಲವನ್ನು ಕ್ರಿಸ್ತಶಕದ 1500ರಿಂದ ಸುಮಾರು ೬೦ ವರ್ಷ ಆಚೆಗೆ ಒಯ್ಯಬೇಕಾಗುತ್ತದೆ. (ಕವಿಚರಿತೆಯ ಎರಡನೆಯ ಪುಸ್ತಕದ ೧೪೫ನೆಯ ಪುಟ ನೋಡಿ.)

ಕಾವ್ಯಸಾರವೆಂಬ ಕನ್ನಡ ಗ್ರಂಥವನ್ನು ಸಂಕಲಿಸಿದ ವಿದ್ಯಾನಂದನು ಸಾಳ್ವಮಲ್ಲಿರಾಯ, ಗುರುರಾಯ, ಸಾಳ್ವದೇವರಾಯರ ಆಸ್ಥಾನಗಳಲ್ಲಿಯೂ ಕಾರಕಳದ ಭೈರವ ರಾಜನಲ್ಲಿಯೂ ವಾದಿಗಳನ್ನು ಜಯಿಸಿ, ವಿಜಯನಗರದ ಕೃಷ್ಣರಾಜನಿಂದ ಗೌರವಿಸಲ್ಪಟ್ಟನೆಂಬದಾಗಿ ಕವಿಚರಿತೆಯವರು ನಗರತಾಲೂಕಿನ ೪೬ನೆಯ ಶಾಸನವನ್ನು ಆಧರಿಸಿ ೨೨೮ನೆಯ ಪುಟದಲ್ಲಿ ಸೂಚಿಸಿದ್ದಾರೆ. ವಿಜಯನಗರದ ಕೃಷ್ಣರಾಯನ ಕಾಲವು ಕ್ರಿಸ್ತಶಕ 1509–1529. ಈ ಕೃಷ್ಣರಾಯನ ಕಾಲದಲ್ಲಿ "ದಾಪಣಿ ಶ್ರೀವೀರ ಹಿರಿಯರ ಬೈರರ್ಸ ಒಡೆಯರ ಅಳಿಯಂದಿರು ಬೊಮ್ಮಲದೇವಿಯ ಕುಮಾರರು ಇಮ್ಮಡಿ ಬೈರರ್ಸ ಒಡೆಯರು ಕಳಸ ಕಾರಕಳದ ರಾಜ್ಯವನ್ನಾಳುತಿದ್ದನೆಂದು" ಮೂಡುಗೆರೆ ೪೧ನೆಯ ಶಾಸನದಿಂದ ತಿಳಿಯುತ್ತದೆ. ಭೈರವ ಎಂಬ ನಾಮಾಂಕಿತವು ಕಾರಕಳದ ದೊರೆಗಳಿಗೂ ಗೇರುಸೊಪ್ಪೆಯಲ್ಲಿ ಆಳಿದ ಒಬ್ಬಿಬ್ಬ ಅರಸರಿಗೂ ಹೇಗೆ ಪ್ರಾಪ್ತವಾಯಿತು ಎಂಬೀ ವಿಷಯವಾಗಿ 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' ಎಂಬ ಕೀರ್ತಿದಾಯಕವಾದ ಪುಸ್ತಕವನ್ನು ಬರೆದ ಮ. ರಾ. ಗಣಪತಿರಾವ್ ಐಗಳರು "ಜಿನದತ್ತರಾಯನ ಮಗನಾದ ಪಾರ್ಶ್ವಚಂದ್ರನು ಆಳುವ ಕಾಲದಲ್ಲಿ ತನ್ನ ತಂದೆಯನ್ನು ಭೈರವಿಯಾದ ಪದ್ಮಾವತಿಯೇ ರಕ್ಷಿಸಿದ್ದರಿಂದ, ತನ್ನ ಹೆಸರಿಗೆ ಭೈರವ" ಎಂಬ ಬಿರುದನ್ನು ಹಚ್ಚಿಕೊಂಡನೆಂಬದಾಗಿ ಹೇಳುವರು. ಈ ಅಭಿಪ್ರಾಯವು ಅಷ್ಟು ಸರಿಯೆನ್ನಿಸುವುದಿಲ್ಲ. ಭೈರವ ಭೈರವೀ ಎಂಬಂಥ ಶಾಕ್ತೇಯ ದೇವತೆಗಳ ಹೆಸರುಗಳನ್ನು ಜೈನರು ವಾಡಿಕೆಯಾಗಿ ಇಟ್ಟುಕೊಳ್ಳುವುದಿಲ್ಲ. ಜೈನರಾಜರಲ್ಲಿಯೂ ಜೈನಕವಿಗಳಲ್ಲಿಯೂ ಈ ಹೆಸರುಗಳನ್ನು ಕಾಣುವುದು ಅಪೂರ್ವ. ಬಯ್ಯ, ಬಯ್ಯು,

ಪಯ್ಯ, ಅಬ್ಬಾಯ, ಬಾಯಣ್ಣ, ಬಯ್ಯಕ್ಕ ಎಂಬೀ ಹೆಸರುಗಳು ದ್ರಾವಿಡ ಭಾಷೆಗಳಲ್ಲಿ ಈಗಲೂ ಕಿವಿಯ ಮೇಲೆ ಬೀಳುತ್ತಿವೆ. Vನೆಯ ಶಾಸನದಲ್ಲಿ ಹೇಳಿದ ಸಾಳ್ವಮಲ್ಲನು "ಭೂಪಾಲೋತ್ತಮ ಬಯ್ಯಣೇಂದ್ರ ತನುಜಂ." ಬಯ್ಯನು ಅರಸಾದರೆ ಅವನನ್ನುಬಯ್ಯರಸು ಎಂದು ಕರೆಯಬೇಕಾಗುತ್ತದೆ. ಮೂಡುಗೆರೆಯ ತಾಲೂಕಿನ ಅನೇಕ ಶಾಸನಗಳಲ್ಲಿ ಭೈಯರಸ ಎಂತಲೇ ಇದೆ. ಈ ಬಯ್ಯರಸ ಪದವೇ ಭೈಯರ್ಸ, ಭೈರಸ ಎಂದಾಗಿ, ಕೊನೆಗೆ ಸಂಸ್ಕೃತದಿಂದ ಭೈರವ ರೂಪವನ್ನು ಪಡೆದಿರಬೇಕು. ಕಾವ್ಯಸಾರದ ಪೀಠಿಕೆಯಲ್ಲಿ "ಅಭಿನವವಾದಿ ವಿದ್ಯಾನಂದ ಸ್ವಾಮಿಗಳು ಭಲ್ಲಾತಕೀ ಪುರವರಾಧೀಶ್ವರ ಭೈರಾಗಿಗೆ ಬರೆಸಿಕೊಟ್ಟ ಕಾವ್ಯಸಾರಕ್ಕೆ ಮಂಗಳ ಮಹಾಶ್ರೀ" ಎಂದಿದೆ. ಪೀಠಿಕೆಯನ್ನು ಬರೆದವರು "ಈ ಬೈರಾಗಿಯ ವಿಷಯವಾಗಿ ಏನೂ ತಿಳಿದಿಲ್ಲ" ಎನ್ನುವರು; ಆದರೆ ಕವಿಚರಿತೆಯವರು "ಇಲ್ಲಿ ಏನೋ ತಪ್ಪು ಬಿದ್ದಿರುವಂತೆ ತೋರುತ್ತದೆ" ಎಂದು ಹೇಳುವರು. ಭಲ್ಲಾತಕೀಪುರವು ಗೇರುಸೊಪ್ಪೆ ಎಂದು ಬೇರೆ ಹೇಳಬೇಕಾಗಿಲ್ಲ. ಮೂಲದಲ್ಲಿ 'ಬಯ್ರಸಗೆ' ಎಂದಿದ್ದ ಶಬ್ದವು ನಕಲು ಮಾಡುವಾಗ 'ಬಯ್ರಗಿಗೆ' ಎಂದು ಬಹುಶಃ ಮಾರ್ಪಟ್ಟಿದ್ದರೂ ಇರಬಹುದು. ಕಾವ್ಯಸಾರವು 'ಭಲ್ಲಾತಕೀಪುರವರಾಧೀಶ್ವರ ಬೈಯರಸಗೆ ಬರೆಸಿಕೊಟ್ಟ ಗ್ರಂಥವೆಂದು ತಿಳಿಯುವುದಕ್ಕೆ ಅವಕಾಶವಿದೆ. "ವಿಬುಧರಿಂ ಕೀರ್ತಿಯಂ ತಾಳ್ದ" "ಸುಕವಿಜನಮನಃಪದ್ಮಿನೀ ರಾಜಹಂಸಂ" ಎಂಬ ಬಿರುದಿದ್ದವನಿಗೋಸ್ಕರ ಪಡೆದಿದ್ದನೆಂದು (IIನೆಯ ಶಾಸನ) "ಬರೆಸಿ ಕೊಟ್ಟ ಕಾವ್ಯಸಾರ" ಎಂಬ ಮಾತುಗಳು ಆಗ ಚೆನ್ನಾಗಿ ಒಪ್ಪುವುವು. ಹಾಗಿದ್ದಲ್ಲಿ ಕಾವ್ಯಸಾರಕ್ಕೆ ಅಂತ್ಯದಲ್ಲಿ ಕೊಟ್ಟಿರುವ ವಿಜಯ ಸಂವತ್ಸರವನ್ನು ಕ್ರಿಸ್ತಶಕ 1533ಕ್ಕೆ 60ವರ್ಷ ಹಿಂದೆ ಎಂದರೆ ಕ್ರಿಸ್ತಶಕ 1473ಕ್ಕೆ ಕೊಂಡುಹೋದರೂ ತಪ್ಪಾಗಲಾರದು. ವಾದಿವಿದ್ಯಾನಂದನು ವಿಜಯನಗರದ ಕೃಷ್ಣರಾಯನಿಂದ(1505-1529)ಮನ್ನಿಸಲ್ಪಟ್ಟತರುವಾಯ ತನ್ನ ಕಾವ್ಯಸಾರವನ್ನು 1533ನೆಯ ವಿಜಯ ವತ್ಸರದಲ್ಲಿ ಹಿರಿಯ ಭೈರವನಿಗೆ ಬರೆಸಿ ಕೊಟ್ಟನೆಂದು ಹೇಳುವುದಕ್ಕಿಂತ ಸಂಗ್ರಹಾತ್ಮಕವಾದ ಆ ಗ್ರಂಥದಲ್ಲಿ ಆತನು ಉದ್ಧರಿಸಿದ ಗ್ರಂಥಗಳನ್ನೆಲ್ಲಾ ಅಭ್ಯಾಸಮಾಡಿ, ಅದನ್ನು ಭಲ್ಲಾತಕೀಪುರವರಾಧೀಶ್ವರ ಬೈಯರಸನಿಗೆ ಸಮರ್ಪಿಸಿ ಪ್ರಸಿದ್ಧಿಪಡೆದ ನಂತರವೇ ವಿಜಯನಗರದ ಆಸ್ಥಾನದಲ್ಲಿ ಗೌರವಾರ್ಹನಾದನೆಂಬ ಅನುಮಾನವು ಯುಕ್ತವಾಗಿದೆ. ಈ ಗ್ರಂಥವು ಹಿರಿಯ ಭೈರವನಿಗಾಗಿ ಅಭಿನವಾದಿ ವಿದ್ಯಾನಂದನು ಸಂಕಲಿಸಿದ್ದರೆ, ಭೈರವನು ಕ್ರಿಸ್ತಶಕದ 1473ರಲ್ಲಿ ನಗಿರರಾಜ್ಯದ ಗೇರುಸೊಪ್ಪೆಯಲ್ಲಿ ರಾಜ್ಯವಾಳಿರಬೇಕು. ಅವನ ತರುವಾಯ ಬಂದ ಚಿಕ್ಕ ಭೈರವನು ಅಷ್ಟು ಪ್ರಸಿದ್ಧನೂ ಅಲ್ಲ, ಬಹುಶಃ ಹೆಚ್ಚುಕಾಲ ಆಳಲೂ ಇಲ್ಲ. ಸುಮಾರು ಕ್ರಿಸ್ತಶಕದ 1500ರಲ್ಲಿ ಸಾಳ್ವಮಲ್ಲನು ಆಳಿಕೊಂಡಿರಬೇಕು. "ಹೈಗ ಕೊಂಕಣವನ್ನು ಒಳಕೊಂಡ ನಗಿರರಾಜ್ಯವನ್ನು ಮಹಾಮಂಡಲೇಶ್ವರ ಸಲುವ ದೇವರಾಯ ಒಡೆಯನು ಕ್ರಿ. ಶ. 1500ರಲ್ಲಿ ಆಳುತ್ತಿದ್ದನೆಂದು" ಮ. ರಾ. ಗಣಪತಿ ಐಗಳರ ಅಮೂಲ್ಯ ಗ್ರಂಥದ ೧೪೬ನೆಯ ಪುಟದಲ್ಲಿ ಬರೆದಿರುವ ಮಾತುಗಳಿಗೆ ಬೇರೆ ಆಧಾರವಿದ್ದದ್ದೇ ಆದರೆ, ನನ್ನ ಅನುಮಾನವು ಇನ್ನೂ ದೃಢವಾಗುತ್ತದೆ. ಇಲ್ಲಿ ಉಕ್ತವಾದ 'ಸಲುವ ದೇವರಾಯನು' ಬಹುಶಃ ಸಾಳ್ವಮಲ್ಲ ದೇವನಾಗಿರಬೇಕು. ಇದುವರೆಗೆ ನಿಷ್ಕರ್ಷಿಸಿದ ಚರಿತ್ರಾಂಶಗಳ ಕಾಲಗಳಲ್ಲಿ ವಿರೋಧವಿಲ್ಲವೆಂಬುದನ್ನು ಈ ಕೆಳಗಿನ ಪಟ್ಟಿಯು ತೋರಿಸುತ್ತದೆ.

ಗೇರುಸೊಪ್ಪೆಯ ಹಿರಿಯ ಭೈರವ (ಕ್ರಿಸ್ತಶಕದ ಸುಮಾರು 1462, 1473.)
ಸಾಳ್ವಮಲ್ಲ (ಸುಮಾರು 1500)
ಸಾಳ್ವದೇವ ಯುವರಾಜ (ಸುಮಾರು 1522)
ಹಿರಿಯ ಭೈರವನ ಮಗ ಗುರುರಾಯ (ಸುಮಾರು 1522–1530)
ಸಾಳ್ವದೇವ (ಸುಮಾರು 1533, 1541, 1559)
ವಿಜಯನಗರ ಕೃಷ್ಣರಾಯ (1505–1529)
ಕಾರಕಳದ ಭೈಯರಸ, ಹಿರಿಯ ಭೈಯರಸರು(1492 --1524)
ಅಭಿನವವಾದಿ ವಿದ್ಯಾನಂದ (ಸುಮಾರು 1450 – 1530)

ಜನಗಳನ್ನು ಬಾಧಿಸುತ್ತಿದ್ದ ಹುಲಿಯನ್ನು ಸಳದಿಂದ ಹೊಡೆದುಕೊಂಡವನ ಕುಲದವರನ್ನುಹೊಯ್ಸಳ,ಹೊಯ್ಸಾಳರೆಂದು ಕರೆದರೆಂಬದಾಗಿ ಕೆಲಮಂದಿ ಶಾಸನಕವಿಗಳು ಹೇಳಿದಂತೆ, ಈ ಮನೆತನಕ್ಕೆ ಸಾಳ್ವ ಎಂಬ ಹೆಸರನ್ನು ಏತಕ್ಕೆ ಕೊಟ್ಟರೆಂದು ಈ ಶಾಸನವು ಹೇಳುವುದಿಲ್ಲ. ಸಾಳ್ವರ ಉಲ್ಲೇಖವು ಮಹಾಭಾರತ ಹರಿವಂಶಗಳೆಂಬ ಸಂಸ್ಕೃತ ಗ್ರಂಥಗಳ ಕಾಲದಲ್ಲಿ ಇದೆ. ಆದರೆ ಇದು ಬಹುಪುರಾತನ ಕಥೆ; ಮೂರುಸಾವಿರ ವರ್ಷಗಳ ಹಿಂದೆಯೇ ಆಗಿಹೋದ ಆ ಸಾಳ್ವನುಸಾಳ್ವರ ಹೆಸರುಗಳು ಬಹುಶ: ಐತಿಹಾಸಿಕ ಯುಗದವರ ನಾಲಗೆಯಲ್ಲಿ ನಿಂತಿರಬಹುದಾದರೂ, ಅಂಥ ಪುರಾಣಪುರುಷರ ಸಂತತಿಯು ಕ್ರಿಸ್ತಶಕ ಹದಿನಾರನೆಯ ಶತಮಾನದ ವರೆಗೆ ಅವಿಚ್ಛಿನ್ನವಾಗಿ ನಡೆದು ಬಂದಿದೆ ಎಂದು ಆಧಾರವಿಲ್ಲದೆ ಸಾಧನೆಮಾಡುವುದು ನನ್ನಿಂದ ಶಕ್ಯವಿಲ್ಲ. ಸಾಳುಕೆರೆ, ಸಾಳೂರು (ಸಾಣೂರು), ಸಾಣೆಕಟ್ಟೆ, ಸುಂಕಸಾಳ ಇತ್ಯಾದಿ ಗ್ರಾಮ ನಾಮಗಳಲ್ಲಿ ಪೂರ್ವಪದವಾಗಿ ಇಲ್ಲವೆ ಪರಪದವಾಗಿ ನಿಲ್ಲುವ ಸಾಳ ಶಬ್ದವು ಬಹುಶ: ಸಾರ್ಥಕವಾದ ದ್ರಾವಿಡ ಪದವಾಗಿ ಇರ

ಬೇಕು. ದ್ರಾವಿಡಭಾಷೆಗಳಲ್ಲಿ ಸಕಾರ ತಕಾರ ಪಲ್ಲಟಗಳು ಬಳಕೆಯಲ್ಲಿವೆ. ಸಾಣೂರು–ತಾಣೂರು, ಸಾಳಗೇರಿ–ತಾಳ ಗೇರಿ, ಸುದೆಕಾರ–ತುದೆಕಾರ ಇತ್ಯಾದಿ. ಹಿರಿಯ ಭೈರವನ ದೊಡ್ಡಪ್ಪನಾದ ಭೈರವನು 'ಚಂದ್ರಗುತ್ತಿಯ ಮಹಾವರ ಕೊಪ್ಪಣದಲ್ಲಿ (ಕೊಪ್ಪಳ?) ಶೋಭೆವೆತ್ತು.... ಚೆಲುವಾಗಿ ತೋರ್ಪ....ತಿಳುವಳ್ಳಿಯ....ಪುರವರಾಧೀಶ್ವರನೆಂದು' ಹಿಂದೆ ಹೇಳಲಾಗಿದೆ. ಆ ಕಾಲದ ಚಂದ್ರಗುತ್ತಿ ನಾಡಿನ ತಿಳು ವಳ್ಳಿಯಿಂದ ಇಂದಿನ ಹೊನ್ನಾವರ ತಾಲೂಕಿನ ತಾಳೊಳ್ಳಿಗೆ (ಸಾಳ್ವಳ್ಳಿಗೆ) ದೂರವಿಲ್ಲ. ತಿಳುವಳ್ಳಿಯ ಅಥವಾ ಸಾಳ್ವಳ್ಳಿಯ ದೊರೆಗಳು ಸಾಳ್ವರೆಂದೂ ಸಳುವರೆಂದೂ ಏತಕ್ಕಾಗಬಾರದು? ಶಾಸನಗಳಲ್ಲಿ ಸಳುವ, ಸಲುವ ಎಂಬೀ ಎರಡು ಪದಗಳು ಸಮಾನಾರ್ಥವಲ್ಲಿಬರುವುವು. ಚಲ್ವ,ಚಲುವ ಇವುಗಳ ರೂಪ ಗಳು ಸಲ್ವ, ಸಲುವ ಎಂದಾಗುತ್ತವೆ. ಚಲ್ವ ನಾರಾಯಣ ಎಂಬುದು ಸಳ್ವ ನಾರಾಯಣವಾಗಿರಬಹುದೇ?

ಹಿಂದೆ ಕೊಟ್ಟ ವಂಶವೃಕ್ಷದಲ್ಲಿ ಎರಡು ಮನೆತನಗಳು ಕಾಣುತ್ತವೆ; ಇವೆರಡರಲ್ಲಿ ಪರಸ್ಪರ ವಿವಾಹ ಸಂಬಂಧಗಳು ಬೆಳೆದು ಇದ್ದುದರಿಂದ, ಇವು ಭಿನ್ನಗೋತ್ರಗಳು ಎಂದು ತಿಳಿ ಯಬೇಕು. ಆದುದರಿಂದ ಸಾಳ್ವವಂಶದ ಮೊದಲಿಗನಾದ ನಾರಾಯಣನು (7ನೆಯ ಪುಟ ನೋಡಿ) ಇನ್ನೊಂದು ವಂಶದ ಮೂಲಪುರುಷನಲ್ಲವೆಂಬುದು ಸ್ಪಷ್ಟವಾಗುತ್ತದೆ. ಹಿರಿಯ ಭೈರವನ ತನಕ ಒಂದು ಮನೆತನದಲ್ಲಿ ಅಳಿಯಕಟ್ಟಿನ ಪ್ರಕಾರ ಪಟ್ಟವು ಮಾವನಿಂದ ಅಳಿಯನಿಗೆ ಕ್ರಮವಾಗಿ ನಡೆ ದಿರಬೇಕು. ಮತ್ತೊಂದು ಮನೆತನವು ಮಕ್ಕಳ ಕಟ್ಟನ್ನು ಆಚರಿಸಿದ್ದರಿಂದಲೋ, ಅಥವಾ ಒಬ್ಬಳೇ ಮಗಳಾದ ನಾಗ ಲಾದೇವಿಯನ್ನು ಹಿರಿಯ ಭೈರವನಿಗೆ ಕೊಟ್ಟುದರಿಂದಲೊ, ಅಥವಾ ಹಿರಿಯ ಭೈರವನು ಪರಾಕ್ರಮಶಾಲಿಯಾದುದರಿಂದ ಲೋ ಆ ಎರಡು ಮನೆತನಗಳು ಕೆಲವು ಕಾಲ ಕೈಗೂಡಿ ಬದು ಕಿದುವು. ಆದರೂ ಜಗಳಗಳು ಇಲ್ಲದೆ ಇರಲಿಲ್ಲ. "ಸಾಳುವ ದಟ್ಟ ವಿಭಾಡ" ಎಂದು ಹಿರಿಯ ಭೈರವನನ್ನು ಕುರಿತು ಶಾಸನ ಕಾರನು ಹೇಳುತ್ತಾನೆ. ಅವನ ಮರಣಾನಂತರ ಅಳಿಯಕಟ್ಟಿನ ಹೊಟ್ಟೆಯಲ್ಲಿದ್ದ ಕಿಚ್ಚು ಹೊಗೆಯುವುದಕ್ಕೆ ಹತ್ತಿತು. ಸಾಳ್ವ ಮಲ್ಲನ ಆಳಿಕೆಯಲ್ಲಿಯೇ ಅವನ ಸೋದರದಳಿಯನು "ಕೊಂ ಕಣದಲ್ಲಿ ಗರ್ವಿಸಿ ನಿಂತು ಬಿಟ್ಟನು." ಇತ್ತ ಹಿರಿಯ ಭೈರ ವನ ಮಗ ಗುರುರಾಯನು ಇಬ್ಬರ ಮೇಲೆ ಕತ್ತಿಯನ್ನು ಮಸೆ ಯುವುದಕ್ಕೆ ತೊಡಗಿದನು. ಕರ್ಣಾಟಕದ ಇತರ ಭಾಗಗಳಲ್ಲಿ ಆದಂತೆಯೇ ನಗಿರರಾಜ್ಯದಲ್ಲಿಯೂ ಕ್ರಿಸ್ತಶಕದ 1530ರಲ್ಲಿ ಯೇ ಅಂತಃಕಲಹವು ಕಾಲುಹಾಕಿತು.

ಧರ್ಮಾಚರಣೆಯು ಚೈತ್ಯಾಲಯನಿರ್ಮಾಪಣ, ಬಿಂಬ ಸ್ಥಾಪನ, ಗೋಮಟೇಶ್ವರ ಪ್ರತಿಷ್ಠೆ ಮುಂತಾದ ಕಾರ್ಯ ಗಳಲ್ಲಿಯೇ ಮುಗಿಯಿತು ಹೊರತು, ರಾಜ್ಯವು ಪಾರತಂತ್ರ್ಯದ ಹಳ್ಳಕ್ಕೆ ಹೊರಳಾಡಿ ಬೀಳದಂತೆ ರಾಜ್ಯರಕ್ಷಣೆಗೂ ಪ್ರಜಾ ಹಿತಕ್ಕೂ ಬೇಕಾದ ನ್ಯಾಯನಿಬಂಧನೆಗಳನ್ನು ವ್ಯವಸ್ಥೆಗೊಳಿ ಸುವ ಗೋಜಿಗೆ ಹೋಗಲಿಲ್ಲ. ರಾಜನಲ್ಲಿಯೂ ಪ್ರಜೆಗಳ ಲ್ಲಿಯೂ ಒಂದುತರದ ಅಸಹ್ಯವಾದ ಭೋಗಪರಾಯಣತೆಯೂ ಸುಖಲಾಲಸೆಯೂ ಹೆಚ್ಚುತ್ತಾ ಬಂದುವು. ಅರಸರು "ರಾಜ್ಯಂ ಗೆಯ್ಯುವುದೆಂದರೆ.....ಪಟ್ಟಮಹಾದೇವಿಯರಿಂದ ಅನೇಕ ಪುರಂಧ್ರಿಯರೊಳ್ ಕೂಡಿ.....ಸುಖಸಂಕಥಾವಿನೋದ ದಿಂದ ಇರುವುದೆಂದು" ಅರ್ಥವಾಯಿತು. ಅರಸರ ಬಿರುದಂಕ ಮಾಲೆಯನ್ನು ಹಾಡಿ ಕೀರ್ತಿಡಂಗುರವನ್ನು ಸಾರುವುದಕ್ಕೆ ಆಸ್ಥಾನ ಕವಿಗಳು ನಿಂತು ಬಿಟ್ಟರು. ಇಂಥವರಲ್ಲಿ ಕೆಲವರಾ ದರೂ ಈ ಶಾಸನಕರ್ತೃಗಳಾಗಿರಬೇಕು. (ಆದಿಯಪ್ಪನು ತನ್ನ ಧನ್ಯಕುಮಾರ ಚರಿತೆಯನ್ನು "ತುಳುದೇಶದ ಗೇರುಸೊಪ್ಪೆಯ ದೊರೆ ಭೈರವರಾಯನ ಗುರುವಾದ ವೀರಸೇನನ ಆಜ್ಞಾನು ಸಾರವಾಗಿ ಬರೆದಂತೆ ಹೇಳುತ್ತಾನೆ" (ಕವಿಚರಿತೆ II ೪೧೩). ಆದುದರಿಂದ ಆದಿಯಪ್ಪನು ಕ್ರಿಸ್ತಶಕ 1650ಕ್ಕಿಂತ ಸುಮಾರು ೨೦೦ ವರ್ಷ ಹಿಂದೆಯೇ ಎಂದರೆ ಸುಮಾರು 1450 ರಲ್ಲಿ ಬದುಕಿರಬೇಕು. ಈ ಆದಿಯಪ್ಪನು ಬಹುಶಃ IIನೆಯ ಶಾಸ ನದ ಕವಿಯಾಗಿರಬೇಕು. ಭಾರತವನ್ನು ಬರೆದ ಸಾಳ್ವನು Vನೆಯದರ ಕವಿ ಎಂಬ ಅನುಮಾನವಿದೆ.) ಜನಜೀವನದಲ್ಲಿ ಸೇರಿ ಹೋದ ಉದ್ಯೋಗನಿರುತ್ಸಾಹವೂ ವಿಷಯಲಂಪಟ ತೆಯೂ ಬಾಹ್ಯಾಡಂಬರವೂ ಇಂಥವರ ಕವಿತೆಯಿಂದ ಸಾಹಿತ್ಯ ದಲ್ಲಿ ಹರಿದು ಬಂದು ಅದನ್ನು ಇನ್ನೂ ಕಳಂಕಿಸಿದುವು. ರತ್ನಾಕರವರ್ಣಿಯ ಭರತೇಶವೈಭವ, ಸಾಳ್ವನ ರಸರತ್ನಾಕರ; ಕೋಟೇಶ್ವರನ ಜೀವಂಧರಷಟ್ಪದಿ, ಆದಿಯಪ್ಪನ ಧನ್ಯ ಕುಮಾರ ಚರಿತೆ ಮೊದಲಾದ ಉದ್ಗ್ರಂಥಗಳ ಬಣ್ಣದ ಮೇಲೆ ಲ್ಲಾ ಮಸಿ ಚೆಲ್ಲತಕ್ಕ ಶೃಂಗಾರವರ್ಣನೆಯೇ ಆ ಕಾಲದ ಜನ ಜೀವನದ ಅಶ್ಲೀಲಕ್ಕೆ ಸಾಕ್ಷಿಯಾಗಿದೆ. ಆದರೂ ಇಂಥ ಕೃತಿ ಗಳಿಂದ ಸಾಹಿತ್ಯಕ್ಕೆ ಪ್ರಯೋಜನ ಉಂಟಾಗದೆ ಹೋಗಲಿಲ್ಲ. ಈ ಕವಿಗಳು ಹಿಂದಿನ ಹಳೆಗನ್ನಡದ ಬಿಕ್ಕಟ್ಟಾದ ಹಾದಿಯನ್ನು ಬಿಟ್ಟು, ಜನಸಾಮಾನ್ಯಕ್ಕೆ ತಿಳಿಯತಕ್ಕಪದ್ಯಸರಣಿಯಲ್ಲಿ ಕವಿತೆ ಯನ್ನುಕೊಂಡುಹೋಗಿ, ದಾಸರತುಂಡುಪದಗಳೂ, ಹಳ್ಳಿಯ ವರಸಾಂಗತ್ಯಗಳೂ ಭಾಗವತರ ಯಕ್ಷಗಾನಗಳೂ ಬೆಳೆಯುವು ದಕ್ಕೆ ನೆಲವನ್ನು ಹಸನು ಮಾಡಿಕೊಟ್ಟರು. ತುಳುನಾಡನ್ನು ಒಳಕೊಂಡಿದ್ದ ನಗಿರರಾಜ್ಯದ ಸಮೇತ ಆ ಅರಸರಿಂದ ಪೋಷಿತವಾದ ಕನ್ನಡ ವಾಙ್ಮಯವು ಮುಳುಗಿಹೋದರೂ, ಅದರ ಸಂಧ್ಯಾಕಾಲದ ವರ್ಚಸ್ಸು ಗಂಗಾವಳಿ ಹೊಳೆಯಿಂದ ಪಯಸ್ವಿನಿ ಹೊಳೆಯ ವರೆಗೆ ವಿಸ್ತರಿಸಿರುವ ತುಳುನಾಡಿನ ಮೇಲೆ ಬೀಳದೆ ಹೋಗಲಿಲ್ಲ. ಈ ಅಂದವಾದ ಸಂಜೆಯ

ಕೆಂಬೆಳಗನ್ನು ಕಂಡು ಭಟಕಳ ಅಪ್ಪಯ್ಯ, ಗೇರುಸೊಪ್ಪೆ ಸಾಂತಯ್ಯ, ಮೂಲಿಕೆಯ ವೆಂಕಣ್ಣ ಕವಿ, ಜೈನ ನೇಮಣ್ಣ, ಪಾರ್ತಿಸುಬ್ಬ, ನಂದಳಿಕೆ ಲಕ್ಷ್ಮೀನಾರಾಯಣ, ಮೊದಲಾದ ತುಳುನಾಡಿನ ಯಕ್ಷಗಾನ ಕವಿಗಳು ಹೊರಬಿದ್ದು, ಹಳ್ಳಿಯ ಎದೆಯು ಅಲುಅಲುಗಿ ಕರಕರಗಿ ಉಬ್ಬೇರುವಂತೆ ಕನ್ನಡದ ಸೇವೆಯನ್ನು ಮಾಡಲು

**ಸಾಂಗತ್ಯ.**

ಅಳಿವಂತೆ ರಾಗವ, ತುಳಿವಂತೆ ಜಾಡ್ಯವ । ಹಿಳಿವಂತೆ ಮೋಹನರಸವಾ ।
ತೊಳೆವಂತೆ ಮನವ ಸಂಜೀವನಾವಮೃತವನು । ತಳಿವಂತೆ ರಾಗ ದೋರಿದರು ।
ಹಬ್ಬಿಸುವಂತೆ ರಾಗವ ಸ್ವರ್ಗಲೋಕಕೆ । ಎಬ್ಬಿಸುವಂತೆ ರೋಮಗಳಾ ।
ಕಬ್ಬಿನ ಬಿಲ್ಲು ಜೀವೂಡದಂತೆ ಪಾಡಿದ । ರೊಬ್ಬೊಬ್ಬರಿಂಪಿನಿಂಪಿನೊಳು. ॥

(ರತ್ನಾಕರವರ್ಣಿ)

---

# ಬಿಳಿಗಿಯ ಕೆಲವು ಶಾಸನಗಳು

(೧೯೩೯ನೇ ಇಸವಿಯ ರಾಷ್ಟ್ರಬಂಧು ಯುಗಾದಿಯ ಕಾಣಿಕೆಯಿಂದ)

ಕರ್ನಾಟಕ ಸಾಮ್ರಾಜ್ಯವೆಂದೆನ್ನಿಸಿಕೊಂಡ ವಿಜಯನಗರದ ರಾಯ ಸಂಸ್ಥಾನವು ಕ್ರಿಸ್ತಶಕದ ೧೫೬೫ನೆಯ ವರ್ಷದಲ್ಲಿ ತಾಳಿಕೋಟೆಯ ಯುದ್ಧದಲ್ಲಿ ನಾಶವಾದನಂತರ ಅದುವರೆಗೆ ಅದಕ್ಕೆ ವಳಿತವಾಗಿದ್ದ ಕನ್ನಡ ಜಿಲ್ಲೆಯ ಚಿಕ್ಕ ದೊಡ್ಡ 'ಅರಸ್ಥಾನಗಳು' ಮೆಲ್ಲಮೆಲ್ಲನೆ ಒಂದೊಂದಾಗಿ ತಲೆಯೆತ್ತಿ ಕೆಲಕಾಲ ತಮ್ಮತಮ್ಮೊಳಗೆ ಹೊಡೆದಾಡಿ, ತರುವಾಯ ಕೆಳದಿ ನಾಯಕರಿಗೆ ಕೈಮುಗಿದು, ಕೊನೆಗೆ ಹೈದರ ಆಲಿಯ ಬಾಯಿಗೆ ಬಿದ್ದು, ಕಣ್ಣಿಗೆ ಕಾಣದೆ ಮಾಯವಾಗಿ ಹೋದುವಷ್ಟೆ. ಇಂಥ 'ಅರಸ್ಥಾನಗಳ' ಮುಖ್ಯ ಪಟ್ಟಣಗಳಾಗಿದ್ದ—ಬಾರಕೂರು, ಬಸರೂರು, ಕೆರವಸೆ, ನಂದಾವರ, ಪುತ್ತಿಗೆ ಎಂಬವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ, ಬನವಸೆ, ಸ್ವಾದೆ, ಗೆರಸಪ್ಪೆ, ಹಾಡವಳ್ಳಿ, ಬಿಳಿಗಿ ಎಂಬಿವು ಉತ್ತರ ಕನ್ನಡ ಜಿಲ್ಲೆಯಲ್ಲಿಯೂ, ಈಗ ಹಳೆಯವಾಗಿ ಹಾಳುಬಿದ್ದಿದ್ದರೂ,ಅವು ಒಂದಾನೊಂದು ಕಾಲದಲ್ಲಿ ಅಲ್ಲಲ್ಲಿ ರಾಜ್ಯವಾಳಿದ 'ತುಂಡರಸರ' ರಾಜಧಾನಿಗಳಾಗಿಯೂ, ಕನ್ನಡ ವಾಙ್ಮಯದ ಆಶ್ರಯಸ್ಥಾನಗಳಾಗಿಯೂ ಇದ್ದುದರಿಂದ, ಅವು ಇತಿಹಾಸ ದೃಷ್ಟಿಗೆ ದೊಡ್ಡ ನಿಕ್ಷೇಪಸ್ಥಳಗಳಂತೆ ಕಾಣುತ್ತವೆ. ಬಿಳಿಗಿ ಎಂಬುದು ಇಂಥಾ ದೊಡ್ಡೊಂದು ಪ್ರಸಿದ್ಧ ಸ್ಥಳವಾಗಿದೆ.

ಬಿಳಿಗಿಯು ಮುಂಬಯಿ ಸಂಸ್ಥಾನದ ಕರಾವಳಿ ಜಿಲ್ಲೆಯಾದ ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ ತಾಲೂಕಿನಲ್ಲಿ, ಸಮುದ್ರ ತೀರದಿಂದ ಸುಮಾರು ೩೫ಮೈಲಿ ದೂರ, ಕುಮಟಾ ಸಿದ್ಧಾಪುರ ರಸ್ತೆಯ ಮೇಲೆ ಇದೆ. ಬಿಳಿಗಿಯಿಂದ ೫ಮೈಲಿ ಪೂರ್ವಕ್ಕೆ ಸಿದ್ಧಾಪುರ; ಸಿದ್ಧಾಪುರದಿಂದ ೨೫ಮೈಲಿ ಪೂರ್ವಕ್ಕೆ ಹೋದರೆ ಮೈಸೂರು ಸಂಸ್ಥಾನದಲ್ಲಿ ಹಿಂದಿನ ಇಕ್ಕೇರಿ ಅಥವಾ ಕೆಳದಿ ಅರಸರ ಮುಖ್ಯ ಪಟ್ಟಣವಾಗಿದ್ದ ವಂಶಪುರವನ್ನು ಮುಟ್ಟಬಹುದು. ಬಿಳಿಗಿಯಿಂದ ಸುಮಾರು ೨೦ಮೈಲಿ ನೈಋತ್ಯಕ್ಕೆ ಗೆರಸಪ್ಪೆ (ಭಲ್ಲಾತಕೀಪುರ), ಗೆರಸಪ್ಪೆಯಿಂದ ತೆಂಕಲು ಸುಮಾರು೧೦ಮೈಲಿಗಳೊಳಗೆಹಾಡುವಳ್ಳಿ(ಸಂಗೀತಪುರ) ಹಾಡುವಳ್ಳಿಯಿಂದ ೮ಮೈಲಿ ಪಶ್ಚಿಮಕ್ಕೆ ಕಡಲುಕರೆಯಲ್ಲಿ ಭಟ್ಟಕಳ, ಭಟ್ಟಕಳದಿಂದ ಉತ್ತರಕ್ಕೆ ಹೊನ್ನಾವರ ಬಂದರು;ಈ ಸ್ಥಳಗಳನ್ನು ಗುರುತಿಸಿ ನೆನಪಿನಲ್ಲಿಟ್ಟುಕೊಂಡರೆ, ಮುಂಚಿನ ಹೈಗನಾಡಿನ ಬಹು ಭಾಗವು ತಿಳಿದಂತಾಗುತ್ತದೆ. ಈ ಪ್ರಾಂತ್ಯದಲ್ಲಿ ಎಲ್ಲಿ ಹೋದರೆ ಅಲ್ಲಿ ಎಂಬಂತೆ ಹಳೆಯ ಕೋಟೆಗಳೋ, ಶಿಲಾಶಾಸನಗಳೋ, ವೀರಕಲ್ಲುಗಳೋ, ಗುಡಿಗೋಪುರಗಳೋ, ಕಣ್ಣಿಗೆ ಬೀಳುವುದುಂಟು. ಬಿಳಿಗಿಯಲ್ಲಿಯೂ ಅದರ ಸರಹದ್ದಿನಲ್ಲಿಯೂ ಅನೇಕ ಕಲ್ಲು ಬರಹದ ಕಂಬಗಳು ಇವೆಯಂತೆ. ಕ್ರಿಸ್ತಶಕದ ೧೮೭೩ರ ವರೆಗೆ ಬಿಳಿಗಿಯಲ್ಲಿ ನಾಲ್ಕು ಶಿಲಾಶಾಸನಗಳು ಇದ್ದುವೆಂದು 'ನಾರ್ತ್ ಕ್ಯಾನರಾ ಗಜೇಟಿಯರ್' ಎಂಬ ಪುಸ್ತಕವು ಹೇಳುತ್ತದೆ. ಇವುಗಳಲ್ಲಿ ಒಂದು ಹನುಮಂತನ ಗುಡಿಯಲ್ಲಿ, ಎರಡು ಪಾರ್ಶ್ವನಾಥ ಬಸದಿಯಲ್ಲಿ, ಮಿಕ್ಕುಳಿದುದು ವಿರೂಪಾಕ್ಷ ದೇವಸ್ಥಾನದಲ್ಲಿ ಎಂದು ಅದೇ ಪುಸ್ತಕದಲ್ಲಿ ಸೂಚಿಸಲಾಗಿದೆ. ಆದರೆ ಆ ಶಾಸನಗಳನ್ನು ಸಂಪೂರ್ಣವಾಗಿ ಆಗಲಿ, ಸ್ವಲ್ಪವಾಗಿ ಆಗಲಿ ಇದ್ದಕ್ಕಿದ್ದ ಹಾಗೆ ಆ ಪುಸ್ತಕದಲ್ಲಿ ಕೊಟ್ಟಿಲ್ಲ.

ಮೆ. ರಾಯ ಬಹದ್ದೂರ್ ಆರ್. ನರಸಿಂಹಾಚಾರ್ಯರು ಕರ್ಣಾಟಕ ಶಬ್ದಾನುಶಾಸನ ಎಂಬ ಪುಸ್ತಕದ ಅವತರಣಿಕೆಯಲ್ಲಿ "ಬಿಳಿಗಿ ತಾಲೂಕಿನ ಕ್ರಿಸ್ತಶಕದ ೧೫೯೨ ವರ್ಷದ ಶಾಸನದ ಒಂದು ಪ್ರತಿಯು ಮದರಾಸಿನ 'ಒರಿಯಂಟಲ್ ಲಾಯ್‌ಬ್ರೆರಿಯಲ್ಲಿದೆ" ಎಂಬುದಾಗಿ ಬರೆದಿರುತ್ತಾರೆ. ಈ ಮಾತಿನ ಆಧಾರದಿಂದ ಮದರಾಸಿನ ಒರಿಯಂಟಲ್ ಲಾಯ್‌ಬ್ರೆರಿಯಲ್ಲಿ ಹುಡುಕಿದರೆ 'ಲೋಕಲ್ ರೆಕೊರ್ಡ್ಸ್' ಎಂಬ ಕೈಬರಹದ ಪುಸ್ತಕಗಳ ೨೩ನೆಯ ಸಂಪುಟದ ೧೫೪ ಮತ್ತು ೧೬೨ ಪುಟಗಳಲ್ಲಿ ಕೆಲವು ಶಾಸನಗಳು ದೊರೆಯುತ್ತವೆ. ಲಾಯ್‌ಬ್ರೆರಿಯಲ್ಲಿಯ ಈ ಶಾಸನಗಳು ನಾರ್ತ್ ಕ್ಯಾನರಾ ಗಜೇಟಿಯರದಲ್ಲಿ ಸೂಚಿಸಿದ್ದ ಬಿಳಿಗಿಯ ಶಿಲಾಶಾಸನಗಳ ಯಥಾ ಪ್ರತಿಗಳೋ ಅಲ್ಲವೋ ಎಂಬುದು ಗೊತ್ತಾಗುವುದಿಲ್ಲ. ಲಾಯ್‌ಬ್ರೆರಿಯ ಕೈಬರಹದ ಪುಸ್ತಕದಲ್ಲಿರುವ ಈ ಶಾಸನಗಳನ್ನು ಬರೆಯುವ ಮೊದಲು ತೆಲುಗು ಬರಹಗಾರನು ತೆಲುಗು ಮಾತಿನಲ್ಲಿ ಆಯಾ ಶಾಸನವನ್ನು ಕುರಿತು ಈ ಪರಿ ಹೇಳಿರುತ್ತಾನೆ.

'ಬಿಳಿಗಿ ತಾಲೂಕು ಕೊಂಡ್ಲಿಮಾಗಣೆ ಪೈಕಿ, ಕಸಬಾ ಸಿದ್ಧಪುರಾನಿಕಿ ದಕ್ಷಿಣಭಾಗಂ ಕೋಶೇಡು ದೂರಾನ ಕೊಂಡ್ಲಿ ಮಾಗಣೆಲೋ ಶಿರವಳಿಗೆ ಗ್ರಾಮಲೋ, ಹನುಮಂತ ದೇವರ ಗುಡಿಲೋ ಹನುಮಂತ ದೇವರ ಕಿಂದ ವುಂಡೇ ಶಾಸನಕ್ರಮು ಮೆಟ್ಲನ್ನನು . . . . . . ಬಿಳಿಗಿ ತಾಲೂಕು ಚಿಕ್ಕ ಇವತ್ತಳಿಗೆ ಮಾಗಣೆ ಕಸಬಾ ಬಿಳಿಗಿಲೋ ಜೈನ ಬಸ್ತಿಲೋ ವುಂಡೇ ವಾಕಿಟಕಿ ಎಡಮ ಪಾರ್ಶ್ವಂ ವುಂಡೇ ರೆಂಡು ಶಾಸನಮುಲ . . . . . ಬಿಳಿಗಿಲೋ ವಿರೂಪಾಕ್ಷ ದೇವಸ್ಥಾನ ಮುಲೋ ವಾಕಿಟು ಎಡಮ ಪಾರ್ಶ್ವಂ ವುಂಡೇ ಶಾಸನಕ್ರಮು . . . .'

ಈ ಅಭಿಪ್ರಾಯವನ್ನೇ ಗೆಜೆಟಿಯರ್ ಪುಸ್ತಕವು ಇಂಗ್ಲಿಷಿನಲ್ಲಿ ಹೇಳಿರುವುದರಿಂದ ಲಾಯ್‌ಬ್ರೆರಿಯಲ್ಲಿದ್ದ ಪ್ರತಿಗಳು ವಿಶ್ವಸನೀಯವೆಂದು ತಿಳಿಯಬೇಕಾಗುತ್ತದೆ. ಅವುಗಳಲ್ಲಿನ ಇತಿಹಾಸಾಂಶವು ನಂಬತಕ್ಕದ್ದೆಂಬದಕ್ಕೆ ಬೇರೆ ಸಾಕ್ಷ್ಯವೂ ದೊರೆಯುತ್ತದೆ. ಈ ಲೇಖದಲ್ಲಿ ಉದ್ಧೃತವಾದ ಶಾಸನಾಂಶವು ಮದ್ರಾಸಿನಿಂದ ಎರವು ತಂದಂಥವುಗಳೇ ಹೊರತು ಬಿಳಿಗಿಯಲ್ಲಿಯೇ ಎರಕ ಹೊಯ್ದವುಗಳಲ್ಲ. ಅವನ್ನು ನಕಲು ಮಾಡುವುದಕ್ಕೆ ಸರ್ವವಿಧದಲ್ಲಿಯೂ ಸಹಾಯಮಾಡಿದ ಆ ಲಾಯ್‌ಬ್ರೆರಿಯ ಅಧಿಕಾರಿಗಳಿಗೆ 'ಗುರುಭ್ಯೋನಮಃ' ಎಂದು ಹೇಳಿ ಈ ಶಾಸನಗಳನ್ನು ಕುರಿತು ವಿಚಾರಿಸಬೇಕಾಗಿದೆ.

ಬಿಳಿಗಿಯಲ್ಲಿಯ ನಾಲ್ಕು ಶಾಸನಗಳಲ್ಲಿ ಹನುಮಂತನ ಗುಡಿಯೊಳಗಿನ ಶಾಸನವು ಸವೆದು ಹಾಳಾಗಿ ಓದಲಸಾಧ್ಯವಾಗಿದೆ ಎಂದು ಗಜೆಟಿಯರ್ ಹೇಳುತ್ತದೆ. ಆದರೆ ಲಾಯ್‌ಬ್ರೆರಿಯಲ್ಲಿಯ ಪುಸ್ತಕದಲ್ಲಿ ಹೀಗಿದೆ (೨೩ನೆಯ ಪುಸ್ತಕ ೧೫೪ನೆಯ ಪುಟ):—

"ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೪೦೦ನೆಯ ಹೇವಳಂಬಿ ಸಂವತ್ಸರವ ಶ್ರಾವಣ ಶುದ್ಧ ೩ರಲ್ಲು ಶ್ರೀಮತ್ತು ಶಿರಳಿಗೆಯ ಬೊಮಣ್ಣನ ಮಗ ತಿಪ್ಪರಸಯ್ಯನವರು ಪ್ರತಿಷ್ಠೆಮಾಡಿಸಿದ ಹನುಮಂತ ದೇವರು."

ಈ ಶಾಸನವು ಕ್ರಿಸ್ತ ಶಕದ ೧೪೬೭ನೆಯ ಜುಲಾಯಿ ೧೩ರಲ್ಲಿ ಬರೆಯಲ್ಪಟ್ಟು ಮಿಕ್ಕುಳಿದ ಮೂರು ಶಾಸನಗಳಿಗಿಂತ ಹಳೆಯದು. ಇದರಲ್ಲಿ ಹೇಳಿದ ತಿಪ್ಪರಸಯ್ಯನು ಯಾರೆಂಬುದು ಗೊತ್ತಾಗುವುದಿಲ್ಲ.

ಎರಡನೆಯ ಮತ್ತು ಮೂರನೆಯ ಶಾಸನಗಳು ಬಿಳಿಗಿಯಲ್ಲಿಯ ಬಸದಿಯ ದ್ವಾರದ ಎಡಗಡೆ ಜೋಡುಕಲ್ಲುಗಳಲ್ಲಿ ಕೊರೆಯಲ್ಪಟ್ಟಿವೆ. ಒಂದೊಂದು ಕಲ್ಲು ಸುಮಾರು 6½ ಫೀಟ್ ಉದ್ದ 2½ ಫೀಟ್ ಅಗಲ, ಶಾಸನ ಪಂಕ್ತಿ ಸಂಖ್ಯೆ ಮೊದಲನೆಯದರಲ್ಲಿ 79, ಎರಡನೆಯದರಲ್ಲಿ 85, ಶಾಸನಗಳ ವಿಷಯವು ಪಾರ್ಶ್ವನಾಥ ಬಸದಿಗೆ ಕಾಲಕಾಲದಲ್ಲಿ ಬಿಟ್ಟ ಭೂಸ್ವಾಸ್ತಿಯ ವಿವರ. ಪ್ರತಿ ಒಂದರ ತಲೆಯಲ್ಲಿ ಶ್ರೀ ಮತ್ಪರಮ ಗಂಭೀರ ಸ್ಯಾದ್ವಾದ ಆದಿಯಾದ ಶ್ಲೋಕವಿದೆ. ಎರಡೂ ಇತಿಹಾಸ ದೃಷ್ಟಿಯಿಂದ ಸಾಕಷ್ಟು ಅಮೂಲ್ಯವಾಗಿವೆ.

ಜಯಂತಿ ನಿರ್ಜಿತಾಶೇಷ ಸರ್ವದೈಕಾಂತ ನೀತಯಃ ।
ಸತ್ಯವಾಕ್ಯಾಧಿಪಾಶ್ಶಶ್ವದ್ವಿದ್ಯಾನಂದಾ ಜಿನೇಶ್ವರಾಃ ॥ ೨ ॥
ಅಥಾಸ್ತಿ ಜಂಬೂದ್ವೀಪೇಸ್ಮಿನ್ ಮೇರೋರ್ದಕ್ಷಿಣತೋದಿಶಿ ।
ಆರ್ಯಖಂಡಾಂಗನಾವಕ್ತ್ರಮಿವಶ್ರೀವನ್ಯಮಂಡಲ ॥ ೩ ॥
ಅಂತೆಸೆವ ವನ್ಯದೇಶದೊ
ಳಂತಾತೀತ ಪ್ರಕಾರ ಶೋಭಾ ರುಚಿಯಂ ।
ತಾಂ ತಳೆದೈಸೂರೆಂಬ ಪು
ರಂ ತೋರ್ಪುದು ಚಂದ್ರಗುತ್ತಿಪುರ ಪರಿಸರದೊಳ್ ॥

"ಆ ಪೊಳಲೊಳ್ ಪಲಂಬರರಸುಗಳನುಕ್ರಮದಿಂ ಧರ್ಮವಿಜಯಿಗಳಾಗಿ ರಾಜ್ಯಂಗೈಯುತ್ತಾ ಸಂತಾನದೊಳ್ ಮುಂಡಣ್ಣೊಡೆಯರೆಂಬ ಮಹಾರಾಜರಿಗೆ ಕಲ್ಲಪ್ಪೊಡೆಯರುಂ ಬೋಳಪ್ಪೊಡೆಯರುಂ ಅಮ್ಮಣ್ಣೊಡೆಯರುಮೆಂಬ ಮೂವರ್ ತನಯರಾದವರೊಳ್ ಕಲ್ಲಪ್ಪಭೂಪಾಲಂ ತನ್ನ ಜನನಸ್ಥಾನ ಮಪ್ಪ ಐಸೂರೊಳ್ ಪಾರ್ಶ್ವತೀರ್ಥಂಕರರ ಬಸದಿಯಂ ಕಟ್ಟಿಸಿ ಪ್ರತಿಷ್ಠೆಯಂ ಮಾಡಿ ತತ್ಪೂಜಾರ್ಥಮಾಗಿ ಬಜ್ಜೆಯ ಹಳ್ಳದ ಗ್ರಾಮದೊಳಿಪ್ಪಂತಾ ನಾಲ್ಕು ಗದ್ಯಾಣ ಮುನ್ನೂರು ಖಂಡುಗ ಬತ್ತಮುಂ ಬರ್ಪಕ್ಷೇತ್ರಮಂ ಶಾಸನಾಂಕಿತಮಂ ಮಾಡಿ ಮತ್ತು ಇಡುವಣೆಯ ಪಾರ್ಶ್ವತೀರ್ಥಂಕರರ ಪೂಜೋತ್ಸವಕ್ಕೆ ಹೊರಗುಪ್ಪ ಹೆಬ್ಬೈಲ ಕಾಡೊಳಗೆ ಅರವತ್ತುಮೂರು ಗದ್ಯಾಣಮೆತ್ತಿ ಬರ್ಪ ಕ್ಷೇತ್ರಮಂ ಶಾಸ

ನಾಂಕಿತಮಂ ಮಾಡಿದಾತಂಗೆ ಮುದ್ದಣ್ಣ ಭೂಪಾಲನುಂ ನರಸಿಂಹ ಭೂಪಾಲನುಂ ಎಂಬೀರ್ವರ್ ಕುಮಾರರಾದರವರೊಳ್ ಮುದ್ದಣ್ಣ ಭೂಪಾಲಂಗೆ ಭೈರವೇಂದ್ರನುಂ ಕಲ್ಲ ಭೂಪಾಲನುಂ ಎಂಬೀರ್ವರ್ ಕುಮಾರರಾದರಾ ನರಸಿಂಹ ಭೂಪಾಲಂಗೆ ಘಂಟಣ್ಣೊಡೆಯರು ಮುದ್ದಣ್ಣೊಡೆಯರು ಎಂಬೀರ್ವರ್ ಕುಮಾರರಾದವರೊಳ್ ಘಂಟಣ್ಣೊಡೆಯರಮ್ಮಣ್ಣೊಡೆಯರೆಂಬ ನಾಮಾಂತರದಿಂ ಪ್ರಸಿದ್ಧರಾಗಿ ತಮ್ಮ ರಾಜ್ಯದೊಳ್ ಪ್ರಸಿದ್ಧಮಾದ ಸೋಮನದೀ ತೀರದೊಳ್ ಬಿಳಿಗಿ ಎಂಬ ಪಟ್ಟಣಮಂ ಕಟ್ಟಿಸಿಯದರೊಳ್ ಪಿರಿಯ ಬಸದಿಯಂ ಕಟ್ಟಿಸಿ,ಪಾರ್ಶ್ವತೀರ್ಥಂಕರರ ಪ್ರತಿಷ್ಠೆಯಂ ಮಾಡಿಸಿ ತತ್ಪೂಜಾರ್ಥಮಾಗಿ . . . . . . . ಕ್ಷೇತ್ರಮಂ ಶಾಸನಾಂಕಿತಮಂ ಮಾಡಿದನಾ ಭೈರವೇಂದ್ರನ ಕುಮಾರನಭಿನವ ಭೈರವೇಂದ್ರಂ ಹಿರಿಯ ಒಡೆಯರೆಂಬ ನಾಮಾಂತರಮಂ ಪಡೆದು ತನ್ನರಮನೆಯೊಳ್ ಎರಳ್ಕಿಲೆಯ ಬಸದಿಯಂ ಕಟ್ಟಿಸಿ ಪಾರ್ಶ್ವತೀರ್ಥಂಕರರ ಪ್ರತಿಷ್ಠೆಯಂ ಮಾಡಿ ತತ್ಪೂಜಾರ್ಥಮಾಗಿ . . . . . . . ಗ್ರಾಮವಂ ಶಾಸನಾಂಕಿತಮಂ ಮಾಡಿ ಮತ್ತು ತಾಳಗೊಪ್ಪೆಯ ಪಂಚಬಸದಿಯ ಜೀರ್ಣೋದ್ಧಾರಮಂ ಮಾಡಿಸಿ . . . . ಕ್ಷೇತ್ರಮಂ ಶಾಸನಾಂಕಿತಮಂ ಮಾಡಿದನಾತನ ತನುಜಂ ಲಕ್ಷ್ಮಣಭೂಪಾಲನಾದೀಶ್ವರರ ಬಸದಿಯಂ ಕಟ್ಟಿಸಿ ತತ್ಪೂಜಾರ್ಥಮಾಗಿ . . . . . . . ಕ್ಷೇತ್ರಮಂ ಶಾಸನಾಂಕಿತಮಂ ಮಾಡಿದನಾ ಘಂಟಣ್ಣೊಡೆಯರ ಕುಮಾರಂ ತಿಮ್ಮರಸ ಒಡೆಯರು ತ್ರಿಕೂಟಮಪ್ಪ ರತ್ನತ್ರಯ ಚೈತ್ಯಾಲಯಮಂ ಕಟ್ಟಿಸಿ ತತ್ಪೂಜಾರ್ಥಮಾಗಿ . . . . . . . ಶಾಸನಾಂಕಿತಮಂ ಮಾಡಿ ಮತ್ತಂ ತನ್ನಗ್ರಜೆಯಪ್ಪ ತಿಮ್ಮಾಂಬಿಕೆಯ ಪೆಸರೊಳ್ ಪೆರತೊಂದು ಬಸದಿಯಂ ಕಟ್ಟಿಸಿ ಶಾಂತೀಶ್ವರರಂ ಪ್ರತಿಷ್ಠಿಸಿ ತತ್ಪೂಜಾರ್ಥಮಾಗಿ . . . ಶಾಸನಾಂಕಿತಮಂ ಮಾಡಿದಾತನ ತನುಜಂ ನರಸಿಂ ಭೂಪಾಲಂಹ ತನ್ನ ಪಿರಿಯರು ಕಟ್ಟಿಸಿದ ಸಕಲ ಚೈತ್ಯಾಲಯಂಗಳಂ ಜೀರ್ಣೋದ್ಧಾರಮಂ ಮಾಡಿಸಿದಾತನ ಕುಮಾರಂ ವೀರೇಂದ್ರನೆಂಬವಂ ಕಲಿಯುಗ ಧರ್ಮಪುತ್ರನೆನಿಸಿ ಹಿರಿಯ ಬಸದಿಯ ಪಾರ್ಶ್ವತೀರ್ಥಂಕರರ ಶ್ರೀಪಾದ ಮೂಲದೊಳ್ ನಡೆವ ಷೋಡಶ ಭಾವನಾ ಪೂಜೋತ್ಸವಕ್ಕೆ . . . . ಕ್ಷೇತ್ರಮಂ ಶಾಸನಾಂಕಿತಮಂ ಮಾಡಿ ಮತ್ತು ತನ್ನನುಜೆಯಪ್ಪ ತಿಮ್ಮಾಂಬಿಕೆ ಕಟ್ಟಿಸಿದ ಚಂದ್ರತೀರ್ಥಂಕರರ ಬಸದಿಯ ಪೂಜೋತ್ಸವಕ್ಕೆ . . . ಶಾಸನಾಂಕಿತಮಂ ಮಾಡಿ ಮತ್ತಮಭಿನವ ಭೈರವೇಂದ್ರಂ ನಿತ್ಯ ಪೂಜಾರ್ಥಮಾಗಿ ಮಾಡಿಸಿದ ಸುವರ್ಣದ ಪಾರ್ಶ್ವ ತೀರ್ಥಂಕರ ರಂಜಿತ ಚಂದ್ರಪ್ರಭ ತೀರ್ಥಂಕರರಂ ಬಿದುರೆಯ ತ್ರಿಭುವನ ತಿಲಕಮೆಂಬ ಬಸದಿಯೊಳ್ ಬಿಜಯಂ ಗೆಯ್ಸಿ ತತ್ಪೂಜಾರ್ಥಮಾಗಿ. . . . . .ಶಾಸನಾಂಕಿತಮಂ ಮಾಡಿದನಾತನ ಕುಮಾರನನೇಕ ಗುಣಸಮುತುಂಗಂ ರಂಗರಾಜನೆಂಬ ಮಹಾರಾಜಂ ನಿಜಗಾಂಭೀರ್ಯಾದ್ಯನೇಕ ಗುಣಸಂಜಾತ ಭೋಜರಾಜ ಸಂಘಾಲಂಘನ ಜಂಘಾಲ ವಿವೇಕ ವಿತರಣ ಕಲಾ ಪಾರಾದಿತ್ಯಾದ್ಯನೇಕಗುಣ ನಿರ್ಜಿತ ಕಲ್ಪವೃಕ್ಷ ಮಲಯ ಹುಲಿಮಾರ್ಕೊಳುವ ಬಿರುದೋದ್ದಂಡ ಎಂಟು ದಂಡಿಗೆಯ ಮನ್ನೆಯರ ಗಂಡ ಗಡಿಯಂಕಸಿಂಹ ಪೆರ್ಮಾಡಿ ರಾವುತ ರಾಯದುರ್ಗವಿಭಾಡ ಶ್ರೀಮನ್ಮಹಾಪ್ರಭುವೆಂಬ ನಿಜಾನ್ವಯಗತಮಾದ ಬಿರುದಾವಳಿಯಂ ಪರಿಪಾಲಿಸಿ ಮತ್ತಮಭಂಗ ಪ್ರತಾಪಸಂಗತನುಮಶೇಷವೈರಿವಧೂವೈಧವ್ಯ ದೀಕ್ಷಾಚಾರ್ಯನುಮಖಿಲ ದಿಗಂತ ವಿಶ್ರಾಂತ ಕೀರ್ತಿಕಾಂತಾಕಾಂತನುಮಶೇಷ ವಿದ್ವದ್ಗಣ ಗಣನೀಯ ಗುಣಗಣಾಭರಣನುಮನೂನ ಸರಸಗಾನ ಕಲಾಕಾಮಿನೀ ಕಂದರ್ಪರೂಪನುಮನೇಕ ಸಮಾಶ್ರಿತ ದಾರಿದ್ರ್ಯವಿದ್ರಾವಣನುಮನೇಕ ಮತ ರಹಸ್ಯ ವಿಚಾರ ಚಾತುರೀ ದುರಂಧರನುಮನವದ್ಯಸ್ಯಾದ್ವಾದ ವಿದ್ಯಾವಿದಗ್ಧ ವಿದ್ವಜ್ಜನ ಪ್ರೀತನುಮಖಿಲ ಜಗದೇಕ ಶರಣ್ಯ ಜಿನಮಾರ್ಗ ಪ್ರತಿಷ್ಠಾಪನಾಚಾರ್ಯನುಮೆಂಬಿವು ಮೊದಲಾಗಿ ಪೆರವುಂ ಗುಣನಾಮಂಗಳಂ ತಳೆದು ಪ್ರಸಿದ್ಧಿ ಪಡೆದನಾತನ ಜನದೇಶಕಮೆಂತೆನೆ.

ಮೂಲೋಕಕ್ಕೊಂದು ಮೇಲೆತ್ತಿದ ವಿಪುಲ ಸಿತಚ್ಛತ್ರ
ಮೆಂಬಂತೆ ಸದ್ಧ ॥
ರ್ಮಾಲಂಬಂ ಕೀರ್ತಿಯೊಪ್ಪಲ್ಕದರ ನೆಳಲವೋಲ್
ಸಂತತಂ ತೋರ್ಪುವಿಂತೀ ।
ನೀಲಾಭ್ರಂ ಪದ್ಮರಾಗೋಜ್ವಲ ಕಲಶಮೆನಲ್
ತತ್ಪ್ರತಾಪಾರ್ಕನಲ್ಲಿಂ ।
ಮೇಲಿರ್ಪಂ ತಾನೆನಲ್ ರಂಗಪ ಧರಣಿಪನಂ ಬಣ್ಣಿಸಲ್
ಬಲ್ಲನಾವಂ ।

ಮತ್ತಮಾತನ ಕಯ್ಯ ಕೂರಲಗೆಂತಿರ್ಪುದೆನೆ—

ಹರಫಾಲಾಭೀಳನೇತ್ರಾಗ್ನಿಯೊಳತಿ ಭರದಿಂ ಪ್ರೇತ
ರಾಟ್ತೀಕ್ಷ್ಣಕಂ ತ ।
ದ್ಗರಳಾಯಃ ಪಿಂಡಮಂತಾಪಿಶಿತ ಫಣಿಫಣಾಗ್ರೀವದೊಳ್
ಸ್ಫೂರ್ಜಥು ಪ್ರ ।
ಸ್ಫುರದುದ್ಭಾಸ್ಫೋಟನಿರ್ಘಾತದೊಳೆ ಸಮೆದುದಂ ತಂದು
ತಾಂ ಕಾಣ್ಕೆಯೆಂದೀ ।
ಧರಣೀಶಂಗಿತ್ತವೋಲೊಪ್ಪಿದುದು ಹೃದರಿಪು ಪ್ರಾಣ
ಮುದ್ಯತ್ಕೃಪಾಣಂ ॥

ಮತ್ತಮಾತನೆಂತಪ್ಪನೆನೆ—

ಪಾವಡಿಗನ ಪೂವಡಿಗನ
ದೇವಡಿಗನ ಮಕ್ಕಳೊಳ್ ಕಡು ಸೋಲುತ್ತಂ ।
ಭಾವಿಸಲುತ್ತಮನಾಯಕ
ದೇವಂ ಪರದಾರ ಸೋದರಂ ರಂಗೇಂದ್ರಂ ।

ಇಂತು ಸಕಲ ಭುವನ ಪ್ರಸಿದ್ಧನಾದ ರಂಗರಾಜ ಮಹಾರಾಜಂ ಬಿಳಿಗಿಯೊಳ್ ನೂತನಮಾಗಿ ಶಿವಾಲಯಮಂ ಮಾಡಿ ರತ್ನತ್ರಯ ಚೈತ್ಯಾಲಯಮಂ ಕಟ್ಟಿಸಿದನಾತನ ಕುಮಾರಂ ಘಂಟೇಂದ್ರನೆಂಬ ಮಹಾರಾಜನಾ ಚೈತ್ಯಾಲಯಕ್ಕೆ ರಂಗಮಂಟಪಂ ಚಂದ್ರಶಾಲೆಯಂ ಮುನಿವಾಸಮುಂ ಪ್ರಾಕಾರಮಂ ಮೊದಲಾದ ಕೆಲಸಂಗಳಂಗೆಯಿಸಿ ಸಂಪೂರ್ಣ ಮಾಡಿ ಮಹೋತ್ಸವದಿಂ ನೇಮೀಶ್ವರ ಪಾರ್ಶ್ವನಾಥ ತೀರ್ಥಂಕರರ ಪ್ರತಿಷ್ಠೆಯಂ ಮಾಡಿಸಿ . . . . . . ತನ್ನ ರಾಣಿವಾಸ ಮಾದ ರಾಮಾದೇವಿಯರ್ ಕಟ್ಟಿಸಿದ ಗಂಧಕುಟಿಯ ಶಾಂತೀಶ್ವರರ ಶ್ರೀ ಕಾರ್ಯಕ್ಕೆ. . . . ಕ್ಷೇತ್ರಮಂ ಶಾಸನಾಂಕಿತಮಂ ಮಾಡಿ ಮತ್ತಂತಮ್ಮ ಅನ್ವಯ ಪರಂಪರೆಯ ಗುರುಗಳಾದ ಶ್ರೀಮದಕಳಂಕದೇವ ಮುನೀಶ್ವರರ್ಗಾಹಾರದಾನ ಶಾಸ್ತ್ರದಾನಾರ್ಥವಾಗಿ ತಮ್ಮ ಅಪ್ಪಾಜಿ ರಂಗಪ್ಪ ರಾಜೊಡೆಯರ್ ಧಾರಾಪೂರ್ವಕವಾಗಿ ಕೊಟ್ಟ . . . ಕ್ಷೇತ್ರಕಂ ಮತ್ತಂ ತನ್ನ ಪರಮ ಗುರುಗಳಾದ ಶ್ರೀಮದಕಳಂಕ ದೇವರ ಶಿಷ್ಯರಾದ ಭಟ್ಟಾಕಳಂಕ ದೇವ ಮುನೀಶ್ವರರ್ಗೆ ಧಾರಾಪೂರ್ವಕವಾಗಿ ತಾಂ ಸಮರ್ಪಿಸಿಕೊಟ್ಟ . . . ಕ್ಷೇತ್ರಕಂ ಮತ್ತಮಾ ಭಟ್ಟಾಕಳಂಕ ದೇವರ್ಗೆ ಶಾಸ್ತ್ರೋಪದೇಶಂ ಗೈದು ಜಿನಧರ್ಮ ಪ್ರಭಾವಕರಾದ ವಿಜಯ ಮುನೀಶ್ವರರ್ಗೆ ಧಾರಾಪೂರ್ವಕಮಾಗಿ ಕೊಟ್ಟ . . . . . . *ಕ್ಷೇತ್ರಕಂ ಚತುಸ್ಸೀಮೆಯೊಳ್ ಮುಪ್ಪೆಡೆಯ ಕಲ್ಲ ನೆಡಿಸಿ ಸರ್ವಮಾನ್ಯವಾಗಿ ಸಮರ್ಪಿಸಿ ಜಿನಶಾಸನ ಪ್ರಭಾವಕನಾದನಂತುಮಲ್ಲದೆಯುಂ.

ಮಲೆವರಿರಾಯ ಜಾಲ ವಿಲಯಾಶನಿ ಪೆರ್ಮಡಿ
ರಾಯರಾವುತಂ ।
ಮಲೆಹುಲಿ ಎಂಟು ದಂಡಿಗೆಯ ಮನ್ನೆಯ ಗಂಡನುದಾತ್ತ
ರಾಘವಂ ॥
ಕಲಿಗಡಿಯಂಕಸಿಂಹನುರು ಮಾರ್ಕೊಲ ಭೈರವನೆಂಬ
ಸಾರ್ಥಕೋ ॥
ಜ್ವಲ ಬಿರುದಂಗಳೊಪ್ಪಿದುವು ರಂಗನೃಪಾತ್ಮಜ ಘಂಟಿ
ಭೂಪನಾ ॥"
ಧುರಕಿದಿರಾಂತು ಮುಂದುವರಿದೇರಿದುದಲ್ಲದೆ ಪಿಂದೆ
ಮೆಟ್ಟುವನಾ ।
ದೊರೆಗಳ ಗಂಡನೆಂಬ ಶರಣಾಗತ ಭೂಮಿಪ ಸೇವಕಾಶ್ರಿತ ।
ರ್ಗೆರೆದುದನೀವ ಸದ್ಗುಣ ಕರಂಡಕನೆಂಬುದು ಸರ್ವದೇಶ
ದೊಳ್ ।
ಪಿರಿದೆಸೆದಿರ್ಪುವಾ ಮಝುರೆ ರಂಗನೃಪಾತ್ಮಜ ಘಂಟಿ
ಭೂಪನಾ ॥

* ಮೇಲೆ ಎಡೆಬಿಟ್ಟಲ್ಲಿ ಸ್ವಾಸ್ತಿಯ ವಿವರ ಹೇಳಿದೆ.

ಮುಂದೆ ಇದೇ ಶಾಸನದಲ್ಲಿ ಈ ಘಂಟಣ್ಣನ ಪರಮ ಗುರು ಭಟ್ಟಾಕಳಂಕನ ಗುರುಪರಂಪರೆಯು ಇದೆ.

ಶ್ರೀಮದನಾರತ (?) ನತಸು
ತ್ರಾಮ ಕಿರೀಟಾಗ್ರ ಖಚಿತ ಮಣಿಗಣ ಕಿರಣ ।
ಸ್ತೋಮ ದ್ವಿಗುಣಿತ ಪದನಖ
ರಾಮಲ ಭಾಭಾಸಿತಾಶನಂತ್ಯ ಜಿನೇಶಂ ॥
ಅಂತೆಸೆವಂತ್ಯ ಜಿನೇಶಂ
ತಾಂ ತುರ್ಯ ಸಮಾತ್ಯದೊಳಿನ ಕಾಂತ ವಿಶುದ್ಧೇ
ಕಾಂತ ಗುಣಾಷ್ಟಕಮಯ ದೇ
ಹಂ ತಾಳ್ದಿರೆ ಪರಮಮುಕ್ತಿ ಸತಿಯೊಳ್ ನೆರೆದಂ ॥

ಈ ಪರಂಪರೆಯಲ್ಲಿ . . . . . . . .

ಪ್ರಥಮಾಂಗ ಪ್ರಥಮಾಂಶ
ಪ್ರಥಿತಾಂಬುಧಿ ಮದನ ದಕ್ಷಮತಿ ಮಥನಾದ್ರಿ
ಪ್ರಥಮಂ ನಿರ್ವ್ಯಥನಂ ಚಿ
ದ್ಗ್ರಥನಂ ಸತ್ಕಥನನಧಿಕ ಮಾನ್ಮಥ ಮಥನಂ ॥

ಎನಿಸಿದರ್ಹದ್ಬಲಾಚಾರ್ಯರ ಕಾಲದೊಳ್ ಪುಟ್ಟಿದ ನಾನಾ ಗಣ ಗಚ್ಛವಿಕಲ್ಪದೊಳ್ ದೇಶೀಗಣಮುಂ ಪುಸ್ತಕ ಗಚ್ಛಮೆಂಬ ಸಂಪ್ರದಾಯದೊಳ್ ಕೊಂಡಕುಂದಾಚಾರ್ಯರೆಂಬ ಮುನೀಶ್ವರರ್ ನೆಗಳ್ದರವರ ಪ್ರಭಾವಮೆಂತೆನೆ.

ಮುನಿದೋರ್ವಂ ಕುಂಡದೊಳ್ ತನ್ಮನಿಯರಿಯದ
ವೊಲ್ ಮಧ್ಯಮಂ ತೀವಿ ನೋಡಲ್ ॥
ಮುನಿ ಕಳ್ಳಂ ತಂದನೀ ಗುಂಡಿಗೆಯೊಳೆನಲದಂ ಮಂತ್ರ
ಸಾಮರ್ಥ್ಯದಿಂ ನೆ ॥
ಟ್ಟನೆ ನೋಡಲ್ ಪೊಲ್ಲೆವೂವೆಂದೆನೆ ವಿರಚಿಸಿ ತತ್ಕುಂಡ
ಕುಂದಾಖ್ಯೆಯಂ ತಾ ॥
ನನುಮೋದಂ ಬೆತ್ತು ಪೆತ್ತಂ ನರಪತಿ ಸಭೆಯೊಳ್
ಕುಂಡಕುಂದಾರ್ಯವರ್ಯಂ ॥

ಕ್ಷಮೆಗಂ ಸ್ವಕೀಯ ದಿವ್ಯ
ಕ್ಷಮೆ ನಾಲ್ವೆರಳಧಿಕಮೆಂದು ತಿಳಿಪುವೊಲಂತಾ
ಕ್ಷಮೆಯಂ ಮೆಟ್ಟದೆ ನಡೆವಂ
ಕ್ಷಮಾಮಯಂ ಕುಂಡ ಕುಂದಚಾರಣ ಮುನಿಪಂ ॥

ಆ ಕುಂಡಕುಂದಾಚಾರ್ಯಾನ್ವಯದೊಳನೇಕಾಚಾರ್ಯರ್ ಪೊಂದಿ ಬಳಿಯಂ ಚಾರುಕೀರ್ತಿ ಪಂಡಿತ ದೇವರೆಂಬಾಚಾರ್ಯರ್ ನೆಗಳ್ದರವರ ಪ್ರಶಂಸೆಯೆಂತೆನೆ.

ಮುಂಕೃತಯುಗಾದಿಯೊಳ್ ಸಮ
ಲಂಕೃತ ವಿಶ್ವಾವನೀತಲಂ ಕೃತಕರ್ಮಾ ।
ಹಂಕೃತಿ ಕೃಂತನ ಪಟು ಸ
ರ್ಗಂ ಕೃತಿ ಪುರುಷಾಗ್ರಗಣ್ಯನೂರ್ಜಿತ ಪುಣ್ಯಂ ॥
ಎನಿಸಿದಾದಿಬ್ರಹ್ಮನ ಕುಮಾರನುಂ ಚಕ್ರಿಯುಂ ಅಂತ್ಯ

ಬ್ರಹ್ಮನುಂ ಪದಿನಾರನೆಯ ಮನುವುಂ ರಾಜರ್ಷಿಯುಮೆನಿಸಿದ ಭರತೇಶ್ವರನಿಂ ಶ್ರೇಷ್ಠಮಾದ ವಿಶಿಷ್ಟ ಜೈನ ಬ್ರಹ್ಮವಂಶದೊಳ್ ಬಾಲ್ಯದೊಳೌಪಾಸಕಾಗಮಾಭ್ಯಾಸಮುಂ ಯೌವನದೊಳುಚಿತಭೋಗಾನುಭವಮುಂ ವಾರ್ಧಿಕದೊಳ್ ಜಿನದೀಕ್ಷಾ ಕ್ರಮಮುಂ ತಮಗೆ ಕುಲವ್ರತಮಾಗಿ ನಿಲಿಪಲಂಬರ್ ಸಂದರಾವಂಶದೊಳೊರ್ವ ಪಂಡಿತ ದೇವನೆಂಬಂ ಬ್ರಾಹ್ಮಣೋತ್ತಮನಧಿಗತ ಸ್ವಪರರಾದ್ಧಾಂತ ಹೃದಯಂ ಸಕಲ ಲೌಕಿಕ ವೈದಿಕಕಲಾ ಚಾತುರೀಧುರಂಧರನುಮಾಗಿ ಸಹಜ ವೈರಾಗ್ಯ ಪರಾಯಣಂ ಜಿನದೀಕ್ಷೆಯಂ ತಾಳ್ದಿ ನಿರತ ಚಾರುಚಾರಿತ್ರದಿಂ ಚಾರುತರ ಕೀರ್ತಿಯಂಪಡೆದು ಚಾರು ಕೀರ್ತಿ ಪಂಡಿತ ದೇವಾಚಾರ್ಯರೆಂಬ ಪೆಸರಿಂದೆಸೆದು ಕರ್ಣಾಟಕ ಸಿಂಹಾಸನಾಧೀಶ್ವರನೆನಿಸಿದ ಬಲ್ಲಾಳರಾಯನಂ ಮೆಚ್ಚಿಸಿ ಜಿನಮಾರ್ಗಪ್ರಭಾವಕನಾಗಿರಲಾ ಕಾಲದೊಳ್ ಪುಟ್ಟಿದುತ್ಪಾತದಿಂ ನೆಲಂ ಬಾಯ್ ಬಿಟ್ಟಿರಲದಂ ಪೂಳ್ವಮೆಂದು ಮಿಥ್ಯಾಮತಿಗಳನೇಕ ಹಿಂಸಾಕರ್ಮಂಗೆಯ್ಯಲದಕದುಪೇರ್ಚಿ ಪಾತಾಳಂಬರಂ ಬಾಯ್‌ಬಿಟ್ಟು ರಾಯನಂ ತನಗೆ ಬಲಿಗೆಯ್ಯಲ್ವೇಳ್ಕುಮೆನಲದಂ ಪಂಡಿತ ದೇವಾಚಾರ್ಯರ್ ಕಂಡು ಕಾರುಣ್ಯದಿಂ ಜಿನಶಾಸನ ದೇವತಾರಾಧನಂ ಗೆಯ್ದು

ಭೀಷ್ಮತರ ಜೀವವಧೆಯಂ
ಶ್ಲೇಷ್ಮಾತಕಪಾತ್ರಮುಪ್ಪೊಡಂ ಪೂಳದುದಂ
ಕೂಷ್ಮಾಂಡ ಫಲದಿನೊಂದರಿ
ಸೂಕ್ಷ್ಮಬಲಂ ಪೂಳ್ದನರರೆ ಪಂಡಿತರಾಯಂ ॥
ತಿಂಬೆಂ ರಾಯನನೆಂದು ನೆ
ಲಂ ಬಾಯ್ವಿಡೆ ತನ್ನ ಮಂತ್ರ ಜಪವಿಧಿಯನದಂ
ಕುಂಬಳಕಾಯಂ ಪೂಳ್ದು ಯು
ಠಂಬಡೆ ದೇಶಕ್ಕೆ ಪಂಡಿತಾರ್ಯನೆ ನೋಂತಂ ॥

ಇಂತು ನೆಲವಾಯಂ ಪೂಳ್ದು ರಾಯನಂ ರಕ್ಷಿಸಿ ಶ್ರೀಮದ್ರಾಯ ರಾಜಗುರು ಮಂಡಳಾಚಾರ್ಯನುಂ ಮಹಾವಾದ ವಾದೀಶ್ವರನುಂ ರಾಯವಾದಿ ಪಿತಾಮಹನುಂ ಸಕಲ ವಿದ್ವಜ್ಜನ ಚಕ್ರವರ್ತಿಯುಂ ಬಲ್ಲಾಳರಾಯಜೀವರಕ್ಷಾಪಾಲಕನುಂ ದೇಶಿಗಣಾಗ್ರಗಣ್ಯನುಮೆಂಬ ಬಿರುದಾವಳಿಯಂ ಪಡೆದು ಕೀರ್ತಿವಡೆದು ನಡೆದನಾತನ ಶಿಷ್ಯಪರಂಪರೆಯೊಳ್.

1. *ಶ್ರುತಕೀರ್ತಿ ದೇವನತ್ಯೂ
ರ್ಜಿತ ಕೀರ್ತಿಕನಾತ್ಮ ಶಿಷ್ಯನಿಂದಗ್ಗಳನಿಂ ॥
ದತಿ ಶ್ರಾವ್ಯ ಕಾವ್ಯ ಮಾರ್ಗದೆ
ನುತ ಚಂದ್ರಪ್ರಭ ಪುರಾಣಮಂ ಪೇಳಿಸಿದಂ ॥

ಆತನ ಶಿಷ್ಯನಪ್ಪ ವಿಜಯಕೀರ್ತಿ ಮುನೀಶ್ವರನ ಪ್ರಭಾವವೆಂತೆನೆ

ವರ ವಿಜಯ ಕೀರ್ತಿಯೋಗೀ
ಶ್ವರನೇಳ್ಗೆಗೆ ಮೆಚ್ಚಿ ತನ್ನ ವೈದಿಕ ಮತಮಂ।
ಪರಿಹರಿಸಿ ಜೈನ ಮತಮಂ
ಧರಿಸಿದನಿರದಭಯ ಚಂದ್ರ ಸೂರಿವರೇಣ್ಯಂ ॥

ಮತ್ತಮಾ ವಿಜಯ ಕೀರ್ತಿ ಮುನೀಶ್ವರಂ ಸಂಗೀತಪುರಾಧೀಶನಪ್ಪ ಇಂದ್ರ ಭೂಪಾಲಂಗೆ ಸಾಮ್ರಾಜ್ಯಪ್ರದನಾಗಿ ಪ್ರಸಿದ್ಧಿವೆತ್ತನಾತನ ಶಿಷ್ಯಂ ಶ್ರುತಕೀರ್ತಿ ದೇವನಖಿಲ ವಿಶ್ರುತನಾಗಿ ನೆಗಳ್ತೆವಡೆದಾತ್ಮಶಿಷ್ಯನಪ್ಪ ಸಂಗರಾಯ ಭೂಪಾಲನಂ ಪ್ರತಿಷ್ಠಿಸಿದನಾತನ ಶಿಷ್ಯಂ ವಿಜಯಕೀರ್ತಿ ಮುನೀಶ್ವರನಾತ್ಮೀಯ ಶಿಷ್ಯನಾದ ದೇವರಾಯ ಭೂಪಾಲಂಗೆ ಪಶ್ಚಿಮ ಸಮುದ್ರ ನಿಕಟದೊಳ್ ಭಟಕಳಮೆಂಬ ಪಟ್ಟಣಮನೇಕ ವಾಸ್ತುಲಕ್ಷಣ ಲಕ್ಷಿತಮಾಗಿ ಕಟ್ಟಿಸಿ ಲಬ್ಧ ಪ್ರತಿಷ್ಠಿತನಾದನಾತನ ಶಿಷ್ಯರಕಳಂಕ ಮುನೀಶ್ವರನುಂ ಚಂದ್ರಪ್ರಭ ಮುನೀಶ್ವರನುಮೆಂಬೀರ್ವರುಂ ಕಲಿಯುಗದೊಳ್ ತಾರಣಯುಗದಂತೆ ನಿರತಿ ಚಾರುಚರಿತ್ರರಾಗಿ 2ಶ್ವೇತಪುರದೊಳ್ ತಿಮ್ಮ ಭೂಪಾಲನುಂ ನರಸಿಂಹ ಭೂಪಾಲನುಮೆಂಬೀರ್ವರುಂ ಶಿಷ್ಯರ್ಗೆ ಪರಮಧರ್ಮ ರಹಸ್ಯೋಪದೇಶಂ ಗೆಯ್ದು ಚಂದ್ರ ಸೂರ್ಯರಂತೆ ಜಿನಮಾರ್ಗಮಂ ಬೆಳಗಿದರವರೊಳ್

ಅಕಳಂಕ ಮುನೀಶ್ವರನ ಶಿಷ್ಯಂ ವಿಜಯ ಕೀರ್ತಿ ಮುನೀಶ್ವರಂ ಸಕಲ ದೇಶದೊಳುಂ ಸದ್ಧರ್ಮ ಪ್ರಭಾವಕನಾದ ನಾತನ ಶಿಷ್ಯನಕಳಂಕದೇವ ಯೋಗೀಂದ್ರಂ ಸ್ವಮತ ಪರಮತ ಪ್ರಸಿದ್ಧ ಪರಮ ಭೂಪಾಲ ಪೂಜಿತ ಪಾದಾರವಿಂದನಾಗಿ ಜಿನಶಾಸನ ಪ್ರಭಾವಕನಾದನಂತೆನೆ.

ಲೌಕಿಕ ಕಲಾ ವಿದಗ್ಧಂ
ಲೋಕೋತ್ತರ ನಿರತಿಶಯ ಚರಿತ್ರಸ್ನಿಗ್ಧಂ ॥
ವ್ಯಾಕೀರ್ಣ ಯಶೋದುಗ್ಧಂ
ಶ್ರೀಕರ ಜಿನಮಾರ್ಗ ತತ್ವಗತಸಂದಿಗ್ಧಂ ॥

ಮತ್ತಂ ಶಿಷ್ಯಾನುಗ್ರಹ ಗಣ ಪೋಷಣ ಪ್ರವಚನ ವಾತ್ಸಲ್ಯಾದಿ ಗುಣಂಗಳಿನಾಚಾರ್ಯ ಪದವೀಧುರಂಧರನಾಗಿ ಪ್ರಸಿದ್ಧಿವೆತ್ತಂ.

ಆತನ ಶಿಷ್ಯಂ ಸಕಲಕ
ಲಾತೀತ ವೈದುಷ್ಯನಖಿಲ ಗುಣಗಣ ಭೂಷ್ಯಂ
ಸಾತಿಶಯ ಚರಿತ ಪೋಷ್ಯಂ
ಖ್ಯಾತಂ ಭಟ್ಟಾಕಳಂಕನನುಪಮ ಭಾಷ್ಯಂ ॥
ಶ್ರೀ ರಂಗರಾಜ ನೃಪತಿ
ಪ್ರೇರಣೆಯಿಂ ವಿಜಯ ಮುನಿಪನುಪದೇಶನದಿಂ।
ಸಾರತ್ರಿತಯಮುಮನಲಂ
ಕಾರತ್ರಿತಯಮುಮನೋದಿ ಜಸಮಂ ಪಡೆದಂ ॥
ಸ್ವಪರಮತ ಗ್ರಂಥಂಗಳೊ

---

1. *ಚಂದ್ರಪ್ರಭ ಪುರಾಣದ ಅವತರಣಿಕೆಯಲ್ಲಿ ರಾ| ಮಂ. ಅ. ರಾಮಾನುಜೈಯಂಗಾರರು ಈ ಪದ್ಯವನ್ನು ಉದ್ಧರಿಸಿರುವರು.

2. ಬಿಳಿಗಿ.

ಅಪರಿಮಿತಂ ಪಠನ ಪಾಠನಾಭ್ಯಾಸನದಿಂ |
ನೃಪ ಸಭೆಯೊಳ್ ಬುಧಸಭೆಯೊಳ್
ಸುಪರೀಕ್ಷಕ ಹೃದಯಹಾರಿಯೆನಿಸಿದನಿಳೆಯೊಳ್ ||
ವರಶಬ್ದಾಗಮ ತರ್ಕ ನಾಟಕ ಮಹಾಲಂಕಾರ ಸತ್ಸಂಹಿತಾ |
ಭರತ ಜ್ಯೋತಿಷ ಮಂತ್ರ ತಂತ್ರವಿಧಿ ಶಿಲ್ಪನ್ಯಾಯ ವೇದಸ್ಮೃತಿ |
ಸ್ಫುರದಧ್ಯಾತ್ಮ ಪುರಾಣ ವೈದ್ಯ ಗಣಿತ ಧ್ಯಾನಾದಿ ಶಾಸ್ತ್ರಾಬ್ಧಿ ಚಂ|
ದಿರನೆಂದುರ್ವರೆ ಕೂರ್ತು ಕೀರ್ತಿಸುವುದೀ ಭಟ್ಟಾಕಳಂ
ಕಾರ್ಯನಂ ||
ಶ್ರೀಮಜ್ಜೈನಮತಾಬ್ಧಿ ಸೋಮನೆನಿಪೀ ಘಂಟೇಂದ್ರನುಂ
ಸದ್ಗುಣ |
ಪ್ರೇಮ ಶ್ರೀಯಕಳಂಕದೇವಮುನಿಯುಂ ತಚ್ಛಿಷ್ಯನುದ್ಯದ್ಬುಧ |
ಸ್ತೋಮಾರಾಧಿತ ಪಾದಪದ್ಮನೆನಿಪೀ ಭಟ್ಟಾಕಳಂಕಾರ್ಯನುಂ |
ಕ್ಷೇಮಂ ಬಾಳ್ಕೆ ಧರಿತ್ರಿ (ಯಲ್ಲಿ?) ವಿಜಯಂ ಭದ್ರಂ ಶುಭಂ
ಮಂಗಳಂ ||

ವರ ಸಂಸ್ಕೃತ ಕರ್ಣಾಟಕ
ವೆರಡರೊಳಂ ಗದ್ಯ ಪದ್ಯವಾಙ್ಮಯ ಮಾಲಾ
ವಿರಚನೆಯಿಂದೀ ಶಾಸನ
ವೆರಡಂ ಭಟ್ಟಾಕಳಂಕನೆತ್ತಿ ಬರೆಯಿಸಿದಂ ||

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೫೧೫ನೆಯ ನಂದನ ಸಂವತ್ಸರದ ಮಾಘ ಶುದ್ಧ ೧೫ರಲ್ಲು ಶ್ರೀಮದ್ಭಟ್ಟಾಕಳಂಕ ದೇವರುಗಳ್ ಬರಸಿ ಸಂಪೂರ್ಣಮುಂ ಮಾಡಿಸಿದ ಜಿನಶಾಸನಕ್ಕೆ ಮಂಗಳ ಮಹಾ ಶ್ರೀ . . . . . .

ಮೇಲೆ ಹೇಳಿದ ಶಾಸನದ ಎಡಗಡೆ ಇರುವ ಮತ್ತೊಂದು ಜೈನ ಶಾಸನದ ನಕಲು ಮದ್ರಾಸ್ ಲಾಯ್‌ಬ್ರೆರಿಯಲ್ಲಿ ದೊರೆಯುತ್ತದೆ. "ಶಾಲಿವಾಹನ ಶಕವರ್ಷ ೧೫೧೦ನೆಯ ಸರ್ವಜಿತು ಸಂವತ್ಸರದ ಚೈತ್ರ ಶುದ್ಧ ೧೦ರಲ್ಲು" (ಕ್ರಿ. ಶ. ೧೫೮೭ನೆಯ ಫೆಬ್ರವರಿ 28) "ಶ್ರೀ ವೀರ ಪ್ರತಾಪ ವೆಂಕಟ ಪತಿ ದೇವ ಮಹಾರಾಯರು ಪೆನುಗೊಂಡೆ ಸಿಂಹಾಸನದಲ್ಲಿ" ಇದ್ದಾಗ . . . . . "ಬಿಳಿಗಿಯ ವೀರಪ್ಪೊಡೆಯರ ಕುಮಾರ ರಾದ ರಂಗಪ್ಪ ರಾಜೊಡೆಯರ ಕುಮಾರರು ಘಂಟಣ್ಣೊಡೆ ಯರು . . . . . ಭಟ್ಟಾಕಳಂಕ ದೇವರುಗಳುಪದೇಶದಿಂದ" . . . . . . "ಬಿಳಿಗಿಯ ರತ್ನತ್ರಯ ಬಸದಿಗೆ . . . . ರಂಗ ಮಂಟಪ ಮೊದಲಾದ ಕೆಲಸಗಳನ್ನು ಶಿಲಾಮಯವಾಗಿ ಗೆಯಿಸಿ, ಮೂವರು ತೀರ್ಥಂಕರರನ್ನು ಪ್ರತಿಷ್ಠಿಸಿ, ಭೂ ಸ್ವಾಸ್ತಿಯನ್ನು ಬಿಟ್ಟ ವಿಷಯವು ಈ ಶಾಸನದಲ್ಲಿ ಅಡಕವಾ ಗಿದೆ. ಈ ಪ್ರತಿಷ್ಠಾಕಾರ್ಯವು ಶಕವರ್ಷ ೧೫೦೩ನೆಯ ವಿಕ್ರಮ ವರ್ಷ ಮಾಘ ಶುದ್ಧ ೫ಯು ಕ್ರಿ. ಶ. ೧೫೮೧ ಜನವರಿ ೯ ಸೋಮವಾರ ನಡೆಯಿತು. ಹಿಂದಿನ ಶಾಸನದಲ್ಲಿ ದ್ದಂತೆ ಭಟ್ಟಾಕಳಂಕನ ಗುರು ಪರಂಪರೆಯು ಇದರಲ್ಲಿಯೂ ಉಕ್ತವಾಗಿದೆ. ಭಟ್ಟಾಕಳಂಕನನ್ನು ಕುರಿತು ಈ ಮೂರು ಶ್ಲೋಕಗಳಿವೆ.

"ತಚ್ಛಿಷ್ಯಃ ಸ್ವಾದುಭಾಷ್ಯಃ ಪ್ರವಚನಜಲಧೇಃ ಪಾರಗೋ
ನೀತಿವೇದೀ |
ಷಟ್ಕರ್ಮ ಪ್ರಶಸ್ತಿಂ ನಮದಮನುವದದ್ವಾದಿನಾಂ ಕ್ಷೇಪಕಾರೀ|
ಸಮ್ಯಗ್ಧರ್ಮಪ್ರಭಾವ ಪ್ರಕಟನ ಪಟುವಾಗ್ಧೂತಮೋ
ಹಾಂಧಕಾರಃ |
ಶ್ರೀಮದ್ಘಂಟೇಂದ್ರ ಸಂಪೂಜಿತ ಪದಕಮಲೋ ಭಾತಿ
ಭಟ್ಟಾಕಳಂಕಃ ||
ತರ್ಕೇ ಕರ್ಕಶ ಯುಕ್ತಿ ಜಾಲಭರಿತೇ ಶಬ್ದೇಬ್ಧಿಗಂಭೀರಕೇ |
ಸಂಖ್ಯಾಕೋವಿದ ಗರ್ವಪರ್ವತ ಪವಿಪ್ರಾಯೇಚ ಜೈನಾಗಮೇ |
ಅನ್ಯಸ್ಮಿನ್ ಜಿನಸಂಹಿತಾದಿ ಸುಕಲಾ ಶಾಸ್ತ್ರೇಚ ಯೇ ಗರ್ವಿತಾಃ |
ತಾನ್ ಸರ್ವಾನ್ ಪ್ರವಿಜಿತ್ಯ ಖೇಲತಿತರಾಂ ಭಟ್ಟಾ
ಕಳಂಕೋ ಯತಿಃ ||
ಶಿಲ್ಪೇನಲ್ಪತರೇ ಸುಮಂತ್ರವಚನೇ ವೈದ್ಯೇನವದ್ಯೇ ಶುಭೇ |
ಕಾವ್ಯೇ ನವ್ಯ ರಸೋತ್ಕರೇ ಸುಗುಣಿತೇ ಪುಣ್ಯೇ ಪುರಾಣೇ ಖಿಲೇ||
ಸಂಗೀತೇ ಸರಸೇಚ ನೀತಿಸಮಯೇ ಛಂದೋಗಣೇ ಜ್ಯೋತಿಷೇ|
ನಾಟ್ಯಾಲಂಕರಣಾಧಿತೇಚ ನಿಪುಣೇ ಭಟ್ಟಾಕಳಂಕೋ ಬಭೌ ||"

ಗಜೇಟಿಯರಲ್ಲಿ ಹೇಳಿದ ಮೇರೆ ಬಿಳಿಗಿಯ ವಿರೂ ಪಾಕ್ಷ ದೇವಸ್ಥಾನದಲ್ಲಿ ಮಹಾದ್ವಾರದ ಬಲಗಡೆ ೬ಫೀಟ್× ೩ಫೀಟ್ ಅಳತೆಯ ಕಲ್ಲಿನ ಮೇಲೆ ೪೨ ಪಂಕ್ತಿಗಳಲ್ಲಿ ಕೊರೆ ಯಲ್ಪಟ್ಟಿರುವ ಶಾಸನದ ಪ್ರತಿಯೋ ಎಂಬಂತೆ ಲಾಯ್‌ ಬ್ರೆರಿಯಲ್ಲಿ ಒಂದು ನಕಲು ಇದೆ. ಅದರ ಪ್ರಕಾರ ಆ ಶಾಸನ ದಲ್ಲಿ ಒಟ್ಟು ಪದ್ಯಗಳ ಸಂಖ್ಯೆ ೧೭. ಇವುಗಳಲ್ಲಿ ಮೊದಲನೆ ಯದು ವಿರೂಪಾಕ್ಷನ ಸಂಸ್ಕೃತ ಸ್ತುತಿಯ ಸ್ರಗ್ಧರಾವೃತ್ತ; ತರುವಾಯ ಹತ್ತು ಸಂಸ್ಕೃತ ಶ್ಲೋಕಗಳಲ್ಲಿ ಬಿಳಿಗಿಯ ಉಲ್ಲೇಖವೂ ಅಲ್ಲಿಯ ರಾಜರ ವಂಶಕಥನವೂ ಇವೆ. ಮತ್ತಿನ ಮೂರು ಕನ್ನಡ ವೃತ್ತಗಳು ರಂಗಪ್ಪೊಡೆಯನ ಪ್ರತಾಪ ವರ್ಣನೆಯ ಮೂರು ಪದ್ಯಗಳೇ ಆಗಿವೆ.* ಕೊನೆಯ ಎರಡು ಸಂಸ್ಕೃತ ಶ್ಲೋಕಗಳಲ್ಲಿ ವೀರಮ್ಮಾಜಿಯು ಶಕವರ್ಷ ೧೪೯೩ ನೆಯ ಪ್ರಮೋದೂತ ಸಂವತ್ಸರದ ಚೈತ್ರ ಶುದ್ಧ ೬ಯು ಕ್ರಿಸ್ತ ಶಕದ ೧೫೭೦ನೆಯ ಮಾರ್ಚಿ ೧೨ ಭಾನುವಾರ ದೇವಸ್ಥಾನ ವನ್ನು ಕಟ್ಟಿಸಿ, ವಿರೂಪಾಕ್ಷನನ್ನು ಪ್ರತಿಷ್ಠಿಸಿದಳೆಂದು ಹೇಳ ಲ್ಪಟ್ಟಿದೆ. ಶಾಸನಗಳನ್ನು ವಿಚಾರಿಸುವ ಮೊದಲು ಅವುಗಳ ಲ್ಲಿದ್ದ ಅರಸರ ವಂಶವೃಕ್ಷವನ್ನು ಸಮಗ್ರವಾಗಿ ಬರೆದರೆ ವಿಚಾರವು ಸುಲಭವಾಗುವುದು. (೨೧ನೆಯ ಪುಟ ನೋಡಿ)

ಬಿಳಿಗಿಯ ಅರಸರಲ್ಲಿ ತಿಮ್ಮ ಮತ್ತು ನರಸ ಎಂಬಿಬ್ಬರು ಘಂಟಣ್ಣನ ಕುಮಾರರೆಂದು ಎರಡು ಶಾಸನಗಳು ಹೇಳುತ್ತವೆ; ಬಸದಿಯ ಶಾಸನದಲ್ಲಿ ನರಸನು ತಿಮ್ಮನ ಮಗನೆಂದು ಹೇಳಿದೆ. 'ಶಿವಾನುಭವ' ಎಂಬ ಮಾಸಿಕ ಪುಸ್ತಕದಲ್ಲಿ ರಾ। ಬೆನಗಲ

*೧೭ನೆಯ ಪುಟ ನೋಡಿರಿ.

### ಬಿಳಿಗಿ ಅರಸರ ವಂಶಾವಳಿ.

[ಅರಸನಿಗೆ ಇನ್ನೊಂದು ಹೆಸರಿದ್ದಲ್ಲಿ ಅದನ್ನು ಆವರಣದಲ್ಲಿ ಬರೆದಿದೆ]




ರಾಮರಾವ್, ಎಂ ಎ, ಎಲ್. ಎಲ್. ಬಿ. ಯವರು ಪ್ರಕಾಶಪಡಿಸುತ್ತಿದ್ದ 'ಬಿಳಿಗಿ ಅರಸುಗಳ ವಂಶಾವಳಿ' ಎಂಬ ಹಳೆಯ ಗ್ರಂಥದಲ್ಲಿ ತಿಮ್ಮ ನರಸರು ಅಣ್ಣ ತಮ್ಮಂದಿರೆಂಬದಾಗಿಯೇ ಹೇಳಿದೆ. ವಿರೂಪಾಕ್ಷ ದೇವಸ್ಥಾನದ ಶಾಸನದಲ್ಲಿ ವೀರಪ್ಪೊಡೆಯನ ಮಗ ನರಸಪ್ಪನೆಂದು ಹೇಳಿ, ನರಸನ ಪ್ರತಾಪವನ್ನು ವರ್ಣಿಸುವ ಮೂರು ಪದ್ಯಗಳಿವೆ; ಬಸದಿಯ ಶಾಸನವು ವೀರಪ್ಪೊಡೆಯನ ಮಗ ರಂಗಪ್ಪೊಡೆಯರೆಂದು ತಿಳಿದು ಅಕ್ಷರಶಃ ಆ ಮೂರು ಪದ್ಯಗಳನ್ನೇ ಎತ್ತಿ ತೆಗೆದು ನರಸನ ಹೆಸರಿನಲ್ಲಿ ರಂಗಪ್ಪನ ನಾಮವನ್ನು ಕೊಂಡಾಡುತ್ತದೆ. ಒಂದು ವೇಳೆ ರಂಗಪ್ಪನಿಗೆ ನರಸಪ್ಪನೆಂಬ ನಾಮಾಂತರವಿದ್ದರೂ ಇರಬಹುದು. ಬಿಳಿಗಿಯ ಅರಸುಗಳ ವಂಶಾವಳಿ ಪುಸ್ತಕದಲ್ಲಿ ವೀರಪ್ಪನ ಮಗ ನರಸಪ್ಪನೆಂದು ಹೇಳಿದೆ.

ವಂಶವೃಕ್ಷದಲ್ಲಿನ ಇಮ್ಮಡಿ ಘಂಟಣ್ಣನ ತರುವಾಯ ಆಳಿದ ಅರಸರ ಪ್ರಸ್ತಾಪವು ಇದುವರೆಗೆ ವಿಚಾರಿಸಿದ ಶಾಸನಗಳಲ್ಲಿ ಹೇಳಿಲ್ಲ. ಸಿದ್ಧಾಪುರದ ಗಣಪತಿ ದೇವಸ್ಥಾನದ ಶಾಸನವೆಂಬದಾಗಿ ಮದ್ರಾಸ್ ಲೈಬ್ರೆರಿಯಲ್ಲಿ ಒಂದು ನಕಲು ದೊರೆಯುತ್ತದೆ. ಅದರಲ್ಲಿ ಮತ್ತು ಬಿಳಿಗಿ ವಂಶಾವಳಿಯ ಪುಸ್ತಕದಲ್ಲಿ ಈ ಹೆಸರುಗಳು ಕಂಡುಬರುತ್ತವೆ; ಆದರೆ ಘಂಟಮ್ಮನ ಪ್ರಸ್ತಾಪವು ಈ ಪುಸ್ತಕದಲ್ಲಿ ಹೊರತು ಶಾಸನದಲ್ಲಿ ದೊರೆಯುವುದಿಲ್ಲ.

ಲೈಬ್ರೆರಿಯಲ್ಲಿದ್ದ ಕೈಬರಹದ ಪುಸ್ತಕಗಳ ಹಾಳೆಗಳನ್ನು ಮಗುಚುವಾಗ ಬಿಳಿಗಿ ತಾಲೂಕಿನ ಇತರ ಕಡೆಗಳಲ್ಲಿರುವ ಶಾಸನಗಳಲ್ಲಿ ಮತ್ತು ವೀರಗಲ್ಲುಗಳಲ್ಲಿ ಹೇಳಿರುವ ಒಂದೆರಡು ಹೆಸರುಗಳು ಬಿಳಿಗಿಯ ಅರಮನೆಯವರ ಹೆಸರುಗಳಂತೆಯೇ ಕೇಳಿಸುತ್ತವೆ. ಶಕವರ್ಷ ೧೩೩೩ ವಿಕೃತಿಯಲ್ಲಿ ಮುಂಡಣ್ಣನ ಮಗ ಅಮ್ಮಣ್ಣರಸ, ೧೪೦೦ ಹೇವಳಂಬಿಯಲ್ಲಿ ಬೊಮ್ಮಣ್ಣನ ತಿಪ್ಪರಸ, ೧೩೮೫ ಚಿತ್ರಭಾನುವಿನಲ್ಲಿ ಐಸೂರು ಕಲ್ಲಪ್ಪ ನಾಯ್ಕನ ಕುಮಾರ ಭದ್ರಪ್ಪ ನಾಯಕನು ಲಿಂಗದಲ್ಲಿ ಕೂಡಿದ್ದಲ್ಲಿ ಸಹಗಮಿಸಿ ಮಾಸತಿಯಾದ ನರಸಮ್ಮ, ೧೫೫೪ ಪ್ರಜೋತ್ಪತ್ತಿಯಲ್ಲಿ ಐಸೂರು ಘಂಟಣ್ಣ ಒಡೆಯರ ಬೆನ್ನ ಹಿಂದೆ ಸಹಗಮನ ಮಾಡಿದ ರಾಮಾದೇವಿ ಮುಂತಾದವರು ಬಿಳಿಗಿಯ ಮನೆತನಕ್ಕೆ ಬಹುಶಃ ಸೇರಿದವರೇ ಇರಬಹುದು.

ಬಿಳಿಗಿಯ ಅರಸರಲ್ಲಿ ಮೊದಲಿಗನಾದ "ಮುಂಡಣ್ಣನ ಮಗ ನರಸಿಂಗನು ಗಡಿಯಲ್ಲಿ ಜಯಸ್ತಂಭವನ್ನು ನೆಡಿಸಿ" (ವಿಜಯನಗರದ) "ಕೃಷ್ಣರಾಜನಿಂದ ಮನ್ನಿಸಲ್ಪಟ್ಟು, ಅವನ ಮಗಳಾದ ಹರಿಯಮ್ಮನನ್ನು ಮದುವೆಯಾಗಿ ಪೆನುಗೊಂಡೆಯ ಮೂರು ಲಕ್ಷ ರಾಜ್ಯವನ್ನು ಧಾರಾಪೂರ್ವಕವಾಗಿ ಪಡೆದನೆಂದು" ಪೂರ್ವೋಕ್ತ 'ಬಿಳಿಗಿ ಅರಸುಗಳ ವಂಶವು' ಎಂಬ ಪುಸ್ತಕದಲ್ಲಿ ಹೇಳಿದ ವಿಷಯಕ್ಕೆ ಶಾಸನಗಳಿಂದ ಯಾವ ಆಧಾರವೂ ದೊರೆಯುವುದಿಲ್ಲ. 'ವಂಶಾವಳಿ' ಎಂಬ ಪುಸ್ತಕವು ಮುಮ್ಮಡಿ ಘಂಟೇಂದ್ರನ ಕೀರ್ತಿಯನ್ನು ಉದ್ಘೋಷಿಸುತ್ತವಲ್ಲದೆ ಹಾಡುವಳ್ಳಿಯಲ್ಲಿದ್ದು ಪ್ರತ್ಯಕ್ಷವಾಗಿ ಜಿನಧರ್ಮಬೋಧೆಯನ್ನೂ ಪರೋಕ್ಷವಾಗಿ ಕನ್ನಡ ಸಾಹಿತ್ಯ ಸೇವೆಯನ್ನೂ ಮಾಡಿದ ಜೈನಗುರುಗಳನ್ನೂ ಅವರ ಆಶ್ರಯದಾತಾರರಾದ ಬಿಳಿಗಿಯ ರಂಗಪ್ಪೊಡೆಯ, ಇಮ್ಮಡಿ ಘಂಟೇಂದ್ರ ಮೊದಲಾದವರನ್ನೂ ಕುರಿತು ಮಾತೆತ್ತುವುದಿಲ್ಲ. ಅಮ್ಮಣ್ಣನೆಂಬ ನಾಮಾಂತರವಿದ್ದ ಘಂಟಣ್ಣನ ತರುವಾಯವೇ ಆ ಮನೆತನವು ಘನತೆಗೆ ಏರಿತು. ಈ ಘಂಟಣ್ಣನೇ ಬಿಳಿಗಿಯನ್ನು ಸೋಮಾ ನದಿಯ ತೀರದಲ್ಲಿ ಕಟ್ಟಿಸಿ, ಕೋಟೆಕೊತ್ತಲಗಳ

ನ್ನು ಹಾಕಿದನು. ಶಬ್ದಾನುಶಾಸನಕ್ಕೆ ಮೆ। ರಾಯಬಹದ್ದೂರ್ ಆರ್. ನರಸಿಂಹಾಚಾರ್ಯರು ಬರೆದ ಇಂಗ್ಲಿಷು ಅವತರಣಿಕೆಯಲ್ಲಿ ಭಟ್ಟಾಕಳಂಕನ ಆಶ್ರಯದಾತಾರನು ವಿಜಯನಗರದ ಶ್ರೀರಂಗನೆಂದಿದೆ. ಈ ರಂಗರಾಯನು ವಿಜಯನಗರದವನಲ್ಲ; ಬಿಳಿಗಿಯ ರಂಗಪ್ಪೊಡೆಯನೆಂದು ಇನ್ನು ಹೇಳಬೇಕಾಗಿಲ್ಲ. ಅದೇ ಅವತರಣಿಕೆಯಲ್ಲಿ ಘಂಪೇಂದ್ರ ಎಂಬ ಹೆಸರನ್ನು ಘಂಟೇಂದ್ರನೆಂದು ಓದಬೇಕಾಗಿದೆ.

ಬಿಳಿಗಿಯ ಅರಸರ ಧರ್ಮವಿಚಾರವು ಈ ಶಾಸನಗಳಿಂದ ಸ್ವಲ್ಪಮಟ್ಟಿಗೆ ಹೊರಬೀಳುತ್ತದೆ. ಭಟ್ಟಾಕಳಂಕನ ಕಾಲದಲ್ಲಿ ಬ್ರಾಹ್ಮಣರು ಜಿನಧರ್ಮವನ್ನು ಅವಲಂಬಿಸುತ್ತಿದ್ದರೆಂಬುದನ್ನು ಪೂರ್ವೋಕ್ತ ಬಸದಿಯ ಶಾಸನದಿಂದ ಊಹಿಸಬಹುದು. ಮೊದಲನೆಯ ಘಂಟೇಂದ್ರನ ವರೆಗೆ ಜೈನಧರ್ಮವು ಬಹುಶಃ ಬಿಳಿಗಿಯ ಅರಮನೆಯಲ್ಲಿ ಕಾಲು ಹಾಕಲಿಲ್ಲ. ಅನಂತರ ಮುಮ್ಮಡಿ ಘಂಟೇಂದ್ರನ ವರೆಗೆ ರಾಜ್ಯವಾಳಿದ ಅರಸರು ಜೈನರಿದ್ದಿರಬೇಕು; ನಾಲ್ವಡಿ ಘಂಟಣ್ಣನು ಲಿಂಗವನ್ನು ಧರಿಸಿ ಮತಾಂತರ ಮಾಡಿದ್ದರಿಂದ ಹುಚ್ಚು ಹಿಡಿದು ಹಾಳಾದನೆಂಬುದಾಗಿ ಜೈನರು ಆಡಿಕೊಳ್ಳುವುದುಂಟು. ಆತನು ಉನ್ಮತ್ತನಾಗಿ ಸತ್ತುಹೋದನೆಂದು 'ಬಿಳಿಗಿಯ ಅರಸುಗಳ ವಂಶಾವಳಿಯಲ್ಲಿ' ಹೇಳಿದೆ.

ಬಿಳಿಗಿ ಮನೆತನಕ್ಕೂ ಸೋದೆ ಕೆಳದಿ ಮನೆತನಗಳಿಗೂ ರಕ್ತಸಂಬಂಧವಿತ್ತೆಂಬುದಾಗಿ ಒಂದೆರಡು ಶಾಸನಗಳು ಹೇಳುತ್ತವೆ. ಇಮ್ಮಡಿ ಘಂಟೇಂದ್ರನ ರಾಣಿಯಾದ ರಾಮಾದೇವಿಯು ಸೋದೆಯ ಅರಸಪ್ಪ ನಾಯಕನ ಮಗಳು. ವೀರಪ್ಪೊಡೆಯನ ರಾಣಿಯಾದ ವೀರಮ್ಮನು ಜಂಬೂರಿನ ಕಾಮರಸನ ಮಗ ವಿರೂಪೇಂದ್ರನಿಗೆ ರಾಮಾದೇವಿಯಿಂದ ಹುಟ್ಟಿದವಳು. ಹೀಗಿದ್ದರೂ ಈ ಮನೆತನಗಳಿಗೆ ಕಲಹಗಳು ತಪ್ಪುತ್ತಿರಲಿಲ್ಲ. ಕೆಳದಿಯ ವೆಂಕಟಪ್ಪನಾಯಕನು ಸೋದೆ, ಬಿಳಿಗಿ, ಮುಂತಾದವರನ್ನು ತಗ್ಗಿಸಿದನೆಂದು ಕೆಳದಿ ನೃಪ ವಿಜಯದಲ್ಲಿ ಹೇಳಿದೆ. ಅದೇ ಗ್ರಂಥದಲ್ಲಿ ವೀರಭದ್ರನಾಯಕನು "ಸೋದೆ ಬಿಳಿಗಿಯ ನೃಪಾಲರ ಮೇದಿನಿಯಂ ಕೊಂಡು ತತ್ಪರಿಸ್ತರಣಗಳಂ ಸ್ವಾಧೀನಂ ಗೈದುದರಿಂದ "ಅವರು" ವಿಜಾಪುರಕ್ಕೈದಿ ಪಾತುಶಹನಂ ಸಂಧಿಸಿ . . . . . . ಕಿವಿಗೆಡಿಸಿ," ಸೈನ್ಯ ಸಮೇತರಾಗಿ ವೀರಭದ್ರನಾಯಕನ ಮೇಲೆ ಬೀಳಲು, ಆತನು ಅವರ ಸ್ಥಳಗಳನ್ನು ಅವರಿಗೆ ಹಿಂದಕ್ಕಿತ್ತು, ಬಿಳಿಗಿಯ ಘಂಟಿ ಒಡೆಯರ ಪುತ್ರಿ ಘಂಟಿಯಮ್ಮನಂ ಸದಾಶಿವಯ್ಯನ ಪುತ್ರನಾದ ಅಳಿಯ ಭದ್ರಯ್ಯಂಗೆ ಅತ್ಯಂತ ಸಂಭ್ರಮದಿಂದ ವಿವಾಹಮಂ ರಚಿಸಿದಂ" ಎಂದಿದೆ. ಬಿಳಿಗಿಯ ಅರಸುಗಳ ವಂಶಾವಳಿಯ ಪುಸ್ತಕದಲ್ಲಿ ಹೀಗೆ ಹೇಳಿದೆ:- ಸ್ವಾದೆಯ ರಘುನಾಥನಾಯಕನ ಆಹ್ವಾನ ಪತ್ರವನ್ನು ಮನ್ನಿಸಿ ಮುಮ್ಮಡಿ ಘಂಟೇಂದ್ರನು ಬನವಸೆಯ ರಥೋತ್ಸವಕ್ಕೆ ಹೋಗಲು ದಾರಿಯಲ್ಲಿ ತರೀಕೆರೆಯ ಹನುಮನು ಅವನ ಮೇಲ್ಬಿದ್ದನು. ಘಂಟೇಂದ್ರನು ಹೆದರಿ ಬಿಳಿಗಿಗೆ ಹಿಂದೆರಳುತ್ತಲೇ ಆತನಿಗೆ ಭ್ರಮಣವು ತಲೆಗೇರಿತು. ಮುಂದೆ ಬಿಳಿಗಿಯ ರಾಜ್ಯವನ್ನು ಕೆಳದಿಯವರು ಸೆಳೆದುಕೊಂಡು ಕೋಟೆಗಳನ್ನು ಕೆಡಹಿಬಿಟ್ಟರು. ಅನಂತರ ಮೌನದ ಘಂಟಿಯೊಡೆಯ ಮತ್ತು ಸಿದ್ದಪ್ಪ ಎಂಬ ಅವನ ಮಕ್ಕಳು ವಿಜಾಪುರಕ್ಕೆ ಹೋಗಿ ಪಾದುಶಹನ "ಫರಮಾನವನ್ನು ತಂದು ಕೆಳದಿಯರಿಗೆ ಕೊಟ್ಟು ಬಿಳಿಗಿ ಮನೆತನವನ್ನು ಕೆಡಿಸಲಾಗದೆಂದು ಭಾಷೆಯನ್ನುತೆಗೆದುಕೊಂಡರು" ಮೌನದ ಘಂಟೇಂದ್ರನ ತರುವಾಯ ಬಿಳಿಗಿಯ ರಾಜ್ಯವು ಕೆಳದಿಯ ಮನೆತನಕ್ಕೆ ಸೇರಿಹೋಯಿತು.



# ಪದಾರ್ಥವೇನು?

೧

'ಪದಾರ್ಥವೇನು?'–ಇದೇ ಪ್ರಶ್ನೆ ನಮ್ಮ ಊರ ಹೆಣ್ಣು ಮಕ್ಕಳು ಒಬ್ಬರ ಮನೆಗೆ ಮತ್ತೊಬ್ಬರು ಹೋದಾಗ ಪರಸ್ಪರ ಪರಿಚಯಕ್ಕಾಗಿ ಮೊತ್ತಮೊದಲು ಹೇಳುವ ನಾಂದೀವಾಕ್ಯ. ಇದೇ ಅವರ ಮುಂದಿನ ತಾರುಮಾರು ಮಾತುಗಳಿಗೆ ಪ್ರಸಂಗ ಪೀಠಿಕೆ. ಪದಾರ್ಥವಿಚಾರದಿಂದ ಪದಾರ್ಥದ ಹೆಸರು, ರುಚಿ, ರೀತಿಗಳ ವಿಷಯವನ್ನು ಅರಿತುಕೊಳ್ಳಬೇಕೆಂಬ ಆತುರವು ಕೇಳಿದವರಲ್ಲಿ ಇರುತ್ತದೆಂದು ತಿಳಿಯಲಾಗದು. ಊರವರು ಒಬ್ಬರನ್ನೊಬ್ಬರು ಕಂಡಾಗ, ಇಂಗ್ಲಿಷ್ ಅರಿತವರಾದರೆ ಹವೆಯ ಸಂಗತಿಯನ್ನೋ ಅರಿಯದವರಾದರೆ ಬೆಳೆಯ ಸ್ಥಿತಿಯನ್ನೋ ಕುರಿತು ಕಾಲಹರಣಕ್ಕೆ ಪ್ರಸ್ತಾವನೆಯಾಗಿ ಮಾಡುವ ನಿರುದ್ದೇಶದ ಪ್ರಶ್ನೆಗಳುಂಟಷ್ಟೆ? ಅವುಗಳಂತೆಯೇ ಈ ಪ್ರಶ್ನೆ ನಮ್ಮ ಜಿಲ್ಲೆಯಲ್ಲಿ ಸಂಪ್ರದಾಯಕ್ಕೆ ಅನುಸಾರವಾಗಿ, ಮಾತುಕಥೆಗೆ ಮುಂಚಿತವಾಗಿ ಹೆಂಗಸರು ಮಾಡುವ ನಗುಮುಖದ ಮಾತಿನ ಉಪಚಾರ.

ಈ ಮಾತಿನಲ್ಲಿ ಪದಾರ್ಥವೆಂದರೆ ಇಂಥಾದ್ದೆಂದು ಒಡೆದು ತೋರಿಸುವ ಅಗತ್ಯವಿಲ್ಲ, ಎಲ್ಲರಿಗೂ ಗೊತ್ತೇ ಇದೆ. ತುಳುವಿನ 'ಕಜಿಪು', ಕೊಂಕಣಿಯ 'ರಾಂದಾಯಿ' ಯಾವ ಸಂದರ್ಭದಲ್ಲಿ ಹೇಗೆ ಉಪಯೋಗವಾಗುತ್ತವೋ, ಆ ಸ್ಥಳದಲ್ಲಿ ಅದೇ ಅಭಿಪ್ರಾಯವನ್ನು ಕನ್ನಡದಲ್ಲಿ ಪದಾರ್ಥ ಶಬ್ದವು ಹೇಳುತ್ತದೆ. ಕನ್ನಡದಲ್ಲಿ ಇದಕ್ಕೆ ಕವಿ ಪ್ರಯೋಗವಿದೆ.

'........ಬಡಿಸಿದ ಪದಾರ್ಥವ ತಿಂದು ಕೈತೊಳೆದೆದ್ದು....'
(ಬಸವ ಪುರಾಣ)

'...ಮಥಿಸಿ ಜನಿಸಿದ ಪದಾರ್ಥಮಂ ತಿಳಿದು ನೋಡದೆ...'
(ಜೈಮಿನಿ ಭಾರತ)

ಪದಾರ್ಥವೆಂದರೆ–ಊಟದಲ್ಲಿ ಅನ್ನದೊಂದಿಗೆ ಕಲಸಿಕೊಳ್ಳುವ, ಕನ್ನಡಿಗರ ಹುಳಿ, ಸಾರು, ತೊವ್ವೆಗಳು, ತುಳುವರ 'ಕಜಿಪ್ಪು ಕೊದ್ದೆಲುಗಳು', ಕೊಂಕಣಿಗರ 'ಆಂಬಟ, ಗಶ್ಶಿ, ಕಡಿಗಳು' ಮುಂತಾದ್ದು. ಬದನೆ ಬೆಂಡೆಯಂಥ ಪಲ್ಲೆಕಾಯಿ ಸುಟ್ಟೊ,ಅಟ್ಟೊ,ಕರಿದೊ,ಹುರಿದೊ,ಊಟದ ಹೊತ್ತಿಗೆ ನಂಜಿಕೊಳ್ಳುವದಕ್ಕಾಗಿ ಮಾಡುವ ಬಜ್ಜಿ, ಗೊಜ್ಜು, ಕೂಟು, ಚಟ್ಣಿ, ತಂಬ್ಳಿ ಮೊದಲಾದುವು ಪದಾರ್ಥಗಳಲ್ಲಿ ಇತ್ತಲಾಗೆ ಸೇರಿಕೊಂಡಿವೆ. ಹಿಂದಕ್ಕೆ ಅವನ್ನು ಪಲ್ಲೆಗಳೆಂದು ಕರೆಯುತ್ತಿದ್ದರು, ಪದಾರ್ಥಗಳೆಂದು ಹೇಳುತ್ತಿರಲಿಲ್ಲ. ಅನ್ನದೊಂದಿಗೆ ಕಲಸಿ ತಿನ್ನತಕ್ಕದ್ದು ಬೇರೆ, ನಂಜಿಕೊಳ್ಳತಕ್ಕದ್ದು ಬೇರೆ,–ಹೀಗಿದ್ದಾಗ ಅದು ಪದಾರ್ಥ, ಇದು ಪಲ್ಲೆ ಎಂಬುದು ಸರಿಹೋಗುತ್ತಿತ್ತು. ಕಲಸಿಕೊಳ್ಳುವುದಕ್ಕೂ ನಂಜಿಕೊಳ್ಳುವುದಕ್ಕೂ ಒಂದು ಮೇಲೋಗರ ಕೂಡ ಒದಗಿಸಿಕೊಳ್ಳಲಾರದ ಬಡತನ ಬಂದಾಗ ಪದಾರ್ಥವೇನು? ಪಲ್ಲೆ ಏನು? ಎರಡೂ ಒಂದೇ ಆಯಿತು. ಪಚ್ಚಡಿ ಕಿಚ್ಚಡಿ, ಕರಿದ ಸಂಡಿಗೆ, ಹುರಿದ ಹೋಳಿಗೆ, ಸುಟ್ಟ ಹಪ್ಪಳ, ಹುಯ್ದ ದೋಸೆ, ಬೆಂದ ಕಡುಬು ಇತ್ಯಾದಿ ಭಕ್ಷ್ಯ ಭೋಜ್ಯಗಳು ಪದಾರ್ಥಗಳೂ ಅಲ್ಲ, ಪಲ್ಲೆಗಳೂ ಅಲ್ಲ; ನಮ್ಮ ಹಿರಿಯರು ಅವನ್ನು ಅನ್ನದೊಂದಿಗೆ ಕಲಸುತ್ತಲೂ ಇರಲಿಲ್ಲ,ನಂಜಿಕೊಂಡು ಊಟಮಾಡುತ್ತಲೂ ಇರಲಿಲ್ಲ. ಪದಾರ್ಥ, ಪಲ್ಲೆ, ಮೇಲೋಗರ, ಶಾಖ ಈ ನಾಲ್ಕು ಶಬ್ದಗಳಿಗೆ ನಮ್ಮ ಜಿಲ್ಲೆಯಲ್ಲಿ ಈಗ ಸಮಾನಾರ್ಥವುಂಟು. ಹಿಂದೆ ಅವನ್ನು ಒಂದರ ಬದಲು ಮತ್ತೊಂದನ್ನು ಬಹುಶಃ ಪ್ರಯೋಗಿಸುತ್ತಲೂ ಇರಲಿಲ್ಲ.

ಏಕಾರ್ಥ ಪ್ರಯೋಗವುಳ್ಳ ಮೇಲೋಗರ, ಪಲ್ಲೆ, ಪದಾರ್ಥ, ಶಾಖ–ಇವುಗಳಲ್ಲಿ ಮೊದಲಿನದಲ್ಲವೇ ಮೇಲು? 'ಪಲ್ಲೆ' ಬೆಣ್ಣಗಿದೆ, ಚೆನ್ನಾಗಿದೆ. ಆದರೆ ಶಾಖ ಶಬ್ದ ಮಾತ್ರ ವೈದ್ಯಶಾಸ್ತ್ರದ ಶ್ಲೋಕ ಶಬ್ದದಂತೆ ಕರ್ಣಕಠೋರ; ಕನ್ನಡದಲ್ಲಿ ಅದರ ಪ್ರಯೋಗವೂ ಕಡಮೆ;'ಶಾಖಾಯ ಲವಣಾಯ' ಎಂಬಂತೆ ಅಲ್ಪ ಸ್ವಲ್ಪ ಮಾತ್ರ. ಪದಾರ್ಥ–ಇದು ಪಂಡಿತ ಸಭೆಯ ಶಬ್ದವಿದ್ದರೂ, ನಮ್ಮ ಹೆಣ್ಣುಮಕ್ಕಳ ಅಡಿಗೆಮನೆಯಲ್ಲಿ ಬಹುಕಾಲ ಹರಿದಾಡಿಕೊಂಡಿದ್ದ ಕಾರಣ ನನಗೆ ಮೆಚ್ಚುಗೆಯಾಗಿದೆ. ಅವುಗಳಲ್ಲೆಲ್ಲ ನನಗೆ ಮುದ್ದಾದದ್ದು–'ಮೇಲೋಗರ'. ಇದರಲ್ಲಿ ಅಚ್ಚಕನ್ನಡದ ರೂಪರೇಖೆಗಳೇ ಕಣ್ಣಿಗೆ ಕಟ್ಟುತ್ತವೆ. 'ಪಲ್ಲೆ'–ಇದಕ್ಕೆ ಕನ್ನಡದ ಮುಖಲಕ್ಷಣವಿಲ್ಲವೇ? ಬುಡ ತೆಗೆದು ನೋಡಿದರೆ 'ಪಲ್ಲೆ'ಎಂಬುದು ಹಸಿಯಾದ್ದು, ಹಸುರಾದದ್ದು, ಕಾಯಿ ಇದ್ದದ್ದು, ಫಲವಾಗಲುಳ್ಳದ್ದು ಎಂಬಂತೆ ಕಾಣುತ್ತದೆ. ಫಲ್ಯವೆಂದರೆ ಸಂಸ್ಕೃತದಲ್ಲಿ ಕಾಯಿ ಎಂದರ್ಥ. ಕಾಯಿ ಎಂದರೂ ಒಂದೇ, ಪಲ್ಲೆ ಎಂದರೂ ಒಂದೆಂತಾದರೆ, ಕಾಯಿಪಲ್ಲೆ ಪಲ್ಲೆಕಾಯಿ ಹೀಗೆ ಅವಳಿಜವಳಿ ಏತರಿಂದ ಹುಟ್ಟಿತು? ಒಂದು ಮಗು ಸಾಲದಿತ್ತೇ? ಸಾಕಲ್ಯಾರ್ಥದಲ್ಲಿ ಮಕ್ಕಳು ಮರಿ ಎಂದು ಹೇಳುತ್ತಾರಷ್ಟೆ; ಅದರಂತೆ ಬೆಂಡೆ ಕಾಯಿ, ಹರಿವೆ ಸೊಪ್ಪು, ನುಗ್ಗೆ ಕೋಡು, ಮುಂತಾದ ತರಕಾರಿಯನ್ನು ಕನ್ನಡದಲ್ಲಿ ಸಮಗ್ರವಾಗಿ ಹೇಳ

---

(ಈ ಲೇಖನದಲ್ಲಿಯ ಸಾಂಕೇತಿಕಗಳು:— **ಕ-ಕನ್ನಡ, ತು-ತುಳು, ಕೊಂ-ಕೊಂಕಣಿ, ಸಂ-ಸಂಸ್ಕೃತ, ತೆ-ತೆಲುಗು. ತ-ತಮಿಳು, ಮ-ಮಲೆಯಾಳ.**)

ತಕ್ಕ ಜೋಡು ಮಾತೇ ಕಾಯಿಪಲ್ಲೆ ಅಥವಾ ಕಾಯಿಪಲ್ಯ. ಪಲ್ಲೆ (ಕ), ಫಲ್ಯ (ಸಂ), ಪಲ್ಲವ (ಸಂ), ಪಾಲ್ಲೊ (ಕೊಂ), ಪಜಿರ್ (ತು), ಪಸುರ್ (ಕ), ಪಸಿ (ತ), ಪಯಿರ್ (ಕ), ಫಳ (ಸಂ, ಕೊಂ), ಪಣ್ (ಕ), ಪಟಿಂ (ತ), ಇವುಗಳಲ್ಲಿ ಹತ್ತಿರದ ನಂಟು ತೋರುವುದಿಲ್ಲವೇ? ಇವು ಒಂದು ತಾಯಿ ಬೇರೇ ಎಬ್ಬಿಸಿಬಿಟ್ಟ ಬಣ್ಣಬಣ್ಣದ ಎಲೆಗಳಂತೆ ಕಾಣುವುದಿಲ್ಲವೇ? ಇವುಗಳ ತಾಯಿ ಬೇರೆ ಬೇರೆ ಎಂಬಂತೆ ಇದೆಯೋ ನೋಡಿ! ಆ ಮೇಲೆ 'ಪಲ್ಲೆ' ಸೇರಬೇಕು ಸಂಸ್ಕೃತಕ್ಕೊ, ಕನ್ನಡಕ್ಕೊ ಎಂಬುದನ್ನು ಇತ್ಯರ್ಥಮಾಡಿ!

ಇಂಥ ಚರ್ಚೆಯು 'ಮೇಲೋಗರ' ಸಂಬಂಧವಾಗಿಯೂ ಬರುತ್ತವೆ. ಮೇಲ್ ಮತ್ತು ಓಗರ ಕೂಡಿ ಮೇಲೋಗರ ಎಂಬುದು ಸ್ಪಷ್ಟ. ಮೇಲ್-ಇದು ಹುಟ್ಟು ಕನ್ನಡ ನುಡಿ; ಓಗರ ಮಾತ್ರ ಅಚ್ಚಕನ್ನಡವೋ ಇಲ್ಲವೇ ಸಂಸ್ಕೃತದಿಂದ ಜಾತಿಗೆಟ್ಟು ಕನ್ನಡಕ್ಕೆ ಕೂಡುವಳಿಯಾದ ಸಂಸ್ಕೃತ ಓದನ ಶಬ್ದವೋ ಅಥವಾ ಆ ಓದನ ಓಗರಗಳೆರಡು ಆದಿಯಲ್ಲಿ ಯಾವುದೋ ಒಂದೇ ಬಳಿಯಲ್ಲಿ ಹುಟ್ಟಿ ಹಲವು ತಲೆಮಾರುಗಳ ಹಿಂದೆಯೇ ತವರುಮನೆ ಬಿಟ್ಟು ಬೇರೆಯಾದ ಜೋಡು ನುಡಿಗಳೋ ಎಂಬುದನ್ನು ನಾನರಿಯೆ. ಕನ್ನಡದಲ್ಲಿ 'ಒಗರು' ಎಂಬ ಮಾತು ಉಂಟು; ಈ 'ಒಗರು' ಶಬ್ದದಿಂದ 'ಓಗರ' ಬಹುಶಃ ಬರಲಾರದು. ಕಾದುತೇಮವಾಗುವುದಕ್ಕೆ ಕೊಂಕಣಿಯಲ್ಲಿ 'ಒಗರು' ಎನ್ನುವರು. 'ಮೈ ಕಾದು ಬೆವರು ಒಗರು(ತ್ತದೆ)' 'ಉಪ್ಪು ಒಗರುತ್ತದೆ (ಒಗರ್ತಾ)'– ಹೀಗೆ ಹೇಳುವುದುಂಟು. ಉಪ್ಪಿನ ಅಗರು ಎಂಬುದು ಉಪ್ಪಾಗುವ ಗದ್ದೆಯಷ್ಟೆ; ಇಲ್ಲಿ 'ಅಗರು, ಒಗರು' ಶಬ್ದದ ಮತ್ತೊಂದು ರೂಪ. ಕೊಂಕಣಿಯಲ್ಲಿ ಒಗರು ಕ್ರಿಯಾಪದವಾಗಿ ಬರುತ್ತದೆ. 'ಕಾದು ತೇಮವಾದದ್ದೇ' ಓಗರ ಇರಬಹುದೇ? ಓಗರದಿಂದ ಒಗ್ಗರಣೆ ಬಂದಿರಬಹುದೇ? ಒಗರು, ಅಗರು, ಅರಗು, (ಕರಗು, ಜೀರ್ಣವಾಗು, ತಿನ್ನು). ಓಗರ, ಒಗ್ಗರಣೆ, ಅರಗಣೆ, (ಅರ್ಗಣೆ), ಆರೋಗಣೆ – ಇವುಗಳಿಗೆಲ್ಲಾ ಬುಡ ಒಂದೆಯೋ ಅಲ್ಲವೋ ಎಂಬದು ವಿಚಾರಾರ್ಹವಾಗಿದೆ. ಈ ಸಂದರ್ಭದಲ್ಲಿ ಆ ವಿಚಾರಕ್ಕೆ ಹೋದರೆ, ಸೀಗೆಬಲ್ಲೆ ಹೊಕ್ಕಂತಾಗುವುದು; ತಲೆಯ ಸೆರಗು ಸಿಕ್ಕಿಕೊಂಡರೆ ಬಿಡಿಸಿಕೊಳ್ಳುವುದಕ್ಕೆ ತೊಂದರೆ. ಮುಂದೆ ಅವಕಾಶ ದೊರೆತಾಗ ಸಂಸ್ಕೃತ, ಕನ್ನಡ ಭಾಷಾ ಮೂಲವನ್ನು ಅಗೆಯಲಿಕ್ಕೆ ನೋಡೋಣ. ಮೇಲೋಗರ ಎಂದರೆ ಮೇಲ್(ಮೇಲಿನ ಇಲ್ಲವೆ ಮೇಲಾದ) ಓಗರ(ಅನ್ನ). ಮೇಲಿನ ಅನ್ನ, ಮೇಲಾದ ಅನ್ನ, ಮೆಲ್ಲತಕ್ಕ ಅನ್ನ, ಮೆಲ್ಲಿತಾದ ಅನ್ನ–ಅಂತು ಒಂದು ತರದ ಅನ್ನವೇ ಹೊರತು, 'ಅನ್ನದ ಮೇಲೆ ಇಕ್ಕಿದ್ದು 'ಅಥವಾ' ಅನ್ನಕ್ಕೆ ಕಲಸಿಕೊಳ್ಳುವಂಥಾದ್ದು' ಎಂಬ ಅರ್ಥವಾಗಲಾರದು. ಬೇಕಾದರೆ 'ಹಾಲೋಗರ' ಪರೀಕ್ಷೆಮಾಡಿ! 'ಕಲಸೋಗರ' ತಕ್ಕೊಳ್ಳಿ! ಹಾಲಲ್ಲಿ ಬೆಂದ ಅನ್ನವೇ 'ಹಾಲೋಗರ'. 'ಕಲಸೋಗರ' ಈಗ ಮಾತ್ರ ಕನ್ನಡದಲ್ಲಿಲ್ಲ; ಆದರೆ ಕೊಂಕಣಿಯಲ್ಲಿದೆ. ಸಂಸ್ಕೃತದ 'ದಧ್ಯನ್ನ' ಎಂದರೆ ಮೊಸರು ಕಲಸಿದ ಅನ್ನ— ಇದನ್ನು ಕೊಂಕಣಿಯ ಬಾಯಿಗೆ ಹಾಕಿದ್ದೇ ಕನ್ನಡ. ಹೀಗೆ 'ಹಾಲೋಗರ' 'ಕಲಸೋಗರ' ಇವು ಅನ್ನವನ್ನೇ ಉದ್ದೇಶಿಸಿ ಹೇಳುವಾಗ, ಮೇಲೋಗರ ಮಾತ್ರ ಅನ್ನದ ಮೇಲಿಕ್ಕುವ ಪಲ್ಲೆಯನ್ನೋ ಪದಾರ್ಥವನ್ನೋ ಸೂಚಿಸುತ್ತದೆಂದು ಹೇಳಲಾದೀತೇ? 'ಮೇಲೋಗರ' ಇದು ಮೊತ್ತಮೊದಲು ಅನ್ನವಾಚಿ, ಅದಕ್ಕೆ ಅನ್ನವೆಂಬ ಅರ್ಥ ಸಲ್ಲುತ್ತಿತ್ತು. ಹೀಗೆ ಸಲ್ಲುತ್ತಿದ್ದ ಅಶನಾರ್ಥ ತಪ್ಪಿ ಈ 'ಮೇಲೋಗರ' ಕಃ ಪದಾರ್ಥ ಹೇಗಾಯಿತು?

'ಮೇಲೋಗರಕ್ಕೆ ಏನು?' 'ಮೇಲೋಗರ ಏನು?' ಹೆಂಗಸರ ಪ್ರಶ್ನೆ ಹಾಗೂ ಉಂಟು, ಹೀಗೂ ಉಂಟು. ಒಂದೇ ಒಂದು ಅಕ್ಷರವು ಅತ್ತಿತ್ತಾದರೆ, ಮದುವೆ ಚಪ್ಪರದಲ್ಲಿ ಮಗನ ಸಾವು ಆದದ್ದುಂಟು. ಹಿಂದಿನವರು ಮೇಲೋಗರದ ವಿಷಯವಾಗಿ ಪ್ರಶ್ನೆಮಾಡುವಾಗ, ವಿಷ ತಪ್ಪಿ ವಿಷಯ ಸಿಕ್ಕಿದ ಕಥಾಂಶವನ್ನು ಗಮನಿಸಿದ್ದರೆ, ಅವರ ಪ್ರಶ್ನೆಗಳಲ್ಲಿ ಒಂದು ಇಳಿ ಹೆಚ್ಚು, ಒಂದು ಒತ್ತು ಕಡಮೆ ಆಗುತ್ತಿರಲಿಲ್ಲ. 'ಮೇಲೋಗರಕ್ಕೆ ಏನು?' 'ಮೇಲೋಗರ ಏನು?'– ಇವೆರಡರಲ್ಲಿ ಮೊದಲನೆಯದೇ ತಕ್ಕ ರೂಪ, ತಪ್ಪಿಲ್ಲದ ವಾಕ್ಯ, ಉತ್ತರ ಬಯಸುವ ಸರಿಯಾದ ಪ್ರಶ್ನೆ—ಹೀಗೆಂದು ಹೆಣ್ಣು ಹೆಂಗಸಿಗಾದರೂ ತಿಳಿಯುತ್ತಿತ್ತು.

ಪ್ರಶ್ನೆ:– ಮೇಲೋಗರ ಏನು? = ಮೇಲೆ ಅನ್ನ ಏನು (ಮಾಡಿದೆ)? ಇಲ್ಲಿ ಸರಿಯಾದ ಉತ್ತರ ಹೇಳಲಿಕ್ಕೆ ಅವಕಾಶವಿಲ್ಲ, ಏಕೆಂದರೆ ಪ್ರಶ್ನೆಯಲ್ಲಿ ತಪ್ಪುಂಟು.

ಪ್ರಶ್ನೆ:– ಮೇಲೋಗರಕ್ಕೆ ಏನು? ಮೇಲೆ ಅನ್ನಕ್ಕೆ ಏನು (ಮಾಡಿದೆ)?

ಉತ್ತರ:– ಗೊಡ್ಡುಸಾರು, ಬೇಳೆ ತೊವ್ವೆ, 'ಪುಳಿಕೊದ್ದೆಲು' (ತು), 'ಮೋರು ಕೊಟಿಂಬು' (ತ), 'ತೋರಿಂ ಗಶ್ಶಿ' (ಕೊಂ), 'ತಾಕ್ಕಾ ಕಡಿ' (ಕೊಂ) ಇತ್ಯಾದಿ.

ಹೀಗೆ ಗೊಡ್ಡುಸಾರು ಮುಂತಾದ ಪದಾರ್ಥಗಳನ್ನು ಹೇಳಬಹುದು; ಅವುಗಳ ಬದಲು ಇಲ್ಲವೆ ಅವುಗಳ ಜತೆಯಲ್ಲಿ -ಸಾರು ಮತ್ತು ಬದನೆಕಾಯಿ ಸುಟ್ಟದ್ದು, ಬಾಳೆಕಾಯಿ ಬೇಯಿಸಿದ್ದು, ಹರಿವೆ ಸೊಪ್ಪು ಅಟ್ಟದ್ದು, ಹೀಗೆ ಪಲ್ಲೆಕಾಯಿಯಲ್ಲಿ ಯಾವುದಾದರೂ ಒಂದು ಅಡಿಗೆ ಮಾಡಿದ್ದನ್ನು ಜೋಡಿಸಿ, ಒಂದು ಪದಾರ್ಥ ಒಂದು ಪಲ್ಲೆ, ಹೀಗೆ ಎರಡೂ ಹೇಳಿದರೂ ಉತ್ತರವು ಸರಿಯಾಗುತ್ತದೆ. ಓಗರ ಎಂದರೆ ಅನ್ನವೆಂದು ಗೊತ್ತಿದ್ದವರು ಮೇಲೋಗರ ಏನು (ಮಾಡಿದೆ) ಎಂಬುದಾಗಿ

ಎಂದೂ ಕೇಳರು; ಮೇಲೋಗರಕ್ಕೆ ಏನು(ಮಾಡಿದೆ)? ಎಂದು ಕೇಳುತ್ತಿದ್ದರು. ಅರಸನೂ ಗಿಳಿಯೂ ಎಂಬ ಕಥೆಯಲ್ಲಿ ಗಿಳಿ 'ಅದಕ್ಕೇನು ಸಂದೇಹ?' ಎಂದು ಮಾತನಾಡದೆ, 'ಅದೇನು ಸಂದೇಹ?' ಎಂದು ನುಡಿದಿದ್ದರೆ ಕಥೆಯ ಸ್ವಾರಸ್ಯವು ಕೆಟ್ಟು ಹೋಗುತ್ತಿತ್ತು. ಇದರಂತೆ 'ಮೇಲೋಗರಕ್ಕೆ' ಎಂಬಲ್ಲಿಯ 'ಕ್ಕೆ' ತಪ್ಪಿಸಿ, 'ಮೇಲೋಗರ ಏನು' ಎಂದು ಕೇಳಿದರೆ ಆಭಾಸ ವಾಗುವುದು. 'ಮೇಲೋಗರಕ್ಕೆ ಏನು?' ಇದು ಸಾರ್ಥಕ; 'ಮೇಲೋಗರ ಏನು?' ಇದು ಅನರ್ಥ. ಮೂಲದಲ್ಲಿ ಮೇಲೋಗರ ಎಂದರೆ ಅನ್ನ, ಅದರೊಂದಿಗೆ ತಿನ್ನತಕ್ಕ ಪದಾರ್ಥವಲ್ಲ--ಈ ಅಂಶವನ್ನು ತಿಳಿಯದವರೂ ತಿಳಿದು ಮರೆತವರೂ ಮೇಲೋಗರಕ್ಕೆ ಅನರ್ಥಮಾಡಿ, ಅನ್ನಬಾರದಂತೆ ಮಾಡಿ, ಅಡಿಗೆಮಾಡಿ ಅದನ್ನು ಪಲ್ಲೆ ಪದಾರ್ಥಗಳ ಮೂಲೆಗೊತ್ತಿ ಕೂರಿಸಿಬಿಟ್ಟ ಏಕಾಭಿಪ್ರಾಯಕ್ಕೆ ನಮ್ಮ ಜಿಲ್ಲೆಯಲ್ಲಿ ತುಳು ಕೊಂಕಣಿಗಳೊಡನೆ ಕನ್ನಡಕ್ಕಿದ್ದ ಹೊಕ್ಕು ಬಳಕೆ ಬಹಳ ಮಟ್ಟಿಗೆ ಕಾರಣವಾಗಿರ ಬೇಕು.

ಪಲ್ಲೆ ಪದಾರ್ಥಗಳಿಗೆ ಒಂದೇ ಅರ್ಥ ಬಂದಿದೆ ಎಂದು ಹಿಂದೆ ಹೇಳಿದ್ದಾಯಿತು; ಆ ಎರಡು ಶಬ್ದಗಳಿಗೆ ಕೊಂಕಣಿಯಲ್ಲಿ ಒಂದೇ ಮಾತು—'ರಾಂದಯಿ', ತುಳುವಿನಲ್ಲಿಯೂ ಒಂದೇ ಮಾತು—'ಕಜಿಪು'. ಈ 'ರಾಂದಯಿ, ಕಜಿಪು'ಗಳಿಗೆ ಮೂಲದಲ್ಲಿ—ಅಡಿಗೆಮಾಡಿದ್ದು, ಕರ್ರಗೆ ಕಾಯಿಸಿದ್ದು ಎಂಬ ಅಭಿಪ್ರಾಯ, ಅನ್ನನೆಂಬ ಅರ್ಥವಿಲ್ಲ. ಆದುದರಿಂದ ಪದಾರ್ಥಕ್ಕೆ ಏನು? ಪದಾರ್ಥ ಏನು? ಪಲ್ಲೆಗೆ ಏನು? ಪಲ್ಲೆ ಏನು? ಎಂಬೀ ವಾಕ್ಯಗಳು 'ರಾಂದಯಿಯುವರಿಗೂ ಕಜಿಪಿನವರಿಗೂ' ತಮ್ಮ ತಮ್ಮ ಸ್ವಭಾಷೆಯ ಪ್ರಶ್ನೆಗಳ ಅನುವಾದಗಳಂತೆ ತೋರಿಬಂದವು. ಇದೇ ಪ್ರಯೋಗವನ್ನು ಮುಂದೆ ಮೇಲೋಗರ ಶಬ್ದದಲ್ಲಿ ನಡಿಸಿ, 'ಮೇಲೋಗರಕ್ಕೆ ಏನು?' ಎಂಬುದನ್ನು 'ಮೇಲೋಗರ ಏನು?' ಎಂದು ಸಂಕೋಚ ಮಾಡುವುದಕ್ಕೆ ಅವಕಾಶವಾಯಿತು. ಓಗರವೆಂದರೆ ಅನ್ನವೆಂದು ಗೊತ್ತಿಲ್ಲದವರಿಗೆ ಅಥವಾ ಗೊತ್ತಿದ್ದು ಅದನ್ನು ಮರೆತವರಿಗೆ 'ಮೇಲೋಗರ ಏನು?' ಎಂಬ ಪ್ರಶ್ನೆಯಲ್ಲಿ ಅರ್ಥಕ್ಕೆ ತೊಡಕಿಲ್ಲದಿದ್ದರೂ ಮಾತು ಹೊಂದಿಕೆಯಾಗುವುದಿಲ್ಲ ಎಂಬಂಶವು ಬಗೆಹರಿಯದಾಯಿತು. ಈರೀತಿ ಮೇಲೋಗರದ ಅನ್ನಮಯ ಕೋಶವು ಕ್ರಮೇಣ ಹೋಗಿಬಿಟ್ಟು ಪದಾರ್ಥಭಾವಕ್ಕೆ ಬಂದುನಿಂತಿತು. ಈಗ ಪಲ್ಲೆ, ಪದಾರ್ಥ, ಮೇಲೋಗರ ಇವೆಲ್ಲಾ ಹಿಟ್ಟು ಬೂದಿ ಒಂದೇಯಾದಂತೆ ಏಕಾರ್ಥವಾಗಿವೆ. ಹಾಗಾದರೆ ಅವನ್ನು ಹೇಳತಕ್ಕ ಕನ್ನಡ ನುಡಿ ಇಲ್ಲವೇ?

'ಕೊಂಕಣಿಯ 'ರಾಂದಯಿ'ಮತ್ತು ತುಳುವಿನ 'ಕಜಿಪು' -ಈ ಮಾತುಗಳಂತೆ ಸಮಗ್ರವಾಗಿ ಹೇಳತಕ್ಕ ಅಚ್ಚಕನ್ನಡ ಮಾತು ಒಂದು ಕಾಲದಲ್ಲಿ ಇದ್ದಿರಬಹುದು; ಈಗ ಇಲ್ಲ. ಕೊಂಕಣಿ 'ರಾಂದಯಿ' 'ರಾಂದಣೆ' 'ರಾಂದೊ' 'ರಾಂದಪ' 'ರಾಂಧ್ರಿ'-ಇವೆಲ್ಲಾ 'ರಾನ್ಧ್' ಎಂದರೆ ಅಡಿಗೆಮಾಡುವುದೆಂಬ ಬೇರಿನ ಕವಲುಗಳು. ಕನ್ನಡದಲ್ಲಿ "ಕರಿ" ಎಂದರೆ ಕರ್ರಗೆ ಎಂದು ಮೂಲಾರ್ಥ, ಕರ್ರಗಾಗುವಂತೆ ಕಾಯಿಸುವುದು, ಕರಿಯುವುದು, ತಾಳಿಸುವುದು, ಎಂಬವು ಮತ್ತೆ ಬಂದ ಅಭಿಪ್ರಾಯ. ಬೆಂದು ಕರ್ರಗಾಗುವುದೇ 'ಕರ್ಪುಂಚೆ' (ಕೊಂ); ಕರ್‌ಂಚುನಿ (ತು); ಸುಟ್ಟ ಮಸಿಯೇ ಕರಿ (ತು, ಕ, ಕೊಂ); ಬೆಂದಮೇಲೆ ಅಡಿಗೆ ನಿಲ್ಲುವುದೇ ಕರಕು(ಕ), ಕರ್‌ಪಟ್ಲ (ಕೊಂ); ಕರಣದ ಮುಸುರೆ ಕರಕಟೆ (ಕೊಂ) ಕಪ್ಪಾಗುವಂತೆ ಕರಿದದ್ದೇ 'ಕಜಿಪು' (ತು). 'ಕಜಿಪು' ಈ ದಾರಿಯ ಮೇಲೆ ಬಂತೋ? ಬೇಯಿಸಿದ ತರಕಾರಿ ಎಂಬರ್ಥವುಳ್ಳ 'ಕೊರು'(ತೆ), ಕಱಿ(ತೆ.ತ), ಉಪ್‌ಕರಿ(ಕೊಂ) ಎಂಬೀಶಬ್ದಗಳು ಇಳಿದಹಾದಿಯಿಂದ ಇಳಿಯಿತೋ? ವಾಚಕರೇ ನಿಶ್ಚೈಸಬೇಕು. ಇಂಗ್ಲಿಷ್ 'ಕರ್‍ರಿ' ತಮಿಳರ 'ಕಱಿ' ಎಂಬುದು ಗೊತ್ತಾಗಿದೆ. ಆದರೆ ಇಂಗ್ಲಿಷರು ಇಲ್ಲಿಗೆ ಬಂದು ಮೊದಲು ತಿಂದದ್ದು ತಮಿಳು ಕರಿಯನ್ನೋ ತಮಿಳುನಾಡನ್ನೋ ಎಂಬಂಶವು ಈ ವರೆಗೆ ಗೊತ್ತಾಗಿಲ್ಲ. ಈ 'ಕಱಿ' ಎಂಬುದು ಬೇಯಿಸಿ ಮಾಡಿದ ಕಾಯಿಪಲ್ಲೆ ಆಗಬಹುದು, ಇಲ್ಲವೇ ಅಟ್ಟುಮಾಡಿದ ಮಾಂಸವೂ ಆಗಬಹುದು. ಕಱಿಯ ಆ ಭಾವಾರ್ಥವನ್ನು 'ಕಜಿಪು' 'ರಾಂದಯಿ'ಗಳು ಒಂದೊಂದು ಸಲ ಹೇಳುವುದು ಈಗಲೂ ರೂಢಿಯಲ್ಲಿದೆ. ಕನ್ನಡದಲ್ಲಿ ಅಡಗು ಎಂಬದಕ್ಕೆ ಈಗ ಹಸಿ ಮಾಂಸವೆಂಬ ಅರ್ಥ; ಆದರೆ ಅದರ ಅಡಿಯಲ್ಲಿ 'ಅಡು' ಎಂಬದಿದೆ. ಇಷ್ಟರಿಂದ ಅಡಗು ಸಹ ಕಱಿ, ಕಜಿಪು, ರಾಂದಯಿಗಳಂತೆ ಅಡಿಗೆಮಾಡಿದ ಮಾಂಸವನ್ನು ಕುರಿತದ್ದೆಂದು ಹೇಳುವುದಕ್ಕೆ ಆಧಾರ ಸಾಕೇ? ಇದೇ 'ಅಡು' ಹಿಡಿದುಕೊಂಡು, ತುಳು ತನಗೆ ಪ್ರಿಯವಾದ ಅಡ್ಯೆ (ಅದ್ಯ) (ಭೋಜ್ಯ) ಮಾಡಿದ್ದು ನಿಶ್ಚಯ. 'ಅಡ್ಯೆಗೆ' ಬೇಕಾದ ಕಾಯಿ ಮಾತ್ರ ಕೊಂಕಣಿ ಭಾಷೆಗೆ ಕನ್ನಡದಿಂದ ಬಂದ ಸಂಗತಿ ಹೇಳತಕ್ಕದ್ದಾಗಿದೆ.

ಕನ್ನಡದಲ್ಲಿ ಬದನೆಕಾಯಿ, ಮಾವಿನಕಾಯಿ, ಬೆಂಡೆಕಾಯಿ ಮೊದಲಾದುವನ್ನು ಸಮಗ್ರವಾಗಿ ಹೇಳುವುದಕ್ಕೆ ಪಲ್ಲೆ ಕಾಯಿ ಎಂಬ ಮಾತುಂಟಷ್ಟೆ; ಹೀಗೆ ಸಾಕಲ್ಯಾರ್ಥದಲ್ಲಿ ಬೆಂಡೆ, ಬದನೆ ಮುಂತಾದ್ದನ್ನು ಹೇಳುವುದಕ್ಕೆ ಕೊಂಕಣಿಗೆ ಒಂದೇ ಶಬ್ದವು ಬೇಕಾಯಿತು. ಭಾಷೆ ಗ್ರಂಥಸ್ಥವಾಗದೆ ಮುಖಸ್ಥ ಮಾತ್ರವೇ ಇದ್ದರೆ ಅದರಲ್ಲಿ ಒಂದು ಗುಣವಿದೆ; ಅದು ಬೇಕಾದಾಗ ಹೊರಗಿನ ಶಬ್ದಗಳನ್ನು ತರುತ್ತದೆ, ಹೊಸ ಶಬ್ದಗಳನ್ನು ತಾನೇ ಮಾಡಿಕೊಳ್ಳುತ್ತದೆ. ಕೊಂಕಣಿ ಹಾಗೇ ಮಾಡಿದೆ; ಮಾಡುತ್ತಿದೆ. ಅದು ಕನ್ನಡದ ಹಾಗಲಕಾಯಿ ಕಂಡು, 'ಫಾಗಿಲ' ತಕ್ಕೊಂಡಿತು, 'ಕಾಯಿ' ಬಿಟ್ಟಿತು; ಸೀಗೆ ಕಾಯಿ ಇದನ್ನು 'ಸೀಕಾಯಿ' ಎಂದು ಚಿಕ್ಕದುಮಾಡಿತು; ಅದ

ಕನ್ನಡದ 'ಪಲ್ಲೆಕಾಯೀ' ತನ್ನ 'ರಾಂದಯಿ' ಎಂದು ಭ್ರಮಿಸಿ ಪಲ್ಲೆಕಾಯಿ ಎಂಬ ಕನ್ನಡಮಾತಿಗೆ ತನ್ನದೊಂದು 'ರಾಂದಯಿ ಕಾಯಿ' ನಿರ್ಮಿಸಿದಂಥ ಅಪೂರ್ವ ಸಂಗತಿ ಕನ್ನಡ ಭಾಷಾ ಚರಿತ್ರೆಯಲ್ಲಿ ಇದ್ದಿದ್ದರೆ, ಅದಕ್ಕಾಗಿ ದರ್ಪಣಕಾರನ ಹೊಸ ದೊಂದು ಸೂತ್ರವೋ, ಭಟ್ಟಾಕಳಂಕನ ನವೀನ ಶಾಸನವೋ ಹುಟ್ಟದೆ ಹೋಗುತ್ತಿರಲಿಲ್ಲ. ದನಕರುಗಳನ್ನು ಹೀಗೆ ಸಮಗ್ರ ಹೇಳತಕ್ಕ 'ಗೋಕಾಯಿ' ಎಂಬ ಶಬ್ದವು ಅವ್ಯಾಕರಣ ಕಾಲಾನಂತರ ಕನ್ನಡದಲ್ಲಿ ರೂಢಿಗೆ ಬಂದಿರಬೇಕು. ಮುಸಲ್ಮಾನರು ದನಗಳನ್ನು ತಮ್ಮ ಪಲ್ಲೆಕಾಯಲ್ಲಿ ಸಮಾವೇಶಮಾಡಿ 'ಗೋಕಾಯಿ' ಎಂದು ಒಟ್ಟಾಗಿ ಕರೆದರೇ?

ಕೊಂಕಣಿಯು ಕನ್ನಡದ ಪಲ್ಲೆಕಾಯಿಂದ 'ಕಾಯಿ' ಎತ್ತಿ ತನ್ನದೇ ಒಂದಾದ 'ರಾಂದಯಿ ಕಾಯಿ' ಎಂಬ ಹೊಸ ಶಬ್ದವನ್ನುನಿರ್ಮಿಸಿದ್ದರಿಂದ, ಕನ್ನಡಕ್ಕೆತೊಂದರೆಯಾಗಲಿಲ್ಲ. 'ಪಲ್ಲೆಕಾಯಿ' ಇಲ್ಲವೇ 'ಕಾಯಿಪಲ್ಯ' ಈ ಮಾತುಗಳು ನಮ್ಮಲ್ಲಿ ಇನ್ನೂ ಇವೆ. ಆದರೆ ಕೆಲವೊಂದು ಕಡೆ ಕನ್ನಡದಿಂದ ಕೊಂಕಣಿಗೆ ಹೋದ ಪದ ಪ್ರಯೋಗವು ಹಿಂದಿರುಗಿ ಬರಲೇ ಇಲ್ಲ. ಅಂಥ ಪ್ರಯೋಗವು ಕನ್ನಡಪಲ್ಲಿತ್ತೆಂಬುದಕ್ಕೆ ಹಳೆಗನ್ನಡವೇ ಸಾಕ್ಷಿ. 'ಕೂಡಿಕೊಂಡು'ಎಂಬರ್ಥದಲ್ಲಿ 'ಬೆರಸು' ಎಂಬ ಪ್ರಯೋಗವು ಹಳೆಗನ್ನಡದಲ್ಲಿ ಬೇಕಷ್ಟು ಇದೆಯಷ್ಟೆ.

| ಹಳೆಗನ್ನಡ | ಕೊಂಕಣಿ |
|---|---|
| ಸೇವಕರ ಬೆರಸು | (ಸೇವಕಾಂಚ್ಯಾ ಬರಿಶಿ) |
| ಪಡೆ ಬೆರಸು ನೂಂಕಿದಂ | (ಸೈನ್ಯಾ ಬರಿಶಿ) |

ಹೊಸಗನ್ನಡದಲ್ಲಿ 'ಬೆರಸು', 'ಬದಲು,' 'ಸಮೇತ' 'ಸಂಗಾತ', 'ಒಡನೆ', 'ಜತೆಯಲ್ಲಿ' ಹೀಗೆ ಹಲವು ಶಬ್ದಗಳು ರೂಢಿಯಲ್ಲಿವೆ. ಕೊಂಕಣಿಯಲ್ಲಿ 'ಬರಿಶಿ' ಇಲ್ಲದಿದ್ದರೆ, ಎಷ್ಟು ಮಂದಿ ಹೆಂಗಸರು ಬಾಯಿಗೆ ಬೀಗ ಹಾಕಬೇಕಾಗಿತ್ತೋ, ಯಾರುಬಲ್ಲರು?

ಇನ್ನು ಕನ್ನಡವು ಕೊಂಕಣಿಯ ಬಾಯಿಗೆ ಎಷ್ಟು ಬಗೆಯ ಭಕ್ಷ್ಯಾದಿಗಳನ್ನು ಕೊಟ್ಟುಬಿಟ್ಟಿದೆ ಎಂಬುದನ್ನು ಕೆಳಗಣ ಪಟ್ಟಿಯಲ್ಲಿ ನೋಡಿ; ಈ ಪಟ್ಟಿಯನ್ನು ವಾಚಕರು ವಿಸ್ತರಿಸುವುದಕ್ಕೂ ನನ್ನ ಅಡ್ಡಿಯಿಲ್ಲ.

ಹೂಳಿ– (ಹುಳಿ ಎಂಬ ಪದಾರ್ಥ) ಕಾಯಿ ಹುಳಿ— (ತೆಂಗಿನಕಾಯಿಹಾಲು ಬೆರಸಿ ಮಾಡಿದ ಹುಳಿ); ತೋರಿ ಬೆಂದಿ - (ಬೆಂದ ತೊಗರಿ ಪಲ್ಲೆ); ತಾಕ್ಕಾ ಕರ್‌ಮಣೆ —(ಮಜ್ಜಿಗೆ ಕಮ್ಮನೆ ಮಾಡಿದ್ದು.)

ಪಚ್ಚಡಿ-(ಸವುತೆ ಮುಂತಾದ್ದನ್ನು ಹೆಚ್ಚಿ ತಯಾರಿಸಿದ್ದು); ಕೊಚ್ಚೊಳಿ, ಕೊಚ್ಚೊಲು–(ಸವುತೆ ಮುಂತಾದ್ದನ್ನು ಕೊಚ್ಚಿ ತಯಾರಿಸಿದ್ದು); ಹಸಿ-(ಬೇಯಿಸದೆ ಮಜ್ಜಿಗೆ ಬೆರಸಿದ ಬಾಳೆದಿಂಡು ಹಸಿ); ಬಾಳಕ (ಬಾಳಿಕೆ ಬರುವಂತೆ ಎಣ್ಣೆಯಲ್ಲಿ ಕರಿದದ್ದು); ಕೂಟ (ಕೂಟು ಎಂಬ ಪಲ್ಲೆ); ಕೊಡ್ಡಳೆ-(ಕೋಡು ಎಂಬದಕ್ಕೆ ಕನ್ನಡದ ಕೊಂಕು); ಉಂಡ್ಲಕಾಳು (ಉಣಲ್ ಕಾಳು); ಮೂವಿನ ಅಂಡುರ್ಲಿ–(ಮಾವಿನ ಹಣ್ ಉಣಲ್)

ಇವೆಲ್ಲಾ ನಮ್ಮ ಹಿರಿಯರು 'ಬುನ್ನಾ ಉದ್ದಾಕ' (ಬೂಂದು ಬೀಜದ ನೀರು)ಕುಡಿದಾಗ ತಿಂದ ವಸ್ತುಗಳು. ನಮ್ಮ ಕಾಲದ ಕಾಫಿಯೊಡನೆ ಕನ್ನಡದಿಂದ ಕೊಂಕಣಿಗೆ ಬಂದದ್ದು 'ತುಪ್ಪ ದೋಸೆ'.

---

೨

'ಪದಾರ್ಥವೇನು' ಎಂಬೀ ಹೆಸರುಳ್ಳ ಒಂದು ಲೇಖವನ್ನು ಕಂಠೀರವದ ಹಿಂದಿನದೊಂದು ಸಂಚಿಕೆಯಲ್ಲಿ ಬರೆದು ವಾಚಕರನ್ನು ಬೀಳ್ಕೊಂಡು ಹೋಗಿದ್ದ ನಾನು ಅದೇ ಹೆಸರನ್ನು ಈ ಲೇಖದ ತಲೆಯ ಮೇಲೆ ಏತಕ್ಕೆ ಇಟ್ಟಿರುತ್ತೇನೆಂಬದು ನನ್ನ ಒಂದನೆಯ ಲೇಖದ ಪರಿಚಯವಿದ್ದವರಿಗೆ ಗೊತ್ತಾಗಬಹುದು. ಕನ್ನಡ ನಾಡಿನ ಅನೇಕ ಶಬ್ದಗಳೂ ರೂಪಗಳೂ ಹಳಗನ್ನಡದಲ್ಲಿದ್ದರೂ ಹೊಸಗನ್ನಡದಲ್ಲಿ ಅದೃಶ್ಯವಾಗಿವೆ. ಆ ಶಬ್ದಗಳಲ್ಲಿ ರುಚಿಯಿದೆ, ಧ್ವನಿಯಿದೆ, ಅರ್ಥಪುಷ್ಟಿ ಇದೆ; ಅವು ಹಿರಿದನ್ನು ಕಿರಿದರಲ್ಲಿ ಹೇಳಬಲ್ಲ ನುಡಿಗಳು, ಮರ್ಯಾದೆಯ ಮಾತುಗಳು, ಒಳಗಿದ್ದುದನ್ನು ಹೊರಹಾಕುವ ತಕ್ಕ ಶಬ್ದಗಳು. ಈ ಅಚ್ಚ ಕನ್ನಡ ಮರಿಗಳನ್ನು ಸಾಯಗೊಡಬಾರದೆಂಬ ಅಭಿಪ್ರಾಯದಿಂದ ಈಗಿನ ಬರೆಹಗಾರರು ಅನೇಕರು ಸಂದರ್ಭಾನುಸಾರವಾಗಿ ಅವನ್ನು ಹಿಡಿದು ತಂದು ಸಾಕುತ್ತಿದ್ದಾರೆ. ಶಬ್ದಗಳು ಹಳಗನ್ನಡವಿದ್ದರೂ ಬರೆವಣಿಗೆಯಲ್ಲಿ ಆವಶ್ಯಕವಾದರೆ ಇಲ್ಲವೆ ಬಳಕೆಗೆ ಅರ್ಹವಾದರೆ, ಅವನ್ನು ಬದುಕಿಸಲೇ ಬೇಕು. ಭಾಷೆಯನ್ನು ಕಟ್ಟುವುದಕ್ಕಾಗಿ ಹಿರಿಯರು ಬಹುಕಾಲದಿಂದ ಸಾಹಸಪಟ್ಟು ಸಂಗ್ರಹಮಾಡಿ ಸಜ್ಜುಗೊಳಿಸಿದ ಕಲ್ಲುಗಳು ಹೊಸಗನ್ನಡದ ಕಟ್ಟಡದ ಭದ್ರತೆಗೂ ಅಲಂಕಾರಕ್ಕೂ ಅನುವಾದರೆ, ಅವನ್ನು ಇಟ್ಟುಕೊಳ್ಳೋಣ! ಆದರೆ ಹಾಗೆಮಾಡುವ ಮುಂಚೆ ಅಂಥ ಹಳಗನ್ನಡ ಶಬ್ದಗಳನ್ನು ಒಂದೊಂದಾಗಿ ಕೈಯಲ್ಲಿ ಹಿಡಿದುಕೊಂಡು ಚೆನ್ನಾಗಿ ನೋಡಬೇಕು. ಪದಾರ್ಥ ನೋಡದೆ ಬರಿಯ ಶಬ್ದ ಮಾತ್ರ ಕೇಳಿ, ಮಾಡಿದ ಪದಾರ್ಥಸೇವನೆಯು ಬೆಳವಣಿಗೆಗೆ ಹಿತಕರವೆಂದು ಹೇಗೆ ಹೇಳಬಹುದು? ಆದುದರಿಂದ ಆ ಶಬ್ದಗಳ ಪ್ರಯೋಗ ವ್ಯುತ್ಪತ್ತಿಗಳ ವಿಚಾರವನ್ನು ವಾಚಕರ ಮುಂದಿಟ್ಟು, ಕಡೆಯ ತೀರ್ಮಾನವನ್ನು ಅವರೇ ಮಾಡಿಕೊಳ್ಳಲು ನೆರವಾಗಬೇಕೆಂಬ ಆಸೆಯಿಂದ ನಾನು ಈ ಲೇಖಕ್ಕೂ ಇನ್ನು ಮುಂದೆ ಬರತಕ್ಕ ಲೇಖಗಳಿಗೂ 'ಪದಾರ್ಥವೇನು?' ಎಂಬ

ದಾಗಿ ನಾಮಕರಣಮಾಡಲು ವಾಚಕರನ್ನು ಬೀಳ್ಕೊಳ್ಳು ತ್ತೇನೆ. ಈಗ ನೋಡಿ! ಇಲ್ಲಿ ಕಡೆಗೆ ನಿಂತ 'ಬೀಳ್ಕೊಳ್ಳು' ಎಂಬುದು ಇಂಥಾದ್ದೊಂದು ಹಳೆಯ ಶಬ್ದ.

ಬೀಳ್ಕೊಳ್ಳು ಮತ್ತು 'ಬೀಳ್ಕೊಡು'—ಇವು 'ಅನು ಕ್ರಮವಾಗಿ 'ಬೀಡುಕೊಳ್ಳು' ಮತ್ತು 'ಬೀಡುಕೊಡು'ಗಳ ಬೇರೆ ರೂಪಗಳೆನ್ನುವರು; ಇದೇ ಹೇಳಿಕೆ ಹಳಗನ್ನಡ ವ್ಯಾಕ ರಣಗಳಲ್ಲಿಯೂ ಇದೆ. ಆದರೆ ಈ ರೂಪಾಂತರಗಳಲ್ಲಿಯ 'ಬೀಡು' ಶಬ್ದಕ್ಕೆ ಗುಂಪು ಎಂಬ ಅರ್ಥವಲ್ಲ. ಅದು ಸ್ಪಷ್ಟ: ಗುಂಪು, ವಿಸ್ತಾರ, ಎಂಬರ್ಥವುಳ್ಳ 'ಬೀಡು' ಶಬ್ದಕ್ಕೂ ಕನ್ನಡ 'ಬೀಱ' ಶಬ್ದಕ್ಕೂ (ತುಳು, ಬಿರ್ಸ್ಸು, ಕೊಂಕಣಿ, ಬೀರುಂಚೆ) ಸಂಬಂಧವಿರಬಹುದು. ['ಬೀಡುಗೊಂಡಿದ್ದ ಕತ್ತಲೆಯ ಪಾಳೆಯಮೆತ್ತಲೋಡಿದುದೊ!']

ಜೈಮಿನಿ ಭಾರತದ ಮೇಲಿನ ಚರಣದಲ್ಲಿ, 'ಗುಂಪುಕಟ್ಟಿ ದಟ್ಟವಾಗಿದ್ದ ಕತ್ತಲೆ ಎಂದರ್ಥವೋ' 'ಮನೆ ಮಾಡಿಕೊಂ ಡಂತೆ ಇದ್ದ ಕತ್ತಲೆ ಎಂದರ್ಥವೋ' ನೋಡಿಕೊಳ್ಳಿ. ಎರಡ ನೆಯ ಅರ್ಥವಿದ್ದರೆ, ಈ ಬೀಡು ಶಬ್ದಕ್ಕೆ 'ತಂಗುವ ಸ್ಥಳ, ನಿಲ್ಲುವ ಮನೆ' ಎಂದರ್ಥ. ಮನೆ ಎಂಬ ಅರ್ಥವನ್ನೇ ಬೀಳ್ಕೊಳ್ಳು, ಬೀಳ್ಕೊಡುಗಳಲ್ಲಿಯ 'ಬೀಡು' ಶಬ್ದಕ್ಕೂ ಹಚ್ಚು ವರು. ನಮ್ಮ ಜಿಲ್ಲೆಯಲ್ಲಿ ಬಲ್ಲಾಳರ ಮನೆಗೆ ತುಳು ಮಾತಿನ 'ಬೂಡು' ಶಬ್ದವು 'ಬುಡು' ಎಂಬದರಿಂದ ಹೇಗೆ ಬಂದಿರ ಬಹುದೋ ಹಾಗೆಯೇ ಅದೇ ಅರ್ಥವನ್ನು ಸಾಮಾನ್ಯವಾಗಿ ಕೊಡತಕ್ಕ 'ಬೀಡು, ಬೀಡಾರ, ಬೀಡಿಕೆ, ಬಿಡಾರ, ಬಿಡದಿ' ಎಂಬ ಕನ್ನಡನುಡಿಗಳು 'ಬಿಡು' ಎಂಬದರಿಂದ ಹುಟ್ಟಿದುವು ಗಳು. ಹಳಗನ್ನಡದಲ್ಲಿ ಬೀಡುಕೊಳ್ಳು ಇಲ್ಲವೆ ಬೀಳ್ಕೊಳ್ಳು ಎಂದರೆ ಮನೆ ಸೇರು, ಮನೆಗೆ ಹೋಗಲು ಅಪ್ಪಣೆ ಪಡೆ, ಅಪ್ಪಣೆ ಪಡೆದು ಹೊರಟುಹೋಗು ಎಂಬರ್ಥ; ಮತ್ತು ಬೀಳ್ಕೊಡು ಇಲ್ಲವೆ ಬೀಡುಕೊಡು ಎಂಬದಕ್ಕೆ ಮನೆಗೆ ಹೋಗಲು ಅಪ್ಪಣೆಕೊಡು, ಅಪ್ಪಣೆಕೊಟ್ಟು ಕಳುಹಿಸಿಬಿಡು ಎಂಬರ್ಥ. ಇದೇ ಅರ್ಥವನ್ನು ಕಿಟ್ಟೆಲ್ ನಿಘಂಟುವಿನಲ್ಲಿ ಕೊಟ್ಟಿದೆ; ಮತ್ತು ಈ ಭಾವವು ಅವು ಪ್ರಯೋಗವಾದ ಎಡೆ ಗಳಲ್ಲಿ ಸರಿಹೊಂದುತ್ತದೆ. 'ಜನಕನನು **ಬೀಳ್ಕೊಂಡು** ಕೌರವ ಜನಪ ತನ್ನರಮನೆಗೆ' ಹೋಗುವ ಮುಂಚೆ ಧೃತ ರಾಷ್ಟ್ರನಿಗೆ ಹೇಳಿದ ಪದ್ಯದಲ್ಲೀಮಾತು ಬರುವುದು:—

'ಜನಕ! ಸುಖದಲಿ ನಿಮ್ಮ ತಮ್ಮನ
ತನುಜರಲಿ ನೀವ್ ರಾಜ್ಯ ಮಾಡುವು
ದನುಗುಣವಲೇ! **ಬೀಳುಕೊಡುವುದು** ನಮ್ಮ
ನೂರ್ವರನು!॥
ಜನಪರುಂಟೋಲೈಸಿಕೊಂಬವ
ರಿನಗಿದೇ ಖಂಡೆಯದ ಸಿರಿ! ಕರೆ
ಜನನಿಯನು! **ಬೀಳ್ಕೊಂಬೆ**ವಿನ್ನೇನೆನುತ ನಿಂದಿರ್ದ.' ॥

ಬೀಡು ಶಬ್ದದಿಂದ ಬೀಳ್ಕೊಳ್ಳು ಬೀಳ್ಕೊಡುಗಳನ್ನು ಕಟ್ಟಿರ ಬಹುದೆಂದು ಗ್ರಹಿಸುವುದಕ್ಕೆ ವ್ಯಾಕರಣಸೂತ್ರದ ಬಲವೂ, ಕವಿ ಪ್ರಯೋಗದ ಆಧಾರವೂ ಬೇಕಾದಷ್ಟಿದ್ದರೂ, ಅವುಗಳೊ ಳಗಿನ 'ಬೀಡು' ಶಬ್ದಕ್ಕೆ 'ಮನೆ' ಎಂದರ್ಥ ಮಾಡುವುದು ಮಾತ್ರ ನನ್ನ ಮನಸ್ಸಿಗೆ ಮೊದಲು ಸಮಾಧಾನವಿರಲಿಲ್ಲ. ಹಿಂದಕ್ಕೆ ಸೀತೆಯಮೇಲೆ ರಜಕನು ಹೊರಿಸಿದ ಅಪವಾದವು ರಾಮಚಂದ್ರನ ಮನಸ್ಸನ್ನು ಕದಡಿಸಿದಂತೆ, ಆ ಬೀಡು ಶಬ್ದದ ಮೇಲಣ ಅರ್ಥಸಂದೇಹವು ನನ್ನ ತಲೆಯೊಳಕ್ಕೆ ಆಗಾಗ ಸುಳಿಯುತ್ತಲೇ ಇತ್ತು. ಇದು ನನ್ನದೊಂದು ಪ್ರಯಾಣದಲ್ಲಿ ಬಸ್ಸಿನವರ ಮಾತುಕತೆ ಕಿವಿಗೆ ಬಿದ್ದು ಸ್ವಲ್ಪ ನಿವೃತ್ತಿ ಯಾಯಿತು.

ಮಧ್ಯಾಹ್ನದ ಬಸ್ಸು ಮಂಗಳೂರಿಂದ ಮೈಸೂರಿಗೆ ಹೊರಡುವುದಕ್ಕೆ ಸಿದ್ಧವಾಗಿ ನಿಂತಿತ್ತು. ಪ್ರಯಾಣಿಕರಲ್ಲಿ ನನ್ನ ಕಣ್ಣಿಗೆ ಬಿದ್ದವರು ನನ್ನ ಹಿಂದುಗಡೆಯ ಮೂವರು ಮಾತ್ರ; ಒಂದು ಪ್ರಾಯದ ಹೆಣ್ಣು, ಇಬ್ಬರು ಗಂಡಸರು. ಗಂಡಸರಲ್ಲಿ ಒಬ್ಬನು ಆಕೆಯ ಎಡಕ್ಕೆ ಕೂತವನು ಆಕೆಯ ಗಂಡ, ಆಕೆಯೊಂದಿಗೆ ಹುಣಸೂರಿಗೆ ಹೋಗತಕ್ಕ ಕನ್ನಡ ಅರಿಯದ ತುಳು ಅಡಿಗೆ ಮಾಣಿ. ಮತ್ತೊಬ್ಬನು ಉತ್ತರ ಕನ್ನಡ ಜಿಲ್ಲೆಯಿಂದ ಯಾತ್ರೆಗೆ ಹೊರಟಿದ್ದ—ತುಳು ಅರಿಯದ, ಅಷ್ಟು ಹಳಬನಲ್ಲದ, ನಾಡವ ಜಾತಿಯ ಮಾತಾಳಿ. ಈತನು ಮಾಣಿ ಸ್ಟೇಶನಿನಲ್ಲಿ ಇಳಿದು, ಬುಡೋಳಿಗೆ ಹೋಗಿ, ಅಲ್ಲಿಂದ ಸುಬ್ರಹ್ಮಣ್ಯಕ್ಕೆ ಹೋಗತಕ್ಕ ಯಾತ್ರಿಕನು; ಆಕೆಯ ಗಂಡನ ಎಡಪಕ್ಕದಲ್ಲಿ ಕೂತಿದ್ದನು. ಹುಡುಗಿಯು ಮುಂದುಗಡೆ ಡ್ರಾಯ್ವರ್ ಬಂದು ಕುಳಿತುಕೊಳ್ಳುವುದಕ್ಕೆ ಹೊತ್ತು ಹೋಗ ಲಿಲ್ಲ. ಪ್ರಯಾಣಿಕರ ತಲೆಗಳ ಎಣಿಕೆ ಆಯಿತು; ಟಿಕೇಟ್ ಪಟ್ಟಿ ಕೊಟ್ಟದ್ದಾಯಿತು; ಕೈಕೊಂಬಿನ ಭುಂಕಾರವಾಯಿತು; ಚಿರ್‌ಕಿರ್ರೆಂದು ಬಸ್ಸು ತಿರುತಿರುಗಿ ರಸ್ತೆಗೆ ಹರಿಯಿತು. ಅಷ್ಟರಲ್ಲಿ ನಾಡವ ಯಾತ್ರಿಕನು ಡ್ರಾಯ್ವರನ ಹತ್ತಿರ ಏನೋ ಏನೋ ಹೇಳಿದನು. ಆ ಮಾತುಗಳಲ್ಲಿ 'ಮಾಣಿ ಬುಡೋಳಿ' ಎಂದು ಮಾತ್ರ ಕೇಳಿಸಿತು. ಉಳಿದ ಮಾತುಗಳು ಚೀರುವ ಬಸ್ಸಿನ ಚೀತ್ಕಾರದಲ್ಲಿ ಲಯವಾಗಿ ಹೋದುವು. ಬಸ್ಸು ಬಿಟ್ಟಿತು. ಅನಂತರ ಆ ನಾಡವನು ತನ್ನ ಇಕ್ಕಡೆಗಳಲ್ಲಿದ್ದ ದಂಪತಿಗಳನ್ನು ನೋಡಿ, ಸಂಚಿ ಬಿಚ್ಚಿ, ಅಡಕೆ ಕೊಯ್ದು, ವೀಳ್ಯ ತಯಾರಿಸಿ, 'ಎಲೆ ಉಂಟು; ವೀಳ್ಯ ಹಾಕುತ್ತೀರೋ?' ಎಂದು ಹುಡುಗಿಯ ಯಜಮಾನನ ಹತ್ತಿರ ಮಾತಿಗೆ ಮೊದಲು ಮಾಡಿದನು. ಆದರೆ ಯಾತ್ರಿಕನ ಕೈಯುಪಚಾರಕ್ಕೆ ಬ್ರಾಹ್ಮ ಣನ ತಲೆಯಲ್ಲಾಟವೇ ನಿರಾಕರಣೆಯ ಉತ್ತರವಾಯಿತು.

ನಾಡವನು ವಿನೋದದ ಬಾಯಿಂದ 'ಪ್ರಾಯದ

ಹೆಂಡತಿ ಮಗ್ಗುಲಲ್ಲಿದ್ದು ವೀಳ್ಯಾಮೃತ ಬೇಡ ಅನ್ನಬಹುದೇನಯ್ಯಾ?' ಎಂದು ಸ್ವಲ್ಪ ಮುಂದುವರಿದನು.

ಅದಕ್ಕೆ ತುಳುವಂಭಟ್ಟರು ತಿರಸ್ಕಾರ ಭಾವ ಸೂಚಕವಾದ ಹುಬ್ಬನ್ನೆತ್ತಿ 'ಬೊಡ್ಚಿ' ಎನ್ನುತ್ತಾ ತಲೆ ತಿರುಗಿಸಿ ಸುಮ್ಮಗಾದರು.

ಆದರೆ ನಾಡವನ ನಾಲಗೆ ಸುಮ್ಮನಿರದು. 'ತಾಯಿ, ನಿಮ್ಮವರಿಗೆ ನಮ್ಮಂಥ ಗಂಡಸರ ವೀಳ್ಯ ಆಗದಂತೆ. ಹಸಿ ಹಸಿ ಎಲೆ ಇದೆ. ಒಣ ಜಿಬುಳು ಹೋಳು ಇದೆ. ನೀವೇ ಒಂದು ವೀಳ್ಯದ ಮಡಿಕೆ ಮಾಡಿ ಗಂಡನಿಗೆ ತಿನಿಸಿಬಿಡಿ!' ಎಂದು ನಾಡವನು 'ತಮಾಷೆ'ಮಾಡಿ, ಆ ತನ್ನ ಸಂಚಿಯನ್ನು ಹುಡುಗಿಯ ಬಳಿಯಿಟ್ಟು, ಅವಳ ಮುಖವನ್ನೇ ನೋಡಿದನು. ಆದರೆ ಹುಡುಗಿ ಮಾತ್ರ ಮುಖವನ್ನು ತಿರುಗಿಸಿ ಮರುಮಾತಿಲ್ಲದೆ ಮೌನವಾಗಿದ್ದಳು.

ಹುಡುಗಿಯ ಹುಬ್ಬಿನ ಕೊಂಕನ್ನು ಕಂಡು ಕನ್ನಡ ಬಲ್ಲ ನಾಡವನು "ಇದೇನು? ಗಂಡಹೆಂಡಿರಿಗೆ ಖುವೊತ್ತು–ತವೊತ್ತೇ?" ಎಂದು ತನ್ನಷ್ಟಕ್ಕೆಹೇಳಿದನು.

ಅದುವರೆಗೆ ಮಾತನಾಡದೆ ಕೇಳುತ್ತಲಿದ್ದ ನಾನು 'ಖುವೊತ್ತು–ತವೊತ್ತು ಎಂದರೇನು?' ಎಂದು ಪ್ರಶ್ನೆಮಾಡಿದೆ.

ಆ ಮಾತಿಗೆ ನಾಡವನು 'ನೋಡಿ, ಸ್ವಾಮಿ! ನಮ್ಮಲ್ಲಿ ಗಂಡನ ಮುಖ ಮೂಡಲಾಗೆ ಮತ್ತು ಹೆಂಡತಿ ಮುಖ ಪಡುವಲಾಗೆ,ಹೀಗಾದರೆಖುವೊತ್ತು-ತವೊತ್ತುಎನ್ನುತ್ತಾರೆ'ಎಂದನು.

'ಏತರಿಂದ?' ಎಂದು ನನ್ನ ಪ್ರಶ್ನೆ. ನಾಡವನು 'ಅದೋ? ಹೇಳುತ್ತೇನೆ, ಕೇಳಿ! ಖ ಒತ್ತು ಬರೆಯುವುದು ಹೀಗೆ ಲ ಮತ್ತು ತ ಒತ್ತು ಬರೆಯುವುದು ಹೀಗೆ ೨' ಎಂದು ತನ್ನ ಎಡ ಅಂಗೈಯ ಮೇಲೆ ಬಲಗೈಯ ಬೆರಳನ್ನು ಆಡಿಸಿ, 'ಇಬ್ಬರೊಳಗೆ ಅನ್ಯೋನ್ಯವಿಲ್ಲದಿದ್ದರೆ–. . . . . . '

ಮಾತು ಮುಗಿಯುವಷ್ಟರಲ್ಲಿ ಬಸ್ಸು ಬಂದು ಮುಂದಿನ ಸ್ಟೇಶನಿನಲ್ಲಿ ಬಂದರ್ ಮಾಡಿತು. ಕೂಡಲೆ ಪ್ರಾರಂಭವಾಯಿತು–ಅವಸರಕ್ಕೆ, ಅವ್ಯವಸ್ಥೆಗೆ, ಅಕ್ರಮಕ್ಕೆ. ಇಳಿವ ಏರುವರ ತಿಕ್ಕಾಟ, ಕೊಡುವ ಬೇಡುವವರ ತೊಂದರೆ, ಕೊಳ್ಳುವ ಮಾರುವವರ ತಕರಾರು, ಇವುಗಳ ಬೊಬ್ಬಾಟವಲ್ಲಿ ನಮ್ಮ ನಾಡವನು ಯಾವ ಸ್ಟೇಶನೆಂದು ತಿಳಿಯದೆ ಚಡಪಡಿಸುತ್ತಾ 'ಮಾಣಿ ಬುಡೋಳಿಯೋ?' ಎಂದು ನಿಂತು ಕೇಳುತ್ತಾ, ಕಾಲಡಿಯಲ್ಲಿದ್ದ ತನ್ನ ಗಂಟುಮೂಟೆಗಳನ್ನು ಬಗ್ಗಿ ಹುಡುಕುತ್ತಾ, 'ಮಾಣಿ ಬುಡೋಳಿಯೋ?' ಎಂದು ಕೂಗಿ ಕೂಗಿ ವಿಚಾರಿಸುತ್ತಾನೆ. ಆದರೆ ಮಾತು ಯಾರಿಗೆ ಕೇಳುತ್ತದೆ? ಹೀಗಾಗಿ ಆತನು ಉಪಾಯವಿಲ್ಲದೆ ಹುಡುಗಿಯ ಗಂಡನ ಮೋರೆ ಎದುರು ತನ್ನ ಮೋರೆ ಮಾಡಿ, 'ಮಾಣಿ ಬುಡೋಳಿಯೋ?' ಎಂದು ಒದರಿ ಕೇಳಿದನು.

ಅಷ್ಟಕ್ಕೆ ಹುಡುಗಿಯ ಗಂಡನಿಗೆ ರೇಗಿತು. ಆತನು ಬಾಯಿಗೆ ಬಂದಂತೆ ಬಯಿದುಬಿಟ್ಟನು. ಇಬ್ಬರಿಗೂ ಹತ್ತಿತ್ತೈ ಜಗಳ! ಜಗಳ ನೋಡಲು ಬಂತೈ ಜನ! ಜನರನ್ನು ಕಂಡು ಬೆಪ್ಪಾದ ನಾಡವ! ಕಕ್ಷಿಗೆ ಪ್ರಾರಂಭವಾಯಿತು. ಹುಡುಗಿಯ ಗಂಡನ ತುಳುಮಾತಿನ ಹೇಳಿಕೆಯಲ್ಲಿ (ಬೈಗಳನ್ನು ಬಿಟ್ಟರೆ) ಮುಖ್ಯಾಂಶ ಇಷ್ಟೆ–'ನಾನು ನನ್ನ ಹೆಂಡತಿಯನ್ನು ಬಿಟ್ಟದ್ದು ಹೌದು. ಆದರೆ ಮಾಣಿ ಬುಡೋಳಿ ಸುದ್ದಿ ಇವನಿಗೆ ಯಾಕೆ? ತವರಲ್ಲಿ ಬಿಟ್ಟವಳನ್ನು ತರಬಾರದೆಂದು ಉಂಟೇ? 'ಮಾಣಿ ಬುಡೋಳಿಯೋ!' ನನ್ನ ಹೆಂಡತಿಯನ್ನು ನಾನು ಬಿಟ್ಟಿದ್ದರೆ ಇವನಿಗೆ ಹಿಡಿದ ಚಳಿಜ್ವರವೇನು? ವೀಳ್ಯದೆಲೆ ಕೊಡಲಿಕ್ಕೆ ಬರುತ್ತಾನೆ ಇವ! ವೀಳ್ಯ ಇವನ ಮನೆಯವಳಿಗೆ ಕೊಡಲಿ. ಮಾಣಿ, ಮಾಣಿ– ಎಂದು ಕರೆಯಲಿಕ್ಕೆ ಇವನ ಮನೆ ಮುಸುರೆ ತೊಳೆಯುವುದಕ್ಕೆ ನಾನು ನಿಲ್ಲಲಿಲ್ಲ! ಮಾಣಿ ಬುಡೋಳಿಯೋ? (ಹುಡುಗನು ಬಿಟ್ಟುಬಿಡಬಹುದೋ ಎಂದು ತುಳು ಮಾತಿನ ಅರ್ಥ. ಮಾಣಿ, ಬುಡೋಳಿ ಎಂಬವು ಎರಡು ಹಳ್ಳಿಗಳ ಹೆಸರು.) ನಾನು ಹೆಣ್ಣನ್ನು ಬಿಟ್ಟ ಸಂಗತಿ ಇವನಿಗೆ ಯಾಕದು? ನಾನು ಬಿಡುತ್ತೇನೆ ಇಲ್ಲವೆ . . . . '

ಮಾತು ಮುಗಿಯುವಷ್ಟರಲ್ಲಿ 'ಬಿಡಾ, ಬಿಡಾ, ಬಿಡಾ' ಎಂದು ವೀಳ್ಯದ ಬೀಡಾ ಮಾರುವವನ ಸ್ವರ ಬಂತು. 'ಬಿಡಿ, ಬಿಡಿ, ಬಿಡಿ' ಎಂದು ಸೊಪ್ಪಿನ ಬತ್ತಿ ಮಾರುವವನ ಕೂಗು ಬಂತು. ಆ ಮೇಲೆ ವ್ಯಾಜ್ಯದ ಸಂಗತಿ ಕೇಳಿದವರೆಲ್ಲರೂ 'ಬಿಡಿ–ಬಿಡಾ, ಬಿಡಿ–ಬಿಡಾ' ಎಂಬ ಪಲ್ಲವಿ ಹಿಡಿದು ಕೂಗಿದರು. ಮಾಣಿ ಸ್ಟೇಶನಿನಲ್ಲಿ ಇಳಿದು ಬುಡೋಳಿಗೆ ಹೋಗತಕ್ಕವನು 'ಮಾಣಿ, ಬುಡೋಳಿಯೋ' ಎಂದು ಆಗಾಗ ವಿಚಾರಿಸಿದುದರಲ್ಲಿ ಮಾನನಷ್ಟದ ಹೇತುವಿಲ್ಲೆಂದು ಪ್ರತಿವಾದಿಗೆ ಮನಗಾಣಿಸಿದ ನಂತರ, ಬಸ್ಸು ಪಾಣೆಮಂಗಳೂರಿಂದ ಮುಂದಕ್ಕೆ ಹೊರಟಿತು. ಇಬ್ಬರೊಳಗೆ ರಾಜಿಯಾಗಿ, ಪರಸ್ಪರ ವೀಳ್ಯಕೊಂಡು, ವೀಳ್ಯಕೊಟ್ಟು, ಮಾಣಿಯಲ್ಲಿ ಇಬ್ಬರೂ ಸ್ನೇಹಭಾವದಿಂದ ಅಗಲುವವರಾದರು.

ಈ ಸಂಗತಿಗೂ ಬೀಳ್ಕೊಳ್ಳು ಶಬ್ದಕ್ಕೂ ಸಂಬಂಧವೇನೆಂದು ವಾಚಕರು ಯೋಚಿಸಿರಬಹುದು. ಮಾಣಿ ಬುಡೋಳಿಯ ಸಂದರ್ಭದಲ್ಲಿ ನನ್ನ ಕಣ್ಣಿನ ಮುಂದೆ ಆದ ವೀಳ್ಯದ ಶಾಸ್ತ್ರದಿಂದ ನನ್ನ ಮನಸ್ಸಿನಲ್ಲಿ ಒಂದು ಅನುಮಾನ ಬಂತು– "ವೀಳ್ಯಕೊಳ್ಳುಎಂಬುದೇ ಬೀಳ್ಕೊಳು ಮತ್ತು'ವೀಳ್ಯಕೊಡು' ಎಂಬುದು ಬೀಳ್ಕೊಡು" ಹೀಗೇತಕ್ಕೆ ಗ್ರಹಿಸಬಾರದು? ಈ ಶಬ್ದಗಳು ನಮ್ಮಲ್ಲಿ ಮನೆಗೆ ಹೋಗುವ ಬರುವವರು ವೀಳ್ಯವನ್ನು ಕೊಡುವ ಕೊಳ್ಳುವ ಪದ್ಧತಿಯಿಂದ ಹೊರಟವು ಎಂಬುದನ್ನು ತಿಳಿಯದೆ, ಅವು ಬಂದ ಹಾದಿಯನ್ನು ಮರೆತು ಬಿಟ್ಟು, ಈಗ ಅವುಗಳ ಅರ್ಥವನ್ನು ಮುಟ್ಟುವುದಕ್ಕೆ ನಾವು

'ಬೀಡು' ದಾಟಿ, ಸುತ್ತು ದಾರಿಯ ಮೇಲೆ ಏತಕ್ಕೆ ಹೋಗ ಬೇಕು? ಬೀಡು ಕೊಡು,ಬೀಳ್ಕೊಳ್ಳು-ಇಲ್ಲಿ'ಬೀಡು 'ವೀಳ್' ಇವು ವೀಳ್ಯ ಶಬ್ದದ ಬೇರೆ ರೂಪಗಳು; ಬೇಕಾದರೆ ಆ ಶಬ್ದದ ಇತರ ರೂಪಗಳನ್ನು ಬೇರೆ ಭಾಷೆಗಳಲ್ಲಿ ನೋಡಿ!

ವೀಳ್ಯ (ಕ), ಬುಳ್ಯ (ತು), ವೀಡೊ (ಕೊಂ), ವೀಡೆ (ತೆ) ಬೀಡಾ (ಹಿಂದಿ), ಬೆತ್ತಿಲ (ಮ), ವೀಟಿ (ಸಂ), ವೀಡಿ (ಕೊಂ), ಬೀಡಿ (ತು; ಕೊಂ; ಕ).

ಕನ್ನಡದ 'ಬೀಳ್ಕೊಡು' ಎಂಬುದು ತುಳುವಿನ 'ಬೂಳ್ಕೊ ಕೊರು,' ಕೊಂಕಣಿಯ 'ವೀಡೊ ದೀ,' ಮತ್ತು ಹಿಂದಿಯ 'ಬೀಡಾ ದೇನಾ' ಎಂಬೀ ಮಾತುಗಳ ಸರಿ ಅನುವಾದ. ಆದರೆ ಈ ಮಾತುಗಳಲ್ಲಿ ಪೂರ್ವಪದಕ್ಕೆ ವೀಳ್ಯವೆಂಬರ್ಥ; ಮನೆಯೆಂದಲ್ಲ. ಬೀಳ್ ಕೊಳ್ಳು ಬೀಡುಕೊಡು ಗಳಲ್ಲಿಯ ಬೀಳ್—ಬೀಡು ಎಂದರೆ ವೀಳ್ಯವೆಂದು ಅರ್ಥ ಮಾಡಿದರೆ ತಪ್ಪಾಗಲಾರದಷ್ಟೆ.

ವೀಳ್ಯ (ಕ), ಬುಳ್ಯ (ತು), ವೀಡೋ (ಕೊಂ)— ಇವು ಸುಣ್ಣ ತೀಡಿ ಅಡಕೆ ಬೆರಸಿ ತಯಾರಿಸಿದ ಪದಾರ್ಥವನ್ನು ಕುರಿತ ಆಯಾ ಭಾಷೆಯ ಶಬ್ದಗಳು; ಬರಿಯ ಎಲೆಯನ್ನು ಕುರಿತವುಗಳಲ್ಲ. ಆದರೆ ಸಂಸ್ಕೃತದಲ್ಲಿ ವೀಟಿ ಎಂದರೆ ಎಲೆಯೆಂದೂ ತಾಂಬೂಲವೆಂದೂ ಅರ್ಥವಾಗುತ್ತದೆ. ತಾಂಬೂಲ ಚರ್ವಣವು ಹಿಂದುಸ್ಥಾನದಲ್ಲಿ ಬಹುಕಾಲದ ಪುರಾತನ ಸಂಪ್ರದಾಯ. ವೀಳ್ಯದಲ್ಲಿ? ಜಗಿದರೆ ಕೆಂಪಗೆ ತಾಮ್ಬೂಲವಾಗುವುದನ್ನೂ, ತಾಂಬೂಲದಲ್ಲಿ ಎಲೆ ಹಾವು ಇದ್ದರೆ ನಾಗವಲ್ಲಿಯಾಗಿ ವಿಷಕರವಾಗುವುದನ್ನೂ ಸಂಸ್ಕೃತದವರು ಬಹಳ ಕಾಲದ ಹಿಂದೆಯೇ ಗೊತ್ತುಮಾಡಿಕೊಂಡಿದ್ದರು. ಇಷ್ಟರಿಂದಲೇ ವೀಟಿ ಎಂಬುದು ಶುದ್ಧ ಸಂಸ್ಕೃತ ಪದವೆಂದೂ ಅದೇ ವೀಳ್ಯವಾಗಿ ಕನ್ನಡಕ್ಕೆ ಬಂತೆಂದೂ ತಿಳಿಯಲಾಗದು. ವೀಳ್ಯದ ಬಳ್ಳಿಯ ಆದಿಯು ಮಲಯ ದ್ವೀಪಗಳಂತೆ; ಅಲ್ಲಿಂದ ಅದು ದಕ್ಷಿಣ ಹಿಂದುಸ್ಥಾನಕ್ಕೆ ಹಬ್ಬಿ ಉತ್ತರಕ್ಕೆ ಹರಡಿತಂತೆ. ಆ ದ್ವೀಪದವರ ಮಾತಿನಲ್ಲಿ ವೀಳ್ಯದೆಲೆಗೆ 'ವೆಟ್ಟಿಲ', 'ಬೆಟ್ಟಿಲ' ಎನ್ನುವರಂತೆ. ಈ ಶಬ್ದವೇ ಪೋರ್ಚುಗೀಸ್ ಭಾಷೆಯಲ್ಲಿ'ಬೆರ್ತಿಲ್'ಎಂದಾಗಿ,ಇಂಗ್ಲಿಷಿನಲ್ಲಿ'ಬಿಟಲ್'ಆಯಿತು.ಮಾರ್ಕೊಪೋಲೊ ಎಂಬ ಪ್ರವಾಸಿಕನು ಕ್ರಿಸ್ತಶಕದ ೧೩೦೦ರಲ್ಲಿ ಬರೆದ ಪುಸ್ತಕದಲ್ಲಿ ಹಿಂದುಸ್ಥಾನದ ತಾಂಬೂಲ ಚರ್ವಣವನ್ನು ಅಂದವಾಗಿ ವರ್ಣಿಸಿದ್ದಾನೆ. ಬೀಟಲ್ ಪಾಯ್‌ಪರೆ ಎಂಬದಾಗಿ ವೀಳ್ಯದೆಲೆಗೆ ಯುರೋಪ್‌ಖಂಡದಲ್ಲಿ ಶಾಸ್ತ್ರೋಕ್ತವಾಗಿ ಮಾಡಿರುವ ನಾಮಕರಣದ ಬೀಜಾಕ್ಷರವು ಮಲಯನಿವಾಸಿಗಳ'ಬೆಟ್ಟಿಲ.' ವೀಳ್ಯವು ಕನ್ನಡಕ್ಕೂ ಕೇರಳಕ್ಕೂ ಪರಭಾಷೆಯಿಂದ ಬಂದದ್ದಾದರೆ ವ್ಯಾಪಾರ ವಹಿವಾಟಿನ ದೃಷ್ಟಿಯಿಂದ ಉತ್ತರದ ಸಂಸ್ಕೃತ ಮಾರ್ಗಕ್ಕಿಂತ ದ್ವೀಪದ ಸಮುದ್ರ ಮಾರ್ಗವೇ ಅದಕ್ಕೆ ಸಮೀಪದ ದಾರಿ.

ವೀಳ್ಯದ ಎಲೆಗೆ ಕೊಂಕಣಿಯಲ್ಲಿ 'ಫೊಡಿಪಾನ' ಮತ್ತು ತುಳುವಿನಲ್ಲಿ'ಬಚ್ಚಿರೆ'ಎನ್ನುವರಷ್ಟೆ. ಇವುಗಳಲ್ಲಿ ಒಂದನೆಯದಕ್ಕೆ–ಫೊಡಿ (ಹೋಳು ಮಾಡಿದ್ದು) ಮತ್ತು ಪಾನ (ಎಲೆ); ಅಡಕೆಹೋಳಿನೊಟ್ಟಿಗೆ ಕೊಡುವಎಲೆ ಎಂಬ ಅರ್ಥವು ಸ್ಪಷ್ಟ. ಅಷ್ಟು ಸ್ಪಷ್ಟವು ತುಳುಮಾತಿನ'ಬಚ್ಚಿರೆ' ಅಲ್ಲ. 'ಪಚ್ಚಿರ್' ಎಂದರೆ ತುಳುವಿನಲ್ಲಿ ಹಲಸಿನ ಸೊಳೆ–ಇದು ಬಚ್ಚಿರೆ ಆಗಲಾರದು. 'ಬಚ್ಚಿರೆ'-ಇಲ್ಲಿ 'ಇರೆ' ಎಂಬ ಪರಪದಕ್ಕೆ ಎಲೆ ಎಂಬರ್ಥಮಾಡಿದರೆ, ಪೂರ್ವಪದವಾದ 'ಬಚ್ಚಿ' ಹಾಗೆಯೇ ಅರ್ಥವಿಲ್ಲದೆ ಉಳಿಯುತ್ತದೆ.'ಬಚ್ಚಿರೆ'ಯನ್ನು 'ಬಜ್ಜಾಯ್' (ಅಡಕೆ), ಇರೆ (ಎಲೆ)– ಹೀಗೆ ವಿಂಗಡಿಸಿದರೆ ಕೊಂಕಣಿ ಮಾತಿಗೆ ಹತ್ತಿರವಾಗುತ್ತದೆ, ನಿಜ. ಆದರೆ ಇಲ್ಲಿ ಮತ್ತೊಂದು ಪ್ರಶ್ನೆ ಹುಟ್ಟುತ್ತದೆ. ಅಡಕೆಯನ್ನು ತಮಿಳು 'ಪಾಕ್', ಸಂಸ್ಕೃತ 'ಪೂಗಫಲ', ಕೊಂಕಣಿ 'ಫೊಪ್ಪಳ', ಫಾರಸಿ 'ಫೊಪ್ಪಳ', ಅರಬ್ಬಿ 'ಫೊಫಿಲ್', ಮಲೆಯಾಳ 'ಅಡಕ' ಎಂದು ಕರೆಯುವಾಗ, ತುಳು 'ಬಜ್ಜಾಯ್' ಎಂದು ಏತಕ್ಕೆ ಹೆಸರಿಟ್ಟಿತು? ಅಡಕೆ ಮರವನ್ನು ಹಳೆಗನ್ನಡವು ಕವುಂಗ್ (ಸಂಸ್ಕೃತ–ಕ್ರಮುಕಂ) ಎನ್ನುವಂತೆಯೇ ತುಳುವೂ ಕಂಗ್ ಎಂದು ಕರೆಯುತ್ತದೆ; ಕಾಯಿಗೆ ಮಾತ್ರ 'ಬಜ್ಜಾಯ್' ಎಂಬ ತುಳು ಹೆಸರು ಏತರಿಂದ? ಅಡಕೆ ಮರವು ಗುಡ್ಡದ ಬಜೆ (ಬದಿ) ಯಲ್ಲಿ ಬೆಳೆಯುವುದರಿಂದ 'ಬಜ್ಜಾಯ್' ಆಯಿತಂತೆ–ಇದು ನನಗೆ ಸರ್ವಥಾ ಸಮ್ಮತವಲ್ಲ. ಏಕೆಂದರೆ ಬಜ್ಜಾಯ್ ಮತ್ತು ಇರೆ ಕೂಡಿ ಬಚ್ಚಿರೆ ಆದದ್ದಲ್ಲವೆಂದು ನನಗೆ ಸಮಾಧಾನವಾಗಿದೆ.

'ಹಿಂದುಸ್ಥಾನದ ಸಾಂಪತ್ತಿಕ ಪದಾರ್ಥಗಳ ನಿಘಂಟು' (Dictionary of the Economic prouducts of India by Watt)ಎಂಬ ಇಂಗ್ಲಿಷ್ ಪುಸ್ತಕದಲ್ಲಿ'ಬೆಟ್ಟಿಲ' (ವೀಳ್ಯ)ದ ವಿಷಯವಾಗಿ ಹೀಗೆ ಹೇಳಿದೆ--'ಮಲಯ ದ್ವೀಪವಾಸಿಗಳ ಭಾಷೆಯಲ್ಲಿ 'ಬೆಟ್ಟಿಲ್' ಅಥವಾ 'ಪೆರುಯಿಲ್' ಎಂದರೆ ಬರಿಎಲೆ ಎಂದರ್ಥ; ಅದೇ ಹೆಸರು ವೀಳ್ಯಕ್ಕೂ ಇದೆ. ಬೆರ್ತ್ತಿಲ (ಮ) ಬಚ್ಚಿರೆ (ತು) ಬಹುಶಃ ಎರಿ ಬಲೆ ಎಂಬರ್ಥವುಳ್ಳ ಶಬ್ದಗಳೇ ಇರಬೇಕು. ಬಜಿ (ಬರಿ) ಇರೆ, (ಎಲೆ) ಎಂಬುದೇ 'ಬಜಿಯಿರೆ'ಯಾಗಿ ತುಳು 'ಬಜಿರೆ' 'ಬಚ್ಚಿರೆ' ಬಂದಿದೆಯೆಂದು ನಾನು ಗ್ರಹಿಸಿದ್ದೇನೆ.

ಕೊಂಕಣಿಭಾಷೆಯು ಕನ್ನಡದಲ್ಲಿಯ 'ಪಲ್ಲೆಕಾಯಿ' ಯೊಳಗಣ 'ಕಾಯಿ' ಶಬ್ದವನ್ನು ತೆಗೆದು 'ರಾಂದಯಿ ಕಾಯಿ' ಎಂಬುವನ್ನು ಹೇಗೆ ಒದಗಿಸಿಕೊಂಡಿತೆಂದು ಹಿಂದೆ ಹೇಳಿದೆಯಷ್ಟೆ. ಇದೇ ಕೊಂಕಣಿಯ ತುಳು ಭಾಷೆಯ 'ಬಚ್ಚಿರೆ'

ಮತ್ತು ತನ್ನ 'ಫೋಡಿಪಾನ' ಇವು ಒಂದಕ್ಕೊಂದು ಸರಿಯೆಂದು ಭ್ರಮಿಸಿ, ಏಕಾರ್ಥವುಳ್ಳ ಸಮಾಸಪದಗಳಲ್ಲಿ ಉತ್ತರ ಪದಗಳು ಏಕಾರ್ಥವಾದರೆ, ಪೂರ್ವಪದಗಳು ಸಹಜವಾಗಿ ಏಕಾರ್ಥವನ್ನೇ ಕೊಡಬೇಕೆಂಬ ಒಂದು ಸೂತ್ರವನ್ನು ತಾನೇ ಕಲ್ಪಿಸಿ ತನ್ನಲ್ಲಿಯ ಫೋಡಿಪಾನದಲ್ಲಿ 'ಪಾನ' ಮತ್ತು ಬಚ್ಚಿರಿಯಲ್ಲಿಯ 'ಇರಿ' ಒಂದಕ್ಕೊಂದು ಸರಿಹೋಗಲು, ಉಳಿದ ಫೋಡಿ (ಅಡಕೆಹೋಳು) ಶಬ್ದ ತುಳುವಿನ 'ಬಜ್ಜಾಯ್' ಅರ್ಥವೆಂದು ನೆನಸಿ, ಆ ಬಜ್ಜಾಯ್ ಶಬ್ದವನ್ನೇ ರೂಢಿಗೆ ತಂದು ತುಳುವಿಗೆ ತಿರುಗಿ ಕೊಟ್ಟಿರಲೂ ಬಹುದು. ಇಲ್ಲವೆ ಬರಿಯ ಎಲೆಯೆಂಬದಾಗಿ ಮೊತ್ತಮೊದಲಿನ ಅರ್ಥವುಳ್ಳ 'ಬಚ್ಚಿರಿ'ಯಲ್ಲಿ ಕ್ರಮೇಣ ಅಡಕೆಯೂ ಸಮಾವೇಶವಾಗಿ, ಕೊನೆಗೆ ಬಜ್ಜಾಯ್ ಎಂಬುದು ಪ್ರತ್ಯೇಕವಾಗಿ ನಿಂತುಬಿಟ್ಟಿದ್ದರೂ ಇರಬಹುದು. ತುಳುವಿನಲ್ಲಿ ಬಜ್ಜಾಯ್ ಬಂದದ್ದು ಕೊಂಕಣಿ ಮಾತಿನ ಸೇರುವೆಯಿಂದ ಎಂಬದಾಗಿ ನನ್ನ ಬರಿಯ ಊಹೆ.

*'ಬೀಳ್ಕೊಡು' ವೀಳ್ಯಕೊಡು! ಈ ಒಂದೇ ಶಬ್ದದಿಂದ ನನ್ನ ಮನಸ್ಸಿನಲ್ಲಿ ಮಿಂಚಿನಂತೆ ಮೂಡಿ ಮಾಯವಾಗುವ ಬಗೆ ಬಗೆಯ ಭಾವಗಳನ್ನು ಇಲ್ಲಿ ಬರೆಯುವುದು ಕಷ್ಟ. ವಟುವು ತನ್ನ ಉಪನಯನ ಕಾಲದಲ್ಲಿ ತಾಯಿತಂದೆಗಳಿಗೂ ಗುರುಪುರೋಹಿತರಿಗೂ ಕಾಲಿಗೆರಗಿ ಕೊಡುವ ಕೈವೀಳ್ಯ, ವಿವಾಹದ ವಾಚಾದತ್ತದ ಮೇಲೆ ಬೀಗಂದಿರು ಪರಸ್ಪರ ಕೈವರ್ಶಿಸಿಕೊಳ್ಳುವ ನುಡಿ ವೀಳ್ಯ, ಮುದ್ದಣನ 'ನರುತಂಬುಲದ' ಮನೋರಮೆಯುಂತೆ ತನ್ನ ಗಂಡನ ಬಾಯಿಗೆ ಇರಿಸುವ ಇನಿಹೆಣ್ಣಿನ ಮಡಿಕೆವೀಳ್ಯ,ಕೌರವಾರ್ಜುನರನ್ನು 'ವೀಳೆಯವ ತಾ ಕೊಂಡು'ಸತ್ಕರಿಸಿದ ಕೃಷ್ಣನಂತೆ,ಹಳ್ಳಿಯ ಇತ್ತಂಡಗಳನ್ನು ಒಂದುಗೂಡಿಸಲುಳ್ಳ ಗ್ರಾಮಗೌಡನ ಪಂಚಾಯತಿ ವೀಳ್ಯ, ಹನ್ನೆರಡು ವರ್ಷಕ್ಕೊಮ್ಮೆ ನಡೆಯುವ ನಡಾವಳಿಯ ಉತ್ಸವಕಾಲದಲ್ಲಿ ದೇವರ ಮುಂದೆ ಹಚ್ಚಗಿರಿಸಿದ ವೀಳ್ಯದೆಲೆಯ ಕುರುಜಿನ ಎಲೆಗಳನ್ನು ಧರ್ಮಸ್ಥಳದ ಪ್ರಸಾದವೆಂದು ಕೈಕೊಳ್ಳುವ ಯಾತ್ರಿಕರ ಪ್ರಸಾದವೀಳ್ಯ—ಇಷ್ಟೆಲ್ಲಾ ಚಿತ್ರಗಳು 'ಬೀಳ್ಕೊಡು' ಎಂಬ ಶಬ್ದದಲ್ಲಿ ಅಡಕವಾಗಿ ಉಳಿದಿವೆ. 'ಬೀಳ್ಕೊಡು' ಇದರಂತೆ ಓಲಗಿಸು, ಪಾಯವಧಾರು, ಭಳಿರೆ ಬಂಡಾರಿಸು, ತಪ್ಪಂಗಾಯಿ, ಮೊದಲಾದುವುಗಳಲ್ಲಿ ಪ್ರತಿಯೊಂದು ಹೆಸರುವಾಸಿಪಡೆಯದ ಬಡ ಕವಿಗಳ ತ್ರಿಪದಿ ಕನ್ನಡ ದೇವಿಯ ಪುರಾಣದ ಅಧ್ಯಾಯ, ನಮ್ಮ ಸಂಸ್ಕೃತಿಯ ಶಾಸನಕಲ್ಲು! ಇಂಥವುಗಳನ್ನು ಸುರಕ್ಷಿತಪಡಿಸುವುದು ಕನ್ನಡ ಬರಹಗಾರರ ಮತ್ತು ಮಾತುಗಾರರ ಕರ್ತವ್ಯ.

*These names originally meant 'Piper Betel' leaf, but were subsequently appropriated to the nuts (ibid)

.... ... ....

೩

'ಈ ಪದಾರ್ಥಕ್ಕೆ ಚಿಕ್ಕಾಸೂ ಬೇಡ,' 'ಆ ಮನುಷ್ಯ ಮೂರು ಕಾಸಿನವನು'—ಇಂಥ ವಾಕ್ಯಗಳಲ್ಲಿಯ ಕಾಸು ಶಬ್ದವು ಒಂದು ಪದಾರ್ಥದ ಕ್ಷುಲ್ಲಕತೆಯನ್ನಾಗಲಿ ಒಬ್ಬ ಮನುಷ್ಯನ ಅಯೋಗ್ಯತೆಯನ್ನಾಗಲಿ ತೂಗಿ ನೋಡುವುದಕ್ಕೆ ಇಟ್ಟಿರುವ ಒಂದು ಪ್ರಮಾಣ.ಕನ್ನಡದ ಪುಡಿ ಕಾಸು ಹೇಗೋ ಹಾಗೆಯೇ, ಇಂಗ್ಲಿಷ್ **ಡೆಮ್** ಎಂಬ ನುಡಿಯಿದೆ. 'ಆಯ್ ಕೇರ್ ಎ **ಡೆಮ್** ಫೊರ್ ಹಿಮ್' ಎಂಬ ಇಂಗ್ಲಿಷ್ ವಾಕ್ಯಕ್ಕೆ 'ಆತ ಕಾಸಿಗಿಂತ ಕಡೆ' ಎಂಬ ಅಭಿಪ್ರಾಯವಷ್ಟೆ. ಇಲ್ಲಿಯ ಡೆಮ್ ಶಬ್ದವು ಒಂದು ಕಾಲದಲ್ಲಿ ಹಿಂದುಸ್ಥಾನದಲ್ಲಿದ್ದ **ದಾಮ** ಎಂಬ ನಾಣ್ಯದ ಹೆಸರಿನ ಅಪಭ್ರಂಶವೆಂದು ಕೆಲವರು ಹೇಳಿಕೆ; ಡೆಮ್ ಎಂಬುದು ದಾಮದ ವಿಕೃತಿಯಲ್ಲ, ಅದು ಅರಬಿ ಮಾತಿನ ಬಾದಾಮ ಎಂಬದರ ಒಂದು ತುಂಡು ಎಂದು ಬೇರೆ ಕೆಲವರ ಹೇಳಿಕೆ. ಯಥಾರ್ಥವಾಗಿ ಹೇಳುವುದಾದರೆ, 'ಡೆಮ್ ಎಂಬುದು, ಇಂಗ್ಲಿಷ್ ಭಾಷೆಯಲ್ಲಿ ಈಗ ಇರುವ 'ಕಂಡೆಮ್' ಎಂಬ ಶಬ್ದದ ಮೂಲಪದವು. ಅದು ಹೇಗೂ ಇರಲಿ. ಇದೇ ಅರ್ಥವನ್ನು ಹೇಳುವ ಬೇರೆ ಇಂಗ್ಲಿಷ್ ವಾಕ್ಯಗಳನ್ನು ನೋಡೋಣ! "ಆಯ್ ಕೇರ್ ಎ **ಟಪೆನ್ಸ್** ಫೊರ್ ಹಿಮ್," "ಆಯ್ ಕೇರ್ ಎ **ಫಿಗ್** ಫೊರ್ ಹಿಮ್"—ಈ ವಾಕ್ಯಗಳಲ್ಲಿ ಟಪೆನ್ಸ್ ಎಂದರೆ ಎರಡು ಕಾಸು; ಮತ್ತು ಫಿಗ್ ಎಂದರೆ ಅಂಜೂರದ ಹಣ್ಣು. "ಆತ ಎರಡು ಕಾಸಿಗಿಂತ ಕಡೆ" "ಆತ ಅಂಜೂರಕ್ಕಿಂತ ಕೀಳು" ಎಂಬದೇ ಆ ವಾಕ್ಯಗಳ ಅರ್ಥ. ಹೀಗೆ ಇಂಗ್ಲಿಷಿನ ಟಪೆನ್ಸ್ ನಮ್ಮ "ಮೂರು ಕಾಸಿನ" ಭಾವವನ್ನೇ ಹೇಳುತ್ತದೆ;ಮತ್ತು ಆ ಅಭಿಪ್ರಾಯವನ್ನು ತೋರಿಸಲಿಕ್ಕೆ ಇಂಗ್ಲಿಷಿನಲ್ಲಿ ಫಿಗ್ ಎಂಬ ಅಂಜೂರವು ಇರುವಂತೆ, ನಮ್ಮ ಭಾಷೆಯಲ್ಲಿ ಬೇರೆ ಬೇರೆ ಪದಾರ್ಥಗಳಿವೆ. ಒಂದು ಭಾಷೆಯನ್ನು ಆಡುವವರು ತಮ್ಮ ಮನಸ್ಸಿಗೆ ಒಲ್ಲದ ಯಾವುದೊಂದು ವಸ್ತುವನ್ನು ದುರ್ಲಕ್ಷ್ಯಿಸಿ ಮಾತಾಡುವಾಗ, ಆ ವಸ್ತುವನ್ನು ತಮ್ಮ ಅನುಭವದಲ್ಲಿ ಅತ್ಯಂತ ಕ್ಷುಲ್ಲಕವೆಂದು ತೋರಿದ ಬೇರೆ ಪದಾರ್ಥಕ್ಕಿಂತ ಕೀಳಾಗಿ ಗಣಿಸುವುದು ಎಲ್ಲೆಲ್ಲಿಯೂ ವಾಡಿಕೆಯಾಗಿದೆ. ಅಂಥ ಸಂದರ್ಭಗಳಲ್ಲಿ ಇಂಗ್ಲಿಷ್ ಭಾಷೆಯು ಫಿಗ್ ಎಂದು ಅಂಜೂರವನ್ನು ಪ್ರಸ್ತಾವಿಸುವ ಹಾಗೆ ನಮ್ಮ ಜಿಲ್ಲೆಯ ಮೂರು ಭಾಷೆಗಳು ಯಾವ ಹಣ್ಣುಗಳ ಹೆಸರುಗಳನ್ನು ಹೇಳುತ್ತವೆ ನೋಡೋಣ!

ನಮ್ಮ ಜಿಲ್ಲೆ ಬಡ ಜಿಲ್ಲೆ. ಇಲ್ಲಿ 'ದಾಮ' ಕಡಮೆ, ಕಾಸಿನ ಮಾತೇ ಹೆಚ್ಚು. 'ಮೂರು ಕಾಸಿನವನು,' 'ಕಾಸಿಗೂ ಬೇಡವಾದದ್ದು,' 'ತಾಮ್ರಕ್ಕೆ ಹುಟ್ಟಿದ ಕಾಸಿಲ್ಲದವ'-ಇಂಥ ಮಾತುಗಳು ಕಿವಿಗೆ ಬೀಳುತ್ತಿವೆ. ಇಂಗ್ಲಿಷ್ ಅಂಜೂರವೂ ಇಲ್ಲಿಲ್ಲ; ಆದುದರಿಂದ ಇಲ್ಲಿಯ ಕೊಂಕಣಿ ತುಳು ಕನ್ನಡಗಳು ಇಲ್ಲಿಯ ಪದಾರ್ಥಗಳನ್ನೇ ಹೋಲಿಕೆಗೆ ಆಯ್ದುಕೊಂಡುವು. ಈ ಪದಾರ್ಥಗಳಲ್ಲಿ ಮುಖ್ಯವಾದುವು ಮೂರು—ಅಮಟೆ ಕಾಯಿ, ಗೇರುಬೀಜ, ಗೋಟು ಅಡಕೆ ಇವುಗಳ ಮೂಲಕ ವಾಗಿ ನಮ್ಮಲ್ಲಿಯ ಮೂರು ಭಾಷೆಗಳನ್ನು ಆಡುವವರು ತಮ್ಮ ಮನಸ್ಸಿನಲ್ಲಿದ್ದ ನಿರಾಕರಣಭಾವವನ್ನೊ ದುರಭಿಮಾನವನ್ನೊ ತಿರಸ್ಕರಣೆಯನ್ನೊ ತೋರಿಸುವರು.

**ಪ್ರಶ್ನೆ.** ತಾವು ಮದ್ರಾಸಿಗೆ ಹೋದದ್ದು ಯಾಕೆ?

**ಕೊಂಕಣಿ ಉತ್ತರ.** ಕುಸಲ್ಯಾ ಅಂಬಾಡ್ಯ ಕಾ ತ್ಯಾಕ; ತುಕ್ಕಾ ಇತ್ಯಾಕ (ಕೊಳೆತ ಅಮಟೆಕಾಯಿ ಗೊರಟೆಗೆ; ನಿನಗೆ ಯಾಕೆ?)

**ತುಳು ಉತ್ತರ.** ಕೊರಂಟ್‌ದ ಚೋಲಿಗ್, ನಿಕ್ ದಾಯೆಗ್ (ಗೇರು ಪಪ್ಪಿನ ಬೀಜದ ಓಡಿಗೆ, ನಿನಗೆ ಯಾಕೆ?)

**ಕನ್ನಡ ಉತ್ತರ.** ಗೋಟು ಅಡಕೆಗೆ; ನಿನಗೆ ಯಾಕೆ? ಹುಲು ಪದಾರ್ಥವೆಂಬ ಅರ್ಥದಲ್ಲಿ 'ಅಡಕೆ' ಶಬ್ದವು ಗಟ್ಟದ ಮೇಲಣ ಹೊಸಗನ್ನಡದಲ್ಲಿ ಪ್ರಯೋಗವಾಗುವುದಿಲ್ಲ. ಆದರೆ ಹಳೆಗನ್ನಡದಲ್ಲಿ ಅದಕ್ಕೆ ಈ ಅರ್ಥವುಳ್ಳ ಉದಾಹರಣೆ ಇದೆ. ಪರಶುರಾಮನು ದ್ರವ್ಯಾರ್ಥಿಯಾಗಿ ಬಂದ ದ್ರೋಣನಿಗೆ ಹೇಳುವ ಮಾತುಗಳಲ್ಲಿರುವ ಅಡಕೆ ಶಬ್ದವನ್ನು ನೋಡಿ!

"ಒಡಮೆಯನರ್ಥಿಗಿತ್ತೆನವನೀತಳಮಂ ಗುರುಗಿತ್ತೆನೀಗಳೊಂ **ದಡಕೆ**ಯುಮಿಲ್ಲ ಕೈಯೊಳ್...." (ಪಂಪ ಭಾರತ. ೨. ೪೬)

ಮೇಲೆ ಕಾಣುವ ಬೆಲೆಯಿಲ್ಲದ ಅಲ್ಪವಸ್ತುವೆಂಬ ಅಭಿ ಪ್ರಾಯವು ಕನ್ನಡ ಗಾದೆಯಲ್ಲಿ ಇನ್ನೂ ಉಳಿದಿದೆ. "ಆದರೆ ಒಂದು ಅಡಕೆ ಮರ, ಹೋದರೆ ಒಂದು ಗೋಟು ಅಡಕೆ."

ಹೊಸಗನ್ನಡದಲ್ಲಿ ಮರಕ್ಕೂ ಕಾಯಿಗೂ ಅಡಕೆ ಎಂದೇ ಹೆಸರು. ಹಳೆಗನ್ನಡದಲ್ಲಿ 'ಅಡಕೆಯ ಮರಗಳ್' 'ಅಡಕೆಯ ಸಸಿಗಳ್'ಎಂಬ ಮಾತುಗಳು ಅಪರೂಪ; ಗಿಡವನ್ನು ಕವುಂಗು ಎಂದು ಕರೆಯುವುದೇ ರೂಢಿ. ತೆಂಗು ಕವುಂಗುಗಳನ್ನು ಬಣ್ಣಿ ಸದ ಕನ್ನಡ ಕವಿ ಇಲ್ಲ. ನಾಗವರ್ಮನು ಪಚ್ಚಡಕೆಯನ್ನು ಹೇಳಿದ್ದರೆ, ನಯಸೇನನು ಕವುಂಗಿನ ವಿಶೇಷ ಗುಣವೊಂ ದನ್ನು ನಮ್ಮ ಲಕ್ಷ್ಯಕ್ಕೆ ತಂದಿರುವನು.

"ಖುಷಿಯ ಗುಣಮಂ ಪೇಳ್ವೊಡೆ . . . . . .ಕವುಂಗಿ ನಂತೆ ವಕ್ರ ಗುಣರಹಿತನಂ . . . ." (ಧರ್ಮಾಮೃತ ೫೫).

ಕವುಂಗು ತೋಟದ ವರ್ಣನೆಯನ್ನು ಕನ್ನಡ ಕವಿಗಳು ಅನೇಕರು ಮಾಡಿರುವರು. ಅವುಗಳಲ್ಲೆಲ್ಲಾ ನನಗೇನೋ ಕೆಳಗಿನ ಚಿತ್ರವು ಮಾತ್ರ ಅತ್ಯಂತ ಮನೋಹರ ಎನಿಸುತ್ತದೆ. ಅಡಕೆಯ ವರ್ಣನೆಯಲ್ಲಿ ಇದನ್ನು ಮೀರಿದ ಬಣ್ಣನೆ ಕನ್ನಡ ದಲ್ಲಿ ನನ್ನ ದೃಷ್ಟಿಗೆ ಬೀಳಲಿಲ್ಲ.

" . . . . . ಪಚ್ಚೆಯ ಲಂಬಣದಿಂ ಸಿಂಗರಿಸಿ, ಸೋಗೆ ವೀಲಿಯಂ ಬಿಗಿದು, ಬಸಂತಂ ನಟ್ಟ ಕಾವನ ಗೆಲ್ಲಗಂಬಮೆನೆ ಕಾಯ್ಗೊನೆ ಪಣ್ಗೊನೆಯಿಂ ಕಣ್ಗೆಡ್ಡಮಾಗಿರ್ಪುವು ಕವುಂಗ ದೋಂಟಂ. . . . . "(ಮುದ್ದಣನ ರಾಮಾಶ್ವಮೇಧ ೨ನೆಯ ಆಶ್ವಾಸ)

ತುಳುನಾಡಿನ ಚೆಲುವು ಎಂದರೆ ತೆಂಗುಕವುಂಗುಗಳ ತೋಟದ 'ಪೊರ್ಲು'.

ಕವುಂಗನ್ನು ಕಂಗು ಎಂದು ತುಳುವರಂತೆ ಉಚ್ಚರಿಸು ವುದು ನನಗೆ ಮೆಚ್ಚುಗೆ; ತೆಂಗು ಕಂಗು ಎಂದು ಪ್ರಾಸವಿಟ್ಟು ಹೇಳುವುದಕ್ಕೂ ಸರಿಯಾಗುತ್ತದೆ. ನಮ್ಮ ನಾಡು ತೆಂಗು ಕಂಗುಗಳ ಹುಟ್ಟು ಮನೆಯೆ? ಕೊಪ್ಪಲು ಮನೆಯೇ? ಈ ಅಣ್ಣತಮ್ಮಂದಿರು ನಮ್ಮ ನಾಡಿನವರಲ್ಲವೆಂದು ಹೇಳುತ್ತಾರೆ. ಇವರು ಹಿಂದಕ್ಕೆ ಮೊಗಲರು ಹಿಂದುಸ್ಥಾನವನ್ನು ಒಳನುಗ್ಗಿದ ಬಡಗುಕಡೆಯ ನೆಲದಾರಿಯಾಗಿ ಬನವಾಸಿ ನಾಡಿಗೆ ಬಂದವ ರಲ್ಲವಂತೆ. ಇವರ ಆದಿಸ್ಥಾನವು ಇಂಗ್ಲಿಷರ ಇಂಗ್ಲೆಂಡಿನಂತೆ ಯಾವುದೋ ಒಂದು ಉಷ್ಣವಲಯದ ದ್ವೀಪದಲ್ಲಿಯಂತೆ. ಹಿಂದೂ ಸಾಗರದಲ್ಲಿಯ ಅವರ ದೀವಿಯಿಂದ ಬಹುಕಾಲದ ಹಿಂದೆಯೇ ಈ ಕಡೆಗೆ ತೇಲಿಬಂದು, ಇಂಗ್ಲಿಷರ ಹಾಗೆ ಮೊತ್ತಮೊದಲು ಪಡು ಕರಾವಳಿಯಲ್ಲಿದ್ದು, ಬೆಳೆದವರಂತೆ. ಇದಕ್ಕೆ ತೆಂಗು ಶಬ್ದದ ಮೂಲಾರ್ಥವೇ ಆಧಾರವಂತೆ. ಹೀ ಗೆಂದರೆ—ತೆಂಕು ಕಡೆಯಿಂದ ಬಂದ ಕಾಯಿ ತೆಂಕಾಯಿ, ತೆಂಗಾಯಿ, ತೆಂಗು ಹೀಗೆ ಆ ಶಬ್ದವು ಬಂದಿತೆಂದು ಹೇಳು ವುದುಂಟು. ಈ ಅಭಿಪ್ರಾಯವು ನನಗೆ ಸಮ್ಮತವಲ್ಲ. ಇದ ರಂತೆ ಕಂಗು ಅಂದರೆ ಅಡಕೆ ಸಂಸ್ಕೃತದ ಕ್ರಮುಕ ಶಬ್ದದ ಇನ್ನೊಂದು ರೂಪವೆನ್ನುವುದುಂಟು. ಹಾಗೆನ್ನುವುದಕ್ಕಿಂತ ಕ್ರಮುಕವು ಕಂಗಿನ ರೂಪಾಂತರವೆನ್ನಬಹುದಾಗಿದೆ. ತೆಂಕು ಕಡೆಯಿಂದ ಬಂದದ್ದರಿಂದ ತೆಂಗು ಎಂಬ ಹೆಸರಾಯಿತೆಂದು ಹೇಳುವವರು, ಕಂಗು ಹೆಸರುಬರುವುದಕ್ಕೆ ಅಡಕೆ ಯಾವ ದಿಕ್ಕಿನಿಂದ ಬಂದಿರಬೇಕೆಂದು ಹೇಳಬೇಕು. ಕಂಕು ದಿಕ್ಕಿ ದೆಯೋ? ತೆಂಗುಕಂಗುಗಳು ಸಂಸ್ಕೃತ ಶಬ್ದಗಳೂ ಅಲ್ಲ, ಉತ್ತರದಿಂದ ದಕ್ಷಿಣಕ್ಕೆ ಬಂದುವುಗಳೂ ಅಲ್ಲ. ಅವು ಕನ್ನಡ, ತುಳು, ತಮಿಳು ಭಾಷೆಗಳಿಗೆ ಆದಿಯಾದ ಯಾವುದೋ ಒಂದು ಭಾಷೆಯ ಹೆಸರುಗಳು. ಆ ಭಾಷೆಯನ್ನು ದ್ರಾವಿಡ ಎಂದು ಕರೆದರೆ, ಈ ತೆಂಗುಕಂಗುಗಳು ಪ್ರಾಯಶಃ ದ್ರಾವಿಡ ಭಾಷೆಯ ಶಬ್ದಗಳಾಗಿರಬೇಕು. ಆ ಭಾಷೆಯಲ್ಲಿ ತೇನ್ ಎಂ ದರೆ ಸಿಹಿ, (ಶೀ) ಎಂದೂ, ಕಮ್ ಎಂದರೆ ಪರಿಮಳ

ವುಳ್ಳದ್ದು ಎಂದೂ, ತೇನ್, ಇದರಿಂದ ತೇಂಗಯಿ್, ತೆಂಗು ಆಯಿತು; ಕಮ್, ಇದರಿಂದ ಕವುಂಗು, ಕಂಗು ಬಂತು. ಈ ತೇನ್ ಶಬ್ದವು ತುಳುವಿನ ತೇನ್ (ಜೇನು) ಶಬ್ದಕ್ಕೆ ಬಲು ಹತ್ತಿರವಿದೆ; ಹಾಗೆಯೇ ಕಮ್ ಎಂಬುದು ತುಳು ಕಮ್ಮನೆ, ಕನ್ನಡ ಕಮ್ಮಿತ್ತು, ಕಂಪುಗಳಿಗೆ ಬಹಳ ಸಮೀಪದ್ದು. ತೆಂಗಾಯಿ ಎಂದರೆ ಸಿಹಿಯಾದ ಕಾಯಿ ಮೊತ್ತಮೊದಲಿನ ಅರ್ಥ, ಕಂಗು ಎಂದರೆ ಪರಿಮಳವುಳ್ಳದ್ದು ಎಂದು ಪ್ರಥಮದ ಅರ್ಥ. ಈ ಅಭಿಪ್ರಾಯವೇ ಸರಿಯೆಂದು ನನ್ನ ಹಟವಿಲ್ಲ.

ಅಡಕೆ ಎಂಬ ಮಾತು ಹೇಗೆ ಬಂತು? ಈ ಶಬ್ದವು ಕನ್ನಡ ಮಲೆಯಾಳಗಳಲ್ಲಿ ಹೊರತು ಮಿಕ್ಕ ಭಾಷೆಗಳಲ್ಲಿಲ್ಲ. ಫಲಕ್ಕೆ ವೃಕ್ಷದ ಹೆಸರೇ ಸಾಧಾರಣವಾಗಿ ಬರುತ್ತದಷ್ಟೆ. **ಮಾವಿನ** ಮರ— **ಮಾವಿನ** ಕಾಯಿ; **ಅತ್ತಿಯ** ಮರ— **ಅತ್ತಿಯ** ಹಣ್ಣು; ಇದಕ್ಕೆ ಅನುಸಾರವಾಗಿ ಕಂಗಿನ ಮರ— ಕಂಗಿನ ಕಾಯಿ; ಅಡಕೆಯ ಮರ-ಅಡಕೆಯ ಹಣ್ಣು, ಎಂಬೀ ನುಡಿಗಳು ಸಲುವಳಿಯಾಗಬೇಕಿತ್ತಷ್ಟೆ. ಆದರೆ ಕಂಗಿನ ಕಾಯಿ, ಅಡಕೆಯ ಹಣ್ಣು, ಇವೆರಡು ಮಾತುಗಳೂ ರೂಢಿಯಲ್ಲಿ ಇಲ್ಲವೇ ಇಲ್ಲ. ಇದು ಏತರಿಂದ? ಕಂಗಿನ ವಿಷಯದಲ್ಲಿ ಮಾತ್ರ ಮರಕ್ಕೊಂದು ಹೆಸರು, ಕಾಯಿಗೊಂದು ಹೆಸರು. ಹೀಗೇತಕ್ಕೆ ಆಯಿತು? ಅಡಕೆ ಶಬ್ದವನ್ನೆ ವಿಚಾರಿಸೋಣ!

ಡಾ। ಕಾಲ್ಡ್ವೆಲ್ ಸಾಹೇಬರು ಅಡಕೆ ಅಥವಾ ಅರಕೆ ಎಂಬುದು ಮಲೆಯಾಳ ಶಬ್ದವೆಂದೂ, ಅದು ಅಡಯ್ (ಎಂದರೆ ಒತ್ತೊತ್ತಾಗಿ ಅಡಕವಾಗಿರುವ) ಮತ್ತು ಕಾಯ್ (ಕಾಯಿ)[1] ಎಂಬೀ ಎರಡು ನುಡಿಗಳು ಕೂಡಿ ಹುಟ್ಟಿತೆಂದೂ ಅಭಿಪ್ರಾಯ ಪಡುವರು.

ಹೀಗೆ ಅವರು ಅಭಿಪ್ರಾಯಪಡುವುದಕ್ಕೂ ಕಾರಣವಿತ್ತು. ಅವರು ಮೊತ್ತಮೊದಲು ಮಲೆಯಾಳದಲ್ಲಿ ಇಳಿದಿದ್ದ ಪೋರ್ತುಗೀಸರಿಂದ ಮತ್ತೆ ಇಂಗ್ಲಿಷ್ ಭಾಷೆಯು ಎತ್ತಿಕೊಂಡಿದ್ದ ಎರಿಕ(areca) ಶಬ್ದವನ್ನು ಕಂಡು, ಅದರ ಆದಿಯು ಮಲೆಯಾಳವೆಂದು ಭಾವಿಸಿದ್ದು ತಪ್ಪಲ್ಲ. ಆದರೆ ಅದು ಮಲೆಯಾಳದಿಂದ ಬಂತೆನ್ನುವುದಕ್ಕಿಂತ ಕನ್ನಡದಿಂದ ಹುಟ್ಟಿತೆಂದು ಹೇಳಿದ್ದರೆ ಇನ್ನೂ ಸರಿಯಾಗುತ್ತಿತ್ತು. ಏಕೆಂದರೆ, ಅಡಕೆಯ ಬೆಳೆ ಹೆಚ್ಚು ಕನ್ನಡ ನಾಡಿನಲ್ಲಿ, ಮಲೆಯಾಳ ಸೀಮೆಯಲ್ಲಲ್ಲ. ಮರಕ್ಕೆ ಇರುವ ಕಂಗು ಎಂಬ ಹಳೆಯ ಹೆಸರು ಹಳಗನ್ನಡದಲ್ಲಿದ್ದು ಕನ್ನಡ ಜಿಲ್ಲೆಯಲ್ಲಿ ಈಗಲೂ ರೂಢಿಯಾಗಿದೆ. "ಒತ್ತೊತ್ತಾಗಿರುವ ಕಾಯಿಯೆ" ಅಡಕೆ ಎಂದು ಸಾಧಿಸಿದರೆ, ಆ ಮಾತು ಕನ್ನಡಕ್ಕೆ ಇನ್ನೂ ಚೆನ್ನಾಗಿ ಅಡಕವಾಗಿ ಹೊಂದಿಕೆಯಾಗುತ್ತದೆ. ಅಡಕೆ ಎಲೆಗಳ ಸಂಚಿಗೆ ಅಡಪ, ಹಡಪ ಎಂದು ಹೇಳುವುದು ಕನ್ನಡದಲ್ಲಿ, ಸಂಚಿಯನ್ನು ಹಿಡಿಯುವವನನ್ನು ಅಡಪವಳ್ಳ ಎಂದು ಕರೆಯುವುದು ಕನ್ನಡದಲ್ಲಿ, ಪೀಕದಾನಿಗೆ ಡವಕೆ ಎಂಬ ಹೆಸರು ಇರುವುದು ಕನ್ನಡದಲ್ಲಿ, ಹೀಗೆ ಹಡಪ, ಅಡಪ, ಡವಕೆ ಎಂಬೀ ಶಬ್ದಗಳು ಕನ್ನಡವಿರುವಾಗ, ಅಡಕೆ ಮಾತ್ರ ಮಲೆಯಾಳದಿಂದ ಇಳಿದು ಬಂತೆಂದು ಏತಕ್ಕೆ ಗ್ರಹಿಸಬೇಕು? ಅಡಕೆ, ಇದು ಕನ್ನಡ ಶಬ್ದ; ಆದರೆ "ಒತ್ತೊತ್ತಾಗಿ" "ಅಡಕವಾಗಿ" ಎಂಬ ಪದಕ್ಕೂ ಅಡಕೆಗೂ ಏನೂ ಸಂಬಂಧವಿಲ್ಲವೆಂದು ನನ್ನ ಅನುಮಾನ.

ಅಡಕೆ ಇಲ್ಲವೆ ಅಱಿಕೆ ಎಂಬುದು ಅಱು (ಎಂದರೆ ತುಂಡುಮಾಡು) ಎಂಬ ಧಾತುವಿನಿಂದ ಹುಟ್ಟಿ, ತುಂಡು ಎಂಬ ಅರ್ಥವನ್ನು ಕೊಡುತ್ತದೆ. ಕೊಂಕಣಿಯ 'ಫೋಡಿ' ಮತ್ತು ತುಳುವಿನ 'ಪೂಳು' ಎಂಬವು ಕೊಡುವ ಹೋಳು ಎಂಬ ಅರ್ಥವೇ ಅಡಕೆ ಪದಕ್ಕೆ ಕನ್ನಡದಲ್ಲಿತ್ತು. ಈ ಅರ್ಥವೇ ವಿಸ್ತರಿಸಲ್ಪಟ್ಟು, 'ಕಂಗಿನ ಹಣ್ಣಿಗೂ' ಬಂದು ಬಿಟ್ಟಿತು. ನಮ್ಮ ಜಿಲ್ಲೆಯ ಅಡಕೆ ತೋಟದವರು ಆಡುವ ಕನ್ನಡದಲ್ಲಿ ಈ ಫಲವನ್ನು ಕಾಯಿ ಎಂದೇ ಕರೆಯುವರು. ಹೋಳು ಮಾಡದೆ ಒಣಗಿಸಿದರೆ ಗೋಟು ಆಯಿತು. ನಮ್ಮಲ್ಲಿ ಗೋಟು ಜಗಿಯುವುದಿಲ್ಲ, ಕಾಯನ್ನು ಹೋಳುಮಾಡಿ, (ಅಱಿಕೆಮಾಡಿ) ಎಲೆ ಅಱಿಕೆ ಹಾಕುವರು. ಎಲೆ ಅಱಿಕೆ (ಹೋಳು) ಅಡಕೆಯಾಗಿ, ಅದರಲ್ಲಿ ಎಲ್ಲವೂ ಸಮಾವೇಶವಾಯಿತು. ಇದೊಂದು ಅಭಿಪ್ರಾಯ. ಅಡಕೆಯ ಮೂಲವನ್ನು ಇನ್ನೊಂದು ವಿಧವಾಗಿ ಹುಡುಕುವರು.[2]

ಅಡಕೆಯ ಮೂಲವು ಅಱು (ತುಂಡು ಮಾಡು) ಎಂಬ ಧಾತುವಿನಿಂದಲ್ಲ; ಒಣಗು ಎಂಬ ಅರ್ಥವುಳ್ಳ ಅಱ್ ಧಾತುವೇ ಅದರ ಮೂಲ. ಅಱು, ಆರು, ಅರುಬು ಎಂಬವುಗಳ ಅಡಿಯಲ್ಲಿ ಒಣಗು ಎಂಬ ಅರ್ಥವಿದೆ. ಹಸಿ ಇದ್ದದ್ದು **ಕಾಯಿ** ಆದರೆ ಒಣಗಿದ್ದು **ಅಱಿಕೆ, ಅಡಕೆ** ಆಯಿತು. ನಾವು ಈಗ ಗೋಟು ಎಂದು ಕರೆಯುವುದನ್ನೇ ಮೊದಲೊಂದು ಕಾಲದಲ್ಲಿ ಅಡಕೆ ಎಂದೇ ಕರೆಯುತ್ತಿದ್ದರು. ಆ ಕಾಲದಲ್ಲಿ ಮರದ ಹೆಸರು ಕಂಗು, ಅದರ ಹಸಿ ಫಲವೇ ಕಾಯಿ, ಒಣಗಿದ್ದು ಅಡಕೆ, ಹೀಗಿತ್ತು. ಹಸಿಯ ಕಾಯಿಗಿಂತ ಒಣಗಿದ ಹಣ್ಣಿನ ಉಪಯೋಗವೂ ಮಾರಾಟವೂ ವೃದ್ಧಿಯಾದ ಹಾಗೆ, ಅಡಕೆ ಎಂಬ ಹೆಸರು ನಾಲ್ಕು ಕಡೆಗಳಲ್ಲಿ ಹಬ್ಬಿ, ಈಗ ಮರ, ಕಾಯಿ, ಹಣ್ಣು, ಇವು ಮೂರಕ್ಕೂ ಅಂಟಿಕೊಂಡು ಬಿಟ್ಟಿದೆ. ಸಾಲದ್ದಕ್ಕೆ ತುಳು ಕೊಂಕಣಿಗಳು ಆ ಅಡಕೆಯ ಮೇಲೆ ಗೋಟು ಹಚ್ಚಿ,

1. From adai, 'close arrangement of the cluster, Kai, 'nut'—Dr. Caldwell as quoted in Hobson—Jobson.

2. ಜೈಮಿನಿ ಭಾರತ ಸಂಧಿ ೪೦—೪೫ ಕಿಟ್ಟೆಲರ ನಿಘಂಟು ನೋಡುವುದು.

ಗೋಟಡಕೆ ಎಂದು ಮಾಡಿದುವು. ಗೋಟು ಇಲ್ಲವೆ ಅಡಕೆ ಎಂಬುದು ಶುದ್ಧ. ಆದರೆ ಗೋಟಡಕೆ ಎಂಬುದು ಅಬದ್ಧ: ಏಕೆಂದರೆ ಗೋಟು ಎಂದರೂ ಅಡಕೆ ಎಂದರೂ ಒಂದೇ ವಸ್ತುವಿನ ಎರಡು ಹೆಸರುಗಳು.

ಕನ್ನಡ ಜಿಲ್ಲೆಗಳಲ್ಲಿ ಬೆಳೆಯುವ ಅಡಕೆಯನ್ನು ಈ ಕಾಲದಲ್ಲಿ ಹಡಗಿನ ಮೇಲೆ ಬೊಂಬಾಯಿ ನಗರಕ್ಕೆ ಕಳುಹಿಸುತ್ತಾರೆ. ಮತ್ತು ಅಲ್ಲಿಂದ ಅದು ಗುಜರಾತು, ಕಾಥೇವಾಡು ಪ್ರಾಂತಗಳಿಗೆ ರಫ್ತಾಗುತ್ತದೆ. ಹಿಂದಿನ ಕಾಲದಲ್ಲಿ ಇಲ್ಲಿಯ ಅಡಕೆ ಸೊಪಾರಾ ಬಂದರಕ್ಕೆ ಸಾಗುತಿತ್ತು; ಮತ್ತು ಅಲ್ಲಿಂದ ಅರಬಸ್ಥಾನ, ಪಾರ್ಸಿಸ್ಥಾನ ದೇಶಗಳ ವರೆಗೆ ಹೋಗುತ್ತಿತ್ತು. ಸೊಪಾರಾ ಎಂಬುದು ಬೆಸ್ಸಿನ (ವಸಯಿ) ಬಳಿಯಲ್ಲಿ ಈಗ ಪಾಳುಬಿದ್ದಿರುವ ಊರು.ಮೊದಲು ಇದು ದೊಡ್ಡ ಸ್ಥಳವಿದ್ದು, ಅಡಕೆಯ ವ್ಯಾಪಾರದ ಕೇಂದ್ರಸ್ಥಾನವಾಗಿತ್ತು. ಅಡಕೆಯನ್ನು ಗುಜರಾತು ಅತ್ತ ಕಡೆಯವರು ಸುಪಾರಿ ಎಂದು ಕರೆಯುತ್ತಾರಷ್ಟೆ; ಹಾಗೆ ಕರೆಯುವುದಕ್ಕೆ ಅಡಕೆಯ ಆಮದು–ರಫ್ತು ಆ ಕಾಲದ ಬಂದರು ಎನ್ನಿಸಿದ ಸೋಪಾರಾದಿಂದ ಆಗುತಿದ್ದುದೇ ಕಾರಣ. ನಮ್ಮ ಜಿಲ್ಲೆಯಿಂದ ಮಸ್ಕತ್ ಬಂದರಕ್ಕೆ ಹೋಗುತ್ತಿದ್ದ ಅಕ್ಕಿಗೆ ಮಸ್ಕತಿ ಎಂದು ಹೆಸರಾದಂತೆ,ಸೊಪಾರಾವಿನಿಂದ ಸಾಗಿ ಹೋಗುತ್ತಿದ್ದುದರಿಂದ ಉತ್ತರ ಹಿಂದುಸ್ಥಾನದಲ್ಲೆಲ್ಲಾ ಅಡಕೆಗೆ ಸುಪಾರಿ ಎಂಬ ನಾಮವು ಪ್ರಸಿದ್ಧವಾಯಿತು.

ಅಡಕೆಯ ಸಂಬಂಧದಿಂದ ಕನ್ನಡ ಜಿಲ್ಲೆಯ ನಿವಾಸಿಕರ ದಿನ ಚರ್ಯೆಯಲ್ಲಿ ಎಷ್ಟು ಮಾತುಗಳು ಬಂದಿವೆ ಎಂಬದನ್ನು ಕನ್ನಡಿಗರು ಲಕ್ಷಿಸತಕ್ಕ ಸಂಗತಿ. ಉಭಯಸಂಕಷ್ಟಗಳಲ್ಲಿ ಸಿಕ್ಕಿಬಿದ್ದು ಅಪಾಯಕ್ಕೀಡಾಗದೆ ತಪ್ಪಿಸಿಕೊಳ್ಳಲಾರದವನು 'ಅಡ್ಡಕತ್ತರಿಯೊಳಗಣ ಅಡಕೆಯಂತೆ.' ಸ್ವಪ್ರಯೋಜನಕ್ಕಾಗಿ ಇತರರನ್ನು ಆರೈಕೆ ಮಾಡುವವನು 'ಅಡಕೆಯನ್ನು ಬಪ್ಪೆ ಹಾಕುವವನಂತೆ.' ಹೆಂಗಸು ಎಷ್ಟು ಕುರೂಪಿ ಎಂದರೆ-ನೋಡಿದರೆ ಬಾಯೊಳಗೆ 'ಅಡಕೆ ಹೋಳು ಹಾಕಿಕೊಳ್ಳಬೇಕು.' ಬುದ್ಧಿಯಿಲ್ಲದ ಮೂಢನು 'ಅಡಕೆ ತೋಟಕ್ಕೆ ನೀರು ಚೇಪತಕ್ಕವನು.' ಅಂತ್ಯದ ಪ್ರಯೋಜನಾಂಶವನ್ನು ಸಾಧಿಸುವುದಕ್ಕಾಗಿ ಪ್ರಾರಂಭದಲ್ಲಿ ಉಪಾಯದಿಂದ ಮಾಡುವ ದ್ವಯಾರ್ಥದ ಕಾರ್ಯವು 'ನಿನ್ನ ಹಡಗಿನ ಮೇಲೆ ನನ್ನಅರ್ಧ ಅಡಕೆ ಎಂಬಂತೆ.' ಸಣ್ಣದೊಂದು ಅಲ್ಪ ಕಾರ್ಯದಿಂದ ಕಳೆದುಕೊಂಡ ಹೆಸರು 'ಅಡಕೆ ಕದ್ದ ಮಾನ', "ಅಡಕೆ ಕದ್ದರೂ ಕಳ್ಳ; ಆನೆಕದ್ದರೂ ಕಳ್ಳ." ಚಿಕ್ಕವನಿರುವಾಗ ಮಾತ್ರ ಹೆತ್ತವರ ಅಂಕೆಯಲ್ಲಿರುವ ಮಾಣಿ "ಉಡಿಯಲ್ಲಿ ಹಾಕಬಹುದಾದ ಅಡಕೆ."

ಸರ್ವಜ್ಞ ಕವಿಯು ಅಡಕೆಯಿಲ್ಲದ ವೀಳ್ಯವು ನಿರರ್ಥಕವೆನ್ನುವನು; ಆದರೆ ಆತನೂ ಇತರ ಕನ್ನಡ ಕವಿಗಳೂ ಅಡಕೆಯನ್ನು ಉಪಮಾನಸಾಧನವಾಗಿ ತರುವುದು ತೀರ ಕಡಿಮೆ. ದಕ್ಷಿಣ ಕನ್ನಡದ ಮಾರಿಹೊಲೆಯರ ಒಂದು ಹಾಡಿನಲ್ಲಿ ಕೊಟ್ಟಿರುವ ಅಡಕೆ ಎಲೆಗಳ ಉಪಮಾನವು ಕವಿತಾದೃಷ್ಟಿಯಿಂದ ಅತ್ಯಂತ ಸುಂದರವಾದುದು; ಅದರಲ್ಲಿದ್ದ ಅಲಂಕಾರವನ್ನು ಅಗೆದಷ್ಟಕ್ಕೆ ಅದರ ಔಚಿತ್ಯವು ಅಧಿಕಾಧಿಕವಾಗಿ ಮನಸ್ಸಿಗೆ ಹೊಳೆಯದೆ ಇರಲಾರದು.

(ತುಳು) ಬಜ್ಜಾಯ್ ಇದ್ಯಾಂತಿ ಬಚ್ಚಿರೆ ಮಟ್ಟೆಲಟ್ ದಾಯೇಗ್?

(ಕನ್ನಡ ಅರ್ಥ) (ಅಡಕೆ ಇಲ್ಲದ ಎಲೆ ಸೋಗಿಲಲ್ಲಿ ಏತಕ್ಕೆ?)

(ತುಳು) ಪಿಲ್ಯಾ ಇದ್ಯಾಂತಿ ದಿಕ್ಕಾಳ ಕೇಲಟ್ ದಾಯೇಗ್?

(ಕನ್ನಡ ಅರ್ಥ) (ಗಂಡ ಇಲ್ಲದ ಹೆಣ್ಣು ಗುಡಿಸಲಲ್ಲಿ ಏತಕ್ಕೆ?)

ಅಣ್ಣ ತಮ್ಮಂದಿರು ತೆಂಗು ಕಂಗು, ಗಂಡ ಹೆಂಡಿರು ಅಡಕೆ ಎಲೆ, ತೊಟ್ಟಿಲ ಮಗು ಅಡಕೆಯ ಹಿಂಗಾರ-ಹೀಗಿದ್ದರೆ ಮನೆ, ಇಲ್ಲದಿದ್ದರೆ ಸುಮ್ಮನೆ.

———————

೪

ತಂಬಾಕು ಮತ್ತು ತಬಾಕು (ತುಬಾಕೊ) – ಈ ಎರಡು ಪದಗಳಲ್ಲಿ ತಪ್ಪು ಯಾವುದು, ಒಪ್ಪು ಯಾವುದು? ತೂಂಬು, ಶಿಲುಂಬು, ಹಂಬು ಇತ್ಯಾದಿಗಳಂತೆ ಅನುಸ್ವಾರಯುಕ್ತವಾದ ತಂಬಾಕು ಎಂಬದೋ? ಇಲ್ಲವೆ ತೂಬು, ಶಿಲುಬು, ಹಬ್ಬು ಎಂಬಂತೆ ಅನುಸ್ವಾರವಿಲ್ಲದ ತಬಾಕು ಎಂಬದೋ—ಇವುಗಳಲ್ಲಿ ಯಾವ ರೂಪವು ಸರಿಯಾದದ್ದು?

ಒಂದು ವಿಶೇಷದಿಂದ ಅರ್ಥಭೇದವಾಗುತ್ತದೆಂಬದಕ್ಕೆ 'ಚಿಂತಾಯಾಶ್ಚ ಚಿತಾಯಾಶ್ಚ' ಎಂದು ಪ್ರಾರಂಭವಾಗುವ ಪುರಾತನ ಶ್ಲೋಕವೇ ದೃಷ್ಟಾಂತ. ಚಿತೆಯು ಜೀವವಿಲ್ಲದ ದೇಹವನ್ನು ಸುಡುತ್ತದೆ,ಚಿಂತೆಯು ಜೀವವಿರುವ ದೇಹವನ್ನೇ ದಹಿಸುತ್ತದೆ. ನಮ್ಮ ಜಿಲ್ಲೆಯ ಕ್ಯೆ. ವಾ. ಶ್ರೀನಿವಾಸ ಭಾಗವತರು ತಮ್ಮ ಹರಿಕಥೆಯಲ್ಲಿ ಹೇಳುತ್ತಿದ್ದ ದ್ವಯಾರ್ಥದ ಚಾಟೂಕ್ತಿಯಂತೆ "ಈ ಮುಂತಾದ ಸಂಕಷ್ಟಗಳಿಗೆಲ್ಲಾ ಬಿಂದುವೇ ಕಾರಣ ಮದದಿಂದ ಮಂದವಾಗುವುದೂ, ಮಗ ಮಂಗನಾಗುವುದೂ ಬಿಂದು ದೋಷದಿಂದ! ಸಂಸಾರದಲ್ಲಿ ಬಿಂದು ವಿದ್ದುದರಿಂದ ಅದನ್ನುಉತ್ತರಿಸುವುದಕ್ಕೆ(ಉಚ್ಚರಿಸುವುದಕ್ಕೆ) ಕಷ್ಟ. ಬಿಂದುವಿಲ್ಲದಿದ್ದರೆ ಸಂಸಾರ ಎಂಬುದು ಸಸಾರ* ಆಗುತ್ತದಯ್ಯಾ!"

---

*ಸುಲಭ ಸಾರಯುಕ್ತ

ಬಿಂದುವು ಚಿಂತೆ, ಮಂದ, ಮಂಗ ಇತ್ಯಾದಿಗಳಂತೆ ಸಾವಿರಾರು ಮಾತುಗಳಲ್ಲಿ ಅದನ್ನು ಇಟ್ಟೇ ತೀರಬೇಕು; ತಪ್ಪಿದರೆ ಮಾತಿನ ಅರ್ಥವೇ ವಿಪರೀತವಾಗುತ್ತದೆ. ಆದರೆ ದಾಂಟು, ಶಿಲುಂಬು, ತೂಂಬು ಮುಂತಾದುವನ್ನು ದಾಟು, ಶಿಲುಬು, ತೂಬು ಎಂಬದಾಗಿ ಹೇಳಿದರೂ ಅರ್ಥಕ್ಕೆ ಬಾಧಕ ವಿಲ್ಲ. ಏಕೆಂದರೆ ಅಲ್ಲಿ ಅನುಸ್ವಾರವು ನಿಜವಾದ ಶಬ್ದಾವಯವ ವಲ್ಲ. ಅದನ್ನು ಬಿಟ್ಟೇ ಬಿಟ್ಟರೂ ಶಬ್ದಗಳ ಅರ್ಥವ್ಯಕ್ತಿ ಕೆಡುವುದಿಲ್ಲ. ಈ ರೀತಿ ಒಂದು ಶಬ್ದವನ್ನು ಒಂದೇ ಅರ್ಥ ದಲ್ಲಿ, ಒಮ್ಮೆ ಅನುಸ್ವಾರವಿಟ್ಟು, ಒಮ್ಮೆ ಅನುಸ್ವಾರ ಬಿಟ್ಟು ಬರೆಯುವ ರೂಢಿಯು ಭಾಷಾಭ್ಯಾಸಕ್ಕೆ ಹಿತಕರವಲ್ಲ. ಮಾ ತಿನಲ್ಲಿಯೂ, ಬರಹದಲ್ಲಿಯೂ ಅಕ್ಷರ ಯೋಜನ ಕ್ರಮವಿದ್ದರೆ ಕಲಿಯುವವನಿಗೂ ಕಲಿಸುವವನಿಗೂ ಸುಲಭ. ಕನ್ನಡದಲ್ಲಿದ್ದ ಈ ಅವ್ಯವಸ್ಥೆಯು ಇನ್ನಾದರೂ ಹೋಗಲೇ ಬೇಕಾಗಿದೆ.

ಈ ಅವ್ಯವಸ್ಥೆಯು ಇತ್ತಲಾಗಿನದಲ್ಲ, ಬಹು ಪುರಾತನ ಕಾಲದಿಂದ ಕನ್ನಡಕ್ಕೆ ಬಂದದ್ದು. ಅದನ್ನು ಹಿಂದಿನವರು ಲಕ್ಷಿಸದೆ ಹೋಗಲಿಲ್ಲ; ಅದನ್ನು ಕ್ರಮಪಡಿಸಲು ಅಕ್ಷರ ಯೋಜನೆಯ ಪ್ರಯತ್ನಗಳನ್ನು ಮಾಡಿದ್ದುಂಟು. ಯಾವ ಶಬ್ದಗಳಲ್ಲಿ ಅನುಸ್ವಾರವನ್ನು ಇಡಬೇಕು, ಎಲ್ಲಿ ಬಿಡಬೇಕು, ಎಂಬೀ ವಿಷಯವನ್ನು ದರ್ಪಣಕಾರನು ಸ್ಥೂಲವಾಗಿ ಹೇಳಿ ದ್ದಾನೆ. ಅವನ ಹೇಳಿಕೆಯ ಪ್ರಕಾರ 'ಬೆಡಂಗು' 'ಕಡಂಗು' 'ಅಡಂಗು' 'ತೊಡಂಬೆ' 'ಕೊಡಂತಿ' 'ತೊಡಂಕು' ಇತ್ಯಾದಿ ಶಬ್ದಗಳು ಸಬಿಂದುಗಳು; ಎಂದರೆ ಅವು ಅನುಸ್ವಾರಯುಕ್ತ ವಾಗಿಯೇ ಇರಬೇಕು; ಬೆಡಗು, ಅಡಗು, ಕೊಡತಿ, ತೊಡಕು ಇತ್ಯಾದಿ ಪ್ರಯೋಗವು ತಪ್ಪು; ಹಾಗೆ ಬರೆಯಬಾರದೆಂದು ಅವನು ಎಚ್ಚರಿಸಿರುತ್ತಾನೆ. ಆದರೆ 'ಕದಂಪು,' 'ತೊಡಂಕೆ,' 'ನೊರಂಜು' ಮುಂತಾದ ಅನೇಕ ಶಬ್ದಗಳನ್ನು 'ಕದುಪು' 'ಕೊಡಕೆ,' 'ನೊರಜು' ಇತ್ಯಾದಿಯಾಗಿ ಬಿಂದುವಿಲ್ಲದೆ ಬರೆ ದರೂ ಬಾಧಕವಿಲ್ಲವೆಂದು ಅವನ ಅಭಿಪ್ರಾಯ. ಈ ಶಬ್ದಗಳು ಯಾಕೆ ಅನಿತ್ಯಬಿಂದುಗಳು? ಆ ಶಬ್ದಗಳು ಯಾಕೆ ನಿತ್ಯ ಬಿಂದುಗಳು? ಈ ಪ್ರಶ್ನೆಯ ವಿಷಯವಾಗಿ ಅವನ ಚರ್ಚೆ ಇಲ್ಲ. ಹಿರಿಯರ ಮತ್ತು ಹಿಂದಿನವರ ಕೃತಿಗಳಲ್ಲಿದ್ದ ಪದ ಪ್ರಯೋಗವನ್ನು ವಿವೇಚಿಸಿ, ಇಂಥಲ್ಲಿ ಅನುಸ್ವಾರವಿರಬೇಕು, ಇಂಥಲ್ಲಿ ಇರಲೂ ಬಹುದು, ಇಲ್ಲದಿರಲೂ ಬಹುದು ಎಂಬ ದನ್ನು ತಿಳಿಯತಕ್ಕ ಶಬ್ದಗಳ ಪಟ್ಟಿಯೊಂದು ಅವನ ವ್ಯಾಕ ರಣದಲ್ಲಿದೆ. ಅವನ ಕಾಲದಲ್ಲಿ ತಪ್ಪಾಗಿ ಬರೆಯುತ್ತಿದ್ದ ಇಂಥ ಶಬ್ದಗಳೆಲ್ಲವೂ ಆ ಪಟ್ಟಿಯಲ್ಲಿವೆ ಎಂದು ಹೇಳಬರುವುದಿಲ್ಲ. ಈಗ 'ಬೆಂಕೆ' ಎಂಬ ನುಡಿ ಇದೆ; ಅನುಸ್ವಾರವನ್ನು ಬಿಟ್ಟು ಅದನ್ನು 'ಬೆಕ್ಕೆ' ಎಂದು ಬರೆದರೆ ಶುದ್ಧವೇ ಎಂಬದು ಅವನ ಸೂತ್ರದಿಂದ ಗೊತ್ತಾಗುವುದಿಲ್ಲ.

"ಅನುವಿಸೆ ಬೇಟಕಾಱನೊಲವಿರ್ಮಡಿಯಪ್ಪುದು ಬಯ್ಕೆ ಬೇಟಿಕಾಱನ ಬಗೆಗಿಲ್ಲ ಬೆಕ್ಕೆಗೊಳಗಪ್ಪುದು . . . ." (ಪಂಪ ಭಾರತ ೪. ೧೦೩) ಪಂಪನ ಪ್ರಯೋಗಗಳು ದರ್ಪಣಕಾರ ನಿಗೆ ಯಾವಾಗಲೂ ಮಾನ್ಯ. ಆದರೆ ಬೆಕ್ಕೆ ಮಾತ್ರ ಅವನ ಲಕ್ಷ್ಯಕ್ಕೆ ಬರದೆ ಹೋಗಿರಲೂ ಬಹುದು, ಅಥವಾ ಅವನ ಕಾಲದಲ್ಲಿ 'ಬೆಕ್ಕೆ' ಎಂಬ ರೂಪದ ಪ್ರಯೋಗವು, ನಿಂತು ಹೋಗಿರಲೂ ಬಹುದು. ಪಂಪನಿಗೆ 'ಪಾರಂಗತ' ಎಂಬ ಮಾತಿಗಿಂತ ಪಾರಗ 'ಪಾಱಗ' ಎಂಬ ರೂಪದಲ್ಲಿ ಮೆಚ್ಚುಗೆ. ಈ ಶಬ್ದದಂತೆಯೇ ಕನ್ನಡದಲ್ಲಿ ಸಬಿಂದುಕವಾಗಿಯೂ ಅ ಬಿಂದುಕವಾಗಿಯೂ ಪ್ರಯೋಗವಾಗುವ ಅನೇಕ ಸಂಸ್ಕೃತ ಶಬ್ದಗಳು (ವಿಹಂಗ–ವಿಹಗ, ಭುಜಂಗ–ಭುಜಗ, ತುರಂಗ– ತುರಗ, ಸಂತತ–ಸತತ, ಗಂಭೀರ–ಗಭೀರ ಇತ್ಯಾದಿ)ದರ್ಪಣ ಕಾರನ ಪಟ್ಟಿಯಲ್ಲಿ ಸೇರಿಲ್ಲ. ಇಷ್ಟೇ ಅಲ್ಲ; ಗುರುವಿಂಗೆ– ಗುರುವಿಗೆ, ಮರಂಗಳ್–ಮರಗಳ್, ಪಲಂಬರ್-ಪಲಬರ್, ಮೊದಲಾದ ಪ್ರಯೋಗಗಳಲ್ಲಿ ಬಿಂದು ಹೇಗೆ ಲೋಪವಾಯಿ ತೆಂಬ ವಿಚಾರವನ್ನು ಈ ಸಂದರ್ಭದಲ್ಲಿ ಆತನು ಎತ್ತುವು ದಿಲ್ಲ. ಇನ್ನು ವಿಚಾರಿಸಿದರೆ, ಈ ಅನುಸ್ವಾರದ ಪ್ರಶ್ನೆಯು ಕನ್ನಡಕ್ಕೆ ಮಾತ್ರವೇ ಅನ್ವಯಿಸುತ್ತದೆಂದು ತಿಳಿಯಬಾರದು. ನಮ್ಮ ಜಿಲ್ಲೆಯ ಇತರ ಭಾಷೆಗಳಲ್ಲಿಯೂ ಈ ಅನುಸ್ವಾರದ ಪ್ರಶ್ನೆ ಬರುತ್ತದೆ. ವಿಕಟ ಪ್ರತಾಪದ ಹಳೆಯಸಂಚಿಕೆಯೊಂದ ರಲ್ಲಿ ಹಿಂದಕ್ಕೊಮ್ಮೆ ಹಳೆಯ ಪಳಮೆಯೊಂದು ಬಂದಿತ್ತು. ನಮ್ಮ ವಿಕಟನು ಆಚಾರ್ಯರಲ್ಲಿ ಪುತ್ರೋತ್ಸವವಾದ ಸಮಾ ಚಾರವನ್ನು ಕೇಳಿ ಅವರಿದ್ದಲ್ಲಿಗೆ ಹೋದಾಗ, ಇಬ್ಬರೊಳಗೆ ಹೀಗೆ ಸಂಭಾಷಣೆ ನಡೆಯಿತಂತೆ:–

**ವಿಕಟ**: "ಇದೇನು, ಆಚಾರ್ರೇ, ಮಗು ಹುಟ್ಟಿದರೂ ಮುಖ ದಲ್ಲಿ ಬೇಸರಿಕೆ?"

**ಆಚಾರ್ಯ**:– "ಮಗನಿಗೆ ಈ ಹೊತ್ತು ನಾಮಕರಣವಾಗ ಬೇಕಯ್ಯಾ! ಅದಕ್ಕಾಗಿ ಯೋಚಿಸುತ್ತಾ ಇದ್ದೇನೆ."

**ವಿಕಟ**:– "ಅದಕ್ಕೇನು ಅಷ್ಟು ಯೋಚನೆ!"

**ಆಚಾರ್ಯ**:– ನಮ್ಮ ಕುಟುಂಬದ ಬಿರುದು ನಮ್ಮ ಮಕ್ಕಳ ಹೆಸರಲ್ಲಿಯೂ ನಿಲ್ಲಬೇಕೆಂಬ ಹಿರಿಯರ ಸಂಪ್ರದಾಯವಿದೆ. ನಮ್ಮ ಯಜಮಾನರ ಹೆಸರು ನೀಲಾಂಬರಾಚಾರ್ರು. ನಾವು ಚಿದಂಬರಾಚಾರ್ರು. ನಮ್ಮ ದೊಡ್ಡ ಮಗ ಏಕಾಂಬರ, ಎರಡನೆಯವ ಪೀತಾಂಬರ, ಮೂರನೆಯವ ದಿಗಂಬರ. ಕುಲದ ಮರ್ಯಾದೆಗೆ ಸರಿಯಾಗಿ ಈಗಿನ ಶಿಶುವಿಗೆ ತಕ್ಕ ಹೆಸರು ದೊರಕುವುದಿಲ್ಲ. ಆದ್ದರಿಂದ ಯೋಚನೆ ಕಾಣಯ್ಯ!"

**ವಿಕಟ**: "ಅಷ್ಟೇನೇ? ಹೊಸ ಕಾಲಕ್ಕೆ ತಕ್ಕಂತೆ ಹೊಸ ಹೆಸರು ಇಟ್ಟರಾಯಿತು, ಸ್ವಾಮಿ!'

**ಆಚಾರ್ಯ**:– "ಯಾವ ಹೆಸರು? ಹುಡುಕಿಹೇಳಯ್ಯಾ!"

**ವಿಕಟ**: "ಸೆಪ್ಟೆಂಬರ, ಒಕ್ಟೊಂಬರ, ನವೆಂಬರ, ಡಿಸೆಂಬರ, ಯಾವುದಾದರೂ ಒಂದು ಆಗದೇ?"

ಓದುವವರಿಗೆ ಇಂಗ್ಲಿಷ ಗೊತ್ತಿದ್ದರೆ ಮೇಲಿನ ವಿಕಟೋಕ್ತಿಯಲ್ಲಿದ್ದ ಒಂದಂಶವು ಹೊಳೆಯದೆ ಇರಲಾರದು. ಇಂಗ್ಲಿಷ್ 'ಒಕ್ಟೊಬರ್' ಎಂಬುದು ವಿಕಟನ ಬಾಯಿಂದ 'ಒಕ್ಟೊಂಬರ್' ಎಂದು ಹೇಗಾಯಿತು? ಮೂಲ ಶಬ್ದದಲ್ಲಿ ಇಲ್ಲದ ಅನುಸ್ವಾರವು ಅದರ ಕನ್ನಡ ರೂಪದಲ್ಲಿ ಹೇಗೆ ನುಸುಳಿಕೊಂಡಿತು? ಸೆಪ್ಟೆಂಬರ, ನವೆಂಬರ, ಡಿಸೆಂಬರ, ಈ ಮೂರರಲ್ಲಿದ್ದ ಅನುಸ್ವಾರವು ಒಕ್ಟೊಬರದಲ್ಲಿ ಮರೆಯಾಗುವುದಕ್ಕೆ ಕಾರಣವಿದೆ. ಇಂಗ್ಲಿಷರ ಕಾಲಗಣನೆಯ ರೀತಿಯು ಬಂದದ್ದು ಲಟೀನ್ ಭಾಷೆಯಿಂದ. ಆ ಲಟೀನ್ ಜನಾಂಗದವರ ವರ್ಷವು ಹಿಂದೆ ಮಾರ್ಚಿ ತಿಂಗಳಿಂದ ಪ್ರಾರಂಭವಾಗುತಿತ್ತು. ಮಾರ್ಚಿ ಹಿಡಿದು ಕ್ರಮವಾಗಿ ಏಳು, ಎಂಟು, ಒಂಭತ್ತು, ಹತ್ತು ಎಣಿಸುತ್ತ ಹೋದರೆ, ಬರುವ ಸೆಪ್ಟೆಂಬರ, ಒಕ್ಟೊಬರ, ನವೆಂಬರ, ಡಿಸೆಂಬರ, ಎಂಬೀ ನಾಲ್ಕು ಮಾಸಗಳಲ್ಲಿ 'ಸೆಪ್ಟೆಂ' ಎಂದರೆ ಲಟೀನ್ ಭಾಷೆಯಲ್ಲಿ ಏಳು; 'ಒಕ್ಟೊ' ಎಂಟು, 'ನವೆಂ' ಒಂಭತ್ತು, 'ಡಿಸೆಂ' ಹತ್ತು ಎಂದರ್ಥ. ಹೀಗೆ ಲಟೀನ್ ಸಂಖ್ಯಾ ನಾಮಗಳಲ್ಲಿ 'ಒಕ್ಟೊ' ಒಂದು ಹೊರತು ಉಳಿದ ಮೂರು ಕಡೆಗಳಲ್ಲಿಯೂ ಅನುಸ್ವಾರವಿದೆ; ಆದರೆ 'ಒಕ್ಟೊ' ಎಂಬಲ್ಲಿ ಮಾತ್ರ ಮೂಲದಲ್ಲಿ ಅನುಸ್ವಾರವಿಲ್ಲ. ಆದುದರಿಂದ ಒಕ್ಟೊಬರ ಬಿಟ್ಟು ಮಿಕ್ಕ ಮೂರು ತಿಂಗಳುಗಳ ಹೆಸರುಗಳಲ್ಲಿ ಅನುಸ್ವಾರವು ಕಾಣುತ್ತದೆ. ಒಕ್ಟೊಬರದಲ್ಲಿ ಅದನ್ನಿಟ್ಟಿದ್ದರೆ ತಪ್ಪಾಗುತ್ತಿತ್ತು. ಹಾಗಾದರೆ ವಿಕಟ ಪ್ರತಾಪನು ಅನುಸ್ವಾರವನ್ನು ಏತಕ್ಕೆ ಇಟ್ಟನು? ಅವನು ಇಂಗ್ಲಿಷ ಅರಿಯನು, ಸೆಪ್ಟೆಂಬರ, ನವೆಂಬರ, ಡಿಸೆಂಬರ ಎಂಬಲ್ಲಿಯ ಅಂತ್ಯಾಕ್ಷರಗಳು ಒಕ್ಟೊಬರದಲ್ಲಿಯೂ ಇದ್ದಿರಬೇಕೆಂದು ಕೇಳಿಯೊ ನೆನಸಿಯೊ ಕಲ್ಪಿಸಿಯೊ ಭ್ರಮಿಸಿಯೊ, ಅವುಗಳಂತೆಯೇ ಒಕ್ಟೊಬರಕ್ಕೂ 'ಅಂಬರತ್ವ' ಕೊಟ್ಟುಬಿಟ್ಟನು. ಇಂಥ ತಪ್ಪು ಗ್ರಹಿಕೆಗೆ ಸಾದೃಶ ಭ್ರಮೆ ಎನ್ನುವರು. ಕನ್ನಡ ಕಲಿಯತಕ್ಕ ಇಂಗ್ಲಿಷರವನು 'ಬರು—ಬಂದನು', 'ತರು—ತಂದನು', ಎಂಬೀ ಮಾತುಗಳನ್ನು ಕೇಳಿ, 'ಇರು–ಇಂದನು; 'ಹೊರು—ಹೊಂದನು' ಎಂದು ತಪ್ಪು ತಪ್ಪು ಹೇಳಿದರೆ, ಸಾದೃಶಭ್ರಮೆಯಿಂದ ಹೀಗೆ ಆಭಾಸವಾಯಿತೆಂದು ತಿಳಿಯಬೇಕು. ತುಳು ಭಾಷೆಯ 'ಮೊಂಟರ್' ಹುಟ್ಟಿದ್ದು ಇದೇ ಸಾದೃಶ ಭ್ರಾಂತಿಯಿಂದ. ಹೊಸಗನ್ನಡದ 'ದಾಟು' 'ಪೇಟೆ' 'ಬೇಟೆ' 'ಗೊರಟು' ಮೊದಲಾದವುಗಳ ತುಳು ರೂಪಗಳು 'ದಾಂಟು' 'ಪೇಂಟೆ' 'ಬೋಂಟೆ' 'ಕೊರಂಟ್' ಎಂದು ಕೇಳಿ ಗೊತ್ತುಮಾಡಿದ್ದ ತುಳುವನಿಗೆ 'ಮೋಟರ್' ಶಬ್ದವನ್ನು 'ಮೊಂಟರ್' ಮಾಡಿ ಚಲಾಯಿಸುವುದಕ್ಕೆ ಬೇರೆ ಆಧಾರಬೇಕೇ? ತುಳುರೂಪದಲ್ಲಿ ಅನುಸ್ವಾರವಿದೆ, ಹೊಸಕನ್ನಡ ರೂಪದಲ್ಲಿ ಅನುಸ್ವಾರವಿಲ್ಲ; ಆದುದರಿಂದ 'ಮೊಟರ್' ಇದ್ದದ್ದು 'ಮೊಂಟರ್' ಆಯಿತು; ಇದೇ ಸಾದೃಶ ಭ್ರಮೆ.

ಆದರೆ ತಬಾಕು ಮತ್ತು ತಂಬಾಕು ಎಂಬಲ್ಲಿ ಅನುಸ್ವಾರವು ಸೇರಿಕೊಂಡದ್ದು ಸಾದೃಶ ಭ್ರಾಂತಿಯಿಂದಲೋ ಇನ್ನಾವ ಕಾರಣದಿಂದಲೋ, ಎಂಬುವನ್ನು ತಿಳಿಯಬೇಕಾದರೆ, ಆ ಶಬ್ದವು ಯಾವ ಭಾಷೆಯಿಂದ ಬಂತು? ಅಲ್ಲಿ ಅದರ ಮೂಲ ರೂಪ ಯಾವುದಿತ್ತು? ಬೇರೆ ಬೇರೆ ಭಾಷೆಗಳಲ್ಲಿ ಆ ಶಬ್ದದ ರೂಪ ಯಾವುವು? ಶಬ್ದವು ಬೇರೆ ಭಾಷೆಯಲ್ಲಿ ಸೇರಿಕೊಂಡದ್ದು ಹೇಗೆ? ಒಂದೊಂದು ಭಾಷೆಯಲ್ಲಿಯೂ ಇರತಕ್ಕ ಅದೇ ಶಬ್ದ ರೂಪ ಭೇದಗಳಿಗೆ ಕಾರಣವೇನು! ಉಚ್ಚಾರಣೆಯ ತಪ್ಪೇ? ಅಕ್ಷರ ಮಾಲೆಯ ಕೊರತೆಯೇ? ಮಾತನಾಡುವ ಸಂಕೋಚತೆಯೇ? ಕಿವಿ ಮೆಚ್ಚುಗೆಯ ಪ್ರಯತ್ನವೇ? ಛಂದಸ್ಸಿಗೆ ಬೇಕಾದ ಶೈಥಿಲ್ಯವೇ? ಬರಹದ ಚಮತ್ಕಾರವೇ? ವಾಯುಗುಣದ ಪರಿಣಾಮವೇ? ಇಲ್ಲವೇ ಮತ್ತಾವ ಕಾರಣ? ಶಬ್ದದ ಭಿನ್ನಭಿನ್ನ ರೂಪಗಳನ್ನು ಒಂದೇ ಕಟ್ಟುಪಾಡಿನೊಳಗೆ ತರಬಹುದೇ? ಹೀಗೆ ನಿಯಮಗಳನ್ನು ಮಾಡಿದರೆ ಅಪವಾದಗಳು ನಿಲ್ಲುತ್ತವೆಯೋ? ಹೊಸ ರೂಪಗಳು ಬಂದಲ್ಲಿ, ಈ ನಿಯಮಕ್ಕೆ ಒಳಪಡುವುವೇ? ಸೂತ್ರದ ವ್ಯಾಪ್ತಿ ಎಷ್ಟು! ಇತ್ಯಾದಿ ಅನೇಕಾನೇಕ ಸಂಗತಿಗಳನ್ನು ವಿವೇಚಿಸಿ, ನಿರ್ಧರಿಸಿ, ಸೂತ್ರೀಕರಿಸಿದರೆ ಅದೊಂದು ಸಿದ್ಧಾಂತವೆನ್ನಿಸುತ್ತದೆ; ಇಲ್ಲದಿದ್ದರೆ ಬರಿಯ ಅಭಿಪ್ರಾಯವೆನ್ನಿಸುತ್ತದೆ. ಯಾವುದೊಂದು ಶಾಸ್ತ್ರವನ್ನು ಕುರಿತು ಒಂದೇ ಒಂದು ಸಿದ್ಧಾಂತವನ್ನು ಬರೆಯಬೇಕಾದರೆ, ಸಿಕ್ಕಿದ ಕಡೆಯಿಂದ ದೃಷ್ಟಾಂತಗಳನ್ನು ಮೊದಲು ಸಂಗ್ರಹಿಸಬೇಕು; ಅವನ್ನು ಪರಿವಿಡಿಯಾಗಿ ಇಟ್ಟು ಪರೀಕ್ಷಿಸಬೇಕು; ಸಾಮ್ಯ ವೈಷಮ್ಯಗಳನ್ನೆಲ್ಲಾ ನೋಡಿ, ಲಕ್ಷಣಗಳನ್ನು ಕಂಡು ಹಿಡಿಯಬೇಕು. ಪ್ರಥಕ್ಕರಣಮಾಡಬೇಕು; ಏಕೀಕರಿಸಬೇಕು. ಅನಂತರ ನಿಯಮಗಳನ್ನು ಮಾಡಿ, ಅವುಗಳ ಸತ್ಯಾಸತ್ಯತೆಯನ್ನು ಹೊಸ ದೃಷ್ಟಾಂತಗಳನ್ನಿಟ್ಟು ವಿಮರ್ಶಿಸಿ, ಸಿದ್ಧಾಂತವನ್ನು ಸ್ಥಾಪಿಸಬೇಕು. ಇದು ಶಾಸ್ತ್ರೀಯ ಕ್ರಮ. ಆದುದರಿಂದ ತಬಾಕು, ತಂಬಾಕು ಎಂಬಲ್ಲಿ ಅನುಸ್ವಾರ ಮೂಲವನ್ನು ವಿಚಾರಿಸುವವನು ಮೊತ್ತಮೊದಲು ತಂಬಾಕು ಎಲ್ಲಿಂದ ಈ ದೇಶಕ್ಕೆ ಎಲ್ಲಿಂದ ಬಂತೆಂಬುದನ್ನು ಹುಡುಕಬೇಕು.

ತಂಬಾಕಿನ ಕಥೆಯು ಮೋಹಿನೀ ಪ್ರಸಂಗದಲ್ಲಿದೆ. ಈ ಪ್ರಸಂಗವು ನಮ್ಮ ಜಿಲ್ಲೆಯ ಕಾಸರಗೋಡು ತಾಲೂಕಿನ ಐಲ ಗ್ರಾಮದ ಯಾವನೊ ಒಬ್ಬ ಕವಿಯಿಂದ ಸುಮಾರು ಐವತ್ತು ವರ್ಷಗಳ ಹಿಂದೆ ಯಕ್ಷಗಾನ ರೂಪದಲ್ಲಿ ರಚಿತವಾ

ಯಿತು. ಕೈಲಾಸದಲ್ಲಿದ್ದ ಹೊಗೆಸೊಪ್ಪು ಶಿವನ ಆಜ್ಞಾನುಸಾರವಾಗಿ ಮೋಹಿನೀ ರೂಪದಲ್ಲಿ ಅವತರಿಸಿ, ಜನರ ಮನಸ್ಸನ್ನು ಮರುಳುಮಾಡಿ, ಅವರ ಮನಸ್ಸನ್ನು ಸೋಲು ಮಾಡಿಸಿದ ಸಂಗತಿಯೇ ಅದರ ಕಥಾವಸ್ತು. ಹೊಗೆಸೊಪ್ಪಿನ ದುರಾಭ್ಯಾಸದಿಂದ ಆಗತಕ್ಕ ಕೆಡುಕನ್ನು ಹಳ್ಳಿಯವರಿಗೆ ಮುಂದಟ್ಟಾಗುವಂತೆ ಬಣ್ಣಿಸುವುದೇ ಕಥೆಯ ಉದ್ದೇಶ. ಆದರೆ ತಂಬಾಕು ತಬಾಕುಗಳಲ್ಲಿ ಅನುಸ್ವಾರಭೇದವು ಹೇಗೆ ಬಂತೆಂಬುದನ್ನು ಆ ಕೃತಿಯು ಹೇಳುವುದಿಲ್ಲ. ಇಪ್ಪತ್ತೈದು ವರ್ಷಗಳ ಹಿಂದೆ ನಾನು ಕನ್ನಡ ಚಂಪೂಕೃತಿ ರಚನೆಯನ್ನು ಮಾಡಲು ಹೊರಟಿದ್ದೆ! ಅದಕ್ಕಾಗಿ ಓನಾಮವನ್ನು ಗೀಚುತ್ತಾ ಇದ್ದೆ. ಹೀಗೆ ಗೀಚಿ ಬಿಟ್ಟಿದ್ದ ಕೈಬರಹದ ಹರಕು ಕಾಗದಗಳಲ್ಲಿ ಕೆಲವೊಂದು ಕಡೆ ಹೊಗೆಸೊಪ್ಪಿನ ವಿಷಯವು ಇದ್ದುದರಿಂದ ಆ ಅಂಶವನ್ನು ಕೆಳಗೆ ಕೊಟ್ಟಿರುತ್ತೇನೆ. ಕೆಲಸವಿಲ್ಲದಿದ್ದರೆ ಓದಿಕೊಳ್ಳಿ! ಓದುವವರಿಗೆ ಸಹನೆ ಮಾತ್ರ ಸಾಕಷ್ಟು ಇರಲೇಬೇಕು.

"ಹೊಗೆಯೋ? ಬೆಂಕಿಯೋ? ಬೆಂಕಿ! ಬೇಗನೆ, ಎಲಾ ನೀರೆಲ್ಲಿ? ತಾ ಚೊಂಬು!"— ಈ ದಿಗಿಲಿಂದಾ ಮನೆಯಾಳು ಮೂಲೆಯ ಗುಡಾಣಕ್ಕೋಡಿ, ತುಂಬಿದ್ದ ತಂಬಿಗೆ ತಂದಲ್ಲಿ ವಿರಾಮದಾಸನದ ಮೇಲ್ ಕೂತಿದ್ದ ಇಂಗ್ಲಿಷ್ ಗೃಹಸ್ಥಗೆ ನೇರಾಗಿ ಮುಖಕ್ಕೆ ನೋಡಿ ಗುರಿ ತಾಗಿಟ್ಟಂತೆ ನೀರ್ ಹೊಯ್ದು ಬಿಟ್ಟನು. ಆ ಕುರ್ಚಿಯ ಮೇಲೆ ಇದ್ದವನು ಎತ್ಲಾಂತಿಕ್ ಸಮುದ್ರ ಪ್ರಯಾಣದ ಪ್ರಖ್ಯಾತಿಯ ವೀರನೂ, ಅಮೆರಿಕಾ ಖಂಡಕ್ಕೆದಾಟಿ,ಸ್ವದೇಶವಾದ ಇಂಗ್ಲೆಂಡದರಾಣಿಯಿಂದ ಹೊಗಳಲ್ಪಟ್ಟಾತನೂ, ಧೀರ ನಾವಿಕನೂ, ದೇಶಹಿತೈಷಿಯೂ ಎನ್ನಿಸಿದ ಸರ್ ವಾಲ್ಟರ್ ರಿಲೀ ಎಂಬ ಸಾಹಸಿಗನು. ಆತನು ಅಂದು ಅಮೇರಿಕದಲ್ಲಿ ಬೆಳೆಯುತ್ತಿದ್ದ ಒಂದು ಬಗೆಯ ಸೊಪ್ಪನ್ನು ತನ್ನ ದೇಶಕ್ಕೆ ಹೊಸತಾಗಿ ತಂದು, ಅದರ ಬತ್ತಿ ಮಾಡಿ, ಒಂದು ದಿನ ತನ್ನ ಕೋಣೆಯಲ್ಲಿ ಒಬ್ಬನೇ ಕುಳಿತುಕೊಂಡು ಸೇದುತ್ತಿದ್ದಾಗ, ಮನೆಯಾಳು ಆ ಬತ್ತಿಯ ಉರಿಯನ್ನೂ ಆತನ ಹೊಗೆಯುವ ಬಾಯನ್ನೂ ಕಂಡು, ಯಜಮಾನನ ಮೋರೆ ಬೆಂದುಹೋಗುತ್ತಿದೆ ಎಂಬ ಭ್ರಾಂತಿಯಿಂದ ಅದನ್ನು ಆರಿಸಲು ಆತನ ತಲೆಯ ಮೇಲೆ ನೀರು ಹೊಯ್ದ ಸಂಗತಿಯನ್ನು ಅನೇಕರು ಮುಂಚಿನ ಕ್ರಮಿಕ ಪುಸ್ತಕಗಳಲ್ಲಿ ಓದಿರಬಹುದು. ಹೊಗೆಸೊಪ್ಪಿನ ವಿಷಯವಾಗಿ ನಮ್ಮ ದೇಶದಲ್ಲಿ ನಡೆದ ಇಂಥಾದ್ದೇ ಒಂದು ಕಥೆ ಇದೆ. ಅದು ಅಕ್ಬರ್ ಬೀರಬಲರ ಕಾಲದ ಕಥೆ.

ಹಿಂದಕ್ಕೆ ಅಕ್ಬರನ ಒಬ್ಬಾನೊಬ್ಬ ಹಕೀಮನು ಅದಿಲ್ ಶಾಹಿ ಸುಲ್ತಾನನಿಂದ ಬಿಜಾಪುರಕ್ಕೆ ಕರೆಯಿಸಲ್ಪಟ್ಟು, ಅಲ್ಲಿಂದ ಹಿಂದಿರುಗಿ ಹೋಗುವಾಗ, ಬಿಜಾಪುರದ ಸಂಸ್ಥಾನಿಕರಲ್ಲಿ ಅಂದು ರೂಢಿಯಾಗಿದ್ದ ಹೊಗೆಸೊಪ್ಪಿನ ಅಭ್ಯಾಸವನ್ನು ಕಂಡು ಕಲಿತುಕೊಂಡು ಡಿಲ್ಲಿಗೆ ಹಿಂದೆರಳಿದನು. ರಾಜಧಾನಿಯಲ್ಲಿ ಈ ದುರಭ್ಯಾಸವು ಹರಡಿಕೊಳ್ಳುವುದಕ್ಕೆ ಹೊತ್ತು ಹೋಗಲಿಲ್ಲ. ಹಿಂದುಸ್ಥಾನದ ತೆಂಕಣ ದಿಕ್ಕಿನ ಸೊಪ್ಪಿನ ಚಟವು ಬಡಗು ಬಯಲಿನಲ್ಲಿ ಮೊಳೆಯುವುದಕ್ಕೆ ಅದೇ ಮೊದಲು.ಹಬ್ಬುವುದಕ್ಕೆ ಮುಂಚೆಯೇ ಮೊಳಿಕೆಯನ್ನು ಮುರುಟಿಬಿಡುವುದಕ್ಕೆ ಪ್ರಯತ್ನಗಳು ನಡೆದುವು. ದೊರೆಯ ತನಕ ದೂರು ಹೋಯಿತು. ಬಾದಶಹನ ಒಂದು ಕಿವಿಯಲ್ಲಿ ಹೊಗೆಸೊಪ್ಪು ಹಾನಿಕರವೆಂದು ಗಿಡಿದರು, ಮತ್ತೊಂದು ಕಿವಿಯಲ್ಲಿ ಅದು ಹಿತಕರವೆಂದೂ ಪಿಸುಮಾತಾಡಿದರು. ಅದರ ಇತ್ಯರ್ಥಕ್ಕಾಗಿ ಬಾದಶಹನು ಒಂದು ದಿನ ರಾಜಪಂಡಿತರನ್ನು ತನ್ನ ಆಸ್ಥಾನಕ್ಕೆ ಕರೆಯಿಸಿಕೊಂಡನಂತೆ.

ಸಭೆಯ ತಲೆಯಲ್ಲಿ ಅಕ್ಬರ್ ಬಾದಶಹನು ಸಿಂಹಾಸನದ ಮೇಲೆ ವಿರಾಜಮಾನನಾಗಿದ್ದನು; ಅವನ ಬಲಕ್ಕೆ ಮುಂದುಗಡೆಗೆ ಪರಿಜನರೂ ಪರಿವಾರದವರೂ ಕುಳಿತಿದ್ದರು. ಎಡಕ್ಕೆ ಹಕೀಮರೂ, ವೈದ್ಯರೂ, ಪಂಡಿತರೂ, ಆಯುರ್ವೇದಿಗಳೂ ಉನಾನಿವಾಲರೂ, ದವಾಖೋರರೂ ಕೂಡಿದ್ದರು; ನಡುವೆ ಉದ್ದಕ್ಕೆ ದಾರಿಬಿಟ್ಟಿತ್ತು. ಹಿಂದೆ ದ್ರುಪದನು ದ್ರೌಪದಿಯ ಸ್ವಯಂವರಕ್ಕಾಗಿ ಮತ್ಸ್ಯಯಂತ್ರವನ್ನು ವಿವಾಹ ಮಂಟಪದಲ್ಲಿ ಹೂಳಿಟ್ಟಂತೆ ಸಭಾಮಧ್ಯದಲ್ಲಿ ಈ ಹೊಗೆಸೊಪ್ಪಿನ ಸತ್ವ ಪರೀಕ್ಷೆಗಾಗಿ ಅಂದವಾಗಿ ಅಲಂಕರಿಸಿದ್ದ ಗುಡುಗುಡಿಯೊಂದನ್ನು ತಂದಿಟ್ಟರು. ಕೂಡಲೇ ಅಲ್ಲಿದ್ದವರ ಮನಸ್ಸು ಹುಕ್ಕೆಯ ಮೇಲೆ ಹಾರಾಡಿತು. ಆ ಸ್ಥಿತಿಯನ್ನು ನನ್ನ ಮಾತುಗಳಿಗಿಂತ ಕುಮಾರವ್ಯಾಸನ ಪಾಠಾಂತರ ಮಾಡಿದ ಪದ್ಯವು ಚೆನ್ನಾಗಿ ಚಿತ್ರಿಸುತ್ತದೆ.

> ಹೊರೆಯ ಸಭಿಕರ1 ನೋಟ ಮೈಯಲಿ |
> ಹರಿದು ಬಳಲದು; ಚಿತ್ತ ಹುಕ್ಕೆಯ2 |
> ಧರಿಸಿ ಕುಸಿಯದು, ಕಿವಿಗಳಿಗೆ ಮೊಲ್ಲನಿಯ ಸವಿಸವಿದು |
> ಅರುಚಿಯಾಗದು; ನಾಸಿಕವು ಮೈ
> ಪರಿಮಳದ ಪೂರದಲಿ ಗಂಧಾಂ
> ತರವನರಿಯದು, ರಂಪವೇ3 ನೆನ್ನುವೆನು ಗುಡುಗುಡಿಯಾ||

(ಮೂಲದಲ್ಲಿ ಹೀಗಿದೆ— 1 ಸಖಿಯರ, 2 ಈಕೆಯ, 3 ನೆಂಬೆನು ನಿತಂಬಿನಿಯಾ)

ತರುವಾಯ ಚಿಲುಮೆ ಅಡಿ ತಂಬಾಕು, ಮೇಲಕ್ಕೆ ಕೆಂಗೆಂಡ, ತುಂಬಿ ಅಣಿಮಾಡಿದ್ದ ಆ ಹುಕ್ಕೆಯನ್ನು ಒಬ್ಬೊಬ್ಬರೇ ಕ್ರಮವಾಗಿ ಸೇದಿ ಮುಂದರಿಸುತ್ತ ಸುತ್ತಲೂ ಸಾಗಿಸಿದರು. ಮೊದಲು ಗುಡಿಗುಡಿ ವಿದ್ಯೆ ಚೆನ್ನಾಗಿ ಬಲ್ಲವರು ಕೂತಲ್ಲಿ ನಳಿಗೆ ತುದಿಯನ್ನು ಹೊರತುಟಿಗೆ ಮುಟ್ಟಿಸಿ ಕುಟುರ್ ಕುಟುರೆಂದು ಒಳಗಾಳಿಯನ್ನು ಒಂದೆರಡು ಸಲ ಗುಟುಕಿಸಿ,

ಬಳಿಕ ಶ್ವಾಸದವರೋಹಣಾರೋಹಣಗಳನ್ನು ಸರಿ ನೋಡಿ, ಹೊಕ್ಕುಳಿನ ಕೆಳಗಿಂದ ಹೊಳ್ಳೆಗಳ ತುದಿವರೆಗೆ ಹೊಗೆ ತುಂಬು ವಂತೆ ಒಂದೇ ಸವನೆ ಎಳೆದು, ಅರೆಕಣ್ಮುಚ್ಚಿ, ಮೂಗಿಂದ ಬಾಯಿಂದ ಹೊಗೆ ಸುರಿದು ಅಷ್ಟಾಂಗಸಿದ್ಧಿಯ ಸಮಾಧಿಸ್ಥ ಯೋಗಿ ಎಂಬಂತೆ ಕಾಣುತ್ತಿದ್ದರು. ಸ್ವಲ್ಪವೇ ಅಭ್ಯಾಸವಿದ್ದ ಸರದಾರ ಸಭಿಕರು ಅನೇಕರು ತಮ್ಮ ಕೈಮುಷ್ಟಿಯಲ್ಲಿ ಹುಕ್ಕಾ ನಳಿಗೆ ಬಚ್ಚಿಟ್ಟು, ಬಾಯಿಂದ ಮುದ್ದಿಟ್ಟು, ಮೂರೇ ಗುಟುಕು ಗಾಳಿಯನ್ನು ಒಳಕೊಂಡು, ನೀರಲ್ಲಿ ಗುಳ್ಳೆಗಳನ್ನು ಕಂಡು, ಹೊಗೆಯಿಂದ ಗಲ್ಲ ಹಿಗ್ಗಿಸಿ, ಕಣ್ಣು ಅರೆಮುಚ್ಚಿ, ಕಡಲ ನೆಗೆತಕ್ಕಾಗಿ ಸೊಂಟಕಟ್ಟಿದ ಹನುಮನಂತೆ ತೋರು ತ್ತಿದ್ದರು. ಹುಟ್ಟಿದಾರಭ್ಯ ಹುಕ್ಕಾ ಹೆಸರು ಗೊತ್ತಿರದವರು ತಮ್ಮ ಎರಡು ಅಂಗೈಗಳಿಂದ ಸವರಿ, ನಾಳದ ತುದಿಯನ್ನು ಹಲ್ಲುಗಳಿಂದ ಬಿಗಿಹಿಡಿದು, ಒಂದುಸುರು ಒಳಕೊಳ್ಳುವಷ್ಟ ರಲ್ಲೇ ದಮ್ಮುಕೆಮ್ಮು ಒಂದಾಗಿ, ಮುಳುಗುವ ದೋಣಿಯಲ್ಲಿ ಪಾಪಿಗಳ ಜತೆಯಲ್ಲಿದ್ದ ಪುಣ್ಯಾತ್ಮರಂತೆ ನೀರಿನ ಗುಟುಕು ಒಂದೊಂದು ಕುಡಿದು ತುಸು ಒರಗಿಕೊಳ್ಳುತ್ತಿದ್ದರು.

ಅನಂತರ ತಂಬಾಕಿನ ಮೂಲಸ್ಥಾನ, ಚರಿತ್ರೆ, ಗುಣಾ ವಗುಣಗಳ ವಿಷಯವಾಗಿ ಬೇರೆ ಬೇರೆ ಅಭಿಪ್ರಾಯಗಳು ಸಭೆಯ ಮುಂದೆ ಬಂದುವು. ತಂಬಾಕಿನ ಮೂಲಸ್ಥಾನವು ಭಾರತ ವರ್ಷವೆಂದೂ ಅದರ ಉಲ್ಲೇಖವನ್ನು ಬಾಣಭಟ್ಟನ ಕಾದಂಬರಿ ಮಾಡಿದೆಯೆಂದೂ ಒಬ್ಬರ ಹೇಳಿಕೆ; ಆ ಸಂಸ್ಕೃತ ಕವಿಯು ಉಲ್ಲೇಖಿಸಿದ ತಮಾಕು, ಶಬ್ದಕ್ಕೂ ತಂಬಾಕಿಗೂ ಏನೇನೂ ಸಂಬಂಧವಿಲ್ಲವೆಂದು ಮತ್ತೊಬ್ಬರ ಖಂಡನೆ; ತಂ ಬಾಕು ಎಂಬುದು ಮುಸಲ್ಮಾನರೊಡನೆಯೇ ಈ ದೇಶಕ್ಕೆ ಬಹು ಕಾಲದ ಹಿಂದೆಯೇ ಒಳನುಗ್ಗಿದ ಸುವಾಸಿತವಾದ ಸಿದ್ಧೌಷಧವೆಂದು ಒಬ್ಬ ನವಾಬರ ಕಕ್ಷಿ; ಅದು ಮಾನವ ಹಾನಿಗಾಗಿ ಮಾಡಲ್ಪಟ್ಟ ಸೈತಾನನ ಪ್ರತಿ ಸೃಷ್ಟಿಯೆಂದು ಮೌಲ್ವಿಗಳ ಪ್ರತಿಕಕ್ಷಿ—ಈ ಪ್ರಕಾರವಾದ ವಿತಂಡವಾದ ಗಳಲ್ಲಿ ತೂಗುತ್ತಿದ್ದ ಅಕಬರ ಬಾದಶಹನ ಮನಸ್ಸು ದಡ ಕಟ್ಟುವುದಕ್ಕಾಗಿ ಅಬುಲ್ ಫಜಲನ ಕಡೆಗೆ ವಾಲಿತು. ಕೂಡಲೇ ಮಂತ್ರಿಯು ಎದ್ದು ನಿಂತು ಹೀಗೆ ಬಿನ್ನೈಸಿದನಂತೆ: 'ತಂಬಾಕು ಹಿಂದುಸ್ಥಾನದಲ್ಲಿ ಹುಟ್ಟಿದ್ದಲ್ಲವೆಂದು ನನ್ನ ಅಭಿ ಪ್ರಾಯ. ಆ ಗಿಡವು ಅರಬಸ್ಥಾನದ್ದೂ ಅಲ್ಲ. ಅದು ಅಮೇ ರಿಕಾ ಖಂಡದ ದ್ವೀಪಗಳಲ್ಲಿ ಇದ್ದವೆಂದು ನಾನು ಕೇಳುತ್ತೇನೆ. ಸುಮಾರು ನೂರು ವರ್ಷಗಳ ಹಿಂದೆ (ಕ್ರಿಸ್ತಶಕ ೧೫೦೦) ಯುರೋಪ ಖಂಡದಲ್ಲಿ ಇದರ ಮಾತೇ ಗೊತ್ತಿರಲಿಲ್ಲವಂತೆ. ಅದನ್ನು ಮೊತ್ತಮೊದಲು ಕಂಡವನು ಕೊಲಂಬಸನು, ಸಾನ್ ಸಾಲ್ವದರ್ ದ್ವೀಪದಲ್ಲಿ; ಯುರೋಪು ಖಂಡಕ್ಕೆ ಅದನ್ನು ಮೊದಲು ಕೊಂಡುಹೋದವರು ಪೋರ್ಚುಗೀಸರು; ಅವರೇ ಅದನ್ನು ಹಿಂದುಸ್ಥಾನದಲ್ಲಿಯೂ ಹರಡಿದವರು. ಈ ಪದಾ ರ್ಥವು ದಿಲ್ಲಿಗೆ ಬಂದು ಇನ್ನೂ (ಕ್ರಿಸ್ತಶಕ ೧೬೦೦) ಒಂದು ವರ್ಷವಾಗಿಲ್ಲ; ಅಷ್ಟರಲ್ಲಿ ಇದರ ಪ್ರತಾಪವು ಎಷ್ಟೆಂಬುದು ಇಂದಿನ ಒಡ್ಡೋಲಗದ ಪರಿಸ್ಥಿತಿಯಿಂದ ಮಹಾಸ್ವಾಮಿ ಯವರ ಚಿತ್ತಕ್ಕೆ ವೇದ್ಯವಾಗಿರಬಹುದು.

ಅಬುಲ್ ಫಜಲನ ಮಾತು ಮುಂದುವರಿಯುವಷ್ಟ ರಲ್ಲಿ ಬಾದಶಹನ ಕಣ್ಣು ಇನ್ನೊಂದು ಕಡೆಗೆ ತಿರುಗಿತು. ಅದನ್ನು ಕಂಡು ಬೀರಬಲನು ಮುಂದೆ ಬಂದು, ಮುಜರೆ ಮಾಡಿ ಮಾತಾಡಿದನಂತೆ.

"ತಂಬಾಕು ಪ್ರಾಚೀನ ಕಾಲದಿಂದ ಅಮೇರಿಕದ ದ್ವೀಪಗಳಲ್ಲಿಯ ಕಾಡುಜನರು ಸೇದುತ್ತಿದ್ದರೆಂದು ನಾನೂ ಕೇಳಿದ್ದೇನೆ. ತಂಬಾಕಿನ ಗಿಡಕ್ಕೆ ಅವರ ಕಾಡು ಮಾತಿನಲ್ಲಿ 'ಕೊಹಿಬೆ' ಎಂದು ಹೆಸರು. ಈ ಕೊಹಿಬೆಯ ಸೊಪ್ಪಿನ ಹೊಗೆಯನ್ನು ಅವರು ಸೇದುವ ರೀತಿ ಕೇಳತಕ್ಕದ್ದಿದೆ. ಆ ಜನರು ಹೊಗೆಯನ್ನು ನಮ್ಮಂತೆ ಬಾಯಿಂದ ಸೇದದೆ, ಮೂಗಿ ನಿಂದ ಸೇವಿಸುವರು. ಹೀಗೆ ಸೇದುವುದಕ್ಕಾಗಿ, ಚಿಕ್ಕ ಹಂಸ ಪಾದದ ಆಕಾರದ ಎಲೆಗಳನ್ನು ಮಡಚಿಮಾಡಿದ, ಗೇಣು ದ್ದದ, ಒಂದು ಟೊಳ್ಳು ಕೊಳವೆ ಇದೆ. ನಳಿಗೆಯ ಮೂಲಕ ವಾಗಿ, ಅಗ್ಗಿಷ್ಟಿಕೆಯ ಬೆಂಕಿಯಿಂದ ಮೇಲೇರುವ ಹೊಗೆ ಯನ್ನು ಒಳಕೊಳ್ಳುವರು. ಹೇಗೆಂದರೆ! ಈ ನಳಿಗೆಯು ಚೇಳಿನ ಆಕಾರವಾಗಿದೆ; ಅದರ ಬಾಲದ ಕಡೆಯನ್ನು ಹೊಗೆಗೆ ಮುಟ್ಟಿಸಿ, ಮುಂದುಗಡೆಯ ಮುಳ್ಳುಗಳಂತಿರುವ ಜೋಡು ಕವಲುಗಳನ್ನು ತಮ್ಮ ಮೂಗಿನ ಎರಡೂ ಸೊಳ್ಳೆಗಳೊಳಗೆ ತೂರಿಸಿಕೊಂಡು, ಶ್ವಾಸವನ್ನು ಎಳೆದುಕೊಳ್ಳುವರು. ಈ ಎಲೆಯ ಚಿಲುಮೆಗೆ ಅವರ ಭಾಷೆಯಲ್ಲಿ 'ತಬಾಕೊ' ಎಂದು ಹೆಸರು. ನಮ್ಮಲ್ಲಿ ಗುಡು ಗುಡಿ ಸೇದುವವರು "ಬಂಗಿಯನು ಕೊಚ್ಚಿ, ಮಣ್ಣಿನ ಚಿಲುಮಿಯಲ್ಲಿ ಹೊಚ್ಚಿ, ಕಿಚ್ಚನ್ನು ತಂದ್ನು ಹಚ್ಚಿ" ಹೊಗೆಯನ್ನು ಬಾಯಿಂದ ಕುಡಿದು ಮೂಗಿಂದ ಹೊರ ಬಿಡುವಂತೆ, ಅಲ್ಲಿಯ ಕಾಡುಗರು ಕೆಂಡದ ಮೇಲೆ ಕೊಹಿ ಬೆಯ ಸೊಪ್ಪನ್ನು ತೋರಿಸಿ ಹೊಗೆಯನ್ನು ಆ 'ತಬಾಕೊ' ಮೂಲಕ ಮೂಗಿಂದ ಒಳಕೊಂಡು ಬಾಯಿಂದ ಬಿಟ್ಟುಬಿಡು ವರು. 'ತಬಾಕೊ' ಎಂದರೆ ಚಿಲುಮಿ, ಸೊಪ್ಪಲ್ಲ. ಮೊದಲು ತಬಾಕೊ--ಸೇದುವುದು ಎಂದರೆ ಚಿಲುಮಿಯಿಂದ ಸೇದುವು ದೆಂಬ ಅರ್ಥವಿತ್ತು, ಹೊಗೆಸೊಪ್ಪನ್ನು ಸೇವಿಸುವುದು ಎಂಬ ಅಭಿಪ್ರಾಯವುಂಟಾದದ್ದು ಪೋರ್ಚುಗೀಸ ಭಾಷೆಯಿಂದ, ಮತ್ತು ಆ ಭಾಷೆಯಿಂದಲೇ ಆ ತಬಾಕು ಶಬ್ದವು ಫಾರಶಿ ಭಾಷೆಗೂ ಉರುದು ಭಾಷೆಗೂ ಬಂದು ಸೇರಿ ತಂಬಾಕು ಆಗಿದೆ."

"ತಂಬಾಕಿನ ಸೇವನೆಯ ವಿಷಯ ಏನು ಹೇಳುವು ದಿದೆ?" ಎಂದು ಬಾದಶಹನು ಕೇಳಿದನಂತೆ.

ಈ ಪ್ರಶ್ನೆ ಬೀರಬಲನ ಪ್ರಾಣಕ್ಕೆ ಬಂತು. ಏಕೆಂದರೆ ಬಾದಶಹನಿಗೆ ತಂಬಾಕಿನ ಮೇಲೆ ಮೆಚ್ಚುಗೆ ಇರಲಿಲ್ಲ; ಆದರೆ ಸಭಿಕರು ಅನೇಕರಿಗೆ ಅದರಲ್ಲಿ ಇಷ್ಟ. ತಂಬಾಕು ಗ್ರಾಹ್ಯ ವೆಂದರೆ ಬಾದಶಹನ ಮನಸ್ಸಿಗೆ ಅಸಮಾಧಾನ; ಅಗ್ರಾಹ್ಯ ವೆಂದರೆ ಬಹುಮತಕ್ಕೆ ವಿರೋಧ. ಈ ಅವಸ್ಥೆಯಲ್ಲಿ ಬೀರ ಬಲನು ನೆರೆ ತುಂಬಿದ ಹೊಳೆಯಲ್ಲಿ ಅಳಿವೆದೋಣಿಯಂತೆ ಹಿಂಜರಿಯುವುದಕ್ಕೂ ಮುಂಜರಿಯುವುದಕ್ಕೂ ಆಗದೆ, ಇದ್ದಲ್ಲೇ ಒಂದು ನಿಮಿಷ ಕದಲದಿದ್ದು, ತರುವಾಯ ಹೀಗೆಂ ದನಂತೆ:—

"ತಂಬಾಕು! ತಂಬಾಕನ್ನು ಕಂಡಲ್ಲಿ ಅದರ ತಲೆಗೆ ಬೆಂಕಿ ಹಾಕಿ, ಹೊಗೆ ನೋಡಿ, ಸುಟ್ಟೇ ಬಿಡಬೇಕು ಬುದ್ಧಿ!"

"ಸರಿ! ಸರಿ! ಅದೇ ನಮ್ಮ ಅಭಿಪ್ರಾಯ!" ಎಂದು ಹೇಳಿ ಬಾದಶಹನು ಒಡ್ಡೋಲಗವನ್ನು ಕಳೆದು ಒಳಕ್ಕೆ ಹೋದನಂತೆ.

ಬೀರಬಲನ ಮೇಲಿನ ಮಾತುಗಳು ಯಾವ ಅರ್ಥ ವನ್ನು ಕೊಡುತ್ತವೋ ಎಂಬುದು ಅವನಿಗೇ ಗೊತ್ತು! ಆದರೆ ಅವನ ಆ ತೀರ್ಪು ಮಾತ್ರ ಇತ್ತಂಡದವರಿಗೂ ಸಮಾಧಾನ ಕರವಾಯಿತು; ಮುಂದೆ ಉಭಯತರ ಮತ ಸಮರ್ಥನಕ್ಕೂ ಆ ತೀರ್ಮಾನವೇ ಶ್ರುತಿವಾಕ್ಯವಾಯಿತು. ಹೊಗೆಸೊಪ್ಪು ನಿಷಿದ್ಧವೆನ್ನುವವರು ಅದನ್ನು ಹಗೆಯೆಂದು ಎಣಿಸಿ ಅದರ ಹುಟ್ಟನ್ನು ಅಡಗಿಸಿಬಿಡಬೇಕೆನ್ನುವುದಕ್ಕೂ, ಗ್ರಾಹ್ಯವೆನ್ನುವ ವರು ಯಥಾರ್ಥವಾಗಿ ತಂಬಾಕನ್ನು ಸುಟ್ಟು ಹೊಗೆ ನೋಡಿ ಬಿಡಬೇಕೆನ್ನುವುದಕ್ಕೂ ಬೀರಬಲನ **ಧೂಮ್ರಪತ್ರದ ತತ್ತ್ವಮಸಿ** ವೇದವಾಕ್ಯವಾಯಿತು.

ಆಸ್ಥಾನದಲ್ಲಿ ಆದ ತಂಬಾಕಿನ ಚರ್ಚೆಯಲ್ಲಿ ಸಂಸ್ಕೃತ ಧೂಮ್ರಪತ್ರ ಶಬ್ದದ ಪ್ರಯೋಗವೇ ಇಲ್ಲದಿರುವುದಕ್ಕೆ ಕಾರಣವಿತ್ತು. ಧೂಮ್ರಪತ್ರ ಎಂಬ ಹೆಸರು ತಂಬಾಕಿಗೆ ಬಿದ್ದದ್ದು ಅಕ್ಬರನ ಕಾಲಾನಂತರ, ಆತನ ಮೊಮ್ಮಗನ ಕಾಲ ದಲ್ಲಿ;ಆ ಹೆಸರನ್ನು ಅದಕ್ಕೆ ಇಟ್ಟವನು ರಘುನಾಥಪಂಡಿತನೆಂಬ ವಿದ್ವಾಂಸನು. ಇವನು ಶಿವಾಜಿಯ ಆಜ್ಞಾನುಸಾರವಾಗಿ ಆ ಕಾಲದ ರಾಜ್ಯ ವ್ಯವಹಾರದಲ್ಲಿದ್ದ ಫಾರಶಿ, ಅರಬಿ, ಉರುದು ಶಬ್ದಗಳ ಬದಲು ಸಂಸ್ಕೃತ ಶಬ್ದಗಳನ್ನು ಹುಡುಕಿ ತಂದು, ಮಾಡಿಕೊಂಡು ಒಟ್ಟುಗೂಡಿಸಿದ 'ರಾಜ್ಯ ವ್ಯವಹಾರಕೋಶ' ಎಂಬ ನಿಘಂಟುವಿನಲ್ಲಿ ತಂಬಾಕಿಗೆ 'ಧೂಮ್ರಪತ್ರ'ವೆಂದೂ ಗುಡುಗುಡಿಗೆ 'ಧೂಮ್ರಯಂತ್ರ'ವೆಂದೂ ನಾಮಕರಣಮಾಡಿ ದನು. ಧೂಮ್ರಪತ್ರವು ಹೊಗೆ ಸೊಪ್ಪು ಎಂಬ ಕನ್ನಡ ಮಾತಿನ ಸಂಸ್ಕೃತ ಕಲ್ಪನೆ ಎಂಬದು ಸ್ಪಷ್ಟವಿದೆ.

ಇಷ್ಟೆಲ್ಲಾ ಕತೆಡು ಕಥೆಯಿಂದ ಹೊರಬೀಳುವ ಅಂಶವು ಇಷ್ಟೆ. ತಬಾಕು ತಂಬಾಕುಗಳಲ್ಲಿ ಮೂಲದಲ್ಲಿದ್ದ ರೂಪವು ತಬಾಕೊ ಎಂಬುದು; ಇದರಲ್ಲಿ ಅನುಸ್ವಾರವಿಲ್ಲ; ಇದು ಹಿಂದುಸ್ಥಾನದ ಭಾಷೆಗಳಲ್ಲಿ ಸೇರಿಕೊಳ್ಳುತ್ತಲೇ ತಬಾಕು ಆಗಿ, ತಂಬಾಕು ಆಗಿ ನಿಂತುಬಿಟ್ಟಿತು. ನಮ್ಮ ಜಿಲ್ಲೆಯವರು ಒಕ್ಕೊಬರ ಎಂಬದನ್ನು ಒಕ್ಕೊಂಬರ ಎಂದೂ, ಚಿಕ್ಕಮಗ ಳೂರು ಎಂಬದನ್ನು ಚಿಕ್ಕಮಂಗಳೂರು ಎಂದೂ ಸಾದೃಶ ಭ್ರಮೆಯಿಂದ (ಇದು ಹಿಂದೆ ವಿವರಿಸಲಾಗಿದೆ.) ಉಚ್ಚರಿಸು ವರೆಂದು ಹಿಂದೆ ಹೇಳಲಾಗಿದೆ. ಆದರೆ ತಬಾಕು ಇದ್ದದ್ದು ತಂಬಾಕು ಆದದ್ದು ಈ ಅನುಕರಣ ಪ್ರೀತಿಯಿಂದಲೇ ಎಂದು ತಿಳಿಯಲಾಗದು. ಸುಖೋಚ್ಚಾರಣೆಗಾಗಿ ಜನರು ಅನುಸ್ವಾರ ವನ್ನು ಬೆರೆಸುವುದೂ ಉಂಟು, ಬಿಡುವುದೂ ಉಂಟು. ಜನರ ಭಾಷೆಯ ವರ್ಣಮಾಲೆಯಲ್ಲಿತಕ್ಕಅಕ್ಷರಗಳಿಲ್ಲದಿದ್ದರೆ, ಕವಿಗಳಿಗೆ ಬೇಕಾದಂತೆ ಪ್ರಾಸಾಕ್ಷರಗಳು ದೊರೆಯದಿದ್ದರೆ, ಲಿಪಿಕ್ರಮದಲ್ಲಿ ಭೇದಗಳಿದ್ದರೆ ಇನ್ನು ಇತರ ಕಾರಣಗಳಿಂದ ಶಬ್ದದಲ್ಲಿ ಅನುಸ್ವಾರವು ಪ್ರತ್ಯಕ್ಷವಾಗುವುದೂ ಉಂಟು, ಮಾಯವಾಗುವುದೂ ಉಂಟು. ಹೀಗೆ ಮೂಲರೂಪವು ಸಬಿಂದುಕವೋ ಅಬಿಂದುಕವೋ ಆಗಿ ಮಾರ್ಪಡುವುದಕ್ಕೆ ಕಾರಣಗಳನ್ನು ಹುಡುಕುವವನು ಮೊದಲು ಅನೇಕಾನೇಕ ಉದಾಹರಣೆಗಳನ್ನು ಸಂಗ್ರಹಿಸಿ, ವರ್ಗೀಕರಿಸಿ, ಪರೀಕ್ಷಿಸಿ, ವಿವೇಚಿಸಬೇಕು. ಇದು ಹೇಗೆಂಬುದನ್ನು ಕೆಳಗಿನ ಪಟ್ಟಿ ಯಲ್ಲಿ ಸ್ವಲ್ಪ ತೋರಿಸಲಾಗಿದೆ. ಈ ಪಟ್ಟಿಯಲ್ಲಿ ನಮ್ಮ ಜಿಲ್ಲೆ ಯ ಮೂರು ಭಾಷೆಗಳಿಂದ ಮಾತ್ರ ಶಬ್ದಸಂಗ್ರಹಮಾಡಿದೆ. ಜತೆಯಲ್ಲಿ ಇನ್ನೂ ಬೇರೆ ಭಾಷೆಗಳ ಶಬ್ದಗಳಿದ್ದರೆ ಒಳ್ಳೆಯದು.

| ಹೊಸಗನ್ನಡ | ಹಳಗನ್ನಡ | ತುಳು | ಕೊಂಕಣಿ. |
|---|---|---|---|
| ಒರಟು | *ಒರಂಟು | ಒರಂಟು | *ಒರಟು |
| ಗೊರಟು | ಗೊರಂಟು, ಗೊರಟು | ಕೊರಂಟ | |
| ಹಿತ್ತಿಲು | ಪಿಂತಿಲ್ | ಬಿತ್ತಿಲ್ | ಹಿತ್ತಲ |
| ತೂಬು | ತೂಂಬು | ತೂಂಬು | ತೂಂಬು |
| ನೋಹಿ, ನೋಪಿ | ನೋಂಪಿ | ನೋಂಪು | ನೋಂಪಿ, ನೋಪಿ |
| ನೆನಪು | — | ನೆಂಪು | ನೆಂಪು,ನೆಪ್ಪು |
| ರೆಕ್ಕೆ | ಎರಂಕೆ | ರೆಕ್ಕೆ | ರೆಕ್ಕೆ |
| ಅಡಗು | ಅಡಂಗು | ದೆಂಗ | — |
| ಕುಟ್ಟಿ | ಕುಟ್ಟಿ | ಕುಂಟಿ, ಕುಟ್ಟಿ, | ಕುಂಟಿ ಕುಟ್ಟಿ |
| ದೋಟಿ | — | ದೋಂಟಿ, ದೋಟಿ | ದೋಂಟಿ, ದೋಟಿ |
| ಹೂಬೆ(ಬಾಳೆ ಹೂ) | — | ಪೂಂಬೆ | |

*ಮುನ್ನಿನೊರಂಟು ಬೇಡ ಮಗನೇ ಕೈಕೊಳ್‌ಧರಾ ಭಾರಮಂ (ಪಂ. ಭಾರತ ೧. ೮೧.)

| | | | |
|---|---|---|---|
| **ಬೊಡ್ಡಿ** | — | — | ಬೊಂಡ್ಡಿ(ಬಾಳೆ ಹೂ) |
| **ಅಳಕು(ಅಳಿ= ಮಜ್ಜಿಗೆ?)** | | ಅಳೆಂಕ್ | — |
| **ಕಬ್ಬು** | ಕರ್ವು | *ಕಂಬುರ್ | ಕಬ್ಬು |
| **ಕೊಕ್ಕೆ** | — | ಕೊಕ್ಕೆ | ಕೊಂಕೆ, ಕೊಕ್ಕೆ |
| **ಮಾಡು** | ಮಾಳ್ಪು | ಮಳ್ಪು, ಮಂಪು | — |
| ಹಲವರು | ಪಲಂಬರ್ | — | — |
| ಇದು | ಇದು | ಇಂದು | — |
| ಉರು | ಉದು | ಉಂದು | — |
| ಅವಗೆ | ಅವಂಗೆ | ಅಯೇಗ್ | — |
| ಮರಗಳು | ಮರಂಗಳ | ಮರಗಳ | |

(*ತಮಿಳು= ಕರುಪ್ಪು ಮತ್ತು ಕರುಂಬು)

ಮೇಲಿನ ಪಟ್ಟಿಯ ಪರೀಕ್ಷೆಯಿಂದ ಕೆಲವು ಸಂಗತಿಗಳು ಬಯಲಿಗೆ ಬರುತ್ತವೆ. ಹಳೆಗನ್ನಡ ಶಬ್ದಗಳಲ್ಲಿದ್ದ ಬಿಂದುವು ಹೊಸಗನ್ನಡ ರೂಪಗಳಲ್ಲಿ ಅದೃಶ್ಯವಾಗುತ್ತದೆ; ಅದು ತುಳು ರೂಪಗಳಲ್ಲಿ ಮಾತ್ರ ಹಾಗೆಯೇ ನಿಲ್ಲುತ್ತದೆ. ಇದರಿಂದ ಆ ಶಬ್ದಗಳು ಮೂಲದಲ್ಲಿ **ಬಹುಶಃ** ಅನುಸ್ವಾರ ಯುಕ್ತವಾಗಿ ಇರಬಹುದೆಂಬ ಹಾಗೆ ತೋರುತ್ತದೆ. **ಬಹುಶಃ** ಎಂದು ಏಕೆ ಹೇಳಿದೆನೆಂದರೆ, ಕೆಲವೊಂದು ವೇಳೆ ಮೂಲಶಬ್ದದಲ್ಲಿಲ್ಲದ ಅನುಸ್ವಾರಗಳನ್ನು ತುಳು ಕೊಂಕಣಿಗಳು ಅದರಲ್ಲಿ ತಂದುಹಾಕಲೂ ಬಹುದು. ಹೇಗೆಂದರೆ: ಹೊಸಗನ್ನಡ **ಕಬ್ಬು**, ಹಳಗನ್ನಡ **ಕರ್ವು**, ತುಳು **ಕಂಬುರ್**,—ಈ ಮೂರು ರೂಪಗಳಲ್ಲಿ ತುಳು ಮಾತ್ರ ಅನುಸ್ವಾರವನ್ನು ತೋರಿಸುತ್ತದೆ. ಈಗ ಕೊಂಕಣಿಯಲ್ಲಿ 'ಕಬ್ಬಾಕರ್ವೊ' ಎಂದರೆ ಕಬ್ಬಿನ ತುಂಡು ಎಂಬರ್ಥವುಳ್ಳ ಮಾತುಂಟಷ್ಟೆ. ಈ **'ಕರ್ವೊ'** ಎಂಬ ಮಾತು ತುಂಡು ಎಂಬರ್ಥದಲ್ಲಿ ಕಬ್ಬಿನ ವಿಷಯದಲ್ಲಿ ಮಾತ್ರ ಕೊಂಕಣಿಯಲ್ಲಿ ಬರುತ್ತದೆ. ಈ ಕೊಂಕಣಿಯ **ಕರ್ವೊ** ಹಳಗನ್ನಡದ ಕರ್ವು ಶಬ್ದವೇ ಎಂದು ಹೇಳಬಹುದಾದ್ದರಿಂದ ಕಬ್ಬು ಎಂಬ ಶಬ್ದದಲ್ಲಿ ಮೊದಲು ಅನುಸ್ವಾರ ವಿರಲಿಲ್ಲವೆಂದು ನಿಶ್ಚಯಿಸಬೇಕಾಗುತ್ತದೆ.ಹೀಗೆಯೇ ವಿಚಾರ ಮಾಡಿದರೆ, ತುರಿಸು ಎಂಬದಕ್ಕೆ ತುಳುವಿನಲ್ಲಿಯ **ಕಿಂಬುರ್** ಶಬ್ದದಲ್ಲಿ ಅನುಸ್ವಾರವಿದೆ. ಈ **ಕಿಂಬುರ್** ಶಬ್ದದ ಸರಿಯಾದ ರೂಪವು ಹೊಸಗನ್ನಡದಲ್ಲಿಯೂ ಹಳಗನ್ನಡದಲ್ಲಿಯೂ ಈಗ ಕಾಣುವುದಿಲ್ಲವಾದರೂ, ಕಿಱು, ಕಿಱಕು, ಕೀಱು, ಗೀಱು ಎಂಬ ಕನ್ನಡ ಶಬ್ದಗಳು ಆ **ಕಿಂಬುರ್** ಶಬ್ದಕ್ಕೆ ಅರ್ಥದಲ್ಲಿ ಸಾಕಷ್ಟು ಸಮೀಪವಿವೆ. ಕೊಂಕಣಿಯ **ಕೆರಿಪಿ** ಎಂಬದಕ್ಕೂ ತುರಿಸು ಎಂಬ ಅರ್ಥವಿರುವುದರಿಂದ **'ಕಿಂಬುರ್'** ಪದದಲ್ಲಿಯ ಅನುಸ್ವಾರವು ತುಳು ಭಾಷೆಯು ಸುಲಭೋಚ್ಚಾರಣೆಗಾಗಿ ಹಿಡಿದುಕೊಂಡ ಊರೆಕೋಲು ಎಂದು ಅನುಮಾನಿಸಬೇಕಾಗಿದೆ.

ಶಬ್ದಗಳನ್ನು ಬೇರೆ ಬೇರೆ ಕ್ರಮಗಳಲ್ಲಿ ವರ್ಗೀಕರಿಸಿ ಪರೀಕ್ಷಿಸುತ್ತಾ ಇದ್ದರೆ, ಒಮ್ಮೆ ಬಿಡಿಸಲಾಗದ ಪ್ರಶ್ನೆಗಳನ್ನು ಮತ್ತೆ ಬಿಡಿಸುವುದಕ್ಕೆ ಸುಲಭವಾಗುವುದುಂಟು. ಕೊಂಕಣಿಯಲ್ಲಿ ಚೋರಿಮಾಡುವುದಕ್ಕೆ 'ಖಾಂಪಚೆ'ಎನ್ನುವರಷ್ಟೆ. ಈ 'ಖಾಂಪ' ಎಂಬ ರೂಪವು ನನ್ನಿಂದ ಬಿಚ್ಚಲಾಗದ ಒಗಟೆಯಾಗಿತ್ತು. ಶಿವಳ್ಳಿಯವರ ತುಳುವಿನ ಶಬ್ದವಾದ 'ಮಂಪು' ಎಂಬುದು 'ಮಳ್ಪು' 'ಮಾಳ್ಪು' ಎಂಬದರ ರೂಪವೆಂದು ಮೇಲಿನ ಪಟ್ಟಿಯಿಂದ ಗೊತ್ತಾಗುತ್ತಲೇ ಕೊಂಕಣಿಯ 'ಖಾಂಪ' ಎಂಬುದು ಕನ್ನಡದ 'ಕಳ್ವು' (ಕಳವುಮಾಡು) ಎಂಬುದರ ರೂಪಾಂತರವೆಂದು ಊಹಿಸಲು ಸಾಧ್ಯವಿದೆ.

ಹೊಸಗನ್ನಡವು ಮೂಲಶಬ್ದದಲ್ಲಿ ಇಲ್ಲದ ಅನುಸ್ವಾರವನ್ನು ಮತ್ತೆ ಬೆರಸಿ ಬಿಡುವುದನ್ನು ಕೆಳಗಿನ ಪಟ್ಟಿಯ ಉದಾಹರಣೆಗಳಲ್ಲಿ ಕಾಣಬಹುದು.

| ಹೊಸಗನ್ನಡ | ಹಳಗನ್ನಡ | ತುಳು | ಕೊಂಕಣಿ |
|---|---|---|---|
| ಹಂಚು | ಪರ್ಚು | ಪಟ್ಟು | — |
| ಸುಂಟುರೆ | ಸುಟ್ಟುರೆ | — | — |
| ಹೆಂಟೆ | ಹೆಟ್ಟೆ | — | ಹೆಟ್ಟೊ |
| ಒಂಟೆ | ಒಟ್ಟೆ | ಒಂಟೆ | ಊಟ |
| ಬಾಸಿಂಗ | ಬಾಸಿಗ | ಬಾಸಿಂಗ | ಬಾಶಿಂಗ |
| ಬಂತು | ಬಂದುದು | ಬತ್ಂಡ್ | — |
| ನಿಂತು, ನಿತ್ತು | ನಿಲ್ತು | — | — |
| ಗೊಂತು, ಗೊತ್ತು | ಗೊತ್ತು? | ಗೊತ್ತು | ಗೊಂತು,ಗೊತ್ತು |

ಮೇಲಿನ ಶಬ್ದಗಳ ಹಳಗನ್ನಡ ರೂಪಗಳಲ್ಲಿ ಅನುಸ್ವಾರವಿಲ್ಲ. ಆದರೆ ಹೊಸಗನ್ನಡ ರೂಪಗಳಲ್ಲಿದೆ. ಒಂದು ಶಬ್ದವು ಆದಿಯಲ್ಲಿ ಅಬಿಂದುಕವೋ ಸಬಿಂದುಕವೋ ಎಂದು ಕಂಡು ಹಿಡಿಯುವುದಕ್ಕೆ ಪೂರ್ವ ಕವಿಗಳ ಪ್ರಯೋಗಗಳು ಬಹಳ ಸಹಾಯಕಗಳಾಗುತ್ತವೆ. ಬೆಂಕಿ ಎಂಬ ಶಬ್ದವು ನಮಗೆ ತಿಳಿಯದುದಲ್ಲವಷ್ಟೆ, ಹಳಗನ್ನಡದಲ್ಲಿ 'ಬೆಂಕೆ' ಎಂದಿದೆ. ಕೊಕ್ಕೆ, ಕೊಂಕೆ ಎಂಬಲ್ಲಿ ಒಂದು ಕಡೆಯಲ್ಲಿ ಮಾತ್ರ ಅನುಸ್ವಾರವು ಕಿವಿಗೆ ಹೊಡೆಯುತ್ತದೆ. 'ಕೊಂಕೆ' ಎಂಬದು ಆದಿಯಲ್ಲಿ 'ಕೊಕ್ಕೆ' ಎಂದಿದ್ದಂತೆ,'ಬೆಂಕಿ' ಎಂಬುದು 'ಬೆಕ್ಕೆ' ಎಂದು ಇರಬೇಕೆಂದು ಏಕೆ ಅನುಮಾನಿಸಬಾರದು? ಈ ಪ್ರಶ್ನೆಯನ್ನು ಮನಸ್ಸಿನಲ್ಲಿ ಇಟ್ಟುಕೊಂಡರೆ, ಒಂದಲ್ಲ ಒಂದು ದಿನ ನಮ್ಮ ಸಂಶಯ ನಿವೃತ್ತಿಯಾಗುತ್ತದೆ.

'.... .... .... ಬಯ್ಕೆಬೇಟೆ
ಕಾಱನ ಬಗೆಗಿಲ್ಲ ಬೆಕ್ಕೆಗೊಳಗಪ್ಪುದು . . . .'

(ಪಂಪಭಾರತ ೪. ೧೦೫)

ಇಲ್ಲಿ ಬೆಕ್ಕೆ ಎಂಬದಕ್ಕೆ ಉರಿ, ತಾಪ ಎಂಬರ್ಥ. ಕಿಟ್ಟೆಲ ನಿಘಂಟುವಿನಲ್ಲಿ 'ಬೆಕ್ಕೆ' ಇಲ್ಲ, 'ಬೆಂಕಿ' ಇದೆ;

ಬೆಂಕಿ ಶಬ್ದದ ಮೂಲವು ಯಾವುದೆಂದು ಅದರಲ್ಲಿ ಹೇಳಿಲ್ಲ. ಈಗ ಬೆಂಕಿ, ಬೆಕ್ಕೆ ಇವೆರಡೂ ಒಂದೇ ಎಂದಾದ ಮೇಲೆ, ಬೇಯ್, ಬೇಯ್ಕೆ, ಬೆಕ್ಕೆ ಎಂಬದನ್ನು ಹೊರಡಿಸುವುದಕ್ಕೆ ಯಾರಿಗೂ ಕಷ್ಟವಿರಲಾರದು.

ಬಿಂದು ವಿಚಾರವನ್ನು ಕನ್ನಡದಲ್ಲಿ ಮಾತ್ರವೇ ಅಲ್ಲ, ಇತರ ಭಾಷೆಗಳಲ್ಲಿಯೂ ಕಾಣಬಹುದು.

| **ಸಂಸ್ಕೃತ** | **ಕನ್ನಡ** | **ಕೊಂಕಣಿ** | **ಮರಾಟಿ** |
|---|---|---|---|
| — | ಸೋಗು | ಸೋಗು | ಸೋಂಗು |
| — | ಚಿಪ್ಪು | ಶಿಂಪಿ | — |
| ಶಿಲ್ಪಿಕ | ಚಿಪ್ಪಿಗ | ಶಿಂಪಿ | ಶಿಂಪಿ |
| ಆಮ್ರ | — | ಆಂಬ | ಆಂಬ |
| ತಾಮ್ರ | ಚೊಂಬು | ತಾಂಬೆ | — |
| ಮಹತ್ತರ | — | ಮಾಂತಾರೊ | ಮಾತಾರಾ |
| ನೃತ್ಯ | — | ನಾಂಚ, ನಾಚ | — |
| ಲೇಪ | ಲೆಪ್ಪ | ಲೇಪು, ಲೇಂಪಿ | — |
| ಕೂರ್ಪರ | — | ಕೊಪ್ಪರು, ಕೆಂಪೊರು | — |
| ಭಿತ್ತಿ | — | — | ಭಿಂತಿ |
| ಕುಕ್ಕುಟ | ಕೋಳಿ | ಕುಂಕಡ | — |
| ಮರ್ಕಟ | ಮಕ್ಕಡ, ಮಂಕಡ, | ಮಾಂಕಡ | — |

ಇನ್ನು ಅರಬ್ಬಿ ಭಾಷೆಯ 'ಸುಕ್ಕಾನು' ಶಬ್ದವು ಕನ್ನಡದಲ್ಲಿ ಚುಕ್ಕಾಣಿ ಎನಿಸಿ, ಕೊಂಕಣಿಯಲ್ಲಿ 'ಸುಂಕಾಣ' ಎಂದು ಅನುಸ್ವಾರಯುಕ್ತವಾಯಿತು. ಪೋರ್ತುಗೀಸರಿಂದ ಇಂಗ್ಲಿಷಿಗೆ ಬಂದ (Pipe) ಪಾಯ್ಪ್ ಎಂಬುದು ಕನ್ನಡವಲ್ಲಿ ಪೀಪಾಯಿ ಆಗಿ, ಕೊಂಕಣಿಯಲ್ಲಿ ಪೀಂಪ ಎಂದು ಕಿವಿಗೆ ಇಂಪು ಕೊಟ್ಟಿತು. ಒಟ್ಟೀನೆಂದರೆ–ಮೊದಲು ಸಬಿಂದುಕಗಳಾಗಿದ್ದ ಶಬ್ದಗಳನ್ನು ಅಬಿಂದುಕಗಳಾಗಿ ಉಚ್ಚರಿಸುವುದು ಹೊಸಕನ್ನಡದ ಚಾಳಿ; ಆದರೆ ಅನುಸ್ವಾರವಿಲ್ಲದಲ್ಲಿ ಅನುಸ್ವಾರವನ್ನು ಸೇರಿಸಿಕೊಂಡು ಹೇಳುವುದು ಹೆಚ್ಚಾಗಿ ಕೊಂಕಣಿಯ ಅಭ್ಯಾಸ; ಇಷ್ಟುಮಾತ್ರ ಈ ದೃಷ್ಟಾಂತ ದರ್ಶನದಿಂದ ಹೊರಪಡುತ್ತದೆಂದು ಸಿದ್ಧಾಂತವಾಗಿ ಅಲ್ಲ, ಬರೀ ಸ್ಥೂಲವಾಗಿ ಹೇಳಬಹುದು. ತಬಾಕು ಶಬ್ದವನ್ನು ತಂಬಾಕು ಮಾಡಿದ್ದು ಕನ್ನಡವಲ್ಲ, ಕೊಂಕಣಿಯೂ ಅಲ್ಲ, ಪ್ರಾಯಶಃ ಕೊಂಕಣಿಯ ಸಮೀಪ ಬಂಧುಗಳಾದ ಮರಾಟಿ ಹಿಂದೀ ಭಾಷೆಗಳು.

ಈ ವಿಚಾರವನ್ನು ಮುಂದುವರಿಸುವ ಮೊದಲು ಇದೇ ವಿಷಯವಾಗಿ ಹಿಂದಿನ ಸಂಗತಿಯೊಂದು ನನ್ನ ಜ್ಞಾಪಕಕ್ಕೆ ಬರುತ್ತಿದೆ.

ಮಾಜಿ ಕಲೆಕ್ಟರ್ ಸಾಹೇಬರಿಗೆ ಆಫೀಸು ಗುಮಾಸ್ತರು ಬೇಕಾದವರೆಂದರೆ ಗಿಡ್ಡು ಕುಟ್ಟಯ್ಯ. ಇದು ಅವರಿಗೆ ಕೊಂಡಾಟದ ಮನೆ ಹೆಸರು; ಆದರೆ ಅವರಿಗೆ ಶಾಲೆಯ ಪಟ್ಟಿಯ ಹೆಸರು ಬಜೆಗಡ ಕೃಷ್ಣಯ್ಯ. ಕಲೆಕ್ಟರ್ ದೊರೆ ಅವರನ್ನು ಸಂಬೋಧಿಸುವುದು 'ಕುಟಯ' ಎಂಬೀ ಸಲುಗೆಯ ಹೆಸರಿಂದ. ಸಾಹೇಬರಿಗೆ ಕನ್ನಡ ಕಲಿಸುವ ಖಾಸಗಿ ಮುನಶಿಯ ಕೆಲಸಕ್ಕೂ ನಮ್ಮ ಕುಟ್ಟಯ್ಯನೇ! ನೋಡಲಿಕ್ಕೆ ಹೋದರೆ ಕುಟ್ಟಯ್ಯನವರು ಶಾವಿಗೆ ಮಣೆಯಂತೆ ನಿಜವಾಗಿ ಗಿಡ್ಡ. ಮೂವತ್ತು ವರ್ಷದ ಹರಿಯಕ್ಕೆ ಹೇಳಿದ ಎತ್ತರವಿಲ್ಲ. ಕಪ್ಪುರ ಬಾಳೆ ಬೆಳೆದಂತಿದ್ದ ಹೆಂಗಸಿಗೆ ಒಪ್ಪುವ ಒಡ್ಡಾಳಲ್ಲ. ಮನೆಯಲ್ಲಿ ಮಕ್ಕಳು ಇಲ್ಲದ್ದರಿಂದ, ದೊರೆಗಳ ಬೆನ್ನಿನ ಹಿಂದ ಕ್ಕೋಡಲು ಅವರಿಗೆ ಪುರುಸೊತ್ತು ಬೇಕಷ್ಟಿತ್ತು. "ಈಗಿನ ನಮ್ಮ ಕಲೆಕ್ಟರ್ ದೊರೆ! ಏನದು ಹೇಳಲಿ? ತಂದ 'ರಿಕಾರ್ಡಿ'ಗೆ ದಸ್ಕತು ಗೀಚುವ, ಮುತ್ತಿನ ಹಾಗೆಯೇ ಕನ್ನಡ ಬರೆಯುವ, ತಿಂಗಳ ಮೊದಲೇ ಮುನಶಿಯ ಸಂಬಳ ಕೊಟ್ಟೀ ತೀರುವ, ನಮ್ಮವರಂತೆ 'ಮಕ್ಕಳೆಷ್ಟು? ಗಂಡೊ? ಹೆಣ್ಣೊ? ಮಿಾನುಣಿ ಬ್ರಾಹ್ಮರು ನೀವೋ ಅವರೊ?' ಎಂಬೀ ಖಾಸಗಿ ಸಂಗತಿ ಕೇಳುವ ದೊರೆಗಳು ಎಂದರೆ ಇವರೇ ದೊರೆ; ಮಿಕ್ಕವರೆಲ್ಲಾ ಭೂಮಿಗೆ ಹೊರೆ. ಈ ಪರಿ ಹೊಗಳುವ ಕೃಷ್ಣಯ್ಯನವರಿಗೆ ಸಾಕಷ್ಟುದ್ದದ ನಾಲಗೆ ಇತ್ತು. ಹೊಗಳಿಕೆಗೊಂದು ಕಾರಣವಿತ್ತು. ಆಫೀಸ್ ಕೆಲಸಮಾಡಿದ್ದಕ್ಕೆ ತಪ್ಪದೆ ಸಿಕ್ಕುವ ಸಂಬಳ ಬೇರೆ, 'ಸರ್ಕಿಟ್' ಹೋದರೆ 'ಭತ್ತೆ' ಬೇರೆ, ಕನ್ನಡ ಪಾಠದ ಮಾಡಿದ್ದಕ್ಕೆ ತಿಂಗಳುಗಟ್ಟಲೆ ದೊರೆಗಳು ಕೊಡುವ ಆ ಪಗಾರು ಬೇರೆ.

ಹೀಗಿರಲು ಒಮ್ಮೆ ಕುಟ್ಟಯ್ಯ ಐದುದಿನ ರಜೆಪಡೆದು ಕುಂಬಳೆಗೆ ಹೋದಾಗ, ದೊರೆಗೆ ಕನ್ನಡ ಹೇಳಿಕೊಡಲಿಕ್ಕೆ ನನ್ನನ್ನು ಆ ಜಾಗಕ್ಕೆ ಹಚ್ಚಿದ್ದಾಯಿತು. ನಾನು ಮೂರೇ ದಿನ ಕಲಿಸಿದೆನು. ನಮ್ಮ ದೊರೆಯು ಒಂದನೆಯ ಪುಸ್ತಕವನ್ನು ಇನ್ನೂ ದಾಟಿ ಹೋಗಿರಲಿಲ್ಲ; ಅವರಿಗೆ ಒತ್ತಕ್ಷರಗಳ ಅಭ್ಯಾಸ ಬಹುಕಡಮೆ; ಆದರೆ ಬರೆಹ ಬಲು ಚಂದ. ಅವರ ಪ್ರಶ್ನೆಗಳು ಚೂಪು ಚೂಪು.

ನನ್ನ ಪಾಠದ ಕಾಲದಲ್ಲಿ ದೊರೆಯು ಕೇಳಿದ ಕೆಲವು ಇಂಗ್ಲಿಷ ಪ್ರಶ್ನೆಗಳನ್ನು ಕೆಳಗೆ ಕನ್ನಡದಲ್ಲಿ ಕೊಟ್ಟಿದೆ.

'ನಿಮ್ಮ ಕನ್ನಡವಲ್ಲಿ ವ ಕೊಂಬು ಕೂಡಿ ಮ ಆಗುವುದು ಹೇಗೆ? ರ ಹೊಟ್ಟೆ ಸೀಳಿದರೆ ಈ ಬರುವುದು ಏಕೆ? ವ ಹೊಡೆದರೆ ಷ ಹೊರಡುವುದು ಎಂತು? ಕನ್ನಡದಲ್ಲಿ ಸೊನ್ನೆ (೦) ಬರೆಯಲಿಕ್ಕೆ ಸುಲಭ, ನೋಡಲಿಕ್ಕೆ ಚಂದ, ಕೇಳಲಿಕ್ಕೆ ಇಂಪು, ನಿಮ್ಮ ಒತ್ತುಗಳನ್ನು ಬರೆಯುವುದು ಕಷ್ಟ. ಒತ್ತುಗಳನ್ನು ಬಿಟ್ಟು ಬರೆದರೆ ಏನು? ಒತ್ತಿನ ಬದಲು ಸೊನ್ನೆ ಇಟ್ಟರೆ ಆಗದೇ?

ದೊರೆ-'ನೌ ನ್ಯೂ ಮುನ್‌ಶಿಸ್ ನೇಮ್‌ಆಯ್‌ಲ್‌ರಾಯ್ಟ್.' (ಈಗ ನನ್ನ ಮುನ್‌ಶಿಯ ಹೆಸರು ಬರೆಯುತ್ತೇನೆ.)

ಹೀಗೆ ನಾಲ್ಕಾರು ಸಲ ಬರೆದು ಬರೆದು ಮುಗಿಸುವಷ್ಟರಲ್ಲಿ, ಕೋಣೆಯ ಬಾಗಿಲನ್ನು ಯಾರೋ ತಟ್ಟಿದರು.

ದೊರೆ– "ಕಮ್ ಇನ್" (ಬಾ ಒಳಗೆ)

ಬಾಗಿಲು ತೆರೆದು ಕೈಮುಗಿದು ಒಳಗೆ ಬಂದದ್ದು ಗುಮಾಸ್ತೆ ಮುನಿಶಿ ಬಜೆಗಡ ಕುಟ್ಟಯ್ಯನ ಗಿಡ್ಡು ದೇಹ!

ಅಷ್ಟರಲ್ಲಿ ದೊರೆಯು ತಾನು ಬರೆದ 'ಕಾಪಿ'ಯನ್ನು ನನ್ನ ಕೈಗೆ ಕೊಟ್ಟರು. ಅದನ್ನು ನಾನು ಓದುತ್ತಿರುವಾಗಲೇ ಕುಂಟ ಕೃಷ್ಣಯ್ಯನವರು ನನ್ನ ಪಕ್ಕದಲ್ಲಿ ಬಂದು ದೊರೆಯ ಮುಂದುಗಡೆಯ ಕುರ್ಚಿಯ ಮೇಲೆ ಅವರಿಗೆ ಎದುರಾಗಿ ಕುಳಿತುಕೊಂಡರು.

ದೊರೆ– "ವ್ಹಾಟ್ ಆರ್ ಯು ಸ್ಮಾಯ್‌ಲಿಂಗ್ ಫೋರ್?" (ಯಾಕೆ ನೀನು ನಗುತ್ತಿ?)

ನಾನು ದೊರೆ ಬರೆದಿದ್ದ 'ಕಾಪಿ' ಕಾಗದವನ್ನು ಮೇಜಿನ ಮೇಲೆ ಇಟ್ಟೆ.

ದೊರೆ–"ಕಾಂಟ್ ಯು ರೀಡ್ ಇಟ್? ರೀಡ್ ಇಟ್ ಕುಟಯ್ಯ." (ಓದಲಿಕ್ಕೆ ನಿನಗೆ ಆಗದೇ? ಓದು ಕುಟಯ್ಯ.)

ಶಬ್ದಗಳಲ್ಲಿ ಅನುಸ್ವಾರಗಳನ್ನು ದೊರೆ ತುಂಬಿಸಿಬಿಟ್ಟಿದ್ದಾರೆಂದು ನಾನು ಕುಟಯ್ಯನವರಿಗೆ ಸೂಚನೆ ಹೇಳಿ, ಕಾಗದವನ್ನು ಅವರ ಕೈಗೆ ಕೊಟ್ಟೆ. ಆದರೆ ದೊರೆಯ ಮಾತನ್ನು ಮೀರಲಿಕ್ಕೆ ಆಗದೆ ಬಜೆಗಡ ಕುಟ್ಟಯ್ಯನವರು ಅದನ್ನು ತಟ್ಟನೆ ಎರಡು ಸಲ ಓದಿಬಿಟ್ಟರು.

ಬಂಜೆಗಂಡ ಕುಂಟಯ್ಯ! ಬಂಜೆಗಂಡ ಕುಂಟಯ್ಯ!

"ಇದರಲ್ಲಿ ಕುಟ್ಟಯ್ಯನವರಿಗೆ ದೊರೆ ಸೊನ್ನೆ ಹಾಕಿಬಿಟ್ಟಿದ್ದಾರೆ." ಹೀಗೆ ಇಂಗ್ಲಿಷಿನಲ್ಲಿ ಹೇಳಿ, ನಾನು 'ಕಾಪಿ' ಯನ್ನು ತಿದ್ದಲಿಕ್ಕೆ ಹೋದೆ. ಆಗ ದೊರೆಯು ಇಂಗ್ಲಿಷಿನಲ್ಲಿ ಮಾತಾಡಿದ್ದನ್ನು ಕೆಳಗೆ ಕನ್ನಡಿಸಿದ್ದೇನೆ.

"ಇಲ್ಲಿ ನೋಡಯ್ಯ! ಬಜೆ ಮತ್ತು ಬಂಜೆ, ಗಡ ಮತ್ತು ಗಂಡ, ಕುಟ' ಮತ್ತು ಕುಂಟ— ಇವು ಭೇದವಿಲ್ಲದ ರೂಪಗಳೆಂದು ನನ್ನ ಗ್ರಹಿಕೆ. ನಾನು ಸರಿಯೇ? ಕೂತುಕೊ ಮತ್ತು ಕೂರತುಕೊ, ನಿತ್ತುಕೊ ಮತ್ತು ನಿಂತುಕೊ ಇದನ್ನು ಹೇಗೆ ಬರೆಯಬೇಕೆಂದು ಕೇಳಿದಾಗ ಕುಟಯ್ಯ ಹೇಳಿದ್ದು– 'ಹಾಗೂ ಆಗುತ್ತದೆ, ಹೀಗೂ ಆಗುತ್ತದೆ.' ಕನ್ನಡದಲ್ಲಿ ಸೊನ್ನೆ ಇಟ್ಟರೂ ಬಿಟ್ಟರೂ ಅರ್ಥ ಒಂದೇ' ಎಂದು-ಅಲ್ಲವೆ ಕುಟಯ್ಯ?"

ಆದರೆ ದೊರೆಯು ಕುಟ್ಟಯ್ಯನ ಮೌನದ ಮೋರೆಯ ಕೆಂಪನ್ನು ಕಂಡು 'ಸಂಗತಿ ಏನು" ಎಂದು ಒತ್ತಿ ಕೇಳಿದರು.

ನಾನು ಕುಟಯ್ಯನು ಸುಮ್ಮನಾದುದನ್ನು ಸಹಿಸಲಾರದೆ "ಅಯ್ಯಾ! ಬಜೆಗಡ ಕುಟ್ಟಯ್ಯ ಎಂದರೂ ಒಂದೇ, ಬಂಜೆಗಂಡ ಕುಂಟಯ್ಯ ಎಂದರೂ ಒಂದೇ, ಇಲ್ಲಿ ಎರಡೂ ರೂಪಗಳು ಒಪ್ಪುತ್ತವೆ. ಒಂದು ಮಾತ್ರ ಪೂಜ್ಯ ತೋರುತ್ತದೆ" ಎಂದೆನು.

ಕುಟ್ಟಯ್ಯನವರ ಸಿಟ್ಟೋ ಸಿಡುಕೋ ಏರಿ ಮೇಲಕ್ಕೆ ಬಂತು. ಅದು ಕುದಿ ಬಂದು ಬಾಯಿಂದ ಹರಿಯುವಾಗ ಅದರಲ್ಲಿ ನನ್ನ ಹಿರಿಯರ ಒಂದೆರಡು ಹೆಸರುಗಳು, ಅವರ ಆಫೀಸ್ ಸಂಗತಿ, ಅವರ ಕುಟುಂಬದ ಮಾತು, ಇವೆಲ್ಲಾ ಕೊಚ್ಚಿಕೊಂಡು ಬಂದುವು. ಅವರು ಅಲ್ಲಿಂದ ಎದ್ದು ಹೋಗುವ ಮೊದಲು ದೊರೆಯ ಮುಂದೆ ಹೊರಕ್ಕೆ ಹೀಗೆಂದರು:

"ಈಗಿನ ಬಿ. ಎ. ಗಳು ಏನೂ ಹುರುಳಿಲ್ಲ. ಕಾಸು ದುಡಿಯಲು ಕೈಲಾಗದಿದ್ದರೂ, ಕಂಡವರನ್ನು ಕುಚೇಷ್ಟೆ ಮಾಡಲಿಕ್ಕೆ ಕಡಮೆ ಇಲ್ಲ. ನಮ್ಮ ದೊರೆಯಿಂದ ಬಂಜೆ ಎಂದು ಬರೆಸಿದ್ದಾನೆ. ಅದು ಜ್ಞಾನ ಶೂನ್ಯ!

ನಾನು:—"ಜ್ಞಾನಶೂನ್ಯವೋ? ಶೂನ್ಯ ಜ್ಞಾನವೋ?"

ಕುಟ್ಟಯ್ಯ:–"ಬಂಜೆ ಗಂಡ ಎಂಬದಾಗಿ ಈ ದೊರೆಯ ಹತ್ತಿರ ಪಿಕಲಾಟವೇ? ನಮ್ಮ ದೊರೆ ಎಂದರೆ ದೇವರು! ದೇವರು ಮನಸ್ಸು ಮಾಡಿದರೆ, ನನ್ನಲ್ಲಿ ಮಕ್ಕಳು ಯಾಕೆ ಹುಟ್ಟಲಿಕ್ಕಿಲ್ಲ?" .

---

೫

ಹಿಂದಣ ಶಾಲೆಯ ಐಗಳ ಮಕ್ಕಳು ಸಂಜೆಯ ಹೊತ್ತು 'ಪರುವಡಿ' ಹೇಳುವ ವಾಡಿಕೆ ಇತ್ತು. 'ಪರುವಡಿ' ಎಂದರೆ ಮಕ್ಕಳು ಅಂಕೆ ಸಂಖ್ಯೆ, ಮಗ್ಗಿ ಕೋಷ್ಟಕ ತಿಥಿ ನಕ್ಷತ್ರ, ದೇವರ ನಾಮಗಳನ್ನು ಒಂದಸೆಯಾಗಿ ಹೇಳಿ ಕಂಠಪಾಠಮಾಡತಕ್ಕ ಅಭ್ಯಾಸ. ಇದಕ್ಕೆ ಕೊಂಕಣಿಯಲ್ಲಿ 'ಪರುವಡಿ' ಎನ್ನುವರು. ಈ ಮಾತು ಸುಮಾರು ಇದೇ ಅರ್ಥದಲ್ಲಿ ತೆಲುಗಿನಲ್ಲಿಯೂ ಇದೆ. ಪರುವಡಿಯ ಅಭ್ಯಾಸಗಳಲ್ಲಿ ಒಂದು ಕ್ರಮವುಂಟು. ಶಾಲೆಯ ಹಿರಿಯ ಮಾಣಿ ಮೊದಲು ಒಂದು ಸೊಲ್ಲನ್ನು ತಾನೊಬ್ಬನೇ ಪರುವಡಿಯ ಧ್ವನಿಯಿಂದ ಗಟ್ಟಿಯಾಗಿ ಕೂಗಿ ಹೇಳುವನು. ಅವನ ತರುವಾಯ ಮಿಕ್ಕವರೆಲ್ಲಾ ಆತನ ಹೇಳಿಕೆ ಎತ್ತಿಕೊಂಡು, ಒದರುವ ಸ್ವರದಿಂದ ಒಟ್ಟಾಗಿ ಕಿರಿಚುವರು. ಪರಿವಿಡಿ ಎಂಬದೊಂದು ಕನ್ನಡ ಶಬ್ದವಿದೆ; ಅದಕ್ಕೆ ಕ್ರಮ, ಏರ್ಪಾಡು, ವ್ಯವಸ್ಥೆ, ಎಂದರ್ಥ. ಕೊಂಕಣಿ ಪರುವಡಿಯು ಕನ್ನಡ 'ಪರಿವಿಡಿ' ಎಂಬ ಶಬ್ದವಿರಲೂ ಬಹುದು, ತೆಲುಗಿನಿಂದ ಬಂದಿರಲೂ ಬಹುದು. ಏಕೆಂದರೆ ಕನ್ನಡ ಮಗ್ಗಿ ಹೇಳುವುದರಲ್ಲಿ ತೆಲುಗಿನ ಒಂದು ಸೊಲ್ಲು ಇನ್ನೂ ಇದೆ. 'ಎರಡ ಮೂರ್ಲು ಆರು,' 'ನಾಲ್ಕು ಎರಡ್ಲು ಎಂಟು,' ಎಂಬಲ್ಲಿಯ 'ಮೂರು ಲು,' 'ಎರಡು ಲು,' ಕನ್ನಡದ ಮೂರುಗಳು, ಎರಡುಗಳು ಎಂಬಿವಕ್ಕೆ ಸಮಾನಾರ್ಥ

ವಿಷ್ಟು, ಅವುಗಳಲ್ಲಿಯ ಲು ಎಂಬುದು ತೆಲುಗಿನ ಬಹುವಚನವನ್ನು ತೋರಿಸುವ ಪ್ರತ್ಯಯವಾಗಿದೆ. ಕನ್ನಡಕ್ಕೂ ತೆಲುಗಿಗೂ ಒಂದೇ ಅಕ್ಷರ ಮಾಲೆಯನ್ನು ಇದೇ ಪರುವಡಿಯು ಮಕ್ಕಳಿಗೆ ಹೇಳಿ ಕೊಡುತ್ತಿತ್ತು. ಹಿಂದಣ ಕ್ರಮವನ್ನು ಒಮ್ಮೆ ಇಲ್ಲಿ ನೆನಪಿಗೆ ತರೋಣ! ಮಕ್ಕಳ ಬಾಯಿಂದ ಒಂದೊಂದು ಅವಧಿಯಲ್ಲಿ ಇಷ್ಟೇ ಅಕ್ಷರಗಳು ಬರಬೇಕೆಂಬುದನ್ನು ಕೆಳಗಣ ಪಟ್ಟಿಯಲ್ಲಿ ಪೂರ್ಣವಿರಾಮಗಳಿಂದ ತೋರಿಸಲಾಗಿದೆ.

**ಅ—ಆ ಇ—ಈ ಉ—ಊ ಋ—ೠ**
**ಌ—ೡ ಎ-ಏ-ಐ ಒ-ಓ-ಔ ಅಂ—ಅಃ.**

| | | | | |
|---|---|---|---|---|
| **ಕ** | **ಖ** | **ಗ** | **ಘ** | **ಙ.** |
| **ಚ** | **ಛ** | **ಜ** | **ಝ** | **ಞ.** |
| **ಟ** | **ಠ** | **ಡ** | **ಢ** | **ಣ.** |
| **ತ** | **ಥ** | **ದ** | **ಧ** | **ನ.** |
| **ಪ** | **ಫ** | **ಬ** | **ಭ** | **ಮ.** |

**ಯ. ರ. ಲ. ವ. ಶ. ಷ. ಸ. ಹ. ಳ. ಕ್ಷ.**..ರಯಿತಿ.

ಈಗ ಮಕ್ಕಳು ಹೇಳುವ ಪರುವಡಿಯನ್ನು ಕೇಳೋಣ! ಹಿರಿಯ ಮಾಣಿ ಅ ಆ ಎಂದು ಧ್ವನಿಯೆತ್ತಿ ಮೊದಲು ಮಾಡುವನು; ಅವನು ಅಷ್ಟನ್ನು ಹೇಳಿ ತಡೆದೊಡನೆ ಮಿಕ್ಕ ಮಕ್ಕಳು ಅ ಆ ಎಂದು ಪ್ರತಿ ಧ್ವನಿಯೆತ್ತಿ ಕೂಗುವರು. ಒಂದು ಉಸುರಿಗೆ ಇಷ್ಟೇ ಅಕ್ಷರಗಳನ್ನು ಹೇಳಿ ಕೊಡಬೇಕೆಂದು ಆ ಮಾಣಿಗೆ ಗೊತ್ತಿದೆ. ಅ ಹಿಡಿದು ಅಃ ವರೆಗಿನ ೧೬ ಸ್ವರಾಕ್ಷರಗಳನ್ನು ಉರುಹಾಕಿಸುವಾಗ, ಒಂದು ಅವಧಿಯಲ್ಲಿ ಎರಡು ಇಲ್ಲವೆ ಮೂರು ಅಕ್ಷರಗಳನ್ನು ಮಾತ್ರ ಹೇಳಬೇಕು. ಕ ಕಾರದಿಂದ ಮ ಕಾರದ ವರೆಗೆ ವರ್ಗೀಕರಿಸಿದ ೨೫ ವ್ಯಂಜನಗಳಲ್ಲಿ ಐದೈದು ಅಕ್ಷರಗಳ ಒಂದೊಂದೇ ವರ್ಗವನ್ನು ಒರಸೆಯಾಗಿ ಹೇಳಬೇಕು. ಯಾವ ವರ್ಗಕ್ಕೂ ಸೇರದೆ ಅವರ್ಗೀಯವಾದ ಒಂಬತ್ತು ವ್ಯಂಜನಗಳನ್ನು (ಎಂದರೆ ಯ ರ ಲ ವ ಶ ಷ ಸ ಹ ಳ ಗಳನ್ನು) ಬಿಡಿಬಿಡಿಯಾಗಿ, ಒಂದೊಂದನ್ನೇ ಎಲ್ಲರೂ ಒಟ್ಟಾಗಿ ಹೇಳಬೇಕು; ಕ್ಷ ಹೇಳಿದ ನಂತರ ತಡೆಯಬೇಕು. ಹೀಗೆ ಕಲಿಸಿ ಕೊಡುವಾಗ ಹಿರಿಯಮಾಣಿ ಎಲ್ಲಾದರೂ ಅಕ್ಷರಗಳನ್ನು ತಪ್ಪಿ ಹೇಳಿದರೆ, ಬಾಯಿ ಆಡಿಸಿ ತಿಂದು ಬಿಟ್ಟರೆ, ಹಿಂದು ಮುಂದು ಮಾಡಿದರೆ, ಆತನ ಬೆನ್ನಿನ ಎಚ್ಚರಕ್ಕೆ ಐಗಳು ಅಲ್ಲೇ ಕಾವಲು ಇದ್ದಾರೆ! ಮತ್ತೆ ಅವರು ಹುಡುಗರ ಬಾಯಿಂದ ಕಡೆಯ 'ರಯಿತಿ' ಹಾಗೆ ಸುಮ್ಮನಿದ್ದು, 'ರಯಿತಿ' ಶಬ್ದವು ಬಂದೊಡನೆ ಇವು ೫೨ ಅಕ್ಷರಮಾಲೆಯ ವರ್ಣಗಳು ಎಂಬ ಸಮಾಪ್ತಿ ವಾಕ್ಯ ಹೇಳುವುದಕ್ಕೂ ಜಾಗರೂಕರಾಗಿದ್ದಾರೆ! ಅದರ ನಂತರ ಅವರ ವಾಕ್ಯದ ಪ್ರತಿಧ್ವನಿಯೆಂಬಂತೆ ಮಕ್ಕಳ ಹೇಳಿಕೆಯ ಕೋಲಾಹಲವಾಗಿ ಅಲ್ಲಿಗೆ ಅಕ್ಷರಮಾಲೆಯ ಕಂಠಪಾಠದ ಅಭ್ಯಾಸವು ಆ ದಿನದ ಮಟ್ಟಿಗೆ ಮುಗಿಯುತ್ತದೆ. ಇದರಲ್ಲಿ ಹುಡುಗರ 'ಪರುವಡಿ'ಯ ಅಕ್ಷರ ಸಂಖ್ಯೆಗೂ ಐಗಳ ವಾಕ್ಯದ ಅಕ್ಷರ ಸಂಖ್ಯೆಗೂ ಹೊಂದಿಕೆ ಇಲ್ಲ. ಇದನ್ನು ನೋಡತಕ್ಕದ್ದು. ಹೇಗೆಂದರೆ: ಅಕ್ಷರಗಳ ಒಟ್ಟು ಸಂಖ್ಯೆ ೫೨ ಎಂದು ಐಗಳ ನಿರ್ಣಯ; ೫೩ ಎಂದು ಹುಡುಗರ ಹೇಳಿಕೆ (ಕ್ಷ ಕೂಡಿದರೆ) ಹಾಗಾದರೆ ಕ್ಷ ಎಂಬುದನ್ನು ಅಕ್ಷರ ಮಾಲೆಯಲ್ಲಿ ಇಡಬೇಕೇ ಬಿಡಬೇಕೇ? ಅದು ಅ, ಕ, ಬ, ಇತ್ಯಾದಿಗಳಂತೆ ಮೂಲಾಕ್ಷರವಲ್ಲವೆಂಬುದು ಕಿವಿಯಿದ್ದವನೂ ಬಲ್ಲ, ಕ್ಷ ಎಂಬುದು ಕ್ ಮತ್ತು ಷ್ ಒಟ್ಟಾಗಿ, ಒತ್ತಾಗಿ ಆದ ಒತ್ತಕ್ಷರ; ಪ್ರತ್ಯೇಕವಾದ ಒಂದಕ್ಷರವಲ್ಲ. ಕ್ಷ ಇದನ್ನು ಮೂಲಾಕ್ಷರವೆಂದು ಇಟ್ಟುಕೊಂಡದ್ದೇ ಆದರೆ, ಅದರಂತೆ ಒತ್ತುಗಳನ್ನಿಟ್ಟು ಕಲ್ಪಿಸಬಹುದಾದ ಕ್ರ, ಜ್ಯ, ಸ್ತ್ರ, ತ್ಸ್ನ್ಯ ಎಂಬಂಥ ನೂರಾರು ರೂಪಗಳನ್ನು ಮೂಲಾಕ್ಷರಗಳೆಂದೇ ಹೇಳಬೇಕಾದೀತು. ಕ್ಷ ಹೋಗಲಿ! ಕಡೆಯದೊಂದು "ರಯಿತಿ" ಉಳಿಯುತ್ತದಲ್ಲ! 'ರಯಿತಿ' ಎಂದರೇನು? ರಯಿತಿ —ಇವು ಒತ್ತಕ್ಷರಗಳಲ್ಲವೆಂಬುದು ಸ್ಪಷ್ಟ ತಾನೆ! ಅವು ಮೂಲಾಕ್ಷರಗಳು; ಹೀಗಿದ್ದು, ತಿರಿಗಿ ಏಕೆ ಬೇರೆ ಕಡೆಗೆ ನಿಂತಿವೆ?

ನಮ್ಮ ಐಗಳ ಮಠ ಕನ್ನಡ ಶಾಲೆ; ಸಂಸ್ಕೃತ ಪಾಠಶಾಲೆಯಲ್ಲ, ಹಿಂದಿನ ಕಾಲದ ಸಂಸ್ಕೃತ ಪಾಠ ಶಾಲೆಯಲ್ಲಿ ಇದೇ ಅಕ್ಷರಮಾಲೆಯ ಪರಿಪಾಡು! ಅಲ್ಲಿಯ ವಿದ್ಯಾರ್ಥಿಗಳೂ "ಅ–ಆ–ಸ–ಹ–ಳ" ಎಂದು ಹೇಳುವ ಸಂಪ್ರದಾಯ. ಅಕ್ಷರ ಇತಿ ಎಂಬದು ಸಂಸ್ಕೃತ ಮಾತು. "ಅಕ್ಷರಗಳು ಇಲ್ಲಿ ಮುಗಿಯುವುವು" ಎಂದು ಅದರ ಅರ್ಥ. ಆ ಮಾತನ್ನು ಸಂಸ್ಕೃತ ಬಲ್ಲವರಿಗೆ ಸಂಸ್ಕೃತದಲ್ಲಿ ಕಲಿಸಬೇಕಾದದ್ದು ಸಹಜ. ಆದರೆ ಶಾಲೆಯಲ್ಲಿ ಸಂಸ್ಕೃತ ಅರಿಯದ ಮಕ್ಕಳಿದ್ದರೆ, ಅವರಿಗೆ ಅದರ ಕನ್ನಡ ಅರ್ಥ ಹೇಳಬೇಕಾದದ್ದೂ ಸಹಜ. ಆದುದರಿಂದ ಹುಡುಗರು ಹೇಳಿದ 'ಅಕ್ಷರಯಿತಿ' ಎಂಬದರ ತಿಳುವಳಿಕೆಗಾಗಿ 'ಅಕ್ಷರಗಳು ಇಲ್ಲಿ ಅಂತ್ಯ' ಎಂಬದಾಗಿ ಆ ಸಂಸ್ಕೃತ ಮಾತಿನ ಕನ್ನಡ ಅರ್ಥವನ್ನು ಐಗಳು ತಾನೇ ಹೇಳಿ ಕೊಡುತ್ತಿದ್ದರು. ಐಗಳ ಮಠ ಇದ್ದಷ್ಟು ಕಾಲ ಆ "ಅಕ್ಷರಯಿತಿ' ಅರ್ಥವು ಹುಡುಗರಿಗೆ ಗೊತ್ತಿತ್ತು. ಐಗಳ ಕಾಲ ಕಳೆದುಹೋಯಿತು. ಪಾಠ ಕ್ರಮವು ಬೇರೆಯಾಯಿತು. "ಸ ಹ ಳ ಅಕ್ಷರಯಿತಿ" ಬರುಬರುತ್ತಾ ಸ ಹ ಳ ಕ್ಷ ರಯಿತಿ ಹೀಗೆ ಒಂದಕ್ಕೊಂದಾಯಿತು. 'ಇಂಗು ಮೆಣಸು ಜೀರಿಗೆ' ಇದ್ದದ್ದು 'ಇಂಗು ಮೇಣ ಸೂಜಿ ರಿಗೆ' ಆದಂತೆ, ಅಕ್ಷರ ಶಬ್ದದ **ಕ್ಷ** ಒಂದು ತನ್ನವರನ್ನು ತೊರೆದು ಬಿಟ್ಟು, ಅಕ್ಷರಮಾಲೆಯನ್ನು ತಾಳಿಕೊಂಡಿತು. **ರಯಿತಿ** ಮಾತ್ರ ಮದುವೆಯಾದ ಮಾವನ ಮನೆಯ ಅಳಿಯನ ಹಿಂದೆ

ಗೆಳೆಯನ ಹಾಗೆ ಕೇಳುವವರಿಲ್ಲದೆ ತೂಗಾಡಹತ್ತಿವೆ—ಆಡಿನ ಕೆಚ್ಚಲ ಆಧಾರ ತಪ್ಪಿ ಗಡ್ಡದ ಮುಂದೆ ಜೋಲುತ್ತಿರುವ ಅಜಗಳ ಸ್ತನದಂತೆ.

ಅಕ್ಷರ ಎಂದರೆ ನಾಶವಾಗದ್ದು ಎಂದರ್ಥ. ಅಕ್ಷರ ಮಾಲೆಯು ಮಾನವ ಜಾತಿಗೆ ಹಿಂದೆ ಮಾಡಿದ ಈಗ ಮಾಡು ತ್ತಿರುವ ಮಹದುಪಕಾರವು ಅನಂತ, ಅಚಿಂತ್ಯ ಅವಿನಾಶವಾದದ್ದು. 'ಅಕ್ಷರಮಾಲೆ!' ಇದು ಮನುಷ್ಯನನ್ನು ಮೃಗಗಳಿಂದ ಬೇರೊಂದಾಗಿಸಿ, ನವೀನ ಜನ್ಮದ ದ್ಯೋತಕವಾಗಿ ಆತನ ಕೊರಳಿಗೆ ಇಕ್ಕಿದ ಶಬ್ದ ಬ್ರಹ್ಮನ ಜನಿವಾರ! ಆತನ ಹೊಸ ಹುರುಪಿನ ಕಣ್ಣುಗಳು ಕಂಡ ಹೊರಗಿನ ಪಂಚಭೂತಗಳ ಆಟಗಳನ್ನು ಆತನ ಕೈಗಳು ವಿಧವಿಧದಿಂದ ರೂಪುಗಾಣಿಸುವ ಮುಂಚಿತವಾಗಿ ಯತ್ನಿಸಿ ಯತ್ನಿಸಿ ಗೀರಿದ ವಾಗ್ದೇವಿಯ ಚಿತ್ತಾರದ ಕುರುಪು! ಆತನ ಮಿದುಳಿನ ಮೂಲೆಗಳಲ್ಲಿ ಅವಿತದ್ದನ್ನು ಬೇಕಾದಾಗ ಹೊರಕ್ಕೆ ತರಲು ನೆನಪಿನ ತುದಿಗೆ ಸಿಂಬಿ ಸುತ್ತಿದ ಮಾನಸ ಪುತ್ರನ ಸೆರಗಿನ ಗಂಟು! ಭಾವಗಳನ್ನು ರಾಗಗಳನ್ನು ಪರಸ್ಪರ ವಿನಿಮಯಮಾಡಲು 'ಗಣಪತಿ' ಮುದ್ರೆಯ ಹೆಸರನ್ನೆತ್ತಿ ಚಲಾವಣೆಮಾಡಿದ ಓಂಕಾರದ ಚಕ್ರದ 'ನೋಟ'ವಿದು! ಸತ್ಯಧರ್ಮದ ಸಂಸ್ಕೃತಿದೇವಿಯ ಪಲ್ಲಕ್ಕಿಯನ್ನು ಗ್ರಂಥಾಭ್ಯಾಸ ಸತ್ಕೃತಿ ರಚನೆ ವಿದ್ಯಾಪ್ರಸರಣೆ ಜ್ಞಾನರಕ್ಷಣೆ ಎಂಬೀ ನಾಲ್ವರು ಬೋವಿಗಳು ಬಹು ಕಾಲದಿಂದ ಬಹು ದೂರದಿಂದ ಹೊತ್ತುಕೊಂಡು ಬಂದ ಸುಧಾರಣೆಯ ಮಾರ್ಗವಿದು! ಅಕ್ಷರಮಾಲೆ! ಅಕ್ಷರಮಾಲೆ! ಅಕ್ಷರದ ಈ ಮಣಿಮಾಲೆಯು ನಮ್ಮ ಹಿರಿಯ ಹಿಂದಣ ಪೆರುಮಾಳರಿಗೆ ದೊರಕಿದ ಈಶ್ವರಪ್ರಸಾದ! ಅದು ದೇವರ ವರದಾನವೆಂದೇ ಅವರ ಭಾವನೆ; ಮಾನವನ ಸ್ವಪ್ರಯತ್ನ ಫಲ ಎಂದು ಈಗಿನವರ ಹೇಳಿಕೆ. ನಮ್ಮ ಹಿರಿಯ ಆರ್ಯರು ಅಕ್ಷರಮಾಲೆಯನ್ನೂ ಬರಿಹವನ್ನೂ ಫಿನಿಶಿಯನ್ ಜನರಿಂದ ಪಡೆದರೆಂದು ಕೆಲವರ ಅಭಿಪ್ರಾಯ. (See Max Muller's Science of Language V. II.) ಅದರಲ್ಲಿ ಜಂಬೂದ್ವೀಪದ ಆರ್ಯರೂ ಹೊರಗಣ ಫಿನಿಶಿಯನ್ ಜನರೂ ಆ ರತ್ನಮಾಲೆಯನ್ನು ಸುಮೇರುದೇಶದ ಜನಾಂಗದಿಂದ ಸಂಪಾದಿಸಿಕೊಂಡರೆಂದು ಮತ್ತೊಂದಭಿಪ್ರಾಯ. (See L. S. Waddel's "A Seomenion Alphabet.")

ಈ ಸಂಬಂಧವಾಗಿ ವಿದ್ವಾಂಸರು ಪ್ರಪಂಚದಲ್ಲೆಲ್ಲಾ ಹುಡುಕಿ ಹುಡುಕಿ, ಅಲ್ಲಲ್ಲಿದ್ದ ಕಾಗದ ಬರಿಹ, ಕಡತದ ಬರಿಹ, ಓಲೆಯ ಬರಿಹ, ಎಲೆಯ ಬರಿಹ, ಕಲ್ಲು ಬರಿಹ, ಹುಲ್ಲು ಬರಿಹ, ತೊಗಲ ಬರಿಹ, ಸುಟ್ಟ ಇಟ್ಟಿಗೆ ಬರಿಹಗಳನ್ನು ರಾಶಿರಾಶಿಯಾಗಿ ಸಂಗ್ರಹಿಸಿ, ವಿಚಾರಪೂರ್ವಕವಾಗಿ ಪರಾಮರ್ಶಿಸಿದ್ದಾರೆ. ಇಂಥಾ ವಸ್ತು ಸಂಗ್ರಹದಲ್ಲಿದ್ದ ಯಾವುದೊಂದು ಚೂರು ಬರಿಹದಲ್ಲಾದರೂ ಮಾನವ ಜಾತಿಯು ವೇದಕ್ಕಿಂತ ಮೊದಲೇ ಮಾತಾಡಿದ್ದೆಂದು ನಂಬತಕ್ಕ ಒಂದೇ ಒಂದು ಬಿಡುನುಡಿಯನ್ನೊ, ತುಂಡು ಮಾತನ್ನೊ, ತೊದಲುಲಿಯನ್ನೊ ಯಾರೂ ಗೀಚಿಟ್ಟಿಲ್ಲ. ಸುಮಾರು ಇನ್ನೂರು ವರ್ಷಗಳ ಇತ್ತಣಿಂದ ಈ ವಿಚಾರವು ನಡೆಯುತ್ತಿದೆ; ಈಗ ಈ ವಿಷಯವು ಒಂದು ದೊಡ್ಡ ಶಾಸ್ತ್ರವೇ ಆಗಿ ಹೋಗಿದೆ. ಈ ವಿಷಯಗಳನ್ನು ಕಡೆದು ಕಡೆದು ವಿದ್ವಾಂಸರೂ ವೈಜ್ಞಾನಿಕರೂ ಅಮೂಲ್ಯವಾದ ಅನೇಕ ಶೋಧನೆಗಳನ್ನು ಅದರಿಂದ ಎತ್ತಿ ತೆಗೆಯುತಿದ್ದಾರೆ. ಈ ವರೆಗಿನ ಮಂಥನದಿಂದ ಮೇಲಕ್ಕೆ ಎದ್ದವುಗಳಲ್ಲಿ ಅತ್ಯಂತ ಪ್ರಾಚೀನವೂ ಅತಿ ವಿಸ್ಮಯಕಾರಕವೂ ಆದ ವಸ್ತುವೆಂದರೆ 'ವೇದಮೂರ್ತಿ.'

ವೇದಗಳೆಂದರೆ, ಆರ್ಯ ಮಹರ್ಷಿಗಳು ಇಂದ್ರಾಗ್ನಿ ಸೂರ್ಯಾದಿಗಳನ್ನು ಕುರಿತುಮಾಡಿದ ಸ್ತೋತ್ರಗಳು, ಪ್ರಾರ್ಥನೆಗಳು, ಪೂಜಾವಿಧಿಗಳು ಇತ್ಯಾದಿ. ವೇದಗಳಲ್ಲಿ ಅವುಗಳ ಒಟ್ಟು ಸಂಖ್ಯೆ ಅಷ್ಟೇನು ಕಡಮೆಯಿಲ್ಲ. ಈ ಸಂಖ್ಯೆಯ ಮುಂದೆ ನಮ್ಮ ತುಳು ಕೊಂಕಣಿಗಳು ಇದುವರೆಗೆ ಕಟ್ಟಿದ ಪದಗಳ ಸಂಖ್ಯೆ ತೀರ ಕಡಮೆ ಎನ್ನಬೇಕು. ಈ ಭಾಷೆಗಳು ಇನ್ನೂ ಹಣ್ಣಾಗಿಲ್ಲ. ಒಂದು ಭಾಷೆಯು ಪಕ್ವವಾಗಿದೆ ಎಂದು ಹೇಳಬೇಕಾದರೆ, ನಮ್ಮ ಹಾಡಿಕೆ ಬೇಡಿಕೆಗಳನ್ನು ಅದರಲ್ಲಿ ಸರಾಗವಾಗಿ ಕಟ್ಟುವಷ್ಟು ಅದು ಪುಷ್ಟಿಯುಳ್ಳದಾಗಿರಬೇಕು. ಯಾವುದೊಂದು ಭಾಷೆಯಾದರೂ ನಮ್ಮ ತೋಟದ ತೆಂಗು ಕಂಗುಗಳಂತೆ ಹತ್ತು ವರ್ಷಗಳಲ್ಲಿ ಅದು ಪುಷ್ಟವಾಗುವುದಿಲ್ಲ, ನೂರು ವರ್ಷಗಳಲ್ಲಿ ಹೂ ಬಿಡುವುದಿಲ್ಲ. ಕಾಯಾಗುವುದಕ್ಕೆ ಬಹಳ ಸಮಯ ಬೇಕಾಗುತ್ತದೆ. ಅದಕ್ಕೆ ತಕ್ಕ ವ್ಯವಸಾಯಬೇಕು, ಶ್ರದ್ಧೆಯುಳ್ಳ ಕೆಲಸಗಾರರು ಬೇಕು. ಇಷ್ಟಿದ್ದರೂ ಮೊದಲು ಮೊದಲು ದೊರೆಯುವುದು ಒಂದೊ ಎರಡೊ ಕಸುಗಾಯಿ ಮಾತ್ರ. ಕ್ರಮೇಣ ಬೀಜಗಳು ಹರಡಿದ ಹಾಗೆ, ಜಾಗವು ವಿಸ್ತರಿಸಿದ ಹಾಗೆ, ಆರೈಕೆ ಚೆನ್ನಾದ ಹಾಗೆ, ಅದು ಬಲಿತು ಹುಲುಸಾಗಿ ಬೆಳೆದು ಫಲದಾಯಕವಾಗುತ್ತದೆ. ಭಾಷೆ ಎಂಬದು ನಟ್ಟ ಕೂಡಲೇ ಹಣ್ಣು ಬಿಡತಕ್ಕ ಡೊಂಬನ ಮಾವಿನ ಗಿಡವಲ್ಲ. ತುಳು ಕೊಂಕಣಿಗಳ ಈಗಿನ ಮೊಳಿಕೆ ಚೆನ್ನಾಗಿದ್ದರೆ, ಮುಂದಿನ ಬೆಳೆ ಹುಲುಸಾದೀತು. ಹಿಂದಣ ಕವಿಗಳು ಕನ್ನಡದೇವಿಯ ಅಂಗಳಕ್ಕೆ ತಂದಿದ್ದ ಕೊಯ್ಲನ್ನು ನೋಡಿದಾಗ, ನಮ್ಮ ಕನ್ನಡ ಭಾಷೆಯ ಬೆಳವಣಿಗೆಯು ಎಷ್ಟೋ ಕಾಲದ ಹಿಂದಿನಿಂದ ನಡೆದಿರಬೇಕೆಂದು ಗೊತ್ತಾಗಿ ನಾವು ಹೆಚ್ಚಳ ಪಡುತ್ತೇವೆ; ಅದರ ಇಂದಿನ ದಶೆಯನ್ನು ಯೋಚಿಸಿದಾಗ ಮಾತ್ರ 'ಅಯ್ಯೋ' ಎನ್ನಬೇಕಾಗುತ್ತದೆ.

ವೇದವಿಮರ್ಶನ ಕಾರ್ಯಕ್ಕಾಗಿ ತಮ್ಮ ಆಯುಸ್ಸನ್ನೇ

ವೆಚ್ಚವಮಾಡಿದ ಭಾಷಾತತ್ವವಿಚಕ್ಷಣರು ಈ ವೇದ ಮಂತ್ರಗಳ ಭಾಷೆಯು ವೇದರಚನೆಯ ಕಾಲಕ್ಕಿಂತ ಬಹಳ ಹಿಂದೆಯೇ ಪಕ್ವಸ್ಥಿತಿಯನ್ನು ಪಡೆದಿರಬೇಕೆಂದು ಸಿದ್ಧಾಂತ ಮಾಡಿದ್ದಾರೆ. ಪ್ರಕೃತದಲ್ಲಿ ವೇದಗಳಲ್ಲಿ ಕಾಣುವ ಭಾಷೆಯನ್ನು ಪರೀಕ್ಷಿಸುವಂಥ ಸೂಕ್ಷ್ಮದೃಷ್ಟಿಗೆ ಅದರಲ್ಲಿ ಎರಡು ರೂಪಗಳು ಕಾಣುತ್ತವೆಂದು ಬಲ್ಲವರು ಹೇಳುವರು; ಒಂದು ಪ್ರೌಢ ರೀತಿ ಮತ್ತೊಂದು ಸಾಮಾನ್ಯ ರೀತಿ. ನಮ್ಮ 'ತಾಳಮದ್ದಳೆಯಲ್ಲಿ' ಸುಮಾರು ಹೀಗೆಯೇ ಇದೆ. 'ತಾಳಮದ್ದಳೆಯ' ಭಾಷೆ ಏನೋ ಕನ್ನಡ; ಆದರೆ ಭಾಗವತರ ಯಕ್ಷಗಾನದ ಕನ್ನಡ ಪದಗಳ ಬಿಗಿತದ ರೀತಿ ಒಂದು ತರ; ಅರ್ಥಗಾರರ ಕನ್ನಡ ಮಾತುಗಳು ಒಂದು ತರ. ಹೀಗೆ ವೇದ ಭಾಷೆಯಲ್ಲಿ ಉದ್ದಕ್ಕೂ "ಛಾಂದಸ" "ಲೌಕಿಕ" ಎಂಬ ಎರಡು ಭೇದಗಳು ತೋರುವುದಂತೆ. ಇದಕ್ಕೆ ಕಾರಣವೇನು? ಅವೆರಡಕ್ಕೂ ಸಂಬಂಧವಿದೆಯೇ? ಇದ್ದರೆ, ಅದು ತಾಯಿ ಮಗಳ ಸಂಬಂಧವೇ? ಇಲ್ಲವೇ ಅಕ್ಕ ತಂಗಿಯ ಸಂಬಂಧವೇ? ಹೀಗೆ ಕವಲೊಡೆದದ್ದು ಯಾವ ಕಾಲದಲ್ಲಿ! ಆರ್ಯಋಷಿಗಳು ಜಂಬೂದ್ವೀಪದ ಪಂಜಾಬದಲ್ಲಿ ನೆಲಸಿದನಂತರವೇ? ಅಥವಾ ಅದಕ್ಕಿಂತ ಪೂರ್ವದಲ್ಲೇ? ಎಲ್ಲಿ? ಇಂಥ ಅನೇಕ ಸಮಸ್ಯೆಗಳು ಪೂರ್ಣವಾಗದೆ ಇನ್ನೂ ಹಾಗೆಯೇ ಉಳಿದಿವೆ. ನಿರ್ಧರವಾಗಿ ಯಾವುದೊಂದನ್ನು ಹೇಳುವುದಕ್ಕೂ ಈಗ ಇದ್ದ ಆಧಾರಗಳು ಸಾಲುವುದಿಲ್ಲ. ಆರ್ಯರು ಪಂಜಾಬದಲ್ಲಿದ್ದರು, ಆ ಕಾಲದಲ್ಲಿ ಅವರ ವೇದ ಭಾಷೆಯ ಸರಣಿಯು ಎರಡು ತೆರನಾಗಿತ್ತು; ಇಷ್ಟನ್ನು ನಿಸ್ಸಂದೇಹವಾಗಿ ಹೇಳಬಹುದಾಗಿದೆ.

ಯಾವುದೊಂದು ಭಾಷೆಯನ್ನು ಬಿಗಿದು ಕಟ್ಟಿದರೂ ಸಡಿಲ ಬಿಟ್ಟರೂ ಬರಬರುತ್ತ ಅದರಲ್ಲಿ ರೂಪಭೇದಗಳು ಆಗುವುದುಂಟು. ನಮ್ಮಲ್ಲಿಯ ಅರ್ಥಗಾರರ ವಿದ್ಯೆ, ದೇಶ, ಕುಲ, ಉಚ್ಚಾರಣೆಗಳ ಭೇದದಿಂದ ಅವರವರ ಅರ್ಥವು ಒಂದೊಂದು ರೀತಿ ತೋರುವುದುಂಟಷ್ಟೆ. ಕೆಲವರ ಅರ್ಥದಲ್ಲಿ ಕನ್ನಡದೊಂದಿಗೆ ಕೊಂಕಣಿಯ ಬೆರಿಕೆ ಇಲ್ಲವೆ ತುಳುವಿನ ಕಲಸು, ಕೆಲವದರಲ್ಲಿ ಅಕ್ಷರಲೋಪ ಇಲ್ಲವೆ ಸಂಸ್ಕೃತ ಶ್ಲೋಕ; ಹೀಗಾಗುವುದು ನಮಗೆ ಗೊತ್ತಿಲ್ಲದ ಸಂಗತಿಯಲ್ಲ. ಆದರೆ ಇಂಥ ಪಲ್ಲಟಗಳು ಭಾಗವತರು ಹಾಡುವ ಪ್ರಸಂಗದ ಹಾಡುಗಳಲ್ಲಿ ಬರುವುದು ಮಾತ್ರ ಬಹಳ ಕಡಮೆ. ಹಾಗೂ "ಮುದದಿಂದ ನಿನ್ನನು . . . . ." ಎಂಬಲ್ಲಿಂದ ಪ್ರಸಂಗ ಪೀಠಿಕೆಯ ತನಕ ಆಟಕ್ಕೆ ಪೂರ್ವಭಾವಿಯಾಗಿ ಗಣಪತಿ, ಬಾಲಗೋಪಾಲ, ಸ್ಕಂಧ, ಅರ್ಧನಾರೀಶ್ವರರನ್ನು ರಂಗಸ್ಥಳಕ್ಕೆ ತಂದು ಕುಣಿಸತಕ್ಕ ಯಕ್ಷಗಾನ ಭಾಗವತರ ಸ್ತುತಿಪದಗಳಲ್ಲಿ ವ್ಯತ್ಯಾಸವೇನೂ ಇಲ್ಲ. ಆ ಹಾಡುಗಳನ್ನು ಭಾಗವತರು ಚಾಚು ತಪ್ಪದೆ ಅನೇಕ ವರ್ಷಗಳಿಂದ ಇದ್ದ ಹಾಗೆಯೇ ಈಗಲೂ ಹಾಡುತ್ತಿದ್ದಾರೆ. ಹೀಗೆಯೇ ವೇದಗಳಲ್ಲಿ ಕೆಲವು ಭಾಗಗಳು ಏನೊಂದೂ ಅಕ್ಷರ ವ್ಯತ್ಯಾಸವಿಲ್ಲದೆ ಹಿಂದಕ್ಕೆ ಇದ್ದಂತೆ ಹಾಡಲ್ಪಡುತ್ತಿದ್ದುವು. ಆದರೆ ಒಂದೆರಡು ಭಾಗಗಳು ಬರಬರುತ್ತ ಭಾಗವತರ ಪ್ರಸಂಗದ ಪದಗಳಂತೆ ಸ್ವಲ್ಪ ದೂಷಿತವಾಗಿದ್ದಿರಲೂ ಬಹುದು. ಕೆಲವು ಭಾಗಗಳು ಮಾತ್ರ ಹಳ್ಳಿಯ ಯಕ್ಷಗಾನದ ಅರ್ಥಗಳಂತೆ ಬಹಳ ಆಭಾಸವಾಗಿ ಹೋದುವು. "ಚಂದ್ರಭಾಮಾ ವ್ಯವಹಾರ" ಎಂಬಲ್ಲಿ 'ಚಂದು ಮಮ್ಮಿ ಬ್ಯಾರಿ' ಎಂದೂ, 'ವಿಜ್ಞಾನ ಲಕ್ಷಣ' ಎನ್ನುವಲ್ಲಿ "ಬಿನ್ನಾಣಿ ಲಕ್ಕಣಿ" ಎಂದೂ, "ಊರ್ಜಿತ ಪ್ರಬಲರಿಪು" ಎನ್ನುವಲ್ಲಿ ". . . . . . ಪಿರಬಲಿಪು" ಎಂದೂ ಹೀಗೆಲ್ಲಾ ಅಸಂಬದ್ಧವಾಗಿ ಆಭಾಸವಾಗಿ ಅಪಹಾಸ್ಯಕರವಾಗಿ, ಮಾರ್ಪಟ್ಟಂತೆ, ಮಾತಾಡುವವರ ದುರುಚ್ಚಾರಣೆ, ಆಲಸ್ಯ, ಅಶಕ್ತಿ, ಅನುಕರಣ, ವಿನೋದ ಪ್ರೀತಿ, ಲಿಪಿಯ ರೀತಿ ಮುಂತಾದ ಹಲವು ಕಾರಣಗಳಿಂದ ವೇದಗಳಲ್ಲಿಯ ಮೂಲ ಶಬ್ದದ ಗುರುತು ಸಿಕ್ಕಲಾರದಷ್ಟು ವಿರೂಪವಾಗಿ ಹೋಗುವ ಕಾಲವು ಸಮೀಪಿಸಿತ್ತು. ಸಾಲದ್ದಕ್ಕೆ ಆರ್ಯಋಷಿಗಳಿಗಿಂತ ಮುಂಚಿತವಾಗಿಯೇ ಹಿಂದುಸ್ಥಾನದಲ್ಲಿ ಅನಾದಿ ಕಾಲದಿಂದ ಜೀವಿಸಿದ್ದ ಆ ಭೀರ, ಕೋಲ, ನಾಗ ಮುಂತಾದ ಅನಾರ್ಯ ಕುಲದವರ ಆರ್ಯ ಭಾಷೆಗೆ ಸಂಬಂಧವಿಲ್ಲದ ಕೆಲವೊಂದು ಮಾತುಗಳು ವೇದ ಭಾಷೆಯಲ್ಲಿ ಕಾಲಿಟ್ಟುವು. ಈ ಪ್ರಕಾರ ಆರ್ಯರ ಸಂಚಾರ ವ್ಯವಹಾರ ಮರುಚ್ಚಾರಣೆಗಳ ದೆಸೆಯಿಂದಾಗಿ ಅಪಶಬ್ದ, ಅಪಭ್ರಂಶ ಶಬ್ದ, ನಾನಾರ್ಥ ಶಬ್ದ, ಒಂದೇ ಅರ್ಥದ ಶಬ್ದಗಳು ಇವೆಲ್ಲಾ ವೇದಗಳೊಳಗೆಸೇರಿ ಅವರ ಹೋಮ ಹವನಗಳಿಗೆ ಆತಂಕವಾಗ ತೊಡಗಿತು. ಇದು ಹೇಗೆಂಬುದಕ್ಕೆ ಇಲ್ಲೊಂದು ದೃಷ್ಟಾಂತವಿದೆ.

ಹಿಂದಕ್ಕೆ ಒಬ್ಬ ವೈದಿಕರ ಮನೆಯಲ್ಲಿ ಷಷ್ಠಿಪೂರ್ತಿಗಾಗಿ ಪುರೋಹಿತರನ್ನು ಕರೆಯಿಸಿ, ನವಗ್ರಹ ಶಾಂತಿಗಾಗಿ ದಾನಗಳನ್ನು ಸಿದ್ಧಮಾಡಿ ಇಟ್ಟಿದ್ದರಂತೆ! ಪುರೋಹಿತರು "ಲವಣಂ ಬಲವರ್ಧನಂ" ಎಂದು ಶ್ಲೋಕವನ್ನು ಮುಗಿಸಿ ದಾನದ ವಸ್ತುವನ್ನು ಹುಡುಕುವಲ್ಲಿ, ಉಪ್ಪಿನ ದಾನ ಇಲ್ಲದ್ದನ್ನು ಕಂಡು ಕೊಂಕಣಿಯಲ್ಲಿ 'ಮೀಟ್ ತಾರೋ' ಎಂದು ಷಷ್ಟಿಪೂರ್ತಿಯ ಮುದುಕನ ಮಗನಿಗೆ ಹೇಳಿದರಂತೆ; ಇಂಗ್ಲಿಷ ಪೋರನು "ಮಾಂಸದ ತುಂಡು ತರಲೇ" ಎಂದು ಪುರೋಹಿತನ ಹತ್ತಿರ ಕೇಳಿದನಂತೆ!

ವೇದಗಳೊಳಗೆ ತಿಳಿದೂ ತಿಳಿಯದೆ ಹರಿದಾಡುವ ಈ ಅಪಶಬ್ದಗಳ, ಈ ಹೊಸ ಮಾತುಗಳ ದೆಸೆಯಿಂದ ಮಂತ್ರಗಳ ಪಾಲನವು ಋಷಿಗಳಿಗೆ ಕಷ್ಟವಾಗುತ್ತ ಬಂತು. ಅವರ ಸರ್ವಸ್ವವೆಂದರೆ ವೇದ ಮಂತ್ರಗಳು, ವೇದಋಕ್ಕುಗಳು, ವೇದ ಸಂಹಿತೆ. ಇವುಗಳ ಸಂರಕ್ಷಣೆಯು ಅವರಿಗೆ ಅತ್ಯಾವಶ್ಯಕ

ವಿತ್ತು. ಮಂತ್ರಗಳ ಶುದ್ಧ ಸ್ವರೂಪವನ್ನು ಕಾಯುವುದಕ್ಕಾಗಿ ಯೋಜನೆಗಳನ್ನು ಹೂಡಬೇಕಾಯಿತು. ಪರ ಶಬ್ದಗಳನ್ನು ಒಳಕ್ಕೆ ಬರಲೀಸದ ಹಾಗೆ ನುಡಿಕಟ್ಟುಗಳನ್ನು ಹೇಳಬೇಕಾಯಿತು; ಮ್ಲೇಚ್ಛ ಪದಗಳನ್ನು ಆಪತ್ತಿನಲ್ಲಿ ಕೂಡ ಹಿಡಿಯುವುದು ನಿಷಿದ್ಧವೆಂದು ಕಟ್ಟಾಜ್ಞೆಯಾಯಿತು. ಅಪಶಬ್ದ ದೋಷಕ್ಕಾಗಿ 'ಸಾರಸ್ವತ' ಹೋಮದ ಪ್ರಾಯಶ್ಚಿತ್ತವನ್ನು ವಿಧಿಸಿದ್ದಾಯಿತು. ಆದರೂ ಬಲಿತು ಹೋದ ಲೌಕಿಕ ರೀತಿಯ ಬೆನ್ನು ಮುರಿಯಲಿಕ್ಕೆ ಛಾಂದಸ ರೀತಿಯಿಂದ ಆಗಲಿಲ್ಲ. "ಅಂಡೆ ಕಟ್ಟಬಹುದು! ದೊಂಡೆ ಕಟ್ಟುವುದಕ್ಕೆ ಸಾಧ್ಯವುಂಟೇ?" ಅದರ ಬಾಯಿಯ ಮುಂದೆ ಛಾಂದಸ ರೀತಿಯು ಸ್ತಬ್ಧವಾಯಿತು, ಆದರೆ ಲೌಕಿಕ ರೀತಿಯು ರೂಢಿಯಲ್ಲಿದ್ದ ಪದಗಳನ್ನು ಗ್ರಾಹ್ಯವೆಂದು ಅಂಗೀಕರಿಸುವುದಕ್ಕೆ ಸಮ್ಮತಿಸಿತು; ಈ ಸಮ್ಮತಕ್ಕೆ ಒಳಪಡುವಂತೆ ಹೊಸ ಹೊಸ ಕಟ್ಟು ಪಾಡುಗಳನ್ನು ಮಾಡಿ ಕೊಟ್ಟಿತು. ಕೂಡಲೇ ಛಾಂದಸ ರೀತಿಗೆ ಅಗ್ರಾಹ್ಯವಾದ ಹೊಸ ಶಬ್ದಗಳೂ ಹೊಸ ಪ್ರಯೋಗಗಳೂ ಒಳನುಗ್ಗಿ ಲೌಕಿಕಕ್ಕೆ ಗ್ರಾಹ್ಯವಾಗಿ ಒಂದೇ ಪಂಕ್ತಿಯಲ್ಲಿ ಕುಳಿತುಕೊಂಡುವು. ಸ್ವಲ್ಪ ಸಮಯ ಇದೆಲ್ಲಾ ಸ್ತಿಮಿತಕ್ಕೆ ಬಂದರೂ ಇದೇ ಅವಾಂತರವು ತಿರುಗಿ ತಿರುಗಿ ತಲೆ ಎತ್ತುತಿತ್ತು. ಆರ್ಯರು ಪಂಜಾಬನ್ನು ಬಿಟ್ಟು, ಗಂಗಾತೀರದ ಉದ್ದಕ್ಕೆ ಇಳಿದು ನೆಲಸಿದ ಹಾಗೆಲ್ಲಾ ಈ ಲೌಕಿಕ ರೀತಿಯ ಅವಾಂತರವು ಮತ್ತೂ ಹೆಚ್ಚಿ, ಛಾಂದಸ ರೀತಿಯನ್ನು ಬೆದರಿಸಿ ತಿನ್ನುವಷ್ಟು ಬೆಳೆಯಿತು. ವೇದಭಾಷೆಯ ಜತೆಯಲ್ಲಿಯೇ ರೂಢಿಯಲ್ಲಿದ್ದು ಬೆಳೆದು ಬಂದ ಆ ಲೌಕಿಕ ರೂಪವೇ ಪ್ರಾಕೃತ ಭಾಷೆ. ಪ್ರಾಕೃತ ಎಂದರೆ ಪ್ರಕೃತಿ ಸಂಬಂಧವಾದದ್ದು ಎಂದರ್ಥ. ಪ್ರಕೃತಿ ಸಂಬಂಧವಾದದ್ದು ಎಂಬದಕ್ಕೆ ವೇದಕ್ಕೆ ಸೇರಿದ್ದೆಂದು ಕೆಲವರು, ರೂಢಿಯಲ್ಲಿ ಇದ್ದುದೆಂದು ಕೆಲವರು ಹೀಗೆ ವಿವಿಧವಾಗಿ ಅರ್ಥ ಮಾಡುವುದುಂಟು.

ಈ ಪ್ರಾಕೃತ ಭಾಷೆಯ ಬೆಳವಣಿಗೆಗೆ ಅನುಕೂಲ ಸಂಧಿಯೂ ದೊರೆಯಿತು. ಸುಮಾರು ಇದೇ ಕಾಲದಲ್ಲಿ ಜನಸಾಮಾನ್ಯಕ್ಕೆ ಸುಲಭವಾದ ಉಪದೇಶದ ಒಂದು ಹಾದಿಯನ್ನು ಹುಡುಕುತ್ತಿದ್ದ ಜೈನ ಬೌದ್ಧ ಧರ್ಮಗಳ ಕೈಗಳಲ್ಲಿ ಈ ಪ್ರಾಕೃತ ಭಾಷೆಯು ಉಪಯುಕ್ತ ಸಾಧನವಾಯಿತು. ವೇದಗಳಲ್ಲಿ ಕಿರಿಬೆರಳಿನಷ್ಟು ಚಿಕ್ಕದಾಗಿ ಹರಿಯುತ್ತಿದ್ದ ಲೌಕಿಕ ರೀತಿಯು ಈಗ ತಕ್ಕಷ್ಟು ದೊಡ್ಡ ಪ್ರವಾಹವಾಗಿ ಬಿಟ್ಟಿತು. ಬರಿ ನೂಲಿನಂತಿದ್ದ ಲೌಕಿಕ ರಪಪವು ಪ್ರಾಕೃತವೆಂಬ ಬೀಳಲೇ ಆಗಿ, ನೆಲ ಹಿಡಿದು ಛಾಂದಸದ ಮೈಯನ್ನೇ ಹಿಸುಕಲು ಬರುವುದನ್ನು ಕಂಡು ಛಾಂದಸ ರೀತಿಯ ಭಾಷೆಯು ಹೆದರಿಸಿ ಎದುರಿಸಲಾರದೆ ತನ್ನ ಭದ್ರತೆಯನ್ನು ಮೊದಲು ನೋಡಿಕೊಳ್ಳುವುದು ಮೇಲು ಮತ್ತು ಆವಶ್ಯಕವೆಂದು ನಿಶ್ಚೈಸಿ, ತನ್ನ ಸುಧಾರಣೆಯನ್ನು ತಾನೇ ಮಾಡಿಕೊಳ್ಳಲು ಪ್ರಾರಂಭಿಸಿತು. ಇತ್ತ ಪ್ರಾಕೃತ ಭಾಷೆಯು ಬಳಕೆಯಲ್ಲಿದ್ದ ಅನೇಕ ಶಬ್ದಗಳನ್ನೂ ಪ್ರಯೋಗಗಳನ್ನೂ ಮತ್ತೊಮ್ಮೆ ಪರೀಕ್ಷಿಸಿ, ಅವುಗಳಲ್ಲಿ ರೂಪಗೆಡದೆ ತನ್ನ ಮರ್ಯಾದೆಯೊಳಗೆ ಬರಬಹುದಾದ ನಿರಾಕ್ಷೇಪಕರವಾದ ಸಂಸ್ಕೃತ ಪದಗಳನ್ನು ಹೆಕ್ಕಿ ತೆಗೆದು ಸ್ಥಾನ ಕೊಟ್ಟಿತು. ಇವೇ **ತತ್ಸಮ** ಶಬ್ದಗಳು. ಅಶಕ್ತಿ, ಅನುಕರಣ, ಇತ್ಯಾದಿ ಕಾರಣಗಳಿಂದ ತನ್ನವರಿಂದಲೇ ತಪ್ಪುತಪ್ಪಾಗಿ ಉಚ್ಚರಿಸಲ್ಪಟ್ಟಿದ್ದರೂ ಬಳಕೆಯಾಗಿ ಹೋಗಿದ್ದ ಶಬ್ದಗಳ ಬುಡವನ್ನು ಅಗೆದು ನೋಡಿತು. ಈ **ಅಪಭ್ರಂಶ** ಶಬ್ದಗಳು, ಮರುಚ್ಚಾರಣೆಯಿಂದ ಗುರುತಿಸಲಾರದಷ್ಟು ವಿರೂಪವಾದ ಶಬ್ದಗಳು ಪೂರ್ವದ ವೇದಶಬ್ದಗಳಿಂದಲೇ ಹುಟ್ಟಿದವೆಂದು ಸಮಾಧಾನವಾದರೆ ಅವನ್ನು ಸ್ವೀಕರಿಸಬಹುದೆಂದು ಒಪ್ಪಿಕೊಂಡಿತು. ಇವೇ **ತದ್ಭವ** ಶಬ್ದಗಳು. ಇಷ್ಟೆ ಅಲ್ಲ, ಆರ್ಯರಿಗಿಂತ ಮೊದಲೇ ಈ ದೇಶದಲ್ಲಿ ವಾಸಿಸಿದ್ದ ಕೋಲ ದ್ರಾವಿಡ ಎಂಬೀ ಕುಲದವರ ಮತ್ತು ಆರ್ಯರ ತರುವಾಯ ಇಲ್ಲಿ ಒಳನುಗ್ಗಿ ಬಂದ ಹೂಣ ಯವನ ಮೊದಲಾದ ಜನಗಳ ಭಾಷೆಗಳೊಳಗಣ ಶಬ್ದಗಳನ್ನು ಕೆಲವೊಂದನ್ನು ತೆಗೆದುಕೊಳ್ಳುವುದಕ್ಕೆ ಈ ಪ್ರಾಕೃತವು ಹಿಂಜರಿಯಲಿಲ್ಲ; ಹೀಗೆ ಸ್ವೀಕೃತವಾದ ಶಬ್ದಗಳೇ "ದೇಶೀಯ" ಶಬ್ದಗಳು. ಅತ್ತ ವೈದಿಕ ಭಾಷೆಯ ಇನ್ನೊಂದು ರೂಪವಾದ ಛಾಂದಸ ಸಂಸ್ಕೃತವು ಸುಮ್ಮನಿರಲಿಲ್ಲ. ಆ ಭಾಷೆಯು ತನ್ನ ಶಬ್ದಕೋಶವನ್ನೂ ವ್ಯಾಕರಣ ಸೂತ್ರಗಳನ್ನೂ ಪರೀಕ್ಷಿಸಿ, ಸಂಸ್ಕರಿಸಿ, ಎಂದರೆ ಒಡೆದು ನೋಡಿ, ಒಟ್ಟುಗೂಡಿಸಿ, ಹೊಸ ಶಬ್ದಗಳು ಒಳಬಾರದಂತೆ ಹೊಸ ಸೂತ್ರಗಳನ್ನು ಕಲ್ಪಿಸಿ ತನ್ನ ಮನೆಯನ್ನು ಕಾಪಾಡಿಕೊಂಡಿತು. ಹೀಗೆ ಸಂಸ್ಕರಿಸಲ್ಪಟ್ಟ ಛಾಂದಸ ರೀತಿಯೇ ಸಂಸ್ಕೃತ ಭಾಷೆ. ಈ ಸಂಸ್ಕೃತ ಭಾಷೆಗೂ, ವೇದಗಳ ಭಾಷೆಗೂ ಬಹಳ ಅಂತರವಿದೆ. ಸಂಸ್ಕೃತ ಭಾಷೆ ಬಂದ ಮಾತ್ರಕ್ಕೆ ವೇದಾರ್ಥವು ತಿಳಿಯುವುದೆಂದು ನೆನಸಲಾಗದು. ವೇದದ ಸಂಸ್ಕೃತ ಭಾಷೆಗೆ ವ್ಯಾಕರಣವೇ ಬೇರೆ. ಸಂಸ್ಕೃತ ಭಾಷೆಯ ವ್ಯಾಕರಣವೇ ಬೇರೆ. ಮುಂದೆ ಈ ಸಂಸ್ಕೃತ ಭಾಷೆಯು ವೇದ ಭಾಷೆಗೆ ಆರ್ಯರು ಕೊಟ್ಟಿದ್ದ ದೇವಭಾಷೆ ಎಂಬ ಹೆಸರನ್ನು ತಾನೂ ಧರಿಸಿಕೊಂಡು, ಇತಿಹಾಸ, ಶಾಸ್ತ್ರ, ಪುರಾಣ, ಕಾವ್ಯ ನಾಟಕಾದಿ ಗ್ರಂಥಗಳಲ್ಲಿ ಮೆರೆದು ಮಹಾ ಪ್ರಸಿದ್ಧಿಯನ್ನು ಪಡೆಯಿತು. (Linguistic Speculations of the Hindu's by Mr. Prabhat Chandra Chakravarti, M. A; Ph. D. ಎಂಬೀ ಇಂಗ್ಲಿಷ್ ಪುಸ್ತಕವನ್ನು ಅವಲಂಬಿಸಿ ಬರೆದದ್ದು.)

ಈ ಉದ್ದದ ಕಂತೆಪುರಾಣವನ್ನು ಓದಿ ದಣಿದವರ ಹತ್ತಿರ ನನ್ನ ಕೇಳಿಕೆ ಇಷ್ಟೆ. "ಸಂಸ್ಕೃತ ಕನ್ನಡ ವಿಚಾರಕ್ಕೆ

ಹೋದರೆ, ಸೀಗೆ ಬಲ್ಲೆಯನ್ನು ಹೊಕ್ಕಂತಾಗುವುದು" ಎಂಬದಾಗಿ ನನ್ನ ಒಂದನೆಯ ಲೇಖದಲ್ಲಿ ಮುಂದಾಗಿ ಕೊಟ್ಟಿದ್ದ ಸೂಚನೆಯೇ ನಾನು ಅವರಿಗೆ ಹೇಳತಕ್ಕ ಸಮಾಧಾನ. ಛಾಂದಸ ಲೌಕಿಕರೂಪ,ಸಂಸ್ಕೃತ ಪ್ರಾಕೃತ ಭಾಷೆ,ಸಂಸ್ಕೃತ ಜನ್ಮ, ಪ್ರಾಕೃತದ ಬಾಲ್ಯ ಇದರಲ್ಲಿಯೇ ವೇಳೆಹೋಯಿತು. ಈ ವಿಚಾರದ ಸೇಸೆಯಲ್ಲಿಯೇ ಮದುವೆ ಅಕ್ಕಿ ತೀರಿಹೋಯಿತೆಂದು ಯಾರೂ ಗೊಣಗುಟ್ಟಬಾರದು. ಇನ್ನು ಕನ್ನಡ,ತುಳು, ಕೊಂಕಣಿಗಳ ಸ್ಥಾನವನ್ನು ಹಿಂದುಸ್ಥಾನದ ಭಾಷೆಯಲ್ಲಿ ಕಂಡು ಹಿಡಿಯಲಿಕ್ಕಿದೆ. ಅಷ್ಟನ್ನು ಮಾಡಿದರೆ 'ಪದಾರ್ಥವೇನು?' ಎಂಬ ಹೆಸರಿಂದ ಬರತಕ್ಕ ಮುಂದಿನ ಲೇಖಗಳಿಗೆ ವಾಚಕರನ್ನು ಕರೆದುಕೊಂಡು ಹೋಗಲಿಕ್ಕೆ ಇರುವ ದಾರಿ ಸುಲಭವಾದೀತೆಂಬ ಭರವಸೆ ನನಗೆ ಇದೆ. ಕನ್ನಡ, ತುಳು ಕೊಂಕಣಿಗಳ ವಿಚಾರಕ್ಕೆ ಸಂಸ್ಕೃತ ಪ್ರಾಕೃತಗಳ ಕೆಲವು ಹೆಗ್ಗುರುತುಗಳು ನಮಗೆ ಗೊತ್ತಿದ್ದರೆ, ಕನ್ನಡ ವ್ಯಾಕರಣಗಳ ಪುಸ್ತಕಗಳಲ್ಲಿ ಆಗಾಗ ಬರುವ ಶಬ್ದ ಜಾತಿ, ತತ್ಸಮ, ತದ್ಭವಗಳು ಏನೆಂಬುದು ವಿಶದವಾಗುತ್ತದೆ. ತಿಳಿದವರಿಗೆ ಇದನ್ನು ಹೇಳಬೇಕೆಂದಿಲ್ಲ; ಇದು ನಿಜ. ಆದರೆ ತಿಳಿದವರಿಗೆ ತಿಳಿಯದ ಹಾಗೆ ಮಾಡಲಿಕ್ಕೂ ಒಂದು ವಿಧದ ಬುದ್ಧಿ ಚಾತುರ್ಯವು ಬೇಕಷ್ಟೆ! ಇಂಥ ಸಾಮರ್ಥ್ಯವನ್ನು ನನಗೆ ದಯಪಾಲಿಸಿದ ಮಾಮಯಿ ಶ್ಯಾಮನ ವ್ಯಾಕರಣದ ಶಬ್ದ ಜಾತಿಯ ತತ್ಸಮ ತದ್ಭವಾದಿಗಳ ಪರೀಕ್ಷೆಯು ನನಗೆ ಜ್ಞಾಪಕದಲ್ಲಿದೆ. ಇದು ಏಗಳ ಕಾಲದ ಪುರಾಣ ಕಥೆಯೂ ಅಲ್ಲ, ಹಳೆ ಹೊಸ ಒಡಂಬಡಿಕೆಗಳ ಪಡುವಣಕಾಲದಲ್ಲಿ ಕಟ್ಟಿದ ಕಥೆ.

ಮಾಮಯಿ ಶ್ಯಾಮನು ಇಂಗ್ಲಿಷ ಮಿಡಲ್‌ಸ್ಕೂಲಿಗೆ ನೇಮಕವಾದ ಕನ್ನಡ ಪಂಡಿತರು.ಇವರಿಗೆ ಇಬ್ಬರು ಹೆಂಡಿರು, ಮೂವರು ಮಕ್ಕಳು. ಮೊದಲನೆಯವಳು ಇವರ ಕಾಲು ಹಿಡಿದು ಮನೆಗೆ ಬಂದವಳು; ಎರಡನೆಯವಳು ಇವರೇ ಕೈಹಿಡಿದು ಮನೆಗೆ ತಂದವಳು. ಮಾಮಯಿ ಎಂಬದು ಇವರೇ ಮಾಡಿದ ಮಹಾಮಾಯೆ ಎಂಬದರ ಅಪಭ್ರಂಶ; ಇದು ಮೊದಲನೆಯವಳಿಗೆ ಮನೆ ತುಂಬಿದ ಮೇಲೆ ಇಟ್ಟ ಹೆಸರು; ಆಕೆಯ ತವರಿನ ಹೆಸರು ಮಾತ್ರ ಅದಲ್ಲ. ಅಲ್ಲಿ ಈಕೆ ಅಚ್ಚಮ್ಮನಾಗಿದ್ದಳು. ಅಚ್ಚಮ್ಮನು ತಲೆಕಳ ಶಾಲೆಯಲ್ಲಿ ನಾಲ್ಕು ವರ್ಷ ಓದಿದವಳು; ಆ ಶಾಲೆಯಲ್ಲಿ ತಲೆಯ ಹೆಸರೇ ತಲೆಕಳ ಅಚ್ಚಮ್ಮ; ಶಾಲೆಯ ಇನಾಮುಗಳೆಲ್ಲಾ ಪಡೆಯತಕ್ಕವಳು ತ. ಅಚ್ಚಮ್ಮ. ತ. ಅಚ್ಚಮ್ಮನು ವಿವಾಹವಾಗಿ, ಮಹಾಮಾಯೆಯಾಗಿ, ಗಂಡನನ್ನು ಮಾಮಯಿ ಶ್ಯಾಮನನ್ನಾಗಿ ಮಾಡಿ, ಹತ್ತು ವರ್ಷದ ಸಂಸಾರ ಮಾಡಿ, ಒಂದು ಹೆತ್ತು, ಒಂದು ಹೊತ್ತು ಶಿವಾಧೀನಳಾದಳು! ಎಂದರೆ? ಎಂದರೆ, "ಶಿವನಿಗೆ ಅಧೀನಳಾಗಿ" ಹೋದಳು ಎಂದರ್ಥ, ಅಷ್ಟೆ. ಆಕೆ ಹಾಗೆ ಹೋದ ನಂತರ ಮಾಮಯಿ ಶ್ಯಾಮನು ಮೊದಲೇ ಕಣ್ಣಿಟ್ಟಿದ್ದ ಹೊಸ ಹೆಣ್ಣೊಂದನ್ನು ಕುಕ್ಕೆ ಪದವಿಗೆ ಓಡಿ, ತಾನೇ ಎರಡನೆಯ ಮದುವೆಯಾಗಿ, ಮನೆಗೆ ಮನೆ ಮಾಡಿಕೊಂಡು ಬಂದನು. ಈಕೆಯ ಹೆಸರೇ ದೇಜಿ, ಇಲ್ಲವೇ ದೇಶಿ, ಎರಡೂ ಒಂದೇ.

ಅಚ್ಚಮ್ಮನಲ್ಲಿ ಒಬ್ಬನೇ ಹುಡುಗ, ನಮ್ಮ ಕ್ಲಾಸಿನ ಗೋಪಣ್ಣ. ಗೋಪು ನೋಡಲಿಕ್ಕೆ ಲಕ್ಷಣ, ಮುಖ ಅಚ್ಚಮ್ಮನದೇ. ಮೈಕಟ್ಟು ತ. ಅಚ್ಚಮ್ಮನದೇ, ಕಲಿಯುವುದರಲ್ಲಿಯೂ ಗಟ್ಟಿಗ; ಆಟದಲ್ಲಿಯೂ ಚುರುಕು. ಆದರೆ ಇದಕ್ಕೆ ಸರಿ ವಿರೋಧ ಅವನ ಮಲತಾಯಿ ಮಗ. ಈತನ ಹೆಸರು ಹೇಳುವುದೇ ಬೇಡ. ಯಾವ ಕೆಲಸಕ್ಕೂ ಬಾರದ ಕದ್ದು ತಿನ್ನುವ ಪೋಲಿ ತಿರುಗುವ ಬೀದಿ ಹುಡುಗ. ಈ ಪರದೇಶಿ ಹುಡುಗನ ನಡತೆಗೆ ಏನು ಮಾಡುವುದೆಂದು ತಾಯಿ ತಂದೆ ಬಹಳ ಉರುಡಾಡಿದರು. ಅವನಿಗೆ ಬುದ್ಧಿ ಹೇಳಿದರು. ಕಡೆಗೆ ಸಾಲಗ್ರಾಮ ಶಾಂತಿ ಮಾಡಿದರು. ಇದರಿಂದ ಸ್ವಲ್ಪ ಸಮಾಧಾನವಾಯಿತು. ಮಾಡಿದ್ದು ಸಾಲಗ್ರಾಮದ ಶಾಂತಿ ಒಂದೇ;ಸಿಕ್ಕಿದ ಫಲಮಾತ್ರ ಮೂರು. ಅದರಿಂದಲೋ ಏನೊ, ಹುಡುಗನ ನಡತೆ ತಿದ್ದುತ್ತಾ ಬಂತು. ಹೆಂಡತಿ ಸುಖವಾಗಿ ಹೆಣ್ಣನ್ನು ಹಡೆದಳು. ಮದುವೆ ಜಾತ್ರೆಗಳಿಗಾಗಿ ಹಳ್ಳಿಯಲ್ಲಿ ಎತ್ತಿದ ಆ ಗ್ರಾಮಸಾಲ ಈ ಸಾಲಗ್ರಾಮ ಶಾಂತಿಯಿಂದ ಸಂದಾಯವಾಯಿತು. ಆದ್ದರಿಂದಲೇ ಅವರ ಹೆಣ್ಣು ಮಗುವಿಗೆ ಸಾಲಗ್ರಾಮಿ ಎಂದು ಹೆಸರು. ಗ್ರಾಮಿ ಎಂಬದು ತಂದೆಯು ಕೂಸನ್ನು ಕರೆಯುವ ಕೊಂಡಾಟದ ತುಂಡು ಹೆಸರು. ಹೀಗೆ ಮನೆಯಲ್ಲಿ ಗಂಡ, ಹೆಂಡತಿ, ಮೂವರು ಮಕ್ಕಳು, ಒಟ್ಟು ಐದು ಮಂದಿ ಇದ್ದರು.

ಮಾಮಯಿ ಶ್ಯಾಮನ ತಲೆಯೆದೆಗಳು ಎರಡೂ ಗಟ್ಟಿ—ಅವರಿಗೆ ಮನೆಯಲ್ಲಿ ಸುಖವಿಲ್ಲ, ಮನಸ್ಸಿನಲ್ಲಿ ನೆಮ್ಮದಿಯಿಲ್ಲ. ಅವರು ಕಲಿತದ್ದು ಕಡಮೆಯಿದ್ದರೂ, ಕಲಿಸಿದ್ದೊಂದು ಮಕ್ಕಳ ಮನಸ್ಸಿನಲ್ಲಿ ಚೆನ್ನಾಗಿ ಉಳಿಯುತ್ತಿತ್ತು—ಪೆಟ್ಟು! ಪೆಟ್ಟು ಕೊಡಲಿಕ್ಕೆ ಬೆತ್ತವೇ ಅವರಿಗೆ ಆಗಬೇಕೆಂದಿರಲಿಲ್ಲ; ಪೊರಕೆ, ದೊಣ್ಣೆ, ಸೋಂಟೆ, ಒನಕೆ, ಯಾವುದಾದರೂ ಆಗುತ್ತಿತ್ತು. ಅವರಲ್ಲಿ ಆಯುಧ ಭೇದವು ಇರಲಿಲ್ಲ; ಅಪರಾಧ ಭೇದವೂ ಇರಲಿಲ್ಲ. ಗುತ್ತಿನ ಮನೆ ಅಪ್ಪಯ್ಯನನ್ನು ಬಿಟ್ಟು ಉಳಿದೆಲ್ಲರಿಗೂ ಒಂದೇ ರೀತಿ-ಪೆಟ್ಟು! ಪೆಟ್ಟಿನ ವಿಷಯ ಮಕ್ಕಳಿಗೆ ಅವರು ಒಳ್ಳೆ ಆಧಾರ ಕೊಡುತ್ತಿದ್ದರು. ಹುಡುಗನನ್ನು ಕದಲದಂತೆ ಕಂಬಕ್ಕೆ ಕಟ್ಟುತ್ತಿದ್ದರು, ಕೋಲದಂಟೆ ಆಧಾರ ಇರಲಿಲ್ಲ. ಅವರ ಸರ್ವಜ್ಞೋಕ್ತಿಗಳು ಎರಡು ಇಲ್ಲಿವೆ; "ಹುಡುಗರಬೆನ್ನಿಗೆ ಪೆಟ್ಟು, ಇದೇ ಕಲಿಸುವ ಗುಟ್ಟು". "ದೊಡ್ಡಪ್ಪಯ್ಯಗೆ ಟೊಪ್ಪಿ ಕೋಟು, ಬಡವರ ಮಕ್ಕಳ ಬೆನ್ನಿಗೆ ಏಟು".

ಈ ಏಟು ತಿಂದದ್ದು ಏಳು ಜನ್ಮಕ್ಕೂ ಮರಿಯುವಹಾಗಿಲ್ಲ.
ಒನಕೆ ಕುಟ್ಟಿಗೆ ಒರಳ ಬತ್ತವಾಗಬಹುದು;
ರಂಪೆಧಾರಿಗೆ ಮೊಚ್ಚೆತೊಗಲಾಗಬಹುದು; ।
ಅಡಿಗಲ್ಲ ಮೇಲೆ ಕೆಂಪಗೆ ಕಾದು ಚಮ್ಮಟಿಗೆ
ಗುದ್ದುಂಬ ಲಾಳ ಕಬ್ಬಿಣವಾಗಬಹುದು. ॥
ಎಳೆವ ಕಮ್ಮಿಚಿ ಬಾಯ ಸರಿಗೆಯಾಗಲು ಬಹುದು;
ಹಿಳಿವ ಆಲೆಯ ದವಡೆ ಕಬ್ಬಾಗಬಹುದು; ।
ವರ ಚಿವಿಟಿಯಲಿ ಬಾಲ ಮಂಗನಾಗಲುಬಹುದು.
ಕೋಲೇಟಿನಯ್ಯಳಿಗೆ ಬೆನ್ನುಕೊಡು ಮಗನೇ! ॥

ನಮಗೆ ಸಾಲೆಯಲ್ಲಿ ಪಾಠಕ್ಕಿಂತ ಪರೀಕ್ಷೆ ಹೆಚ್ಚು. ಪಂಡಿತರಿಗೆ ಮುಂಚಿನ ರಾತ್ರಿ ತಾಳಮದ್ದಳೆ ಇದ್ದರೆ, ಶಾಲೆಗೆ ಬಾರದಿದ್ದರೆ, ಶಾಲೆಯಲ್ಲಿ ಕೆಲಸವಿದ್ದರೆ, ತಲೆನೋವು ಇದ್ದರೆ, ಮಾತಾಡುವವರು ಬಂದಿದ್ದರೆ, ಮನಸ್ಸಿದ್ದರೆ, ಇಲ್ಲದಿದ್ದರೆ, ಪ್ರತಿ ದಿವಸ ಗಂಟೆ ಗಂಟೆ ಪರೀಕ್ಷೆ. ಈ ದಿನ ಐಗಳ ಪಂಡಿತರು ತನ್ನ ಅಳುವ ಕೂಸು "ಗ್ರಾಮ್ಯಯನ್ನು" ಸಂತೈಸಲಿಕ್ಕಾಗಿ ಸಾಲೆಗೆ ಕರೆದುಕೊಂಡು ಬಂದಿದ್ದರು; ಆದ್ದರಿಂದ ಪರೀಕ್ಷೆ! ಎಂದಿನಂತೆ ಈ ಹೊತ್ತು ಅದೇ ಹಾಳು ವ್ಯಾಕರಣದಲ್ಲಿ ಪರೀಕ್ಷೆ. ನಮ್ಮ ನಮ್ಮ ವ್ಯಾಕರಣ ಪುಸ್ತಕಗಳನ್ನು ಮೇಜಿನ ಮೇಲೆ ಇಟ್ಟದ್ದಾಯಿತು. ಸ್ಲೇಟುಗಳನ್ನು ಹಿಡಿದುಕೊಂಡು ಬೆನ್ನಿಗೆ ಬೆನ್ನು ಮಾಡಿ ನಿಂತದ್ದಾಯಿತು. ಪಂಡಿತರ ಗೊರಿಕೆಯ ಬಾಯಿಂದ ಎರಡೇ ಪ್ರಶ್ನೆ ಹೊರಟದ್ದಾಯಿತು. ಅವನ್ನು ಬೋರ್ಡಿನ ಮೇಲೆ ಅವರ ಮಗನು ಬರೆದದ್ದಾಯಿತು.

"ಶಬ್ದವೆಂದರೇನು? ಶಬ್ದಜಾತಿಯ ಹೆಸರುಗಳನ್ನು ಹೇಳು"

ಅರ್ಧಗಂಟೆಯ ನಂತರ ಪಂಡಿತರು ಎಚ್ಚೆತ್ತು, "ಸ್ಲೇಟುಗಳನ್ನು ಕೆಳಕ್ಕೆ ಇಡಿ" ಎಂದು ಆಕಳಿಸಿದರು. ನಮಗೆ ಎದೆ ಹಾರಲಿಕ್ಕೆ ಹತ್ತಿತು; ಏಕೆಂದರೆ, ನಮ್ಮ ಸ್ಲೇಟುಗಳು ಇದ್ದ ಹಾಗೆ ಬರಿದಾಗಿಯೇ ಇದ್ದುವು. "ಬರೆದವರು ನಿಲ್ಲಿ" ಎಂದು ಸ್ವರ ಬಂತು. ಇಬ್ಬರು ಮಾತ್ರ ಎದ್ದರು; ಪಂಡಿತರ ಮಗ ಗೋಪಣ್ಣ ಮತ್ತು ಅವನ ಪಕ್ಕದ ಸಾಲೂ ಪಾಯ್ಸು. ಸಾಲೂ ಪಾಯ್ಸು ಶುದ್ಧ ಟೊಣಪ, ಹೇಗೆ ಬರೆದನೆಂದು ಎಲ್ಲರ ಕಣ್ಣುಗಳೂ ಆತನ ಕಡೆಗೇ ತಿರುಗಿದುವು. ಪಂಡಿತರು ಬೆತ್ತ ಹಿಡಿದು "ಗೋಪಿ! ನೀನು ಓದು" ಎಂದು ಮುಂದೆ ಬಂದರು.

ಗೋಪು:– "ಶಬ್ದವೆಂದರೆ, ಸರಿಯಾದ ಅರ್ಥವುಳ್ಳ ಅಕ್ಷರ ಇಲ್ಲವೆ ಅಕ್ಷರಗಳ ಗುಂಪು. ಶಬ್ದಗಳಲ್ಲಿ ತತ್ಸಮ, ತದ್ಭವ, ದೇಶಿ, ಅನ್ಯದೇಶಿ, ಗ್ರಾಮ್ಯ ಎಂಬ ವಿಧ".

ಪಂಡಿತರು ಸಾಲೂ ಕಡೆಗೆ ದಿಟ್ಟಿಸಿ ನೋಡಿ, "ಸಾಲೂ ಪಾಯಸಾ! ತಿನ್ನಿಸುತ್ತೇನೆ ನಿನಗೆ! ನಕಲು ಮಾಡಿದೆ! ಸತ್ಯ ಹೇಳು!" ಎಂದು ಗಜರಿದರು.

ಸಾಲು ಎವೆ ಹಾಕದೆ ನೋಡುತ್ತ, "ಇಲ್ಲ. ನಕಲು ಅಲ್ಲವೇ ಅಲ್ಲ. ನಾನು ನೋಡಿಯೇ ಬರೆದದ್ದು" ಎಂದು ಹೆದರದೆ ಹೇಳಿಬಿಟ್ಟನು. ನಾವೆಲ್ಲರೂ ಮೂಕರಂತೆ ಕಣ್ಣುಗಳನ್ನು ಪಿಳಿಪಿಳಿಸುತ್ತಿದ್ದೆವು.

ಪಂಡಿತ:– "ನಕಲು ಅಲ್ಲವಂತೆ! ನೋಡಿ ಬರೆದದ್ದಂತೆ! ಕಳ್ಳ! ಯಾರನ್ನು ನೋಡಿ ಬರೆದದ್ದು!"

ಸಾಲೂ:– "ಈ ಸವಾಲ್ ನಾನೇ ಬರೆದದ್ದು! ಈ ಸವಾಲಿಗೆ ಮಾತ್ರ ಗೋಪಣ್ಣ ನನ್ನು ನೋಡಿ ನೆನಪುಮಾಡಿ ಬರೆದದ್ದು"

ಪಂಡಿತರು ಒಂದು ಬಿಸಿ ಏಟು ಕೊಟ್ಟು, "ನೋಡಿ ನೋಡಲಿಲ್ಲವೆಂದು ಸುಳ್ಳು ಹೇಳುತ್ತೀ? ಮುಟ್ಠಾಳ! ಓದೊ! ನಿನಗೆ ಹೇಗೆ ಗೊತ್ತಾಯಿತು?" ಎಂದು ಅವುಡು ಕಚ್ಚಿ ಒದರಿದರು. ಸಾಲೂ ಸ್ಲೇಟನ್ನು ನೋಡಿ, "ಶಬ್ದ ಆಗುವುದು ಹ್ಯಾಗಂದರೆ: ಸೀಮೆ ಎಣ್ಣೆ ಖಾಲಿ ಡಬ್ಬಿಯ ಮೇಲೆ ಕೊಡಂಟಿನಿಂದ ಗಟ್ಟಿಯಾಗಿ ಬಡೆದರೆ ಆಗುತ್ತದೆ ಶಬ್ದ" ಎಂದು ಮೊದಲಿನ ಪ್ರಶ್ನೆಯ ಉತ್ತರ ಓದಿದನು. ಪಂಡಿತರು ಸಿಟ್ಟನ್ನು ನುಂಗಿ "ಮುಂದೇನು ಬರೆದಿದ್ದೀ, ಹುಚ್ಚಾ!" ಎಂದು ಕೇಳಿದರು.

ಸಾಲೂ:– "ಈ ಸವಾಲಿಗೆ ಬರೆಯುವ ಮುಂಚೆ ನಾನು ಗೋಪಣ್ಣನನ್ನು ನೋಡಿದೆ; ನನಗೆ ಎಲ್ಲಾ ನೆನಪಾಯಿತು. ನಾನು ಬರೆದೆ ಓದಲೋ?"

ಪಂಡಿತ:– ಓದೋ! ಓದೋ! ತತ್ಸಮ, ತದ್ಭವ, ದೇಶಿ, ಅನ್ಯದೇಶಿ, ಗ್ರಾಮ್ಯ-ಎಲ್ಲಾ ಬರೆದಿದ್ದೀಯೋ?"

ಸಾಲೂ:– "ಗೋಪಣ್ಣನ ತಾಯಿ, ಮಲತಾಯಿ, ಮಕ್ಕಳು ಎಲ್ಲಾ ಬರೆದೆ— ನೋಡಿ! ತ ಅಚ್ಚಮ, ಗೋಪಣ್ಣ, ದೇಶಿ, ಅವರ ಮಗ ಅವರ ಮಗಳು ಪರದೇಶಿ, ಗ್ರಾಮಿ."

ಪಂಡಿತರ ತುಟಿಗಳಲ್ಲಿ ಜನ್ಮಾಂತರದ ನಗು ಮೊಳೆಯಿತು.

ಪಂಡಿತ:– "ಮೊದಲನೇ ತಚ್ಚಮ! ತತ್ಸಮ! ಸರಿ! ಸರಿ! ತದ್ಭವ ಎಲ್ಲಿ ಹೋಯಿತೋ?"

ಸಾಲೂ:– "ತ. ಅಚ್ಚಮ **ಹುಟ್ಟಿದ್ದು** ಗೋಪಣ್ಣ. ಇಕೊಳ್ಳಿ, ಗೋಪಣ್ಣ ಬರೆದಿದ್ದೇನೆ, ನೋಡಿ" ಹೀಗೆಂದು ಸಾಲೂ ಸ್ಲೇಟನ್ನು ಎತ್ತಿ ಎಲ್ಲರಿಗೂ ತೋರಿಸಿದನು.

ಸಾಲೂ ಒಬ್ಬ ಹೊರತು ನಾವೆಲ್ಲರೂ 'ಗೊಳ್' ಎಂದು ಖೋಕರಿಸಿದೆವು. ಆ ದಿನ ಮಾತ್ರ ಗೋಪಣ್ಣನೂ ನಮ್ಮೊಟ್ಟಿಗೆ ಸೇರಿ, ಮುಗುಳು ನಗು ನಕ್ಕನು. ಕಡೆಗೆ ಸಾಲೂ ಕೂಡ ಗಹಗಹಿಸಿ ಬಿಟ್ಟನು. ಹುಡುಗರ ನಗುವಿನ ಕಳಕಳದಿಂದ ಶಾಲೆಯು ಮಾಡು ಎದ್ದು ಹೋಗುವಂತಿತ್ತು. ಕೋಲಯ್ಯನವರ ಓದಿನ ಏಟು ಅಂದಿನಿಂದ ಕಡಮೆಯಾಯಿತು.

ವೇದ ಸಂಸ್ಕೃತದಿಂದ ಪ್ರಾಕೃತ ಮತ್ತು ಸಂಸ್ಕೃತ ಆದದ್ದು ಹೇಗೆಂಬದು ಸಾಲೂ ಪಾಯ್ಸನ ಮಾತುಗಳಿಂದ ವಾಚಕರಿಗೆ ಈಗಲಾದರೂ ಸ್ವಲ್ಪ ಮನವರಿಕೆಯಾಗಬಹುದಷ್ಟೆ.

[ಕಂಠೀರವ—೧೯೩೫-೩೬]

# ಸ್ಥಳನಾಮ

ಈ ಪೃಥ್ವಿಯ ಮೇಲಿನ ಸೃಷ್ಟಿಚಮತ್ಕಾರಗಳಿಂದ ಬೆರಗಾಗಿ ಬೆಪ್ಪುಗೊಂಡ ಮಾನುಷ ಬುದ್ಧಿಯು ಅವುಗಳ ಕಾರಣಗಳನ್ನು ಹುಡುಕಹೋಗಿ ತನ್ನ ಸಮಾಧಾನಕ್ಕಾಗಿ ಕಲ್ಪಿಸಿಕೊಂಡ ಕಥೆಗಳು ಪ್ರತಿಯೊಂದು ಜನಾಂಗದ ಇತಿಹಾಸ ಪ್ರಾರಂಭದಲ್ಲಿ ಅನಾದಿಕಾಲದಿಂದ ದೊರೆಯುತ್ತವೆ. ಮನುಷ್ಯನನ್ನು ದಿಗಿಲುಗೊಳಿಸುವ ಸಿಡಿಲು ಮಿಂಚು ಇಂದ್ರನ ವಜ್ರಾಯುಧದಿಂದ ಪ್ರಾಪ್ತವಾಗುತ್ತದೆಂದು ಅವನ ಬುದ್ಧಿಗೆ ತೋರಿತು; ನೆಲವನ್ನು ತಣಿಸುವ ಮಳೆಯು ಅಷ್ಟದಿಗ್ಗಜಗಳ ಸೊಂಡಿಲುಗಳಿಂದ ಹೊಯ್ಯುವ ನೀರೆಂದು ಭಾಸವಾಯಿತು. ಸೂರ್ಯ ಚಂದ್ರರ ಗ್ರಹಣಬಾಧೆಯು ರಾಹು ಕೇತುಗಳ ರಾಕ್ಷಸ ಕಾರ್ಯವೆಂದು ಕಲ್ಪಿತವಾಯಿತು. ಮನುಷ್ಯನ ಬುದ್ಧಿಯು ಮೇಲಿನ ಆಕಾಶವನ್ನು ಹೇಗೋ ಹಾಗೆಯೇ ಕೆಳಗಿನ ಪೃಥ್ವಿಯನ್ನು ಸುತ್ತುತ್ತ ನೋಡುವಷ್ಟಕ್ಕೆ ಅದರ ಮೇಲಿನ ಚರಾಚರ ವಸ್ತುಗಳ ವೈಚಿತ್ರ್ಯಗಳಿಗೆ-ಅಂದರೆ, ಆನೆಯ ಉದ್ದ ಸೊಂಡಿಲಿಗೆ, ನವಿಲಿನ ಹೀಲಿಯ ಕಣ್ಣಿಗೆ, ಹದ್ದಿನ ಕೊಂಕು ಮೂತಿಗೆ, ಹೊಳೆಯ ಕರಿಯ ಮಳಲಿಗೆ, ಬೆಟ್ಟದ ಮೇಲಿನ ನೀರಿಗೆ, ಬಂಡೆ ಒಳಗಣ ಊಟೆಗೆ–ಕಾರಣಗಳನ್ನು ಹುಡುಕಿ ತೆಗೆಯುವುದಕ್ಕೆ ನೋಡಿತು. ಈ ಅನ್ವೇಷಣವೇ ಸಕಲ ಶಾಸ್ತ್ರ ಸಿದ್ಧಾಂತಗಳ ಉಗಮಸ್ಥಾನವು. ಸೃಷ್ಟಿಯಲ್ಲಿಯ ಆಶ್ಚರ್ಯಾದ್ಭುತಗಳು, ಚಿತ್ರ ಚಮತ್ಕಾರಗಳು, ಜನನ ಮರಣಗಳು, ರೋಗರುಜಿನಗಳು, ಇತ್ಯಾದಿಗಳನ್ನು ಶೋಧಿಸಿ ಮಾನವ ಬುದ್ಧಿಯು ಕಂಡುಹಿಡಿದ ಕಾರಣಗಳು ಸರಿಯೂ, ಸತ್ಯವೂ, ಸನಾತನವೂ ಆದರೆ, ವಿಜ್ಞಾನವು (Science) ಜನಿಸುವುದು; ಶೋಧವು ಸತ್ಯದ ಕಡಿದು ದಾರಿಯನ್ನು ಬಿಟ್ಟು ಊಹೆಯ ಮಾರ್ಗದಲ್ಲಿ ಬೇಕುಬೇಕಾದಂತೆ ವಿಹರಿಸುತ್ತ ಹೋದರೆ, ಮನೋರಂಜಕವಾದ ಕಥೆಯು ಹುಟ್ಟುವುದು. ಈ ಪ್ರಕಾರವಾಗಿ ಮನುಷ್ಯನ ಬುದ್ಧಿಯಿಂದ ಆಗಾಗ ಕಲ್ಪಿತವಾದ ನಾನಾ ಕತೆಗಳು ತಲಾತಲಾಂತರವಾಗಿ ಇಳಿದು ಕಾಲಾನುಕ್ರಮದಲ್ಲಿ ದಂತ ಕತೆ, ಕಟ್ಟು ಕತೆ, ಅಜ್ಜಿ ಕತೆ, ಪುಡಿ ಕತೆ, ಪುರಾಣಕತೆ, ಹಳೆಯ ಪಳಮೆ, ಪಾಡ್ದೊನೆ, ಪವಾಡ ಮೊದಲಾದ ಹೆಸರುಗಳಿಂದ ಕರೆಯಲ್ಪಟ್ಟು ಆಯಾ ಜನಗಳಲ್ಲಿ ಹರಡಿಕೊಂಡು, ಕ್ರಮೇಣ ಕವಿತೆಗಳಲ್ಲಿಯೂ ಬರಹಗಾರರ ಬರಹಗಳಲ್ಲಿಯೂ ರೂಪುಗೊಂಡು, ಜನಾಂಗದ ವಾಙ್ಮಯದಲ್ಲಿ ಇದು ವರೆಗೆ ಬಂದು ನಿಂತಿವೆ. ಇಂಥ ಕಟ್ಟುಕತೆಗಳು ಕನ್ನಡ ನಾಡಿನಲ್ಲಿರುವ ಕೆಲವು ಸ್ಥಳಗಳ ಹೆಸರುಗಳಲ್ಲಿ ಅಡಕವಾಗಿವೆ.

ಕೊಡಗು ಸೀಮೆಯಲ್ಲಿ 'ಕೊಡಲಿಪೇಟೆ' ಎಂಬದೊಂದು ಸ್ಥಳವಿದೆ. ಅದಕ್ಕೆ ಆ ಹೆಸರು ಬರಲು ಕಾರಣವನ್ನು ಹುಡುಕಿ, ಮನುಷ್ಯನ ಬುದ್ಧಿಯು ಯೋಜಿಸಿದ ಕಲ್ಪನೆ ಕೇಳಿರಿ! ಪರಶುರಾಮನು 'ಕ್ಷತ್ರಿಯರ ತಲೆಗಡಿಯೆ ಪರಶುವನು ಮಸೆದಿರಿಂ' ಆ ಊರಿಗೆ ಕೊಡಲಿಪೇಟೆ ಎಂಬ ಹೆಸರಾಯಿತಂತೆ! 'ಕೊಡಲಿ ರಾಮನ ಸಿಡಿಲಿಗಳುಕಿ ಹಿಂದೋಡಿ ಕಡಲಾರೆ...... ಅಲೆಗಳನ್ನೊಡೆದು ಮೂಡಿ' ತುಳುನಾಡು ಎದ್ದಿತಂತೆ! ಮೈಸೂರು ಸೀಮೆಯಲ್ಲಿ ಬಂದಳಿಕೆ ಎಂಬದೊಂದು ಹಳ್ಳಿ ಇದೆ. ಅದನ್ನು ಆ ಹೆಸರಿನಿಂದ ಏತಕ್ಕೆ ಕರೆಯುವರೆಂಬುದನ್ನು ಕವಿಯು ಸುರಸವಾದ ಮಾತುಗಳಲ್ಲಿಯೇ ವಿಸ್ತರಿಸುವ! ಒಮ್ಮೆ ಪರಶಿವನು ಹೆಂಡತಿ ಮಕ್ಕಳನ್ನೂ ಮನೆಮಾರನ್ನೂ ತೊರೆದು ಬಿಟ್ಟು ಕಾಡಿನಲ್ಲಿ ಒಂಟಿಯಾಗಿ ಅಲೆಯುತ್ತಿದ್ದಾಗ, ಒಮ್ಮೆ "ಹಿಂದಿರುಗಿ ನೋಡಿ,ಪಾರ್ವತಿದೇವಿ! ಬಿಟ್ಟೋಡಿ ಬಂದಿರಲು ಇಲ್ಲಿಗೂ ಬಂದಳಿವಳೆಂದು ಬೇಸರದಿಂದ 'ಬಂದಳೀಕೆ' ಎನಲು ದೇವನಂದುಸುರಿದಾ ತಾಣದಲಿ ಒಂದು ಊರಾಯ್ತು. ಜನರೆಲ್ಲ ಬಂದಳಿಕೆ, ಬಂದಳಿಕೆ ಎಂದು ಹ್ರಸ್ವವ ಮಾಡಿ ಕರೆಯ ತೊಡಗಿದರು."

ಮನುಷ್ಯನ ಕಲ್ಪನಾ ಸಾಮರ್ಥ್ಯವು ಕುದುರಿದ ಹಾಗೆಲ್ಲಾ ಅನೇಕ ಹಳ್ಳಿಪಳ್ಳಿಗಳ ಹೆಸರುಗಳ ಮೇಲೆ ಇಂಥ ಕಟ್ಟುಕತೆಗಳು ಚಿಗುರಿ ಬೆಳೆದು, ಅವುಗಳ ಹುಟ್ಟನ್ನು ಅಡಗಿಸುವಷ್ಟು ಹಬ್ಬಿಹೋಗಿವೆ. ಆ ಹೆಸರುಗಳ ಮೇಲೆ ಬೀಳುವ ತರಗೆಲೆಗಳನ್ನೂ ಏಳುವ ಮುಳ್ಳುಪೊದೆಗಳನ್ನು ತೆಗೆದು ಬಿಸುಡುವುದಕ್ಕೆ ನಮ್ಮ ಬುದ್ಧಿಯು ಪ್ರಯತ್ನಿಸುವುದೇ ಇಲ್ಲ; ಏಕೆಂದರೆ, ಕಡಿದಾದ ವಿಚಾರಮಾರ್ಗದಲ್ಲಿ ತಪ್ಪಿಲ್ಲದೆ ಒಂದೊಂದೇ ಹೆಜ್ಜೆಯಿಟ್ಟು ನಡೆಯುವುದಕ್ಕಿಂತ ಕಲ್ಪನೆಯ ಬಯಲಿನಲ್ಲಿ ಅಲೆದಾಡುವುದು ಅದಕ್ಕೆ ಸುಲಭವಾಗಿಯೂ ಸೊಗಸಾಗಿಯೂ ತೋರುತ್ತದೆ. ಶೋಧದಲ್ಲಿ ಆಸಕ್ತನಾದವನಿಗೆ ಕಲ್ಪನಾಶಕ್ತಿಗಿಂತ ವಿಚಾರಶಕ್ತಿಯು ಅತ್ಯಾವಶ್ಯಕ; ಸತ್ಯವು ಅಪ್ರಿಯವಾಗಿದ್ದರೂ ಅದನ್ನೇ ಕಂಡುಹಿಡಿಯಬೇಕೆಂಬ ಹಟವಿರಬೇಕು. ಹೀಗೆ ಹೇಳಿದ್ದರಿಂದ ಹುಡುಕುವವನು ಸ್ಥಳಗಳ ವಿಷಯವಾದ ಆಕಾಶ ಪುರಾಣಗಳನ್ನು ಓದಲೇಬಾರದೆಂದು ಅರ್ಥವಲ್ಲ; ಅವುಗಳಲ್ಲಿ ಜಳ್ಳು ಎಷ್ಟು, ಕಾಳು ಎಷ್ಟು ಎಂದು ತೂರುವ ಮೊದಲು ಆ ಸ್ಥಳಗಳ ಹೆಸರುಗಳನ್ನು ಮುಚ್ಚಿದ್ದ ಗಿಡಗಂಟಿಗಳನ್ನು ಕತ್ತರಿಸುವುದಕ್ಕೆ ಪ್ರಯತ್ನಿಸಬೇಕು; ಹಾಗೆ ಕತ್ತರಿಸಿದರೆ ಆ ಹೆಸರುಗಳ ಹುಟ್ಟು ಬುಡವನ್ನು ನಿರ್ಧರಿಸುವುದಕ್ಕೆ ಕಷ್ಟವಾದರೂ, ಅವುಗಳ ಬಂಧು ಬಳಗ, ಕುಲಗೋತ್ರ, ಜೋಡುಕೂಡು, ಮೊದಲಾದುವನ್ನು ತಿಳಿಯಲು ಸಾಧ್ಯವಿದೆ.

ಈ ವಿಚಾರಸರಣಿಯನ್ನು ಮುಂದುವರಿಸಿದರೆ, ಹಲವು ಕನ್ನಡ ಮಾತುಗಳು ಹೇಗೆ ಬಂದುವು, ಎಲ್ಲಿಂದ ಬಂದುವು ಎಂದು ಗೊತ್ತಾಗಬಹುದು. ಆದಿದ್ರಾವಿಡವೆಂಬ ಭಾಷೆ ಇದ್ದರೆ ಅದರ ಮೂಲ ಸ್ವರೂಪವನ್ನು ಮುಟ್ಟಲು ಅವಕಾಶವಾಗಬಹುದು. ಭಾಷಾಶಾಸ್ತ್ರದ ಅನೇಕ ವಿಧಿಗಳು ಸ್ಥಿರಪಡಬಹುದು. ನಮ್ಮಲ್ಲಿ ವಾಡಿಕೆಯಾಗಿರುವ ಕೈಲಾಸಪತಿ, ನರಸಿಂಹ, ವೆಂಕಟೇಶ, ಸೀತಾರಾಮ, ನಂದಕುಮಾರ, ಗೋಪಾಲಕೃಷ್ಣ, ವಿಟ್ಠಲ, ಕಾಳಿದಾಸ, ಮೊದಲಾದ ಎಷ್ಟೋ ಹೆಸರುಗಳಲ್ಲಿ ನಮ್ಮ ಪುರಾಣ ಗ್ರಂಥಗಳಲ್ಲಿನ ಅನೇಕಾನೇಕ ಕತೆಗಳು ಅಡಕವಾಗಿರುವಂತೆ, ಕನ್ನಡನಾಡಿನ ಹಲವು ಸ್ಥಳಗಳ ಹೆಸರುಗಳಲ್ಲಿ ಚರಿತ್ರಾಂಶಗಳು ಅಚ್ಚಳಿಯದೆ ನಿಂತಿವೆ. ಕೊಡಗಿನ ವೀರ ರಾಜೇಂದ್ರಒಡೆಯನು ಕಟ್ಟಿಸಿದ್ದರಿಂದ ವೀರರಾಜೇಂದ್ರಪೇಟೆ, ಟಿಪ್ಪುವು ತನ್ನ ತಾಯಿಯ ಹೆಸರನ್ನು ಕೋಟೆಗೆ ಇಟ್ಟುದರಿಂದ ಜಮಾಲಾಬಾದು, ಫರಂಗಿಯರು ನೆಲೆನಿಂತುದರಿಂದ ಫರಂಗಿಪೇಟೆ, ಕುಲಶೇಖರನ ರಾಜಧಾನಿಯಾದುದರಿಂದ ಕುಲಶೇಖರ; ಹಾಗೆಯೇ, ಸುಬ್ರಹ್ಮಣ್ಯ ಸ್ವಾಮಿಯ ದೇವಸ್ಥಾನವಿದ್ದುದರಿಂದ ಸುಬ್ರಹ್ಮಣ್ಯ; ರಂಗ ಸ್ವಾಮಿಯ ದೇವಾಲಯವಿದ್ದುದರಿಂದ ಶ್ರೀರಂಗಪಟ್ಟಣ; ಹರಿಹರ ದೇವರಿದ್ದುದರಿಂದ ಹರಿಹರ. ಇನ್ನು ದೇವರ ಮಹಿಮೆಯೂ ಇಲ್ಲದೆ ದೊಡ್ಡವರ ಕೀರ್ತಿಯೂ ಇಲ್ಲದೆ ಯಾವ ಕಾಲದಲ್ಲಿಯೋ ಬದುಕಿ ಬಾಳಿ ಬಿದ್ದುಹೋದ ಹಂಪ, ಅನಂತ, ಜಾಕ್ರಿ, ಪೊನ್ನ, ಗುರುವಯ್ಯ ಮೊದಲಾದವರ ಹೆಸರುಗಳನ್ನು ನೆನಪಿಗೆ ತರುವ ಹಂಪನಕಟ್ಟೆ, ಅನಂತ್ವಾಡಿ, ಜಾಕ್ರಿಬೆಟ್ಟು, ಪೊನ್ನಂಪೇಟೆ—ಗುರುವಯ್ಯನಕೆರೆ-ಇವೇ ಮೊದಲಾದ ಸ್ಥಳಗಳಿಗೆ ಆ ಹೆಸರುಗಳು ಹೇಗೆ ಬಂದುವೆಂದು ಹೇಳುವುದಕ್ಕೆ ತೊಡಕಿರುವುದಿಲ್ಲ. ಹೀಗೆ ಒಂದೊಂದು ಸಲ ಸ್ಥಳಕ್ಕೆ ಬರುವಂತೆ ಒಂದು ಜಾತಿಯ ಹೆಸರಿಂದ ಮೊತ್ತಮೊದಲು ಕರೆಯಲ್ಪಟ್ಟ ಚಿಕ್ಕ ಸ್ಥಳವು ಕ್ರಮೇಣ ಆ ಜಾತಿಯವರು ಅಲ್ಲಿಂದ ಒಕ್ಕಲು ಹೋದರೂ ಆ ಹೆಸರಿನಿಂದಲೇ ಕರೆಯಲ್ಪಡುವುದು. ಈಗ ಕಂಚುಗಾರರು ಇಲ್ಲದಿದ್ದರೂ, ಕರೆಯುವುದು ಕಂಚುಗಾರ ಕುಟ್ಲು ಎಂದೇ; ಹೆಸರು ಜೈನಂಪೇಟೆ, ಊರಲ್ಲಿ ಮಾತ್ರ ಜೈನರಿಲ್ಲ; ಬ್ರಾಹ್ಮಣರ ಕುಟ್ಲು ಎಂಬ ಹೆಸರಿದೆ. ಆ ಸ್ಥಳದಲ್ಲಿ ಈಗ ಬ್ರಾಹ್ಮಣರ ಮನೆ ಇದೆಯೋ ಇಲ್ಲವೊ ಎಂಬುದು ಸಂದೇಹ. ತಾಳಿಪಾಡಿ, ಗೋಳಿತಟ್ಟು, ಈಚಲಂಪಾಡಿ, ಪಿಲತ್ತಬೆಟ್ಟು, ನೆಲ್ಲಿಕುಂಜ, ಕುಕ್ಕುಂದೂರು, ಮಾವಿನಕುರುವ, ಬಸರಿ ಊರು, ಪುಣಿಚೆತ್ತೂರು, ಎಂಬೀ ಸ್ಥಳಗಳು ಅಲ್ಲಲ್ಲಿದ್ದ ತಾಳಿ, ಗೋಳಿ, ಈಚಲು, ಹಲಸು, ನೆಲ್ಲಿ, ಮಾವು ಮೊದಲಾದ ಗಿಡಮರಗಳಿಂದ ಮೊದಲು ಪ್ರಸಿದ್ಧವಾಗಿರಬೇಕು. ಗುರುವಿದ್ದಪುರ ಗುರುಪುರ, ದೇವರಿಗೆ ಬಿಟ್ಟ ಕಾಡು ದೇವರ್ಕಾಡು, ಭಟ್ಟರಿಗೆ ಸೇರಿದ ಬೆಟ್ಟು ಬಟ್ರಬೆಟ್ಟು, ಸೋಮವಾರ ಸಂತೆಯಿರುವ ಸ್ಥಳ ಸೋಮವಾರಪೇಟೆ, ಬಾವದವರ ಬೆಟ್ಟು ಬಾವಂತಬೆಟ್ಟು, ಸೇವಂತ ಇಲ್ಲವೇ ಸಾವಂತನ ಊರು ಸೇವಂತೂರು, ಒಡೆಯರಿಗೆ ಇಲ್ಲವೆ ಓಡಾರಿಗೆ ಬಿಟ್ಟ ಬೆಟ್ಟು ಒಡ್ರಬೆಟ್ಟು, ಸುಂಕ ಎತ್ತುವ ಕಟ್ಟೆ ಸುಂಕದಕಟ್ಟೆ, ಹಡಗು ಲಂಗರು ಹಾಕಿ ನಿಲ್ಲುವ ಸ್ಥಳ ಹಂಗರುಕಟ್ಟೆ, ಕಡೆ ಶಿವಾಲಯವಿರುವ ಕ್ಷೇತ್ರ ಕಡೇಶ್ವಾಲ್ಯ, ಧರ್ಮಕ್ಕಾಗಿ ಪ್ರಸಿದ್ಧಿ ಪಡೆದ ಸ್ಥಳ ಧರ್ಮಸ್ಥಳ; ೨ ಕೇರಿ ಇದ್ದ ಇಕ್ಕೇರಿ, ೪ ಕೇರಿ ಇದ್ದ ನಾಲ್ಕೇರಿ, ೪೦ ಒಕ್ಕಲು ಇದ್ದ ನಾಪೊಕ್ಲು, ೬೦ ಒಕ್ಕಲು ಇದ್ದ ಅರುವತ್ತೊಕ್ಲು, ೯ ಕೆರೆ ಇದ್ದ ಒಂಭತ್ಕೆರೆ; ಹಿರಿಯಂಗಡಿ, ಹಳೆಬೀಡು, ಪಡುಕೋಣೆ, ನಡುಬಯ್ಲು, ಹೊಸಮಠ, ಮೇಲ್‌ಕೋಟೆ— ಇತ್ಯಾದಿಗಳ ಅರ್ಥವು ಸುಲಭವಾಗಿ ಗೊತ್ತಾಗುತ್ತದೆ. ಹೀಗೆ ಸುಲಭವಾಗಿ ತೋರಿದರೂ ಒಂದೊಂದು ಕಡೆ ನಮ್ಮ ವಿಚಾರವು ಬರಿಯ ಶಬ್ದಸಾದೃಶ್ಯದಿಂದ ಮೋಸಹೋಗುವುದುಂಟು. ಜಂಗಮಯ್ಯನ ಮಠವಿದ್ದುದರಿಂದ ಹೊಸಮುಟ, ಮುಟನ್ನಬೆಟ್ಟು, ಕಾಡುಮುಟ, ಮುಟಹಿತ್ಲು ಎಂಬ ಹೆಸರುಗಳುಂಟಾದುವು. ಇದೇನೋ ನಿಜ; ಆದರೆ ಮಂಗಳೂರಿನ ಬೋಳ್‌ಮುಟದಲ್ಲಿ ಹಿಂದೆ ಒಂದು ಕಾಲದಲ್ಲಿ ಜಂಗಮ ಮುಟ ಇತ್ತೆಂಬ ಊಹೆ ಮಾತ್ರ ತಪ್ಪು. ಬೋಳ್‌ಮುಟ ಪದದಲ್ಲಿನ ಮುಟಕ್ಕೂ ಜಂಗಮಯ್ಯನ ಮುಟಕ್ಕೂ ಯಾವ ಸಂಬಂಧವೂ ಇಲ್ಲ. ಈಗ ಬೋಳ್‌ಮುಟವೆಂಬ ಹೆಸರಿನಿಂದ ಕರೆಯಲಾಗುವ ಸ್ಥಳದಲ್ಲಿ ಸುಮಾರು ೮೦ ವರ್ಷಗಳ ಹಿಂದೆ ಇದ್ದ ಯೂರೋಪಿಯನೊಬ್ಬನು ತನ್ನ ಮನೆಗೆ ಬೆಲ್‌ಮೊಂಟ್ (Belmont) ಎಂಬ ಹೆಸರನ್ನು ಇಟ್ಟಿದ್ದನಂತೆ. ಈ ಬೆಲ್‌ಮೊಂಟ್ ಶಬ್ದದ ಅಪಭ್ರಂಶವೇ ಬೋಳ್‌ಮುಟವೆಂದು ಹೇಳುತ್ತಾರೆ. ಶಬ್ದಸಾದೃಶ್ಯವು ದೊರೆಯುವುದೇ ತಡ, ಮನುಷ್ಯನು ಸ್ಥಳಗಳ ಹೆಸರುಗಳನ್ನು ಕುರಿತು ಬೇಕಾದ ಕಟ್ಟುಕಥೆಗಳನ್ನು ಕಲ್ಪಿಸುತ್ತಾನೆ. ಬಲ್ಮಟದಲ್ಲಿ ಒಂದು ಕಾಲದಲ್ಲಿ ದೊಡ್ಡ ಶಿವಾಲಯವಿದ್ದು, ಅದನ್ನು ಕೆಡಿಸಿ, ಅಲ್ಲಿ ಕಟ್ಟಿಸಿದ ಕ್ರೈಸ್ತ ಗುಡಿಯಿಂದ ಬಲ್ಮಟವೆಂಬುದಾಗಿಯೂ; ಭೂತಾಳಪಾಂಡ್ಯನು ತನ್ನ ೧೨ ಮಂದಿ ಕನ್ನೆಯರಿಗಾಗಿ ಪಟ್ಟಣವನ್ನು ಕಟ್ಟಿಸಿ ಅದನ್ನು ಬಾರಾಕನ್ಯಾಪುರವೆಂಬ ಹೆಸರಿನಿಂದ ಕರೆಯಬೇಕೆಂದು ಮಾಡಿದ ಆಜ್ಞೆಯಿಂದ ಬಾರಾಕನ್ಯಾಪುರ ಇಲ್ಲವೆ ಬಾರಕೂರ ಎಂಬ ಹೆಸರು ಬಂತೆಂಬದಾಗಿಯೂ; ಮಹಿಷಾಸುರನನ್ನು ವಧಿಸಿದ ಪುರಾಣ ಕಥೆಯಿಂದ ಮೈಸೂರು ಆಯಿತೆಂಬದಾಗಿಯೂ; ಕೊಂಕಣಾದೇವಿಯ ನಿಮಿತ್ತ ಪರಶುರಾಮನು ಪಶ್ಚಿಮಘಟ್ಟದ ಕೆಳಗಿನ ಬಯಲಿಗೆ ಕೊಂಕಣವೆಂದು ಹೆಸರಿಟ್ಟನೆಂಬದಾಗಿಯೂ ಕಾಲಿಲ್ಲದ ಕತೆಗಳು ಕಲ್ಪಿಸಲ್ಪಟ್ಟಿವೆ. ಮೂಲವನ್ನು ಹುಡುಕುವವನು ಇಂಥ ಕಟ್ಟುಕಥೆಗಳನ್ನು ಹಳೆಯ ಮಾತುಗಳಿಂದು

ನಂಬಿದರೆ ಭಾದಕವಿಲ್ಲ; ಆದರೆ ಅವನ್ನು ಆಧಾರವಾಗಿಟ್ಟು ಕೊಂಡು ಮುಂದುವರಿದರೆ "ಉದ್ದುದ್ದ ಮಾತಾಡಿ ಇದ್ದದನ್ನು ಹೋಗಾಡಿ ಉದ್ದಮರದ ತುದಿಯೇರಿ, ಬಿದ್ದಂತಹನು." ಇದು ಹೇಗೆಂದು ನಿದರ್ಶಿಸಲು ನಮ್ಮ ಮಂಗಳೂರನ್ನೇ ಕುರಿತು ವಿಚಾರಿಸುವ!

ಮಂಗಳೂರು–ಈ ಹೆಸರು ಹೇಗೆ ಬಂತು? ಮಂಗಳಾ ದೇವಿಯ ದೇವಸ್ಥಾನವಿದ್ದುದರಿಂದ ಮಂಗಳೂರಾಯಿತೆಂಬುದು ಒಂದು ಹಳೆಯ ಪಳಮೆ. ಹೆಸರಿಗೆ ಒಂದು ಕಾರಣವನ್ನು ಕೊಟ್ಟದ್ದಾಯಿತು. ದೇವಿಯ ನಾಮವಿಟ್ಟು ಬಲಗೊಳಿಸಿದ ಹಿರಿಯರ ಅಭಿಪ್ರಾಯವನ್ನು ಅಲ್ಲಗಳೆಯುವುದಕ್ಕೆ ಯಾರಿಗೆ ತಾನೆ ಧೈರ್ಯವಿದೆ? ಆದರೆ ಮೊದಲು ಇದ್ದದ್ದು ಜಾಗ, ಮತ್ತೆ ಆದದ್ದು ದೇಗುಲ; ದೇಗುಲದಲ್ಲಿ ದೇವಿಯನ್ನು ಪ್ರತಿಷ್ಠೆ ಮಾಡುವ ಮುಂಚೆ ಜಾಗವು ಮಂಗಳೂರಾಗಿತ್ತೇ ಎಂದು ಕೇಳಿದರೆ, ಕುತರ್ಕವಾಗುತ್ತದೆ. ಅದು ಹೋಗಲಿ! ಮಂಗಳೂರು ಎಂಬ ಹೆಸರು ಬಂದದ್ದು–ಆ ದೇವಸ್ಥಾನದಲ್ಲಿ ಪ್ರತಿಷ್ಠಿತವಾದ ಮಂಗಳಾದೇವಿಯಿಂದಲ್ಲ, ಅದನ್ನು ಕಟ್ಟಿಸಿದ ಮಂಗಳಾದೇವಿ ಎಂಬ ಒಬ್ಬ ವಿರಾಗಿಣಿ ಹೆಂಗಸಿನಿಂದ ಎಂಬ ಕಥೆಯೂ ಇದೆ. ಇದರಲ್ಲಿ ಯಾವುದು ನಿಜ? ಯಾವುದು ಸುಳ್ಳು? ಅದು ಹಾಗಿರಲಿ! ಈ ಪ್ರಶ್ನೆ ಬಿಚ್ಚುವುದಕ್ಕೆ ಇನ್ನೊಂದು ಹಾದಿಯಿದೆ. ಚಿಕ್ಕಮಂಗಳೂರು ಹೇಗೆ ಉಂಟಾಯಿತು? ಅದೋ? ಕೇಳಿ! ಚಿಕ್ಕಮಂಗಳೂರಲ್ಲ, ಚಿಕ್ಕಮಗಳೂರು; ಇದರ ಪಕ್ಕದಲ್ಲಿ ಹಿರೇಮಗಳೂರು ಇದೆ. ಚಿಕ್ಕ ಮಂಗಳೂರೆಂದು ಅನುಸ್ವಾರಯುಕ್ತವಾಗಿ ಕರೆಯುವುದು ಮೈಸೂರಲ್ಲಿ ರೂಢಿಯಿಲ್ಲ. ನಮ್ಮಲ್ಲಿ ಪಾಣೆಮಂಗಳೂರು ಇದೆಯಲ್ಲ! ಇದಕ್ಕೇನು ಹೇಳುವಿರಿ?

ಪಾಣೆಮಂಗಳೂರು ಎಂಬುದು ಹೊಸರೂಪ. ಇದರ ಹಳೆಯ ರೂಪವು ಒಂದು ಶಿಲಾ ಶಾಸನದಲ್ಲಿಯೂ ಒಂದು 'ಪಾಡ್ದೊನೆ'ಯಲ್ಲಿಯೂ ದೊರೆಯುತ್ತದೆ. ಮೊಗರುನಾಡು, ಇದರ ಹತ್ತಿರ ಪಣೆಮೊಗರು; ಈ ಪಣೆಮೊಗರು–ಗಟ್ಟದಿಂದ ಇಳಿದು ಮಂಗಳೂರಿಗೆ ಬಂದು ಹೋಗತಕ್ಕವರ ದಾರಿಯಲ್ಲಿದ್ದು, ಪಣೆಮಂಗಳೂರೆಂದು ಬದಲಾಯಿಸಲ್ಪಟ್ಟಿತು. ಹೀಗೆ ಪಲ್ಲಟವಾದ ಹೆಸರನ್ನು Panemangalore ಎಂದು ಬರೆಯಲಾಗಿ, ಇಂಗ್ಲಿಷ್‌ರವನು ಅದರೊಳಗಿನ ಪೂರ್ವ ಪದವನ್ನು ಪಾನೆ, ಪಾನಿ, ಎಂದು ಓದಿ ಅರ್ಥಮಾಡಲಾರದೆ, ಪಾಣೆ, ಪಾಣಿ (ನೀರು) ಎಂದು ಉಚ್ಚರಿಸಿ, ಪಾಣೆಮಂಗಳೂರು ಎಂದರೆ ನೀರಿನ ಮಂಗಳೂರು ಎಂಬ ವಿಪರೀತಾರ್ಥವನ್ನು ಕಲ್ಪಿಸಿಬಿಟ್ಟನು.

ಇದುವರೆಗೆ ಮಾಡಿದ ವಿಚಾರವು ಚಿಕ್ಕಮಂಗಳೂರು, ಪಾಣೆಮಂಗಳೂರು ಎಂಬೀ ಹೆಸರುಗಳು ಬಂದಿರುವ ದಾರಿಯನ್ನು ತೋರಿಸುತ್ತದೆಯೇ ಹೊರತು, ಮಂಗಳೂರ ಪದದ ಬೇರಿಗೆ ಮುಟ್ಟುವುದಿಲ್ಲವಷ್ಟೆ! ಮಂಗಳಾದೇವಿಯ ಸಾನ್ನಿಧ್ಯದಿಂದ ಮಂಗಳೂರಾಯಿತೆಂಬ ಈ ಅಭಿಪ್ರಾಯವು ಸರಿಯೊ ತಪ್ಪೊ ಎಂಬದು ಮೇಲಿನ ಚರ್ಚೆಯಿಂದ ದೃಢಪಡುವುದಿಲ್ಲ. ಆ ಅಭಿಪ್ರಾಯವೇನೋ ದೇವಿಯ ಮೇಲಿನ ನಮ್ಮ ಭಕ್ತಿಭಾವಕ್ಕೆ ಸಮರ್ಪಕವಾದದ್ದು! ಆದರೆ ಅವನ್ನು ಒಪ್ಪಿಕೊಂಡರೆ ಇನ್ನೊಂದು ಕಡೆಯಿಂದ ತಲೆಹಾಕುವ ಆಕ್ಷೇಪಣೆಗೆ ಸಮಾಧಾನ ಹೇಳಬೇಕಾಗುತ್ತದೆ.

ಮಂಗಳಾ ದೇವಿಯ ದೆಸೆಯಿಂದ ಮಂಗಳೂರು ಬಂತೆಂದು ಸಾಧಿಸಿದರೆ, ನಮ್ಮ ಜಿಲ್ಲೆಯಲ್ಲಿ ಮಂಗಳಪಾಡಿ, ಮಂಗಳಪೇಟೆ, ಈಶ್ವರಮಂಗಳ, ಕಾಂತುಮಂಗಳ, ಕುಂಞಮಂಗಳ ಮೊದಲಾದ ಊರುಗಳಿಗೆ ಅದೇ ನಾಮಕರಣವಾಗುವುದಕ್ಕೆ ಅಲ್ಲಲ್ಲಿ ಮಂಗಳದೇವಿ ಇದ್ದಳೇ? ಆ ಸ್ಥಳಗಳಲ್ಲಿ ದೇವಿಯುದ್ಭವದ ಕುರುಹೇ ಇಲ್ಲವೆಂದ ಮೇಲೆ ಆ ಹೆಸರುಗಳಲ್ಲಿ ಮಂಗಳ ಎಂಬ ನುಡಿಯು ಹೇಗೆ ಸೇರಿಕೊಂಡಿತು? ಇದಕ್ಕೆ ಉತ್ತರವೇನು? ಸರ್ವಮಂಗಳೆಯು ಸರ್ವವ್ಯಾಪಿನಿಯಾದುದರಿಂದ ಸಕಲ ಸ್ಥಳಗಳಲ್ಲಿಯೂ ಇದ್ದಾಳೆಂದು ಎದುರಾಡಿದರೆ, ಆ ವಿಚಾರವು ವೇದಾಂತಕ್ಕೆ ಏರಿಹೋಯಿತೇ ಹೊರತು ನಮಗೆ ಆದರಣೀಯವಾಗಲಾರದು.

ಮಂಗಳ, ಕಲ್ಯಾಣ, ಶುಭ ಎಂಬೀ ಶಬ್ದಗಳ ಸಮಾನಾರ್ಥವುಳ್ಳವುಗಳು; ಮಂಗಳಪುರ, ಮಂಗಳಪೇಟೆ, ಕಲ್ಯಾಣಪುರ, ಕಲ್ಯಾಣದುರ್ಗ ಮುಂತಾದ ಹೆಸರುಗಳಲ್ಲಿ ಈ ಅರ್ಥವು ಸರಿಹೋಗುತ್ತದೆ. ಆದರೆ ಕಾಂತಮಂಗಳ, ಬೀರಮಂಗಳಗಳಲ್ಲಿ ಪರಪದವಾಗಿ ಬರುವ ಈ ಮಂಗಳಕ್ಕೆ ಆ ಅರ್ಥವು ಸರಿಯಾಗಿ ಹೊಂದುವುದಿಲ್ಲ.

ವಾಸ್ತುಶಾಸ್ತ್ರದ ಪ್ರಕಾರ ಮಂಗಲ ಎಂದರೆ ದುರ್ಗರಕ್ಷಣಕ್ಕಾಗಿ ನಗರದಲ್ಲಿದ್ದ ಸೈನ್ಯಕ್ಕೆ ಬೇಕಾದ ಸೌಕರ್ಯಗಳುಳ್ಳ ಸ್ಥಳವೆಂದರ್ಥ; ದಂಡಿನವರು ಇರುವ ಕೋಟೆಕೇರಿ ಎಂದು ಹೇಳಬಹುದು. ಈ ಮಂಗಲವು ನೆಲದಡಿಯಲ್ಲಿದ್ದರೆ ನೆಲಮಂಗಲವಾಯಿತು, ನಗರದ ಎಡಕ್ಕಿದ್ದರೆ ಎಡಮಂಗಲವಾಯಿತು. ದುರ್ಗದ ಆಕಾರವನ್ನೊ ಸೈನ್ಯದ ಮಿತಿಯನ್ನೊ ಅನುಸರಿಸಿಕೊಂಡು ನಾಗಮಂಗಲವಾಗುತ್ತದೆ, ಇಲ್ಲವೆ ಈಶ್ವರಮಂಗಲವಾಗುತ್ತದೆ. ಕೋಟೆಯನ್ನು ಕುಞನು ಕಟ್ಟಿಸಿದ್ದರೆ ಕುಞಮಂಗಲ, ಕಾಂತನ ಕಾಲದ್ದಾದರೆ ಕಾಂತಮಂಗಲ, ಬೀರನ ವಶದಲ್ಲಿದ್ದರೆ ಬೀರಮಂಗಲ ಎಂದು ಪ್ರಸಿದ್ಧವಾಗುತ್ತದೆ. ಮಂಗಲದ ಒತ್ತಿನಲ್ಲಿದ್ದ ಪೇಟೆ ಮಂಗಲಪೇಟೆ; ಪಾಡಿ, ಮಂಗಲಪಾಡಿ; ಪುರ, ಮಂಗಲಪುರ! ಹೀಗೆ ದುರ್ಗನಿರ್ಮಾಣ ಕಾಲದ ಮಂಗಲ ಎಂಬ ಹೆಸರು ಕ್ರಮೇಣ ಪಕ್ಕದಲ್ಲಿದ್ದ ಇತರ ಹಳ್ಳಿಗಳ ಮೇಲೆ ಬಿದ್ದು, ತುಳುನಾಡಿನ ಬಹು

ಭಾಗವನ್ನು ಆಕ್ರಮಿಸಿ, ವಿಜಯ ನಗರದ ಕಾಲದಲ್ಲಿ ರಾಜ್ಯ ವೆನ್ನಿಸಿಕೊಂಡು, ಈಗ ಮಂಗಲೂರು ಎಂಬ ಮಾತೇ ಸಾಕಾಗಿದೆ. ಈ ಕೋಟೆಯಲ್ಲಿನ ಫೌಜು ವಿಜಯ ದಶಮಿಯ ದಿನ ದಂಡಯಾತ್ರೆಗೆ ಹೊರಡುವ ಸಾಂಪ್ರದಾಯವಿತ್ತೆಂಬುದಕ್ಕೆ ಮಂಗಲ ದೇವಸ್ಥಾನದ ರಥೋತ್ಸವವನ್ನು ಬೋಳಾರ ಫೌಜು ಎಂದು ಈಗಲೂ ಕರೆಯುವುದೇ ಸಾಕ್ಷ್ಯವಾಗಿದೆ.

ಮಂಗಲೂರು, ಇದರಂತೆ ಕೋಟೆಕಾರು, ಗಡಾಯಿ ಕಲ್ಲು ಮುಂತಾದ ಹೆಸರುಗಳು ನಮ್ಮ ಜಿಲ್ಲೆಯ ಇತಿಹಾಸಾಂಶದ ಒಂದೆರಡು ಚೂರುಗಳನ್ನು ಭದ್ರವಾಗಿ ಕಾಪಾಡಿಕೊಂಡಿವೆ. ಪೃಥ್ವಿಯ ಮೇಲಿನ ಇತರ ಮಾರ್ಪಾಟುಗಳ ಇತಿಹಾಸವನ್ನು ಸೂಚಿಸುವ ಹೆಸರುಗಳು ಇವೆ. ಮಂಗಲೂರು ಚರಿತ್ರ ಸಂಬಂಧವಾದ ಹೆಸರು; ಬೋಳಾರು ಭೂಶಾಸ್ತ್ರ ಸಂಬಂಧವಾದ ಹೆಸರು. ಮಂಗಲೂರಿನ ಮೊದಲಿದ್ದ ಬೋಳಾರು ಹೇಗೆ ಬಂತು?

ಬೋಳಾರು! ಈ ಹೆಸರನ್ನು ಕಡಿದು, ತುಂಡುಗಳನ್ನು ಗುರುತಿಸಿದರೆ ಸಾಕು! ಆದರೆ ಕಡಿ ಸರಿಬೀಳಬೇಕು! ಬೊ+ಳಾರು–ವಿಗ್ರಹ ಸರಿಯಾಗಿಲ್ಲ. ಬೊಳಾ+ರು–ಇದು ವ್ಯರ್ಥ. ಬೊಳ್+ಆರು— ಈ ಪ್ರಥಕ್ಕರಣ ಬಹುಶಃ ತಪ್ಪಲ್ಲವೆಂದು ಕಾಣುತ್ತದೆ. ಬೊಳ್ ಎಂದರೆ ಖಾಲಿ, ಆರು ಎಂಬುದೊಂದು ಸಂಖ್ಯೆ. ಆದರೂ ಅರ್ಥ ಹೊರಡುವುದಿಲ್ಲವಷ್ಟೆ! ಅಕ್ಷರ ದೋಷವಿರಬಹುದೇ? ಆರು? ಅಲ್ಲ. ಊರು? ಹೀಗೆ ತಪ್ಪು ಬಿದ್ದಿದೆಂದು ಸಾಧಿಸಿ, ಆರನ್ನು ಊರನ್ನಾಗಿ ಬದಲಾಯಿಸಿ, 'ಬೋಳೂರು' ಎಂದು ಓದಿ, ಬೋಳು ಗುಡ್ಡೆಯಂತೆ ಬರಿದಾದ ಸ್ಥಳವೆಂದು ಅರ್ಥ ಹೇಳಿ, ಇಂಗ್ಲಿಷರ ಆಳಿಕೆಯು ಪ್ರಾಪ್ತವಾದ ನಂತರ ಆ ಸ್ಥಳವು ಬೀಳು ಬಿದ್ದಿರುವುದರಿಂದ ಅದನ್ನು ಬೋಳೂರು ಇಲ್ಲವೆ ಬೋಳಾರು ಎಂದು ಕರೆಯುತ್ತಾರೆಂದು ವಿಸ್ತರಿಸಿದರೆ, ಈ ವ್ಯಾಖ್ಯಾನವು ಸುಳ್ಳು ಕಲ್ಪನೆಯೆಂದು ಹೇಳಬೇಕಾಗುತ್ತದೆ. ಇಂಥ ಕಲ್ಪಿತ ಕಥೆಯು ಕೇಳುವುದಕ್ಕೆ ಸೊಗಸಾದರೂ ಸ್ವೀಕರಿಸುವುದಕ್ಕೆ ನಿರಾಧಾರವಾಗಿದೆ. ಬೊಳಾರು ಇಲ್ಲಿ ಪೂರ್ವಪದವು ಬೊಳ್ ಪರಪದವು ಆರು. ಈ ಪದಗಳು ಇತರ ಹೆಸರುಗಳಲ್ಲಿವೆಯೋ ಎಂದು ಹುಡುಕೋಣ!

ಬೊಳೂರು, ಬೊಳ್ವಾಯ್ರು, ಬೊಳ್ಯ, ಬೊಳಂಗಡಿ, ಬೊಳನ್ತೂರು, ಇವಲ್ಲಿ ಬೊಳ್ ಪೂರ್ವ ಪದ.

ಬೊಳ್ ಪರಪದವಾಗಿರುವ ಹೆಸರುಗಳಿಗೆ ನೆನಪಿಗೆ ಬರುವುದಿಲ್ಲ! ಹೋಗಲಿ!

ಆರೂರು, ಆರಂಗಡಿ, ಆರ್ಕಾಡಿ, ಆರ್ಲ, ಆರ್ಕಾಡು, ಆರ್ಕ್ಯೋಣ–ಇವಲ್ಲಿ ಆರು ಪೂರ್ವಪದ. ಮಲಾರು, ಕಯ್ಯಾರು, ಉಳಿಯಾರು, ಕೋಲಾರು, ಮೈಲಾರು, ಪಾಲಾರು— ಇವಲ್ಲಿ ಆರು ಪರಪದ.

ಬೊಳ್ಳ ಎಂದರೆ ತುಳುಮಾತಿನಲ್ಲಿ ನೀರಿನ ಪ್ರವಾಹ. ಬೊಳ್ ಎಂಬುದು ಒತ್ತುಗೆಟ್ಟು ನಿಲ್ಲುವುದಕ್ಕೆ ಆಧಾರವಿದೆ. ಕಣ್ಣು–ಕಣಿ, ಮುಳ್ಳು–ಮುಳು, ಬೊಳ್ತ್ತೂರು ಇದ್ದದ್ದು ಬೊಳ್ಳನ್ತೂರು–ಬೊಳನ್ತೂರು ಎಂದು ಸಬಿಂದುಕವಾಗುವುದಕ್ಕೆ ಫೌಜು–ಫೌಂಜು, ನಿತ್ತು–ನಿಂತು, ಗೊತ್ತು–ಗೊಂತು, ಎಟ್ಟು–ಎಂಟು, ಉದು–ಉಂದು, ಇದು–ಇಂದು ಇತ್ಯಾದಿಗಳೇ ದೃಷ್ಟಾಂತಗಳು. ಈ ಬೊಳ್ ಶಬ್ದವು ಬೆಳತಂಗಡಿ, ಬೆಳ್ಳಿಪ್ಪಾಡಿ, ಇತ್ಯಾದಿಗಳಲ್ಲಿ ಬೇರೆ ಬೇರೆ ರೂಪಗಳನ್ನು ಧರಿಸುತ್ತದೆ.

ಬೊಳ್ ಆರ್, ಬೋಳಾರ್ ಎಂದರೆ ನೀರಿನ ಪ್ರವಾಹವು ಎಲ್ಲಿ ಬಹಳ ಆಳವಾಗಿದೆಯೋ ಅಲ್ಲಿಯ ಸ್ಥಳವೆಂದು ಅರ್ಥ ಇರಬಹುದು. (ಆರ್-ಆಳ)ಆದರೆ ನಮ್ಮಲ್ಲಿ ಬೊಳಾರು ಮತ್ತು ಬೊಳೂರು ಹೀಗೆ ಎರಡು ಹೆಸರುಗಳಿವೆ. ಇವು ಭಿನ್ನಾರ್ಥಕಗಳೋ? ಸಮಾನಾರ್ಥಕಗಳೋ? ಊರ್ ಬಂದದ್ದು ಉರ್ ಧಾತುವಿನಿಂದ. ಈ ಉರ್ ಎಂಬುದು ಇರ್ ಎಂಬುದರ ಮತ್ತೊಂದು ರೂಪ. ಮನುಷ್ಯನು ಎಲ್ಲಿ ನಿಲ್ತಾನೋ ಅದೇ ನೆಲ, ನೆಲೆ; ಎಲ್ಲಿ ತೋಡ್ತಾನೋ ಅದೇ ತೋಡು, ತೋಟ; ಎಲ್ಲಿ ನಡ್ತಾನೋ ಅದೇ ನಾಡು, ನಾಟಿ; ಎಲ್ಲಿ ಉರು (ಊ,) ಆದು (ಆ) ಎಂಬಿವುಗಳ ಪ್ರಯೋಗದಿಂದ ತೋರಿಸುವಂತೆ, ನೀರಿನ ಪ್ರವಾಹವಿರುವ ಸ್ಥಳವು ದೂರವಿದ್ದಾಗ ಬೊಳಾರು ಎನ್ನಿಸಿತು, ಹತ್ತಿರವಿದ್ದಾಗ ಬೊಳೂರು ಎನ್ನಿಸಿತು. ಹೀಗೆಂದು ಹೇಳಿ ಇದನ್ನು ಸಮರ್ಥಿಸುವುದಕ್ಕೆ ಪಡೂರು–ಪಡಾರು, ಮೂಡೂರು—ಮೂಡಾರು, ಕೊಯ್ಯೂರು — ಕೊಯ್ಯೂರು, ಪುತ್ತೂರು — ಪುತ್ತಾರು, ಪೇರೂರು — ಪೇರಾರ, ಎಂಬೀ ಜೋಡು ಹೆಸರುಗಳ ದೃಷ್ಟಾಂತಗಳನ್ನು ಹೇಳುವುದುಂಟು. ಊರು, ಇದು ಇರ್ ಧಾತುವಿನಿಂದ ಹುಟ್ಟಿದ್ದೆಂದು ಹೇಳುವುದಕ್ಕಿಂತ ಉರ ಎಂಬದರಿಂದ ಬಂತೆಂದು ಹೇಳಬೇಕು. ಉರ ಎಂದರೆ ತುಳುವಿನಲ್ಲಿ ಉಳುವುದೆಂದರ್ಥ; ಗದ್ದೆಯೆಂದು ಎರಡನೆಯ ಅರ್ಥ. (ಉರಪಲ ಅರಿ) ಯಾವ ಸ್ಥಳವು ಉರ್ತ್ತು (ಉತ್ತು) ಇದೆಯೋ, ಅದೇ ಊರು ಎಂದು ಹೇಳುವುದಕ್ಕೆ ಅಡ್ಡಿಯೇನು?

ಇದುವರೆಗೆ ಮಾಡಿದ ವಿಚಾರದಿಂದ ನಮ್ಮ ಹಳ್ಳಿಯ ಹೆಸರುಗಳ ಕೆಲವು ಲಕ್ಷಣಗಳು ತೋರಮಟ್ಟಿಗೆ ಗೊತ್ತಾದುವು. ಸ್ಥಳವು ಚಿಕ್ಕದಿದ್ದರೂ ದೊಡ್ಡದಿದ್ದರೂ ಅದಕ್ಕೊಂದು ಹೆಸರಿದೆ. ಅಂಥ ಹೆಸರಿನಲ್ಲಿ ಒಂದಕ್ಕಿಂತ ಹೆಚ್ಚು ತುಂಡುಗಳಿವೆ. ಆ ತುಂಡುಗಳಿಗೆ ಬಹುಶಃ ಅರ್ಥವಿರಬೇಕು. ಈ ತುಂಡುಗಳು ಒಂದು ಹೆಸರಿನಲ್ಲಿ ಪೂರ್ವಪದವಾಗಿಯೂ

ಮತ್ತೊಂದರಲ್ಲಿ ಪರಪದವಾಗಿಯೂ ಬರುತ್ತವೆ. ಇಂಥ ಬಿಡಿ ನುಡಿಗಳಲ್ಲಿ ಕೆಲವು ಯಾವುವೆಂದರೆ—

I. ಪೊಸ, ಪಳ, ಹಿರಿ, ಕಿರಿ, ಮೇಲೆ (ಮಿತ್ತ್), ಕೆಳ (ತಿರ್ತ್), ಎಡ, ಬಲ, ಹಿಂದು (ಪಿನ್), ಮುಂದು(ಮುನ್), ನಡು, ನೇರ್ ಒಳ, ಪೊರ ಮೂಡು, ಪಡು, ಬಡಗು, ತೆಂಕು (ತೆಕ್ಕ್), ಒಂದು (ಒನ್), ಎರಡು, ಮೂರ್, ಇತ್ಯಾದಿ ಗುಣವಾಚಿಗಳೂ, ದಿಗ್ವಾಚಿಗಳು, ಸಂಖ್ಯಾನಾಚಿಗಳು.

II: ಹಲವು ತುಂಡುಗಳು ಭೂವಿವರಣೆಯಲ್ಲಿ ನೆಲಜಲ ಭಾಗಗಳನ್ನು ಸಂಬಂಧಿಸಿದ ನುಡಿಗಳು—ಅಡ್ಕ, ಅಂಗಳ, ಅಣೆ, ಅಂಗಡಿ, ಊರು, ಓಣಿ, ಕಡವು, ಕೆರೆ, ಕಟ್ಟ, ಕಳ, ಕಮ್ಮಳ, ಕಾಡು, ಕಾನ, ಕಾಪು, ಕುಳ, ಕುದುರು, ಕುರುವೆ, ಕೆರೆ, ಕೇರಿ, ಕೋಡಿ, ಕೊಳ, ಕೋಟೆ, ಗದ್ದೆ, ಗೋಳಿ, ತೊರೆ, ತೋಡು, ತಟ್ಟ್, ನಾಡು, ಪದವು, ಪಳ್ಳಿ, ಪಳ್ಳ, ಪಡಪು, ಪಾಡಿ, ಪಾಲ, ಪೇಟೆ, ಬಯಲು, ಬೆಟ್ಟು, ಮಜಲು, ಮಣ್ಣು, ಮಲೆ, ಮಾಳ, ಮುಳಿ, ಮೊಸರು, ಸೂರ— ಇತ್ಯಾದಿ.

ಈ ನುಡಿಗಳ ಜೋಡಣೆಯಿಂದ ಹೇಗೆ ಸ್ಥಳಗಳ ಹೆಸರುಗಳಾಗುತ್ತವೆ ನೋಡಿ!

ಪೊಸರಾಲ, ಆಲದಂಗಡಿ, ಅಂಗಡಿಮೊಗರು, ಮೊಗರ್ನಾಡು, ನಾಡ್ಕೋಡಿ, ಕೋಡಿಮಣ್ಣು, ಗುಡ್ಡೆಕಾಡು, ಕಾಡುಬೆಟ್ಟು, ಬೆಟ್ಟಂಪಾಡಿ, ಪಾಡಿ ಮಜಲು, ಮಜಲ್ಗದ್ದೆ, ಗದ್ದೆಕೇರಿ.

ಮೇಲಿನ ನುಡಿಗಳಲ್ಲಿ ಆಲ ಎಂಬುದು ಹೊರತು ಉಳಿ ಮವುಗಳು ಈಗಲೂ ತುಳುಮಾತಿನಲ್ಲಿ ರೂಢಿಯಲ್ಲಿರುವಂಥವು. ಆಲ ಎಂಬ ನುಡಿಯಂತೆ ತಟ್ಟನೆ ಅರ್ಥವಾಗದ ಎಷ್ಟೋ ನುಡಿಗಳಿವೆ. ಈ ಆಲ ಎಂಬುದು ಆರ ಶಬ್ದದಂತೆ ಹಲವು ಹೆಸರುಗಳ ಮೊದಲಲ್ಲಿಯೂ ಕಡೆಯಲ್ಲಿಯೂ ಬಂದು ನಿಲ್ಲುತ್ತದೆ.

ಆಲೂರು, ಆಲಡ್ಕ, ಆಲೆಟ್ಟಿ; ಬಜಾಲ್, ಸುರಾಲ್, ಕುರಿಯಾಲ್, ಉಳ್ಳಾಲ್, ಬಂಟಾಲ್, ನಂದ್ಯಾಲ್.

ಆಲ, ಆಲ್, ಲ್—ಈ ನುಡಿಯು ಆರ, ಆರ್, ರ್ ಎಂಬದರ ರೂಪವೆಂದು ಹಲವರ ಅಭಿಪ್ರಾಯ; (ಆಳವಿರು) 'ಅಲ್ಲಿ' 'ಆ ಕಡೆ' ಎಂಬರ್ಥದಲ್ಲಿ ಬರುತ್ತದೆಂದು ಮತ್ತೊಂದು ಅಭಿಪ್ರಾಯ; ಉದಾಹರಣೆ–ಮೂಡು, ಮೂಡಲ್, ಮೂಡಲು, ಲ್ ಎಂಬುದು ಅನೇಕ ಕಡೆ ಕ್ರಿಯಾನಾಮದ ಪ್ರತ್ಯಯವೆಂದು ನನಗೆ ತೋರುತ್ತದೆ; ಬಯಲ್ ಎಂದರೆ ಬಯ್ ಎಂದು ಇರುವಂಥಾದ್ದು, ಬಜಲ್,—ಬಜ ಪಡೆದಿರುವಂಥಾದ್ದು. ಮಲೆಯಾಲ್–ಮಲೆ ಇರುವಂಥಾದ್ದು, ಕುಡಾಲ್, ಕೂಡ್ಲು—ಎಂದರೆ ಕೂಡು (ಸಂಗಮ) ಇರುವಂಥಾದ್ದು.

ಈ ಲ ಎಂಬ ಅಂತ್ಯ ಪ್ರತ್ಯಯವು ತುಳುನಾಡಿನ ಅನೇಕಾನೇಕ ಸ್ಥಳಗಳಲ್ಲಿ ಸೇರಿಕೊಂಡಿವೆ; ಆ ಲಕಾರವನ್ನು, ಒಟ್ಟು ಹೆಸರುಗಳನ್ನು ಬರೆದರೆ ಮೂಲ ರೂಪದಲ್ಲಿ ಎರಡಕ್ಕಿಂತ ಹೆಚ್ಚು ಅಕ್ಷರಗಳು ಉಳಿಯುವುದಿಲ್ಲ.

ಅಯ್ಲ, ಆರ್ಲ, ಇಟ್ಲ, ಉಳ್ಳಾಲ, ಕಾರ್ಲ, ಕಾವ್ಲ, ಕೇಪ್ಲ, ಕಟ್ಲ; ಕೇರ್ಲ, ಕಯ್ಲಜೆ, ಚೇರ್ಲ, ದೇರ್ಲ, ನಾಯ್ಲ, ನೇರ್ಲ, ನೆಕ್ಲ, ನಟ್ಲ, ಪಟ್ಲ, ಪುತ್ತಿಲ, ಪೇರ್ಲ, ಬೇಲ, ಮಣಿಲ, ಮಯ್ಲಾರ, ಕೊಪ್ಪಲ್ ಇತ್ಯಾದಿ.

ಆಯ್, ಆರ್, (ಇದು ಮೊದಲು ಬಂದಿದೆ), ಇಟ್, ಉಳ್, (ಉಳಿ; ಕುದುರು ಉಳಿ; ಬುಡು ಉಳಿ), ಕಾರ್, ಕಾ, ಕೇ, ಕಟ್, ಕೇರ್, ಕಯ್, ಚೇರ್, ದೇರ್, ನಾ, ನೇ, ನೆಕ್, ನೆಟ್, ಪಟ್, ಪುತ್, ಪೇರ್, ಬೇ, ಮಣ್, ಮಯ್, ಕೊಪ್, ಇತ್ಯಾದಿ.

ಹೀಗೆಯೇ ಬಜಲ್, ಮಜಲ್, ಪುಂಜಾಲ್, ಬಯ್ಲ್, ಅಜಲ್, ಕಜಲ್, ಸೂರಾಲ್, ಇತ್ಯಾದಿಗಳಿಂದ ಬಜ, ಮಜ, ಪುಂಜ, ಬಟ್, ಅಜ, ಕಜ, ಸೂರ್ ಮೊದಲಾದ ರೂಪಗಳನ್ನು ಊಹಿಸಬಹುದು.

ಇವು ಹೊರತು ಇನ್ನು ಎಷ್ಟೋ ನುಡಿಗಳಿವೆ. ಅಜ, ಕಳ; ಕುರ್, ಕಾಲ್; ಏರ್, ಮಾಳ್; ಮುಂಡ, ಕುರ್; ಜಾರ್, ಕಳ; ಕೊಮ್, ಪದವು; ಮೇರ್, ಕಜ; ಇನ್, ಉಳಿ; ಬೇಕಿಲ, ಪೊಯ್ತ್. ಅಜ; ಬಾ, ಕಿಲ್; ಮಾರ್, ನಾಡು; ಪಾ, ಊರ್; ಪಯ್, ಅಳ್ಕಿ; ಪೆಜ, ಮಾಡಿ; ನಾ, ಪಳ್ಳಿ; ಸಮ್ಪ್, ಅಜೆ ಇತ್ಯಾದಿ.

ಕೆಳಗಿನವುಗಳಲ್ಲಿ ಅಂತ್ಯಾಕ್ಷರಗಳಾದ ಅ, ಕ, ರೆ, ವೆ, ಪು, ಪೆ, ಮು, ಗೆ, ಸೆ, ದೆ ಈ ನಾಮವಾಚಕ ಪ್ರತ್ಯಯಗಳನ್ನು ಬಿಟ್ಟು ಉಳಿಯುವ ರೂಪಗಳು ಲಕ್ಷ್ಯಾರ್ಹವು.

ಸಿರ್ಯ, ಬಾರ್ಯ, ಉಳ್ಯ, ಸೂರ್ಯ, ನೇರ್ಯ, ಈಡ್ಯ, ಕರ್ಯ, ಸಂಪ್ಯ, ಪೆರ್ಯ, ಕಿನ್ಯ, ಎಲ್ಯ, ದೇಲ್ಯ, ಅಳಿಕೆ, ಮುಲೆಕೆ, ಕದ್ಕೆ, ಕೊಳ್ಕೆ, ಕ್ಕರ್ಕೆ (ಕಕ್ಕೆ), ಕದ್ರೆ, ಉಜ್ರೆ, ಒದ್ರೆ, ಮುಗ್ವೆ, ಕುರ್ವೆ, ಉಳ್ವೆ, ಅಳ್ವೆ, ಒಡ್ಪು ಉಡ್ಪು, ಕುಡ್ಪು, ಪುಡ್ಪು, ಜಪ್ಪು, ಕಾಪು, ಕೇಪು, ಸಜ್ಪು, ಮಲ್ಪೆ, ಕೊಲ್ಪೆ, ಕರ್ಪೆ, ಬಜಪೆ, ಉದ್ಮು, ಬೊಳ್ಮ, ಕುಡುಮ, ಕೊಳ್ತಿಗೆ, ಪುತ್ತಿಗೆ, ಮಣ್ಣಿಗೆ, ಕಳಿಗೆ, ತೊನ್ಸೆ, ಕುಮ್ಸೆ, ಕೆರ್ವಾಸೆ, ಬನ್ವಾಸೆ, ಸಿರ್ಸೆ (ಕುಲ್ಸೆಕರ), ಇರ್ದೆ, ಪೆರ್ಮುದೆ, ತೊಮ್ಬೆ, ಕೊಳ್ಮ್ಬೆ, ಪಮ್ಬೆ.

ಇನ್ನು ಈ ಪಟ್ಟಿಯಲ್ಲಿ ಎಷ್ಟೋ ನುಡಿಗಳನ್ನು ತುಂಬಿ, ಅವನ್ನು ಒಂದು ಕ್ರಮದಲ್ಲಿ ತಂದೊಡ್ಡಿ ಪೃಥಕ್ಕರಿಸಿ ನೋಡಿದರೆ, ಆ ನುಡಿಗಳು ಮೂಲದಲ್ಲಿ ಏಕಾಕ್ಷರಿಗಳೇ ಎಂಬ

ಅನುಮಾನವು ಹುಟ್ಟುತ್ತದೆ.

ಉದಾಹರಣೆ:- ಬಯ್ಲೂರು, ಬಯ್ಲಾರಿ, ಬಯ್ಲಂಗಡಿ ಬಯ್ಲು. ಬಯ್ ಎಂದರೆ ತುಳುವಿನಲ್ಲಿ ಒಣ ಹುಲ್ಲು. ಕಾವಲ್, ಮೂಡೂರ್, ಕಾವೂರ, ಕಾವಲಿ, ಕಾವು, ಕಾಪು, ಕಾ ಎಂದರೆ ರಕ್ಷಿಸಿಕೊಳ್ಳು. ಕಾರ್‌ಕಳ, ಕಾರ್‌ನಾಡು, ಕಾರ್‌ನ್ವೆ (ಕಾರಜೆ). ಕಾರ್ ಎಂದರೆ ಕಾಡು ಎಂಬುದು ರೂಪಭೇಧ. ಕಾರ ಎಂಬುದು ಅಕ್ಕಾರ (ಆ ಕಡೆ) ಇಕ್ಕಾರ (ಈ ಕಡೆ) ಎಂಬಿವುಗಳ ವಿಕೃತಿಯೆಂದೂ ಹೇಳುವರು; ತುಳು ಶಬ್ದಗಳಲ್ಲಿ ಪ್ರಥಮಾಕ್ಷರವು ಸ್ವರವಾಗಿದ್ದರೆ ಲೋಪವಿದೆ. ಉನುಪು-ನುಪ್ಪು; ಒಣಂಗು-ಣುಂಗು; ಉಲಿಪು-ಲೆಪ್ಪು; ಎರಡು—ರಡ್ಡ್, ಕಳ್‌ತೂರು, ಕಳಾರ, ಕಳ್ಮೆ, ಕಯ್ಮೆ— ಇವುಗಳಲ್ಲಿ ಕಳ್, ಕಣ್‌ತೂರು, ಕಣ್‌ತಿರ್ತ್, ಕಣಿಯೂರು, ಕಣ್ವೆ-ಇವುಗಳಲ್ಲಿ ಕಣ್, ಈ ಕಣ್ ಮತ್ತು ಕಳ್ ಒಂದೇ. ಕಣ್ಡ, ಕಳ್ದೆ (ಗದ್ದೆ).

ಕೆಲವು ಕಡೆ ಈ ಮೂಲಾಕ್ಷರಗಳ ಅರ್ಥವನ್ನು ನಿರ್ಧರವಾಗಿ ಹೇಳಬರುವುದಿಲ್ಲ.

ಕುಮ್‌ಲೆ (ಕುಂಬಲೆ), ಕುಮ್‌ಸೆ (ಕುಂಸೆ), ಕುಮಟೆ (ಕುಂಟೆ), ಕುಮ್‌ಜ (ಕುಂಜ), ಕುಮ್‌ರಿ, ಕುಮೇರು, ಕುಮ್ಕಿ—ಇತ್ಯಾದಿಗಳಿಂದ ಕುಮ್ ಎಂಬ ಮೂಲ ರೂಪವು ಹೊರಬೀಳುತ್ತದೆ. ಅದೇ ಮೂಲರೂಪವೆಂಬುದನ್ನು ಬಡಾಜೆ, ಕುಮ್ ಬಡಾಜೆ ಎಂಬ ಹೆಸರುಗಳೂ ದೃಢಪಡಿಸುತ್ತವೆ. ಆದರೆ ಈ ಕುಮ್ ಯಾವ ಅರ್ಥದಲ್ಲಿ ಪ್ರಯೋಗವಾಗುತ್ತದೋ ಗೊತ್ತಾಗುವುದಿಲ್ಲ. ಕೊಂಕಾಗಿರು ಎಂಬರ್ಥವೇ?

ನಿಡುವಜ (ಉದ್ದ ಅಜ), ಪೆರುವಜ (ದೊಡ್ಡ ಅಜ), ಸಂಪಾಜ (ತಂಪು ಅಜ), ಕಾರಂಜ (ಕಾಡು ಅಜ), ಅಜಕಳ (ಅಜದ ಕಳ)—ಈ ಹೆಸರುಗಳಿಂದ ಅಜ ಎಂಬ ನುಡಿಯು ಹೊರಬೀಳುತ್ತದೆ. ಆದರೆ ಜಪ್ಪು, ಜರ್ಪು, ಜರ್ಕಳ ಎಂಬಿವುಗಳಿಂದ ಜ ಮಾತ್ರ ಹೊರಡುತ್ತದೆ. (ಜಪ್ಪ) ಜರ್ಪು ಎಂದರೆ ತುಳುವಿನಲ್ಲಿ ಮಲಗು, ಇಳಿ, ಎಂದರ್ಥ. ಜರಿ, ಜಾರು, ಇಳಿಜಾರು ಇವನ್ನು ಹೋಲಿಸಬಹುದು. ಅಜ ಇದ್ದಲ್ಲಿ ಪೂರ್ವಸ್ವರವು ತಪ್ಪಿ ಜ ನಿಂತಿರಲೂ ಬಹುದು. (ಎರಡು-ರಡ್ಡು).

ಈ ಜಕಾರವು ಹಲವು ಹೆಸರುಗಳಲ್ಲಿ ನುಸುಳಿಕೊಂಡಿದೆ. ಉಚ್ಚಾರಣೆಗೆ ತೊಡಕಾಗದಂತೆ ಈ ಜಕಾರದ ಮುಂದೆ ಬಿಂದು ಬರುತ್ತದೆ. ಈ ಜಕಾರಕ್ಕೆ ಚ, ದ, ತ, ಸಕಾರಗಳು ಆದೇಶವಾಗಿ ಬರುವುದೂ ಉಂಟು.

ಉದಾಹರಣೆ:- ಕಾರಂಜೆ (ಕಾರಜೆ), ಕಜಕಾರ, ಬಜಪೆ, ಮಜಬಯ್ಲು, ನುಜಿ, ಸುಜಿರ, ಪಜಿರ, ಕುಂಜ, ಕೆಂಜಾರ, ಕಂಜರ್ಪಣೆ, ಪಂಜ, ಪೆಜ, ವಿಜ, ಮಿಂಜ, ನಂಜ, ಮುಂಜ, ಪಾವಂಜೆ, ಉಜರೆ.

ಉದಿಯಾರ (ಉಜ್ಯಾರ), ನಂದಾರ (ನಂಜಾರ), ಬಿಜೂರ್ (ಬಿದೂರ್), ಬಿದಲಾಡಿ (ಬಿಜಲಾಡಿ), ಕಜ = ಒಂದು ಜಾತಿಯ ಹುಲ್ಲು. ಮಜ= ತೇವವಾದ? ಪಜಿರ್ = ಹಸಿ ಹುಲ್ಲು. ಪಜ= ಹಸಿ.

ಈ ಮೂಲರೂಪಗಳನ್ನು ಲಕ್ಷಿಸಿದರೆ ತುಳು ನುಡಿಗಳು ಇತರ ಭಾಷೆಗಳಲ್ಲಿ ಸೇರಿರಬಹುದೋ ಎಂಬ ಸಂದೇಹವಾಗುತ್ತದೆ. ವಾಡಿ-ಇದು ತುಳು ಪಾಡಿ. (ಪಡು= ಒತ್ತಾಗಿರು ಎಂಬ ಧಾತು. ಪಟ್ಟಾ-ಒತ್ತಾಗಿದ್ದದ್ದು ಎಂದರ್ಥ. ಪಟ್ಟ ಮೊಗರು, ಪಟ್ರಮೆ. ಪಟ್ಣ—ಪಟ್ಟ—ಪಟ್ಲ. ಪಡುಧಾತು. ಮೂಲರ ಪಟ್ಲ, ಬೊಕ್ಕಪಟ್ಲ, ಕುಂಜ—ಬಳ್ಳಿಮನೆ ಎಂದು ಸಂಸ್ಕೃತದಲ್ಲಿದೆ. ನೆಲ್ಲಿಕುಂಜ, ಕುಂಜತ್ತೂರ, ಕುಂಜಾರ; ಕುಂ ಧಾತುವಿರಬೇಕು. ಬಜಾರ-ಹಿಂದುಸ್ಥಾನಿಯಲ್ಲಿ ಪೇಟೆ ಎಂದರ್ಥ. ಬಜ, ಬಜಪೆ, ಖಜಪೆ, ಬಜಾಲ, ಬಜಾರ. ಬಂಜರ ಶಬ್ದವು ಬಿಂದುಗೆಟ್ಟು ಬಜಾರಾಯಿತೇ? ಕುಮಕಿ-ಕುಂ ಧಾತುವಿನಿಂದ ಹುಟ್ಟಿತೇ?

ಇದುವರೆಗೆ ಮಾಡಿದ ವಿಚಾರವು ಹೊಸ ಶಬ್ದಗಳ ಗುಟ್ಟನ್ನು ಕಂಡು ಹಿಡಿಯುವುದಕ್ಕೆ ಎಷ್ಟುಮಟ್ಟಿಗೆ ಸಹಾಯಕವಾಗುತ್ತದೋ ನೋಡೋಣ!

**ಸಿರೂರ್**—ಸೀರ್ ಊರ್. ಸಿರಾಡಿ, ಸಿರಾಲೆ, ಸಿರ್ವ, ಸಿರ್ ಎಂದರೆ ಸಣ್ಣದು, ಕೆಳಗೆ ಎಂದೂ ಅರ್ಥವಿದೆ. ತೀರೂರು, ಇದು ಸೀರೂರಿನ ಇನ್ನೊಂದು ರೂಪ.

**ವಡಭಾಂಡೇಶ್ವರ**—ಇದು ಒಡಪು ಅನಂತೇಶ್ವರ ಎಂಬುದರ ರೂಪಾಂತರ. ಒಡ, ಉಡ, ಅಡ= ಜೋಡಿಸಿರು, ಅಡ್ಡವಿರು ಎಂದೂ ಅರ್ಥವಿದೆ.

**ಮೈಸೂರ**—ಮೆಯ್ ಪೂರ್ವಪದ (ಮೆಯ್‌ನಾಡು, ಮೆಯ್‌ಲಾರು); ಮೆಯ್ ಪರಪದ (ಪಟ್ರಮೆಯ್ ದೊಳ್ಳ.) ಮೆಯ್ = ಮೇಯಿಸುವುದು. ಸೂಗು-ಸೂರ್ ಪೂರ್ವಪದ (ಸುರಾಲ್, ಸೂರಂಜೆ); ಸೂರ್ ಪರಪದ (ಹೊಸೂರು ಅಯ್ಯೂರು, ಮಾಸೂರು) ಸೂರ್ = ಸುತ್ತು, (ಸುರುಳಿ, ಸುಳಿ)

**ವೈಕುಂಠ**-ವೆಯ್‌ಗುಂಟ (ವೆಯ್‌ನಾಡು, ವೆಯ್‌ಕೊಮ್ ಪೆರುವೆಯ್, ಗುಂಟೂರು, ಗುಂಟಕಲ್ಲು, ರೇಣಿ ಗುಂಟ) ವೆಯ್ = ನೆರಳಾಗಿರು. ಗುಂಟ (ಕುಂಟೆ)= ನೀರಿನಕುಂಟೆ. ನೀರಿನಕುಂಟೆಯ ನೆರಳಾದ ಸ್ಥಳ.

**ಕೊಂಕಣ**—(ಕೊಂ ಪದವು, ಕೊಂ ಬಾರು, ಕೊಂಬಾರ ಬಯಲ್, ವೆಯ್ ಕೊಂ. ಕಣತೂರ್, ಕಣಪಾಡಿ, ಕೊಕ್ಕಳ, ಕೊಕ್ಕಡ) ಕೊಂ-ಕೊಂಕಿರುವ ಕಣ= ಕಳ.

**ಮುಡಿಕೆರೆ**—(ಮುಡಿಮುಣ್, ಪೆಜಮಾಡಿ). ಮುಡಿ = ಮೊರಡಿ, ಕೆರೆ = ಕೇರಿಯಲ್ಲ, ಕೆರೆ.

**ಸವಣೂರು**—(ಸವಣಾಲು, ಸವೂರು, ಸವ್ಯೂರು; ಸವು ಅಥವಾ ತವು ಎಂದರೆ ತಗ್ಗಾಗಿರು ಎಂದರ್ಥ.).

**ತಲ್ಗೇರಿ**-ತಾವಲ್, ತಾಲ್, ತವು ಎಂದರೆ ತಗ್ಗು ಎಂದರ್ಥ. ತವುಳ್ ಎಂಬುದನ್ನು ತೌಳು ಎಂದು ಭ್ರಮಿಸಿದ್ದರಿಂದ ತುಳು ಶಬ್ದವು ಹುಟ್ಟೀತೇ?

ತುಳುವರು ಭೂಮಿಯನ್ನು ಸ್ತ್ರೀಯೆಂದು ಕಲ್ಪಿಸಿ ಕೊಂಡಿದ್ದರೂ ಇರಬಹುದು. ಉದಾಹರಣೆ
ತಲಪಾಡಿ,ನೆತ್ತಿಕಟ್ಟೆ,ಮುಂಡಕುರ್, ಮೂಗೂರ್,ಕಣ್ಣ್ಯೂರ್ ಕೈಯ್ಯೂರ್, ಕಾಲ್‌ತೋಡು, ಇತ್ಯಾದಿ.

ನಮ್ಮ ತುಳುನಾಡಿನ ಸ್ಥಳಗಳ ಹೆಸರುಗಳಿಗೂ ಇಲ್ಲಿಯ ಜಾತಿಮನೆತನಗಳ ಹೆಸರುಗಳಿಗೂ ಪರಸ್ಪರ ಸಂಬಂಧ ವಿದೆಯೋ ಇಲ್ಲವೋ ನೋಡಿರಿ! ಕೆಳಗಿನ ದೃಷ್ಟಾಂತಗಳಲ್ಲಿ ಮೊದಲು ಮೂಲರೂಪ, ಮತ್ತೆ ಸ್ಥಳದ ಹೆಸರು, ಆ ಮೇಲೆ ಜಾತಿಯ ಹೆಸರುಗಳನ್ನು ಕೊಟ್ಟಿದೆ.

ಒಡ್–ಒಡಪು(ಉಡುಪು)–ಒಡಾರಿ. ಒಕ್–ಒಕ್ಕಾಡಿ ಒಕ್ಕೆತ್ತೂರ್--ಒಕ್ಕೆಲ್ಮ. ಕೊಡ್--ಕೊಡ್‌ವೂರ--ಕೊಡವ. ಕೊರ್--ಕೊರ್‌ಜೆ--ಕೊರವ (ಕೊರಗ). ಗುಡ್--ಗುಡ್ಡೆ ಕೋಡಿ–ಗೊಡ್ಡ, ಕೊಮ್--ಕೊಮ್ಬೂರು, ಕೊಮ್ಮೂರ-- ಕೊಮ್ಬಿ. ನಾಡ್--ನಾಡ್ಕೂರು, ನಾಡ್ಕೇರಿ--ನಾಡವ. ಬನ್ (ಬಣ್)–ಬನ್ದಾರು, ಬನ್ದಳ್ಕೆ--ಬನ್ಟ. ಬಯ್--ಬಯ್ಲಾಡಿ-- ಬಯ್ದಿ. ಬಾಕ್ (ಬಾಗ್) --ಬಾಗ್ಲೋಡಿ, ಸಿರ್ಬಾಗ್ಲು--ಬಾಕುಡ. ಒರ್--ಒರ್ಮಲೆ–ಒರ್ವ. ಬಾನೆ(ಬಾಣೆ)-–ಬಾಣ್ಬೆಟ್ಟು, ಬಾಣಾವರ–ಬಾಣಾರ್, (ಬ್ರಾಹ್ಮಣರ್). ಮಡ್–ಮಡಿ ಮಣ್, ಮಡ್ಯಾರ್---ಮಡ್ಯಲ. ಮುಣ್ಡ್--ಮುಂಡಾಜೆ-- ಮುಂಡಾಲ. ಮುಲ್--ಮುಲ್ಕೆ, ಮುಲ್‌ಡ್ಕ--ಮೂಲ್ಯ. (ಮೂಲಿ). ಮೊಗರ್--ಮೊಗರ್‌ನಾಡು, ಮೊಗರಾಲು— ಮೊಗೇರ.

ಕೆಳಗಿನವುಗಳಲ್ಲಿ ತುಳುವರ ಮನೆತನಗಳ ಬಿರುದುಗಳ ಮೂಲವು ಕಣ್ಣಿಗೆ ಹೊಳೆಯುತ್ತದೆ.

ಅಡ್—ಅಡೂರು — ಅಡಪ. ಅಡ್ಯಾ—ಅಡ್ಯಾರ್, ಅಡ್ಯನಡ್ಕ —ಅಡ್ಯನ್ತಾಯ, (ಅಡ್ಯದವ ಎಂದರ್ಥ). ಅಜ್ —ಅಜ್ಲಾಡಿ, ಅಜಾವರ — ಅಜಿಲ. ಆರ್ — ಆರೂರ್, ತಂಜಾರ—ಆರಿಗ. ಆಲ್—ಆಲೂರ್, ಕುಡಾಲ್--ಆಲ್ವ. ಉಳ್–ಉಳ್ಯ– ಉಳ್ಳಾರ್ – ಉಳ್ಳತ್ತಾಯ. ಉಳ್ಳುರಾಯ. ಉಡ್–ಉಡ್ಪಿ–ಉಡುಪು. ಕಜ್—ಕಜಕಾರ್, ಮಯ್ತ್ರ ಕಜ—ಕಜಯ. ಕಬೆ—ಕಕ್ಕಬೆ, ಕಬೆಯೂರು–ಕಬೆಯ. ಕಲ್—ಕಲ್ಯ—ಕಲ್ಲುರಾಯ (ಕಲ್ಯದವನೆಂದರ್ಥ), ಕಲ್ಕುರಾಯ. ಕರ್—ಕರ್ಯ, ಕರ್ಯಂಗಳ—ಕರ್ನ. ಕಮ್—ಕಮ್ಲ, ಕಿನ್ನಿಕಮ್ಲ—ಕಮ್ಬುಳಿ, (ಕಡಮ್ಬುಳಿತ್ತಾಯ, ಕಕ್ಕಿಲ್ಲಾಯ, ಕೇಕುಣ್ಣಾಯ ಇತ್ಯಾದಿ). ಕಿಲ್—ಕಿಲ್ಲೂರ್, ಕುಕ್ಕಿಲ— ಕಿಲ್ಯ. ಕುದರು—ಕುದುರ್ಪಾಡಿ, ಹಟ್ಟಿಕುದುರ್—ಕುದುರ. ಕಾರ್ —ಕಾರ್ಲ, ಸುದೆಕಾರ,–ಕಾರನ್ತ (ಕಾರದವ). ಕೊಣ್, —ಕೊಣಜೆ, ಕೊಣನೂರ್–ಕೊಣ್ಡ. ನನ್ದ್—ನನ್ದಾರ್, ನನ್ದಳ್ಕೆ—ನೊನ್ದ. ನಾ–ನಾವೂರ,—ನಾವ್ಡ. ಪಕ್—ಪಕ್ಲ ಪಕ್ಲಾಡಿ — ಪಕ್ಕ. ಪುಂಜ— ಪುಂಜಾಲ್, ಉಪ್ಪುನ್ಜ — ಪುಂಜ. ಪೆರ್ — ಪೆರ್ಲ, ಪೆರ್ಗ — ಪೆರ್ಗಡೆ. ಮಣ್ — ಮಣ್ಣುಗ್ಡೆ, ಕೆಮ್ಮಣ್ಣಿ — ಮಣಿಯ್. ಮಯ್ — ಅಮಯ್‌ಮ್ಲ, ಮಯ್ಲಾರ್–ಮಯ್ಯೆ. ಮಾಡ್–ಮಾಡ್ನೂರ್, ಹೆಮ್ಮಾಡು— ಮಾಡ. ಮಾಳ್ – ಮಾಳೂರ್, ಎರ್ಮಾಳ್– ಮಾಳಣ್ವ. ಮಾರ್—ಮಾರೂರ್, ಬರ್‌ಮಾರ್—ಮಾರ್ಲ. ಮುದ್--ಮುದ್ಲಜೆ–ಮುದ್ಯ. ಮೂಡ್–ಮೂಡ್ನೂರ್— ಮೂಡತ್ತಾಯ. ರ್—ಕದ್‌ರೆ, ಬಿದ್‌ರೆ, ರೆಂಜಾಲ್—ರೈ. ಸೂಳ್—ಸೂಳೂರ್, ಸೂಳ್ಯ—ಸೂಳಯ (ಸೂಲಯ). ಸೆರ್—ಸೆರ್ಕಜೆ, ಸೆರ್ಕಳ—ಸೇಕ.

ಚವುಟ್ರು, ಬಂಗ್ರು ಎಂಬೀ ಪ್ರಸಿದ್ಧವಾದ ಹೆಸರುಗಳು ಈ ಪಟ್ಟಿಯಲ್ಲಿ ಬಾರದಿರುವುದಕ್ಕೆ ಕಾರಣವಿದೆ; ಅವು ತುಳುನಾಡಿನಲ್ಲಿ ಹುಟ್ಟಿದುವುಗಳೂ ಅಲ್ಲ; ಇಲ್ಲಿಯ ಸ್ಥಳಗಳನ್ನು ಕುರಿತುವುಗಳೂ ಅಲ್ಲ. ಅವು ಅಧಿಕಾರ ಸೂಚಕವಾದ ಹೆಸರುಗಳು, ಹೊರಗೆ ಹುಟ್ಟಿ ಇಲ್ಲಿ ಬಂದು ನೆಲಸಿದಂಥವುಗಳು. ಅರಸನ ಕಂದಾಯದ ವಸೂಲಿಗಾಗಿ ಸೀಮೆಯಲ್ಲಿ ಚೌಧ್ರಿ ಎಂಬವನೊಬ್ಬ ಅಧಿಕಾರಿಯು ಮೊಗಲಾಯಿ ರಾಜ್ಯಕ್ಕಿಂತ ಮೊದಲೇ ಇದ್ದನೆಂದು ಗೊತ್ತಾಗಿದೆ. ಅಂಥ ಚೌಧ್ರಿ ವಿಜಯನಗರದ ಕಾಲದಲ್ಲಿ ಇಲ್ಲಿದ್ದನು. ಈ ಚೌಧ್ರಿ (ಚವುಧ್ರಿ) ಎಂಬುದು ತುಳುವಿನಲ್ಲಿ ಚವುಟ್ರು ಎಂದು ಮಾರ್ಪಟ್ಟು, ಅದರೊಳಗೆ ಮೊದಲೇ ಇದ್ದ ರಕಾರವು ತುಳುವಿನಲ್ಲಿ ಬಹು ಮಾನಾರ್ಥಸೂಚಕವಾದ ಬಹುವಚನದ ಅರು 'ಪ್ರತ್ಯಯ' ವೆಂಬ ಭ್ರಮೆಗೆ ಅವಕಾಶಕೊಟ್ಟಿತು. ಕಡೆಗೆ ನಮ್ಮ ಇಂಗ್ಲಿಷ್ 'ಮಾಸ್ತರ್' ಪದಕ್ಕೆ ತುಳುವಿನಲ್ಲಿ ಮಾಟೆ ಎಂಬ ದುರ್ದಶೆ ಬಂದಂತೆ, ಚವುಧರ್ (ಚವುಟರ್) ಹೋಗಿ ಚವುಟ ಎಂದು ಬಡವಾಯಿತು. ಬಂಗರ ಎಂಬ ನುಡಿಯು ಇಲ್ಲಿಯೇ ಹುಟ್ಟಿ ಬೆಳೆದಿದ್ದರೂ ಇರಬಹುದು; ಆದರೆ ಚವುಟರ್ ಎಂಬುದು ಹೊರಗಿನಿಂದ ಆಮದು ಮಾಡಿದ ಶಬ್ದ.

ಬಂಗರ್ ಎಂಬುದು ತುಳುವಿನಲ್ಲಿಯ ಬಂಗ ಎಂಬುದರ ಬಹುವಚನ. ಈ ಬಂಗ ಶಬ್ದವು ಬೇಲ, ಬೇಲಾಡಿ, ಬೇಕಿಲ ಮೊದಲಾದುವುಗಳ ಬೀಜವಾದ ಬೇ ಎಂಬುದರಿಂದ ಹುಟ್ಟಿತೋ; ಬಯ್ಲು, ಬಯ್ಲಂಪಾಡಿ, ಇತ್ಯಾದಿಗಳಲ್ಲಿಯ ಬಯ್ಯಿಂದ ಚಿಗುರಿತೊ ಗೊತ್ತಾಗುವುದಿಲ್ಲ. ಬಂಗವಾಡಿ, ಬಂಗ್ರಮಂಜೇಶ್ವರ ಎಂಬೀ ಹೆಸರುಗಳು ಬಂಗನಿಗೆ ಮೊದ

ಲಿನ ಸ್ಥಾನವನ್ನು ಕೊಡುತ್ತದೆ. ಆದರೆ ಬಂಗರ ಕೂಳೂರಿನಲ್ಲಿಯ ಬಂಗರು ಮಾತ್ರ ಬೆಂಗರೆ (ಬೆಂಗ್ರೆ) ಎಂಬ ನುಡಿಯ ವಿರೂಪ. ಈ ಬೆಂಗರೆ, ಬೆಂಗನಾಡು, ಬೆಂಗಟ್ಲು ಮೊದಲಾದುವುಗಳ ಮೂಲವು ಬೆನ್ ಇಲ್ಲದಿದ್ದರೆ ಬೆಚ್ಚನೆ ಎಂಬುದಿರಬೇಕು.

ತುಳುವರಲ್ಲಿಯ ಕಾಪೆ, ಕೊಟ್ಟಾರಿ, ಗುರ್ಕಾರೆ, ಗುತ್ತಿನಾಯೆ, ಎಂಬೀ ಅಧಿಕಾರಿಗಳ ಮೂಲ ರೂಪಗಳನ್ನು ಕ್ರಮವಾಗಿ ಕಾಪು, ಕೊಟ್ಟಾರ, ಕುರಿಯ, ಗುತ್ತು, ಎಂಬೀ ಸ್ಥಳಗಳ ಹೆಸರುಗಳಲ್ಲಿ ಕಾಣಬಹುದು.

ತುಳುವರಲ್ಲಿ ಬಹುಕಾಲದ ಹಿಂದೆ ಬದುಕಿ ಬಾಳಿ ಮೆರೆದು ಮಾಯಕವಾದ ಹಿರಿಯರು ರಾಜಭೂತಗಳಲ್ಲಿ ಗಣಿಸಲ್ಪಟ್ಟು 'ಕೂ'ಯೆಂದು ಕೂಗಿದರೆ 'ಓ'ಯೆಂದು ಓಡಿಬರುವುದರಿಂದ ಅವರನ್ನು ಹೆಸರೆತ್ತದೆ ಸ್ಥಳನಾಮಾಂಕಿತದಿಂದ ಕರೆಯಬೇಕಾಗುವಷ್ಟು ಕಾರಣಿಕ ಪುರುಷರಾಗಿ ಹೋಗಿರುತ್ತಾರೆ. ಪಡುಮಲೆಯ ಕೋಟಿಚೆನ್ನಯರೂ ಮಾರ್ನಾಡಿನ ಕಲ್ಕುಡ, ಕಲ್ಲುರ್ಟಿಯರೂ ಯಾರೆಂಬುದು ನಮಗೆ ಭೂತದ ಸಂಧಿಯಿಂದ ಗೊತ್ತಾಗುತ್ತದೆ. ಆದರೆ ಮಲೆರಾಯನ(ಮಲ್ಲೆರಾಯನೆಂದಲ್ಲ, ಮಲೆಯವನು ಎಂದರ್ಥ)ಆದಿಸ್ಥಳ ಮಲೆ, ಮುಂಡತ್ತಾಯನದು ಮುಂಡ, ಜಾರನ್ತಾಯನದು ಜಾರ, ತೊಡಕಿನಾಯನದು ತೊಡಿಕಾನ; ಇವುಗಳಿಗಿಂತ ನಮ್ಮಲ್ಲಿ ಕೊಡಮಣ್ ಹಳ್ಳಿಯೇ ಕೊಡಮಣ್ತಾಯ ದೈವದ ಆದಿಸ್ಥಾನವಾಗಿದ್ದು ಪ್ರಸಿದ್ಧವಾಗಿದೆ.

ಹಳ್ಳಿಯಲ್ಲಿ ಯಾವ ಯಾವ ಮೃಗಾಧಿಗಳ ಬಾಧೆಯಿತ್ತೆಂದು ಹೇಳುವ ಹೆಸರುಗಳೂ ಉಂಟು. ಪಿಲಿಯೂರಲ್ಲಿ ಹುಲಿ, ಆನೆಕಲ್ಲಿನಲ್ಲಿ ಆನೆ, ಪಂಜಿಕಲ್ಲಿನಲ್ಲಿ ಕಾಡುಹಂದಿ, ಪುಚ್ಚೆಮೊಗರಲ್ಲಿ ಕಾಡುಬೆಕ್ಕು, ಪೂಚೆ ಕಾಡಿನಲ್ಲಿ ಹುಳುಗಳು ಇತ್ಯಾದಿ. ಹೀಗೆಂದು ತಿಳಿದು ನರಿಮೊಗರಲ್ಲಿ ನರಿಗಳ ಕಾಟವಿತ್ತೆಂದು ಹೇಳಿದರೆ ಸರಿಯಾಗದು; ಕನ್ನಡದಲ್ಲಿ ನಾಯಿಗೆ ಕುರುಕ ಎನ್ನುವುದಾದರೆ, ತುಳುವಿನಲ್ಲಿ ನರಿಗೆ ಕುದುಕ ಎಂದು ಏತಕ್ಕೆ ಹೆಸರೆಂಬುದು ಗೊತ್ತಾಗುವುದಿಲ್ಲ; ಅದರ ಹಾವಳಿ ಏನೋ ಕುದುಕಬೆತ್ತಿಲಲ್ಲಿ ಇದ್ದಿರಬೇಕು.

ಎಣೆಲ, ಸುಗ್ಗಿ, ಕೊಳಕೆ—ಈ ಮಾತುಗಳು ಹೇಗೆ ಬಂದುವೊ ನನಗೆ ತಿಳಿಯದು. ಒಂದು ಕಳದಲ್ಲಿ ಬಿತ್ತುವಷ್ಟು ಬೀಜವನ್ನು ಒಂದು ಕಳಸೆ (೧೪ಸೇರು), ಅಜೆಯಲ್ಲಿ ಹಿಡಿಯುವುದಕ್ಕೆ ಅಜಿಲೆ (೪೨ಸೇರು) ಎಂದು ಕರೆದರೆ, ಒಂದು ಕೊಳಗ ಎಂದರೆ ಕುಳ (ಕೊಳ) ತೆಗೆದುಕೊಳ್ಳುವಷ್ಟು ಬತ್ತವೇ? ಇತರ ಭಾಷೆಗಳು ಅವಲ್, ಅವಲಕ್ಕಿ ಎನ್ನುವಾಗ ತುಳು ಭಾಷೆಯೂ ಅದನ್ನು ಬಜಿಲ್ ಎಂದು ಕರೆಯುವುದು ಬಜೆಯಲ್ಲಿ ಬೆಳೆದ ಬತ್ತದಿಂದ ಅದನ್ನು ಮೊತ್ತಮೊದಲು ಮಾಡುತ್ತಿದ್ದುದರಿಂದಲೇ?

ನನ್ನ ಜಿಲ್ಲೆಯಲ್ಲಿಯ ಹಳ್ಳಿಪಳ್ಳಿಗಳ ಹೆಸರುಗಳನ್ನು ಕುರಿತು ನನ್ನ ಮನಸ್ಸಿಗೆ ಬಂದ ಒಂದೆರಡು ವಿಷಯಾಂಶಗಳನ್ನು ನಾನು ಹೇಳಿದ್ದಾಯಿತು. ಈ ಅಂಶಗಳು ಸತ್ಯವೆಂದೂ ಸಸೂತ್ರವೆಂದೂ ನನ್ನ ಹೇಳಿಕೆಯಲ್ಲ. ನಾನು ಹೋದ ಸರಣಿಯಲ್ಲಿಯೇ ನನಗಿಂತ ಸಮರ್ಥರಾದ ವಾಚಕರು ತಮ್ಮ ತಮ್ಮ ಸೀಮೆಯ ಹಳ್ಳಿಗಳ ಹೆಸರುಗಳನ್ನು ವಿಮರ್ಶಿಸುತ್ತ ಹೋದರೆ, ಇಲ್ಲಿ ನನ್ನಿಂದ ತಪ್ಪಾಗಿ ಗ್ರಹಿಸಲ್ಪಟ್ಟ ಇಲ್ಲವೆ ನನಗೆ ಗೊತ್ತಾಗದಿದ್ದ ಅನೇಕ ಅಮೂಲ್ಯಾಂಶಗಳನ್ನು ಅವರು ಕಂಡು ಹಿಡಿಯುವರೆಂಬ ಭರವಸೆ ನನಗಿದೆ; ಮತ್ತು ನಮ್ಮ ಕನ್ನಡ ವಿದ್ಯಾರ್ಥಿಗಳು ಈ ನಾಡಿನ ಸಂಸ್ಕೃತಿಯ ಅಧ್ಯಾಯಗಳಲ್ಲಿ ಇದುವರೆಗೆ ಓದದೆ ಬಿಟ್ಟುಬಿಡುತ್ತಿದ್ದ ಒಂದು ಮೂಲೆಯ ಅಧ್ಯಾಯದ ಅರ್ಥ ವಿಸ್ತರಣೆಯನ್ನು ಅವರು ಸುಲಭವಾಗಿ ಮಾಡುವರೆಂಬ ನಂಬುಗೆಯು ನನಗೆ ಇದೆ; ಈ ಅಧ್ಯಾಯದ ಮೇಲೆ ಸಾಮಾನ್ಯವಾಗಿರುದ ಶ್ರೀ ಗುರುಭ್ಯೋ ನಮಃ ಎಂಬದನ್ನು ವಾಚಿಸಿ, ಸಂಧಿಸೂಚನೆಯನ್ನು ಮಾತ್ರ ಈ ಲೇಖದಲ್ಲಿ ನಾನು ಓದಿರುತ್ತೇನೆಂದು ತಿಳಿಯುವುದು.

"ಸ್ವದೇಶಾಭಿಮಾನಿ ೧೯೩೧"

# ಕುಮಾರವ್ಯಾಸನ ಹೆಗ್ಗಳಿಕೆ

(ತಾ ೧೪-೮-೩೬ರಲ್ಲಿ ಹೈದರಾಬಾದಿನಲ್ಲಿ ಮಾಡಿದ ಉಪನ್ಯಾಸದಿಂದ)

**ಕುಮಾರವ್ಯಾಸನ ಪ್ರಧಾನ ಗುಣ:-** ಶೈಲಿಯ ನಿರರ್ಗಳತೆ, ನಿರಾತಂಕದ ಧಾರೆ. ಪದವಿಟ್ಟಳಿಪ ಪ್ರಾಸದ ತೊಳಲಾಟ ಇವನಲ್ಲಿಲ್ಲ; ಶಬ್ದಗಳ ಜೋಡಣೆ ನೆನಸಿ ಬಂದುದಲ್ಲ. ಶ್ಲೇಷದ ವಿರೋಧಾಭಾಸದ ಗೊಂದಲ ಇವನ ಸಬಲ ಪ್ರವಾಹದ ಕವಿತೆಯಲ್ಲಿಲ್ಲ. ಭಾರತದ ನುಡಿ ನುಡಿಯೂ, ಮಾತು ಮಾತೂ, ಪ್ರತಿಭೆಯ ಹೊನಲಿನಲ್ಲಿ ಇರಲಿಕ್ಕಿಲ್ಲ. ಆದರೆ ಓದುವಾಗ ಎಲ್ಲೆಲ್ಲಿ ಕವಿಗೆ ರಸಾವೇಷವಾಗಿದೆ, ಎಲ್ಲಿ ಕವಿಯ ಆತ್ಮಜ್ಯೋತಿ ಹೊಳೆದಿದೆ, ಎಲ್ಲಿ ವಾಣಿ ಕವಿಯ ನಾಲಗೆಯಲ್ಲಿ ನಿಂದು ಕುಣಿದಿದ್ದಾಳೆ ಎಂದು ತಿಳಿಯುತ್ತದೆ. ಗದುಗಿನ ಭಾರತದಲ್ಲಿ ಹತ್ತುಹದಿನೈದು ಸನ್ನಿವೇಶಗಳು, ಚಿತ್ರಗಳು, ಅಮರವಾದವು; ಹಗುರಾಗಿ ತೇಲಿಹೋಗುವುದಿಲ್ಲ. ಕರ್ಣಜನ್ಮ, ರಣರಂಗದಲ್ಲಿ ಅಭಿಮನ್ಯು, ದ್ರೌಪದಿ ಭೀಮನನ್ನು ಕೆರಳಿಸುವುದು, ಹಾರುವ ಅರ್ಜುನನ ಸ್ವಯಂವರ ಗಮನ, ಯುದ್ಧ ಸನ್ನದ್ಧ ಕರ್ಣ, ಮಂಗಲೋತ್ಸವ, ಕೃಷ್ಣಸಂಧಾನ, ಸಂಜಯ ದೌತ್ಯ ಮುಂತಾದ ಕೆಲವು ಚಿತ್ರಗಳು ವಿಶ್ವಸಾಹಿತ್ಯದ ಶಿಖರ ಮಾಲೆಯಲ್ಲಿ ಇರತಕ್ಕವು.

ಗದುಗಿನ ಭಾರತ "ಭಾರತ Re-told" ಇದ್ದಂತೆ. ಮಕ್ಕಳ ಸಾಹಿತ್ಯದ ಜಾತಿ ಅಂದರೆ ಹೀಗೆ: ಪಂಪ ಭಾರತ ಕೇವಲ ಪಂಡಿತ ಮಾನ್ಯ, ಅದರದು ಬಿಗುಪಿನ ಶೈಲಿ, ವ್ಯಾಕರಣ ಸುತ್ತುಗಟ್ಟಿದೆ, ಸಂಪ್ರದಾಯ ಶರಣತೆ ಕಾಣುತ್ತಿದೆ. ಬರೀ ಸಮವಾದ ವೃತ್ತಗಳು. ಮಾತು ಹಳೆಯ "ಕಡಲೆಗನ್ನಡ". ಸಹಜವಾಗಿಯೇ ಅದಕ್ಕೆ ಜನರಲ್ಲಿ ಅನಾದರ ಬೆಳೆಯಿತು; ಬರಬರುತ್ತ ಜೈನ ಗ್ರಂಥ ಎಂತ ಜನರು ಅದನ್ನು ಅಸಡ್ಡೆಮಾಡಿದರು ಎಂದು ಕೆಲವರು ಅನ್ನುತ್ತಾರೆ; ಅದು ಸರಿಯಲ್ಲ. ಜನರ ಭಾಷಾ ಸಂಸ್ಕೃತಿ ಬದಲಾಯಿತು, ಓದುಗಾರಿಕೆ ತಗ್ಗಿತು. ಹೊಸ ಕಾವ್ಯ, ಪಾಮರರಿಗೂ ತಿಳಿಯುವ ಕಾವ್ಯ ಬೇಕಾಯಿತು. ಅದರ ಸಲುವೇ ಷಟ್ಪದಿಯ ಜನನ. ಭೀಮ ಕವಿ ಬಸವ ಪುರಾಣ ಬರೆದಾಗ ಕನ್ನಡಿಗರಲ್ಲಿ ಏನು ಕೋಲಾಹಲವೆದ್ದಿತೋ ತಿಳಿಯುವ ಹಾಗಿಲ್ಲ. ಹೊಸತೆಲ್ಲ ಕೆಸರು ಎಂಬದು ಮನುಜರ ಇಂದಿನ ಗುಣವಲ್ಲ. ಲಕ್ಷ್ಮೀಶನ ಕಾಲದಲ್ಲೂ "ಈ ವಿನೂತನ ಕವಿತೆಯೆಂದು ಕುಂದಿಟ್ಟು" ಜರಿವ ಜನರಿಗೇನೂ ಕೊರತೆಯಿರಲಿಲ್ಲ; ಗೋಂಕರ ಕಪ್ಪೆಗಳಂತೆ ಅಲ್ಲಲ್ಲಿ ಇದ್ದರು. ನಾರಣಪ್ಪನಿಗೂ ಇವರ ಪರಿಚಯ ಪುಣ್ಯ ಇದ್ದಿರಬಹುದು. ಆದರೆ ಅವನು ಎಲ್ಲೂ ಆ ಮಾತೇ ಎತ್ತಿಲ್ಲ. ಕವಿ ಸಹಜವಾದ ದುರ್ಬಲತೆ, ಆತ್ಮ ಪ್ರಶಂಸೆ ಇವನಲ್ಲಿ ಕಾಣುವುದಿಲ್ಲ. ಧಾಟಿಯ ಅಗ್ಗಳಿಕೆಯ ಕುರಿತು ಒಂದೆರಡು ಮಾತು ಇವೆ. ಎಲ್ಲರಂತೆ ಹೆಗ್ಗಳಿಕೆ ಹೇಳಿಕೊಳ್ಳುವುದಿಲ್ಲ.

ಕನ್ನಡದಲ್ಲಿ ಕೆಲವೆಡೆ ವಿರೋಧಾಭಾಸದ—ಶ್ಲೇಷದ ಮೋಹ ಬಹಳ. ತರುಣರಿಗೆ ಈ ಮೋಹ ಹೆಚ್ಚು. ಲಕ್ಷ್ಮೀಶ, ವಿರೂಪಾಕ್ಷ, ಮಲ್ಲಣಾರ್ಯ ಮುಂತಾದವರಲ್ಲಿ ಈ ಚಿತ್ರ ಕವಿತೆ ಯಥೇಷ್ಟವಾಗಿದೆ. ಈ ತರದ ಪದ್ಯ ಕವಿತೆಯು ಛಂದೋಬದ್ಧ ಒಗಟು; ನಾರಣಪ್ಪ ಇಂಥ ಗೊಡವೆಗೆ ಹೋಗಿಲ್ಲ. ಅವನು ಆ ಜಾತಿಯ ಕವಿಯೇ ಅಲ್ಲ. ಕವಿತೆಗೆ ಅಲಂಕಾರ ಸೈತುಮಾತು ಜೀವವಂತೆ. ಹಾಗೇ ಮನಸ್ಸಿಗೆ ಆಪ್ಯಾಯನ ಕೊಡುವ ಗುಣವೂ, ಧಾರೆಯಲ್ಲಿ ಚೆಲುವೂ ಕವಿತೆಯ ಜೀವಾಳ. ಕುಮಾರವ್ಯಾಸನಿಗೆ ಅವು ಹುಟ್ಟುಗುಣ. ವರ್ಣನೆಯ ಹದ, ಪಾತ್ರ ನಿರೂಪಣೆ, ಸನ್ನಿವೇಷದ ಆಯ್ಕೆ, ಅಲಂಕಾರ ನಿರ್ವಹಣೆಗೆ ಗದುಗಿನ ಭಾರತ ಒಂದು ಲಕ್ಷ್ಯ. ಉದಾಹರಣೆ: ಈ ಎಲ್ಲ ಚಿತ್ರಗಳಲ್ಲೂ ಕವಿಯ ಅಂತರ್ಯದಲ್ಲಿ ಚಾಳುಕ್ಯ ಚಕ್ರವರ್ತಿಗಳ, ವಿಜಯನಗರದ ಸಾರ್ವಭೌಮರ ವೈಭವದ ನೆನಪು ಹುದುಗಿದ್ದುದು ಕಾಣಬರುತ್ತದೆ. ಕುಮಾರವ್ಯಾಸನ ಕೃಷ್ಣ ಕನ್ನಡಿಗ ಕೃಷ್ಣ; ವಿಜಯನಗರದ ಕೃಷ್ಣರಾಯ. ಚಾಳುಕ್ಯರ ಅರಮನೆಯ ನರುಗಂಪು ಅಲ್ಲಿದೆ; ಹಂಪಿಯ ಹೊಂಬಣ್ಣ ಇಲ್ಲಿ ಬಳಿದಿದೆ. ಮೂಲ ಭಾರತದ ಕೃಷ್ಣನ ಚಿತ್ರದಿಂದ ಇದು ತೀರಾ ಭಿನ್ನ; ಇದು ನಮ್ಮದು, ನಮ್ಮ ಅಭಿಮಾನಕ್ಕೆ ಪಾತ್ರವಾದದ್ದು. ಇದು ನಮ್ಮ ಎದೆಯರಳಿಸುತ್ತದೆ. ಅದು ವೇದವ್ಯಾಸನ ಚಿತ್ರ; ಉತ್ತರ ಹಿಂದುಸ್ಥಾನದ ಸಂಸ್ಕೃತಿಯದು.

ಗದುಗಿನ ಭಾರತದ ಪಾತ್ರಚಿತ್ರಗಳಲ್ಲಿ ಕರ್ಣನದು ಕಾರ್ಯರೀತಿಯಿಂದ ಮೊದಲನೆಯದು, ಉತ್ಕೃಷ್ಟ. ಕರ್ಣ ಎಂದರೆ ಗರ್ವಿಷ್ಟ, ಆತ್ಮ ಪ್ರಶಂಸಾಪರ ಎಂದು ಹಳೆಕವಿಗಳ ಮತ. ನಾರಣಪ್ಪನಿಗೂ ಅದೇ ಶಾಲೆಯಲ್ಲಿ ವಿದ್ಯಾಭ್ಯಾಸವಾಗಿದೆ. ಆದರೂ ಇವನ ಕರ್ಣ ಸ್ವಲ್ಪ ಬೇರೆ. ಮೂಲ ಭಾರತದಲ್ಲೂ ಕೂಡ ಕರ್ಣನ ಪಾತ್ರ ಕುಂಚದ ಒಂದೇ ಗೆರೆಯಲ್ಲಿ ಸಮಾಪ್ತ; ಸ್ಫುಟವಾಗಿ ಮೂಡಿಸಿಲ್ಲ. ಅವನ ಧೀರೋದಾತ್ತ ಗುಣಗಳು ಬೆಳಕಿಗೆ ಬಂದಿಲ್ಲ. ಇದರಲ್ಲಿ ಕರ್ಣ ಪೂರ್ಣಚಂದ್ರ, ಪೂರಾ ಮೂಡಿದ್ದಾನೆ. ಓದುಗರ ಕರುಣೆಗೆ ಪಾತ್ರನಾಗಿದ್ದಾನೆ.

ಅರಮನೆಯ ಸಿಂಹ ಕರ್ಣ, ಹೊಲಗೇರಿಯ ಹಂದಿಯಾಗಿ ಬೆಳೆದ. ಕುಟ್ಟಿ ಕೆಡವಬಲ್ಲ ಗಂಡುಗಲಿ, ಆದರೆ ಹುಟ್ಟು ತಿಳಿಯದ ಹೀನ. ನಾಡಿಯ ರಕ್ತ ದಿವ್ಯವಿದ್ದರೇನು? ನಾಡಿನಲ್ಲಿ ಅಪಾಙ್ಕ್ತೇಯ, ಬಹಿಷ್ಕೃತ. ವಿದ್ಯೆ ಕಲಿವ ಆಸೆ, ಉತ್ಸಾಹವಿದೆ, ಗುರೂಪದೇಶದ ಭಾಗ್ಯವಿಲ್ಲ. ಕುಲೀನರಲ್ಲಿ ಮೋರೆಯೆತ್ತಲಾರದ ಮೂಕ. ತಾಯಿ ತೊರೆದಳು, ತಂದೆ ಕರೆಯಬಾರದವ– ಇದು ನಾರಣಪ್ಪನ ಚಿತ್ರ. ಈ ಕರ್ಣನಿಗೆ ದುರ್ಯೋಧನ ಗೆಳೆಯ, ಅವರದು ಸಂದುಗಾಣದ ಸಖ್ಯ! ದುರ್ಯೋಧನನ ಅಭಿಮಾನ ಕರ್ಣನ ಪ್ರಶಸ್ತಿ. ಕರ್ಣನ ಸ್ನೇಹ ಕುರುಪತಿಯ ಕವಚ.

## ಹೊಸ ದಾರಿ

ನಾನು ಈ ಸ್ಥಾನವನ್ನು ಸ್ವೀಕರಿಸುವುದರಲ್ಲಿ ಆತ್ಮವಂಚನೆಯನ್ನು ಮಾಡಿದೆನೆಂಬ ಭಾವವು ಈಗ ನನ್ನಲ್ಲಿ ಮೂಡಿದೆ. ಏಕೆಂದರೆ ನಮ್ಮ ಜಿಲ್ಲೆಯ, ನನ್ನಿಂದ ಹೆಚ್ಚಾದ ಯೋಗ್ಯತೆ, ವಿದ್ವತ್ತುಳ್ಳ ಮಹನೀಯರು ಈ ಸ್ಥಾನವನ್ನು ಅಲಂಕರಿಸಬಹುದಿತ್ತು–ಮುದುಕನ ನೆನಪು, ಕುಡುಕನ ನಡೆಯಂತೆ; ಹೇಳಲಿರುವುದನ್ನು ಹೇಳದೆ ಉಳಿದರೆ ಕ್ಷಮಿಸಿರಿ. ನಾನಿಲ್ಲಿ ಬಂದ ಅನಂತರ ಈ ಮುಪ್ಪಿನಲ್ಲಿ ನನ್ನ ಮನಸ್ಸು ಹದಿನಾಲ್ಕು ವರ್ಷಕ್ಕೆ ಹಿಂದೆ ಹೋಯಿತು. ಆ ಕಾಲದಲ್ಲಿ ಹಳಗನ್ನಡದ ವಿಚಾರವನ್ನು ಹೇಳುವಾಗ ನನ್ನನ್ನು ಎಷ್ಟೋ ಮಂದಿ ಕೆಣಕಿದರು. ಅಂಥವರಿಂದ ಕಲಿತು ಮುಂದೆ ಬಂದವರು ಈಗ ಹಳೆಸಂಪ್ರದಾಯದ ಪಂಡಿತರನ್ನುದೂರುವಾಗ(?) ನನ್ನ ಮನಸ್ಸು ಸಂತೋಷಗೊಳ್ಳದೆ ಹೇಗಿರುವುದು? ಹಳಗನ್ನಡವು ಸರ್ವಾಂಗ ಬೆಳವಣಿಗೆಗೆ ಆಸ್ಪದವಾಗಿಲ್ಲದುದರಿಂದ ಅದು ಸಾಯಬೇಕಾಗಿದೆ. ಅದನ್ನು ಒಂದು ಕಾಲದಲ್ಲಿ ಬೆಳಗಿಸಿದ ಪುಣ್ಯ ಹಲವರಿಗಿದೆ. ಕನ್ನಡದಲ್ಲಿ ರಾಶಿ ರಾಶಿಯಾಗಿ ಅಚ್ಚುಹಾಕಿದ ಪುಸ್ತಕಗಳಲ್ಲಿ ಈಗ ತಾನೇ ಶ್ರೀ ಕಡೆಂಗೋಡ್ಲು ಶಂಕರಭಟ್ಟರು ಓದಿಹೇಳಿದ "ಪಂಡಿತನ ಪಯಣ" ವೆಂಬ ಕವಿತೆಯಲ್ಲಿ ಹೇಳಿದಂತೆ ಭತ್ತದ ಕಟ್ಟು, ಹುರುಳಿ ಕಟ್ಟು–ಎಲ್ಲಾ ಇವೆ. ಆದರೆ ಹತ್ತಿ ಕಟ್ಟು ಇಲ್ಲವೆಂದು ತೋರುತ್ತದೆ; ಮನಸ್ಸಿಗೆ ಹತ್ತಿಯಿಲ್ಲ, ಓದುವವರಿಗೂ ಹತ್ತಿಯಿಲ್ಲ. ನಾನು ಅಷ್ಟರ ವರೆಗಿನ ಖಂಡನೆಗೆ ಹೋಗುವುದಿಲ್ಲ; ಕವಿಯು ಆವೇಷದಿಂದ ನುಡಿದಿದ್ದಾನೆ. ನಮ್ಮ ಹಳೆಯ ಕಾವ್ಯಗಳಲ್ಲಿ ಗಂಟೆಗೆ ಒಂದೇ ಸ್ವರದಂತಹ ಪದ್ಯಗಳಿವೆ. ಇವುಗಳಲ್ಲಿ ವಾಙ್ಮಯ ಸಾರವಿದೆಯೆಂದರೆ ಆ ಮಾತು ಒಪ್ಪುವುದಿಲ್ಲ.ನಾನು ಕಾವ್ಯದೇವಿಯ ಹೊರ ಹೊಸ್ತಿಲಲ್ಲಿ ನಿಂತ ಉಪಾಸಕನು. ಕನ್ನಡಕ್ಕೆ ಜೀವವಿಲ್ಲದ ಕಾಲದಲ್ಲಿ ಬರೆದೆನಾದರೂ ಆಗ ಕನ್ನಡದ ಪ್ರಸಾರವು ತಡೆದುಹೋಗಿತ್ತು. ಇದನ್ನು ತಿಳಿಯಲಿಕ್ಕೆ ಬಹುಕಾಲ ಹೋಯಿತು. ಇದನ್ನು ತಿಳಿದವರಲ್ಲಿ ದಿವಂಗತ ಎಚ್. ನಾರಾಯಣ ರಾಯರೊಬ್ಬರು; ದಿವಂಗತ ಅಮ್ಮೆಂಬಳ ಸುಬ್ರಾಯ ಪೈಯವರು ಇನ್ನೊಬ್ಬರು. ಇವರ ಸಂಭಾಷಣೆಯಿಂದ ಕನ್ನಡ ಪ್ರಸಾರಕ್ಕೆ ಉತ್ತಮ ದಾರಿ ಯಾವುದೆಂದು ತಿಳಿಯಬರುತ್ತಿತ್ತು. ಕನ್ನಡದ ಅಭಿವೃದ್ಧಿಗೆ ಹೊಸಕನ್ನಡ ಬೇಕೆಂದು ಅವರಿಗೆ ತೋರಿತ್ತು. ಆ ಮಾತು ನಿಜವೆಂದು ತೋರಿದುದು ಈಗ. ಪ್ರತಿಯೊಂದು ವಿಚಾರದಲ್ಲಿಯೂ ಪರಿವರ್ತನ ಕಾಲದಲ್ಲಿ ಕ್ರಾಂತಿಯಾಗುತ್ತದೆ. ಹೊಸ ವಿಷಯಗಳನ್ನು ತೋರಿಸುವಾಗ ಭಯವುಂಟಾಗುತ್ತದೆ. ಉದಾಹರಣೆಗಾಗಿ ಖಾನೇಶುಮಾರಿಯನ್ನು ಮೊದಲು ಪ್ರಯೋಗಿಸಿದಾಗ ಜನರಲ್ಲಿ–ಸರಕಾರವು ಜನರ ತಲೆಯನ್ನೆ ದೊಣ್ಣೆಯಿಂದ ಕುಟ್ಟುವುದೆಂಬ ಭೀತಿಯು ಇರಲಿಲ್ಲವೇ? ಬದಲಾವಣೆಗಳಾಗುತ್ತಲೇ ಇವೆ. ಆದರೆ ಅದು ಗೊತ್ತಾಗಬಾರದು. ನಮ್ಮ ಹಿಂದೂ ಧರ್ಮದಲ್ಲಿಯಾದರೂ ಹೀಗೆಯೇ. ನಮ್ಮಲ್ಲಿ ಒಬ್ಬ ಅಜ್ಜ ಇದ್ದರೆ ಅವನ ಮನಸ್ಸಿನಲ್ಲಿ ತನ್ನ ಮನೆಯು ಮೊದಲಿದ್ದಂತೆಯೇ ಇರಬೇಕೆಂದೂ, ವಿಸ್ತಾರವಾಗಬಾರದೆಂದೂ ಇರುತ್ತದೆ. ಆದರೆ ಕುಟುಂಬವು ದೊಡ್ಡದಾದಂತೆ ಸುತ್ತಮುತ್ತ ವಿಸ್ತಾರಗಳು ಆಗುತ್ತಲಿರುತ್ತವೆ. ಹಾಗಿದ್ದರೂ ಮುದುಕನ ಮನಸ್ಸಿನಲ್ಲಿ ವಿಸ್ತಾರವಾಗಿದೆಯೆಂಬ ಭಾವವು ಹೊಳೆಯುವುದಿಲ್ಲ. ನಮ್ಮ ವಿಚಾರಗಳಲ್ಲಿ, ಧರ್ಮದಲ್ಲಿ ಒಂದು ಬಗೆಯ ಆತ್ಮವಂಚನೆಯಿರುವಂತೆ ಕನ್ನಡದಲ್ಲಿಯೂ ಹಾಗೆಯೇ ಆತ್ಮವಂಚನೆ ನಡೆದುಬಂದಿದೆ. ಪಂಪನ ಕಾಲದಿಂದ ಪ್ರತಿಯೊಬ್ಬ ಕವಿಯೂ ತಾನು ಪುರಾತನರ ಮಾರ್ಗವನ್ನು ಹಿಡಿದೇ ಕಾವ್ಯ ಬರೆಯುವೆನೆಂದು ಹೇಳಿಕೊಳ್ಳುವನು. ಆದರೆ ಇದು ನಿಜವಾಗಿರುವುದಿಲ್ಲ. ಶ್ರೀ. ಯಂ. ಎನ್. ಕಾಮತರು ಹೇಳಿದಂತೆ ಆತ್ಮದ ಅರಿವೆ ಹೊರಗಿನಂತೆ ಒಂದೇ ಆಗಬೇಕು. ಒಂದು ಕಾಲದಲ್ಲಿ ಪ್ರಾಸವನ್ನು ಬಿಟ್ಟು ಕವಿತೆಯನ್ನು ಬರೆಯ ತೊಡಗಿದವರನ್ನು ಹುಲಿಯಂತೆ ತಿನ್ನಲಿಕ್ಕೆ ಬರುತ್ತಿದ್ದರು. ಶ್ರೀ ಗೋವಿಂದಪೈಯವರಿಗೂ ನನಗೂ ಈ ವಿಷಯ ವಾದ ನಡೆಯುತ್ತಿತ್ತು. ಆದರೆ ಅವರು ಅವರ ದಾರಿಯನ್ನು ಬಿಡಲಿಲ್ಲ. ಅದರಿಂದ ಎಷ್ಟೋ ಸಮಯದ ನಂತರ

ಪ್ರಾಸವನ್ನು ಬಿಟ್ಟು ಕವಿತೆಯನ್ನು ಬರೆಯುವ ಪದ್ಧತಿಯು ಮೈಸೂರಲ್ಲಿ ತೊಡಗಿ ಈಗ ಏನೇನು ಪರಿಣಾಮವಾಗಿದೆ ಯೆಂದು ನಿಮಗೆ ತಿಳಿದಿದೆ.

ನಮಗೆ ಪುರಾತನ ಕಾವ್ಯಗಳಿಂದ ತಿಳಿದುಬರುವುದು— ರಾಮಾಯಣ ಭಾರತಾದಿ ಪುರಾಣಗಳಲ್ಲಿ ಬರುವ ರಾಜ ಪುರುಷರ ಸುಖೋಪಭೋಗಗಳು, ಕಷ್ಟ, ಸಾಹಸಗಳು ಮಾತ್ರ. ಆಗ ಸಾಮಾನ್ಯಜನರ ಮನೋವೃತ್ತಿ ವ್ಯಾಪಾರ ಸಮನ್ವಯವು ಕವಿತೆಗೆ ಯೋಗ್ಯವಲ್ಲವೆಂಬ ಭಾವವಿತ್ತು. ಆದರೆ ದೊಡ್ಡ ದೊಡ್ಡ ವಿಷಯಗಳಿಂದ ಸಣ್ಣ ಸಣ್ಣ ಕಿರಣಗಳನ್ನು ತೆಗೆದು ಕವಿತೆಮಾಡುವ ಕ್ರಮವು ಈಗ ಬಂದಿದೆ. ಅದೇ ಭಾವಗಳನ್ನು ಬೇರೆ ವಿಧದಿಂದಲೂ ಚಿತ್ರಿಸುವ ಪ್ರಯತ್ನವು ಹೊಸಗನ್ನಡದಲ್ಲಿ ಧಾರಾಳವಾಗಿ ನಡೆದಿದೆ.

ಈಗ ಪ್ರಕಟವಾಗಿರುವ ಮಿತ್ರಮಂಡಳಿಯವರ ಈ "ನಮ್ಮಕತೆ"ಗಳಲ್ಲಿ ಬರುವ ನೇಮಿಚಂದ್ರನ ಮನೋವೃತ್ತಿಯು ಭೀಮನ ಮೇಲಣ ಸೇಡು ತೀರಿಸಲು ಮುಂದಾದ ಧೃತರಾಷ್ಟ್ರನ ಪ್ರತಿಹಿಂಸೆಯ ಭಾವದಿಂದ ಕಡಮೆಯದಲ್ಲ. ಅದೇ ಧೃತರಾಷ್ಟ್ರನ ಸೇಡುತೀರಿಸಿಕೊಳ್ಳುವ ಭಾವನೆಯನ್ನು ನೇಮಿಚಂದ್ರನು ಹಿಂದುಗಡೆ ಇಟ್ಟಿದ್ದಾನೆ. ಇದರೊಳಗಣ "ದೊಡ್ಡಣ್ಣನ" ಚಿತ್ರವನ್ನು ನೋಡೋಣ. ಉತ್ತಾನಪಾದ ರಾಯನ ಹೆಂಡತಿ ಸುರುಚಿಯ ಚಿತ್ರವಿದೆ; ಅದರಿಂದಲೂ ಉತ್ತಮ ಚಿತ್ರವನ್ನಿಲ್ಲಿ ಕೊಟ್ಟಿದ್ದಾರೆ. ಮಾತ್ರವಲ್ಲದೆ, ಬಾಲಕರ ಮನೋವ್ಯಾಪಾರದ (child study) ಉತ್ತಮ ಚಿತ್ರವು ದೊಡ್ಡಣ್ಣನಲ್ಲಿದೆ. "ನಿರಪರಾಧಿ"ಯಲ್ಲಿ ಕಸವಿದ್ದುದನ್ನು ರಸಮಾಡುವ ಶಕ್ತಿಯಿದೆ. ಏನೋ ಒಂದು ಚಿಕ್ಕ ಸಂದರ್ಭವನ್ನು ತೆಗೆದುಕೊಂಡು, ಹತ್ತುಹದಿನೈದು ಪುಟಗಳೊಳಗೆ ವಾಚಕರಲ್ಲಿ ಕುತೂಹಲವನ್ನು ವರ್ಧಿಸುವ ರೀತಿಯಲ್ಲಿ ಚಮತ್ಕಾರವಾಗಿ ಕತೆಯನ್ನು ಹೆಣೆದಿರುವರು. ಇನ್ನೂ ಬೇರೆ ಒಳ್ಳೊಳ್ಳೆಯ ವಿಷಯಗಳಿವೆ. ಆದರೆ ಇವೆಲ್ಲಾ ನಿರ್ದೋಷಗಳಾಗಿವೆ ಎಂದು ಹೇಳಲಾರೆ; ತಿದ್ದಿಕೊಳ್ಳುವ ವಿಷಯಗಳೆಷ್ಟೋ ಇವೆ. ನಮ್ಮಲ್ಲಿ ಉತ್ತಮ ಲೇಖಕರು ಇಲ್ಲದೆ ಇಲ್ಲ. "ಹಾಸನ ಟೋಪಿ" ಎಂಬ ಪುಸ್ತಕವನ್ನೋದಿ ಹಲವರು ಸಂತೋಷಗೊಂಡಿರುವರು. ನಮ್ಮ ಜಿಲ್ಲೆಯಲ್ಲಿ ಹಲವರಿಂದ ಉತ್ತಮ ಕೃತಿಗಳು ಬರೆಯಲ್ಪಡುತ್ತಿವೆ. 'ಪ್ರಬುದ್ಧ ಕರ್ನಾಟಕ'ದಲ್ಲಿ ಬಂದಿರುವ ಮಿತ್ರಮಂಡಳಿಯವರೊಬ್ಬರ (ಪೇಜಾವರ ಸದಾಶಿವ ರಾಯರ) "ಆಟಿಯ ಹುಣ್ಣಿಮೆ" ಎಂಬ ಕವಿತೆಯನ್ನು ಓದಿ ಆ ಮನುಷ್ಯನನ್ನು ಒಮ್ಮೆ ನೋಡಬೇಕೆಂದು ತೋರಿತು. ಮೊದಲು ಏನು ಬರೆದರೂ "ಹೃದಯಂಗಮವಾಗಿದೆ, ಮಧುರ ಪದ ಪುಂಜ ರಂಜಿತವಾಗಿದೆ" ಇಷ್ಟೇ ಎಂದಿತ್ತು. ಆದರೆ ಈಗ ವಿಮರ್ಶೆಯ ಶಾಸ್ತ್ರವನ್ನು ಕಟ್ಟಿಕೊಂಡಿದ್ದಾರೆ. ಎಷ್ಟು ವಿಮರ್ಶಾ ದೃಷ್ಟಿಯಿಂದ ನೋಡಿದರೂ ನಮ್ಮಲ್ಲಿ ಯೋಗ್ಯತೆಯುಳ್ಳವರಿದ್ದಾರೆ. ನಮ್ಮ ಜಿಲ್ಲೆಯ ಉತ್ತಮ ಕವಿಗಳಲ್ಲಿ ಕಡೆಂಗೋಡ್ಲು ಶಂಕರ ಭಟ್ಟರು ಒಬ್ಬರು. ಈಗ ಅವರು ತಾನೇ ಓದಿ ಹೇಳಿದ "ಪಂಡಿತನ ಪಯಣ" ಇತ್ಯಾದಿ ಕವಿತೆಗಳಲ್ಲಿ 'ಡ್ರೈಡನ್' ಮೊದಲಾದ ಇಂಗ್ಲಿಷ ಕವಿಗಳ ಕೃತಿಗಳಿಗೆ ಸಮತೋಲವಾಗಬಹುದಾದ ವ್ಯಂಗ್ಯ ವಿನೋದಭಾವಗಳು ಚಿತ್ರಿತವಾಗಿವೆ. ಹೊಸ ಕನ್ನಡದಲ್ಲಿ ಉತ್ತಮ ಕವಿತೆಗಳನ್ನು ಬರೆದವರು ಮೈಸೂರಲ್ಲಿಯೂ ಇದ್ದಾರೆ. 'ಪಡುವಲ ಕಡಲಿನ ಮುಂಗಾರ'ನ್ನು ಶ್ರೀ. ಕೆ. ವಿ. ಪುಟ್ಟಪ್ಪನವರು ವಿವರಿಸಿದ್ದಾರೆ. ಈಗ ಪ್ರಕಟವಾಗುವ ಹೊಸಕನ್ನಡ ಸಾಹಿತ್ಯವೆಲ್ಲವೂ ಉಳಿಯುವುದೆಂದು ಹೇಳಲಾರೆ. ಆದರೆ ಹಳಗನ್ನಡವು ಹೊಸಕನ್ನಡದ ಸ್ಥಾನವನ್ನು ಆಕ್ರಮಿಸಲಾರದು. ಬರಿಯ ಹಳಗನ್ನಡವೇ ಸರ್ವಸ್ವವೆನ್ನುವವರಿಂದ ನಮಗೆ ಉಪಕಾರವಿಲ್ಲವೆಂದಿಲ್ಲ. ಅವರು ಸಂಚಾರಕೋಶಗಳಂತೆ ನಮ್ಮ ಮಧ್ಯದಲ್ಲಿ ಇರಬೇಕು. ವಿಕಾಸಗೊಳ್ಳುತ್ತಿರುವ ಹೊಸಗನ್ನಡವನ್ನು ಇನ್ನಷ್ಟು ವ್ಯವಹಾರಕ್ಕೆ ಸುಲಭವಾಗುವಂತೆ ಇಂಗ್ಲಿಷ್ ಮೊದಲಾದ ಪರಭಾಷಾ ಪದಗಳನ್ನು ಧಾತುಗಳಾಗಿ ಮಾರ್ಪಡಿಸಿಕೊಂಡು "ಇಸು" ಪ್ರತ್ಯಯಾದಿಗಳನ್ನು ಉಪಯೋಗಿಸಬಹುದೇ? ಎಂಬದು ವಿಚಾರಿಸತಕ್ಕ ವಿಷಯವಾಗಿದೆ. ಉದಾಹರಣೆಗಾಗಿ 'ಟೆಲಿಗ್ರಾಫ ಮಾಡಿದನು' ಎಂಬದನ್ನು 'ಟೆಲಿಗ್ರಾಫಿಸಿದನು'; ಅಥವಾ 'ಮೋಟರ್ ಡ್ರೈವ್ ಮಾಡಿದನು' ಎಂಬದನ್ನು 'ಮೋಟರಿಸಿದನು' ಎಂಬಂತೆ. ಹೀಗೆಯೇ ಅಲಂಕಾರಗಳನ್ನು ಉಪಯೋಗಿಸುವಾಗಲೂ ಸುಲಭವಾಗುವಂತೆ ಪ್ರಯೋಗಿಸಲು ಸಾಧ್ಯವಿದೆಯೇ ಎಂಬದು ವಿಚಾರಣೀಯವಾಗಿದೆ. ಅಂತೂ ಹೊಸಗನ್ನಡದಲ್ಲಿ ಈಗ ನಡೆಯುತ್ತಿರುವ ಪ್ರಯತ್ನಗಳು ಸ್ತುತ್ಯವಾಗಿರುವುವು. ಮಿತ್ರಮಂಡಳಿಯ ಸದಸ್ಯರಂತಹ ಉತ್ಸಾಹಿ ತರುಣರು ಸಾಹಿತ್ಯ ಕ್ಷೇತ್ರದಲ್ಲಿ ಮುನ್ನಡೆದರೆ ನಮ್ಮ ಜಿಲ್ಲೆಗೆ ಕೀರ್ತಿಬರುವುದೆಂಬುದರಲ್ಲಿ ಸಂದೇಹವಿಲ್ಲ.

(ಮಂಗಳೂರು ಮಿತ್ರಮಂಡಳಿಯ ಸಾಹಿತ್ಯೋತ್ಸವದ ಅಧ್ಯಕ್ಷ ಭಾಷಣದಿಂದ. ರಾಷ್ಟ್ರ ಬಂಧು ೨೬–೦೨–೧೯೩೨)

---

# ಬಾಲ ಸಾಹಿತ್ಯ

ಈ ಸಾಯಂಕಾಲ ನಾನು ಮಾತಾಡಬೇಕಾಗಿ ಕೊಟ್ಟಿರುವ ವಿಷಯವನ್ನು ಈ ಸೀಮೆಯ ನಾಡ ಹಬ್ಬದ ಕಾರ್ಯಕಾರಿ ಮಂಡಳಿಯವರು ನನ್ನ ಹತ್ತಿರ ವಿಚಾರಿಸದೆ ತಮ್ಮ ಜಾಹಿರಾತಿಯಲ್ಲಿ ನನ್ನ ಹೆಸರಿಗೆ ಮೊದಲೇ ಜೋಡಿಸಿಬಿಟ್ಟದ್ದರಿಂದ, ಅದನ್ನು ಕುರಿತು ಏನನ್ನಾದರೂ ನಾನು ಈಗ ಮಾತಾಡಲೇ ಬೇಕಾಗಿದೆ. ಈ ನಾಡ ಹಬ್ಬಕ್ಕೆ ನಾನು ಬರಬೇಕೆಂದು ತಾವು ಅಪೇಕ್ಷಿಸಿದಾಗ, ನಾಡಹಬ್ಬವೆಂದರೆ ದೇವಿಯ ಸ್ತೋತ್ರಗಳನ್ನು ಮಾಡುವುದು, ದೇವಿಯ ಕಥೆಗಳನ್ನು ಕೇಳುವುದು, ದಸರಾ ಹಾಡುಗಳನ್ನು ಹೇಳುವುದು ಇವೇ ಮೊದಲಾದ ಭಕ್ತಿಪರವಾದ ಕಾರ್ಯಗಳಲ್ಲಿ ನಾನು ಭಾಗಿಯಾಗತಕ್ಕದ್ದೆಂಬ ಭಾವನೆ ನನಗೆ ಇತ್ತು. ದಸರಾ ಹಬ್ಬವನ್ನು ನನ್ನ ಚಿಕ್ಕಂದಿನಲ್ಲಿ ಆ ರೀತಿ ಆಚರಿಸುತಿದ್ದೆವು ಹೊರತು ನನ್ನಂಥವನು ಭಾಷಣ ಮಾಡುವ ಅಧಿಕಪ್ರಸಂಗಕ್ಕೆ ಹೋಗುತ್ತಿರಲಿಲ್ಲ. ನನ್ನ ಚಿಕ್ಕಂದಿನ ನಾಡ ಹಬ್ಬದ ಬಾಲಸಾಹಿತ್ಯವೆಂದರೆ ಮಹಿಷಮರ್ದಿನಿಯ ಕಥೆ, ವಿಜಯದಶಮಿಯ ಇತಿಹಾಸ, ದೊಡ್ಡವರ ಮನೆಗಳಿಗೆ ಹೋಗಿ ಗೆಳೆಯರೊಂದಿಗೆ ಹಾಡುವ ಹಾಡುಗಳು—

**ಅಶ್ವಯುಜ ಶುದ್ಧ ನವಮಿಯು ಬರಲಿ ಎಂದು,**
**ಶಾಶ್ವತದಿ ಹರಸಿದೆವು ಬಾಲಕರು ಬಂದು;**
**ಅಳಿಯಸುಡುಗೊರೆಯಲ್ಲ ಕ್ರಮದಿ ಕೇಳುವರೆ**
**ಹಳೆಯ ಸಾಲವಿದಲ್ಲ ಕಾಡಿ ಕೇಳುವರೆ—**

ಇಂಥ ಮಾನವಮಿಯ ಅನೇಕ ಹಾಡುಗಳೇ ಅಂದು ನಮಗೆ ಹೇಳಿಕೊಟ್ಟಿದ್ದ ಬಾಲಸಾಹಿತ್ಯ. ಈ ಬಗೆಯ ಸಾಹಿತ್ಯವು ಜನರಬಾಯಲ್ಲಿ ಆಗ ಕೇಳಿಸುತಿತ್ತು; ಬರಹದಲ್ಲಿ ಮೂಡಿ ಪ್ರಚಾರವಾಗುತ್ತಿರಲಿಲ್ಲ. ಬಾಲಸಾಹಿತ್ಯವೆಂಬ ಹೆಸರು ಇಲ್ಲದಿದ್ದರೂ, ಅದರಲ್ಲಿ ಸಮಾವೇಶವಾಗತಕ್ಕ ಒಂದು ಸಾಹಿತ್ಯ ಭಾಗವು ಆ ಕಾಲದಲ್ಲಿ ವಾಡಿಕೆಯಲ್ಲಿತ್ತು. ಬಾಲಸಾಹಿತ್ಯ, ಈ ಪದವು ಕನ್ನಡದಲ್ಲಿ ತೀರ ಹೊಸದು; ಅದು ಹುಟ್ಟಿ ಇನ್ನೂ ೧೫ ವರ್ಷ ಕಳೆಯಲಿಲ್ಲವಾದರೂ ಕನ್ನಡ ಬಾಲಸಾಹಿತ್ಯವು ಕನ್ನಡ ಭಾಷೆಯ ಬೆಳವಣಿಗೆಯ ಬೆನ್ನುಹಿಡಿದು ಬಹು ಕಾಲದ ಹಿಂದಿನಿಂದ ಬಂದಿದೆ. ಮಕ್ಕಳಿಗೆ ಕಾಗೆ ಗುಬ್ಬಕ್ಕನ ಕಥೆ ಹೇಳದ ಕನ್ನಡ ತಾಯಿ ಇದ್ದಾಳೇ? ಗೋವಿನ ಹಾಡು ಕೇಳದ ಕನ್ನಡ ಮಗು ಉಂಟೇ? ಡೊಂಬತಿಯ ಲಾವಣಿ, ಎಲ್ಲಮ್ಮನ ಹಾಡು, ಚೆನ್ನಯ್ಯನ ಜಗಳ ಮೊದಲಾದ ಕಥೆಗಳಿಂದ ಎಷ್ಟುಮಂದಿ ಕನ್ನಡಿಗರ ಬಾಲ್ಯ ಆಹ್ಲಾದಕರವೆನ್ನಿಸಲಿಲ್ಲ? ಇಂಥ ಅಜ್ಜಿಕಥೆಗಳು, ಪುಡಿ ಕಥೆಗಳು, ಪುಟ್ಟ ಕವನಗಳು, ತುಂಡು ಪದಗಳು, ಮುಖ್ಯವಾಗಿ ೪ ವರ್ಷಕ್ಕೆ ಮೇಲ್ಪಟ್ಟ ಮತ್ತು ೧೪ ವರ್ಷ ವಯಸ್ಸಿನೊಳಗಿನ ಮಕ್ಕಳಿಗೆ ಬೋಧಪ್ರದವಾಗುವಂತೆಯೂ ಮನೋರಂಜಕವಾಗುವಂತೆಯೂ ರಚಿತವಾದ ಸಾಹಿತ್ಯಭಾಗವು ಬಾಲಸಾಹಿತ್ಯವೆಂಬ ಹೆಸರಿನಿಂದ ಇತ್ತಲಾಗಿ ಪ್ರಸಿದ್ಧವಾಗಿದೆ. ಇಂಥ ಸಾಹಿತ್ಯವು ಒಂದು ಕಾಲದಲ್ಲಾದರೂ ಕನ್ನಡಿಗರಲ್ಲಿ ಅತ್ಯಧಿಕವಿದ್ದಿರಬೇಕೆಂದು ಅನುಮಾನಿಸಬಹುದು. ಕನ್ನಡಿಗರ ಸಂಖ್ಯೆ, ಅವರ ನಾಡಿನ ವಿಸ್ತೀರ್ಣ, ಅವರ ಗ್ರಂಥಗಳ ರಾಶಿ, ಭಾಷಾಭಿವೃದ್ಧಿ, ಇವನ್ನು ಯೋಚಿಸುವಾಗ ಇದುವರೆಗೆ ಸಂಗ್ರಹಿಸಲ್ಪಟ್ಟು ಮುದ್ರಿತವಾದ ಈ ಬಗೆಯ ಸಾಹಿತ್ಯಾಂಶವು ಬಹು ಕಡಮೆಯೆಂದೇ ತಿಳಿಯಬೇಕು.

ಕನ್ನಡ ಬಾಲಸಾಹಿತ್ಯದ ಸಂಗ್ರಹಣ ಕಾರ್ಯದಲ್ಲಿಯೂ ನಿರ್ಮಾಣದಲ್ಲಿಯೂ ನಾನು ಮೊದಲಿಗನೆಂಬದಾಗಿ ನನ್ನನ್ನು ಉದ್ದೇಶಿಸಿ ಕಾರ್ಯದರ್ಶಿಯವರು ಕೊಂಡಾಡಿದರೂ, ಆ ಹೊಗಳಿಕೆಗೆ ನಾನು ಅರ್ಹನಲ್ಲ. ಈ ಬಗೆಯ ಸಾಹಿತ್ಯವು ಚಿಕ್ಕವರ ಶಿಕ್ಷಣದಲ್ಲಿ ಬಹಳ ಸಹಕಾರಿಯೆಂಬದನ್ನು ಮನಗಂಡು, ಅದನ್ನು ಪ್ರಚಾರಕ್ಕೆ ತರಲು ಪ್ರಯತ್ನಮಾಡಿದವರಲ್ಲಿ ನಾನೊಬ್ಬನೆಂದು ಹೇಳಿಕೊಳ್ಳುವಷ್ಟು ಹೆಮ್ಮೆ ನನಗಿದೆ. ಇಂಗ್ಲಿಷ್ ಮಕ್ಕಳ ಶಿಕ್ಷಣಕ್ರಮದಲ್ಲಿ ಇಂಥ ದಂತಕಥೆಗಳಿಗೂ ಬಾಲ ಗೀತೆಗಳಿಗೂ ಬಹಳ ಮಹತ್ವವಿದೆ. ಶೈಶವದ ವಿದ್ಯಾಭ್ಯಾಸಕ್ಕೆ ಇದೇ ಸುಗಮವಾದ ದಾರಿಯೆಂದು ಅವರ ಅಭಿಪ್ರಾಯವಿದೆ. ಪ್ರಾಚೀನ ಹಿಂದು ಗುರುಕುಲಗಳಲ್ಲಿಯೂ ಇಂಥ ಕಟ್ಟುಕಥೆಗಳಿಗೆ ಬಹಳ ಪ್ರಾಮುಖ್ಯತೆಯನ್ನು ಕೊಟ್ಟಿದ್ದರು. ಏಕೆಂದರೆ ವಿಷ್ಣುಶರ್ಮನು ಕೆಲಸಕ್ಕೆಬಾರದ ಅರಸು ಮಕ್ಕಳನ್ನು ತಿದ್ದುವುದಕ್ಕಾಗಿ ಪಂಚತಂತ್ರವನ್ನು ರಚಿಸಿದನೆಂದು ಹೇಳುವರಷ್ಟೆ. ಮಕ್ಕಳ ಬೋಧನೆಯ ಕಾರ್ಯದಲ್ಲಿ ಕಥೆಯು ಸುಗಮವಾದ ಮಾರ್ಗವೆಂಬ ತತ್ವವು ಆ ಕಾಲದವರಿಗೆ ಚೆನ್ನಾಗಿ ಗೊತ್ತಿತ್ತು. ನಾನು ಈ ಸಾಯಂಕಾಲ ಬಾಲಸಾಹಿತ್ಯವನ್ನು ಕುರಿತು ಮುಂದೆ ಹೇಳುವಾಗ, ಅದರ ಒಂದು ಅಂಗವಾದ ಕಥೆಗಳನ್ನು, ೧೦ ವರ್ಷ ವಯಸ್ಸು ದಾಟದ ಕನ್ನಡ ಮಕ್ಕಳಿಗೆ ರುಚಿಸತಕ್ಕ ಕಥೆಗಳನ್ನು ಕುರಿತು ಮಾತ್ರ ಹೇಳುವನಿದ್ದೇನೆ; ಬಾಲಸಾಹಿತ್ಯದ ಇತರ ಅಂಶಗಳು ಈ ದಿನ ಈ ಭಾಷಣದ ಹೊರಗಿವೆ ಎಂದು ತಿಳಿಯುವುದು.

ಪ್ರಾಥಮಿಕ ಶಿಕ್ಷಣದಲ್ಲಿ ಮುಖ್ಯಾಂಗವಾಗಿರತಕ್ಕ ಕಥೆಗಳಿಗೆ ಕೆಲವು ಸಾಮಾನ್ಯ ಲಕ್ಷಣಗಳಿವೆ. ಆ ಲಕ್ಷಣಗಳಿದ್ದುದರಿಂದಲೇ ಆ ಕಥೆಗಳೂ ಗೀತೆಗಳೂ ಇನ್ನೂ ಉಳಿದಿವೆ. ಮಕ್ಕಳಿಗೆ ಅವು ಮೆಚ್ಚುಗೆಯಾಗುವುದಕ್ಕೂ ಅವುಗಳ ಲಕ್ಷಣಗಳು ಒಂದೊ ಹಲವೊ ಕಾರಣವು. ಈ ಲಕ್ಷಣಗಳು ಕಥಾ ವಿಷ

ಯಕ್ಕೆ ಸಂಬಂಧಿಸಿದುವು ಮತ್ತು ಕಥಾ ರೀತಿಗೆ ಸಂಬಂಧಿಸಿದುವು—ಹೀಗೆ ಎರಡು ಬಗೆ. ಕಥಾ ವಿಷಯದ ಲಕ್ಷಣಗಳನ್ನು ಮಿಸ್ ಬ್ರ್ಯಾಯೆಂಟ್ ಎಂಬಾಕೆ 'ಕಥೆ ಹೇಳುವುದು' ಎಂಬ ಹೆಸರಿನ ತನ್ನ ಪುಸ್ತಕದ ಉಪೋದ್ಘಾತದಲ್ಲಿ ಚೆನ್ನಾಗಿ ವಿಸ್ತರಿಸಿದ್ದಾಳೆ.

೧. ಕಥಾವಿಷಯವು ಮಕ್ಕಳ ಪ್ರಪಂಚಕ್ಕೆ ಒಳಪಟ್ಟಿರಬೇಕು. ದೋಸೆ ಹೊಯ್ಯುವುದು, ಗಾಡಿ ಹೊಡೆಯುವುದು, ತೇರು ಎಳೆಯುವುದು, ಮೊದಲಾದ್ದು ಮಕ್ಕಳ ಇಂದ್ರಿಯಗಳಿಗೆ ಗ್ರಹಣವಾಗುವ ವಿಷಯಗಳು; ಆದರೆ ರಾಜ್ಯಭಾರ ಮಾಡುವುದು, ಸಾಲ ಮಾಡಿ ದಿವಾಳಿಯಾಗುವುದು, ಇವು ಅವರ ಇಂದ್ರಿಯಗಳಿಗೆ ಮೀರಿದ ವಿಷಯಗಳು. ಭೀಷ್ಮಜನ್ಮ ಕಥೆ ಮಕ್ಕಳ ಪ್ರಪಂಚಕ್ಕೆ ಒಳಪಟ್ಟದ್ದು, ಭೀಷ್ಮ ಪ್ರತಿಜ್ಞೆ ಅವರ ಬುದ್ಧಿಗೆ ಕೊಂಚ ಮೀರಿದ್ದು. ಮಯೂರಧ್ವಜನ ದಾನದ ಕಥೆಗಿಂತ ಆತನ ಯಜ್ಞದ ಸಂಗತಿ ಮಕ್ಕಳ ಮನಸ್ಸಿಗೆ ಸೇರುವಂಥಾದ್ದು. ಇದರಂತೆಯೇ ಲವಕುಶರ ಬಾಲ್ಯವರ್ಣನೆಯಷ್ಟು ರಾಮನ ಸೀತಾಪರಿತ್ಯಾಗದ ಕಥೆಯೂ ಚಿಕ್ಕಮಲ್ಲಮ್ಮನ ಆತ್ಮಹತ್ಯದ ಕಥೆಯೂ ಚಿಕ್ಕ ಮಕ್ಕಳಿಗೆ ರುಚಿಸವು. ಸಣ್ಣ ಮಕ್ಕಳ ಸಣ್ಣ ಪ್ರಪಂಚವು ಡಂ ಡಂ ಕೋತಿ, ಮೆಣಸಿನ ಕಾಳಪ್ಪ, ಕಾಗೆ ಗುಬ್ಬಕ್ಕ, ಸಕಲಾತಿ ಬೀಜ ಮೊದಲಾದ ಕಥೆಗಳಲ್ಲಿ ಚಿತ್ರಿಸಲ್ಪಟ್ಟಿರುವುದರಿಂದ ಅವುಗಳನ್ನು ಕೇಳಿ ಕೇಳಿ ಬೇಸರಿಕೆಗೊಳ್ಳದ ಕನ್ನಡ ಮಗುವಿಲ್ಲ.

೨. ಮಕ್ಕಳ ಕಥೆಗಳಲ್ಲಿ ಒಂದಿಷ್ಟು ಅದ್ಭುತ ರಸವಿರಬೇಕು. ಮಕ್ಕಳಲ್ಲಿ ಕಲ್ಪನಾಶಕ್ತಿ ಹೆಚ್ಚು; ಅದನ್ನು ಹತೋಟಿಯಲ್ಲಿ ಇಡುವಷ್ಟು ಬುದ್ಧಿಯು ಬೆಳೆದಿರುವುದಿಲ್ಲ. ಕಥೆಗಳಲ್ಲಿ ಅದ್ಭುತವಿದ್ದರೆ, ಅವರ ಕಲ್ಪನಾಶಕ್ತಿಯ ಓಲಾಟಕ್ಕೆ ಅವಕಾಶವಾಗುತ್ತದೆ. ಕಾಲು ತಾಗಿದರೆ ಬಾನಿಗೇರುವ ಜಮಖಾನ, ಕಿವಿ ತಿರುವಿದರೆ ನೀರೊಳಗೆ ಹೋಗುವ ಮಾಟದ ಕುದುರೆ, ದೀಪ ಉಜ್ಜಿದರೆ ಕಣ್ಣುಮುಂದೆ ಬರುವ ಭೂತ, ಮುಂತಾದ ಕಥೆಗಳು ಅವುಗಳೊಳಗಿನ ಅದ್ಭುತ ರಸದಿಂದ ಮಕ್ಕಳಿಗೆ ಪ್ರಿಯವಾಗುತ್ತದೆ. ಕೃಷ್ಣನ ಗೋವರ್ಧನೋದ್ಧರಣ, ಏಸುವಿನ ಪಂಚಸಹಸ್ರಭೋಜನ, ಬಸವೇಶ್ವರನ ಪವಾಡ ಕೃತ್ಯಗಳು ಭಕ್ತಿಪರರಾದವರು ನಂಬುವಂತೆ ಮಕ್ಕಳು ಕಥೆಗಳಲ್ಲಿ ಅಘಟಿತಘಟನಾ ಭಾಗವಿದ್ದರೆ ಮೆಚ್ಚುತ್ತವೆ.

೩. ಮಕ್ಕಳ ಕಥೆಗಳಲ್ಲಿ ಧರ್ಮಬೋಧನೆಯು ಅಂತರಂಗದಲ್ಲಿ ಅಡಗಿದ್ದಿರಬೇಕು. ಧರ್ಮಬೋಧನೆಗಾಗಿಯೇ ಕಥೆಯನ್ನು ಕಟ್ಟಿದಂತೆ ಇರಬಾರದು. ಇಸೊಪನ ಕಥೆಗಳ ಹಾಗೆ ಬರಿಯ ಬುದ್ಧಿವಾದಗಳನ್ನು ಕಲಿಸುವುದಕ್ಕಾಗಿ ಇರುವ ಕಟ್ಟುಕಥೆಗಳು ಮಕ್ಕಳ ಮನಸ್ಸನ್ನು ಅಷ್ಟು ಹೆಚ್ಚಾಗಿ ರಂಜಿಸುವುದಿಲ್ಲ. ಇಸೊಪನ ನರಿಯ ಕಥೆಗಳಿಂದ ಊಹಿಸಲಾಗುವ ಬುದ್ಧಿವಾದವು ಚಿಕ್ಕ ಮಕ್ಕಳಿಗೆ ತಕ್ಕದ್ದಲ್ಲ. ಕುಹಕೋಪಾಯದಿಂದ ಕಾರ್ಯಸಾಧನೆ, ವಂಚನೆಯಿಂದ ಇಷ್ಟಸಿದ್ಧಿ, ಸತ್ಯಾಚರಣೆಯಿಂದ ಅನಿಷ್ಟಪ್ರಾಪ್ತಿ ಮೊದಲಾದ ಭಾವಗಳು ಕಥಾಶ್ರವಣದಿಂದ ಮಕ್ಕಳ ಮನಸ್ಸಿನಲ್ಲಿ ಮೂಡಬಾರದು. ಕಥೆಗಳನ್ನು ಹೇಳಿ ಇಲ್ಲವೆ ಬರೆದು, ಅವುಗಳ ಅಂತ್ಯದಲ್ಲಿ ಬುದ್ಧಿವಾದವನ್ನು ಸ್ಪಷ್ಟವಾಗಿ ವ್ಯಕ್ತಮಾಡುವುದು ಅನುಚಿತವೆಂದು ನನ್ನ ಅಭಿಪ್ರಾಯ. ಧೈರ್ಯ, ಪರೋಪಕಾರ, ಸ್ವಾವಲಂಬನ, ದೀರ್ಘಪ್ರಯತ್ನ, ಸೌಹಾರ್ದ್ರ ಮೊದಲಾದ ಸದ್ಗುಣಗಳನ್ನು ಕಾರ್ಯರೂಪವಾಗಿ ತೋರಿಸತಕ್ಕ ಕಥೆಗಳು ಮಕ್ಕಳಿಗೆ ತಕ್ಕವು.

೪. ಮಕ್ಕಳ ಕಥೆಗಳಲ್ಲಿ ಪ್ರಯೋಗಿಸತಕ್ಕ ಭಾಷೆಯು ಸುಲಭವಿರತಕ್ಕದ್ದು; ಶಬ್ದಗಳು ಮನೆಮಾತುಗಳಿರಬೇಕು. ವಾಕ್ಯಗಳು ಉದ್ದವಿರದೆ ಚಿಕ್ಕವಿರುವುದು ಅಗತ್ಯ. ಸುಲಭಭಾಷೆ ಎಂದರೆ ಮಕ್ಕಳು ಮನಸ್ಸಿನಿಂದ ಚಿತ್ರಿಸತಕ್ಕ ಭಾಷೆ. 'ಸೀತೆ ದುಃಖಿಸಿದಳು' ಹೀಗೆ ಹೇಳುವುದಕ್ಕಿಂತ 'ಆಕೆ ಅಂಗೈಯ ಮೇಲೆ ಗಲ್ಲವನ್ನು ಇಟ್ಟು, ಮೂಗಿನಿಂದ ನಿಟ್ಟುಸಿರು ಬಿಡುತ್ತಾ, ಕಣ್ಣೀರು ತುಂಬಿ,—ದುಃಖಿಸಿದಳು' ಎಂದು ವಿಸ್ತರಿಸಿದರೆ ದುಃಖದ ಚಿತ್ರವು ಮಕ್ಕಳ ಮನಸ್ಸಿನ ಮೇಲೆ ಹೊಳೆಯುವುದು ಶಕ್ಯವಿದೆ. 'ಅರ್ಜುನನು ಕೋಪಿಸಿದನು' ಎಂದು ನಿರ್ಗುಣವಾದ ಮಾತುಗಳಿಂದ ಹೇಳುವುದಕ್ಕಿಂತ 'ಆತನು ಅವುಡುಗಳನ್ನು ಕಚ್ಚಿ, ಹಲ್ಲುಗಳನ್ನು ಕಡಿದು, ಕಣ್ಣುಗಳನ್ನು ಕೆರಳಿಸಿ, ಬುಸುಗುಟ್ಟಿ — ಕೋಪಿಸಿದನು' ಎಂದು ವರ್ಣಿಸಿದರೆ ಕೋಪವನ್ನು ಮೂರ್ತಿಮಂತವಾಗಿ ಮಕ್ಕಳಿಗೆ ಚಿತ್ರಿಸಿ ತೋರಿದಂತಾಗುವುದು. ಒಳಗಿನ ಮನೋವ್ಯಾಪಾರಗಳಿಗಿಂತ ಅವುಗಳನ್ನು ವ್ಯಕ್ತಗೊಳಿಸುವ ಅಂಗಮುದ್ರೆಗಳನ್ನೂ ಬಾಹ್ಯಚೇಷ್ಟೆಗಳನ್ನೂ ಹೇಳಿದರೆ, ಆ ಮಕ್ಕಳಿಗೆ ಅವನ್ನು ಮುಂದೆ ಅಭಿನಯಿಸಿ ತೋರಿಸುವುದಕ್ಕೂ ಅನುಕೂಲವಾಗುತ್ತದೆ. ಸ್ವಭಾವೋಕ್ತಿಯಿಂದ ಕಥೆಗಳನ್ನು ವಿಸ್ತರಿಸುವವನಿಗೆ ಕಷ್ಟಶಬ್ದಗಳನ್ನು ಪ್ರಯೋಗಿಸುವ ಅವಶ್ಯಕತೆಯೇ ಇರುವುದಿಲ್ಲ. ಮನೆಯ ಮಾತುಗಳನ್ನು ಬಿಟ್ಟು ಕಥೆಗಾರನು ಸಂಸ್ಕೃತ ಸಮಾಸಗಳ ಪ್ರಯೋಗಕ್ಕೆ ಕೈಹಾಕಿದ ಕೂಡಲೇ, ಮಕ್ಕಳಿಗೆ ಆ ಭಾಷೆಯು ಅಸ್ವಾಭಾವಿಕವಾಗಿ ಅಸಹ್ಯವಾಗುವುದೆಂದು ತಿಳಿಯಬೇಕು.

೫. ಕಥೆಗಳಲ್ಲಿ ಹೇಳಿಕೆಗಿಂತ ಸಂಭಾಷಣೆ ಅಧಿಕವಿರಬೇಕು. ಸಂಭಾಷಣೆ ಇದ್ದರೆ ಮಕ್ಕಳು ಕಥೆಯನ್ನು ಕಣ್ಣಾರೆ ಕಂಡಂತೆ ಅನುಭವಿಸುವರು; ಕಥೆಯಲ್ಲಿಯ ಪಾತ್ರಗಳು ಜೀವಕಳೆ ತುಂಬಿ ಮಕ್ಕಳ ಕಣ್ಣಮುಂದೆ ಕುಣಿಯುವುವು. ಮಾತುಗಳನ್ನು, ಪರೋಕ್ಷವಾಗಿದ್ದರೂ ಪ್ರತ್ಯಕ್ಷವಾಗಿ ಆಡಿ ತೋರಿಸಿದರೆ ಮಕ್ಕಳಿಗೆ ಗ್ರಾಹ್ಯವಾಗುವುದು ಸ್ವಲ್ಪ ಸುಲಭ. ಕಥೆ

ಗಳಲ್ಲಿಯ ಒಂದೆರಡು ಸನ್ನಿವೇಶಗಳನ್ನಾದರೂ ಮಕ್ಕಳು ಕಥೆಗಾರನ ಮಾತುಗಳನ್ನೇ ಇಟ್ಟು ಪ್ರದರ್ಶಿಸುವಷ್ಟು, ಆತನ ಕಥೆಯಲ್ಲಿ ಸಂಭಾಷಣೆ ಇರತಕ್ಕದ್ದು.

ಬಾಲಕರಿಗೆ ಉಪಯೋಗವಾಗತಕ್ಕ ಕಥೆಗಳಲ್ಲಿ ಪುನರುಕ್ತಿಯು ಒಂದು ಲಕ್ಷಣವಾಗಿದೆ. ದೊಡ್ಡವರಿಗಾಗಿ ಬರೆದ ಕಥೆಗಳಲ್ಲಿ ಪುನರುಕ್ತಿಯು ಒಂದು ದೋಷವಾಗಿ ಎಣಿಸಲ್ಪಡುತ್ತದೆ. 'ರಾಮನು ವನವಾಸಕ್ಕೆ ತೆರಳಬೇಕು' ಎಂಬದಾಗಿ ವರವನ್ನು ಕೇಳು ಎಂದು ದಾಸಿಯು ಕೈಕೆಗೆ ಸೂಚಿಸಿದಳು. ಕೈಕೆ ದಶರಥನೊಡನೆ 'ರಾಮನು ವನವಾಸಕ್ಕೆ ತೆರಳಬೇಕು' ಎಂದು ಕೇಳಿಕೊಂಡಳು. ದಶರಥನು ರಾಮನಿಗೆ 'ರಾಮಾ, ನೀನು ವನವಾಸಕ್ಕೆ ತೆರಳಬೇಕು' ಎಂದು ಹೇಳಿದನು. ಇಂಥ ಪುನರಕ್ತಿಯು ಬಾಲಕರಿಗೆ ಅವಶ್ಯಕ; ದೊಡ್ಡವರಿಗೆ ಬೇಸರಿಕೆ. ಭಾಷೆಯನ್ನು ಕಲಿಯತಕ್ಕ ಮಕ್ಕಳಿಗೆ ಈ ಪುನರುಕ್ತಿಯಿಂದ ಬಹಳ ಮಟ್ಟಿಗೆ ಸಹಾಯವಾಗುತ್ತದೆ. ಹೇಳಿದ್ದನ್ನೇ ಮತ್ತೂ ಮತ್ತೂ ಹೇಳುವುದು ಹಳಬರದು ಹೇಗೋ, ಹಾಗೆಯೇ ಹಳೆಯ ಕಥೆಗಳ ಲಕ್ಷಣವಾಗಿದೆ.

ನಾನು ಮೊದಲೇ ಹೇಳಿದಂತೆ ಬಾಲಸಾಹಿತ್ಯದ ಒಂದು ಅಂಗವಾದ ಕಥೆಗಳಲ್ಲಿ ಚಿಕ್ಕವರಿಗೆ ಉಪಯೋಗವಾಗತಕ್ಕವುಗಳನ್ನು ಕುರಿತು ಇದುವರೆಗೆ ಮಾತಾಡಿದೆನು. ಆ ಕಥೆಗಳಲ್ಲಿ ಅಲ್ಲಲ್ಲಿ ವಿನೋದ, ಹಾಸ್ಯ, ಜಗಳ, ಕಾರ್ಯ, ಚಲನ, ಇವು ಇರತಕ್ಕದ್ದೆಂದು ಹೇಳುವರು. ಯಾವುದೊಂದು ಹಳೆಯ ಕಥೆಯನ್ನು ಕಂಡೊಡನೆ, ಅದನ್ನು ಪರೀಕ್ಷಿಸಿ, ಅವಶ್ಯವಿದ್ದರೆ ಕೆತ್ತಿ, ಅವರಲ್ಲಿರುವ ಅಶ್ಲೀಲ ಅಸಹ್ಯತೆಗಳನ್ನು ತೆಗೆದು ಹಾಕಿ, ಮಕ್ಕಳಿಗೆ ಒದಗಿಸಿಕೊಡಬೇಕು. ಮಕ್ಕಳಿಗಾಗಿ ಹೊಸ ಕಥೆಗಳನ್ನು ಬರೆಯುವವರು ಇದುವರೆಗೆ ನಾನು ಹೇಳಿದ್ದ ಲಕ್ಷಣಗಳನ್ನು ಲಕ್ಷಿಸಿ ಕಥೆಗಳನ್ನು ಬರೆದಲ್ಲಿ, ಅವು ಮಕ್ಕಳಿಗೆ ಪ್ರಿಯವಾಗದೆ ಇರಲಾರವು.

ಕಥೆಗಳನ್ನು ಅಚ್ಚು ಹಾಕಿಸುವವರು ಅವನ್ನು ಸಚಿತ್ರವಾಗಿ ಮಾಡಿ, ದೊಡ್ಡ ಅಕ್ಷರಗಳಲ್ಲಿ ಮುದ್ರಿಸಿ, ಅಂದವಾಗಿ ಅಳವಡಿಸಿ, ಅಗ್ಗವಾಗಿ ಮಾರುವುದು. ಮಕ್ಕಳಿಗಾಗಿಯೂ ಕನ್ನಡಕ್ಕಾಗಿಯೂ ಕಥೆಗಾರರು ಈಪರಿ ಮಾಡುವ ಸೇವೆಯು ಶ್ರೀ ಭುವನೇಶ್ವರಿಗೆ ಪ್ರೀತ್ಯರ್ಥವಾಗುವುದೆಂದು ನನಗೆ ನಂಬುಗೆ ಇದೆ.

(ಹೈದರಾಬಾದಿನ ನಾಡಹಬ್ಬದ ಭಾಷಣದಿಂದ-
ಕಂಠೀರವ ೨೯ - ೧೦ - ೪೫.)

# ಕನ್ನಡದಲ್ಲಿ ಸುಧಾರಣೆಗಳು

( ರಾಯಚೂರಿನಲ್ಲಿ ನಡೆದ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ. ೨೮-೧೨-೧೯೪೮ )

ಕಳೆದರ್೧೯ ವರ್ಷಗಳಿಂದ ವರ್ಷವರ್ಷ ಕನ್ನಡ ನಾಡಿನ ಪ್ರಖ್ಯಾತ ರಾಜಮಂತ್ರಪ್ರವೀಣರ ಕಾರ್ಯದಕ್ಷತೆಯಿಂದ, ಮಹಾಮಹಾ ವಿದ್ವಾಂಸರ ಭಾಷಣಗಳಿಂದ, ಉತ್ತಮ ಗ್ರಂಥಕಾರರ ಅಧ್ಯಕ್ಷಾರ್ಹತೆಯಿಂದ, ಇದುವರೆಗೆ ಬೆಳಗಿದ ಈ ಮಹಾಸಭೆಯ ಅಗ್ರಸ್ಥಾನವು ಬಹಳ ಜವಾಬ್ದಾರಿಯದು, ನನ್ನ ಶಕ್ತಿಗೆ ಮೀರಿದುದು, ನನ್ನಿಂದ ನಿರ್ವಹಿಸಲಿಕ್ಕೆ ಬಾರದುದು ಎಂಬ ಕಾರಣದಿಂದ ನಾನದನ್ನು ವಹಿಸಿಕೊಳ್ಳಲು ಒಪ್ಪದಿದ್ದ ನನ್ನ ಹಿಂದಿನ ಒಂದೆರಡು ಸಲದ ಅಧೈರ್ಯಕ್ಕಾಗಿ ತಮ್ಮ ಕ್ಷಮೆ ಬೇಡಿ, ತರುವಾಯ ನನ್ನನ್ನು ಇಂದಿನ ಅಧಿವೇಶನದ ಅಧ್ಯಕ್ಷಪದವಿಗೆ ಏರಿಸಿಟ್ಟ ಗೌರವಕ್ಕೆ ಸ್ವಾಗತಮಂಡಳಿಯವರಿಗೆ ನನ್ನ ಕೃತಜ್ಞತೆಯನ್ನು ಅರ್ಪಿಸಿ, ಸದಸ್ಯರಿಗೆ ತಲೆಬಾಗಿ, ಎಲ್ಲರಿಗೂ ಕೈಮುಗಿದು, ಈ ಪದವಿಯನ್ನು ಅಂಗೀಕರಿಸುತ್ತೇನೆ. ಈ ಸ್ವೀಕಾರದಿಂದ ಹಿಂದಿನ ಅಧೈರ್ಯವೆಲ್ಲಾ ನಾಲ್ಕಾರು ವರ್ಷಗಳ ಅವಧಿಯಲ್ಲಿ ವಾಸಿಯಾಗಿ, ನನ್ನಲ್ಲೀಗ ಅರ್ಹತೆ ತುಂಬಿದೆಯೆಂದಾಗಲಿ, ಈ ವರ್ಷದ ಸಭಾಕಾರ್ಯಗಳು ಜವಾಬ್ದಾರಿಯಲ್ಲಿ, ಭಾರದಲ್ಲಿ, ಕಡಮೆಯೆಂದಾಗಲಿ ನನ್ನ ತಿಳುವಳಿಕೆಯಲ್ಲ. ಈ ಕಾರ್ಯಕ್ಕೆ ನಾನು ಅಸಮರ್ಥನು; ಈಗಲೂ ಅಸಮರ್ಥನು. ಆದರೆ ಅರ್ಹತೆ ಇಲ್ಲದ್ದಲ್ಲಿ ಅರ್ಹತೆಯನ್ನು ಕಲ್ಪಿಸುವುದು ತಮಗೊಂದು ದೊಡ್ಡದಲ್ಲ. ಸಕಲ ಕಾರ್ಯಗಳನ್ನು ಸಾಂಗವಾಗಿ ನೆರವೇರಿಸಿಕೊಳ್ಳುವುದು ಉದಾರಮನಸ್ಕರಾದ ತಮ್ಮ ಮೇಲೆ ಹೊಂದಿಕೊಂಡಿದೆ. ಇಂದಿನ ಪೂಜೆಯಲ್ಲಿ ಅಧ್ಯಕ್ಷನನ್ನು ಗಟ್ಟದ ಕೆಳಗಿನ ತೆಂಕು ನಾಡಿನ ತೆಂಗಿನ ಕಾಯಿ ಎಂದು ಭಾವಿಸಿರಿ. ಅವನಲ್ಲಿ ಪ್ರಾಣ ಪ್ರತಿಷ್ಠೆಯಾಗುವುದಿದ್ದರೆ ಅದು ತಮ್ಮ ವಿಶ್ವಾಸದಿಂದ, ಶ್ರದ್ಧೆಯಿಂದ, ತಮ್ಮ ಮಂತ್ರಶಕ್ತಿಯಿಂದ; ಆತನ ಅರ್ಹತೆಯಿಂದಲ್ಲ.

ನಾನು ಕನ್ನಡ ಲೇಖಕನೂ ಅಲ್ಲ, ಕನ್ನಡಕ್ಕಾಗಿ ಮೈಮುರಿದು ದುಡಿದವನೂ ಅಲ್ಲ. ನನ್ನ ಯೋಗ್ಯತೆ ಇಷ್ಟೆ, ನಾನು ಕರ್ಣಾಟಕ ಪ್ರಾಂತದವನು; ಕರ್ಣಾಟಕ ಸೀಮೆಯ ಸೆರಗಿನಲ್ಲಿ ನಿರಾಲಂಬವಾಗಿದ್ದರೂ ನಿರ್ಬಂಧವಿಲ್ಲದೆ ನಿಂತಿರುವ ಕನ್ನಡ ಜಿಲ್ಲೆಯವನು. ಜಿಲ್ಲೆಯ ಹೆಸರು ಕನ್ನಡವಿದ್ದರೂ ಹೆಚ್ಚಿನ ಜನರ ಮನೆಯ ಮಾತು ಕನ್ನಡವಲ್ಲ, ತುಳು ಕೊಂಕಣಿಗಳು. ಈ ಅರೆಭಾಷೆಗಳು ಬರೆಹಗಳಲ್ಲಿ ವ್ಯಕ್ತವಾಗದೆ, ಗ್ರಂಥಗಳಲ್ಲಿ ಸ್ಥಿರಪಡದೆ, ಇನ್ನೂ ಬಾಯಿಮಾತುಗಳಾಗಿ ಉಳಿದಿವೆ. ಕೊಂಕಣಿ ಮಾತಿನ ನಾಲಗೆಯಿಂದ ಅಂದಚೆಂದದ ಕನ್ನಡ ನುಡಿಗಳು ಸಹಜವಾಗಿ ಬರಲಾರವು. 'ಕನ್ನಡಂ ಕತ್ತುರಿಯಲ್ತೆ' 'ಕನ್ನಡ ಭಾಷೆ ಕನ್ನಡಿಗನ ಭಾಗ್ಯ' 'ಸಿರಿಗನ್ನಡಂ ಗೆಲ್ಗೆ' ಎಂಬೀ ಹೆಮ್ಮಾತುಗಳು ಹುಟ್ಟುಕನ್ನಡಿಗನಷ್ಟು ನನ್ನ ಹೃದಯವನ್ನು ಸ್ಫುರಿಸಲಾರವು. ಆದರೆ ಅವುಗಳ ನಿಜಾರ್ಥವು ಕನ್ನಡಿಗನಲ್ಲದ ನನ್ನ ಮನಸ್ಸಿನ ಆಳಕ್ಕೆ ಇಳಿಯುವಷ್ಟು ಜಾತಿ ಕನ್ನಡಿಗನ ಬುದ್ಧಿಗೆ ಸ್ಪಷ್ಟವಾಗದು. ಕಣ್ಣಿನ ಅರ್ಥ ಕಣ್ಣಿದ್ದವನಿಗಿಂತ ಇಲ್ಲದವನಿಗೆ ಚೆನ್ನಾಗಿ ತಿಳಿಯುತ್ತದೆ.

ಮಹನೀಯರೇ, ಒಂದು ಜನಾಂಗವು ಬದುಕಿಕೊಂಡಿರಬೇಕಾದರೆ ಅದಕ್ಕೊಂದು ಭಾಷೆ ಅಗತ್ಯ. ಅದು ಮನುಷ್ಯನ ನಿತ್ಯದ ಆಹಾರ ನಿದ್ರಾದಿ ಸಾಮಾನ್ಯ ವ್ಯವಹಾರಗಳಿಗೆ ಉಪಯುಕ್ತವಾಗುವಷ್ಟೇ ಇದ್ದರೆ ಸಾಲದು. ಆ ಭಾಷೆಗೊಂದು ಬರೆಹ, ಬರೆಹದಲ್ಲುಳ್ಳ ಉತ್ತಮ ಗ್ರಂಥರಾಶಿ, ಗ್ರಂಥಗಳನ್ನು ಅನುಭವಿಸುತ್ತಿರುವ ಜನರು ಹಾಗಿದ್ದರೇ ಆ ಜನಾಂಗವು ತನ್ನ ಬಾಳನ್ನು ಕಾಪಾಡಿಕೊಂಡೀತು; ಹಾಗಿಲ್ಲದಿದ್ದರೆ ಜನರೊಳಗೆ ಪರಸ್ಪರ ವ್ಯವಹಾರಕ್ಕೆ ತೊಡಕಾಗಿ, ವಿಚಾರ ವಿನಿಮಯವು ನಿಂತುಹೋಗಿ, ಭಾವಗಳು ಅರಳದೆ, ಆ ಜನಾಂಗವು ಬರಬರುತ್ತ ದುರ್ದಶೆಗೆ ತಗಲಿ, ಸಂಸ್ಕಾರಗೆಟ್ಟು ಬದುಕಿ ಬದುಕದಂತಾಗಿದ್ದೀತು. ಒಂದು ಭಾಷೆ ಮೇಲ್ಮೊಗವಾದರೆ ಆ ಭಾಷೆಯ ಜನಗಳ ಬೆಳವಣಿಗೆ ಮುಂದುವರಿಯುತ್ತದೆಂದೂ, ಇಳಿಮೊಗವಾದರೆ ಜನಾಂಗವು ಕ್ಷಯಿಸುತ್ತದೆಂದೂ ಬಹುಮಟ್ಟಿಗೆ ಹೇಳಬಹುದು.

ಕನ್ನಡವು ಸುಮಾರು ಒಂದೂಕಾಲು ಕೋಟಿ ಜನರು ಆಡುವ ಮುದ್ದುಮಾತಿನ ಚೆಲುವ ಭಾಷೆ. ಇಷ್ಟು ಪ್ರಾಚೀನವಾದ, ಪಕ್ವವಾದ ಪ್ರೌಢಭಾಷೆಯು ಹಿಂದುಸ್ಥಾನದಲ್ಲಿ ಮತ್ತೊಂದು ಇದ್ದೀತೇ ಎಂಬುದೊಂದು ಶಂಕೆ ನನ್ನನ್ನು ಇನ್ನು ಬಿಟ್ಟಿಲ್ಲ. ಇಂಥ ಒಳ್ನುಡಿಯ ಹಿರಿಯ ಭಾಷೆ ಕನ್ನಡಿಗನಿಗೆ ದೊರಕಿದುದು ಆತನ ಪುಣ್ಯವೆನ್ನುವುದರಲ್ಲಿ ಸಂದೇಹವೇನು? ಕ್ರಿಸ್ತ ಶಕದ ಪ್ರಾರಂಭದ ಮುಂಚೆಯೇ ಕರ್ನಾಡಿನ ಕಟಿಗಳಲ್ಲಿಯೂ ನಾಡುಗಳಲ್ಲಿಯೂ ಅದುರು ಅದರುಗಳಾಗಿ ಅಲ್ಲಲ್ಲಿ ಚೆಲ್ಲಿ ಚೆದರಿದಂತಿದ್ದ—ತರುವಾಯ ಪಾಡ್ತೊನೆಯುವರೂ ಪಾಡುಗಾರರೂ ಚತ್ತಾಣ ಮುಂತಾದ ಪಾತ್ರೆಗಳಲ್ಲಿ ಹೊಳಿಟ್ಟಿದ್ದ—೯ನೆಯ ಶತಮಾನದಿಂದ ಉಭಯಭಾಷಾಕವಿಗಳಾದ ಜೈನರು ತಮ್ಮ ರತ್ನತ್ರಯಗಳನ್ನು ಖಚಿತಗೊಳಿಸತಕ್ಕ ವಿಷಮಗತಿಯ ವೃತ್ತಗಳಿಗೆ ಅಳವಡುವಂತೆ ಸಂಸ್ಕೃತ ಮಿಶ್ರಣದಿಂದ ಪುಟ

ಕ್ಕಿಟ್ಟು, ಸೂತ್ರಗಳಿಗೆ ಸರಿಬರುವಹಾಗೆ ಹೊಡೆದು ಬಡಿದು ಮಾರ್ಪಡಿಸಿದ್ದ—ವಚನಗಳ ಚಲಾವಣೆಗಾಗಿ ಶಿವಶರಣರು ಚಿಕ್ಕದೊಡ್ಡ ನಾಣ್ಯಗಳಾಗಿ ಹೊಡೆಯಿಸಿದ್ದ—೧೬ನೆಯ ಶತ ಮಾನದಿಂದ ಷಟ್ಪದಿಕಾರರು ಕಥಾವಿಸ್ತರಣಕ್ಕೆ, ದಾಸಕೂಟ ದವರು ಜನರಂಜನೆಗೆ, ಯಕ್ಷಗಾನದವರು ಅರ್ಥಸೌಲಭ್ಯಕ್ಕೆ ಬೇಕುಬೇಕಾದಂತೆ ಬೆರಕೆ ಮಾಡಿ ಬಣ್ಣ ಕೊಟ್ಟಿದ್ದ—ಈಗಲೂ ಕಾಲಿಟ್ಟ ಕಡೆ ಕರ್ಣಾಟಕದಲ್ಲಿ ಕಾಣ ಸಿಕ್ಕುವ ಇತಿ ಹಾಸ ನಿಕ್ಷೇಪರೂಪದ ಶಿಲಾಶಾಸನಗಳಲ್ಲಿ ಎರಕ ಹೊಯ್ದಂ ತಿದ್ದ ಹೊಂಗನ್ನಡದ ಭಾಂಡಾರಕ್ಕೆ ಭಾಗಿಯಾದ ಕನ್ನಡಿಗನು ಎಷ್ಟು ಧನಾಢ್ಯನು! ಎಷ್ಟು ಧನ್ಯನು! ಈ ಧನವಿರುವಷ್ಟು ಕಾಲ ಕನ್ನಡಿಗನಿಗೆ ನುಡಿಗೆ ಕಡಮೆ ಇತ್ತೇ? ಭಾವಕ್ಕೆ ಬಡತನ ವಿತ್ತೇ? ರಚನೆಗೆ ಕೊರತೆ ಇತ್ತೇ?

ಹೀಗಿದ್ದರೂ ಕನ್ನಡವು ಮುಂದೆ ಮುನ್ನೂರು ವರ್ಷ ಸೊರಗಿ ಮುಗ್ಗಿ ಹೋಯಿತಷ್ಟೆ. ವಿಜಯನಗರ ಸಾಮ್ರಾಜ್ಯವು ಧ್ವಂಸವಾಗಿ, ಕನ್ನಡನಾಡಿನ ಬೇರೆ ಬೇರೆ ತುಂಡುಗಳು ಇತರ ಭಾಷೆಗಳ ಆಧಿಪತ್ಯಕ್ಕೆ ಒಳಪಟ್ಟು, ತನ್ನ ಮನೆಯ ಆಡಳಿತವೇ ತನಗೆ ತಪ್ಪಿದಂತಾಗಲು, ಕನ್ನಡವನ್ನು ಕೇಳುವವರಿಲ್ಲದೆ ಹೋಯಿತು. ಸಾಲದುದಕ್ಕೆ ಸುತ್ತಲು ಆಗಾಗ ನಡೆಯು ತ್ತಿದ್ದ ಒಳ ಜಗಳಗಳಲ್ಲಿ ಬರಗಾಲದ ಕಷ್ಟಗಳು, ದೇಶದಲ್ಲಿ ಭದ್ರತೆಯಿಲ್ಲ, ರಕ್ಷಣೆಯಿಲ್ಲ; ಇಂಥ ದುಃಸ್ಥಿತಿಯಲ್ಲಿ ಕನ್ನಡವು ಕುಟುಕು ಜೀವ ಹಿಡಿದುಕೊಂಡು ಬದುಕಿದುದೇ ಆಶ್ಚರ್ಯ ವೆನ್ನಿಸುತ್ತದೆ. ಕನ್ನಡದ ಇಂಥ ಅನ್ಯಾಕ್ರಾಂತವಾದ ಅತಂತ್ರ ಸ್ಥಿತಿ ಕನ್ನಡಕ್ಕೇ ಬಹಳ ಕಾಲ ತಿಳಿಯಲಿಲ್ಲ. ಇಂಗ್ಲಿಷ್ ವಿದ್ಯಾ ಭ್ಯಾಸವು ಬಂದು ಹಿಂದುಸ್ತಾನವನ್ನು ಕೈಹಿಡಿದು ಎಬ್ಬಿಸುವ ವರೆಗೆ ಕನ್ನಡವು ಚೇತರಿಸಿಕೊಳ್ಳುವಷ್ಟು ಸಮರ್ಥವಾಗಿರ ಲಿಲ್ಲ. ದೂರದ ದಿಗಂತದಲ್ಲಿಯ ಹೊಸ ಪ್ರಪಂಚವನ್ನು ಕನ್ನಡಿಗನ ಮುಂದೆ ತೋರಿ, 'ನೋಡಲ್ಲಿ ಮುಂಬೆಳಗು ಮೂಡುತಿದೆ ಹೊಂಬಿಸಿಲು' ಎಂಬ ಸೊಲ್ಲನ್ನು ಕನ್ನಡಿಗನ ಕಿವಿಯಲ್ಲಿ ಹಾಡಿದುದು ಇಂಗ್ಲಿಷ್ ಇತಿಹಾಸ! ಭಾಷಾಪ್ರೇಮ, ದೇಶವಾತ್ಸಲ್ಯ, ಐಕ್ಯಸಾಧನೆ, ಸ್ವಾತಂತ್ರ್ಯ ಸಿದ್ಧಿ--ಎಂಬೀ ಉದಾತ್ತ ವಿಚಾರಗಳನ್ನು ಅವನ ಮನಸ್ಸಿನಲ್ಲಿ ಒತ್ತಿದುದು ಇಂಗ್ಲಿಷ್ ವಾಙ್ಮಯ! ಈ ವಿಚಾರಗಳ ಪ್ರೇರಣೆಯ ಫಲವೇ ಈ ಸಾಹಿತ್ಯ ಸಮ್ಮೇಳನ.

ಮೇಲಿನ ಹೇಳಿಕೆಯಿಂದ ಈ ದೇಶದಲ್ಲಿ ಇಂಗ್ಲಿಷರ ಮೊದಲು ಸಾಹಿತ್ಯ ಸಭೆಗಳೇ ಇರಲಿಲ್ಲವೆಂದು ನನ್ನ ಅಭಿ ಪ್ರಾಯವಲ್ಲ; ಇದ್ದುವು, ನಿಜ. ಉದ್ದಾಮ ಪಂಡಿತರಿಗೆ ಮಹಾ ಮಹೋಪಾಧ್ಯಾಯ ಸನ್ನದನ್ನು ಇಂದಿನ ಸರಕಾರವು ದರ ಬಾರ್ ಸಭೆಯಲ್ಲಿ ದಯಪಾಲಿಸುವ ಹಾಗೆಯೇ ಪೂರ್ವದ ರಾಜರು ತಮ್ಮ ನಾಡಿನ ವರಕವಿಗಳನ್ನು ಆಸ್ಥಾನಕ್ಕೆ ಬರ ಮಾಡಿಕೊಂಡು, ಉಡುಗೊರೆ ಬಿರುದಾವಳಿ ಅಗ್ರಹಾರಗಳನ್ನು ಕೊಟ್ಟುದುಂಟು, ಉಂಟು; ಉತ್ಕೃಷ್ಟ ಕೃತಿಗಳನ್ನು ಪಟ್ಟ ದಾನೆಯ ಮೇಲೆ ಇಡಿಸಿ, ರಾಜಧಾನಿಯಲ್ಲಿ ಮೆರವಣಿಗೆ ಮಾಡಿಸಿದುದುಂಟು, ಉಂಟು-ನಿಜ. ನಮ್ಮ ಈ ಸಾಹಿತ್ಯ ಸಭೆಯು ಸ್ವರ್ಗಸ್ಥರಾದ ಕರ್ಣಾಟಕ ಭಕ್ತರ ವಿಷಯವಾಗಿ ಸಭಾನಿರ್ಣಯಗಳನ್ನು ಮಾಡುವಂತೆ, ಹಳ್ಳಿಯವರು ತಮ್ಮ ಹತ್ತುಹಲರ ಕೂಟದಲ್ಲಿ–ಗ್ರಾಮರಕ್ಷಣಕ್ಕೂ, ಸ್ವಾಮಿಕಾರ್ಯ ಕ್ಕೂ ಮಡಿಯಲೇಬೇಕೆಂದು 'ತುರುವಂ ಕೊಂಡೊಯ್ವಲ್ಲಿ ಹಗೆಯ ಮೇಲೆ ಎತ್ತಿ ಕಾಳಗಕ್ಕೆ ನಡೆದು ದಳದುಳವಾಗಿ ತಾಗಿತಳ್ತು ಇರಿದು ಕೊಂದು ಸ್ವರ್ಗಕ್ಕೆ ಸಂದ' ಹಳ್ಳಿಯ ಏಕಾಂಗವೀರನ ಸಾಹಸ ವರ್ಣನದಿಂದ ತಮ್ಮ ದುಃಖವನ್ನು ನಂದಿಸಿ, ವೀರಶಾಸನವನ್ನು ಕೆತ್ತಿಸಿದುದುಂಟು, ನಿಜ. ಆದರೆ ಹಿಂದಿನವರ ಧ್ಯೇಯಕ್ಕಿಂತ ಈ ಸಾಹಿತ್ಯಸಮ್ಮೇಳನದ ಉದ್ದೇಶ ಗಳು ಇನ್ನೂ ಅಧಿಕವಾಗಿವೆ, ಅವುಗಳ ಕಾರ್ಯಕ್ಷೇತ್ರ ವಿಸ್ತಾರವಾಗಿದೆ. ಸಮ್ಮೇಳನವು ಕನ್ನಡಿಗರಲ್ಲಿ ಪರಸ್ಪರ ಪರಿ ಚಯಕ್ಕೆ ಅವಕಾಶವನ್ನು ಒದಗಿಸುತ್ತದೆ, ಯೋಗ್ಯ ಸಾಹಿತ್ಯ ರಚನೆಗೆ ಅನುಕೂಲ್ಯವನ್ನು ಕಲ್ಪಿಸುತ್ತದೆ, ಗ್ರಂಥಕರ್ತರಿಗೆ ಬರಬಹುದಾದ ಸಮಸ್ಯೆಗಳನ್ನು ವಿಚಾರಿಸುತ್ತದೆ, ಕರ್ಣಾ ಟಕತ್ವದ ಸಿದ್ಧಿಗಾಗಿ ಕನ್ನಡ ಪ್ರಾಂತದಲ್ಲಿ ಜಾಗೃತಿಯುಂಟು ಮಾಡುತ್ತದೆ.

ಈ ಘನೋದ್ದೇಶಗಳನ್ನು ಮುಂದಿಟ್ಟು ಸಮ್ಮೇಳನವು ಅನೇಕ ಕಾರ್ಯಗಳನ್ನು ಮಾಡಿದೆ, ಮಾಡುತ್ತಿದೆ. ಶಬ್ದಮಣಿ ದರ್ಪಣ, ಚಾಮುಂಡರಾಯ ಪುರಾಣ, ಪಂಪಭಾರತ ಮೊದ ಲಾದ ಪ್ರಸಿದ್ಧ ಕೃತಿಗಳನ್ನು ಪರಿಷ್ಕರಿಸಿ ಮುದ್ರಿಸಿದೆ. ಒಬ್ಬರ ಮುಖ ಒಬ್ಬರು ನೋಡದೆ ಬೆಕ್ಕಿನ ಬಿಡಾರ ಬೇರೆಯೆಂದು ನೆನಸಿ, ಪ್ರತ್ಯೇಕವಾಗಿದ್ದವರು ಇಂದು ಕನ್ನಡಕ್ಕಾಗಿ ದುಡಿ ಯಲು ಸಮೀಪವರ್ತಿಗಳು; ಕರೆದಲ್ಲಿ ಹೋಗಿ ಕಂಡ ತಿಳಿವನ್ನು ಮನವಾರೆ ತಿಳಿಸುವ ಸ್ನೇಹಿತರು. ಇಂಥವರ ಪರಿಚಯ ದಿಂದ, ಮಾತಾಳಿಕೆಯಿಂದ, ಹುರುಪಿನಿಂದ ಕನ್ನಡವು ತಲೆ ಯೆತ್ತಿದೆ. ಇದಕ್ಕೆ ಅಲ್ಲಲ್ಲಿ ಸ್ಥಾಪಿತವಾದ ಕರ್ಣಾಟಕ ಸಂಘ, ಮಂಡಳ, ಗುಂಪು ಇವೇ ಸಾಕ್ಷ್ಯಗಳು. ಜನಸಾಮಾನ್ಯಕ್ಕೆ ಕನ್ನಡದ ಮೇಲೆ ಅಭಿಮಾನ ಹುಟ್ಟಿಸುವಂಥ ಸಾಹಿತ್ಯ ಸಮಾ ರಂಭ, ಕವಿಗಳ ಜನ್ಮದಿನಾಚರಣ, ಧರ್ಮೋಪದೇಶಕರ ವರ್ಧಂತ್ಯುತ್ಸವ, ಪುಸ್ತಕ ಪ್ರದರ್ಶನ, ಇವು ಸಮ್ಮೇಳನವು ಪರಿಷತ್ಪತ್ರಿಕೆಯ ಮೂಲಕ ಮಾಡುತ್ತಲಿರುವ ಪ್ರಯತ್ನಫಲ ಗಳು. ಸಮ್ಮೇಳನದ ಕಾರ್ಯಗಳನ್ನು ಕುರಿತು ನಾನು ಹೇಳುವುದಕ್ಕಿಂತ ಮೈಸೂರು ಸಂಸ್ಥಾನದ ದಿವಾನ್ ಸಾಹೇ ಬರ ಕಳೆದ ಮೇ ತಿಂಗಳಲ್ಲಿ ಅಮೂಲ್ಯ ಭಾಷಣದೊಳಗಣ ನಾಲ್ಕು ವಾಕ್ಯಗಳು ಎಷ್ಟು ಸ್ಫುಟವಾಗಿಹೇಳುತ್ತವೆ!

"ಮುಖ್ಯವಾಗಿ, ಕರ್ಣಾಟಕ ಸಾಹಿತ್ಯ ಪರಿಷತ್ತು ಸ್ಥಾಪಿತವಾದ ಕಾಲದಿಂದಲಂತು ವರ್ಷವರ್ಷವೂ ಪುಸ್ತಕ ಪ್ರಕಟನೆಯು ಹೆಚ್ಚುತ್ತ ಬಂದಿದೆ. ಪುಸ್ತಕಗಳ ಸಂಖ್ಯೆಯು ಹೆಚ್ಚಿರುವುದು ಮಾತ್ರವೇ ಅಲ್ಲದೆ ಪುಸ್ತಕಗಳನ್ನು ಬರೆದಿರುವ ನಾನಾ ವಿಷಯಗಳ ಸಂಖ್ಯೆಯೂ ಹೆಚ್ಚಿ, ಪುಸ್ತಕಗಳ ಬಾಹ್ಯ ರೂಪವೂ ಹೆಚ್ಚುಹೆಚ್ಚಾಗಿ ಅಂದವಾಗುತ್ತ ಬಂದಿದೆ. ದೇಶದಲ್ಲಿ ಗ್ರಂಥರಚನೆಯ ಕಾರ್ಯವು ಈ ರೀತಿ, ಶ್ರೇಷ್ಠರೀತಿಯಲ್ಲಿ ನಡೆದುದಕ್ಕೆಚೋದಕವಾಗಿ ಪ್ರೇರಣೆಗೊಳಿಸಿದ ಖ್ಯಾತಿಯು ಪರಿಷತ್ತಿಗೆ ಸಲ್ಲತಕ್ಕುದಾಗಿದೆ."

ಪುಸ್ತಕಗಳ ಸಂಖ್ಯೆ, ಮುದ್ರಣ, ಬಾಹ್ಯರೂಪ, ಇವುಗಳಲ್ಲಿ ಮಾತ್ರವೇ ಅಲ್ಲದೆ ಪ್ರಸಿದ್ಧ ಗ್ರಂಥಗಳ ಉತ್ತಮ ಭಾಗಗಳ ಸಂಗ್ರಹಣದಲ್ಲಿಯೂ ಹೊಸ ವಿಷಯಗಳ ನಿರೂಪಣದಲ್ಲಿಯೂ ಒಂದು ಹೊಸ ದಾರಿ, ೨೦ ವರ್ಷಗಳ ಹಿಂದೆ ಕನ್ನಡದಲ್ಲೆಲ್ಲಾ ಕಾಣದಿದ್ದ ನೂತನ ಸಾಹಿತ್ಯರಚನೆಯಲ್ಲಿ, ಒಂದು ನವೀನ ಮಾರ್ಗವು ಕಣ್ಣಿಗೆ ಬೀಳುತ್ತಿದೆ. ಹಿಂದೆ ಕನ್ನಡ ಗ್ರಂಥಗಳ ವಿಮರ್ಶೆಯ ರೀತಿ, ಕನ್ನಡ ಸಾಹಿತ್ಯದ ಸ್ವರೂಪ, ಇವನ್ನು ಸುಲಭವಾಗಿ ಹೇಳಿಕೊಡತಕ್ಕ ಸಾಧನಗಳೇ ಕಡಮೆ, ಇರಲಿಲ್ಲವೆಂದರೂ ಸರಿ. ಇದ್ದ ಒಂದೆರಡು ಪುಸ್ತಕಗಳು ಕಾವ್ಯಾವಲೋಕನ ಸಾಹಿತ್ಯರತ್ನಾಕರಗಳಿಂದ ಎತ್ತಿ ತೆಗೆದ ಪದ್ಯಗಳ ಅನುವಾದಗಳು, ಹಲ್ಲು ತುಂಡಾದರೂ ಕಡಿಯಲಾಗದ ಉಕ್ಕಿನ ಕಡಲೆಗಳು. ಅವು ಸಂಸ್ಕೃತದ ರಾಜಮಾರ್ಗಕ್ಕೆ ನೇರವಾಗಿ ಹೋಗತಕ್ಕವುಗಳೇ ಹೊರತು ಕನ್ನಡದ ಸರಿದಾರಿಯ ಮೇಲೆ ಹೋಗಿ ಒಂದುಸಿದ್ಧಾಂತಕ್ಕೆ ತಂದು ನಿಲ್ಲಿಸುವಂಥವುಗಳಲ್ಲ; ಸಂಸ್ಕೃತದ ಪ್ರತಿಬಿಂಬದಂತಿರುವ ಕರ್ಣಾಟಕ ಸಾಹಿತ್ಯಕಾರರ ಸೂತ್ರಾರ್ಥಗಳನ್ನು ಇಂಗ್ಲಿಷ್ ಸಾಹಿತ್ಯತತ್ವಗಳಿಗೆ ಸಮನ್ವಯ ಮಾಡಿ ಕನ್ನಡಿಗರಿಗೆ ಹೇಳಿಕೊಡುವಷ್ಟು ಸಾಮರ್ಥ್ಯಸಾಮಗ್ರಿಗಳು ಅವುಗಳಲ್ಲಿರಲಿಲ್ಲ. ಈಚೆಗೆ 'ಸಾಹಿತ್ಯ' 'ವಿಮರ್ಶೆ' 'ಪ್ರತಿಭೆ' ಇತ್ಯಾದಿ ಹೆಸರುಗಳುಳ್ಳ ಹೊಸ ಉಪನ್ಯಾಸಗಳು, ಅಮೋಘವಾದ ಮುನ್ನುಡಿಗಳು,ಗ್ರಂಥಪ್ರಶಸ್ತಿಗಳು ಅಚ್ಚಾಗಿ ಹೊರಬಿದ್ದುದೇ ತಡ-'ಭಾವ, ರಾಗ, ಸ್ಫೂರ್ತಿ, ಆವೇಶ, ಪ್ರತಿಭೆ, ಕಲ್ಪನೆ, ಊಹೆ, ರಸೋದ್ರೇಕ, ಕಲಾಶಕ್ತಿ, ಕಥಾವಸ್ತು, ಸನ್ನಿವೇಶ, ಪಾತ್ರಸೃಷ್ಟಿ, ಕವಿಹೃದಯ, ಆತ್ಮಸಂಸ್ಕಾರ-ಇವೇ ಮೊದಲಾದ ವಿಮರ್ಶನ ಕಾರ್ಯಕ್ಕೆ ಸಹಾಯಕವಾದ ಪದಸಾಮಗ್ರಿಯು ಬಳಕೆಗೆ ಬಂದಿತು; ಪ್ರಾಚೀನ ಗ್ರಂಥಗಳನ್ನು ವಿಮರ್ಶಿಸಿ ಬರೆದ ಹೊಸ ಲೇಖಗಳು ವಾಚಕರಿಗೆ ಸಾರ್ಥಕವೆಂದು ತಿಳಿಯಲಾದುವು. ಗ್ರಂಥಾಭಿರುಚಿಗೂ ವಿಮರ್ಶಕಬುದ್ಧಿಗೂ ಒಂದು ಹೊಸ ಹುರುಪು ಕೊಟ್ಟಂತಾಯಿತು.

ಈ ವಿಧದ ವಿಮರ್ಶನ ಕಾರ್ಯವು ಎಷ್ಟು ಮೆಟ್ಟಲು ಏರಿದೆ ಎಂಬುದನ್ನು ಈಚೆಯ 'ಪ್ರಬುದ್ಧ ಕರ್ಣಾಟಕ' ದೊಳಗಣ ಮುದ್ದಣಕವಿಯವಿಷಯವಾದ ಲೇಖ ಮಾನದಿಂದಹತ್ತು ವರ್ಷಗಳ ಹಿಂದಿನ ಮುದ್ದಣ ಪ್ರಶಸ್ತಿ ಲೇಖಗಳನ್ನು ಅಳೆದು ನೋಡಿ ತಿಳಿಯುವುದು. ಸಾಲದಿದ್ದರೆ 'ಜಯಕರ್ಣಾಟಕದಲ್ಲಿ,' ವೃತ್ತ ಪತ್ರಿಕೆಗಳಲ್ಲಿ, ಆಗಾಗ ಬರುತ್ತಿರುವ ಸಾಹಿತ್ಯ ವಿಚಾರಗಳಿಂದಲೂ ಸ್ಪಷ್ಟವಾಗುವುದು.

ಗ್ರಂಥ ವಿಮರ್ಶನ ಕಾರ್ಯದಲ್ಲಿ ಇತ್ತೀಚೆಗೆ ಮಾತ್ರ ವಿಮರ್ಶಕರ ಲಕ್ಷ್ಯಕ್ಕೆ ಬಂದ ಒಂದು ಅಂಶವಿದೆ; ಇದಕ್ಕೆ ಪದಶಕ್ತಿ ಎಂದು ಪೂರ್ವಿಕರ ಸಾಂಕೇತಿಕೆ. ಪದಶಕ್ತಿಯೆಂದರೆ ಪ್ರಾಸಗಳಲ್ಲ, ಯಮಕಗಳಲ್ಲ; ಸಂಸ್ಕೃತ ಅಲಂಕಾರ ಶಾಸ್ತ್ರಜ್ಞರ ಸಂಕುಚಿತಾರ್ಥವುಳ್ಳ ಶಬ್ದಶಕ್ತಿಯೂ ಅಲ್ಲ. ಪದಶಕ್ತಿಯನ್ನು ಸೂಚಿಸತಕ್ಕ ಒಂದೆರಡು ಉದಾಹರಣೆಗಳು ಕನ್ನಡ ಕೈಪಿಡಿಯಲ್ಲಿವೆ. ಇದರ ವಿಚಾರವನ್ನು ಶ್ರೀಮಾನ್ ಬೇಂದ್ರೆಯವರೂ,ಶ್ರೀಮಾನ್ ಮಾಸ್ತಿಯವರೂ ಕವಿಲಕ್ಷ್ಮೀಶ ಪ್ರಶಸ್ತಿಯಲ್ಲಿ ಮಾಡಿರುತ್ತಾರೆ. ಪದಶಕ್ತಿಯ ಮೀಮಾಂಸೆ ಮಾಡಿದವರು ಶ್ರೀಮಾನ್ ಗುಂಡಪ್ಪನವರು. ಶ್ರೀಮಾನ್ ವೆಂಕಣ್ಣಯ್ಯನವರ ಸಂಗ್ರಹ ಕಾದಂಬರಿಯ ಗ್ರಂಥದಲ್ಲಿ ನಾಗ ವರ್ಣನ ಪದಶಕ್ತಿಯ ಉದಾಹರಣೆಗಳಿವೆ. ಉಚ್ಚಾರಣೆಯಿಂದ ನಮ್ಮ ಕಿವಿಗಳ ಮೇಲೆ ಒಂದು ವಿಧದ ಪರಿಣಾಮವನ್ನುಂಟುಮಾಡುವ ಬೇರೆ ಬೇರೆ ಅಕ್ಷರಗಳ ಜೋಡಣೆಯು ಮನಸ್ಸಿನ ವಿವಿಧ ಭಾವಗಳ ವ್ಯಕ್ತತೆಗೆ ನೆರವಾಗುತ್ತದೆಂಬ ವಿಷಯವನ್ನು ಶ್ರೀಮಾನ್ ಗುಂಡಪ್ಪನವರು ವಿಶದೀಕರಿಸಿರುವರು. ಇದನ್ನು ಧ್ವನಿಶಕ್ತಿಯೆಂದು ಅವರು ಕರೆಯುವರು. ಈ ಶಕ್ತಿಯನ್ನು ಕನ್ನಡದಷ್ಟು ಹೆಚ್ಚಾಗಿ ಇತರ ಭಾರತ ಭಾಷೆಗಳು ಪಡೆದಿರಲಾರವೆಂದು ನನ್ನ ಶಂಕೆ. ಕನ್ನಡ ಭಾಷೆಯ ಬೊಕ್ಕಸದಲ್ಲಿ ಈ ಅಮೂಲ್ಯ ಪದಾರ್ಥವು ಲೆಕ್ಕವಿಲ್ಲದಷ್ಟಿದೆ-ಎಂದು ನನ್ನ ಅನುಭವ. ಇದರ ಸಂಗ್ರಹಣ, ರಕ್ಷಣ, ಪ್ರಯೋಜನಗಳು ಕಾವ್ಯಾಭ್ಯಾಸಿಗಳ ಲಕ್ಷ್ಯಾರ್ಹವಾದುದರಿಂದ, ಈ ವಿಷಯ ದೃಷ್ಟಾಂತಗಳನ್ನು ಕೊಟ್ಟು ಹೇಳುತ್ತೇನೆ, ಲಾಲಿಸಬೇಕು.

ಗಟ್ಟದ ಮೇಲಣ ಲಕ್ಷ್ಮೀಶನು ಸಮುದ್ರವನ್ನು ನೋಡಿದ್ದನೊ ಇಲ್ಲವೊ ಎಂಬ ವಿಷಯವಲ್ಲ, ಅವನ್ನು ಆ ಕವಿಯ ಒಳಗಣ್ಣು ನೋಡಿದೆಯೊ ಇಲ್ಲವೊ ಕೇಳಿ—

'ವಲಯದಮಲ ಸೌಭಾಗ್ಯ ರತ್ನಾಕರಂ ಪೇರ್ಮೆಯಿಂ ಮೇರೆವರಿಯೆ.'

ಇಲ್ಲಿರುವ ಧ್ವನಿಶಕ್ತಿ ಬೇರೆ; "ಪೇರ್ಮೆಯಿಂ ಘೂರ್ಮಿಸುವ" ಇತ್ಯಾದಿ ಮಾತುಗಳಲ್ಲಿಯ ಧ್ವನಿಶಕ್ತಿ ಬೇರೆ;ಇದೇ ಶ್ರೀಮಾನ್ ಗುಂಡಪ್ಪನವರು ಹೇಳಿದ ಧ್ವನಿಶಕ್ತಿ, ಅಕ್ಷರೋಚ್ಚಾರಣೆ ಕಿವಿಗೆ ತಾಗಿ ಸಮುದ್ರ ಘೋಷಭಾವವನ್ನುಂಟುಮಾಡುವ

ಶಕ್ತಿ. ಆದರೆ ಮೇಲಿನ ಚರಣದಲ್ಲಿರುವುದು ಅಂಥ ಧ್ವನಿ ಶಕ್ತಿಯಲ್ಲ; ಅದರಲ್ಲಿ ಸೇರಿಕೊಂಡು ಅದರ ಅಂಗವಾಗಿರ ತಕ್ಕ ಮತ್ತೊಂದು ಶಕ್ತಿ. ಆ ಶಕ್ತಿಕಾರ್ಯವು ಈ ಚರಣ ದಲ್ಲಿದೆಯೆಂದು ಸಮುದ್ರವನ್ನು ಯಾವಾಗಲೂ ಕಣ್ಣಾರೆ ಕಾಣುವ ನಾನು ನನ್ನ ಮನಸ್ಸಿಗೆ ಬೋಧೆಯಾಗುವುದನ್ನು ಕೂಡುವಷ್ಟು ಸ್ಪಷ್ಟಮಾಡಲು ಯತ್ನಿಸುತ್ತೇನೆ.

**ವ, ಲ, ಯ, ದ, ಮ, ಲ**— ಇವು ಆರು ಹ್ರಸ್ವ ವರ್ಣಗಳು; ⏑⏑⏑⏑ ನೀರಿನ ಕಿರಿ ತೆರೆಗಳ ಕುಣಿತದ ಕುರುಹುಗಳು. ಹೀಗೆ ಅಲೆ ಅಲೆಯಾಗಿ ಕಡಲಿನ ನೀರು ಬಂದು ರಾಶಿಯಾಗಿ 'ಏಕದಮ್' ಏರಿ, ಒಡನೆ ಸ್ವಲ್ಪ ಇಳಿದು, ಮುಂದುವರಿಯುವುದನ್ನು **ಸೌ, ಭಾ, ಗ್ಯ, ರತ್, ನಾ, ಕೆ, ರಂ**-ಎಂಬಿವು । । ⏑ । । ⏑ । ರೇಖಿಸುತ್ತವೊ ಇಲ್ಲವೊ ಯೋಚಿಸಿ! ದಡಮುಟ್ಟುವ ಮೊದಲು ನೀರಿನ ತೆರೆ ಸ್ವಲ್ಪ ಮೇಲೇರಿ ತುಂಡಾಗುವ ಭಾವವು **ಹೇರ್ ಚಿ** ಇದರಿಂದ ವ್ಯಕ್ತ ವಾಗುತ್ತದೊ ಇಲ್ಲವೊ ನೋಡಿ! ದಡವೇರಿ ಅಲ್ಲಿ ನೊರೆನೊರೆ ಯಾಗಿ ಹಿಂದಕ್ಕೆ ಹರಿದು ಹೋಗುವ ನೀರಿನ ಗತಿಯನ್ನು **ಮೇ, ರೆ, ವ, ರಿ, ಯೆ** ಹೀಗೆ ಒಂದು ದೀರ್ಘ ನಾಲ್ಕು ಹ್ರಸ್ವಗಳು ಅಂಕಿಸುತ್ತವೊ ಇಲ್ಲವೊ ಹೇಳಿರಿ. ಸಾಲದುದಕ್ಕೆ ಇದರಲ್ಲಿಯ **ಭಾ** ಎಂಬಕ್ಷರ, ಲಕ್ಷ್ಮೀಶನ ಘೋಷಾಶ್ಚರ್ಯ ಭಾವ ಸೂಚಕವಾದ ಮಹಾಪ್ರಾಣವು* ನಮ್ಮ ಕವಿಯ ಮೇಲೆ ಎಂಥ ವಿಚಿತ್ರ ಪರಿಣಾಮವನ್ನು ಉಂಟು ಮಾಡುತ್ತಿದೆ!

ಕಡಲನ್ನು ಬಹುಶಃ ಕಾಣದ ಮತ್ತೊಬ್ಬ ಕವಿಯು ಷಡಕ್ಷರಿ. ಆತನ ಸಮುದ್ರ ವರ್ಣನದಲ್ಲಿಯ ಒಂದು ಚರಣ ನೋಡೋಣ!

" . . . . . . . . . ಹಾಲಾಹಲಂ ಕೊಟ್ಟೊಡಂ ॥
ಮೃಡನೋರ್ವಂ ಮುಳಿಯಂ ಗಡೆಂದುಲಿವವೊಲ್ಲು
ದ್ಘೋಷಿಕುಂ ಸಾಗರಂ."

ಹಿಂದೆ ಕಂಡಂತೆ ಇದರಲ್ಲಿಯೂ **ಮು, ಳಿ, ಯಂ, ಗ, ಡೆಂ, ದು, ಲಿ**, ವ, ಹ್ರಸ್ವಾಕ್ಷರಗಳು ನೀರಿನ ಸ್ವರ ವನ್ನೂ ಚಳವಳವನ್ನೂ **ವೊ, ಲು, ದ್ಘೋ**, ದೀರ್ಘಗಳು ಎದ್ದ ತೆರೆಗಳ ಔನ್ನತ್ಯವನ್ನೂ ಎಷ್ಟು ಚೆನ್ನಾಗಿ ಸೂಚಿಸುತ್ತವೆ! **ಉದ್ ಘೋ**— ಇವುಗಳಿಂದಾಗುವ ಅರ್ಥಪುಷ್ಟಿ ಬೇರೆ ಯಿದೆ.

ಇನ್ನು ಹ್ರಸ್ವ ದೀರ್ಘಗಳ ಸಂಯೋಗದಿಂದ ವಾಚಕನ ಮುಂದಿಡುವ ಚಿತ್ರ ರೀತಿಯನ್ನು ಲಕ್ಷ್ಮೀಶನ ಸರಸ್ವತಿ ಸ್ತವ ದಲ್ಲಿ ನೋಡಿ!

"ಭೂವ್ಯೋಮ ಪಾತಾಳ ಲೋಕಂಗಳಲ್ಲಿ"

ವಿಸ್ತೃತಿಯ ಭಾವವು ತ್ರಿಭುವನ ಎಂಬ ಹ್ರಸ್ವಾಕ್ಷರ ಗಳಿಗಿಂತ **ಭೂ, ವ್ಯೋ, ಪಾ, ತಾ, ಲೋ**, ಎಂಬೀ ದೀರ್ಘಾಕ್ಷರಗಳಿಂದ ಚಿತ್ರಾಂಕಿತವಾಗುವುದು ಎಷ್ಟು ಚತುರ ತೆಯ ಕವಿಕಾರ್ಯವೆಂದು ನಾನು ಹೇಳಬೇಕಾಗಿಲ್ಲ. ಇಲ್ಲಿ ಯೂ ಆಶ್ಚರ್ಯ ವ್ಯಂಜಕವಾದ **ಭೂ** ಮಹಾಪ್ರಾಣ!

"ಆಹಾರಕಡವಿಯಂ ತೊಳಲಿ ಬರುತ್ತಿರ್ದ ಮೇಘೋ ಹೋತನೆಂಬವಂ ದಾನವೇಂದ್ರಂಗೆ ಪೌರೋಹಿತ್ಯಮಂ . . ."

ಇದು ಲಕ್ಷ್ಮೀಶನ ರಾಕ್ಷಸವರ್ಣನೆಯ ಒಂದು ಭಾಗ. **ಆ, ಹಾ, ಮೇ, ಘೋ, ಹೋ, ಪೌ, ರೋ**, ಈ ವರ್ಣಗಳಿಂದ ರಾಕ್ಷಸನ ತೆರೆದ ಬಾಯಿ, ಬೆದರಿಸುವ ರೂಪ, ದೂರದ ಕೂಗಿನ ಧ್ವನಿ, ಇಷ್ಟೆಲ್ಲಾ ವ್ಯಕ್ತವಾಗುತ್ತವೋ ಇಲ್ಲವೊ ತಾವೇ ತಿಳಿಯಬಹುದು. ಅಕ್ಷರಗಳ ಮರೆಯಲ್ಲಿದ್ದು ಕೇಳಬರುವ **ಆಹಾ ಓಹೋ** ಎಂಬಿವುಗಳ ಔಚಿತ್ಯ ನೋಡಿ!

ಇನ್ನೊಂದು ಉದಾಹರಣೆ: ಭಾರತದಿಂದ; ಕ್ಷಮಿಸ ಬೇಕು. ಭೀಮನನ್ನು ಹುರಿದುಂಬಿಸುವ ವೀರ ದ್ರೌಪದಿಯ ಬಾಯಿಂದ ಕುಮಾರವ್ಯಾಸನು ನುಡಿಸುವ ಹೊಗಳಿಕೆಯಿದು.

'ಭೀಮ, ಬಲವಾರಾಶಿ ಸೇನಾ
ಭೀಮ, ಕುರುಕುಲ ಕುಸುಮಮಾರ್ಗಣ
ಭೀಮ ....................'

ತನ್ನ ಹೆಸರನ್ನು ತನ್ನ ವಲ್ಲಭೆಯ ಬಾಯಿಂದ ಕೇಳಿ ದಷ್ಟು ಇನ್ನೂ ಕೇಳುವ ಎಂಬೊಂದು ಗಂಡನ ಮನಮೆಚ್ಚು ಗೆಗೆ ತಕ್ಕದಾಗಿ ಮೂರು ಸಲ ಭೀಮ ಎಂಬ ಒಂದೇ ಪದ! ಇಲ್ಲಿಯೂ ಭಯಾನಕತೆ ಸೂಚಿಸತಕ್ಕ ಭ ಮಹಾಪ್ರಾಣ; ಪೌರುಷಮಹತ್ವ ಸೈನ್ಯವಿಸ್ತಾರ ದ್ಯೋತಕವಾದ **ವಾ, ರಾ, ಸೇ, ನಾ, ಭೀ**, ಇಷ್ಟು ದೀರ್ಘ ಸ್ವರಗಳು. **ಕು, ರು, ಕು, ಲ, ಕು, ಸು, ಮ**, ಇವುಗಳಿಂದ ಕವಿಯು ಹಗೆಯ ಲಘುತ್ವಾಲ್ಪತೆಗಳನ್ನು ತೋರಿಸಿ, **ಮಾರ್ಗಣ** ಎಂಬ ನುಡಿ ಯೊಳಗಣ ರೇಫದಿಂದ ತುಂಡಾಗಿ ಕತ್ತರಿಸುವ ಭಾವವನ್ನು; ಇತ್ಯಾದಿ ಇತ್ಯಾದಿ; ಸಾಕು, ತಮ್ಮ ಸಹನೆಗೆ ಮೀರಿಹೋಯಿತು ನನ್ನ ಅಧಿಕಪ್ರಸಂಗ. ದಯವಿಟ್ಟು ಕ್ಷಮಿಸಬೇಕು.

ಈ ಧ್ವನಿಶಕ್ತಿಯನ್ನು ಇಷ್ಟು ವಿಸ್ತರಿಸಿ ಹೇಳಿದುದರಲ್ಲಿ ನನ್ನದೊಂದು ಉದ್ದೇಶವಿದೆ. ಬಹುಕಾಲದ ಹಿಂದಿನಿಂದ ಕನ್ನಡ ಶಬ್ದಗಳ ಹೊಸ ಹೊಸ ರೂಪಗಳು ವಾಡಿಕೆಯಲ್ಲಿ ದ್ದರೂ ಕನ್ನಡ ಕಾವ್ಯದೇವನು ಪ್ರಚಲಿತವಾದ ಹೊಸಗನ್ನಡ ವನ್ನು ಏರಿಹೋಗದೆ, ಹಳಗನ್ನಡ ವಾಹನದಲ್ಲೇ ಏತಕ್ಕೆ ನಿಂತುಬಿಟ್ಟನು? ಸಂಪ್ರದಾಯಬದ್ಧತೆ ಎಂದು ಹೇಳಿದರೆ ಈ ಪ್ರಶ್ನೆ ಬಿಡಿಸಿದಂತಾಗಲಿಲ್ಲ. ಸಂಸ್ಕೃತ—ಸಕ್ಕದ, ವಿಂಧ್ಯ— ಬಿಂಜ, ಹೀಗೆ ಹೇಳಲು ಒಡಂಬಟ್ಟ ಮಹಾ ಕವೀಶ್ವರರು ಪೋಪ—ಹೋಹ, ಎಮೆ—ಎವೆ, ಮಲಂಗು—ಮಲಗು

* 'ಅಂಭೋದಿಘೋಷದಿಂದೆದ್ದು ಹಾಹಾಕಾರದಿಂಭಯಂ ಗೊಂಡು' (ಜೈಮಿನಿ ಭಾರತ)

ಎಂಬ ರೂಪಗಳನ್ನೊಲ್ಲದೆ ಏತಕ್ಕೆ ಮುಖ ತಿರುಗಿಸಿದರು? ಕನ್ನಡ ಶಬ್ದಗಳ ಹೊಸರೂಪಗಳಿಗಿಂತ ಹಳೆಯವುಗಳಲ್ಲಿ ಧ್ವನಿಶಕ್ತಿ ಅಧಿಕವೆಂದು ಮನಗೊಂಡರೊ ಏನೊ, ಹೀಗೊಂದು ಅನುಮಾನ ಬರುತ್ತದೆ. ಹೊಸ ರೂಪಗಳಿಂದಲೂ ಅರ್ಥ ಪುಷ್ಟಿ ಬಂದೀತೆಂಬ ನಿಶ್ಚಯವಿಲ್ಲದಿರುವಾಗ ಅವರು ನೂತನ ಸಂದಿಗ್ಧ ಪಥವನ್ನು ಬಿಟ್ಟು, ಪುರಾತನ ಕವೀಂದ್ರರ ದೃಢ ಮಾರ್ಗ ಹಿಡಿದು ಹೋದುದರಲ್ಲಿ ತಪ್ಪೇನು? ಹಿಂದೊಮ್ಮೆ ನಾನು ಗದಾಯುದ್ಧದೊಳಗಣ ಕೆಲವು ಪದ್ಯಗಳನ್ನು ವಿದ್ಯಾರ್ಥಿಗಳಿಗೆ ತಿಳಿಯುವಂತೆ ಹೊಸ ರೂಪದಲ್ಲಿ ಕಟ್ಟಿದ ವಿಚಿತ್ರ ರೀತಿ ನೋಡಿ—

ಮೂಲರೂಪ—

"ಪೆಱಂ ಪೊಗೞ್ದಪೆಯೆಮ್ಮಂ
ಕೀಱಯಂ ಮಾಡಿದಪೆಯೆಲವೊ ಸಂಜಯ ನೀನುಂ
ಪೆಱನೊರ್ವಂ ಬಿಲ್ಲೋಜಂ
ಪೆಱನೊರ್ವಂ ಸಿಂಧುಪುತ್ರನಾಗಲ್ಪಗೆವೋ"

ನವೀನ ರೂಪ—

"ಹೆರರನು ಹೊಗಳುತಿ ನಮ್ಮನು
ಕೀಯನು ಮಾಡುತಿ ಎಲವೊ ಸಂಜಯ ನೀನೂ
ಹೆರನೊಬ್ಬನು ಬಿಲ್ಲೋಜನು
ಹೆರನೊಬ್ಬನು ಸಿಂಧುಪುತ್ರನಾಗಲು ಬಗೆವೆಯೊ"

ಹೀಗೆ ಮಾಡಿದುದರಿಂದ ಒಂದು ಕಡೆ ಛಂದೋಭಂಗ ವಿದ್ದರೂ ಅರ್ಥವೇನೋ ಸುಲಭವಾಗುತ್ತದೆ. ಆದರೆ ಹೊಸ ರೂಪದಲ್ಲಿ ತಂದುದು ಕವಿಯ ಆವೇಶವಲ್ಲ, ರನ್ನನ ಹಗಲ್ ವೇಷ; ಚಿತ್ರವಲ್ಲ, ಚಿತ್ರಹಿಂಸೆ. ಕಾರಣವೇನು? ಹಳಗನ್ನಡದ ಒಂದು ಲಲಿತಸ್ವರವು, ಹೊಸಗನ್ನಡ ವೀಣೆಯ ತಂತಿಗೆ ಅಲ್ಲಿ ಮೇಳಯಿಸಲ್ಪಡಲಿಲ್ಲ. ಹಳಗನ್ನಡದಲ್ಲಿ ಅನೇಕ ಪದಗಳ ನಿತ್ಯ ಬಿಂದುಗಳಿಂದ, ವಿಭಕ್ತಿಸಮುಚ್ಚಯಗಳಲ್ಲಿ ಬರುವ ನ್, ಮ್, ವ್ಯಂಜನಗಳಿಂದ, [1]ಪಾದಿ ಮಾದಿ ನಾದಿ ಶಬ್ದಗಳ ಆಧಿಕ್ಯದಿಂದ ಹಳಗನ್ನಡಕ್ಕೆ ಸ್ವಭಾವಸಿದ್ಧವಾದ ಮೃದು ಮಧುರವಾದ ಒಂದು ನಾದವಿದೆ. ಹೊಸಗನ್ನಡಕ್ಕೆ ಹಳಗನ್ನಡದನಿತು ಪೆಮ್ಪು, ಇನಿತು ಇಮ್ಪು, ತುಮ್ಬು ಪೆರ್ಮೆ ಎಮ್ಬ ಬಲ್ಮೆ ಇನ್ನೂ ಬರಬೇಕಷ್ಟೆ. ಹಳಗನ್ನಡದ ಜಾಯಮಾನದಂತಿರುವ [2]ವ್ಯಂಜನಾಂತ ಶಬ್ದಗಳು ಸ್ವರಾಂತಗಳಾಗಿ ಹೊಸಗನ್ನಡಕ್ಕೆ ಇಳಿಯುವಾಗ ಈ ಧ್ವನಿಶಕ್ತಿ ಆರಿಹೋಗುವುದೂ ಉಂಟು. ಕವಿಕಾರ್ಯದಲ್ಲಿ ಕಠಿಣತೆಯ ಸೂಚನಕ್ಕೆ ಉಪಯುಕ್ತವಾದ ಒಂದು [3]ಟಕಾರವು ಹೊಸಗನ್ನಡದಲ್ಲಿ ಸಂಸ್ಕೃತದ ಕರ್ಕಶ ಶಬ್ದಗಳ ಜೊತೆಯಲ್ಲಿ ಉಳಿದಿದೆ. ಕನ್ನಡವು ಹಳೆಯ ರೂಪವನ್ನು ತೊರೆದು ಸ್ವತಂತ್ರವಾಗಲು ಹೇಗೆ ಹೇಗೆ ಯತ್ನಿಸುತ್ತದೋ ಹಾಗೆ ಹಾಗೆ ಅದರ ಸ್ವರವು ಇನ್ನೂ ಇನ್ನೂ ಕಿವಿಗಳಿಗೆ ಕಠಿಣವಾಗಿ ತಾಗುತ್ತದೆ. ಹೊಸಗನ್ನಡವು ಟಕಾರದಿಂದಾಗುವ ಕರ್ಕಶ ಸ್ವರವನ್ನು ತಪ್ಪಿಸಿಕೊಳ್ಳಬೇಕು. ಆಗ "ಸುಲಭವಾಗಿರ್ದ.... ಲಲಿತವಹ" ಹೊಸಗನ್ನಡವು ಇನ್ನೂ ಮೃದುವಾಗಿಯೂ ಇನ್ನೂ ಇಂಪಾಗಿಯೂ ಮಾರ್ಪಡುವುದೆಂದು ನನ್ನ ಕೋರಿಕೆ.

ಆದರೂ ಧ್ವನಿಶಕ್ತಿಯ ಮರ್ಮವು ಕೆಲಮಂದಿ ಹೊಸಗನ್ನಡ ಗ್ರಂಥಕಾರರಲ್ಲಿದೆಯೆಂಬುದು ಅವರ ಕವನಗಳಿಂದ ಸ್ಪಷ್ಟವಾಗುತ್ತಿದೆ. ಹೊಸಗನ್ನಡ ಗದ್ಯಕ್ಕೆ ಅವಶ್ಯಕವಾದ ಮಾರ್ದವವೂ ಮಂಜುಲಸ್ವರವೂ ಇಂಥವರ ಹೊಸ ರಚನೆಯಿಂದ ಪ್ರಾಪ್ತವಾಗಬೇಕಾಗಿದೆ. ಗ್ರಂಥವಾಚಕರು ಕವಿಯ ಧ್ವನಿಶಕ್ತಿಯನ್ನು ತಮ್ಮ ಸಂಗೀತದಲ್ಲಿ ಮುಳುಗಿಸಿ ಕೊಲ್ಲದೆ ಕಾಯಬೇಕಾಗಿದೆ. ಎಳನೀರ ರುಚಿಗೆ ಸಕ್ಕರೆಯ ಬೆರಕೆ ಬೇಡ.

ಈಗಿನ ಸಾಹಿತ್ಯದಲ್ಲಿ ಇನ್ನೊಂದು ಬಗೆಯ ಸುಧಾರಣೆ ಹೊಸ ವಿಮರ್ಶನ ಕಾರ್ಯದಿಂದಲೇ ಬಂದೀತೆಂದು ನನ್ನ ಅಭಿಪ್ರಾಯ. ಪ್ರಾಚೀನ ಗ್ರಂಥಗಳಲ್ಲಿ ಎಲ್ಲಿ ನೋಡಿದರಲ್ಲಿ ಶ್ಲೇಷಾರ್ಥವು ವಾಚಕನ ಕಣ್ಣನ್ನು ಕುಕ್ಕಿ ಮನಸ್ಸನ್ನು ನೋಯಿಸುವಂತಿದೆಯಷ್ಟೆ. ಈ ವಿಧದ ಬರಿಯ "ಕಪ್ಪೆವಿಜಾನು ಮೊಸಳೆ ರಕ್ಷ ಹರಿಗೆ ಹೋಲಿಪಂತೆ ಶ್ಲೇಷೆಯಿಂದ ಬರೆವ ಯತ್ನ" ಬಹು ದೀರ್ಘಕಾಲದಿಂದ ಕನ್ನಡ ಕವಿಗಳ ಬೆನ್ನು ಹಿಡಿದು ಬಂದಿದ್ದಿತು. ಕೃತಿಯೋಳ್ ಕೃತಕ ಚತುರತೆ ಇರಲಾಗದು; ವಾಚಾಲತೆಯಿಂದುಸುರಿದ ಕೃತಿ ದುಷ್ಕೃತಿ; 'ಶಾಸ್ತ್ರದ ಬಳದಿಂದಳಪಿಂ ಪೇಳ್ದೊಡಮದು ಕೋಮಲಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ; ಕಿರಿದರೊಳ್ ಪಿರಿದುಮರ್ಥಮ ನರಿಪಲ್ ನೆರೆವಾತ ಸತ್ಕವಿ,'—ಹೀಗೆ ವಾಙ್ಮಯದ, ಉತ್ತಮ ತತ್ವಗಳನ್ನು ಉಪದೇಶಿಸಿದ ಪ್ರಾಚೀನರ ಪ್ರಸಿದ್ಧ ಗ್ರಂಥಗಳಲ್ಲಿ ದ್ವಯಾರ್ಥ, ನಾನಾರ್ಥ ವಿರೋಧಾಭಾಸಗಳುಳ್ಳ ಗದ್ಯಪದ್ಯದ ಬಣವೆ ಏರಿದುದರಲ್ಲಿ ಉದ್ದೇಶವೇನು? ಕೈಯ್ದೊಲದಲ್ಲಿ ಕುರುಂಬುಲ್ಲು ಬೆಳೆಯುವುದಕ್ಕೆ ಕಾರಣವಿದೆಯೇ? ಇರಬಹುದು. ಕವಿಯಾಗತಕ್ಕವನಿಗೆ ಪದಸಂಪತ್ತಿಯೂ ಅರ್ಥ ಜ್ಞಾನವೂ ಅತ್ಯಗತ್ಯವಿರುವುದಷ್ಟೆ. ಹಿಂದೆ ಶಬ್ದಕೋಶಗಳ ಸಂಖ್ಯೆ ಕಡಮೆಯಿದ್ದಾಗ, ಇದ್ದ ಒಂದೆರಡು ನಾನಾರ್ಥರತ್ನಾಕರ ಕೈಪಿಡಿ ನಿಘಂಟುಗಳು ನೀರಸವಾಗಿದ್ದು ಕಂಠಪಾಠಕ್ಕೆ ಕಷ್ಟತರವಾದಾಗ, ಇಂದಿನ ಮುದ್ರಣಾಲಯಗಳ ಸುಲಭಾನುಕೂಲತೆಯೂ ಸಹಾಯವೂ ಇಲ್ಲದಿದ್ದಾಗ, ಗ್ರಂಥಕಾರರು ತಮ್ಮ ಜ್ಞಾಪಕಶಕ್ತಿಗೆ ಕೈನೆರವಾಗುವಂತೆಯೊ, ಕಾವ್ಯಾಭ್ಯಾಸಿಯ ಪಾಠಕ್ಕೆ ಸುಲಭವಾಗುವಂತೆಯೊ ವಿಚಿತ್ರಾರ್ಥಗಳುಳ್ಳ

1. ಕಾದಿ ಶಬ್ದಗಳ ಪುಟಸಂಖ್ಯೆ ೧೮೦, ಸಾದಿ ಶಬ್ದಗಳದು ೧೪೩, ಪಾದಿ ೧೪೨, ಮಾದಿ ೬೪೧, ನಾದಿ ೮೫, ಉಳಿದುವು ಇನ್ನೂ ಕಡಮೆ. (ಕಿಟ್ಟೆಲ್ ನಿಘಂಟು ನೋಡಿ) 2. ನೀರ್—ನೀರು, ಕಡಲ್—ಕಡಲು 3. ಕೊಡು-ಕೊಟ್ಟ, ಇಡು-ಇಟ್ಟ.

ಒಗಟು ಪದ್ಯಗಳನ್ನು ತಮ್ಮ ಗ್ರಂಥಗಳಲ್ಲಿ ತುಂಬಿರಬೇಕು. ಇದು ಹೊಸ ದೃಷ್ಟಿಗೆ ಅಸ್ವಾಭಾವಿಕವಾಗಿ ಅನಾವಶ್ಯಕವೆಂದು ತೋರಿದುದರಿಂದ, ಸಂಗ್ರಹಕಾರರು ಉತ್ತಮ ಕಾವ್ಯಗಳನ್ನು ಆಯ್ದು ಕೊಂಡು ಅವುಗಳಲ್ಲಿಯ ಅಸಭ್ಯ ಮತ್ತು ಕೃತಕಭಾಗ ಗಳನ್ನು ಬಹಿಷ್ಕರಿಸಿ ಪ್ರಸಿದ್ಧಿಗೆ ತಂದರು. ಆ ಕಾರಣ ಕನ್ನಡದಲ್ಲಿ ಬಹುಕಾಲದ ಹಿಂದಿನಿಂದ ಮುದ್ದಣ ಕವಿಯ ವರೆಗೆ ಸಂಪ್ರದಾಯಾನುಸಾರವಾಗಿ ಬಂದಿದ್ದ ಕೃತಕರೀತಿ ಯೊಂದು ಮಾಯವಾಗಿ, ಹೊಸ ಲೇಖಕರಲ್ಲಿಯೂ ವಾಚಕ ರಲ್ಲಿಯೂ ಒಂದು ಸಂಸ್ಕಾರವುಂಟಾಗುತ್ತಿದೆ. ಹೀಗೆ ನೂತನ ವಾಗಿ ಪರಿಷ್ಕರಿಸಿ ನಿರ್ಮಿಸಿದ ಸಾಹಿತ್ಯದ ಮೇಲೆ ಇದುವರೆಗೆ ಯಾರ ದೋಷಾರೋಪಣೆಯೂ ಇದ್ದ ಹಾಗೆ ನನಗೆ ಕಂಡು ಬರಲಿಲ್ಲ. ದೂಷಣೆ ಇದ್ದರೆ, ಅಚ್ಚಾದ ಹೊಸಗನ್ನಡ ಭಾಷೆಯ ಪುಸ್ತಕಗಳ ಮೇಲೆ, ಹಿಂದಿನ ಗ್ರಂಥಗಳ ಮೇಲಲ್ಲ.

ಈ ಹೊಸ ಸಾಹಿತ್ಯವು ಮಕ್ಕಳ ಕಥೆ, ಸಣ್ಣ ಕಥೆ, ಕವಿತೆ, ಕಾದಂಬರಿ, ಹೊಸನಾಟಕ, ಹೀಗೆ ನಾನಾ ರೂಪಗಳನ್ನು ಧರಿಸಿ ದಿನೇ ದಿನೇ ವಿಜೃಂಭಿಸತೊಡಗಿದೆ. ವರ್ಷದಲ್ಲಿ ಕಡಮೆ ಪಕ್ಷ ಇಂಥ ನೂರು ಹೊಸ ಪುಸ್ತಕಗಳಾದರೂ ಕರ್ಣಾ ಟಕದಲ್ಲಿ ಪ್ರಕಟವಾಗುತ್ತಿವೆಯೆಂದು ಇದರ ಲೆಕ್ಕವಿದ್ದರೂ, ಇತರ ಭಾಷೆಗಳಲ್ಲಿ ಹುಟ್ಟುವ ವರ್ಷಾವಧಿ ಪುಸ್ತಕ ಸಂಖ್ಯೆಯ ಮಾನದಿಂದ ಅದೊಂದು ದೊಡ್ಡ ವಿಷಯವೇ ಅಲ್ಲ. ಈ ಪುಸ್ತಕಗಳಲ್ಲಿ ಕೆಲವು ಸ್ವತಂತ್ರ ಗ್ರಂಥಗಳು, ಹಲವು ಸಂಸ್ಕೃ ತದ ಇಲ್ಲವೆ ಇಂಗ್ಲಿಷದ ಭಾಷಾಂತರಗಳು, ಅನುವಾದಗಳು; ಸ್ವಲ್ಪ ಭಾಗವು ಹಳಗನ್ನಡದಲ್ಲಿ, ಆದರೆ ಬಹುಭಾಗವು ಹೊಸ ಗನ್ನಡದಲ್ಲಿ. ಒಬ್ಬರೇ ಬರೆದ ಕೆಲವು ನಾಟಕಗಳು, ಶಾಂತಾ ಸಾವಿತ್ರಿಗಳು, ಕಂದವೃತ್ತಗಳಲ್ಲಿ; ಯಶೋಧರಾದಿಗಳು ಸರಳ ರಗಳೆಯಲ್ಲಿ. ಈ ಪುಸ್ತಕಗಳನ್ನು ಕುರಿತು ಆಗಾಗ ವೃತ್ತ ಪತ್ರಗಳಲ್ಲಿಯ ವಿಚಾರಗಳಿಂದಲೂ ಮಾಸಿಕಪತ್ರಿಕೆಗಳಲ್ಲಿಯ ವಿಮರ್ಶೆಗಳಿಂದಲೂ ಒಂದಂಶವು ಹೊರಪಡುತ್ತದೆ— ಹೊಸ ಬರ ಹೊಸ ಪುಸ್ತಕಗಳಲ್ಲಿ ಸಣ್ಣ ಕಥೆಗೆ ಆದರಣೆ, ನಾಟಕಗಳ ವಿಷಯದಲ್ಲಿ ತಾಟಸ್ಥ್ಯ, ಹೊಸ ಕವನಗಳ ಮೇಲೆ ದೂಷಣೆ. ಇದು ಸಾಹಿತ್ಯ ವಿಚಾರಕರ ಭೇದ ಬುದ್ಧಿಯೇ? ವೈಯಕ್ತಿಕ ದೃಷ್ಟಿಯೇ? ಪಕ್ಷಪಾತದ ಫಲವೇ? ಹೀಗಾಗಬಾರದು. ಒಬ್ಬನೇ ಗ್ರಂಥಕಾರನು ಬರೆದುದು ನಾಟಕವಾದರೆ, ಆಕ್ಷೇ ಪಣೆಯಿಲ್ಲ; ಹೊಸಗನ್ನಡ ಕವನವಾದರೆ ಮಾತ್ರ ಅಸಮಧಾನ. ಆದುದರಿಂದ 'ಮುಖನೋಡಿ ಮಾತು ಆಡುವರು' ಎಂಬ ಮಾರುತ್ತರ ಸರಿಯಲ್ಲ. ಹೊಸಕವನಗಳೆಲ್ಲಾ ಕುರುಡು ಕವಿತೆಗಳೆಂದು ಕ: ಪದಾರ್ಥಗಳೆಂದು ಮನ:ಪೂರ್ವಕವಾಗಿ ನಂಬಿ, ಅವನ್ನು ಮುಟ್ಟಲೊಲ್ಲದ ಹಳಬರೂ ಇದ್ದಾರೆ, ಹೊಸ ಬರೂ ಇದ್ದಾರೆ. ಇಂಥವರ ದೂರು ಹೊಸಕವಿತೆಯ ತಲೆಯ ಮೇಲೆ ಬಿದ್ದಷ್ಟು ಇತರ ಸಾಹಿತ್ಯಾಂಗಗಳ ಮೇಲೆ ಬೀಳಲಿಲ್ಲ. ಹೀಗಾಗುವುದಕ್ಕೆ ಎರಡು ಕಾರಣಗಳಿವೆ. (೧) ನಾಟಕಾದಿ ಗಳ ವಿಮರ್ಶನ ವಿದ್ಯೆಯ ಅಭಾವ, (೨) ನಮ್ಮ ಸಂಸ್ಕೃತಿಯು ಭಂಗವಾಗುವುದೆಂಬ ಸಂದೇಹ.

ಕನ್ನಡದ ಪೂರ್ವ ಸಾಹಿತ್ಯದಲ್ಲಿಯ ಪ್ರಸಿದ್ಧ ಗ್ರಂಥ ಗಳಲ್ಲಿ ದೃಶ್ಯಕಾವ್ಯವಿರುವುದು ಒಂದು ಮಾತ್ರವಷ್ಟೆ— ಮಿತ್ರ ವಿಂದಾ ನಾಟಕ; ಮಿಕ್ಕವು ಪುಣ್ಯಪ್ರದವೆಂದು ಪಠಿಸಲಾಗುವ ಚಂಪೂ ಕಾವ್ಯ, ಷಟ್ಪದಿ, ಸಾಂಗತ್ಯ ಗ್ರಂಥಗಳು. ಕನ್ನಡ ನಾಟಕಗಳ ಪರಿಚಯವೂ ವಿಚಾರವೂ ಹಿಂದೆ ಕಡಮೆ ಎನ್ನ ಬೇಕು. ಜನಜೀವನವನ್ನು ಬಹುರೂಪದಿಂದ ಚಿತ್ರಿಸತಕ್ಕ ನಾಟಕಗಳನ್ನು ರಚಿಸುವುದೂ ಅವನ್ನು ಯೋಗ್ಯರೀತಿ ವಿಮ ರ್ಶಿಸುವುದೂ ಅಷ್ಟು ಸುಲಭವಲ್ಲ. ನಾಟಕ ಪರೀಕ್ಷಣ ಜ್ಞಾನ ವನ್ನು ಕನ್ನಡಿಗರಿಗೆ ಹೇಳಿಕೊಡತಕ್ಕ ಕನ್ನಡ ಉಪನ್ಯಾಸಗಳು, ಒಂದು ಹೊರತು, ಇದುವರೆಗೆ ಯಾವವೂ ಪ್ರಕಟವಾಗಲಿಲ್ಲ. ನಾಟಕ ಕವಿತೆಯ ಸ್ವರೂಪವನ್ನು ನಿರ್ಣಯಿಸತಕ್ಕ ಪದಸಾಮ ಗ್ರಿಯೂ ನಮ್ಮಲ್ಲಿ ಬೆಳೆಯಲಿಲ್ಲ. ಒಟ್ಟು ಹೇಳುವುದಾದರೆ, ನಾಟಕ ಶಾಸ್ತ್ರದ ಸಿದ್ಧಾಂತಗಳಲ್ಲಿ ಯಾವುದೊಂದಾದರೂ ನಿಶ್ಚಿತವಾಗಿಲ್ಲದಿರುವುದರಿಂದ, ಹೊಸ ನಾಟಕಗಳು ಕವಿತೆ ಗಳಷ್ಟುದೂರು ಹೊತ್ತಿಲ್ಲ.

ಅನೇಕ ಹೊಸ ಕವಿತೆಗಳ ಮೇಲಿನ ತಿರಸ್ಕಾರವು ಅವು ಗಳ ಪ್ರಾಸಭಂಗದಿಂದ ಪ್ರಾರಂಭವಾಯಿತೆಂದು ನನ್ನ ಎಣಿಕೆ. ಆಚಾರ್ಯ ಪದವಿಯಲ್ಲಿರುವವರೇ ಪ್ರಾಸಧರ್ಮವನ್ನು ಉ ಲ್ಲಂಘಿಸಿ, ಪದ್ಯದ ದ್ವಿತೀಯಾಕ್ಷರದ ತಲೆಗೆ ಏಟು ಕೊಟ್ಟು, 'ಸರಸತಿಯ ಬಲೆಯ ಗೋಣ್ಮುರಿದು' ಮಾಡಿದ ಪ್ರಾಸ ಲೋಪದ ಪಾಪಾಚರಣೆಗೆ ಪ್ರಾಯಶ್ಚಿತ್ತವನ್ನು ವಿಧಿಸುವುದ ಕ್ಕಾಗದೆ, ಒಳಗೊಳಗೆ ಎಸರಿಟ್ಟಂತಾಗಿ ಕುದಿಯುತ್ತಿದ್ದ ಭಾವವು ದೂರುದೂಷಣೆಗಳ ರೂಪದಿಂದ ಹೊರಕ್ಕೆ ಹರಿಯಿತು. "ಪದ್ಯಕ್ಕೆ ಜೀವಕಳೆ ಪ್ರಾಸ," "ಪ್ರಾಸವಿರುವ ಕವಿತೆಯೇ ಪ್ರಾಸಾದಿಕ," ಎಂಬಿಷ್ಟನ್ನು ಮಾತ್ರ ಕಂಡ ಕಣ್ಣಿಗೆ ಪುರಾತನ ಕಾಲದಿಂದ ಕಾವ್ಯಪುರುಷನ ಕೊರಳಲ್ಲಿ ತೂಗುತ್ತಿದ್ದ ಈ ಜನಿ ವಾರವು ತಟ್ಟನೆ ಕಡಿಯಲ್ಪಟ್ಟುದು ಅಸಹನವಾದುದರಲ್ಲಿ ಆಶ್ಚರ್ಯವೇನು? "ಪ್ರಾಸ ಪದ್ಯವೆಂತು ವೀಸೊಂದು ಹಣ ವೆಂತು ಸಾಸಿವೆಯ ಕಾಳು ಕುಂಬಳ ಕಾಯ ತೋರೆಂತು"— ಹೀಗೆ ಪ್ರಾಸಸಮನ್ವಿತವಾಗಿ ಬರೆದು, ಅದೇ ತ್ರಿಪದಿಯಲ್ಲಿ ಪ್ರಾಸಕ್ಕೆ ಕುಹಕಮಾಡಿದುದು ಬಗೆಹರಿಯದಾಯಿತು. ಪ್ರಾಸ ವಿಲ್ಲದೆ ಪದ್ಯರಚನೆಯಾಗುವುದಾದರೆ, ಗದ್ಯಪದ್ಯಗಳೊಳಗಿನ ಭೇದವೇ ತಪ್ಪಿಹೋಗಿ, ಬಗೆಗುರುಡರ ತುಂಡು ಪದ್ಯಗಳೂ, ನಾಲಗೆವೆಳವರ ಎಂಜಲು ಹಾಡುಗಳೂ ಬೆಳ್ಳಕ್ಕರಿಗರ ಅಳಿ ಗಬ್ಬಗಳೂ ತುಂಬಿಹೋಗಿ, ಕಾವ್ಯಾಭ್ಯಾಸಿಗ ನಾರಿಯಲ್ಲಿ

ಮುಳ್ಳಿಟ್ಟಂತಾಗಿ ಅವ್ಯವಸ್ಥೆ ಉಂಟಾಗಲಿಕ್ಕಿಲ್ಲವೇ? ಈ ಆಕ್ಷೇಪಣೆಯನ್ನು ವಿಚಾರಿಸುವ ಮೊದಲು ಪ್ರಾಸವಿಷಯವನ್ನು ಕುರಿತು ಸ್ವಲ್ಪ ಹೇಳಬೇಕಾಗಿದೆ.

ಭರತಖಂಡದ ಗಾಯನಕಲೆಯಲ್ಲಿ ಹೇಗೋ ಹಾಗೆಯೇ ಕನ್ನಡ ಕಾವ್ಯರಚನೆಯಲ್ಲಿ **ಮಾರ್ಗ** ಮತ್ತು **ದೇಸಿ** ಎಂಬೆರಡು ಭೇದಗಳಿರುವುದು ಸರ್ವವಿದಿತವಾಗಿದೆ. ಮಾರ್ಗವೆಂದರೆ ಕರ್ಣಾಟಕ ಲಾಕ್ಷಣಿಕರ ಸೂತ್ರಗಳನ್ನನುಸರಿಸಿ ವಿದ್ವಜ್ಜನರಿಗೆ ಸಮ್ಮತವಾಗುವಂತೆ ಹೋಗತಕ್ಕ ಪುರಾತನ ಕಾವ್ಯ ಮಾರ್ಗ. ಈ ಮಾರ್ಗದಲ್ಲಿಯೇ ಹಿಂದಿನ ಪ್ರಸಿದ್ಧ ಕನ್ನಡ ಕೃತಿಗಳ ರಚನೆಯಾಗಿದೆ. ಈ ಗ್ರಂಥಸ್ಥ ಸರಣಿಯಲ್ಲದೆ ಕವಿತಾರಚನೆಯಲ್ಲಿ ಸಾಮಾನ್ಯವಾದ ಇನ್ನೊಂದು ರೀತಿ ಯಾವಾಗಲು ಇದ್ದೇ ಇರುತ್ತದೆ. ಇದು ರಾಜಪಂಡಿತರ ಮಾರ್ಗವಲ್ಲ; ಹಳ್ಳಿಯವರು ತಮ್ಮ ಅನುಭವದ ಕಷ್ಟನಿಷ್ಠುರಗಳನ್ನೂ ಸೋಲು ಗೆಲವುಗಳನ್ನೂ ಕುರಿತು ಸ್ವತಂತ್ರವಾಗಿ ಹಾಡಿ ಹೋಗುವ ಪಾಮರ ರೀತಿ. ಇದನ್ನು ದೇಸಿ ಎನ್ನುವರು. ಹಳ್ಳಿಯ ನೈಜ ಸ್ವಭಾವವನ್ನು ಪ್ರತಿಬಿಂಬಿಸುವ ಒಗಟಿಗಳು, ಗಾದೆಗಳು, ಹಾಡುಗಳು, ಲಾವಣಿಗಳು ದೇಸಿಯ ರೀತಿಯಲ್ಲಿದ್ದು, ಜನಪದ ಸಾಹಿತ್ಯವೆಂದು ಕರೆಯಲ್ಪಡುವಷ್ಟು ಲಕ್ಷಣವಾಗಿರುತ್ತವೆ. ಈ ವಿಧದ ಸಾಹಿತ್ಯದಲ್ಲಿಯ ಕನ್ನಡ ಹಾಡುಗಳು ತಾಳಬದ್ಧವಾಗಿದ್ದರೂ, ಅವುಗಳೊಳಗಿನ ಹಾಡುಗಬ್ಬ ಓದುಗಬ್ಬ ಮೊದಲಾದ ಅವಾಂತರ ಭೇದಗಳ ದೆಸೆಯಿಂದ ಪುರಾತನ ಮಾರ್ಗದ ಲಾಕ್ಷಣಿಕರ ಅಕ್ಷರ ಛಂದಸ್ಸಿನ ನಿಯಮಗಳಿಗೆ ಒಳಗಾಗದೆ, ಪ್ರಸಿದ್ಧ ಕೃತಿಗಳಲ್ಲಿ ಸ್ಥಾನವನ್ನು ಪಡೆಯದೆ ಹೋದುವು*. **ದೇಸಿ** ಸಾಹಿತ್ಯದಲ್ಲಿ ಪ್ರಾಸವಿರುವ ಹಾಡುಗಳೂ ಇವೆ, ಪ್ರಾಸವಿಲ್ಲದುವುಗಳೂ ಇವೆ. ಆದರೆ **ಮಾರ್ಗ** ಸಾಹಿತ್ಯದಲ್ಲಿ ದ್ವಿತೀಯಾಕ್ಷರ ಪ್ರಾಸ ನಿರ್ಬಂಧವು ಒಂಬತ್ತನೆಯ ಶತಮಾನಕ್ಕಿಂತ ಹಿಂದಿನಿಂದಲೇ ವಾಡಿಕೆಯಲ್ಲಿದ್ದಿತೆಂಬುದು ನಿರ್ವಿವಾದ.

ದೇಸಿಯ ಹಾಡುಗಳಲ್ಲಿ ಪ್ರಾಸವು ಮೊಟ್ಟಮೊದಲು ದ್ವಿತೀಯಾಕ್ಷರದಲ್ಲಿ ಬರದೆ ಅಂತ್ಯಸ್ಥಾನದಲ್ಲಿಯೇ ಇದ್ದಿತೆಂಬ ಊಹೆಗೆ ಬಲವಾದ ಕಾರಣವಿದೆ. ಮನುಷ್ಯನು ಮೃಗಪಕ್ಷಿಗಳ ಧ್ವನಿಗಳನ್ನನುಕರಿಸಿ ಆತ್ಮ ಸಂತೋಷಾರ್ಥವಾಗಿ ಹಾಡಿದ ಹಾಡುಗಳಲ್ಲಿ ಪ್ರಾಸವು ಅಂತ್ಯದಲ್ಲಿರುವುದು ಸಹಜವಾಗಿದೆ.

---

* ಕನ್ನಡ ರೀತಿಯನ್ನೇ ಅನುಸರಿಸಿ ಹೋದ ಮರಾಟಿ ಕೃತಿ ರಚನೆಯಲ್ಲಿ ಹೀಗೆಯೇ ಇದ್ದು, ಪಂಢರಪುರದ ವಿಟ್ಠಳ ಮಾಹಾತ್ಮ್ಯೆಯ ಕಾಲದಲ್ಲಿ ಅಲ್ಲಿಯ ದೇಸಿರೀತಿ ತುಕಾರಾಮಾದಿ ಸಾಧು ಸಂತರ ಮರಾಟಿ ಅಭಂಗಗಳ ರೂಪದಲ್ಲಿ ಸ್ಥಿರಪಟ್ಟಿತು. ಮರಾಟಿ ದೇಸಿ ರೀತಿಯ ಅನೇಕ ಹಾಡುಗಳ ಛಂದಸ್ಸು ಕನ್ನಡ ದೇಸಿಯ ಛಂದಸ್ಸಿನ ಅನುಕರಣವೆಂಬ ಅಭಿಪ್ರಾಯವು ವಿಚಾರಾರ್ಹವು.

"ಪಾರಿವಾಣ ಹಕ್ಕಿ ಬಂತೊ **ಕುಟುರ್ ಕುಟುರ್**
ಕಾಳು ತಿಂತೊ ಹಾರಿಹೋತು **ಕುಟುರ್ ಕುಟುರ್**"

ಚರಣಾಂತ್ಯದಲ್ಲಿಯ ಅನುಕರಣ ಪದವು ಕುಣಿತದ ಹಾಡುಗಳಲ್ಲಿ ಅದಕ್ಕೆ ತಕ್ಕಂತೆ ಬೇರ್ಪಡುತ್ತದೆ.

"ಕಾಳು ಕೊಟ್ಟು ಬಾಳು ತಂದೆ **ತೈ ತಕ್ಕ ತೈ**
ಬಾಳು ಕೊಟ್ಟು ಎಣ್ಣೆ ತಂದೆ **ತೈ ತಕ್ಕ ತೈ**"

ಮೂಲದಲ್ಲಿ ಏಕರೂಪದಲ್ಲಿದ್ದ ಹಾಡು ಕ್ರಮೇಣ ಕವಲೊಡೆದು ಸರಸ್ವತಿಯ ಕೈಗಳಂತೆ ಗೀತೆ (ರಾಗ, ಸ್ವನ) ಮತ್ತು ಕವನ (ಕವಿತೆ) ಹೀಗೆ ಎರಡಾದಾಗ, ಕೊನೆಯ ನುಡಿಯು ಅರ್ಥ ವ್ಯಕ್ತಿ ಕೊಡತಕ್ಕ ಪದವಾಗಿ ಬರುವುದು.

"ನೊಣ ಬಂದು ಅರಸಿನ **ಹಚ್ಚೀತು** ।
ನುಶಿ ಬಂದು ಕುಂಕುಮ **ಹಚ್ಚೀತು** ।
ಬೆಕ್ಕು ಭಾಷಿಂಗ **ಕಟ್ಟೀತು**
ಕಟ್ಟಿರುವೆ ಕಂಕಣ **ಕಟ್ಟೀತು**."

ಮುಂದೆ ಪುನರುಕ್ತಿಯ ಸ್ಥಾನದಲ್ಲಿ ಪ್ರಾಸಪದವನ್ನಿಡುವುದು ಕಿವಿಗೆ ಬಲು ಇಂಪಾಗಿ ತೋರಿರಬೇಕು.

"ಗುರು ಉಸ್ತಾದಿಯಾ ಮತ್ತೊಂದು ಹೇಳ್ತೀನೆ ಘಟಿಂಗರ
ಸಹವಾಸ **ಮಾಡಬಾರದು**.
ಮಾಡಿದ್ರೆ ಮಾಡ್ಕೊಳ್ಳಿ ಮತ್ತೊಂದು ಹೇಳ್ತೀನೆ ಕೆಟ್ಟ
ಮಾತನು **ಆಡಬಾರದು**."

ಮೇಲಿನ ದೃಷ್ಟಾಂತಗಳಿಂದ ಮೊದಲು ದೇಸಿಯ ಹಾಡುಗಳಲ್ಲಿ ದ್ವಿತೀಯಾಕ್ಷರ ಪ್ರಾಸವಿರಲಿಲ್ಲವೆಂಬುದು ಧೃಡಪಡುತ್ತದೆ. ಅದರ ಅವಶ್ಯಕತೆಯೂ ಇರಲಿಲ್ಲ; ತಾಳಕ್ಕೆ ಬಾರದೆ ಉದ್ದಕ್ಕೆ ಹೋಗುವ ಕಂದ ವೃತ್ತಗಳಿಗಿಂತ ತಾಳಗತಿಯಿಂದ ಕುಣಿಯುವ ಹಾಡುಗಳನ್ನು ನೆನಪಿನಲ್ಲಿಡುವುದು ಸುಲಭ. ಆದರೆ ವಿಷಮಗತಿಯ ವೃತ್ತಗಳು ವಾಚಕನ ಸ್ಮೃತಿ ಪಥದಿಂದ ಜಾರಿಹೋಗದಂತೆ ಕೃತಿಯಲ್ಲಿಯೇ ಉಪಾಯಗಳನ್ನು ಕಲ್ಪಿಸುವ ಆವಶ್ಯಕತೆ ಇರುತ್ತದೆ.

ಈ ವಿಷಯವನ್ನು ಬರೆಯುತ್ತಿರುವ ಸಂದರ್ಭಕ್ಕೆ ಸರಿಯಾಗಿಯೇ ಎಂಬಂತೆ ನನ್ನ ಪುಳ್ಳಿಯನ್ನು (ಮೊಮ್ಮಗನನ್ನು) ತೊಟ್ಟಲಲ್ಲಿಟ್ಟು, ನಾಮಕರಣಮಾಡಿ ಹಾಡುವ ಕೊಂಕಣಿಭಾಷೆಯ ಜೋಗುಳದ ಸೊಲ್ಲೊಂದು ನನ್ನ ಕಿವಿಗಳಿಗೆ ಎಷ್ಟು ಇಂಪಾಗಿ ಕೇಳಿಸುತ್ತದೆ! ಅದನ್ನು ತಾವೂ ಕೇಳಬೇಕೆಂದು ನನ್ನ ಆಸೆ—

ಜೋ ಜೋ ಜೋ ಕಂದ। ಆಡಿ ಬಾ ಮನೆಗೆ ॥
ಸಂಜೆಯ ವೇಳೆ **ಬೆಳಕು ಹಚ್ಚಿ** ॥
**ಬೆಳಕು ಹಚ್ಚಿ** ಮಾಡ್ಸೆ ನಿನ್ನ ಸೇವೆ । ರಕ್ಷಿಸು ಕಂದನ
**ರಕ್ಷಿಸು ದೇವ** ಕಂದನಂಥ . . . . . . .

(ಕೊಂಕಣಿಯ ಭಾಷಾಂತರ)

ಮೇಲಿನ ಹಾಡಿನಲ್ಲಿ ನೂಲು ಕಡಿದು ಹೋಗದಂತೆ ನುಡಿಯನ್ನು ಮತ್ತೆ ಮತ್ತೆ ಎತ್ತಿಕೊಳ್ಳುವ ರೀತಿ ನೋಡಿ. ಈ ಉಪಾಯವೇ ಮುಕ್ತಪದ ಗ್ರಹಣ. ಮುಕ್ತಪದಗ್ರಹಣದ ದೇಸಿಯ ಹಾಡುಗಳನ್ನು ಸರಾಗವಾಗಿ ಹಾಡುವಾಗ ರಾಗ ವಿರುವ ಕಾರಣ ಬೇಸರಿಕೆ ಹುಟ್ಟುವುದಿಲ್ಲವಾದರೂ, ಅಪ ಕೃಷ್ಟ ವೃತ್ತಗಳಿಗೆ ಅದರಿಂದ ಪುನರುಕ್ತಿಯ ದೋಷ ಬರುತ್ತದೆ. ಇದರ ನಿವಾರಣೆಗಾಗಿ ಉಭಯ ಭಾಷಾಕವಿಗಳು ಮಾಡಿದ ಸುಲಭ ಸಾಧನೆಯೆ ಪ್ರಾಸ. ಕನ್ನಡ ಪ್ರಾಸವು ಪುರಾತನ ಮಾರ್ಗ ಕವಿಗಳು ತಮ್ಮ ಕಂದ ವೃತ್ತಗಳ ಸೆರಗಿನಲ್ಲಿ ಕಟ್ಟಿದ ನುಡಿಗಂಟು. ಈ ಗಂಟುಗಳಲ್ಲಿ ಕಾಲಹೋದ ಹಾಗೆ ಪ್ರಥಮಾಕ್ಷರಕ್ಕಿಂತ ದ್ವಿತೀಯಾಕ್ಷರ ಪ್ರಾಸವೇ ಪದ್ಯ ರಚನೆಗೆ ಅನುಕೂಲವೂ ನೆನಪು ಹುಟ್ಟಿಸುವುದಕ್ಕೆ ಸುಲಭವೂ ಎಂಬಂಶವು ಗೊತ್ತಾದ ತರುವಾಯ ದ್ವಿತೀಯಾಕ್ಷರ ಪ್ರಾಸವನ್ನು ಮೀರಲಾಗದೆಂದು ವಿಧಿಯುಂಟಾಯಿತು. ಕನ್ನಡಕ್ಕೆ ಸತತಂ ಪ್ರಾಸಂ ಎಂಬ ಕಟ್ಟಾಜ್ಞೆಯು ಸಂಸ್ಕೃತಕ್ಕೆ ಸಲ್ಲದು; ಅದು ದೇಸಿ ರೀತಿಯ ಜನಪದ ಸಾಹಿತ್ಯಕ್ಕೂ ತಗಲುವುದಿಲ್ಲವೆಂಬ ಅಭಿಪ್ರಾಯವನ್ನು ಕೊಡುತ್ತದಷ್ಟೆ! ಕಾಲಾನಂತರ ಪುರಾತನ ಕೃತಿಮಾರ್ಗದ ದ್ವಿತೀಯಾಕ್ಷರ ರೂಪದ ಪ್ರಾಸ ನಿಯಮವು ದೇಸಿಯ ಹಾಡುಗಳಿಗೂ ಅನುಕರಣ ಫಲವಾಗಿ ಬಂದಿರಬೇಕು. ನನ್ನನ್ನು ಕ್ಷಮಿಸಿರಿ.

ಪ್ರಾಸವನ್ನು ಕುರಿತು ಇಂಥ ಅಪ್ರಾಸಂಗಿಕ ವಿಚಾರಕ್ಕೆ ಕಾರಣವೇನೆಂದರೆ—ಒಂದು ಕಾಲದವರಿಗೆ ಊರಿಗೋಲಂತೆ ಆವಶ್ಯಕವಾದ ಪ್ರಾಸವು ಇನ್ನೊಂದು ಕಾಲದವರ ಕೈ ಬಿಡದ ಅಲಂಕಾರದ ಬಡಿಗೆ ಕೋಲಾಯಿತು. ಪ್ರಾಸಮೋಹಿತರಾಗಿ ಅನೇಕ ಕವಿಗಳು ಜನರಂಜನೆಗೊ, ಆತ್ಮಸಂತೋಷಕ್ಕೊ ಪದ್ಯಗಳನ್ನು ಪ್ರಾಸಗಳಿಂದಲೂ ಯಮಕಗಳಿಂದಲೂ ತುಂಬಿ, ತಮ್ಮ ತರುವಾಯ ಬಂದವರಿಗೆ ಒಂದು ಹಾಳು ಮೇಲ್ಪಂಕ್ತಿಯನ್ನು ಬರೆದು ಕೊಟ್ಟರು. ಇಂಥ ಪದ್ಯಗಳ ಅನುಕರಣದಿಂದ ಇತ್ತಲಾಗಿನ ಯಕ್ಷಗಾನದಲ್ಲಿಯೂ, ಗದ್ಯ ಶೈಲಿಯಲ್ಲಿಯೂ ಒಂದು ವಿಲಕ್ಷಣತೆ ಪ್ರಾಪ್ತವಾಗಿದ್ದಿತು. ನವೀನ ಕೃತಿ ರಚನೆಯು ಮಾಡಿದ ಪ್ರಾಸತಿರಸ್ಕರಣೆಯಿಂದ ಕನ್ನಡ ಶೈಲಿಯಲ್ಲಿ ಸಹಜತೆ, ಸರಳತೆ, ಸ್ಪಷ್ಟತೆ, ಇವು ತಲೆದೋರುವ ಶುಭಕಾಲ ಒದಗಿದೆ. ಪ್ರತಿಭೆಯಿಲ್ಲದೆ ಪ್ರಾಸಬದ್ಧವಾದ ಕವಿತೆಗಳು ಹಳೆಯವಾದರೂ ಸರ್ವಮಾನ್ಯವಾಗಿ ಉಳಿಯಲಾರವು. ಹಾಗೆಯೇ ನವೀನ ಕವಿತೆಗಳಲ್ಲಿ ಕೆಲವಾದರೂ ಪ್ರಾಸ ಬಿಟ್ಟವೆಯೆಂಬ ಒಂದೇ ಕಾರಣದಿಂದ ಅಳಿಯಲಾರವು.

ನಾವು "ಹೊಸದಾರಿ" "ಹೊಸಕವನ" ಎಂದು ಹೇಳಿ, "ಅವು ದೂಷ್ಯ" ಎಂಬ ತೀರ್ಮಾನ ಮಾಡಿ, ಕವನಕಾರರನ್ನು ಶಿಕ್ಷೆಗೆ ವಿಧಿಸುವ ಮೊದಲು, ಅವರಲ್ಲಿಯೂ ಅನೇಕರು ಹಳಗನ್ನಡದಲ್ಲಿ ನುರಿತವರು, ಪುರಾತನ ಮಾರ್ಗದಲ್ಲಿ ನಡೆದವರು, ಸಂಸ್ಕೃತ ವ್ಯಾಸಂಗಶೀಲರು, ಇತರ ವಾಙ್ಮಯಗಳ ಪರಿಚಯವಿದ್ದವರು, ಇಂಥ ಮಹನೀಯರು ಬೇಕೆಂದು ಹೊಸದಾರಿಯಲ್ಲಿ ಕಾಲೂರಿ ಇಲ್ಲದ ಗೊಂದಲವನ್ನು ಎಬ್ಬಿಸಿ ಬಿಡತಕ್ಕ ಕನ್ನಡ ದ್ರೋಹಿಗಳು ಸರ್ವಥಾ ಆಗಲಾರದೆಂಬುದನ್ನು ಗಮನಕ್ಕೆ ತಂದುಕೊಳ್ಳಬೇಕು. ನನ್ನ ಸ್ವಂತ ಅನುಭವ ಹೇಳುವುದಾದರೆ-೨೫ವರ್ಷಗಳ ಹಿಂದೆ ನನ್ನ ಸ್ನೇಹಿತರೊಬ್ಬರು ಬರೆದ ಒಂದು ಹೊಸ ಕವನವನ್ನು ಕಂಡು ನನಗೆ "ಮುದೀ ಮುದುಕಿಯ ಮೈಮೇಲೆ ಮುಸುರಿ ಚೆಲ್ಲಿದಂತಾಯಿತು." ಅನಂತರ ನಮ್ಮೊಳಗಾದ ಈ ವಿಷಯದ ಚರ್ಚೆಯಲ್ಲಿ ಅವರು ಜಯಿಸಿದರು. ಅವರ ಪ್ರಾಸ ಮತವನ್ನು ನಾನು ಒಪ್ಪಿಕೊಂಡೆನು; ಅವರು ಸೋತಿದ್ದರೆ ನಮ್ಮ ಜಿಲ್ಲೆಯಿಂದ ಕನ್ನಡಕ್ಕೆ ಸಲ್ಲತಕ್ಕ ಸಾಹಿತ್ಯಸೇವೆಯಲ್ಲಿ ಒಂದಂಶವೇ ತಪ್ಪಿಹೋಗುತ್ತಿದ್ದಿತೋ ಏನೋ ಹೇಗೆ ಹೇಳಬಹುದು? ಶ್ರೀಮಾನ್ ಗೋವಿಂದ ಪೈಯವರು ಅಂದು ಸ್ವದೇಶಾಭಿಮಾನಿಯಲ್ಲಿ ಪ್ರಕಟಿಸಿದ ಕೃತಕ ರೀತಿಯ ಕವನ ಎಲ್ಲಿ? ಇಂದು ಜಯಕರ್ಣಾಟಕದ ವಿಶೇಷ ಸಂಚಿಕೆಯಲ್ಲಿ ಪ್ರಸಿದ್ಧ ಪಡಿಸಿದ "ಯಾರೆಂಬರು ಮುಗಿದುವೆಂದು ಬವರಂ" ಎಂಬ ಕೃತಿ ಎಲ್ಲಿ? ಈ ಹೊಸ ಕವನದಲ್ಲಿ ಕವಿಯ ಕೈವಾಡ, ಧ್ವನಿ, ಧಾಟಿ, ಹುರುಪು, ಹೊಸತನ, ಎಷ್ಟು ಅಂತಸ್ತು ಮೇಲೇರಿ ಹೋಗಿವೆ ಎಂದು ನಾನೇ ಹೆಚ್ಚಳಪಡುತ್ತಿದ್ದೇನೆ. ಕೃತಿಕಾರ್ಯಕ್ಕೆ ಆವಶ್ಯಕವಾದ ಕಾವ್ಯಾಭ್ಯಾಸ, ಪ್ರಪಂಚ ಜ್ಞಾನ, ಪ್ರಕೃತದ ಪರಿಸ್ಥಿತಿ, ಸತ್ಯಪ್ರೀತಿ, ಇವೆಲ್ಲಾ ಅನೇಕ ಹೊಸ ಕವಿತೆಗಳಲ್ಲಿ ಒಡೆದು ಮೂಡುತ್ತವೋ ಇಲ್ಲವೋ ಎಂಬುದನ್ನು ವಿವೇಚಿಸಿದನಂತರ "ಹೊಸದು ಅಸಾಧು" ಎಂದು ನಿರ್ಧರಿಸಿರಿ! ಶ್ರೀಮಾನ್ ಪೈಯವರು ಮಾತ್ರವೇ ಅಲ್ಲದೆ ಅವರಂತೆಯೂ ಅವರನ್ನು ಮಿಗಿಸಿಯೂ ಉತ್ತಮ ಭಾವಗೀತಗಳನ್ನು ರಚಿಸಿದ ಇತರ ಮಹನೀಯರ ಹೆಸರುಗಳನ್ನು ನಾನು ಸಮಯಸಂಕೋಚತೆಯಿಂದ ಇಲ್ಲಿ ಎತ್ತಿ ಹೇಳಲಿಲ್ಲ; ಕ್ಷಮಿಸಬೇಕು.

ಆದರೆ ಹೊಸ ಕವಿತೆಗಳೆಲ್ಲಾ ಮೇಲ್ತರಗತಿಯವೆಂದು ಯಾರೂ ಹೇಳಲಾರರು. ಅವುಗಳಲ್ಲಿ ಹೆಚ್ಚಿನವುಗಳು ಪ್ರಕಟವಾಗದಿದ್ದರೆ ಒಳ್ಳೆಯದಿದ್ದಿತು. ಅವನ್ನು ನಮ್ಮ ಕಣ್ಣು ಕುಕ್ಕುವಂತೆ ಕಂಡ ಕಡೆ ಪ್ರಕಟಿಸುವುದಕ್ಕೆ ಹುಡುಗರಿಗಾಗಿ ನಮ್ಮಲ್ಲಿ ಪತ್ರಿಕೆಗಳಿಲ್ಲದಿರುವುದೇ ಮುಖ್ಯ ಕಾರಣ. ಅವು ನಡೆ ಕಲಿಯುವ ಮಕ್ಕಳ ತಪ್ಪು ಹೆಜ್ಜೆಗಳು, ಬಾಲಕವಿತೆಯು ತನ್ನ ಅಭ್ಯಾಸಕ್ಕಾಗಿ ಮಾಡುವ ಕರಡು ನಕಲುಗಳು, ಹೀಗೇತಕ್ಕೆ ಭಾವಿಸಬಾರದು. ಇಂಥ ಕುರುಡುಕವನಗಳಿಂದ ಪದ್ಯಗಾರನ ಕೈ ಕುದುರುವುದು. ಈ ಕುಸ್ತಿಯ ಸಾಧಕವಿಲ್ಲದೆ ಕವಿ ರನ್ನನು 'ಗದಾಯುದ್ಧ'ಮಾಡಿದನೆಂದು ಯಾರು ಹೇಳಿಯಾರು? ನಮ್ಮ

ಜಿಲ್ಲೆಯಲ್ಲಂತು ಇಂಥ ಅಭ್ಯಾಸಗಳು ಹುಡುಗರಿಗೆ ಬೇಕಾಗಿವೆ. ಅವುಗಳಿಂದ ಪದಜ್ಞಾನ, ಛಂದಸ್ಸಿನ ತಿಳಿವಳಿಕೆ, ವಾಚನಪ್ರೀತಿ, ಇವು ಹುಡುಗರಿಗೆ ಸ್ವಲ್ಪವಾದರೂ ಲಭಿಸುತ್ತವೆ.

ಹೊಸಗನ್ನಡದ ನವೀನ ಗ್ರಂಥಾವತರಣದಿಂದ ಕರ್ನಾಟಕ ಸಂಸ್ಕೃತಿಗೆ ಭಂಗಬಂದೀತೆಂಬುದೊಂದು ಸಂಶಯವು ಪೂರ್ಣ ನಿರಾಧಾರವಾದುದಲ್ಲ. ಪ್ರಪಂಚದ ಪರಿಸ್ಥಿತಿಯನ್ನು ಈಗಿನಕವಿಯು ಅಂತರ್ದೃಷ್ಟಿಯಿಂದ ನೋಡಿ, ತಿದ್ದಿ,ಭಾವೋದ್ರೇಕದಿಂದ ರೂಪುಗೊಳಿಸುವ ಆತನ ಹೊಸಕವನ ಜಾಲದಲ್ಲಿ ನಮ್ಮ ಯುವಕರ ಮನಸ್ಸು ಸಿಕ್ಕಿ ಬಿದ್ದುದೇ ಆದರೆ, ಮುಂದೆ ಜಾತಿಭ್ರಷ್ಟತೆ, ಧರ್ಮಗ್ಲಾನಿ, ರಾಜ್ಯ ಕ್ರಾಂತಿಗಳು ಉಂಟಾಗುವುವೋ ಏನೋ ಎಂಬ ಭೀತಿಯು ನಮ್ಮಲ್ಲಿ ಅನೇಕರ ಎದೆಯನ್ನು ದಡದಡಿಸುತ್ತದೆ. ನಮ್ಮ ಪೂರ್ವದ ಪುರಾಣೇತಿಹಾಸಗಳಲ್ಲಿ ಸಂಪೂರ್ಣ ವಿಶ್ವಾಸಾಭಿಮಾನಗಳುಳ್ಳವರ ಮನಸ್ಸಿಗೆ ಇಂದಿನ ನವೀನ ನಾಟಕ ಕಲಾಚತುರತೆಯ ಪಾತ್ರ ಸೃಷ್ಟಿಯು ಸಮ್ಮತವಾಗುವುದಿಲ್ಲ. ಕನ್ನಡದಲ್ಲಿ ಪೂರ್ವದಿಂದ ನಾಟಕ ರಚನೆಯೇ ಕಡಮೆ. ಇಂದಿನ ನಾಟಕಗಳಲ್ಲಿಯ ಹಿರಣ್ಯಕಶ್ಯಪುವಿನ ಪಿತೃಧರ್ಮ, ದುರ್ಯೋಧನನ ಮಹಾನುಭಾವತ್ವ,ನಾರದನ ಗರ್ವಭಂಗ,ಅಶ್ವತ್ಥಾಮನ ಆತ್ಮಹತ್ಯೆ, ಹಿಡಿಂಬಿಯ ಸಾತ್ವಿಕ ಸ್ವಭಾವ, ಮಂಡೋದರಿಯ ಧರ್ಮಾಧರ್ಮ ವಿಚಾರ, ಇವೆಲ್ಲಾ ಪೂರ್ವೇತಿಹಾಸಗಳ ಮೇಲೆ ನಾಟಕಗಾರರು ನಡೆಸಿದ ಅತ್ಯಾಚಾರಗಳೆಂದು ನೆನೆಸಿ ಕೆಲವರು ಅಸಮಾಧಾನಗೊಳ್ಳುವರು. ಇಂಥವರಿಗೆ ಕಾಳಿದಾಸನು ಸೃಷ್ಟಿಸಿದ ದುಷ್ಯಂತನು ಮಹಾಭಾರತದ ದುಷ್ಯಂತನಲ್ಲವೆಂದೂ, ಕುಮಾರವ್ಯಾಸನು ಚಿತ್ರಿಸಿದ ಕೃಷ್ಣನು ಲಕ್ಷ್ಮೀಶನ ಕೃಷ್ಣನಿಂದ ತೀರ ಭಿನ್ನನೆಂದೂ ಶ್ರುತಪಡಿಸಿ, 'ಅಳವಗ್ಗಳಮೋ ಕವೀಂದ್ರರಾ' ಎಂಬ ಆಪ್ತವಾಕ್ಯದಿಂದ ಸ್ವಲ್ಪ ಸಮಾಧಾನ ಹೇಳಿದರೂ ಅನೇಕ ಹೊಸ ಕವನಗಳು ಭಯಾವಹವಾದ ಪರಮತ ದುರ್ಬೋಧನೆಯ ಕುಯುಕ್ತಿಗಳು ಎಂದು ಸುಮ್ಮನೆಆಕ್ಷೇಪಿಸುವುದುಂಟು.'ಹುಚ್ಚನೀನು ಹಳ್ಳಿಗೋಡು, ದೀನ ಜನರ ಪಾಡನೋಡು; ಹರಿಗೆ ಎಂದು ಗುಡಿಯನೊಂದ ಕಟ್ಟುತಿರುವೆಯಾ? ದೀನಗಿಂತ ದೇವ ಬಡವನೆಂದು ಬಗೆದೆಯಾ?' ಎಂಬದಾಗಿ ಅಸ್ಪೃಶ್ಯರ ಪರವಾಗಿ ಹೊಸ ಕವಿಗಳು ಮಾತಾಡಿದರೆ— ಲೋಕ ಸಂಪರ್ಕವಿನಿತಲ್ಲದೆ 'ತತ್ವದ ಶಾಸ್ತ್ರದ ಬಲೆಗಳ ಹೆಣೆಯುತ ಜಾಡರ ತೆರದಿಂದಲ್ಲಿಯೆ ಸುಳಿಯುತ' ಎಂಬದಾಗಿ ನಮ್ಮ ಶಾಸ್ತ್ರಿಗಳಿಗೆ ಅವಹೇಳನ ಮಾಡಿದರೆ— 'ಪಾಳು ದೇಗುಲದಲ್ಲಿ ಪೂಜೆಯಂ ಕೈಕೊಳುತ ಮೌನದಿಂ ಕುಳಿತಿಹನು ಕಲ್ಲುಕಟ್ಟಡದಲ್ಲಿ ನೆಲೆಯಾಗಿ ನಿಂದಿರಲು ದೇವನೇಂ ಬಂದಿಯೇಂ?' ಎಂಬದಾಗಿ ಮೂರ್ತಿಪೂಜೆಯನ್ನು ದೂಷಿಸಿದರೆ—'ಈ ಧರ್ಮ ನಮಗಿನ್ನು ಹೆನ್ಮಾರಿಯಾಗಿಹುದು ಈ ಧರ್ಮ ನಮಗಿನ್ನು ಸಂಕೋಲೆಯಾಗಿಹುದು' ಎಂದು ಧರ್ಮವನ್ನು ನಿಂದಿಸಿದರೆ—'ಹಳೆಯ ಕಾಲದ ತಂದೆ ತಾತಂದಿರ ದೇವರುಗಳಳಿದು ಹೋಗುವ ಕಡಿದು ಕಾಲ ಬರುತಿಹುದು'—ಎಂಬದಾಗಿ ನಾಸ್ತಿಕನಂತೆ ಹಾಡಿದರೆ—'ದೇವರದೊಂದು ಗೋರಿಯ ಕಟ್ಟಿ ಧರ್ಮದ ಧೂಪಕೆ ಬೆಂಕಿಯನಿಕ್ಕಿ' ಎಂಬದಾಗಿ ದೈವದ್ರೋಹವನ್ನೇ ಸಾರಿದರೆ—'ಹೀಗೆ ಶತಮಾನ ಶತಮಾನ ಕಾಲದಿಂದ ನಮ್ಮ ಹಿರಿಯರು ರಕ್ಷಿಸಿಕೊಂಡು ಬಂದು ನಮ್ಮ ಕೈಗೆ ಒಪ್ಪಿಸಿರುವ ಸಂಸ್ಕೃತಿಯ ಬೇರಿಗೇ ಬೆನ್ನೀರು' ಅಲ್ಲವೇ ಈ ಹೊಸ ಸಾಹಿತ್ಯ? ಈ ಆಕ್ಷೇಪಣೆಗಳಿಗೆ ಸಮಾಧಾನ ಇಷ್ಟೆ— ಮಾತುಗಳನ್ನು ಕವಿಗಳಿಟ್ಟ ಸಂದರ್ಭದಲ್ಲಿಯೇ ಓದಬೇಕು; ಅಲ್ಲಿಂದ ಕಳಚಿದರೆ ಅವು ವಿಪರೀತಾರ್ಥ ಕೊಡುತ್ತವೆ. ನಮ್ಮ ಸಂಸ್ಕೃತಿಗೆ ಇನ್ನೊಂದು ದೇಶವಾಗಲಿ ಸಾಹಿತ್ಯವಾಗಲಿ ಕೊಡತಕ್ಕ ಜ್ಞಾನದಿಂದ ಬಾಧೆಯಿಲ್ಲ. ಆದರೆ ಜ್ಞಾನ ಮತ್ತು ಸಂಸ್ಕೃತಿ, ಇವುಗಳೊಳಗಣ ಭೇದವನ್ನು ಮಾತ್ರ ನಾವು ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾಗಿದೆ.

ಜ್ಞಾನ ಮತ್ತು ಸಂಸ್ಕೃತಿ, ಇವೆರಡು ಮಾತುಗಳು ಕನ್ನಡದಲ್ಲಿ ಸಮಾನಾರ್ಥದಲ್ಲಿ ಬಳಕೆಯಾಗಿದ್ದರೂ, ಭಿನ್ನಾರ್ಥಕಗಳಾಗಿವೆ. ಒಂದು ಜನಾಂಗದ ಜ್ಞಾನ ಬೇರೆ, ಸಂಸ್ಕೃತಿ ಬೇರೆ. ಜ್ಞಾನವೆಂದರೆ ಆ ಜನಾಂಗದ ಜನರು ತಿಳಿದಿರುವ ಗಣಿತ ಸಿದ್ಧಾಂತಗಳ, ವಿಜ್ಞಾನದ ಶೋಧಗಳ, ಕಸಬು ಕೈಗಾರಿಕೆಗಳ ಒಟ್ಟು ತಿಳಿವಳಿಕೆ. ಒಂದು ಜನಾಂಗದ ಸಂಸ್ಕೃತಿಯೆಂದರೆ ಅದರ ಧರ್ಮ, ಆಧ್ಯಾತ್ಮಿಕ ವಿಚಾರ, ನೀತಿಕಲ್ಪನೆ, ಆಹಾರ ವ್ಯವಹಾರಗಳು ಇತ್ಯಾದಿ. ಮಾನವ ವರ್ಗದ ಸಂಸ್ಕೃತಿಯು ಮೊಟ್ಟಮೊದಲು ಜ್ಞಾನದಿಂದ ಜನಿಸಿ, ಮನುಷ್ಯನು ಮುಂದುವರಿದು ಹೇಗೆ ಹೇಗೆ ಸಮಾಜಸ್ಥಿತಿಯನ್ನು ಪಡೆಯುತ್ತಾನೆಯೋ ಹಾಗೆ ಹಾಗೆ ಅಲ್ಲಿಯ ಸಂಸ್ಕೃತಿಯು ಬೇರೆಯಾಗಿ ನಿಂತು, ತನಗೆ ಅನುಗುಣವಾದ ಅನುರೂಪವಾದ ಸ್ಥಿತಿಯನ್ನು ತಾಳುವುದು. ಹೀಗಾದುದರಿಂದ ಒಂದೊಂದು ಜನಾಂಗದ ಸಂಸ್ಕೃತಿಯು ಒಂದೊಂದು ವಿಧವಾಗಿರಬಹುದು. ಆದರೆ ಜ್ಞಾನದಲ್ಲಿ ಮಾತ್ರ ವೈವಿಧ್ಯವಿಲ್ಲ; ಅದು ಎಲ್ಲ ಕಾಲದಲ್ಲಿಯೂ, ಎಲ್ಲ ಜನಾಂಗಗಳಲ್ಲಿಯೂ ಒಂದೇಯಾಗಿರುತ್ತದೆ. ಜ್ಞಾನವನ್ನು ಪರರಿಗೆ ಕೊಟ್ಟು ಪರರಿಂದ ತರಬಹುದು; ಆದರೆ ಸಂಸ್ಕೃತಿಯ ಪ್ರಸಾರಣೆ ಸುಲಭವೂ ಅಲ್ಲ, ಸಾಧ್ಯವೂ ಅಲ್ಲ. ಒಂದು ರಾಷ್ಟ್ರದ ಉನ್ನತಿಗೆ ಜ್ಞಾನ ಮತ್ತು ಸಂಸ್ಕೃತಿ ಇವೆರಡರ ಅಭಿವೃದ್ಧಿಯೂ ಅಗತ್ಯ. ಆದರೆ ರಾಷ್ಟ್ರೋನ್ನತಿಯು ಜ್ಞಾನವನ್ನು ಹೊರತು ಸಂಸ್ಕೃತಿಯನ್ನು ಅಷ್ಟು ಅವಲಂಬಿಸಿರುವುದಿಲ್ಲ. ಹೀಗಿರುವುದರಿಂದ,

ಸಂಸ್ಕೃತಿಯಿಲ್ಲದೆ ಬರಿಯ ಜ್ಞಾನಾಭಿವೃದ್ಧಿಯ ಬಲದಿಂದಲೇ ಮೇಲೇರಿದ ರಾಷ್ಟ್ರೋನ್ನತಿಯು ಏಗುಪ್ತದ ಉನ್ನತಿಯಂತೆ ಚಿರಕಾಲ ಬಾಳಲಾರದು. ಯಾವ ಜನಾಂಗವು ತನ್ನ ಸಂಸ್ಕೃತಿಯ ಜಾಡ್ಯಸ್ಥಿತಿಯ ನಿವಾರಣೆಗಾಗಿ ಪರರಿಂದಾದರೂ ಜ್ಞಾನೌಷಧವನ್ನು ತರುವುದಕ್ಕೆ ಹಿಂಜರಿಯುತ್ತದೆಯೋ ಆ ಜನಾಂಗದ ಶ್ರೇಯೋಭಿವೃದ್ಧಿಯೂ ಬಹಳ ದುಸ್ತರವಾಗುವುದು. ಜ್ಞಾನವು ನಿರ್ಗುಣ, ಅದನ್ನು ಇತರರಿಂದ ಪಡೆಯಲೇಬೇಕು*. ಇಂಥ ಜ್ಞಾನ ಸ್ವೀಕಾರವೂ ಪ್ರಸಾರವೂ ರಾಷ್ಟ್ರದ ಗ್ರಂಥಕಾರರಿಂದ ನಡೆಯಬೇಕು. ಜ್ಞಾನ ಸ್ವೀಕಾರಕ್ಕೆ ಸಮ್ಮತವಿಲ್ಲದುದರಿಂದ ಹಿಂದಿನ ಕನ್ನಡ ಗ್ರಂಥಗಳು ಮೂಲೆಯ ಪಾಲಾಗಿ ಅವುಗಳ ಸ್ಥಾನದಲ್ಲಿ ದಾಸರ ಪದಗಳು ಬಂದುವು. ಆ ಕೃತಿಕಾರ್ಯವು ಅಂದಿಗೆ ಹರಡಬೇಕಾದ ಜ್ಞಾನವನ್ನು ಬೋಧಿಸಿ, ನಮ್ಮ ಸಂಸ್ಕೃತಿಯ ರಕ್ಷಣೆಯನ್ನು ಮಾಡಿತು. ಇಂದಿನ ಕೃತಿಕಾರರು ಅನುಕರಿಸುವುದು ಪಾಶ್ಚಾತ್ಯ ಜ್ಞಾನವನ್ನು, ಸಂಸ್ಕೃತಿಯನ್ನಲ್ಲ; ಅದು ಸಾಧ್ಯವಿಲ್ಲ, ಇದ್ದರೂ ಕನ್ನಡ ವಾಙ್ಮಯವು ಇಂಗ್ಲಿಷ್ ಸಂಸ್ಕೃತಿಯ ಅನುಕರಣ ಗ್ರಹಣ ಕಾಲವನ್ನು ಸುಮಾರು ೫೦ ವರ್ಷಗಳ ಹಿಂದೆಯೇ ಕಳೆದು ಬಿಟ್ಟು, ಇಂದು ಜ್ಞಾನದ ತೀರ್ಥಸ್ನಾನಕ್ಕಾಗಿ ಇಳಿದಿದೆ. ಹಿಂದಿನ ದಾಸಕೂಟದವರೂ, ಕವನಗಾರರೂ ದೇವರ ವಿಷಯವಾದ ಸಂದೇಹ, ನಿರಾಶೆ, ಸಂಕಟ, ನಶ್ವರತೆ, ಜೀವದ ರಹಸ್ಯ ಇವುಗಳನ್ನು ತಮಗೆ ತಿಳಿದಂತೆ ಹಾಡಿದ ಹಾಗೆ, ಇಂದಿನವರು ಇಂದಿನ ಪರಿಸ್ಥಿತಿಗೆ ಅನುಗುಣವಾಗಿ ಹಾಡುತ್ತಿರುವರು.

'ಪಡುವಣದ ಶಕ್ತಿಯಲಿ ಮೂಡಣದ ಭಕ್ತಿ' ಬೆರಸುವ ಹಾರೈಕೆ,—'ಸರ್ವತೋಮುಖದಲ್ಲಿ ಮೈತ್ರಿಯಿಂ ಬೆಳಸುವಾ ಸಂಕಲ್ಪ, ಪೊಸಪರಿಯ ರಾಜ್ಯವಂ ಕಟ್ಟುವಾ ಸಂಕಲ್ಪ,'—'ಸರಿಯಾಗಿ ನಡೆವುದಕೆ ಬಾರದಿರುವೆಳಗೂಸ ಪಿಡಿದೆತ್ತಿಕೊಂಡು ಮೇಲ್ಗಡೆಗೊಯ್ವನು' ಎಂಬ ಧೈರ್ಯ,—

ಇಂದೇನೊ ಮುಂದೇನೊ, ಮುನ್ನೆ ಆಳ್ ಕಾಣನ್
ಬಂದುದನೆ ಕೊಂಡುಂಡು ತಾಳ್ದವನೆ ಜಾಣನ್
ರುದ್ರನೊಲ್ದೊಡೆ ಉಳಿವು
ಒಲ್ಲದೊಡೆ ಒಡನಳಿವು
ತಟ್ಗಿ ನಡೆದೊಡೆ ರುದ್ರನೊಲ್ಲದೆಯೆಮಾಣನ್
ಅಳವಳಿತು ನಡೆಯೆ ಶಿವನೊಲ್ಲದೆಯೆ ಮಾಣನ್

ಇಂಥ ಹಾಡುಗಳೆಲ್ಲ ನಮ್ಮ ಹಳೆಯ ಸಂಸ್ಕೃತಿ ಬೆಂಬಲವನ್ನೇ ನೆಮ್ಮಿನಿಂತಿವೆ. ಅವುಗಳಿಂದ ಕರ್ಣಾಟಕ ಸಂಸ್ಕೃತಿ ಭಂಗವಾಗಲಾರದು. ಭಂಗಬರುವುದಾದರೆ ಅದಕ್ಕೆ ನಮ್ಮವರ ಅವಿದ್ಯೆಯೇ ಕಾರಣ, ಪಾಶ್ಚಾತ್ಯ ಜ್ಞಾನವಲ್ಲ.

ಕನ್ನಡದಲ್ಲಿ ಹೊಸಸಾಹಿತ್ಯ ರಚನೆಯ ತಿಳಿವಳಿಕೆಗೂ ಅದರ ಮಂದಗತಿಗೂ ನಮ್ಮ ಹಳ್ಳಿಗಳ ಶೋಚನೀಯವಾದ ಸ್ಥಿತಿಯೇ ದೊಡ್ಡದಾದ ಆತಂಕ. ಹಳ್ಳಿಯಲ್ಲಿ ಸೇಕಡಾ ೯೦ ಮಂದಿ ಜನರು ಬರೆಹ ಬಾರದೆ, ಕೆಲಸವಿಲ್ಲದೆ, ಚೆನ್ನಾದ ಬಾಳು ಏನೆಂಬುದನ್ನು ಅರಿಯದವರು. ಸಾಲದುದಕ್ಕೆ ಹಳ್ಳಿಯಲ್ಲಿ ಬಡತನವು ಚಕ್ಕಂಬಕ್ಕಳು ಹಾಕಿ ಕುಳಿತುಕೊಂಡಿರುತ್ತದೆ. ಹೀಗೆ ದೇಶೋನ್ನತಿಯ ಮಾರ್ಗದಲ್ಲಿ ಮೊದಲೇ ತಡೆಗಟ್ಟಿ ನಿಂತಿರುವ ಬಡತನದ ಬಂಡೆದಾಟಿ, ಕೋಟೆ ಹಿಡಿದು, ಮುಂದುವರಿಯುವುದಕ್ಕೆ ಎಷ್ಟು ಕಾಲ ಹಿಡಿಯುವುದೆಂದು ಲೆಕ್ಕಿಸಲು ಕೂಡ ಬರುವದಿಲ್ಲ. ಭಾಷೆ ಚೆನ್ನಾಗಿ ಬೆಳೆಯುವುದು ಹೇಗೆ? ಸಾಹಿತ್ಯ ಉತ್ಕೃಷ್ಟವಾಗುವುದು ಹೇಗೆ? ಮುಂದಿನ ಬೆಳೆ ಒಳ್ಳೆಯದೂ ಹುಲುಸೂ ಆಗಬೇಕಾದರೆ ಇಂದಿನ ಸಸಿಗಳನ್ನು ಗಮನಿಸಬೇಕು. ಕನ್ನಡ ಮಕ್ಕಳ ವಿದ್ಯಾಭ್ಯಾಸವು ಮುಖ್ಯವಾಗಿ ಪ್ರಾಥಮಿಕ ವಿದ್ಯಾಭ್ಯಾಸವು ಒಂದು ಸರಿಯಾದ ಕ್ರಮದಲ್ಲಿ ನಡೆಯುವ ಏರ್ಪಾಟು ಬೇಕು. ಮಕ್ಕಳಿಗೆ ಇಂಥ ಪುಸ್ತಕಗಳನ್ನೇ ಓದಿಸಬೇಕು, ಇಂಥ ಪುಸ್ತಕಗಳನ್ನೇ ರಚಿಸಬೇಕು, ಇಂಥ ಚಿತ್ರಗಳಿರಬೇಕು, ಹುಡುಗರಿಗೆ ಇಂಥ ಪುಸ್ತಕಗಳ ಸಂಖ್ಯೆ ಕಡಮೆ, ಗದ್ಯಪುಸ್ತಕಗಳೂ ವಿಜ್ಞಾನ ಬೋಧೆಯ ಪುಸ್ತಕಗಳೂ ಅಗತ್ಯ, ಎಂಬೀ ವಿಷಯಗಳನ್ನು ಹಿಂದಿನ ಅಧ್ಯಕ್ಷ ಮಹಾಶಯರುಗಳು ಕೂಲಂಕಷವಾಗಿ ಸಮಾವಲೋಕಿಸಿ ಉತ್ತಮ ಸೂಚನೆಗಳನ್ನು ಕೊಟ್ಟಿರುವುದರಿಂದ ಅದನ್ನು ಕುರಿತು ನಾನು ಇಲ್ಲಿ ಹೆಚ್ಚು ಹೇಳುವ ಆವಶ್ಯಕತೆಯಿಲ್ಲ. ಮಕ್ಕಳ ಪುಸ್ತಕಗಳು ಯಾವುದೇ ಇರಲಿ. ಅಕ್ಷರ ಸಂಯೋಜನೆಯ (Spelling) ಅವಾಂತರವು ಇರಲೇಬಾರದು; ಆಯಾ ಪ್ರಾಂತದಲ್ಲಿಯೇ ರೂಢಿಯಲ್ಲಿದ್ದು ಚಿಕ್ಕ ಮಕ್ಕಳು ಸುಲಭವಾಗಿ ತಿಳಿಯತಕ್ಕ ಶಬ್ದಗಳು ಪುಸ್ತಕಗಳಲ್ಲಿ ಇರಲಿ, ವಾಕ್ಪ್ರಚಾರಗಳು ಇರಲಿ; ಆದರೆ ಅವುಗಳಲ್ಲಿಯ ಅಕ್ಷರ ಯೋಜನೆ, ಮಕ್ಕಳ ಕ್ರಮಿಕ ಪುಸ್ತಕಗಳ ಮಟ್ಟಿಗಾದರೂ, ಭಿನ್ನವಾಗದೆ ಕರ್ಣಾಟಕದಲ್ಲೆಲ್ಲಾ ಏಕರೂಪವಾಗಿರತಕ್ಕದ್ದು. ಇಂಥ ಏಕರೂಪತೆಯು ಬಾಸೆಲ್ ಮಿಶ್ಯನಿನವರಿಂದ ಪ್ರಾರಂಭವಾಗಿ ಮುದ್ರಣಾಲಯದ ಸಹಾಯದಿಂದ ಬಲಗೊಂಡು, ಮಂಗಳೂರು ಪುಸ್ತಕಗಳಲ್ಲಿ ಬಹುಕಾಲ ದೃಢವಾಗಿ ನಿಂತಿದ್ದಿತು. ಈ ಕ್ರಮವು ೧೯೦೦ರಿಂದ ಇತರ ಕಡೆಯ ಗ್ರಂಥಗಳ ಸಂಪರ್ಕದ ನಿಮಿತ್ತ ಸ್ವಲ್ಪಕಾಲ ಸಡಿಲವಾಗಿ, ಮತ್ತೆ ಇತರರ ಬರವಣಿಗೆಯನ್ನು ಕಂಡು ಅದಕ್ಕೆ ಹೊಂದಿಕೊಂಡುಹೋಗಿ, ಮುಂದೆ ೨೦ ವರ್ಷಗಳ ವರೆಗೆ ಶಾಲೆಗಳಲ್ಲಿ ಬಳಕೆಯಾಗಿದ್ದಿತು. ಅಲ್ಲಿಂದಿತ್ತ ಈ ಕಟ್ಟುಪಾಡು ಮೆಲ್ಲನೆ ಒಡೆಯುತ್ತ

*ಜ್ಞಾನೋಪಾಸನೆಯೆಂಬ ಮರಾಟ ಗ್ರಂಥದಿಂದ ಹೆಕ್ಕಿಕೊಂಡುದು.

ಒಡೆಯುತ್ತ ೧೦ ವರ್ಷಗಳಿಂದ ಈಚೆ ಅಸಹ್ಯಕವಾದ ಅವ್ಯವಸ್ಥೆಯನ್ನು ತಂದು ಬಿಟ್ಟಿದೆ. ಇದರಿಂದ ಮಕ್ಕಳ ಸುಗಮವಾದ ಅಭ್ಯಾಸಕ್ಕೆ ಅಡ್ಡಿ, ಬರವಣಿಗೆಯ ತಿಳುವಳಿಕೆಗೆ ತೊಡಕು, ಕನ್ನಡ ಭಾಷೆಯ ಮೇಲೆ ಅಸಡ್ಡೆ, ಅಷ್ಟೇ ಅಲ್ಲ, ಈ ಅನಿಶ್ಚಿತ ಸ್ಥಿತಿಯ ದುಷ್ಪರಿಣಾಮದಿಂದ ಅವರ ಎಳೆಯ ಮನೋವೃತ್ತಿಗಳು ಮುರುಟಿಹೋಗುವ ಸಂಭವವೂ ಇದೆ. ಇದನ್ನು ತಿಳಿದೇ ಕನ್ನಡ ಅಕ್ಷರ ಯೋಜನೆಯನ್ನು ಏಕರೂಪತೆಗೆ ತರಲು ಈ ಸಮ್ಮೇಳನವು ಹಿಂದಕ್ಕೆ ಪ್ರಯತ್ನ ನಡೆಯಿಸಿತ್ತೆಂದು ನನ್ನ ತಿಳಿವಳಿಕೆ. ಆ ಕಾರ್ಯವು ಫಲಕಾರಿಯಾಗದಿದ್ದರೆ ಅದನ್ನು ಇನ್ನಾದರೂ ದಯವಿಟ್ಟು ಗಮನಿಸಬೇಕಾಗಿ ನಾನು ಒತ್ತಿ ಹೇಳುತ್ತೇನೆ.

ಪ್ರಾಥಮಿಕ ಶಾಲೆಯು ಸರ್ವಸಾಧಾರಣವಾಗಿ ಉಪಯೋಗಿಸುವ ಶಬ್ದಗಳು ಒಂದುಸಾವಿರಕ್ಕಿಂತ ಮೇಲ್ಪಟ್ಟಿರುವುದಿಲ್ಲ. ಇವುಗಳಲ್ಲಿ ಮಕ್ಕಳಿಗೆ ಆವಶ್ಯಕವಾದ ಸುಮಾರು ೪೦೦ ಶಬ್ದಗಳನ್ನು ಈಗ ರೂಪಾಂತರಗೊಳಿಸಿ ಬರೆಯುವುದುಂಟು. **ಆದ್ದರಿಂದಲೆ ಆದುದರಿಂದಲೇ, ಆದುದರಿಂದಲೆಯೆ, ಆದ್ರಿಂದಲೇ, ಆದ್ರಿಂದ್ಲೆ, ಆದದರಿಂದಯೆ,** ಹೀಗೆ ವಿವಿಧ ರೂಪಗಳು. ಈ ರೂಪಾಂತರಗಳನ್ನು ಸಮರ್ಥಿಸಲು, ಆಧಾರಗಳನ್ನು-ದರ್ಪಣದಿಂದ, ಪ್ರಯೋಗಗಳನ್ನು ಭಾರತದಿಂದ, ರೂಢಿಯನ್ನು ಕಿಟಲರ ನಿಘಂಟುವಿನಿಂದ, ತಂದು ತೋರಿಸುವುದು ಶಕ್ಯವಾಗಿದೆ. ಆದರೆ ನಮಗೆ ಬೇಕಾದುದು ಮಕ್ಕಳು ಕನ್ನಡ ಓದು ಬರೆಹಗಳನ್ನು ಬೇಸರಿಕೆಯಿಲ್ಲದೆ, ತಪ್ಪಿಲ್ಲದೆ, ತೊಡಕಿಲ್ಲದೆ ಕಲಿಯುವುದು; ಹೊರತು ರೂಪಗಳನ್ನು ಸಮರ್ಥಿಸುವುದಿಲ್ಲ. ಇದಕ್ಕಾಗಿ ನಿಷ್ಕರ್ಷೆಯಿಂದ ನಿರ್ಧರಿಸಲ್ಪಟ್ಟಶಬ್ದಗಳ ಪಟ್ಟಿಯೊಂದನ್ನುಸಿದ್ಧಮಾಡಿ,ಅಚ್ಚು ಹಾಕಿಸಿ, ಅದನ್ನುಉಪಾಧ್ಯಾಯರೂ, ಮಕ್ಕಳೂ ಲಕ್ಷಿಸುವಂತೆ ಪ್ರತಿಯೊಂದು ಶಾಲೆಗೂ ಕೊಡಿಸುವ ಏರ್ಪಾಟಾಗಬೇಕು.

ಹೀಗೆ ಕನ್ನಡ ಭಾಷೆಯ ಜೀವಾಳದಂತೆಯೂ ಮಕ್ಕಳ ಮನೋಭಾವಗಳನ್ನು ತಿಳಿಸಲು ಅತ್ಯುಪಯುಕ್ತವಾಗಿಯೂ ಇರುವ ಹೊಸಗನ್ನಡ ಶಬ್ದಗಳಲ್ಲಿ ಒಂದೊಂದಕ್ಕೆ ನಾಲ್ಕಾರು ರೂಪಗಳು ಬರೆಹದಲ್ಲಿ ಕಾಣುವುದರಿಂದಲೇ ಹಿಂದಿನ ಸಭೆಗಳಲ್ಲಿ ಪದೇ ಪದೇ ಮಾಡಿದ್ದ ವ್ಯಾಕರಣ ಸಂಬಂಧವಾದ ನಿರ್ಣಯವನ್ನು ಮನ್ನಿಸಿ, ಯಾರೊಬ್ಬರೂ ಹೊಸಗನ್ನಡ ವ್ಯಾಕರಣ ರಚನೆಯ ಕಾರ್ಯವನ್ನು ಕೈಕೊಂಡಂತೆ ತೋರುವುದಿಲ್ಲ. ಇಂಥದ್ದೊಂದು ವ್ಯಾಕರಣ ರಚನೆಯನ್ನು ಇನ್ನೂ ವಿಳಂಬಿಸುವುದು ಪ್ರಶಸ್ತವಲ್ಲ. ಈ ವ್ಯಾಕರಣದಲ್ಲಿ ಸಂಧಿ, ಸಮಾಸ, ಅಕ್ಷರಾದಿಗಳನ್ನು ಗೌಣವೆಂದು ತಿಳಿದು, ವಾಕ್ಯವನ್ನೇ ಮುಖ್ಯವಾಗಿ ಇಟ್ಟುಕೊಂಡು, ವಾಕ್ಯಗಳ ವೈವಿಧ್ಯ, ಅವುಗಳ ಪ್ರಯೋಗ, ವಿರಾಮ ಚಿಹ್ನೆಗಳ ಕಾರ್ಯ, ವಾಕ್ಯದೋಷಗಳು, ಉತ್ತಮವಾಕ್ಯ ಸರಣಿಯ ಲಕ್ಷ್ಯಲಕ್ಷಣಗಳು, ಇತ್ಯಾದಿ ವಿಷಯಗಳನ್ನು ಸುಲಭ ಗ್ರಾಹ್ಯವಾಗುವಂತೆ ವಿಸ್ತರಿಸಬೇಕು. ಈ ಹೊಸ ವ್ಯಾಕರಣಸೂತ್ರಗಳು ಭಾಷೆಯನ್ನು ಉಸುರುಗಟ್ಟಿ ಉಬ್ಬಸಗೊಳಿಸದಂತೆಯೂ ಹುಚ್ಚು ಹುಚ್ಚಾಗಿ ಓಡಿಸದಂತೆಯೂ ಇರಬೇಕು. ಹಿಂದುಸ್ಥಾನವು ಪಡೆಯಲೇ ಬೇಕಾದ ಹೊಸ ಸುಧಾರಣೆಗಳಲ್ಲಿ ಹೇಗೋ ಹಾಗೆಯೇ ಈ ಹೊಸವ್ಯಾಕರಣದಲ್ಲಿ ಸೂತ್ರಗಳ ನಿರ್ಬಂಧವಿದ್ದರೂ, ಆ ನಿರ್ಬಂಧದಿಂದ ಭಾಷೆಯ ಸ್ವಾತಂತ್ರ್ಯಕ್ಕೆ ಕುಂದಕ ಬಾರದೆ ಬೆಳವಣಿಗೆಗೆ ಅವಕಾಶವಿರಲೇಬೇಕು. 'ಸೆರೆಮನೆಯೊಳಿನ್ನೊಂದು ಸೆರೆಮನೆಯ ಮಾಡಿದರೆ ಮೊದಲ ಸೆರೆಮನೆಯೊಡೆದು ಮುಕ್ತಿಯಹುದೇನು?'

ಇಂಥ ವ್ಯಾಕರಣದ ಜತೆಯಲ್ಲಿ ಮತ್ತೊಂದು ಸಂಗ್ರಹಾತ್ಮಕ ಪುಸ್ತಕದ ಆವಶ್ಯಕತೆಯಿದೆ. ಕನ್ನಡ ಕನ್ನಡ ನಿಘಂಟು ಇಂಗ್ಲಿಷು ಕನ್ನಡ ನಿಘಂಟು, ಕರ್ಣಾಟಕದ ಇತಿಹಾಸ ಎಂಬ ಪುಸ್ತಕಗಳ ಸಂಬಂಧವಾಗಿ ವರ್ಷ ವರ್ಷ ಮಾಡುವ ಸಭಾನಿರ್ಣಯಗಳು ತ್ವರ್ಯದಲ್ಲಿ ಕಾರ್ಯರೂಪವಾಗಿ ಬರಲು ಸಾಧ್ಯವಿಲ್ಲದಿದ್ದರೂ, ಪ್ರಪಂಚದ ವಾಙ್ಮಯದಲ್ಲಿಯ ಪ್ರಸಿದ್ಧ ವಾಗ್ಮಿಗಳ ಭಾಷಣ ಭಾಗಗಳನ್ನು ಕನ್ನಡಕ್ಕೆ ಪರಿವರ್ತಿಸಿ, ಆದರ್ಶ ಭಾಷಣಗಳೆಂದು ಪ್ರಕಟಿಸಲೇಬೇಕಾಗಿದೆ. ಕನ್ನಡದಲ್ಲಿ ಭಾಷಣವಿದ್ಯೆ ಏನೇನೂ ಬೆಳೆಯಲಿಲ್ಲ. ಉತ್ತಮ ಭಾಷಣಕರ್ತರ ಭಾಷಣಗಳನ್ನು ಕೇಳುವ ಸುಯೋಗವು ಅನೇಕರಿಗೆ ದುರ್ಲಭ. ಅಂಥವರ ದಿವ್ಯವಾಣಿಯನ್ನು ಹಿಡಿದಿಟ್ಟುಕೊಳ್ಳುವುದಕ್ಕೆ ಕನ್ನಡ ಸಂಕ್ಷಿಪ್ತಲಿಪಿ ಕ್ರಮವು ಇನ್ನೂ ಪ್ರಚಾರಕ್ಕೆ ಬಂದೇ ಇಲ್ಲ. ಕಳೆದ ೨೦ವರ್ಷಗಳಿಂದ ದೇಶಭಕ್ತರು ಕರ್ಣಾಟಕದ ಜಾಗೃತಿಗಾಗಿ 'ಸಂಯುಕ್ತ ಕರ್ಣಾಟಕ ಪ್ರಾಂತ' 'ಕನ್ನಡ ಕೈಪಿಡಿ' 'ಕರ್ಣಾಟಕ ಗತವೈಭವ' ಮೊದಲಾದ ಉತ್ಕೃಷ್ಟ ಪುಸ್ತಕಗಳನ್ನು ಪ್ರಕಟಿಸಿ, ಹಳ್ಳಿಹಳ್ಳಿಗಳಲ್ಲಿ ಭಾಷಣಗಳ ಮೂಲಕ ಕನ್ನಡ ಭಾಷಣ ವಿದ್ಯೆಗೆ ಓನಾಮವನ್ನು ಹಾಕಿಕೊಟ್ಟಿರುತ್ತಾರೆ. ಅಂಥ ವಿದ್ಯೆಯನ್ನು ಕಲಿಯತಕ್ಕ ವಿದ್ಯಾತುರಿಗಳೂ ಹಳ್ಳಿಯಲ್ಲಿ ಇರುವರು. ಭಾಷಣಕಾರರ ಬಾಯಿನುಡಿಯಲ್ಲಿ ನಮ್ಮ ಹೃದಯ ಸೋಕುವ, ಬುದ್ಧಿ ಕೆಣಕುವ, ಕಾರ್ಯಕ್ಕೆ ದೂಡುವ ದಿವ್ಯ ಶಕ್ತಿಯಿದೆ. ಈ ಜೀವಕಳೆ ಗ್ರಂಥಾಕ್ಷರಗಳಲ್ಲಿಲ್ಲ. ಈ ವಾಣಿಯ ಬಲವಿದ್ದವರೇ ಮುಂದಿನ ನಮ್ಮ ನಗರಪತಿಗಳು, ನ್ಯಾಯವಿಧಾಯಕರು, ಮಾರ್ಗದರ್ಶಿಗಳು. ಇಂಥವರ ಬಾಯಿ ಬಲವನ್ನು 'ರೇಡಿಯೋ' ಯಂತ್ರಗಳಿಗೆ ಹೂಡಿ, ತನ್ಮೂಲಕ ಹಳ್ಳಿಹಳ್ಳಿಯಲ್ಲಿ ಜ್ಞಾನಪ್ರಸಾರಣೆಗೆ ಏರ್ಪಾಟಾದರೆ, ಕನ್ನಡ ಭಾಷಾಭಿವೃದ್ಧಿಯು ಎಷ್ಟು ಎತ್ತರದ ಮೆಟ್ಟಲನ್ನು ಮುಟ್ಟುವುದೆಂದು ತಾವುಗಳು ಊಹಿಸಬಹುದು.

ಇತರ ಪ್ರಾಂತಗಳಲ್ಲಿ 'ಗ್ರೆಮಫೋನ್' 'ಟೋಕಿಸ್' ಎಂಬ ಹೊಸ ಸಾಧನಗಳನ್ನು ಶಿಕ್ಷಣಕ್ಕೂ, ಭಾಷಾ ಪ್ರಚಾರಕ್ಕೂ ಉಪಯೋಗಿಸಿಕೊಂಡಿರುವರು. ಕನ್ನಡವು ತನಗೆ ತಕ್ಕದಾದ 'ಟಾಯ್ಪ್ರಾಯ್ಟರನ್ನು' ಕೂಡ ಇದುವರೆಗೆ ಏರ್ಪಡಿಸಿಕೊಳ್ಳಲಿಲ್ಲ. ನಮ್ಮಲ್ಲಿ ಉತ್ಕೃಷ್ಟವಾದ ಒಂದು ಕನ್ನಡ ದೈನಂದಿನ ಪತ್ರಿಕೆ ಬಹುಶಃ ಇಲ್ಲದಿರುವುದಕ್ಕೆ 'ಟಾಯ್ಪ್ರಾಯ್ಟರ' ಅನನುಕೂಲತೆಯೇ ಒಂದು ಕಾರಣ. ಇದರ ಆವಶ್ಯಕತೆ ಹೆಚ್ಚಾಗುತ್ತ ಬರುತ್ತಿದೆ. ಇಂಗ್ಲಿಷ್ ಭಾಷೆಯು ನಮ್ಮ ಪ್ರಾಂತದ ಆಡಳಿತದಲ್ಲಿಯೂ ವಿಶ್ವವಿದ್ಯಾಲಯದ ಪರೀಕ್ಷೆಗಳಲ್ಲಿಯೂ ತಾನು ಆಕ್ರಮಿಸಿಕೊಂಡಿದ್ದ ಸ್ಥಾನವನ್ನು ಕನ್ನಡಕ್ಕೆ ಬಿಟ್ಟುಕೊಡುತ್ತ ಬರುವಹಾಗೆ 'ಟಾಯ್ಪ್ರಾಯ್ಟರು'ಗಳೂ 'ಗ್ರೆಮಫೋನು'ಗಳೂ ತಯಾರಾಗಿ ಬಂದು, ಕನ್ನಡ ಭಾಷೆಯ ಪ್ರಸಾರಣೆಗೆ ನೆರವಾಗುವುವೆಂದು ಕೋರುತ್ತೇನೆ. 'ಗ್ರೆಮಫೋನು' ಮೂಲಕ ಹಿಡಿದಿರುವ ಒಂದೆರಡು ಒಳ್ಳೆಯ ಆಧುನಿಕ ಕವಿತೆಗಳು ಈಚೆಗೆ ಪಟ್ಟಣಿಗರ ಮನೆಗಳೊಳಗೆ ಮಾತ್ರ ಹೊಕ್ಕಿವೆ. ಆದರೆ ಹೊಸ ಕವಿತೆಗಳ ಮತ್ತು ಹೊಸ ಭಾಷಣಗಳ ಸ್ವರ, ಧಾಟಿ, ರೀತಿಗಳು ಹಳ್ಳಿಯವರ ಕಿವಿಗಳ ಮೇಲೆ ಯಾವಾಗಲೂ ಬಿದ್ದರೆ, ಮನೆಮನೆಗೆ ಹರಿದಾಸರು ಬಂದಂತಾಗಿ ವಿದ್ಯಾಭ್ಯಾಸವು ಮುಂದುವರಿಯುವುದು.

ಕನ್ನಡ 'ಟಾಯ್ಪ್ರಾಯ್ಟರಿನ' ಯೋಜನೆಗೆ ಕನ್ನಡ ಅಕ್ಷರಗಳ ಹೆಚ್ಚಿನ ಸಂಖ್ಯೆಯೇ ಒಂದು ತೊಡಕೆಂದು ಹೇಳುವುದುಂಟು. ಮಕ್ಕಳ ಶಿಕ್ಷಣದ ದೃಷ್ಟಿಯಿಂದ ಕೂಡ ಕನ್ನಡ ಲಿಪಿಕ್ರಮದಲ್ಲಿ ಸ್ವಲ್ಪ ತಿದ್ದುಪಾಟಾದರೆ ಬಾಧಕವಿರಲಾರದು. ಪ್ರಕೃತ ಕನ್ನಡ ಅಕ್ಷರಮಾಲೆಯ ಅಕ್ಷರಗಳಲ್ಲಿ ಞ, ಙ, ಇವೆರಡು ಉಪಯೋಗವಿಲ್ಲದೆ ಬಿದ್ದುಹೋಗಿವೆ; ಋ, ೠ, ಇವೆರಡರ ಉಪಯೋಗವೂ ಬಹಳ ಅಪರೂಪವಾಗಿದೆ; ಕಿ ಎಂಬುದು ಕೀ ಹೀಗೆ ಬರೆಯಲ್ಪಟ್ಟು ದೀರ್ಘವಾಗುವಾಗ ಅ–ಅೀ (ಆ), ಇ–ಇೀ (ಈ), ಉ–ಉೀ (ಊ), ಎ–ಎೀ (ಏ), ಒ–ಒೀ (ಓ), ಹಾಗೆಯೇ ಬರೆಯಬಹುದಷ್ಟೆ; ಢ, ಧ ಫ, ಭ, ಹೀಗೆ ಮಹಾಪ್ರಾಣಗಳನ್ನು ತೋರಿಸುವಂತೆ ಕ—ಕ (ಖ), ಗ–ಗ (ಘ), ಚ–ಚ (ಛ), ಜ–ಜ (ಝ)— ಎಂಬ ಕ್ರಮದಲ್ಲಿ ಕೆಳಬಾಲವಿಟ್ಟು ಬರೆಯಬಹುದಷ್ಟೆ. ಇಂಗ್ಲಿಷ್ **ಜೆಡ್, ಎಫ್**, ಉರ್ದು **ಹಖ** ಎಂಬೀ ಅಕ್ಷರಗಳ ಉಚ್ಚಾರಣೆ ಹೊಸಗನ್ನಡಕ್ಕೆ ಈಗ ಅಗತ್ಯಬೇಕಾಗಿದೆ. ಇವೆಲ್ಲ ಮುದ್ರಣಾಲಯದವರು, ವೃತ್ತಪತ್ರಗಳ ಸಂಪಾದಕರೂ, 'ಟಾಯ್ಪ್ರಾಯ್ಟರು'ಗಳನ್ನು ತಯಾರು ಮಾಡತಕ್ಕವರು ವಿಚಾರಿಸಬೇಕಾದ ವಿಷಯಗಳು. ಕನ್ನಡ ಲಿಪಿಯಲ್ಲಿ ಈಗ ಇರತಕ್ಕ ೫೨ಅಕ್ಷರಗಳನ್ನು ೩೨ಚಿಹ್ನೆಗಳಿಗೆ ಸುಲಭವಾಗಿ ಇಳಿಸಬಹುದೆಂದು ತೋರುತ್ತದೆ. ತುರ್ಕಿಯವರು ಬಹುಕಾಲದಿಂದ ತಮ್ಮ ದೇಶದಲ್ಲಿ ಬಳಕೆಯಲ್ಲಿದ್ದ ಕಷ್ಟತರವಾದ ಅರಬ್ಬಿ ಲಿಪಿಯನ್ನು ತೊರೆದು ಬಿಟ್ಟು, ಶಿಕ್ಷಣಕ್ಕೂ, ವ್ಯವಹಾರಕ್ಕೂ ಬಹು ಅನುಕೂಲವಾದ ರೋಮನ್ ಎಂದರೆ ಇಂಗ್ಲಿಷ್ ಅಕ್ಷರಮಾಲೆಯನ್ನು ಈಚೆಗೆ ಸ್ವೀಕರಿಸಿದುದನ್ನು ಯೋಚಿಸಿ, ನಾವಾದರೂ ನಮ್ಮ ಶಾಲೆಗಳಲ್ಲಿ ವರ್ಣಮಾಲೆಯನ್ನು ಕಲಿಯುವ ಮತ್ತು ಕಲಿಸುವ ಹೊರೆಯನ್ನು ಕನ್ನಡ ಲಿಪಿ ಸಂಸ್ಕರಣದಿಂದ ಏತಕ್ಕೆ ಹಗುರವಮಾಡಬಾರದು?

ನಮ್ಮ ಹಳ್ಳಿಯ ಶಾಲೆಗಳನ್ನೂ, ಹಳ್ಳಿಯ ಉಪಾಧ್ಯಾಯರನ್ನೂ-ಕ್ಷಮಿಸಬೇಕು ಈ ನನ್ನ ದುರಭ್ಯಾಸವನ್ನು,-(ತಲೆ ಕೆಲಸ ಮಾಡಿ ಮಾಡಿ ಪೆನ್ಶನ್ ಪಡೆದ ಮುದುಕ ಕ್ಷೌರಿಕನ ಬಲಗೈ ಬೆರಳು ಹೊತ್ತುಗೊತ್ತು ಇಲ್ಲದೆ ಅವನ ಎಡದ ಅಂಗೈಯ ಮೇಲೆ ಹಾಗೆ ಹೀಗೆ ಮಸೆದಾಡುವಂತೆ, ಸ್ಕೂಲ್ ಕೆಲಸಗಳಿಂದ ನಿವೃತ್ತನಾದ ನನಗೆ ಮಾತುಮಾತಿಗೆ ನಮ್ಮ ಹಳ್ಳಿಯ 'ಮೇಸ್ತರ್' ಎಂದು ಹೇಳುವ ಕೆಟ್ಟದೊಂದು ಚಟ ಅಂಟಿಕೊಂಡು ಬಂದಿದೆ, ಕ್ಷಮಿಸಬೇಕು,)–ನಮ್ಮ ಹಳ್ಳಿಯ ಶಾಲೆಗಳನ್ನೂ ಹಳ್ಳಿಯ ಉಪಾಧ್ಯಾಯರನ್ನೂ ನಾವು ಸಾಹಿತ್ಯ ಸಮ್ಮೇಳನದ ಕಾರ್ಯ ಸಾಧನೆಗಾಗಿ ಎಳಕೊಳ್ಳಲೇಬೇಕು. ಸಾಹಿತ್ಯರಚನೆ, ಭಾಷಾಭಿವೃದ್ಧಿ, ಗ್ರಾಮಾರೋಗ್ಯ, ದೇಶಾಭ್ಯುದಯದ ಯಾವ ಸತ್ಕಾರ್ಯವಾದರೂ ಈ ಅಧ್ಯಾಪಕರ ಕೈಯಲ್ಲಿದೆ. ಸಮ್ಮೇಳನದ ಉದ್ದೇಶಗಳನ್ನೂ ಹಳ್ಳಿಯ ಉಪಾಧ್ಯಾಯರಿಗೆ ಮೊಟ್ಟಮೊದಲು ತಿಳಿಯ ಹೇಳಿ, ಅವರ ಸಂಗತಿಯಲ್ಲಿ ಬೇಕಾದರೆ ವರಮಾನವನ್ನು ತಗ್ಗಿಸಿ, ಅವರನ್ನು ಸದಸ್ಯರನ್ನಾಗಿ ಮಾಡಿಕೊಳ್ಳಬೇಕು. ಅಧ್ಯಾಪಕರು ತಮ್ಮ ಕೈ ದೀವಟಿಗೆಗಳನ್ನು ಸಾಹಿತ್ಯಾಗ್ನಿಯಿಂದ ಹೊತ್ತಿಸಿಬಿಟ್ಟರೆ, ಪ್ರತಿಯೊಂದು ಗ್ರಾಮಶಾಲೆ ಒಂದು ಪರಿಷನ್ಮಂದಿರ! ಅಲ್ಲಿಯ ಮಕ್ಕಳ ಕೂಟ ಚಿಕ್ಕ ಸಾಹಿತ್ಯ ಸಭೆ! ಹಳ್ಳಿಯ ಸಾಲೆಯ ಕೈಬರೆಹದ ಕನ್ನಡ ಪತ್ರಿಕೆ ಚಿಕ್ಕದೊಂದು ಪರಿಷತ್ಪತ್ರಿಕೆ!– ಹೀಗಾಗುವುದರಲ್ಲಿ ಸಂಶಯವಿಲ್ಲ. ಕನ್ನಡ ಭಾಷೆಯ ವ್ಯಾಪನೆಗೂ ಜನಜೀವನದ ಸಂಸ್ಕಾರಕ್ಕೂ ಸಾಹಿತ್ಯ ರಚನೆಗೂ ಹಳ್ಳಿಯ ಶಿಕ್ಷಣವೇ ಸ್ಥಿರವಾದ ತಳಹದಿ, ಈ ತಳಹದಿಯನ್ನು ಕಟ್ಟತಕ್ಕ ಶಿಲ್ಪಿಗಳು ನನ್ನ ಗೆಳೆಯರಾದ ಹಳ್ಳಿಯ ಯುವಕ ಉಪಾಧ್ಯಾಯರು.

ಮಹನೀಯರೇ, ಈ ಭಾಷಣವನ್ನು ಬರೆಯುವ ಕಾಲದಲ್ಲಿ ಇದು ತಮ್ಮ ಸಮ್ಮಯ ಸಹನೆಗಳ ಮಿತಿಮೀರಿ ಹೋದೀತೆಂಬ ಶಂಕೆಯು ನನ್ನ ಮನಸ್ಸಿಗೆ ಬರದೆ, ಇಷ್ಟು ಉದ್ದಕ್ಕೆ ಬಳೆದುಹೋಯಿತು. ಆದರೆ ಹಿಂದಿನ ಅಧ್ಯಕ್ಷ ಮಹಾಶಯರ ದಿವ್ಯ ಸೂಚನೆಯೊಂದನ್ನು ನಾವು ಮನ್ನಿಸಿದ್ದರೆ, ಈ ಭಾಷಣ ಸಂಕಷ್ಟವನ್ನು ಇತ್ತಂಡದವರೂ ತಪ್ಪಿಸಿಕೊಳ್ಳಬಹುದಿದ್ದಿತು. 'ಇನ್ನುಮುಂದೆ ಯಾರು ಪರಿಷತ್ತಿಗೆಹೆಚ್ಚುಮಂದಿ ಸದಸ್ಯರನ್ನು

ಸೇರಿಸುತ್ತಾರಿಯೋ ಅವರಿಗೆ ಇಂಥ ಸಮ್ಮೇಳನದ ಅಧ್ಯಕ್ಷ ಪಟ್ಟವನ್ನು ಕಟ್ಟುವುದು ಯುಕ್ತವೆಂ'ದು ಶ್ರೀಮಾನ್ ಡಿ. ವಿ. ಗುಂಡಪ್ಪನವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಒಮ್ಮೆ ವಿನೋದ ಪರವಾಗಿ ಮಾಡಿದ ಸೂಚನೆಯಲ್ಲಿ ನಾನು ಎರಡೇ ಮಾತು ಗಳನ್ನು ಕೂಡಿಸಬೇಕಾಗಿದೆ—'ವಯಸ್ಸಾದವರಿಗೆ ಪಟ್ಟಕಟ್ಟ ಬಾರದು.' ನಿಜವಾಗಿಯೂ ಸಾಹಿತ್ಯ ಸಮ್ಮೇಳಕ್ಕೆ ಮುಪ್ಪಿನ ಮುದುಕರು ಅಷ್ಟೊಂದು ಬೇಕಾಗಿಲ್ಲ; ಅದಕ್ಕೆ ಬೇಕಾದವರು ಶಕ್ತಿವಂತರಾದ ಉತ್ಸಾಹಶಾಲಿಗಳಾದ ಯುವಕರು! ಕರ್ಣಾ ಟಕದ ಏಕೀಕರಣ ಮೊದಲಾದ ಜಟಿಲ ರಾಜಕೀಯ ವಿಷಯ ಗಳನ್ನು ವಾದಿಸಿ, ದೇಶ ಹಿತವನ್ನು ಸಾಧಿಸಬಲ್ಲ ಪತ್ರಿಕಾ ಕರ್ತರು! ಸರಕಾರದ ಮನ್ನಣೆಗೂ ಕನ್ನಡಿಗರ ವಿಶ್ವಾಸಕ್ಕೂ ಪಾತ್ರರಾದ ದೇಶಭಕ್ತರು! ಸಮ್ಮೇಳನದ ಕಾರ್ಯಕಲಾಪ ಗಳು ಇಂಥವರ ಪ್ರೇಮ, ಅಭಿಮಾನ, ಮನೋಭಾವಗಳಿಗೆ ಅನುರೂಪವಾದವುಗಳು. ಪಂಪಾದಿ ಕವಿಗಳೂ ಪೊನ್ನಮ್ಮಾದಿ ಕವಯಿತ್ರಿಯರೂ ರಚಿಸಿದ ಪುರಾತನ ಸಾಹಿತ್ಯ ಮತ್ತು ಅದ ರಿಂದ ಜನಿಸಿದ ಆಧುನಿಕ ಸಾಹಿತ್ಯ, ಹೀಗೆ ಸಕಲ ಕನ್ನಡ ಸಾಹಿತ್ಯಕ್ಕೆ—ಹಲವು ತಲೆಮಾರು ಕಳೆದು ನಮ್ಮ ಕೈಗೆ ಬಂದ ಇಷ್ಟು ವಿಸ್ತಾರವಾದ ಈ ಆಸ್ತಿಗೆ ಕನ್ನಡಿಗರು, ಮುಸಲ್ಮಾನರು, ಕ್ರೈಸ್ತರು, ಹಿಂದುಗಳು, ಬೃಹತ್ ಕರ್ಣಾಟಕದವರೆಲ್ಲರೂ ಹಕ್ಕುದಾರರು. ಕನ್ನಡ ಸಾಹಿತ್ಯದ ಮುಂದಿನ ಕೃಷಿಕಾರ್ಯವು ನಡೆಯಬೇಕು ನಮ್ಮ ಯುವಕರಿಂದ; ಭಾಷಾ ಭಕ್ತರೂ ಸಾಹಿತ್ಯ ಪ್ರೇಮಿಗಳೂ ಉತ್ತಮ ಚರಿತರೂ, ಉದ್ಯೋಗ ಶೀಲರೂ ಆಗಿರುವ ವೀರ ಯುವಕರಿಂದ. ಅಂಥವರ ಕೈಗಳಿಗೆ ಹಿರಿಯರ ಹೆಗಲ ಮೇಲಿನ ನೇಗಿಲು ಬರಲಿಕ್ಕಿದೆ. ಆಗ ಕನ್ನಡ ಸಾಹಿತ್ಯಕಾರ್ಯವು ಇನ್ನೂ ಉತ್ತಮವಾಗಿ, ಬಹುಮುಖ ವಾಗಿ, ಆಶ್ಚರ್ಯಕರವಾಗಿ, ಕಾರ್ಯೋತ್ತೇಜಕವಾಗಿ, ಸತ್ಫಲ ಪ್ರದಾಯಕವಾಗಿ ನಡೆಯುವುದು. ಕರ್ಣಾಟಕವು ಪ್ರಪಂಚದ ಶ್ರೇಯೋಭಿವೃದ್ಧಿಗಾಗಿ ತನ್ನ ಹರಕೆಯನ್ನು ಸಲ್ಲಿಸಲಿಕ್ಕಿದೆ. ಬಂಗಾಲವು ಟಾಗೋರರ ಬಾಯಿಂದ ಗೀತಾಂಜಲಿಯನ್ನು ಹಾಡಿಸಿದೆ; ತಮಿಳ್‌ನಾಡು ರಾಮನರ ಕೈಯಿಂದ ವರ್ಣರಶ್ಮಿ ಯನ್ನು ಬೆಳಗಿಸಿದೆ; ಮಹಾರಾಷ್ಟ್ರವು ಲೋಕಮಾನ್ಯರಿಂದ ಗೀತಾರಹಸ್ಯವನ್ನು ಓದಿಸಿದೆ; ಗುಜರಾತು ಮಹಾತ್ಮರ ತ್ರಿಕ ರಣಗಳಿಂದ ಅಹಿಂಸಾ ಮಂತ್ರವನ್ನು ಉಪದೇಶಿಸಿದೆ. ಕರ್ಣಾ ಟಕ ಮಾತೇ! ನಿನ್ನ ಹರಕೆ ಸಲ್ಲಿಸಿ ನಿನ್ನ ಹೆಸರ ಹೇಳಿಸುವ ಕಾಣಿಕೆಯನ್ನು ನಮ್ಮ ಕೈಗಿತ್ತು ನಮ್ಮನ್ನು ಒಗ್ಗೂಡಿಸಿ ಎಂದು ಕಳುಹುವೆ?

# ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೮೯೨ನೆಯ ಇಸವಿಯ ತನಕ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರ ಹೆಸರು ಮೇಲಕ್ಕೆ ಬಂದಿರಲಿಲ್ಲ. ಅಂದಿನವರ ಅಭಿಪ್ರಾಯದಲ್ಲಿ ಕನ್ನಡ ವಾಙ್ಮಯವು ಸೋಮೇಶ್ವರಶತಕ, ಕನ್ನಡಭಾರತ, ತೊರವೆಯ ರಾಮಾಯಣ, ಜೈಮಿನಿ ಭಾರತ, ಚನ್ನಬಸವ ಪುರಾಣ ಎಂಬೀ ಪಂಚಕಾವ್ಯಗಳಲ್ಲಿ ಕೊನೆಗಂಡು ಸಾಮಾನ್ಯರ ಕೈಗೆ ಸಿಲುಕದ "ಗೂಢಾದ್ಗೂಢರಹಸ್ಯ" ಎಂಬದಾಗಿ ಭಾವಿಸಲ್ಪಟ್ಟಿತ್ತು. ಬಿ. ಎ. ವರೆಗೆ ಕನ್ನಡ ಓದಿದ ಕೆಲವರ ಹೊರತು ಉಳಿದವರು ಪಂಪ ರಾಮಾಯಣ ಎಂದರೆ, ಪಂಪಾಕ್ಷೇತ್ರದ ರಾಮಕಥೆಯಾಗಿರಬೇಕೆಂದು ಊಹಿಸುತ್ತಿದ್ದರು. ನಮ್ಮ ಜಿಲ್ಲೆಯೊಳಗಣ ಕನ್ನಡ ಪಾಂಡಿತ್ಯವು ಗೆರೆಸೊಪ್ಪೆ ಶಾಂತಯ್ಯ, ಪಾರ್ತಿಸುಬ್ಬಯ್ಯ ಎಂಬವರ ಯಕ್ಷಗಾನ ಪ್ರಸಂಗಗಳ ಅರ್ಥಾನುವಾದಗಳಲ್ಲಿಯೂ ವಿಸ್ತರ ವಿವರಣೆಗಳಲ್ಲಿಯೂ ವಿಜೃಂಭಿಸುತ್ತಿತ್ತು. ಕವಿತಾಪ್ರೌಢಿಮೆಯು "ಮಧುರರಸಝುರಿಯ" ತರಂಗದಲ್ಲಿ ತೇಲಾಡದೆ ಪ್ರಾಸ ವೈಚಿತ್ರ್ಯದ ರಾಟಿಯಲ್ಲಿ ತಲೆತಿರುಗುವಂತೆ ಉರುಳುತ್ತಿತ್ತು. ಮೈಸೂರಿನ ಬಿ. ವೆಂಕಟಾಚಾರ್ಯರ ಒಂದೆರಡು ಕಾದಂಬರಿಗಳು ಉಡುಪಿಯಲ್ಲಿ ನುಸುಳಿಕೊಂಡಿದ್ದರೂ, ಅವು "ಅತಿ ಭಕ್ತಿಯಿಂ ಬಿಡದೋದಿ ಕೇಳ್ವ ಸಜ್ಜನರಿಗಿಷ್ಟಾರ್ಥಮಂ ಕುಡುವ ಪುಣ್ಯಕಥೆಗಳಂತೆ" ಜನಪ್ರೀತವಾಗಿರಲಿಲ್ಲ. ಕರ್ನಾಟಕದ ರಾಗರಾಗಿಣಿಗಳ ಅವಸ್ಥೆಯಂ ಪೇಳ್ವುದೇಂ?" "ಭಿನ್ನಸಂಧಿಯಿಂ ಪಾಡಲಿಮ್ಮತು ಅಂಗವಿಂತು ಭಿನ್ನ ಭಿನ್ನಮಾದುದು." ಹೀಗಾದುದರಿಂದ ನಮ್ಮ ಜಿಲ್ಲೆಯೊಳಗಿನ ನಾಟ್ಯರಂಗವು ಬಸವಪ್ಪಶಾಸ್ತ್ರಿಕೃತ ಕನ್ನಡ ಶಾಕುಂತಳನಾಟಕಕ್ಕೆ ಎಡೆಗೊಡದೆ, ಅಣ್ಣಾಜಿ ಕಿರ್ಲೋಸ್ಕರರ ಮರಾಟಿ ನಾಟಕಗಳಿಂದಆಕ್ರಮಿಸಲ್ಪಟ್ಟಿತ್ತು. ಕನ್ನಡದ ಮೇಲಿನ ಮಮತೆಯಿಂದ ಮರಾಟಿ ನಾಟಕಗಳನ್ನು ಪರಿವರ್ತಿಸಿ ಕರ್ನಾಟಕ ಭಾಷಾ ಸೇವೆಯನ್ನು ಕೈಲಾದಷ್ಟು ಮಾಡುತ್ತಿದ್ದ ಶ್ರೀಯುತ ಕುಬೇರ ಪಾಂಡುರಂಗರಾಯರ ಉದ್ಯಮದ ಬೆಳಕೊಂದು ಶ್ರೀಯುತ ಮಳಲಿ ಸುಬ್ಬರಾಯರ ಸಂಗೀತ ಕೃಷ್ಣಜನ್ಮಾದಿ ಮರಾಟಿ ನಾಟಕಗಳ ಸುಂಟುರು ಗಾಳಿಯಲ್ಲಿ ಫುರುಫುರಿಸುತ್ತಿತ್ತು. ಕನ್ನಡ ವಾರ್ತಾಪತ್ರಗಳಲ್ಲಿ "ಸುದರ್ಶನ"ವೆಂಬ ಹೆಸರುಳ್ಳ ಉಡುಪಿಯ ಒಂದು ಮಾಸಪತ್ರಿಕೆಯು ಮೂರು ತಿಂಗಳುಗಳಿಗೆ ಒಂದು ಸಲ ಅರೆಜೀವದಿಂದ ಹೊರಡುತ್ತಿತ್ತು.

ನಮ್ಮ ಜಿಲ್ಲೆಯಲ್ಲಿ ಕನ್ನಡದ ಪರಿಸ್ಥಿತಿಯು ಹೀಗಿರಲು, ೧೮೯೪ನೆಯ ಇಸವಿಯಲ್ಲಿ ನಾನು ಬಂಟವಾಳದಲ್ಲಿದ್ದಾಗ ನನ್ನ ಸ್ನೇಹಿತನ ಕೈಯಲ್ಲಿದ್ದ ಒಂದು ಪುಸ್ತಕವು ನನ್ನ ಕಣ್ಣಿಗೆ ಬಿತ್ತು. ನಾನು ಅದನ್ನು ಕೈಯಲ್ಲಿ ಹಿಡಿದು ನೋಡಿದೆನು. ಅದು ಅಚ್ಚಾದದ್ದು — ಸುದರ್ಶನ ಮಾಸಪತ್ರಿಕೆಯು ಹೊರಡುವ ಪ್ರಭಾಕರ ಮುದ್ರಾಯಂತ್ರದಲ್ಲಿ. ಅದರ ಮುದ್ರಣ ಕಾರ್ಯವು ಆ ಕಾಲಕ್ಕೆ ಪರಿಷ್ಕಾರವಾಗಿಯೇ ಇತ್ತು. ಪುಸ್ತಕದ ಹೆಸರು— ಕುಮಾರ ವಿಜಯ ಪ್ರಸಂಗ; ರಚಿತವಾದದ್ದು — ನಂದಳಿಕೆ ಲಕ್ಷ್ಮೀನಾರಾಯಣಪ್ಪನವರಿಂದ. ನಾನು ಪುಸ್ತಕವನ್ನು ತೆರೆದು ನೋಡಲು,

"ಅಳಿಯಲರಂ ಗಿಳಿ ಪಣ್ಣಂ

"ತಳಿರಂ ಪಿಕನೊಲ್ವ ತೆರದಿ ಕುಜದೊಳ್ ಕೃತಿಯೊಳ್।

"ವಿಳಸಿತ . . . . . . . . . . ."

ಎಂಬೀ ಪದ್ಯವಿತ್ತು. ಪುಸ್ತಕದ ಪ್ರಥಮ ಪುಟದಲ್ಲಿ ಒಂದು ಕಂದ ಪದ್ಯವನ್ನು ಹೀಗೆ ಪ್ರತ್ಯೇಕವಾಗಿ ಎತ್ತಿಟ್ಟದ್ದು ನನಗೆ ನೂತನವಾಗಿ ತೋರಿತು. ಅದರಲ್ಲಿಯೂ ಆ ವರ್ಷದ ನನ್ನ ಪಠ್ಯಪುಸ್ತಕದಲ್ಲಿದ್ದ ಆ ಕಂದಪದ್ಯವೇ ಈ ಮುಖಪತ್ರದಲ್ಲಿ ಎದ್ದು ನಿಂತದ್ದರಿಂದ, ನಾನು ಪುಸ್ತಕದ ಮುಖಪತ್ರವನ್ನು ಮತ್ತೂ ಮತ್ತೂ ಓದಿದೆನು. ಯಾವಾಗ ಷಡಕ್ಷರಿ ಮಹಾಕವಿಯ ಶಬರಶಂಕರ ವಿಳಾಸದೊಳಗಿನ ಆ ಕಂದ ಪದ್ಯದ ಜತೆಯಲ್ಲಿ ನನ್ನ ನಾಲಗೆಯಿಂದ ಕುಮಾರ ವಿಜಯ ಪ್ರಸಂಗಕರ್ತರಾದ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರ ದೊಡ್ಡ ಹೆಸರು ಹೊರಹೊಮ್ಮಿತೋ ಆಗಲೇ ನಮ್ಮ ಜಿಲ್ಲೆಯಲ್ಲಿ ಇರತಕ್ಕ ಕನ್ನಡ ಕವಿಗಳ ವಿಷಯವಾಗಿ ನನ್ನಲ್ಲಿದ್ದ ಕಣ್ಣಿನ ಮುಸುಕು ಕಳಚಿ ಹೋಯಿತು; ಕರ್ನಾಟಕ ವಿಚಿತ್ರವನವನ್ನು ದಾಟಿ ಷಡರಿಕ್ಷಯ ಗಿರಿದುರ್ಗವನ್ನು ಮುಟ್ಟಿದ ಮಹನೀಯರು ನಮ್ಮ ಜಿಲ್ಲೆಯಲ್ಲಿ ಇದ್ದಾರೆಂಬ ಬೆಳಕು ತೋರಿತು; ಅದರೊಂದಿಗೆ ಕುಮಾರ ವಿಜಯವನ್ನು ಓದಿ ಮುಗಿಸಬೇಕೆಂಬ ಲವಲವಿಕೆಯು ಒತ್ತೊತ್ತಿ ಬಂದಿತು. ನಾನು ಆ ಪುಸ್ತಕವನ್ನು ಓದಿ ಓದಿ ಮರುಳಾದೆನು; ಅದರೊಳಗಿನ ಹಾಡುಗಳನ್ನು ಹಾಡಿ ಹಾಡಿ ಉರುಹಾಕಿದೆನು; ಅದರೊಳಗಿನ ನಿರರ್ಗಳವಾದ ಯಮಕಗಳನ್ನೂ, ಪ್ರಾಸಗಳನ್ನೂ ಹೆಕ್ಕಿ ಹೆಕ್ಕಿ ತಲೆಯಲ್ಲಿ ತೂರಿಕೊಂಡೆನು; ಕಳವೆಂದು ತಿಳಿಯದೆ ಪರಪದಾರ್ಥದ ಬಲದಿಂದ ತುಂಡು ಪದಗಳನ್ನು ಕಟ್ಟಿ ಅವನ್ನು ನಾನೇ ಹಾಡಿ, ಅವಕ್ಕೆ ನಾನೇ ಹಿಗ್ಗಿಕೊಂಡೆನು. ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು ಕನ್ನಡ ದೇವಿಯ ದೇವಸ್ಥಾನದ ಹೊರಸುತ್ತಿನಲ್ಲಿಯೇ ನಿಂತುಕೊಂಡು ಯಕ್ಷಗಾನ ಸೇವೆಯನ್ನು ಮಾಡುವ ಭಾಗವತರಂತೆ ಇರದೆ, ಆ ಸರಸ್ವತಿಯ ಸಾನ್ನಿಧ್ಯ

ವನ್ನು ಸದ್ಯದಲ್ಲಿಯೇ ಸೇರತಕ್ಕ ಶುದ್ಧೋಪಾಸಕರೆಂದು ನಾನು ಭಾವಿಸುತ್ತ ಬಂದೆನು. ಕುಮಾರ ವಿಜಯ ಬಿಟ್ಟರೆ ಪ್ರಸಂಗವಿಲ್ಲ, ನಂದಳಿಕೆಯವರನ್ನು ಬಿಟ್ಟರೆ ಕವಿಯಿಲ್ಲ-ಹೀಗೆ ಬಹುಕಾಲದ ವರೆಗೆ ನನ್ನ ಅಭಿಪ್ರಾಯವಾಯಿತು. ಸಾಲದುದಕ್ಕೆ ಈ ಅಭಿಪ್ರಾಯವನ್ನೇ ನಾನು ೧೯೩೫ರಲ್ಲಿ ಮೆ॥ ಸಿ. ಡಿ. ಜೆ. ಪಿಂತೋ ಬಿ. ಎ., ಬಿ. ಎಲ್. ಎಂಬವರ ಅಧ್ಯಕ್ಷತೆಯಲ್ಲಿ ಜರಗಿದ ಒಂದು ಸಭೆಯಲ್ಲಿ ಓದಿದ ಉಪನ್ಯಾಸದಲ್ಲಿ ತಂದು ಹಾಕಿ, ನಂದಳಿಕೆಯವರ ಬೆಳೆಯ ಸಿರಿಯನ್ನು ಮೊಳೆಯಲ್ಲಿಯೇ ತೋರಿಸತಕ್ಕ ಕುಮಾರ ವಿಜಯ ಗ್ರಂಥವನ್ನು ಪ್ರಶಂಸಿಸಿದೆನು.

"ಕುಮಾರ ವಿಜಯ"ವು ಯಕ್ಷಗಾನ ಪ್ರಸಂಗವಾಗಿದ್ದರೂ ನನ್ನ ದೃಷ್ಟಿಯಲ್ಲಿ ಅದಕ್ಕೆ ಇರುವಷ್ಟು ಮಹತ್ವವು ನಂದಳಿಕೆಯವರ ಇತರ ಗ್ರಂಥಗಳಿಗೆ ಇರುವುದಿಲ್ಲ. ಅದ್ಭುತ ರಾಮಾಯಣ, ಶ್ರೀರಾಮ ಪಟ್ಟಾಭಿಷೇಕ, ರಾಮಾಶ್ವಮೇಧಗಳು ಏತತ್ಕವಿಕೃತವೊ ಅಲ್ಲವೊ ಎಂಬುದು ವಾದಗ್ರಸ್ತ ಸಂಗತಿಯಾಗಿದೆ. ಆದರೆ ಕುಮಾರ ವಿಜಯದ ಮೇಲೆ ಈ ಅನುಮಾನದ ನೆರಳೂ ಇಲ್ಲ. ಕವಿಯು ತನ್ನ ಹೆಸರನ್ನು ಮರೆಸಿಕೊಂಡು ರಚಿಸಿದ ಆ ಗ್ರಂಥಗಳು "ಶಿವನ ಜಟಾಜೂಟದಿಂಕೆಳಗೆ ಜಗುಳ್ದು" ಗುಪ್ತಗಾಮಿಯಾಗಿ ಹರಿಯುವ "ಗಂಗಾಸಲಿಲ ಬಿಂದುಗಳಂತೆ ಗುಪ್ತಚಾರಿತ್ರ ಗಂಧಮಂ ತಾಳ್ದಿದುವು." ಈ ಗುಪ್ತಚಾರಿತ್ರ ಗ್ರಂಥವನ್ನು ಹೊರತಂದು ಗಮಗಮಿಸುವಂತೆ ಚೆಲ್ಲುವುದಕ್ಕೆ ಕುಮಾರವಿಜಯವೇ ಅವರ ಗ್ರಂಥಗಳಲ್ಲಿ ಒತ್ತಾಸೆಮಾಡುತ್ತದೆ. ಆ ಗ್ರಂಥಾದಿಯಲ್ಲಿಯ ಶ್ರೀಕೃಷ್ಣಪರವಾದ ನಾಂದೀಶ್ಲೋಕವೂ ಅವರ ಅಂತ್ಯದಲ್ಲಿಯ ಉಡುಪಿ ಚಂದ್ರಮೌಳೀಶ್ವರ ಮಂಗಲಸ್ತೋತ್ರವೂ ಲಕ್ಷ್ಮೀನಾರಾಯಣಪ್ಪನವರು ಉಡುಪಿಯ ಸ್ಮಾರ್ತಕವಿ ಎಂಬುದಕ್ಕೆ ಸಾಕ್ಷಿಗಳಾಗಿವೆ. ಅವರು ತಮ್ಮ ಹುಟ್ಟೂರಾದ ನಂದಳಿಕೆಯನ್ನು ಬಿಟ್ಟು ಯಾವಾಗ ಉಡುಪಿಗೆ ಒಕ್ಕಲು ಹೋದರೆಂಬುದು ಅಲ್ಲಿಯ ಜನರಿಗೆ ಗೊತ್ತಿಲ್ಲ. ದಕ್ಷಿಣ ಕನ್ನಡದಇತರ ಗ್ರಾಮಗಳಂತೆ ನಂದಳಿಕೆಯು ಬಹು ಸುಂದರವಾದ ಹಳ್ಳಿಯಾಗಿದೆ; ಅಲ್ಲಲ್ಲಿ ಸಣ್ಣಪುಟ್ಟ ಏರುತಗ್ಗುಗಳು ಇವುಗಳ ನಡುವೆ ಹೊಲಗದ್ದೆಗಳು ಅವುಗಳ ಪಕ್ಕದಲ್ಲಿ ಮಳೆಗಾಲದಲ್ಲಿ ನೀರು ತುಂಬಿ ಹರಿಯುವ ತೋಡುಗಳು, ಗದ್ದೆಗಳ ತೆವರಿಗಳಲ್ಲಿ ತಲೆತೂಗುವ ತೆಂಗುಗಳು, ತೆಂಗಿನ ಗರಿಯ ಮಾಡುಗಳ ಹುಲ್ಲುಚಾವಣಿಯಿಂದ ಹೊಳೆಯುವ ಗುಡಿಕಟ್ಟುಗಳು— ಇವುಗಳಿಂದ ನಂದಳಿಕೆಯು ಅತ್ಯಂತ ರಮಣೀಯವಾಗಿದೆ. ೧೯೩೩ನೆಯ ಇಸವಿಯಲ್ಲಿ ನಾನು ನಂದಳಿಕೆಗೆ ಹೋಗಿದ್ದಾಗ ಅಲ್ಲಿಯ ಗ್ರಾಮ ದೇವಸ್ಥಾನದ ಪಡುಗಡೆಯಲ್ಲಿ ಈಗ ಪಾಳುಬಿದ್ದಿರುವ ಒಂದು ಮನೆಯಲ್ಲಿ ಅವರು ಜನಿಸಿದರೆಂತಲೂ ರಾಮ ಹೆಗ್ಗಡೆಯೆಂಬವರು ನಡೆಸುತ್ತಿದ್ದ ಹಳ್ಳಿಯ ಶಾಲೆಯಲ್ಲಿಅವರಿಗೆ ಓನಾಮುವಾಯಿತೆಂತಲೂ ನನಗೆ ತಿಳಿಯಬಂದಿತು. ನಂದಳಿಕೆಯವರು ಯಾವ ಜಾತಿಯವರೆಂದು ನಾನು ಹೇಳುವಹಾಗಿಲ್ಲ. ಋಷಿಯ ಕುಲವನ್ನೂ, ನದಿಯ ಮೂಲವನ್ನೂ ಹುಡುಕುವುದು ಸರಿಯಲ್ಲವೆನ್ನುತ್ತಾರೆ; ಋಷಿಯ ಕುಲದಂತೆಕವಿಯ ಜಾತಿಯನ್ನು-ಇಂದಿನ ಬ್ರಾಹ್ಮಣಬ್ರಾಹ್ಮಣೇತರಎಂಬ ತರ್ಕ ತಿಕ್ಕಾಟಗಳ ಕಾಲದಲ್ಲಿ -ಚರ್ಚಾಸ್ಪದವಾಗಿ ಮಾಡಲು ನನ್ನ ಮನಸ್ಸು ಒಪ್ಪುವುದಿಲ್ಲ. ನಂದಳಿಕೆಯ ಲಕ್ಷ್ಮೀನಾರಾಯಣಪ್ಪನವರು ದಕ್ಷಿಣಕನ್ನಡ ಜಿಲ್ಲೆಯವರು; ಮೂಗುತಿಯ ಮುತ್ತು ಎಲ್ಲಿ ಹುಟ್ಟಿದರೇನು? ಎಲ್ಲಿ ಬೆಳೆದರೇನು? ಅದು ಕನ್ನಡದ ವೈಕಾಂತಿಯನ್ನೇ ಏರಿಸಿಬಿಟ್ಟಿತೆಂದು ಹೇಳಿದರೆ ಸಾಲದೇ?

ನಾರಾಯಣಪ್ಪನವರು ನಂದಳಿಕೆಯ ಹಳ್ಳಿಯ ಶಾಲೆಯಲ್ಲಿ ಐದಾರು ವರ್ಷಗಳವರೆಗೆ ಓದಿರಬಹುದಾದರೂ, ಅವರ ಪಾಂಡಿತ್ಯಕ್ಕೆ ಆ ವಿದ್ಯಾಭ್ಯಾಸವು ಕಾರಣವಾಗಿರಲಿಕ್ಕಿಲ್ಲ. ಹಳ್ಳಿಯ ಶಾಲೆಯು ಅವರಿಗೆ ಅಕ್ಷರಾಭ್ಯಾಸವನ್ನು ಮಾಡಿಸಿರಬಹುದು. ಆದರೆ ಅಂಗೈಅಗಲದಷ್ಟು ಇರುವ ಕೊಟಡಿಯೊಳಗೆ ಮಕ್ಕಳ ಚಟುವಟಿಕೆಯನ್ನು ಸೆರೆಹಾಕಿ, ಹೆಸರು ಹೇಳಿದರೆ ಓಕರಿಕೆಯಾಗುವ ತುಂಡುಪಾಠಗಳ ಗುಟುಕುಗಳನ್ನು ಅವರ ಬಾಯಿಗೆ ಕೊಟ್ಟು, ಅವರನ್ನು ಹಾರಬಿಡದೆ ಪರಾವಲಂಬನದಿಂದ ಜೀವಿಸುವ ಹಾಗೆ ಮಾಡುವಂಥ ಹಳ್ಳಿಶಾಲೆಗಳ ಆ ಏರ್ಪಾಡು ಜನ್ಮದ ಧ್ಯೇಯವನ್ನು ಬೇರೊಂದಾಗಿ ಮಾಡಿ, ಜ್ಞಾನಾರ್ಜನೆಯನ್ನು ಸ್ಪರ್ಧೆಯಿಂದ ಕಲಂಕಿಸಿ, ನಮ್ಮ ಮನೋಭಾವನೆಗಳನ್ನು ಅಸ್ವಾಭಾವಿಕವಾದ ಕಾಲುವೆಗಳಲ್ಲಿ ಹರಿಯುವಂತೆ ಮಾಡಿ, ಜನಜೀವನದಿಂದ ಫಲವತ್ತಾಗತಕ್ಕ ವಾಙ್ಮಯ ಪ್ರದೇಶವನ್ನು ಪಾಳುಬೀಳುವಂತೆ ಮಾಡುವುದರಿಂದ, ಈ ಹಳ್ಳಿಯ ಶಾಲೆಯ ವಿದ್ಯಾಭ್ಯಾಸದಿಂದ ನಾರಾಯಣಪ್ಪನವರು ದೊಡ್ಡ ಕವಿಯಾದರೆಂದು ಯಾರಾದರೂ ಹೇಳಿದರೆ ನಾನು ಒಪ್ಪಲಾರೆನು. ಅವರ ಶಿಕ್ಷಣವು ಈಗಲೂ ನಮ್ಮ ಹಳ್ಳಿಗಳಲ್ಲಿ ವಾಡಿಕೆಯಾಗಿರುವ ಹಳೆಯ 'ಕಿಂಡರ್ ಗಾರ್ಟನ್' ಕ್ರಮವನ್ನು ಅನುಸರಿಸಿತ್ತು. ಈ ಕ್ರಮದಲ್ಲಿ ಇಡೀ ಗ್ರಾಮವೇ ಪಾಠಶಾಲೆ, ಹಳ್ಳಿಯವರೆಲ್ಲರೂ ವಿದ್ಯಾರ್ಥಿಗಳು, ಭಗವಂತನ ಸಾನ್ನಿಧ್ಯಪ್ರಾಪ್ತಿಯೇ ಧ್ಯೇಯವು. ಆ ಧ್ಯೇಯಕ್ಕೆ ಹೊಂದಿಕೊಂಡು ದೇವಸ್ಥಾನದಲ್ಲಿ ಪುರಾಣಶ್ರವಣ; ಆ ಪುರಾಣಪುರುಷರ ಪರವಾಗಿ ಕಟ್ಟಿದ್ದ ಯಕ್ಷಗಾನ ಪ್ರಸಂಗ; ಪ್ರಸಂಗದ ಹಾಡುಗಳನ್ನು ಅಭಿನಯಿಸಿ ತೋರಿಸುವ ದಶಾವತಾರದ ಬೈಲಾಟಗಳು; ಶಿವರಾತ್ರಿ ಕೃಷ್ಣಜಯಂತಿ ಇತ್ಯಾದಿಯಾದ ಹಬ್ಬಹುಣ್ಣಿಮೆಗಳ ನೆವದಿಂದ ಪ್ರಾಚೀನ ವೀರರ ಪೂಜೆ; ಪೂಜಿಸಲಿಕ್ಕೆ ಬೇಕಾದ ಗೌರಿ, ಗಣೇಶ,

ಅನಂತ, ದುರ್ಗಾದಿ ಬಿಂಬಗಳ ನಿರ್ಮಾಣ; ದೀಪಾವಳಿ ರಥೋತ್ಸವಾದಿ ಕಾಲದಲ್ಲಿ ಕಲಶ ಕುರುಜುಗಳ ಮತ್ತು ಮಕುಟಮಂಟಪಗಳ ಶೃಂಗಾರರಚನೆ; ಹಳ್ಳಿಯ ಅಯನ ಆರಾಟಗಳ ಮೂಲಕ ವ್ಯಾಯಾಮಯುಕ್ತವಾಗಿ ದೊರೆಯುವ ಸೃಷ್ಟಿ ನಿರೀಕ್ಷಣ;—ಹೀಗೆ ಸರ್ವತೋಮುಖವಾಗಿರುವ ಆರ್ಯ ವಿದ್ಯಾಭ್ಯಾಸದಲ್ಲಿ ನಾರಾಯಣಪ್ಪನವರ ಭಾವಿ ಪಾಂಡಿತ್ಯದ ಮೂಲವನ್ನು ಕಂಡುಹಿಡಿಯಬೇಕು.

ನಾರಾಯಣಪ್ಪನವರು ಇಂಗ್ಲಿಷ್ ಕಲಿಯುವುದಕ್ಕಾಗಿ ನಂದಳಿಕೆಯನ್ನು ಬಿಟ್ಟು ಉಡುಪಿಗೆ ಹೋದರೆಂಬುದಕ್ಕೂ, ಇಂಗ್ಲಿಷ್ ಶಾಲೆಯನ್ನು ಸೇರಿದ ಎರಡು ವರ್ಷಗಳಲ್ಲಿಯೇ ಹಣದ ಅಡಚಣೆಯಿಂದ ಶಾಲೆಯನ್ನು ಬಿಟ್ಟರೆಂಬುದಕ್ಕೂ ಸಾಕಾದಷ್ಟು ಆಧಾರವಿದೆ. ೧೮೮೭ರ ವರೆಗೆ ಅವರು ಉಡುಪಿಯಲ್ಲಿ ಏನು ಮಾಡುತ್ತಿದ್ದರೆಂಬುದು ಊಹಾಸ್ಪದವಾಗಿದೆ. ಬಹುಶಃ ಈ ಅವಧಿಯಲ್ಲಿ ಕೃಷ್ಣಾಪುರ ಮಠದ ಆಚಾರ್ಯರಿಂದ ಸಂಸ್ಕೃತದ ಪರಿಚಯವನ್ನೂ ಶ್ರೀಯುತ ಮಳಲಿ ಸುಬ್ಬರಾಯರಿಂದ ಇಂಗ್ಲಿಷ್ ಭಾಷಾಜ್ಞಾನವನ್ನೂ ಸಂಪಾದಿಸಿರಬಹುದು. ಆದರೆ ಅವರ ಮನಸ್ಸು ಕನ್ನಡಕ್ಕೆ ಒಲಿದಷ್ಟು ಸಂಸ್ಕೃತಕ್ಕೆ ಒಲಿಯಲಿಲ್ಲ "ಏಂ ಭೋಜಪ್ರಬಂಧಂ? ವಿಕ್ರಮವಿಜಯಂ? ಮಹಾವೀರಚರಿತಂ?" "ಇಸ್ಸಿ! ಇವಱೊಳಿ ನಗಟ್ಕಿಉಲ್ಲಂ" ಈ ಅವಧಿಯಲ್ಲಿ ಅವರು ತುಳು ಭಾಷೆಯ ಪದಗಳನ್ನು ಕಟ್ಟಿ ಅವುಗಳನ್ನು ತಮ್ಮ ಗೆಳೆಯರ ಕೂಟದಲ್ಲಿ ರಸಿಕನಂತೆ ಹಾಡುವುದನ್ನೊ ಉಡುಪಿಯ ನಾಟಕಮಂಡಳಿಯವರ ನಾಟಕಗಳಲ್ಲಿ ಒಂದೊಂದು ಸಲ ವಿದೂಷಕನ ವೇಷದಿಂದ ಸಭಿಕರನ್ನು ವಿನೋದಗೊಳಿಸುವುದನ್ನೊ, 'ತಾಳಮದ್ದಳೆ' ಇರುವ ರಾತ್ರಿಯಲ್ಲಿ ನೆರೆಮನೆಯನ್ನು ಸೇರಿಕೊಂಡು ಅರ್ಥಹೇಳುವುದನ್ನೊ, ಉಡುಪಿಯ ಪರ್ಯಾಯ ಎಂಬ ಉತ್ಸವ ಕಾಲದಲ್ಲಿ "ನೆಲದ ಕೆಲಬಲದಿ ಘಟ್ಟಿಸೆನಿಂದ ರನ್ನಗಂಬಂಗಳ ಮೇಲೆ ಬಿಗಿದಿಹ ಸಮುನ್ನತ ಮಹಾಮಂಡಪಗಳಂ ಚೆಲ್ವಾದ ಬೀದಿಗಳಲ್ಲಿ" ತಿರುಗಾಡುತ್ತಿರುವುದನ್ನೊ ನಾವು ಊಹಿಸಬೇಕಾಗುತ್ತದೆ. ಸುಮಾರು ಈ ಕಾಲದಲ್ಲಿಯೇ ಅವರು ಉಡುಪಿಯ ಬೋರ್ಡು ಸ್ಕೂಲಿನ ಲೈಬ್ರೆರಿಯಲ್ಲಿದ್ದ 'ಶಬ್ದಮಣಿ ದರ್ಪಣ' 'ಛಂದೋಂಬುಧಿ' 'ಅನುಭವಾಮೃತ' 'ಪ್ರಾಕ್ಕಾವ್ಯ ಮಾಲಿಕೆ'ಎಂಬೀ ಪುಸ್ತಕಗಳನ್ನು ಓದಿ; ಅವನ್ನು ಕರತಲಾಮಲಕವಾಗಿ ಮಾಡಿರಬೇಕು. ಹೀಗೆ ನೆಲದಡಿಯಲ್ಲಿಯ ಸಸ್ಯಾಹಾರವನ್ನು ಸಂಗ್ರಹಿಸಿ ಬೆಳೆಯುತ್ತಲಿದ್ದ ಪಾಂಡಿತ್ಯದ ಬೀಜಾಂಕುರವು ಬಡತನದ ಕಲ್ಲೆಡೆಯಲ್ಲಿ ಸಿಕ್ಕಿಕೊಂಡು ಮೇಲಕ್ಕೆ ಏಳಲಾರದೆ ಬಿಸಿಲ ಮೋರೆಯನ್ನು ಕಾಣಲಾರದೆ ಅಲ್ಲಲ್ಲಿಯೇ ಸುಳಿದಾಡುತ್ತಿತ್ತು. ದೈವವಶಾತ್ ಹಿಂದೂ ಮುದ್ರಣಾಲಯದ ಚಾಲಕರು ಕೈಕೊಟ್ಟು ಕಲ್ಲನ್ನು ಈಚೆಗೆ ಉರುಳಿಸಿಬಿಟ್ಟರು; ನಾರಾಯಣಪ್ಪನವರ 'ರೇವತೀ ಕಲ್ಯಾಣ' 'ಕುಮಾರವಿಜಯ'ಎಂಬೀ ಎರಡು ಯಕ್ಷಗಾನ ಪ್ರಸಂಗಗಳು ಪ್ರಕಾಶಕ್ಕೆ ಬಂದುವು.

ನಂದಳಿಕೆಯವರ ಇತರ ಗ್ರಂಥಗಳಿಗಿಂತ ಕುಮಾರ ವಿಜಯಕ್ಕೆ ಹೆಚ್ಚಿನ ಮಹತ್ವವನ್ನು ನಾನು ಕೊಡುತ್ತೇನೆಂಬುದಾಗಿ ನಾನು ಹಿಂದೆ ಹೇಳಿರುವೆನಷ್ಟೆ. ನಂದಳಿಕೆಯವರಿಗೆ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳ ಪರಿಚಯವನ್ನು ತಕ್ಕಷ್ಟು ಮಾಡಿಕೊಟ್ಟ ಪೂರ್ವೋಕ್ತ ಶ್ರೀಯುತ ಮಳಲಿ ಸುಬ್ಬರಾಯರನ್ನು ಕುರಿತು ಹೀಗೆಂದು ಉಲ್ಲೇಖವಿದೆ:—

"ಸರ್ವಭೂಷನ ಭಕ್ತ ಕವಿತಾ
ದರ್ಪಣಾಬ್ಧಿ ಗಭೀರ ಗುರುವೆನಿ
ಸಿರ್ಪ ಮಳಲಿ ಸುಬ್ಬರಾಯರಿಂಗರ್ಪಿಸುವೆನು."

ಈ ಮಳಲಿ ಸುಬ್ಬರಾಯರೇ ಉಡುಪಿಯ ಬೋರ್ಡ್ ಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದು, ಅನಂತರ ನಂದಳಿಕೆಯವರು ಕುಂದಾಪುರ ಹೈಸ್ಕೂಲಿನಲ್ಲಿ ಅಂಗಸಾಧನೆಯ ಉಪಾಧ್ಯಾಯ ಕೆಲಸದಲ್ಲಿ ಇದ್ದಾಗ ಇವರ ಜತೆಯ ಉಪಾಧ್ಯಾಯರಾದರು. ಈ ಸುಬ್ಬರಾಯರ ಅನುಮೋದನದಿಂದ ನಂದಳಿಕೆಯವರು ಸುಮಾರು ೧೮೯೬ ರಲ್ಲಿ 'ತಾಂಡವಮುನಿಯ ಕಥೆ' ಎಂಬ ತೊರವೆಯ ರಾಮಾಯಣದೊಳಗಿನ ಕೆಲವು ಪದ್ಯಗಳಿಗೆ ಟಿಪ್ಪಣಿಯನ್ನು ಬರೆದರೆಂದು ನಾನು ಕೇಳಿರುತ್ತೇನೆ. ನಂದಳಿಕೆಯವರು ಉಡುಪಿಯಲ್ಲಿ ಉಳಿದುಕೊಂಡನಂತರ ೧೮೯೩ರ ವರೆಗೆ ಕನ್ನಡ ಸಾಹಿತ್ಯಸಂಪಾದನೆಯಲ್ಲಿ ಎಲ್ಲಿಯ ತನಕ ಹೋಗಿದ್ದರೆಂಬುದನ್ನು ಶೋಧಿಸುವುದಕ್ಕೆ ಕುಮಾರ ವಿಜಯವು ತಕ್ಕಷ್ಟು ಬೆಳಕನ್ನು ಚೆಲ್ಲುತ್ತದೆ. ಪ್ರಸಂಗದ ಅನೇಕ ಹಾಡುಗಳ ದಾಟಿಯನ್ನು ತೋರಿಸುವುದಕ್ಕೆ ಇಟ್ಟ ಸೊಲ್ಲುಗಳು ಉಡುಪಿಯ ಮಾನಪತ್ರವಾದ ಸುದರ್ಶನದಲ್ಲಿ ಪ್ರಕಟವಾಗುತ್ತಿದ್ದ ತುಂಡುಪದಗಳ ಚರಣಗಳು, ಇಲ್ಲವೆ ನಂದಳಿಕೆಯವರೇ ಕಟ್ಟಿದ ತುಳು ಹಾಡುಗಳ ಭಾಗಗಳು, ಇಲ್ಲವೆ ಉಡುಪಿಯಲ್ಲಿ ಅಂದು ಆಡಿಸಿ ತೋರಿಸುತ್ತಿದ್ದ ಮರಾಟಿ ಪದಗಳ ಪಲ್ಲವಿಗಳು, ಇಲ್ಲವೆ ಪ್ರಚಾರದಲ್ಲಿದ್ದ ಇತರ ಪ್ರಸಂಗಗಳೊಳಗಿನ ಹಾಡುಗಳು-ಇದರಿಂದ ಯಕ್ಷಗಾನ ಪ್ರಸಂಗಕ್ಕೆ ಬೇಕಾದ ಹಾಡುಗಳನ್ನು ಯಾವ ದಾಟಿಯಲ್ಲಾದರೂ ಕಟ್ಟುವುದಕ್ಕೂ ಹಾಡುವುದಕ್ಕೂ ಅವರು ತಮ್ಮ ೨೦ನೆಯ ವಯಸ್ಸಿನೊಳಗೆ ಶಕ್ತರಾಗಿದ್ದರೆಂದು ಹೇಳಬೇಕಾಗುತ್ತದೆ. ಕುಮಾರ ವಿಜಯದೊಳಗಿನ ಯಮಕಗಳನ್ನೂ ಶಾಂತಪ್ರಾಸಗಳನ್ನೂ ಲಕ್ಷಿಸಿದರೆ, ಲಕ್ಷ್ಮೀಶನ ಜೈಮಿನಿಭಾರತವು ಅವರಿಗೆ ಮುಖೋದ್ಗೀತವಾಗಿರಬಹುದೆಂಬ ಹಾಗೆ ತೋರುತ್ತದೆ. ಈ ಅಭಿಪ್ರಾಯವು ರಾಮಪಟ್ಟಾಭಿಷೇಕವನ್ನೂ ರಾಮಾಶ್ವಮೇಧವನ್ನೂ ಓದುತ್ತಲೇ ಇನ್ನೂ ಬಲಗೊಳ್ಳುತ್ತದೆ. ಹಳೆಯ ಯಕ್ಷಗಾನ

ಪ್ರಸಂಗಗಳಲ್ಲಿ ಹುಡುಕಿದರೆ ದೊರೆಯದ 'ಮೊಳ್ಕೆ' 'ಕಾಗೆ' 'ಇರಲೊಡಂ' 'ಪೊಡಮಟ್ಟು' ಮೊದಲಾದ ಹಳಗನ್ನಡ ವ್ಯಾಕರಣ ಮರ್ಯಾದೆಗಳೂ 'ಪೊಸದೇಸೆ' 'ಕುಂಬಿಡು' 'ಬೆಸನ' ಮೊದಲಾದ ಶಬ್ದ ಪ್ರಯೋಗಗಳೂ ಅವರು ಅಂದು ಮಾಡಿದ್ದ ಪ್ರಾಚೀನ ಗ್ರಂಥ ಪರಿಚಯವನ್ನು ಸೂಚಿಸುತ್ತವೆ. ಕುಮಾರ ವಿಜಯದಲ್ಲಿ ಹೇರಳವಾಗಿ ಕಂಡುಬರುವ ಇಂಥ ಹಳಗನ್ನಡ ವ್ಯಾಕರಣ ಪ್ರಯೋಗಗಳು ಶಬ್ದಮಣಿ ದರ್ಪಣ ಭಾಷಾ ಭೂಷಣಗಳ ಪುರಶ್ಚರಣೆಯಿಂದ ಅವರ ಬಾಯಿ ವಿಾರಿ ಸಿಡಿದು ಬಿದ್ದಹಾಗೆ ತೋರುತ್ತವೆಯೇ ಹೊರತು ವ್ಯಾಕರಣ ಪಾಂಡಿತ್ಯದ ಗರ್ವೋದ್ರೇಕದಿಂದ ಇಟ್ಟಹಾಗೆ ಕಾಣುವುದಿಲ್ಲ. "ಪಾಲಿಸುಗೆ ಪಾರ್ವತೀಪರಮೇಶರುಂ" "ಅತ್ರಿಭೃಗು ದು ರ್ವಾಸ ವಿಶ್ವಾಮಿತ್ರರಿನೆ. . . ." ಇತ್ಯಾದಿ ಮಾತುಗಳು ಸಂಸ್ಕೃತದಲ್ಲಿ ಕಾವ್ಯದವರೆಗಾದರೂ ಹೋಗಿರಬೇಕೆಂಬ ಅನುಮಾನ ವನ್ನು ಹೊರಡಿಸುತ್ತವೆ. ಇದರೊಳಗಿನ ಕಂದಪದ್ಯಗಳಲ್ಲಿ ನಗಣ ಸಗಣಗಳು ಬರಬೇಕಾದಲ್ಲಿ ಬರುವುದಿಲ್ಲವೆಂಬುದು ನಿಜ. ಆದರೆ ಈ ಛಂದೋಲೋಪವು ನಮ್ಮ ಜಿಲ್ಲೆಯ ಕಂದ ಪದ್ಯಗಳಲ್ಲಿ ಬಹುಕಾಲದವರೆಗೆ ಸಾಮಾನ್ಯವಾಗಿತ್ತು.

ಕುಮಾರವಿಜಯದ ದೆಸೆಯಿಂದ ಲಕ್ಷ್ಮೀನಾರಣಪ್ಪ ನವರ ಹೆಸರು ನನ್ನ ಕಿವಿಯಲ್ಲಿ ಆಗಾಗ ಜಿನುಗುತ್ತಾ ಇದ್ದರೂ, ೧೯೦೫ರ ವರೆಗೆ ನನಗೂ ಅವರಿಗೂ ಯಾವತರದ ಪತ್ರವ್ಯವ ಹಾರವೂ ನಡೆದಿರಲಿಲ್ಲ. ಹೀಗಿರಲು ೧೯೦೫ ನೆಯ ಜುಲೈ ಮಾಸದಲ್ಲಿ ಮಂಗಳೂರ ಗವರ್ನಮೆಂಟ್ ಕಾಲೇಜಿನಲ್ಲಿ ಕನ್ನಡಕ್ಕಾಗಿ ತಿಂಗಳಿಗೆ ೨೦ ರೂಪಾಯಿ ಸಂಬಳದ ಕನ್ನಡ ಪಂಡಿತನ ಕೆಲಸಕ್ಕೆ ಒಂದು ಏರ್ಪಾಡಾಯಿತು. ಯಾರಿಗೂ ಬೇಡವಾದ ಈ ಉದ್ಯೋಗಕ್ಕೆ ನಾವಿಬ್ಬರೇ ಅರ್ಜಿದಾರರಾ ಗಿದ್ದೆವು. ಕನ್ನಡ ಅರಿಯದ ಇಂಗ್ಲಿಷ್ ಹೆಡ್‌ಮಾಸ್ತರ ನೊಬ್ಬನು ಕನ್ನಡ ಬಲ್ಲ ನಾರಾಯಣಪ್ಪನವರನ್ನು ಬಿಟ್ಟು, ಇಂಗ್ಲಿಷ್ ಬರುತ್ತದೆಂಬ ಕಾರಣದ ಮೇಲೆ ಆ ಜಾಗವನ್ನು ನನಗೆ ಕೊಟ್ಟರು. ಇದರ ಮರ್ಮವನ್ನು ತಿಳಿಯದ ನಾರಾ ಯಣಪ್ಪನವರು ನಾನೇನೋ ಕನ್ನಡ ವಾಚಸ್ಪತಿಯಾಗಿರಬಹು ದೆಂದು ನೆನಸಿ, ನನ್ನನ್ನು ಅಭಿನಂದಿಸಿ ಒಂದು ಪತ್ರವನ್ನು ಬರೆದರು. ನಾನು ಪ್ರತ್ಯುತ್ತರವನ್ನು ಬರೆಯುವಾಗ "ಬತ್ತದ ಸಿಪ್ಪೆಯನ್ನು ಕುಟ್ಟತಕ್ಕ ಒನಕೆಯನ್ನು ಕನ್ನಡ ಬರಹವನ್ನು ಬರೆಸುವುದಕ್ಕೆ ತಂದರು; ಚಿತ್ರ ಬಿಡಿಸುವ ಬಣ್ಣದ ಗರಿಯನ್ನು ಕಿವಿಯ ತುರಿಕೆಗೆ ಕುಗ್ಗೆ ಕಡ್ಡಿಯನ್ನಾಗಿ ಮಾಡಿದರು" ಎಂದು ಹೇಳಿ, ನಮ್ಮಿಬ್ಬರೊಳಗಿನ ಅಂತರವನ್ನು ಸ್ಪಷ್ಟಪಡಿಸಿದೆನು.

ಸುಮಾರು ಇದೇ ಕಾಲದಲ್ಲಿ ಶ್ರೀಯುತ ಎಂ. ಎ. ರಾಮಾನುಜ ಅಯ್ಯಂಗಾರ್ಯರೂ ಶ್ರೈ. ಎಸ್. ಜಿ. ನರಸಿಂಹಾ ಚಾರ್ಯರೂ ಕನ್ನಡ ವಾಙ್ಮಯದ ಬೀಗಮುದ್ರೆಯನ್ನು ಒಡೆದು, ಅಮೂಲ್ಯವಾದ ಕರ್ನಾಟಕ ಕೃತಿರತ್ನಗಳನ್ನು ಕಾವ್ಯ ಮಂಜರಿ ಎಂಬ ಮಾಸಪತ್ರದ ಮೂಲಕವಾಗಿ ಕನ್ನಡಿಗರಿಗೆ ದಾನಮಾಡುವ ಪ್ರಚಾರಕ ಕಾರ್ಯವನ್ನು ಕೈಕೊಳ್ಳುವಂಥವ ರಾದರು. ಅವರು ಬೆಳಕಿಗೆ ತಂದ ಉತ್ಕೃಷ್ಟಗ್ರಂಥಗಳನ್ನು ಮದ್ರಾಸ್ ಯೂನಿವರ್ಸಿಟಿಯವರು ಪಠ್ಯಪುಸ್ತಕಗಳನ್ನಾಗಿ ನಿಯಮಿಸಿ, ಅವರ ಸತ್ಕಾರ್ಯಕ್ಕೆ ತಕ್ಕಷ್ಟು ಆಶ್ರಯ ಕೊಡು ವಂಥವರಾದರು. ಎಫ್. ಎ. ಪರೀಕ್ಷೆಗೆ ೧೯೦೭ರಲ್ಲಿ ರತ್ನಾ ಕರಾಧೀಶ್ವರ ಶತಕವೂ ಚಿಕದೇವರಾಜ ವಂಶಾವಳಿಯೂ, ೧೯೦೮ರಲ್ಲಿ ಶ್ರೀರಾಮ ಪಟ್ಟಾಭಿಷೇಕವೂ ಅದ್ಭುತ ರಾಮಾ ಯಣವೂ ಪಠ್ಯಪುಸ್ತಕಗಳಾಗಿದ್ದು, ಅವನ್ನು ಕಲಿಸುವ (ಕಲ ಸುವ?) ಕೆಲಸವು ನನ್ನ ಮೇಲೆ ಬಿದ್ದಿತ್ತು. ಪಟ್ಟಾಭಿಷೇಕದ ಒಂದೆರಡು ಚರಣಗಳ ಅರ್ಥಾನುವಾದವು ನನ್ನನ್ನು ಸೋಲಿಸಿ ಬಿಟ್ಟದ್ದರಿಂದ, ನನಗೆ ಬಗೆಹರಿಯದ ಕೆಳಗೆ ಕಾಣಿಸಿದ ಭಾಗ ಗಳಲ್ಲಿ ಒಂದರ ಅರ್ಥವನ್ನೂ ಮತ್ತೊಂದರಲ್ಲಿ ಬಿಟ್ಟುಹೋದ ಪದಗಳನ್ನೂ ಹೇಳಿಕೊಡಬೇಕಾಗಿ ನಾನು ನಂದಳಿಕೆಯವರಿಗೆ ಕಾಗದ ಬರೆದೆನು. ಆಗ ನಂದಳಿಕೆ ಲಕ್ಷ್ಮೀನಾರಾಯಣಪ್ಪ ನವರು ಅದರ ಗ್ರಂಥಕರ್ತರೆಂದು ನನಗೆ ಕನಸಿನಲ್ಲಿ ಕೂಡ ಸಂಶಯವು ಹುಟ್ಟಿರಲಿಲ್ಲ.

೧. ತಂಬೆಲಸೋಲಂಕೆ ಬಳ್ಳುವ ಲತಾಂಗಮುದಿಱಿಸಿ
ಲಂ ಬೇರೆ ತೆಡೆದುಂಟೆ. ೩. ೩೩

೨. ಪೊಸ ಸೊಗವ ನೀನುಂಡುದೇ
ಕೊಡೆಯ ನಿನ್ನ ನುಭವಕೆ.........ಮೇದಿನಿಯ.....ರಾಘವ
೪. ೨೯.

ಮರುಟಪ್ಪಾಲಿಗೆ ಅವರ ಉತ್ತರವು ಬಂದಿತು. "ಇಱು ಸಿಲ್" ಎಂಬ ಶಬ್ದಕ್ಕೆ ಅರ್ಥವನ್ನು ಕೊಟ್ಟು, ಅದರ ಸಮ ರ್ಥನಕ್ಕಾಗಿ ಶಬ್ದಮಣಿ ದರ್ಪಣದ ಪುಟಸಂಖ್ಯೆಗೆ ನನ್ನ ಲಕ್ಷ್ಯ ವನ್ನು ಎಳೆದಿದ್ದ ಒಂದು ಟಿಪ್ಪಣಿಯು ಪತ್ರದಲ್ಲಿ ಇತ್ತು. ಗ್ರಂಥಪಾತವೆಂದು ಮೂಲದಲ್ಲಿ ಬಿಟ್ಟುಹೋದ ಪದಗಳು ಬಹುಶಃ ಇಂಥವುಗಳಾಗಿರಬಹುದೆಂದು ಅವರು ಪತ್ರದಲ್ಲಿ ನಿರ್ದೇಶಿಸಿದ್ದರು. ಆ ಪದಗಳನ್ನು ನಾನು ಮರೆತು ಬಿಟ್ಟದ್ದೂ ಪತ್ರದವಿಷಯದಲ್ಲಿ ಅಜಾಗರೂಕನಾದದ್ದೂ ಎಷ್ಟೋ ಶೋಚ ನೀಯವಾಗಿದೆ ಎಂದು ನಾನು ಹೇಳಬೇಕಾಗಿಲ್ಲ.

ನನಗೆ ಮೊದಲಿಂದಲೇ ನಂದಳಿಕೆಯವರ ಮೇಲಿದ್ದ ಗೌರವವು ದ್ವಿಗುಣಿತವಾಯಿತು. ನನಗಿದ್ದ ಗೌರವವನ್ನು ಶ್ರುತ ಪಡಿಸಿ, ಕುಮಾರ ವಿಜಯವನ್ನು ಶ್ಲಾಘಿಸಿ ನಾನು ಮತ್ತೊಂದು ಕಾಗದವನ್ನು ಬರೆದೆನು. ಅವರು ಆ ಪ್ರಶಂಸನೆಯನ್ನು ಕಿವಿಯ ಮೇಲೆ ಹಾಕಿಕೊಳ್ಳದೆ, ಪ್ರತ್ಯುತ್ತರದಲ್ಲಿ ಅದರ ಪ್ರಸ್ತಾವನೆಯನ್ನೇ ಬಿಟ್ಟು ಬಿಟ್ಟು ನನ್ನ ಅವಗಾಹನೆಗಾಗಿ 'ಮತ್ತೊಂದು ಪುಸ್ತಕವನ್ನು ಕಳುಹಿಸಿರುತ್ತೇನೆ; ಗ್ರಂಥವು

ಯೋಗ್ಯವೆಂದಿದ್ದರೆ ಅದನ್ನುಮುದ್ರಿಸುವುದಕ್ಕೆಸಾಧ್ಯವಿದೆಯೇ ಎಂಬದಾಗಿ ಬರೆದು ಆ ಪತ್ರದೊಂದಿಗೆ ೧೯೫೫ ನೆಯ ಸೆಪ್ಟೆಂಬರ್ ತಿಂಗಳಲ್ಲಿ ಒಂದು ಹಸ್ತಪ್ರತಿಯನ್ನು ನನಗೆ ಕಳುಹಿಸಿ ಕೊಟ್ಟರು. ಇದೇ--ರಾಮಾಶ್ವಮೇಧದ ಅವರ ಹಸ್ತಪ್ರತಿ; ಮುಂದೆ ಕಾವ್ಯಕಲಾನಿಧಿಯಲ್ಲಿ-ಪ್ರಕಟವಾದ ರಾಮಾಶ್ವಮೇಧದ ಮಾತೃಕೆಯು ಕೂಡ ಇದೇ ಹಸ್ತಪ್ರತಿಯೆಂದು ನಾನು ನೆನಸುತ್ತೇನೆ.

ನನ್ನಲ್ಲಿಗೆ ಕಳುಹಿಸಲಾದ ಪ್ರತಿಯಲ್ಲಿ ಸುಮಾರು ೫೦೦ ಪುಟಗಳು ಇದ್ದಿರಬಹುದು; ಮುತ್ತಿನಂತೆ ದುಂಡಗಾದ ಬರಹ, ವೋಡಿ ಇಲ್ಲ, ತಪ್ಪು ತಿದ್ದುಪಾಟುಗಳು ಕಡಮೆ. ಹೀಗಾದುದರಿಂದ ಕೈ ಬರೆಹವಾದರೂ ಅದನ್ನು ಓದುವುದಕ್ಕೆ ನನಗೆ ತೊಡಕಾಗಲಿಲ್ಲ. ನಾನು ಓದತೊಡಗಿದ್ದೇ ಸರಿ, ಹಸಿವು ನಿದ್ದೆ ಬಿಟ್ಟು, ಅದನ್ನು ಆದ್ಯಂತವಾಗಿ ಎರಡು ದಿವಸಗಳೊಳಗೆ ಮುಗಿಸಿ ಪುನ: ಓದುವುದಕ್ಕೆ ಹತ್ತಿದೆನು. ಓದಿದಷ್ಟಕ್ಕೆ ಇನ್ನೂ ಓದಬೇಕೆಂಬ ಆಸೆಯಾಗಿ, ಕಂಡಕಂಡವರನ್ನು ಕರೆದು ಅವರ ಮುಂದೆ 'ವಾಚಕಮಾಡಿದೆನು.' ಆದರೂ ಅದನ್ನು ರಚಿಸಿದವರು ನಂದಳಿಕೆ ಲಕ್ಷ್ಮೀನಾರಣಪ್ಪನವರಾಗಿರಬಹುದೆಂಬ ಶಂಕೆಯು ನನ್ನ ಮೂಢ ಮನಸ್ಸಿಗೆ ಮೂರು ತಿಂಗಳ ತನಕ ಹೊಳೆಯದೆ ಹೋಯಿತು. ನಾನು ಪತ್ರಸಮೇತವಾಗಿ ಆ ಹಸ್ತಪ್ರತಿಯನ್ನು ಅವರಿಗೆ ಹಿಂದಕ್ಕೆ ಕಳುಹಿಸಿದೆನು. ಪತ್ರದಲ್ಲಿ ನನ್ನ ಅಭಿಪ್ರಾಯವು ಇತ್ತು. ಮನೋರಮೆಯು ಗ್ರಂಥದ ವಿಷಯವಾಗಿ ಮುದ್ದಣ್ಣನೊಡನೆ ಯಾವ ಮಾತುಗಳನ್ನು ಆಡಿದಳೊ ಆ ಮಾತುಗಳನ್ನೇ ಇಟ್ಟು, "ಮುದ್ದಣ್ಣನ ಹೆಸರಿನಂತೆ ಮುದ್ದು ಮುದ್ದಾಯಿತು, ಹಿಂದಿಲ್ಲ ಮುಂದಿಲ್ಲ" ಎಂಬುದಾಗಿ ಕೊಂಡಾಡಿ, "ಗಾಜನ್ನು ಮೆಚ್ಚುವ ಕಾಲದಲ್ಲಿ ವಜ್ರವು ಬಿಕರಿಯಾಗುವುದು ದುರ್ಲಭವಾದ್ದರಿಂದ, ಅಚ್ಚು ಹಾಕಿಸಿದಲ್ಲಿ 'ಕೈಟಿತ್ತಿನ ಕಾಸಲಾ ಪೋಂಡ — ಮೈಟಿತ್ತಿನ ಮಾಸಲಾ ಪೋಂಡ" ಎಂಬ ತುಳುಗಾದೆಯಂತೆ ಆಗುವ ಸಂಭವವಿದೆ. ಎಂಬಿತ್ಯಾದಿಯಾಗಿ ನನ್ನಅಭಿಪ್ರಾಯವನ್ನುವೇದ್ಯವರಿಸಿದೆನು. ಇದೇ ಪತ್ರದಲ್ಲಿ ರಾಮಾಶ್ವಮೇಧದಿಂದಅನೇಕ ವಾಕ್ಯಗಳನ್ನು ಉದ್ಧರಿಸಿಟ್ಟು, ಅವುಗಳ ಅರ್ಥಾನ್ವಯಗಳನ್ನು ನನಗೆ ಹೇಳಿಕೊಡಬೇಕೆಂಬುದಾಗಿಯೂ ಅಪೇಕ್ಷಿಸಿದೆನು. ಈ ಪತ್ರಕ್ಕೆ ಉತ್ತರವು ಬರಲೇ ಇಲ್ಲ. ಉತ್ಸಾಹಭಂಗದಿಂದಲೋ ಅನಾದರಣೆಯಿಂದಲೊ ಇನ್ನು ಯಾವ ಕಾರಣದಿಂದಲೊ ಅವರು ಬಹು ಕಾಲದ ವರೆಗೆ ನನಗೆ ಪತ್ರ ಬರೆಯುವುದನ್ನು ನಿಲ್ಲಿಸಿಬಿಟ್ಟರು. ಕ್ರಮೇಣ ರಾಮಾಶ್ವಮೇಧವು ಕಾವ್ಯಕಲಾನಿಧಿಯಲ್ಲಿ ಪ್ರಕಟವಾಯಿತು.

ಅಚ್ಚು ಹಾಕಿದ ಸಂಪೂರ್ಣ ಪುಸ್ತಕವು ನನ್ನ ಕೈಗೆ ಬೀಳುತ್ತಲೆ ನಾನು ಗ್ರಂಥಕರ್ತೃವಿನ ವಿಚಾರ ಮಾಡತೊಡಗಿದೆನು. ರಾಮಾಶ್ವಮೇಧದ ಕವಿಯು ತುಳುನಾಡಿನವನು ಎಂದು ಊಹಿಸುವುದಕ್ಕೆ ನನಗೆ ಕಷ್ಟವಿರಲಿಲ್ಲ. ಗ್ರಂಥದಲ್ಲಿ ಎಲ್ಲೆಲ್ಲಿಯೂ ಕಣ್ಣಿಗೆ ಹೊಳೆಯುವ 'ಪೊಲಿ' 'ಕುರುಂಬಿಲ್' 'ಆರಾಟ' 'ಬಸದಿ' 'ಇಂದ್ರ'ಮೊದಲಾದ ತುಳು ಶಬ್ದಗಳು ಸಾಕಷ್ಟು ಹೇರಳವಾಗಿದ್ದುವು. ಕುಮಾರ ವಿಜಯದಲ್ಲಿರುವ ಒಂದೆರಡು ಮಾತುಗಳೇ ಈ ಗ್ರಂಥದಲ್ಲಿ ಇದ್ದುದರಿಂದ, ನಂದಳಿಕೆಯವರೇ ರಾಮಾಶ್ವಮೇಧದ ಕವಿಯಾಗಿರಬಹುದೆಂಬ ಸಂಶಯವು ಹುಟ್ಟಿತು. ಗ್ರಂಥವನ್ನು ಅಗೆದಷ್ಟಕ್ಕೆ ಈ ಶಂಕೆಯು ಬಲವಾಗುತ್ತ ಬಂದಿತು. ಗ್ರಂಥದ ಸರಣಿ, ವಿಸ್ತರಣಕ್ರಮ, ಸಂವಿಧಾನ, ಅಷ್ಟೇಕೆ—ಗ್ರಂಥವು ಆಧುನಿಕವಾಗಿ ತೋರುವಷ್ಟು ಅಪೂರ್ವತೆಯಿಂದ ಬರೆಯಲ್ಪಡುವುದಕ್ಕೆ ಕಾರಣವಾದ ಆ ಕಾಲದ ಪರಿಸ್ಥಿತಿಯ ಸ್ಫುಟವಾದ ಚಿತ್ರವೇ ನನ್ನ ಮನಸ್ಸಿನಲ್ಲಿ ಎದ್ದು ನಿಂತಿತು.

ಕುಮಾರವಿಜಯವನ್ನು ಬರೆದ ಲಕ್ಷ್ಮೀನಾರಾಯಣಪ್ಪನವರೇ ಅದ್ಭುತರಾಮಾಯಣ, ಶ್ರೀರಾಮಪಟ್ಟಾಭಿಷೇಕ, ಶ್ರೀರಾಮಾಶ್ವಮೇಧ ಎಂಬ ಗ್ರಂಥತ್ರಯವನ್ನು ಬೇರೆ ಬೇರೆ ಹೆಸರಿನಿಂದ ರಚಿಸುವುದಕ್ಕೆ ಕಾರಣಗಳು ಇಲ್ಲದೆ ಇರಲಿಲ್ಲ. ಕುಮಾರವಿಜಯವು ಪ್ರಸಿದ್ಧ ಯಕ್ಷಗಾನ ಪ್ರಸಂಗವಾಗಿದ್ದರೂ ಅದು ಅವರು ಬದುಕಿದ್ದಾಗ ಜನಪ್ರೀತವಾಗದೆ ಹೋಯಿತು. ಅದು ನವೀನ ಕಥೆಯಾಗಿದ್ದುದರಿಂದಲೊ, ಅಥವಾ ಅದರೊಳಗಿನ ಹಾಡುಗಳ ದಾಟಿಗಳು ಆಗ ವಾಡಿಕೆಯಲ್ಲಿ ಇಲ್ಲದುದರಿಂದಲೊ, ಅಥವಾ ಗ್ರಂಥದಲ್ಲಿಯ ಹಳಗನ್ನಡ ಪದಗಳೂ ಪ್ರಯೋಗಗಳೂ ಹಳ್ಳಿಯವರ ತಲೆಗೆ ಹತ್ತಲಾರದಷ್ಟು ಕ್ಲಿಷ್ಟವಾದುದರಿಂದಲೊ, ಅಥವಾ ಈಗಿನ ಕವಿಗಳೆಲ್ಲಾ ನರಕವಿಗಳೆಂಬುದಾಗಿ ರೂಢಿಯಲ್ಲಿರುವ ತಪ್ಪು ಅಭಿಪ್ರಾಯದಿಂದಲೊ ಕುಮಾರ ವಿಜಯದ ೨,೦೦೦ ಪ್ರತಿಗಳಲ್ಲಿ ಹೆಚ್ಚಿನವು ಹಾಗೆಯೇ ರಾಶಿಯಾಗಿ ಬಿದ್ದಿದ್ದುವು. ಗ್ರಂಥವನ್ನು ಬರೆದರೆ ಅದನ್ನು 'ನೂತನ ಕವಿತೆಯೆಂದು ಕುಂದಿಟ್ಟು' ಜರಿಯುವವರೇ ಹೊರತು 'ಮತ್ಸರವನುಳಿದು ಅದನ್ನು ಆಲಿಸುವವರು' ಇರಲಿಲ್ಲ. ನಿಂತ ಸ್ಥಳದಿಂದ ದೂರವಿರುವ ಬೆಟ್ಟವು ಬಹು ರಮ್ಯವೆಂದು ಹೇಗೆ ನೆನಸುತ್ತಾರೋ ಹಾಗೆಯೇ ತಮ್ಮ ಕಾಲಕ್ಕಿಂತ ಹಿಂದೆ ಬಹು ದೂರ ಆಗಿಹೋದ ಕವಿಗಳೆಲ್ಲಾ ವರಕವಿಗಳೆಂದು ಭಾವಿಸುವುದು ಎಲ್ಲೆಲ್ಲಿಯೂ ವಾಡಿಕೆಯಾಗಿದೆ. ಹೊಸಕವಿ ಎಂಬ ಅವಹೇಳನಕ್ಕೆ ಆಸ್ಪದ ಕೊಡದೆ ಹೊಸ ಗ್ರಂಥವನ್ನು ಬರೆದು ಪ್ರಕಟಿಸುವ ಉಪಾಯವು ಯಾವುದು? ಈ ವಿಚಾರವು ನಂದಳಿಕೆಯವರಲ್ಲಿ ಯಾವಾಗ ಎದ್ದಿತೊ ಆ ಸಮಯಕ್ಕೆ ಸರಿಯಾಗಿ ಶ್ರೀಯುತ ಎಂ. ಎ. ರಾಮಾನುಜಯ್ಯಂಗಾರ್ಯರು ಪ್ರಚಾರಪಡಿಸಿದ ರತ್ನಾಕರಾಧೀಶ್ವರಶತಕವು ನಂದಳಿಕೆಯವರ ಕೈಗೆ ಬಿದ್ದಿತು. ನಮ್ಮ ಜಿಲ್ಲೆಯ ಮೂಡ

ಬಿದಿರೆಯ ಪ್ರಾಂತದವನಾದ ಆ ಕವಿಯ ನಿಜವಾದ ಹೆಸರು ತಿಳಿಯಬರುವುದಿಲ್ಲವೆಂಬುದಾಗಿಯೂ ಶೃಂಗಾರ ಕವಿ ರಾಜ ಹಂಸ ಎಂಬಿವು ಆತನು ಇಟ್ಟುಕೊಂಡ ಹೆಸರುಗಳೆಂಬದಾಗಿ ಯೂ ಶತಕದ ಪೀಠಿಕೆಯಲ್ಲಿದ್ದ ಅಭಿಪ್ರಾಯವು ನಂದಳಿಕೆ ಯವರಿಗೆ ಹೆಸರು ಬದಲಾಯಿಸಿಕೊಳ್ಳುವುದಕ್ಕೆ ಕಲಿಸಿಕೊಟ್ಟಿ ದ್ದರೂ ಇರಬಹುದು.

ಗ್ರಂಥವನ್ನು "ಆವ ದಾಟಿಯೊಳ್ ಪೇಟ್ವುದು? ಪದ್ಯ ದೊಳ್ ಪೇಟ್ವುದೋ ಗದ್ಯದೊಳ್ ಪೇಟ್ವುದೊ? ಪದ್ಯಂ ವಧ್ಯಂ,ಗದ್ಯಂ ಹೃದ್ಯಂ, ಹೃದ್ಯಮಪ್ಪಗದ್ಯದೊಳೆ ಪೇಟ್ವುದು." ಪದ್ಯದಲ್ಲಿ ಹೇಳಿದರೆ ಕನ್ನಡದ ಸೊಗಸನಱಿಯಲಾರ್ತೆ ನಿಲ್ಲೆನಗೆ....ಸಕ್ಕಸದ ಚೆಲ್ವಿಂದ ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾಗುವುದು. ಅಂದಿನ 'ಪಾಳ್‌ಬಣ್ಣನೆ ಯನ್ನು' ತರಬೇಕಾಗುವುದು. ಇಂಥ ಕೃತಿಯನ್ನು ಯಾರು ಮೆಚ್ಚುವರು?ಯಾರು ಉಡುಗೊರೆ ಕೊಡುವರು?ಆ ರಗಳೆಯ ದಿನಗಳು ಎಷ್ಟೋ ಹಿಂದಕ್ಕೆ ಕಳೆದುಹೋದುವು. ಈ ಕಾಲವು ವೆಂಕಟಾಚಾರ್ಯರ ಕಾದಂಬರಿಗಳ ಕಾಲ. ಅವರ ವಿಷ ವೃಕ್ಷವು ಗ್ರಂಥಮಾಲೆಯಲ್ಲಿ ಪ್ರಕಟವಾಗಿ ನಮ್ಮ ನಂದಳಿಕೆ ಯವರನ್ನು ಮುಗ್ಧರನ್ನಾಗಿ ಮಾಡಿದೆ. ಕಮಲಮುಖಿಗೂ ಅವಳ ಗಂಡನಿಗೂ ನಡೆದ ಸಂಭಾಷಣೆಯು ಅವರ ಮನಸ್ಸಿ ನಲ್ಲಿ ರೂಪುಗೊಂಡಿದೆ. ಈ ರೇಖೆಗಳಿಂದ ಮೇಲಕ್ಕೆ ಎದ್ದ ಚಿತ್ರವೇ ಮುದ್ದಣ್ಣ ಮನೋರಮೆ ಎಂಬ ದಂಪತಿಗಳು. ಹಳೆಯ ಗ್ರಂಥಗಳ ಹೊಗಳು ಭಟ್ಟರನ್ನು ಮೆಚ್ಚಿಸುವುದಕ್ಕೆ ಇಂದಿನ ಕಾದಂಬರೀ ನಿರೂಪಣ ಪದ್ಧತಿಯೇ ತಕ್ಕದಾದ ಉಪಾಯವೆಂಬುದನ್ನು ಅವರು ವಿಷವೃಕ್ಷ,ಶೂರಸೇನಚರಿತ್ರೆ' ಜಯಸಿಂಹರಾಜ ಚರಿತ್ರೆಗಳನ್ನು ಓದಿದ ಕೂಡಲೇ ಗೊತ್ತು ಮಾಡಿಕೊಂಡು ಆ ನೂತನ ಮಾರ್ಗದಲ್ಲಿ ಹರಿಯತಕ್ಕ ಭಾಷೆ ಯನ್ನು ಪೋಷಿಸುವುದಕ್ಕೆ ಯೋಚಿಸಿರಬೇಕು. ಪುರಾಣ ಕಥೆಯನ್ನು ಮುದ್ರಾಮಂಜೂಷದ ಹೊಸಗನ್ನಡದಲ್ಲಿ ಹೇಳಿ ದರೆ, ಮೈಸೂರು ವಿದ್ವಾಂಸರಿಗೆ ಆದರಣೀಯವಾಗುವುದೊ ಎಂಬ ಅನುಮಾನ; ದುರ್ಗೇಶನಂದಿನಿಯಂತಹ ನವೀನ ಕಥೆ ಯನ್ನು ಹಳಗನ್ನಡದಲ್ಲಿ ಬರೆದು ಮಂಗಳೂರಿನವರನ್ನು ಮೆಚ್ಚಿಸುವ ಎಂದರೆ, ನೂತನ ಕಥಾ ಸೃಷ್ಟಿಯನ್ನು ಮಾಡು ವಷ್ಟು ಪ್ರತಿಭೆಯು ತನ್ನಲ್ಲಿ ಉಂಟೊ ಇಲ್ಲವೊ ಎಂಬ ಅಪ ನಂಬಿಕೆ; ಇವೆರಡನ್ನೂ ತಪ್ಪಿಸಿಕೊಳ್ಳುವುದಕ್ಕೆ ದಾರಿ ಯಾ ವುದು? ಹಳೆಯ ಕಥೆಯನ್ನು ಹೊಸ ಆಯದಲ್ಲಿ ಕಟ್ಟಿ, ಇತ್ತ ಹೊಸ ಶೈಲಿಯೂ ಅಲ್ಲ ಅತ್ತ ಹಳೆ ಶೈಲಿಯೂ ಅಲ್ಲ, ಇವೆರಡರ ನಡುವಣ ಸರಣಿಯನ್ನು ಒದಗಿಸಿಕೊಳ್ಳಬೇಕಾ ಯಿತು. ಈ ಸರಣಿಯನ್ನು ಕಲ್ಪಿಸಿಕೊಳ್ಳುವುದಕ್ಕೆ ಚಿಕದೇವ ರಾಜ ವಂಶಾವಳಿಯನ್ನು ತೆರೆದಿದ್ದಾಯಿತು. ಅದರ ಹಳ ಗನ್ನಡವು ತಲೆ ಒಡೆಯುವಷ್ಟು ಗಟ್ಟಿ; ವಾಣೀ ವಿಲಾಸ ಗ್ರಂಥ ಗಳನ್ನು ಬಿಚ್ಚಿದ್ದಾಯಿತು. ಇದರ ಕನ್ನಡವು ಬೆರಳು ಬಿಗಿಯ ದಷ್ಟು ಪೆಡಸು. ಏನು ಮಾಡಬೇಕಾಯಿತು? ಒಂದರ ಕಾಠಿನ್ಯವನ್ನೂ ಮತ್ತೊಂದರ ಶೈಥಿಲ್ಯವನ್ನೂ ತೆಗೆದುಹಾಕಿ, ಅವೆರಡನ್ನೂ ಹೊಸೆದು, ತುಳು ನುಡಿಗಳನ್ನೂ ಕನ್ನಡ ಮಾತು ಗಳನ್ನೂಸಂದರ್ಭಕ್ಕನುಸಾರವಾಗಿ ಹಳಗನ್ನಡದಿಂದ ತಿರುಪಿ, ಎಷ್ಟು ಅರ್ಥಭಾರವನ್ನು ಹಾಕಿದರೂ ಕಡಿದುಹೋಗದಂತೆ ಹಳೆಯ ವ್ಯಾಕರಣ ಸೂತ್ರಗಳಿಂದ ಗಂಟಿಕ್ಕಿ, ತನ್ನದೇ ಆದ ಒಂದು ಅಪೂರ್ವ ಭಾಷಾಸರಣಿಯನ್ನು ನಿರ್ಮಿಸಿದರು. ಕಿವಿಯಲ್ಲಿ ಮಂಜುಳವಾಗಿ ಧ್ವನಿಸಿ, ಎದೆಯನ್ನು ತಣ್ಣಗೆ ತೋಯಿಸಿ, ಮನಸ್ಸನ್ನು ತಣಿಸುವ ಎಣೆಯಿಲ್ಲದ ಈ ಭಾಷಾ ಸರಣಿಯು ಇವರನ್ನೇ ಒಲಿದು, ಇವರನ್ನೇ ವರಿಸಿ, ವಿಧೇಯ ಳಾದ ದಾಸಿಯಂತೆ ಇವರ ವಶವಾಗಿ ಹೋಯಿತು.

ನಾನು ರಾಮಾಶ್ವಮೇಧದ ವಿಷಯವಾಗಿ ಮೇಲೆ ನಿರೂ ಪಿಸಿದ್ದ ಆಧಾರಗಳನ್ನು ಸಂಕೋಚವಾಗಿ ಹೇಳಿ, ೧೯೦೦ನೆಯ ಫೆಬ್ರವರಿ ಸುಮಾರಕ್ಕೆ ಮತ್ತೊಂದು ಪತ್ರವನ್ನು ಅವರಿಗೆ ಬರೆ ದೆನು. ಅದಕ್ಕೆ ಅವರು "ನಾನು ತ್ವರೆಯಲ್ಲಿ ಮಂಗಳೂರಿಗೆ ಬರುವವನಿದ್ದೇನೆ, ಆಗ ಮುಖತಃ ಮಾತನಾಡೋಣ" ಎಂಬ ದಾಗಿ ತಿಳಿಸಿದರು. ಅವರ ಆಗಮನವನ್ನೇ ಎದುರುನೋಡು ತ್ತಿದ್ದ ನನಗೆ ಎಪ್ರಿಲ್ ತಿಂಗಳಿನ ಒಂದುದಿನ ಸಾಯಂಕಾಲ ಮಂಗಳೂರು ಇಂಗ್ಲಿಷ್ 'ಇಗರ್ಜಿಯ'ಬಲಗಡೆಯ ಮೈದಾನಿ ನಲ್ಲಿ ಅವರ ಭೇಟಿಯಾಯಿತು. ಸುಮಾರು ೫॥ ಅಡಿ ಎತ್ತ ರದ, ಎಣ್ಣೆ ಕಪ್ಪು ಬಣ್ಣದ, ತಕ್ಕಷ್ಟು ಅಗಲದ ಹಣೆಯ, ಕಳೆಗುಂದಿದ ಮೋರೆಯ,ಹರೆಯದ ಕುರುಹುಗಳಿಲ್ಲದೆ ಶಾಂತ ವಾಗಿರುವ ಮುಖಮುದ್ರೆಯ ಲಕ್ಷ್ಮೀನಾರಾಯಣಪ್ಪನವರನ್ನು ನಾನು ಕಣ್ಣಾರೆ ಕಂಡೆನು. ಕನ್ನಡದ ಪ್ರಸ್ತಾಪವು ಬರುವುದಕ್ಕೆ ಹೊತ್ತು ಹೋಗಲಿಲ್ಲ. ನಾನು ಗದಾಯುದ್ಧದ ಮಾತು ಎತ್ತಿ ದೆನು; ಕೂಡಲೇ ಒಳಗಿದ್ದ ಉತ್ಸಾಹವು ಚಿವುಟಿದಂತಾಯಿತು; "ಜತುಗೇಹಾನಲದಿಂ . . ." ಎಂಬ ಚರಣವನ್ನು ಪ್ರಾರಂಭಿಸಿ, ಸುಮಾರು ೨೫ ಪದ್ಯಗಳನ್ನು ಹಾಡುವವರೆಗೆ ಅವರ ಉತ್ಸಾ ಹವು ನಿಲ್ಲಲಿಲ್ಲ. ತರುವಾಯ ನಾನು ಗ್ರಂಥತ್ರಯಗಳ ವಿಚಾರ ವನ್ನು ತಂದು ಹಾಕಿ, "ಇದಕ್ಕೆ ಏನು ಹೇಳುವಿರಿ? ನಾನು ಬರೆದುದು ಸರಿಯಲ್ಲವೆ?" ಎಂದು ಕೇಳಿದೆನು. ಅವರು ನಗುತ್ತ ಎರಡು ನಿಮಿಷಗಳ ಮೇಲೆ "ಯದ್ಭಾವಂ ತದ್ಭವತಿ" ಎಂದು ನುಡಿದು ತಮ್ಮ ಸಂಭಾಷಣೆಯನ್ನು ಸ್ಕೂಲುಗಳಲ್ಲಿ ಕನ್ನಡ ಕಲಿಸುವ ಕ್ರಮದ ಕಡೆಗೆ ತಿರುಗಿಸಿ, ನನ್ನ ಪ್ರಶ್ನೆಯನ್ನು ತಮ್ಮ ನಗುವಿನಲ್ಲಿ ತೇಲಿಸಿ ಬಿಟ್ಟರು. ಮೈಯಜಾಡ್ಯದ ನಿಮಿತ್ತ ವಾಗಿ ಅವರು ಮಂಗಳೂರಿಗೆ ಬಂದಿದ್ದರೆಂದು ನನಗೆ ಗೊತ್ತಾ ಯಿತು. ನಾನು ಅವರನ್ನು ಕಂಡದ್ದು ಇದೇ ಮೊದಲು. ಈ

ಮೊದಲಿನ ದರ್ಶನವೇ ಕೊನೆಯ ದರ್ಶನವಾಯಿತು. ಅನಂತರ ಅವರು ಬಹಳ ವರ್ಷಬದುಕಲಿಲ್ಲ. ಅವರ ಅಕಾಲ ಮರಣದ ದು:ಖಕರವಾದ ಸಮಾಚಾರವು ಸುವಾಸಿನೀ ಮಾಸ ಪತ್ರಿಕೆಯಲ್ಲಿ ಪ್ರಕಟವಾಯಿತು. ಪತ್ರಿಕೆಯ ಸಂಪಾದಕರಾಗಿದ್ದ ಶ್ರೀಯುತ ಬೆನಗಲ ರಾಮರಾಯರು ತಮ್ಮ ಅಗ್ರಲೇಖನದಲ್ಲಿ ಅವರ ಗುಣ ಕಥನವನ್ನು ಮಾಡಿ ಅವರ ನಿಧನದಿಂದ ಕನ್ನಡಕ್ಕೆ ತಗಲಿದ ಹಾನಿಯನ್ನು ವಿಸ್ತರಿಸಿ ಬರೆದರು. ಆ ಸಂದರ್ಭದಲ್ಲಿಯೇ ಉಡುಪಿಯ "ಚಕ್ರಧಾರಿ" ಎಂಬ ಹೆಸರಿನಿಂದ 'ಜೋಜೋ' ಮಾತಿನ ಮೇಲೆ ಟಿಪ್ಪಣವನ್ನು ಒಮ್ಮೆ ಸುವಾಸಿನಿಯಲ್ಲಿ ಬರೆದವರು ಲಕ್ಷ್ಮೀನಾರಾಯಣಪ್ಪನವರೇ ಎಂಬದಾಗಿ ಶ್ರೀ ರಾಮರಾಯರು ಬಿಚ್ಚಿಹೇಳಿ, ನಂದಳಿಕೆಯವರೇ ಆ ಗ್ರಂಥತ್ರಯಗಳ ಕವಿಗಳೆಂಬುದನ್ನುಸೂಚಿಸಿದರು. ಈ ವಿಚಾರವನ್ನು ಸುವಾಸಿನಿಯ ಅಗ್ರಲೇಖನವು ಕನ್ನಡಿಗರ ಲಕ್ಷ್ಯಕ್ಕೆ ತಂದೊಡ್ಡಿದುದರಲ್ಲಿ ಒಂದು ಪಾಲು ನನಗೂ ಇತ್ತು. ಈ ಸಂದಿಗ್ಧ ವಿಷಯವನ್ನು ಕುರಿತು ಆ ಮಾಸಪತ್ರಿಕೆಯ ಅನಂತರದ ಸಂಚಿಕೆಗಳಲ್ಲಿ ಲೇಖಗಳು ಕಾಣುವುದಿಲ್ಲವಾದರೂ, ರಾಮಾಶ್ವಮೇಧದ ಮೇಲೆ ಯಾರೋ ಇಬ್ಬರಿಂದ ಪ್ರಕಟವಾದ ಒಂದು ವಿಮರ್ಶೆಯು ರಾಮಾಶ್ವಮೇಧವನ್ನು ಮೈಸೂರಲ್ಲಿ ಓದತೊಡಗಿದ್ದರೆಂಬುದಕ್ಕೆ ಸಾಕ್ಷಿಯಾಗಿತ್ತು. ಆ ರಾಮಾಶ್ವಮೇಧವು ನಾರಾಯಣಕೃತ ಗ್ರಂಥವೆಂದರೆ ಕಿಡಿ ಕಿಡಿಯಾಗುತ್ತಿದ್ದ ಮಂಗಳೂರು ಸೆಂಟ್ ಎಲೊಶಿಯಸ್ ಕಾಲೇಜು ಪಂಡಿತರು ಸುವಾಸಿನಿಯ ಅಭಿಪ್ರಾಯವನ್ನು ಒಪ್ಪಿಕೊಂಡು, ಆ ಶಾಲೆಯ ಅಧಿಕಾರಿಗಳ ಮೂಲಕ ಕಾವ್ಯ ಕಲಾನಿಧಿಯ ಸಂಪಾದಕರಿಗೆ ತಿಳಿಸಲು ಶ್ರೀಯುತ ಎಂ. ಎ ರಾಮಾನುಜಯ್ಯಂಗಾರ್ಯರು 'ಈ ಚರ್ಚಾಸ್ಪದವಾದ ವಿಷಯವನ್ನು ನಾರಾಯಣಪ್ಪನವರ ಮಿತ್ರರಿಗೆ ಬಿಟ್ಟಿರುತ್ತೇವೆ' ಎಂಬದಾಗಿ ಮೊದಲು ಇಟ್ಟುಕೊಂಡ ಅಭಿಪ್ರಾಯವನ್ನು ಬಿಟ್ಟು, ಅದ್ಭುತ ರಾಮಾಯಣದ ದ್ವಿತೀಯ ಮುದ್ರಣದಲ್ಲಿ "ಇವರೇ ಗ್ರಂಥಕರ್ತರಾಗಿದ್ದರೂ ಇರಬಹುದು . . . . . . ಇವರಷ್ಟು ಸಮರ್ಥರಾದ ಕವಿಗಳು ಈಗ ಇಲ್ಲವೇ ಇಲ್ಲವೆಂದು ಹೇಳಬಹುದು. ಇವರ ಪದಶಕ್ತಿಯು ಅದ್ಭುತವಾದುದು. ಗದ್ಯ ಗ್ರಂಥಗಳೇ ವಿರಳವಾಗಿದ್ದ ಕಾಲದಲ್ಲಿ ಇಂತಹ ಉತ್ಕೃಷ್ಟ ಗ್ರಂಥಗಳನ್ನು ಬರೆದು ಮಾಡಿದ ಇವರ ಉಪಕಾರವು ಕನ್ನಡ ದೇಶದಲ್ಲಿ ಮರೆಯತಕ್ಕುದಾಗಿಲ್ಲ" ಎಂಬದಾಗಿ ಹೊಗಳಿದರು. ರಾಮಾಶ್ವಮೇಧದ ವಿಷಯವಾಗಿ ಇಂಡಿಯನ್ ರಿವ್ಯೂ ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾದ ಒಂದು ಮನೋರಂಜಕವಾದ ಇಂಗ್ಲಿಷ್ ಲೇಖವು ಆ ಗ್ರಂಥದ ಪರಿಚಯವನ್ನು ಇಂಗ್ಲಿಷ್‌ವಾಚಕರ ಲಕ್ಷ್ಯಕ್ಕೆ ತಂದುದನ್ನು ಆಲೋಚಿಸಿದರೆ, ರಾಮಾಶ್ವಮೇಧವು ಆಗಲೇ ಸಕಲರಿಗೂ ಆದರಣೀಯವಾಗುತ್ತಬರಹತ್ತಿತ್ತೆಂಬುದು ವ್ಯಕ್ತವಾಗುತ್ತದೆ.

ಕವಿಗಳೂ ಚಿತ್ರಕರೂ ಶಿಲ್ಪಿಗಳೂ ಇಹಲೋಕದಿಂದ ಹೊರಟು ಹೋಗುವುದಕ್ಕೆ ಮುಂಚಿತವಾಗಿಯೇ ಪ್ರಸಿದ್ಧಿಗೆ ಏರಿದ ಅವರ ಕೃತಿಗಳ ಸಂಗತಿಯನ್ನು ಇತಿಹಾಸವು ಹೇಳುತ್ತದೆ. ಈ ಕೃತಿಗಳಲ್ಲಿ ಹೆಚ್ಚಿನವುಗಳು ಅರಸರ ಆಶ್ರಯ, ಹಣವಂತರ ಸಹಾಯ, ಸ್ವಮತಸ್ಥರ ಪಕ್ಷಪಾತಗಳ ಬಲದಿಂದ ಬಿರುಸುಗಳಂತೆ ಬೆಳಬೆಳಗಿ ಬಾನಿಗೆ ಏರಿ, ಏರಿದ ಹಾಗೆ ಕೆಳಕ್ಕೆ ಬಿದ್ದು, ಕತ್ತಲಲ್ಲಿ ಕಾಣದೆ ಹೋಗುತ್ತವೆ. ಒಂದೆರಡು ಮಾತ್ರವೇ (ಅಂಬಿಗನ ಪಟವಾತು, ಬಿಯದಂ ಬರೆದ ಕಬ್ಬ, ಕುಂಬುಂಬನ ಬಯಲ್ನುಡಿ) ಚಿರ ಜೀವಿಗಳಾಗಿ ಬದುಕಿ ಲೋಕಯಾತ್ರೆಯಲ್ಲಿ ನಮಗೆ ಬೆಳಕನ್ನು ಕೊಡುತ್ತವೆ. ಇಂಥ ಮಹಾವರಕವಿಗಳ ತಾರಾಮಂಡಲವನ್ನು ಮುಟ್ಟುವಷ್ಟು ಉನ್ನತವಾದ ಪ್ರತಿಭೆ, ಉದಾತ್ತವಾದ ವಿಚಾರಗಳು, ಉತ್ತಮವಾದ ವಿಷಯಜ್ಞಾನ ಇವು ಲಕ್ಷ್ಮೀನಾರಾಯಣಪ್ಪನವರಗ್ರಂಥಗಳಲ್ಲಿ ಕಡಮೆ. ಅವರು ಕನ್ನಡ ಗ್ರಂಥಗಳ ಗಂಧಗಾಳಿ ಸೋಂಕದ, ಕನ್ನಡ ವಿದ್ವಾಂಸರ ಸುಳಿವು ಕಾಣದ, ಕನ್ನಡ ಪ್ರಾಂತದಿಂದ ಬಹು ದೂರವಾದ, ತುಳುನಾಡಿನ ಬಂಜರು ನೆಲದಲ್ಲಿ ತನ್ನಷ್ಟಕ್ಕೆ ಚಿಗುರಿದ ಗಂಧದ ಸಸಿಯಂತೆ ಇದ್ದು, ಬಲಿತು ಬೆಳೆಯುವ ಮೊದಲೇ ಬಿದ್ದುಹೋದರು. ಹೀಗಾದುದರಿಂದ ಅವರ ಅದ್ಭುತವಾದ ಪದಶಕ್ತಿ, ಅನ್ಯಾದೃಶವಾದ ವಾಕ್ಸರಣಿ, ಹೊಸತನ್ನು ಹಳೆಯದಾಗಿಯೂ, ಹಳೆಯದನ್ನು ಹೊಸದಾಗಿಯೂ ಮಾಡುವ ಮಾಟಗಾರಿಕೆ, ಮನಸ್ಸಿಗೆ ಅಸಹ್ಯವಾಗದ ಶೃಂಗಾರ, ಕಲ್ಲೆದೆಯನ್ನು ಕರಗಿಸತಕ್ಕ ಕರುಣೆ—ಇವುಗಳ ನರುಗಂಪೇ ಮೂಗಿಗೆ ಬರುತ್ತದೆ. ರನ್ನಜನ್ನಾದಿಗಳ ಕವಿತಾ ಸೌಗಂಧವೂ ಶ್ರೀಯುತ ರವೀಂದ್ರನಾಥರ ಪುಷ್ಪಗಂಧವೂ ಈ ಕೃತಿಗಳಲ್ಲಿ ಇಲ್ಲವೆಂದು ತೋರಿದರೂ, ೨೦೦ ವರ್ಷಗಳ ಈಚೆಯಿಂದ ಮುಳ್ಳುಪೊದೆಯಾಗಿ ಬಿದ್ದಿದ್ದ ಕನ್ನಡ ತೋಟವು ರಾಮಾಶ್ವಮೇಧದಂತಹ ಒಂದು ಹೂವನ್ನಾದರೂ ಲೋಕಕ್ಕೆ ಕೊಟ್ಟಿತೆಂಬದಕ್ಕೆ ನಾವು ಹೆಚ್ಚಳಪಡಬೇಕು.

ಗ್ರಂಥಕಾರರ ಆಯುಷ್ಕಾಲದಲ್ಲಿ ಅವರನ್ನು ಕಣ್ಣೆತ್ತಿ ನೋಡದ ಜನರು ಅವರ ಅವಸಾನಾನಂತರ ಪ್ರಸಿದ್ಧಿಗೆ ಬರುವ ಅವರ ಕೃತಿಗಳನ್ನು ಮೆಲ್ಲಮೆಲ್ಲನೆ ಓದತೊಡಗುವ ಕಾರಣದಿಂದ ವಾಙ್ಮಯವು ಕ್ರಮೇಣ ಕಣ್ಣಿಗೆ ಕಾಣದಂತೆ ಮಾರ್ಪಡುವುದೆಂಬ ಹೇಳಿಕೆಗೆ ರಾಮಾಶ್ವಮೇಧವು ಒಂದು ದೃಷ್ಟಾಂತವಾಗಿದೆ. ಶ್ರೀಯುತ ಮುಳಿಯದ ತಿಮ್ಮಪ್ಪಯ್ಯನವರ "ಚಂದ್ರಾವಳಿ"ಯು ರಾಮಾಶ್ವಮೇಧದ ಅಚ್ಚಿನಲ್ಲಿ ಎರಕ ಹೊಯ್ದ ಗ್ರಂಥ. ಆರ್. ವೆಂಕಟಸುಬ್ಬರಾಯರ (Kamala's letters to her husband ) ಎಂಬುದರ ಕನ್ನಡ ಅನುವಾದದಲ್ಲಿ ಗಂಡಹೆಂಡಿರು ತಮ್ಮೊಳಗೆ ಪರಸ್ಪರ ಸಂ

ಬೋಧಿಸಿಕೊಳ್ಳುವ ಮೆಚ್ಚಿನ ಮಾತುಗಳು ಬಹುಶಃ ಮುದ್ದಣ ಮನೋರಮೆಯರ 'ಒಲ್ಮೆಯ ನುಡಿಗಳೇ'. ರಾಮಾಶ್ವಮೇಧವು ಕೈಗೆ ಸಿಕ್ಕದೆ ಹೋಗಿದ್ದರೆ, 'ಶ್ರೀನಿವಾಸನ' ನವಿಲ್ಗರಿಯ ಚಿತ್ರದ ಕಡ್ಡಿಯು ವೆಂಕಟಾಚಾರ್ಯರ ಕಾದಂಬರೀ ಭಾಷಾಮಾರ್ಗಕ್ಕೆ ತಿರುಗುತ್ತಿತ್ತೋ ಏನೋ ಯಾರಿಗೆ ಗೊತ್ತು? ಇನ್ನೂ ಶ್ರೀಯುತ ಡಿ. ವಿ. ಗುಂಡಪ್ಪನವರ ಮುತ್ತುಗಳಂತಿರುವ ಮಾತುಗಳಲ್ಲಿಯೂ, ರತ್ನಗಳಂತಿರುವ ಪದ್ಯಗಳಲ್ಲಿಯೂ ಮಿನುಗುವ ಬಣ್ಣಬಣ್ಣದ ಛಾಯೆಗಳು ರಾಮಾಶ್ವಮೇಧವು ಬೆಳಕಿಗೆ ಬಂದುದರ 'ಪ್ರತಿಫಲವೊ' ಎಂಬ ಅನುಮಾನವಾಗುತ್ತದೆ. ಇಂಗ್ಲಿಷ್ ವಿದ್ಯೆಯ ಹುಳಿಯಿಂದ ನಮ್ಮ ನಾಡಿನ ನಾಲಗೆಯು ಕನ್ನಡವನ್ನು 'ಸವಿದು ನೋಡದೆ' ಅದು ಹಾಳು ಹೊಲಸು ಎಂದು ಹಳಿಯುತ್ತ ಬರುತ್ತಿದ್ದ ಕಾಲದಲ್ಲಿ, ಸಾಹಿತ್ಯಪರಿಷತ್ತೂ ಕನ್ನಡ ಏಕೀಕರಣ ಮಂಡಳವೂ ಕನ್ನಡದ ವಿಜಯಧ್ವಜವನ್ನು ಎತ್ತಿಹಿಡಿದು ಶಂಖನಾದವನ್ನು ಮಾಡುವ ಮೊದಲೇ "ತಿರುಳ್ಗನ್ನಡದಲ್ಲಿ ಬಿಗುವು ಇದೆ, ಇಂಪು ಇದೆ; ಧನಿ ಇದೆ, ಥಾಟಿ ಇದೆ; ಜೀವಾಳ ಇದೆ, ಜೀವಕಳೆ ಇದೆ; ನಾನು ಕೇಳಿದ್ದೇನೆ, ಕಂಡಿದ್ದೇನೆ—ಬೇಕಾದರೆ ಕೊಡುತ್ತೇನೆ" ಎಂದು ತಾಯಿಯನ್ನು ಕಾಣದ ಗುಡ್ಡದ ಮರೆಯ ಕರುವಿನ ಕೂಗಿನಿಂದ ಕೂಗಿ ನಮ್ಮ ಕಿವಿಗಳನ್ನು ನಿಮಿರಿಸುವ ಹಾಗೆ ಮಾಡಿದ ಪುಣ್ಯವು ಅದ್ಭುತರಾಮಾಯಣ ರಾಮಾಶ್ವಮೇಧಗಳನ್ನು ವಿರಚಿಸಿದ ಕೈಲಾಸವಾಸಿ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರ ಸೆರಗಿಗೆ ಬೀಳಲಿ!

ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು ಯಶಶ್ಶೇಷರಾದರು. ಯಾವ ವಿದ್ವಾಂಸರ ಪುರಸ್ಕಾರವನ್ನು ಪಡೆಯುವುದಕ್ಕಾಗಿ ಅವರು ತಮ್ಮ ಹೆಸರನ್ನು ಆಗಾಗ ಬೇರ್ಪಡಿಸಿದರೋ, "ತಿರುಳ್ಗನ್ನಡಿಗನಡಿದಾವರೆಯ ಬಂಡುಣಿಗಳಪ್ಪ" ಯಾವ "ಕನ್ನಡ ಕಬ್ಬಿಗರ ಮನೆಯೂಳಿಗದವನೆಂದು" ತೋರಿಸಿಕೊಂಡರೋ,"ಜಗದಿ ಪುಟ್ಟಿದವರಿಗೆ ಮನದ ಬಯಕೆ ಪಿರಿದು" ಆದುದರಿಂದ "ಕನ್ನಡಿತಿಯೊರೆದ ನುಡಿಯೆಂದಿದಂ ಭಾವಿಸದೆ ಕನ್ನಡಿಗನೊರೆದ ನುಡಿಯೆಂದು ಸಂಭಾವಿಪುದೆಂದು" ಯಥಾರ್ಥವಾಗಿ ಯಾವ ವಿದ್ವಜ್ಜನರೊಂದಿಗೆ ಬೇಡಿಕೊಂಡರೋ, ಆ ಮೈಸೂರು ಕರ್ನಾಟಕಾಭಿಮಾನಿಗಳೇ ಲಕ್ಷ್ಮೀನಾರಾಯಣಪ್ಪನವರ ಯಶಸ್ಸಿನ ಸಮಾರಾಧನೆಯನ್ನು ಕೈಕೊಂಡು, ಅವರ ವಿಷಯವಾದ ಉಪನ್ಯಾಸಗಳನ್ನೂ ಅವರ ಚಿತ್ರ ಸ್ಥಾಪನೆಯನ್ನೂ, ಅವರ ಹೆಸರಿನಲ್ಲಿ ಪದಕಗಳನ್ನೂ ಉಚಿತಗಳನ್ನೂ ಅಟ್ಟು ಅಳವಡಿಸುತ್ತಿದ್ದಾಗ—ಅವರು ಜನಿಸಿದ ಜಿಲ್ಲೆಯಲ್ಲಿಯೇ ಜನಿಸಿ, ಅವರು ಇದ್ದ ಕಾಲದಲ್ಲಿಯೇ ಇದ್ದು,ಅವರು ಬರೆದ ಗ್ರಂಥಗಳಿಂದ ಉತ್ಕರ್ಷಗೊಂಡ ನನ್ನಂಥನು ಆ ಯಶಸ್ಸಿನ ಸಮಾರಾಧನೆಗಾಗಿ ಅವರ ಹೊರಗಿನ ಜೀವನ ಕ್ರಮವನ್ನೂ ಒಳಗಿನ ಅಂತರ್ಯಸ್ಥಿತಿಯನ್ನೂ ತೆರೆದು ತೋರಿಸಲಿಕ್ಕೆ ಸಹಾಯಕವಾದ ಅವರ ಚರ್ಯೆಚೇಷ್ಟೆಗಳನ್ನೂ ಸುಖದುಃಖದ ಸಂದರ್ಭಗಳನ್ನೂ ನಡೆನುಡಿಗಳನ್ನೂ ಕಾಗದ ಪತ್ರಗಳ ಆಧಾರದಿಂದ ಬರೆದಿದ್ದರೆ ಈ ಲೇಖವು ಎಷ್ಟು ರುಚಿಯಾಗುತ್ತಿತ್ತು! ಆದರೆ ಮಾಡುವುದೇನು? ನನ್ನಲ್ಲಿ ಬೇಕಾದ ಸಂಗ್ರಹವೂ ಇಲ್ಲದೆ ಬರೆಯುವ ಶಕ್ತಿಯೂ ಸಾಲದೆ, ಕೈ॥ ಲಕ್ಷ್ಮೀನಾರಾಯಣಪ್ಪನವರ ವಿಷಯವಾಗಿ ನನಗೆ ಗೊತ್ತಿದ್ದಷ್ಟನ್ನು ಕಲಸಿ, ಈ ಗೊಡ್ಡುಸಾರನ್ನು ಮಾಡಬೇಕಾಗಿ ಬಂದಿತು.

ಸತ್ತವರ ಆತ್ಮವು ಸ್ಮರಿಸಿದ ಮಾತ್ರಕ್ಕೆ ಕೆಳಕ್ಕೆ ಇಳಿಯುತ್ತದೆಂಬ ಒಂದು ಹಿರಿಯರ ಹೇಳಿಕೆ ಇದೆ. ಸತ್ತವನ ಆತ್ಮವು ತಿರಿಗಿ ಜನ್ಮಕೆ ಬೀಳಬಾರದೆಂಬ ಅಭಿಪ್ರಾಯದಿಂದ ಸತ್ತವನನ್ನು ಸ್ಮರಿಸುವುದೇ ಕಡಿಮೆ. ಆತನು ಉಂಡಿದ್ದ ತಟ್ಟೆ, ಉಟ್ಟಿದ್ದ ಬಟ್ಟೆ, ಹಿಡಿದಿದ್ದ ಕಡ್ಡಿ, ಬರೆದಿದ್ದ ಕಾಗದ ಮುಂತಾದುವನ್ನು ಅವನ ಹಿಂದೆಯೇ ದಾನಮಾಡಿ ಬಿಡುವುದು ರೂಢಿಯಾಗಿದೆ. ಮೃತನ ವಿಷಯವಾಗಿ ಮಾತುಕಥೆಯನ್ನು ಆಡರು; ಆತನ ಹೆಸರನ್ನು ಉಚ್ಚರಿಸಲೊಲ್ಲರು; ಮೃತನ ಹೆಸರುಳಿಯದಂತೆ ಮಾಡುವ ಈ ಪದ್ಧತಿಯ ಕೆಲಸವನ್ನು ನಮ್ಮಲ್ಲಿ ಸಹಜವಾಗಿರುವ ಆಲಸ್ಯವೂ, ಬಡತನವೂ ಸಂಪೂರ್ಣಮಾಡುತ್ತವೆ. ಇದರ ದೆಸೆಯಿಂದ ಮಹನೀಯರ ಚರಿತೆಗೆ ಬೇಕಾದ ಲೇಖನ ಸಾಮಾಗ್ರಿಗಳಿಗೆ ನಮ್ಮಲ್ಲಿ ದೊಡ್ಡ ಅಭಾವವೆಂದು ವಿಷಾದಿಸಬೇಕಾಗಿದೆ. ಆದರೆ ಇನ್ನೊಂದು ದೃಷ್ಟಿಯಿಂದ ನೋಡಿದರೆ, ಈ ಪದ್ಧತಿಯು ಅಷ್ಟೊಂದು ಹಾಳೆಂದು ತಿಳಿಯಲಾಗದು. ಅದು ಅಸೂಯೆಯ ಬಾಯನ್ನು ಮುಚ್ಚುತ್ತದೆ; ಹಗೆಯ ಕೈಯನ್ನು ಕಟ್ಟುತ್ತದೆ. ಸದ್ಗತಿಯನ್ನು ಪಡೆದವರು ಈ ಜನ್ಮದಲ್ಲಿದ್ದಾಗ ಮಾಡಿದಕಾರ್ಯಾಕಾರ್ಯಗಳ ವಿಮರ್ಶೆಯನ್ನೂ ಅವರ ವಿವಿಧ ಆಲೋಚನೆಗಳ ಪರಿಶೀಲನವನ್ನೂ ಅವರ ಉದ್ದೇಶಧ್ಯೇಯಗಳ ವಿಚಾರವನ್ನೂ ಮಾಡುವುದಕ್ಕೆ ನಮಗೇನು ಅಧಿಕಾರ? ಅಧಿಕಾರವಿದ್ದರೂ ಆ ಅಧಿಕಾರವನ್ನುನಡಿಸುವಾಗ ಅಧಿಕಾರಿಯ ರಾಗದ್ವೇಷಗಳಿಂದ ಮೃತನ ಹೆಸರಿನ ಮೇಲೆ ಸಲ್ಲದ ಭೂಷಣೆಯೊ ಇಲ್ಲದ ದೂಷಣೆಯೊ ಬೀಳಲಿಕ್ಕಿಲ್ಲವೆಂದು ಹೇಗೆ ಹೇಳಬಹುದು? ಹೀಗಾದುದರಿಂದ ಕೈ॥ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರಲ್ಲಿ ನನಗಿದ್ದ ಅಭಿಮಾನದಿಂದ ಬರೆಯಲ್ಪಟ್ಟ ಈ ಲೇಖದಲ್ಲಿ ಅವರ ಹೆಸರಿನ ಮೇಲೆ ನನ್ನ ಕೈಯಿಂದ ಪ್ರಮಾದ ವಶಾತ್ ಮಸಿಯು ಬಟ್ಟು ಬಿದ್ದಿದ್ದರೆ, ಅದನ್ನು ತೊಡೆದು ಬಿಡಬೇಕಾಗಿ ವಾಚಕರೊಡನೆ ಬಿನ್ನಯಿಸುತ್ತೇನೆ.

"ಪ್ರಬುದ್ಧ ಕರ್ಣಾಟಕ-೧೯೨..

# ಸರ್ವಜ್ಞನ ಓನಾಮ ಪದ್ಧತಿ

'ಮಕ್ಕಳಿಗೆ ಪಾಠಗಳನ್ನು ಹೇಗೆ ಕಲಿಸಬೇಕು? ಯಾವಾತನು ಗುರುಸ್ಥಾನಕ್ಕೆ ಯೋಗ್ಯನು? ಬೋಧನೆಯ ಸ್ವರೂಪವು ಎಂಥಾದ್ದು?' ಎಂಬೀ ಮೊದಲಾದ ವಿಚಾರಗಳು ಇಂಗ್ಲಿಷ್ ಶಾಸ್ತ್ರಜ್ಞರಿಂದ ನಮಗೆ ಇತ್ತೀಚೆಗೆ ಪ್ರಾಪ್ತವಾದುವೆಂದು ಇಂದಿನ ಉಪಾಧ್ಯಾಯರಲ್ಲಿ ಅನೇಕರು ಕಣ್ಣುಮುಚ್ಚಿ ನಂಬಿ, ಇಂಗ್ಲಿಷ್ ಭಾಷೆಯ ಆಧಾರವಾಕ್ಯಗಳನ್ನು ತಮ್ಮ ಪಾಠ ಪ್ರವಚನಗಳಲ್ಲಿ ಮಾತು ಮಾತಿಗೆ ತಂದೊಡ್ಡುವುದುಂಟು. ಇಂಥ ಆಧಾರವಚನಗಳಿಗೆ ಸರಿಯಾದ ಪ್ರಮಾಣ ವಾಕ್ಯಗಳು ಸಂಸ್ಕೃತಭಾಷಾಭಿಜ್ಞರಿಗೆ ತೀರ ಹೊಸದುವಲ್ಲ; ಇವನ್ನು ಅವಲಂಬಿಸಿಕೊಂಡು ಪರಂಪರೆಯಾಗಿ ಕಲಿಸುತಿದ್ದ ಅಯ್ಯಗಳ ಮಠದ ಪರಿಚಯವಿದ್ದ ಸರ್ವಜ್ಞಕವಿಯು ಕೂಡ ಶಿಕ್ಷಣದ ಹಲವು ವಚನಗಳನ್ನು ಅಲ್ಲಲ್ಲಿ ಹೇಳಿದ್ದಾನೆ. ಸರ್ವಜ್ಞ ವಚನಗಳನ್ನು 'ದಾನಪದ್ಧತಿ' 'ರಾಜನೀತಿ ಪದ್ಧತಿ' 'ಯೋಗಪದ್ಧತಿ' ಇತ್ಯಾದಿ ಹೆಸರುಗಳಿಂದ ಅಧ್ಯಾಯವಿಭಾಗ ಮಾಡಿದಂತೆ, ಅವನು ಅಲ್ಲಲ್ಲಿ ಹೇಳಿರುವ ಶಿಕ್ಷಣದ ಸೂಕ್ತಿಗಳನ್ನು ಕ್ರೋಡೀಕರಿಸಿ ಸರ್ವಜ್ಞನ ಓನಾಮಪದ್ಧತಿ ಎಂದು ಹೆಸರಿಟ್ಟು ಓದಿದರೆ, ಅವನು ಸಾಹಿತಿಗಳನ್ನು ತಲೆದೂಗಿಸತಕ್ಕ ಕವಿಯೂ ಅಲ್ಲದೆ ಈಗಿನ ಶಾಲಾ ಉಪಾಧ್ಯಾಯರು ಮನ್ನಿಸತಕ್ಕ ಶಿಕ್ಷಣಕ್ರಮಜ್ಞನೂ ಮನಶ್ಶಾಸ್ತ್ರಜ್ಞನೂ ಆಗಿದ್ದನೆಂದು ಖಂಡಿತವಾಗಿ ಹೇಳಬಹುದು.

ಉಪಾಧ್ಯಾಯರಾಗಲು ಇಂಥ ಜಾತಿಮತಸ್ಥರು ಮಾತ್ರವೇ ಯೋಗ್ಯರೆಂಬದಾಗಿ ಸರ್ವಜ್ಞನ ಅಭಿಪ್ರಾಯವಿಲ್ಲ. ಉಪಾಧ್ಯಾಯನು ಶಾಸ್ತ್ರದ ಸತ್ವವನ್ನು ಸತ್ಯವಾಗಿ ಬೋಧಿಸಲು ಶಕ್ತನಾಗಿದ್ದರೆ ಸಾಕು. 'ಊರಿಗೆ ದಾರಿಯನು ಯಾರು ತೋರಿದರೇನು?. . . . ಗುರುವು ತಾನಾರಾದೊಡೇನು?' ಸರ್ವಶಾಸ್ತ್ರಗಳ ಸಂಪೂರ್ಣ ಪರಿಣತಿಯುಳ್ಳ ಉಪಾಧ್ಯಾಯರು ದುರ್ಲಭರೆಂಬದನ್ನು ಸರ್ವಜ್ಞನು ಬಲ್ಲನು. 'ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ;' ಅಷ್ಟೇ ಅಲ್ಲ, 'ಬಲ್ಲೆನೆಂಬುವ ಮಾತು ಎಲ್ಲವೂ ಹುಸಿ ಕಾಣೋ!' ಆದುದರಿಂದ ಅವನು ಉಪಾಧ್ಯಾಯನಲ್ಲಿ ಅತ್ಯಗಾಧವಾದ ಪಾಂಡಿತ್ಯವನ್ನು ನಿರೀಕ್ಷಿಸುವುದಿಲ್ಲ; ಉಪಾಧ್ಯಾಯನು 'ಸರ್ವರೊಳು ಒಂದೊಂದು ನುಡಿ ಕಲಿತು ವಿದ್ಯೆಯ ಪರ್ವತವೆ' ಆಗಲು ನೋಡಬೇಕು. ಅಂಥ ಉಪಾಧ್ಯಾಯನಿಗೆ ಬರಿಯ ಜ್ಞಾನವೊಂದಿದ್ದರೆ ಮಾತ್ರ ಸಾಲದು, 'ಜ್ಞಾನಿಗೆ ಗುಣ ಲೇಸು . . . . . ಸ್ವಾನುಭವಿಗಳ ನುಡಿ ಲೇಸು.' ಗುಣವಿಲ್ಲದ, ಸ್ವಾನುಭವವಿಲ್ಲದ, ಉಪಾಧ್ಯಾಯನ ಓದು 'ಗಿಳಿಯೋದಿನಂತಕ್ಕು.'

'ವೇದ ಶಾಸ್ತ್ರಾಗಮವ ಓದಿದಡೆ ಫಲವೇನು?
ವೇದಿಸುವ ಚಿತ್ತ ಸಮರಸವಿಲ್ಲದೊಡೆ
ಬೂದಿಯಲ್ಲಿ ಹೋಮ! ಸರ್ವಜ್ಞ.'

ಗುರೂಪದೇಶವಿಲ್ಲದೆ ವಿದ್ಯಾರ್ಜನೆ ದೊರೆಯಲಿಕ್ಕಿಲ್ಲವೇ? ಶಾಲೆಗೆ ಹೋಗದೆ ಮನೆಯಲ್ಲೇ ಇದ್ದುಕೊಂಡು ಪುಸ್ತಕಪಾಠ ಮಾಡಿದರೆ ಸಿದಿಯಾಗದೇ? ಈ ಪ್ರಶ್ನೆಗಳಿಗೆ ಸರ್ವಜ್ಞನು ಸಕಾರಣವಾಗಿ ಉತ್ತರಕೊಟ್ಟಿರುತ್ತಾನೆ. ಗುರೂಪದೇಶವು ಶಿಷ್ಯನಿಗೆ ಇಗತ್ಯ. ಆ ಬೋಧನೆ 'ತಾನಾಗಿ ತನ್ನನರಿದಿಪ್ಪ ಜ್ಞಾನಿಯೊಡನೆ ಮಾಡುವ ಒಡನಾಟ.' ಗುರುಮುಖದಿಂದ ಉದ್ಭವಿಸುವ ವಾಣಿಯಲ್ಲಿ ವ್ಯಕ್ತಿತ್ವವಿದೆ, ಜೀವಕಳೆ ಇದೆ. ಆದರೆ ಹೇಳಿದ್ದನ್ನೇ ಹೇಳುವ ಕೇಳಿದ್ದನ್ನೇ ಕೇಳುವ ಪುಸ್ತಕಪಾಠದಲ್ಲಿ ಸ್ವಾನುಭವ ಇಲ್ಲ, ಆತ್ಮನ ಒಲುಮೆ ಇಲ್ಲ; ಅದು ನಿಸ್ಸಾರ, ನಿರ್ಜೀವ. ಗುರು ಸನ್ನಿಧಿಯಲ್ಲಿ ವಿಷಯ ಚರ್ಚೆಗೂ ಅವಕಾಶವಿದೆ. 'ಕಟ್ಟಿಗೆಗಳೆರಡನ್ನು . . . . ಗಟ್ಯಾಗಿ ಎರಡು ಸಂಧಿಸಲ್ಕೆ ಬೆಟ್ಟುಕೊಂಡಂತೆ' ಶಿಷ್ಯನು ಸಂದಿಗ್ಧ ವಿಷಯಗಳನ್ನು ತನ್ನ ಉಪಾಧ್ಯಾಯನೊಂದಿಗೆ ನಿಷ್ಕರ್ಷಿಸಿ ನಿವಾರಿಸಿಕೊಳ್ಳಲು ಅನುಕೂಲ್ಯವಿದೆ. 'ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ.' ಗುರೂಪದೇಶದಿಂದಲ್ಲದೆ ವಿದ್ಯೆಯು ಪಕ್ವವಾಗದು, ಫಲಿಸಲಾರದು. 'ಒಳ್ಳೆಯ ಗುರುವಿನ ಉಪದೇಶವಿಲ್ಲದ ಶಿಷ್ಯರು ಬಳ್ಳಿಕುರುಡರಂತೆ ಹಳ್ಳಕ್ಕೆ ಬೀಳುವರು.'

'ವಿದ್ಯೆ ಕಲಿತರೆ ಇಲ್ಲ, ಬುದ್ಧಿ ಕಲಿತರೆ ಇಲ್ಲ.
ಉದ್ಯೋಗ ಮಾಡಿದರೆ ಇಲ್ಲ, ಗುರುಮುಖ
ಇದ್ದಲ್ಲದಿಲ್ಲ—ಸರ್ವಜ್ಞ.'

'ಗುರುರಾಯನುಪದೇಶ ದೊರೆಕೊಂಡಿತಾದಡೆ
ಹರಿವುದು ಪಾಪವೆಂತೆನಲು, ವಜ್ರದಿಂ
ಗಿರಿಯ ಹೊಯ್ದಂತೆ—ಸರ್ವಜ್ಞ.'

ಶಾಲೆಯಲ್ಲಿ ತಕ್ಕ ವ್ಯವಸ್ಥೆಯನ್ನು ಏರ್ಪಡಿಸುವುದೂ (Organization) ಮಕ್ಕಳನ್ನು ಅಂಕೆಯಲ್ಲಿ ಇಟ್ಟುಕೊಳ್ಳುವುದೂ (Discipline) ಉಪಾಧ್ಯಾಯನ ಕರ್ತವ್ಯಗಳೆಂಬುದನ್ನು ಈ ಕಾಲದಲ್ಲಿ ಯಾರಿಗೂ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಒಳ್ಳೆಯ ಏರ್ಪಾಟು ಇಲ್ಲದ ಮತ್ತು ಸರಿಯಾದ 'ಶಿಸ್ತು' ಇಲ್ಲದ ಶಾಲೆಯು ಬೇಗನೆ ಕೆಟ್ಟುಹೋಗುವುದೆಂಬುದು ನಿಶ್ಚಯ. ಶಾಲೆಯ ವ್ಯವಸ್ಥೆಗೂ ಭದ್ರತೆಗೂ ಒಬ್ಬ ತಲೆಯಾಳು ಇದ್ದೇ ತೀರಬೇಕು. 'ಗುರುವು ಇಲ್ಲದ ಮಠವು, ಹಿರಿಯರಿಲ್ಲದ ಮನೆಯು, ಅರಸಿಲ್ಲದೂರು, ಇವು ಮೂರು ನುಲಿಹರಿದ ಹೊರಸಿನಂತೆ' ಕಟ್ಟುಪಾಡು ಇಲ್ಲದೆ ಬಲವಿಲ್ಲದೆ ಬಿದ್ದುಹೋಗುವುವು. ರಾಜನಿಗೆ ರಾಜಧರ್ಮವು ಹೇಗೋ

ಹಾಗೆಯೇ ಗುರುವಿಗೂ ಒಂದು ಧರ್ಮವಿದೆ, ಅವನು ಆ ಧರ್ಮಕ್ಕೆ ಒಳಪಟ್ಟಿರಲೇಬೇಕು. ಹಾಗೆ ಧರ್ಮವಿಧೇಯನಾಗಿ ನಡೆದರೆ ಮಾತ್ರ ಉಪಾಧ್ಯಾಯನು ಮಕ್ಕಳನ್ನು ತನ್ನ ಅಧಿಕಾರಕ್ಕೆ ಒಳಪಡಿಸಿ ಅಂಕೆಯಲ್ಲಿ ಇಟ್ಟುಕೊಳ್ಳಬಹುದು. 'ಆಳಾಗ ಬಲ್ಲವನು ಆಳುವನು ಅರಸಾಗಿ, ಆಳಾಗಿ ಬಾಳಲರಿಯದನು ಕಡೆಯಲ್ಲಿ ಹಾಳಾಗಿ ಹೋಹ!' ಮಕ್ಕಳು ಶಾಲೆಯಲ್ಲಿ ಹೇಳಿದ ಹಾಗೆ ಕೇಳಿಕೊಂಡಿರಬೇಕು, ಬಲ್ಲವರೊಡನೆ ಸೆಣಸಾಡಬಾರದು, ಉದ್ಧರುಟು ಮಾತನಾಡಬಾರದು ಎಂಬದಾಗಿ ಸರ್ವಜ್ಞನ ಹೇಳಿಕೆ ಇದ್ದರೂ, ಮಕ್ಕಳಲ್ಲಿ ಅಂಥ ವಿಧೇಯತೆಯನ್ನು ಸಾಧಿಸುವುದಕ್ಕಾಗಿ ಅನಾದಿಕಾಲದಿಂದ ಇದುವರೆಗೆ ನಮ್ಮಲ್ಲಿ ವಾಡಿಕೆಯಾಗಿ ಬಂದಿರುವ ದಂಡಪ್ರಯೋಗವು ಮಾತ್ರ ಅವನಿಗೆ ಸಮ್ಮತವಿದ್ದ ಹಾಗೆ ಕಂಡು ಬರುವುದಿಲ್ಲ.

ಶಿಕ್ಷಣಕಾರ್ಯವು ದಂಡಪ್ರಯೋಗದಿಂದಲೇ ಸಾಧ್ಯವೆಂಬ ಒಂದು ಪುರಾತನ ಅಭಿಪ್ರಾಯಕ್ಕೆ 'ಮರ್ದನಂ ಬಲವರ್ಧನಂ', 'ಬಿಸಿಯಾಗದೆ ಬೆಣ್ಣೆ ಕರಗದು', 'ಬೆತ್ತದ ಪೆಟ್ಟು ಕಲಿಸುವ ಗುಟ್ಟು' ಇತ್ಯಾದಿ ನಾಣ್ಣುಡಿಗಳೇ ಸಾಕ್ಷಿಗಳು; ಶಿಕ್ಷೆ, ಶಿಕ್ಷಣ ಎಂಬೀ ಶಬ್ದಗಳು ಮೂಲದಲ್ಲಿ ಏಟು ಕೊಡುವುದನ್ನೇ ಸೂಚಿಸುತ್ತವೆ. ಮಕ್ಕಳ ಮನೋವ್ಯಾಪಾರಗಳನ್ನು ಅರಿಯದೆ, ಆಗದ ಹೋಗದ ವಿಷಯಗಳನ್ನು ಅವರ ತಲೆಯಲ್ಲಿ ತುಂಬುವುದಕ್ಕಾಗಿ ಸಿಡಿದು ಸಿಟ್ಟಾಗಿ, ಬೈದು ಹೊಯ್ದು ತಾರಾಮಾರ ಮಾಡುವವರು ಈಗಲೂ ಇದ್ದಾರೆ. ಇಂಥವರ ಮೂಲಪುರುಷನು ನರಕಪಾಲವರ್ಧಕನಾದ ಯಮನು; ಹಿಂದೆ ಓನಾಮಕ್ಕಾಗಿ ಪ್ರಹ್ಲಾದನ ಚಿತ್ರಹಿಂಸೆ ಮಾಡಿಸಿದ ಚಂಡಾಮರ್ಕರೆಂಬ ಉಪಾಧ್ಯಾಯರು ಇದೇ ಸಂತತಿಯವರು. 'ಅಕ್ಷರಾಭ್ಯಾಸಕಿರಿಸಿದೊಡೆ ..... ಅಕ್ಷಿಯಿಂದೀಕ್ಷಿಸದೆ ವಾಚಿಸದಿರಲ್ಕೆ . . . ಶಿಕ್ಷಿಸಿ ಕನಲ್ದು ಬರೆ' ಎಂದು ಚಂದ್ರಹಾಸನ ಮೇಲ್ಬಿದ್ದು ಗುಡುಗುಡಿಸಿದ ದುಬೋರ್ಧಕನೇ ಇಂಥ ಉಪಾಧ್ಯಾಯರ ಹಿರಿಯಣ್ಣನು. ಸರ್ವಜ್ಞನು ಮಾತ್ರ ಈ ಮನೆತನಕ್ಕೆ ಸೇರಿದವನಲ್ಲ. ಅವನು ಮಕ್ಕಳನ್ನು ಹೊಡೆಯಬೇಕು, ಬಡೆಯಬೇಕು ಎನ್ನುವ ದಂಡಧಾರಿಯೂ ಅಲ್ಲ; ಮಕ್ಕಳು ನಮ್ಮ ಜೀವವೆಂಬ ಕುರುಡು ಅಕ್ಕರೆಯಿಂದ ಅವರು ಹೇಗೂ ಇರಲಿ, ಅವರಿಗೆ ಶಿಕ್ಷೆಯೇ ಬೇಡವೆನ್ನುವ ಕುಳಿಂದನೂ ಅಲ್ಲ. ಮಕ್ಕಳನ್ನು ಕಲಿಸುವುದರಲ್ಲಿ 'ಜುಲುಂ' ಸಲ್ಲದು, ಇದೇ ಅವನ ಭಾವ. ತಿಂಡಿಯಲ್ಲಿ ರುಚಿ ಇದ್ದರೆ ಮಕ್ಕಳು ಸಹಜವಾಗಿ ಬಾಯಾಡಿಸಿ ತಿನ್ನುವಂತೆ, ಬಣ್ಣದ ಒಡವೆಗಳು ಹರಡಿದ್ದರೆ ಅವನ್ನು ತಾವಾಗಿ ಕೈಯಾಡಿಸಿ ಎತ್ತಿಕೊಳ್ಳುವಂತೆ, ಉಪಾಧ್ಯಾಯನ ಮಾತುಗಳು ಚಿಕ್ಕವರ ಮನಸ್ಸಿಗೆ ಎಟಕುವ ರಂಜಕವಾಗಿದ್ದರೆ, ಶಿಕ್ಷಣವು ಸೊಗಸಾಗುವುದು, ಸುಲಭವಾಗುವುದು. ಈ ವಿಷಯವನ್ನು ಸೂಚಿಸುವ ಸರ್ವಜ್ಞನ ತ್ರಿಪದಿಯು ಎಷ್ಟು ಭಾವಗರ್ಭಿತವಾಗಿದೆ!

'ಉದ್ದಿನಾ ಒಡೆ ಲೇಸು, ಬುದ್ಧಿಯೂ ನುಡಿಲೇಸು,
ಬಿದ್ದೊಡವೆ ಕೈಗೆ ಬರಲೇಸು, ಶಿಶುವಿಗೆ
ಮುದ್ದಾಟ ಲೇಸು! ಸರ್ವಜ್ಞ'

ಮುದ್ದಾಟದಿಂದ, ಮಕ್ಕಳ ಮೇಲಿನ ನಿಜವಾದ ಮರುಕದಿಂದ ಶಿಶುವಿನ ಶಿಕ್ಷಣವು ನಡೆಯತಕ್ಕದ್ದು; ಬಲವಂತದಿಂದಲ್ಲ, ಬೆತ್ತದಿಂದಲ್ಲ.

ಮಕ್ಕಳನ್ನು ಏತಕ್ಕೆ ಮುದ್ದಾಟದಿಂದ ಕಲಿಸಬೇಕು? ಇದಕ್ಕೆ ಕಾರಣವನ್ನು ಸರ್ವಜ್ಞನು ಒಂದುಕಡೆ ಸೂಚಿಸಿರುತ್ತಾನೆ. 'ಕ್ರೀಡೆಯಲಿ ಬಾಲತ್ವ ಪ್ರೌಢಿಯಲಿ ತರುಣತ್ವ'–ಈ ರೀತಿ ಮಕ್ಕಳ ಬೆಳೆವಣಿಗೆ ಇರುವುದರಿಂದ, ಅವರಿಗೆ ಹೇಳಿಕೊಡುವ ವಿದ್ಯೆಯು ಅವರ ಬಾಲ್ಯದ ಕ್ರೀಡೆಗೆ ಅನುಗುಣವಾಗಿರತಕ್ಕದ್ದು; ಎಂದರೆ, ಕಲಿಸುವ ಉಪಾಧ್ಯಾಯನು ಗುರುಪಟ್ಟದಿಂದ ಕೆಳಗಿಳಿದು ಅವರ ಒಡನಾಡಿಯಾಗಿ ನಡೆದು, 'ಮುಖದಲ್ಲಿ ಮುದ್ದು ಏರುವ ಪ್ರಸನ್ನತೆ,' 'ಬಾಯಲ್ಲಿ ನಕ್ಕು ನಗಿಸುವ ನುಡಿ,' 'ಕಂಡುದನು ಕಂಡಂತೆ ಹೇಳುವ ಹಟ,' ಇವನ್ನು ತೋರಿ ಮಕ್ಕಳನ್ನು ಎಳಕೊಳ್ಳಬೇಕು.

ಉತ್ತಮ ಶಿಕ್ಷಣದ ವಿಷಯವಾಗಿ ಸರ್ವಜ್ಞನ ಒಂದೆರಡು ಮಾತುಗಳಿವೆ. ಹೇಳಿದ್ದನ್ನೇ ಹೇಳುವವನು ಬುದ್ಧಿವಂತ ಉಪಾಧ್ಯಾಯನಲ್ಲ. ಮಕ್ಕಳು ಕೇಳಿದ್ದನ್ನೇ ಕೇಳಿ ಸುಖಿಸಲಾರದ್ದರಿಂದ, ಗುರುಗಳ ಹೇಳಿಕೆ ಕಾಲ ಕಾಲಕ್ಕೆ ಬೇರೆಯಾಗಬೇಕು. ಆ ಹೇಳಿಕೆಯಲ್ಲಿ ಒಂದು ಉದ್ದೇಶವಿರಬೇಕು, ಒಂದು ಹಾದಿಯಿರಬೇಕು. 'ಹೊಲಬನರಿಯದ ಮಾತು ತಲೆಬೇನೆ' ಎಬ್ಬಿಸುತ್ತದೆ. 'ಹೊಲಬನರಿತು ಬಂದು ನುಡಿದರೆ' ಅಮ ಫಲ ಪಕ್ವವಾದಂತೆ ಸಾರ್ಥಕವಾಗುತ್ತದೆ. ಶ್ರದ್ಧೆಯಿಲ್ಲದ್ದಲ್ಲಿ, ಭಕ್ತಿಯಿಲ್ಲದ್ದಲ್ಲಿ ಹೇಳಿಕೆಯಿಂದ ಉಪಯೋಗವಿಲ್ಲ. 'ಕೇಳುವವರಿದ್ದರೇ ಹೇಳುವುದು ಬುದ್ಧಿಯನು;' ಭಕ್ತಿಯಿಲ್ಲದ ಶಿಷ್ಯಗೊತ್ತಿಕೊಟ್ಟುಪದೇಶ ಬತ್ತಿದಾ ಕೆರೆಯ ಬಯಲಲ್ಲಿ ರಾಜಾನ್ನ ಬಿತ್ತಿ ಬೆಳೆದಂತೆ.' ಓದಿದ್ದನ್ನೇ ಓದಿಸಿದರೆ ಅದು 'ಮೇದ ಕಬ್ಬಿನ ಸಿಪ್ಪೆಯಂತೆ' ಸಪ್ಪೆ ತೋರುವುದು. ಕೃತಿಯನ್ನು ಓದಿಸಿದ ತರುವಾಯ ಕೃತಿಗಾರನ ಹೃದಯವನ್ನು ತೆರೆದು ತೋರಿಸಲು ಪ್ರಯತ್ನಿಸಬೇಕು. ಇದೇ ಕಲಿಸುವಿಕೆಯ ರಹಸ್ಯ. 'ಓದಿನಾ ಒಡಲನರಿದಡೆ ಸಿಪ್ಪೆ ಕಬ್ಬಾದಂತೆ ಕಾಣೊ!' ಹೀಗೆ ಮಾತಿನಾ ಗುಣ ತಿಳಿದು, ಆತು ಮನ ನಿಜವರಿತು, ನೆನಹು ಮನದಲಿ ಕಟ್ಟಿ, ಮನವ ಘನದಲಿ ಕಟ್ಟಿ; 'ಆರಯ್ದು ನುಡಿವವನು ಆರಯ್ದು ನಡೆವವನು ಆರಯ್ದು ಪದವನಿಡುವವನು ಲೋಕಕ್ಕೆ ಆರಾಧ್ಯನಕ್ಕು!'

ಪಾಠಶಾಲೆಯು ಹೇಗಿರಬೇಕು? ಮಕ್ಕಳಿಗೆ ಯಾವ ಪಾಠಗಳನ್ನು ಕಲಿಸಬೇಕು? ಎಷ್ಟು ಹೊತ್ತು ಪಾಠ ಹೇಳಿ

ಕೊಡಬೇಕು? ಇವುಗಳ ಪ್ರಸ್ತಾಪವನ್ನು ಸರ್ವಜ್ಞನು ಎತ್ತುವುದಿಲ್ಲ. ಮಕ್ಕಳು 'ಕೋಳಿ ಕೂಗದ ಮುನ್ನ ಏಳುವುದು, ನಿತ್ಯ ದಯಾಳು ದೇವರನು ಭಕ್ತಿಯಿಂ ನೆನೆದು' ಮಠಕ್ಕೆ ಹೋಗುವುದು; ಅಲ್ಲಿ ಗುರುಗಳಿಗೆ ಹಿರಿಯರಿಗೆ ಶಿರಬಾಗಿ ನಮಿಸುವುದು; ಓದು ಬರಹ ಲೆಕ್ಕ, ಹೆಚ್ಚೆಂದರೆ ಕಾವ್ಯಾಭ್ಯಾಸ, ಇವನ್ನು ಮಾಡುವುದು; ಇಷ್ಟನ್ನು ಮಾತ್ರ ಅವನ ಕೃತಿಯಿಂದ ಊಹಿಸಬಹುದು. ಓದುಬರಹಗಳಲ್ಲಿ ಬರಹದ ವಿಷಯವಾಗಿ ಸರ್ವಜ್ಞನ ಟೀಕೆಯು ಹೇಳತಕ್ಕದ್ದಿದೆ. ಓದುವಾಗ ವಿಷಯ ಪರಿಚಯವು ಕಣ್ಣುಬಾಯಿಗಳಿಂದ ಮನಸ್ಸಿನೊಳಗೆ ಹೋಗುವುದು; ಬರೆಯುವಾಗ ಆ ವಿಷಯ ಪರಿಚಯವು ಕೈಗಳ ಮೂಲಕ ಮನಸ್ಸಿಗೆ ಮುಟ್ಟುವುದು ಇದು ಈಗಿನ ತತ್ವ. ಇದೇ ತತ್ವವು 'ಬರೆವಂಗೆ ಓದು ಬರುವಂತೆ' 'ಬರೆಯದಲೆ ಓದುವನ' ಎಂಬೀ ಮಾತುಗಳಲ್ಲಿ ಹೇಗೆ ಅಡಗಿದೆ ನೋಡಿ! ಈ ಓದು ಬರಹಗಳು ಜ್ಞಾನಾರ್ಜನೆಯ ಉತ್ಕೃಷ್ಟ ಸಾಧನಗಳೆಂಬದಾಗಿ ಸರ್ವಜ್ಞನು ಹೇಳುವುದಿಲ್ಲ. 'ಅಕ್ಕರವು ಲೇಖಕ್ಕೆ ತರ್ಕ ತಾ ವಾದಕ್ಕೆ ಮಿಕ್ಕ ಓದುಗಳು ತಿರುಪೆಗೆ' ಎಂದು ಸ್ಪಷ್ಟವಾಗಿ ಹೇಳುತ್ತಾನೆ. ಹೀಗಿದ್ದರೂ ಆತನ ವಿದ್ಯಾ ಪಕ್ಷಪಾತವು ಅತ್ಯಧಿಕ; ನಾಡಿನ ಮಕ್ಕಳಿಗೆಲ್ಲಾ ವಿದ್ಯೆ ಬೇಕೆಂಬ ಅವನ ಆಸೆ ಬಲವತ್ತರ. 'ವಿದ್ಯೆ ಈಯದ ತಂದೆ ಬುದ್ಧಿ ಹೇಳದ ಗುರುವು ಮಕ್ಕಳ ಬದ್ಧವೈರಿ'ಗಳೆಂದು ಸ್ವರವೆತ್ತಿ ಸಾರುವನು.

ನಾಡಿನ ಮಕ್ಕಳಲ್ಲಿ ಯಾವನೊಬ್ಬನೂ ವಿದ್ಯೆಯಿಲ್ಲದೆ ಬೆಳೆಯ ಬಾರದೆಂಬದಾಗಿ ಸರ್ವಜ್ಞನ ಮತವಿದ್ದರೂ, ಆ ವಿದ್ಯೆಯಿಂದ ಎಲ್ಲರಿಗೂ ಪ್ರಯೋಜನವಾಗದೆಂಬದನ್ನುಅವನು ತಿಳಿದಿದ್ದನು. ವಿದ್ಯೆಯು ಕೆಲವರಲ್ಲಿ ಫಲಿಸುತ್ತದೆ, ಕೆಲವರಲ್ಲಿ ಫಲಿಸುವುದೇ ಇಲ್ಲ;ಅದು ಒಂದೊಂದು ಕಡೆ ಒಂದೊಂದು ಬಗೆಯ ಹಣ್ಣು ಕೊಡುತ್ತದೆ. ಇದಕ್ಕೆಲ್ಲಾ ಕಲಿಯುವ ಮಕ್ಕಳ ಹುಟ್ಟುಗುಣ, ಅವರ ಮನೆಯ ಸ್ಥಿತಿಗತಿ, ಹಿರಿಯರ ನಡೆನುಡಿಗಳು ಮುಖ್ಯ ಕಾರಣಗಳೆಂಬದನ್ನು ನಾವು ಬಲ್ಲೆವು; ಕೀಳು ಲೋಹವು ಪರುಷದ ಸೋಂಕಿನಿಂದ ಅಪರಂಜಿಯಾಗುವಂತೆ, ಅರಿವಿಲ್ಲದ ಮಕ್ಕಳು ಗುರುವಿದ್ಯೆಯಿಂದ ಪ್ರಾಯಶ: ಉತ್ತಮರಾಗುವರು. ಆದರೆ ಸ್ವಭಾವ ಜನ್ಯವಾದ ದೋಷಗಳು ಗುರೂಪದೇಶದಿಂದ ಹೋಗಲಾರವೆಂಬದಾಗಿ ಅವನೂ ಅಭಿಪ್ರಾಯಪಡುತ್ತಾನೆ, 'ಮೂರ್ಖನ ಕಳೆಯಲಳವಲ್ಲ!' 'ಮೂರ್ಖನಲಿ ಛಲವು ಬೇಡೆಂದ!'

'ಮೂರ್ಖಂಗೆ ಬುದ್ಧಿಯನು ನೂರ್ಕಾಲ ಪೇಳಿದರೆ
ಬೋರ್ಕಲ್ಲ ಮೇಲೆ ಮಳೆಗರೆದರಾ ಕಲ್ಲು
ನೀರ್ಕೊಳ್ಳಲಹುದೆ ಸರ್ವಜ್ಞ.'

ಮನಶ್ಶಾಸ್ತ್ರವು ಮನುಷ್ಯನ ಮಿದುಳಿನ ಮೇಲೆ ಪ್ರಯೋಗಗಳನ್ನು ನಡಿಸಿ, ಹೊಸ ಶೋಧಗಳನ್ನು ಮಾಡಿ, ಮೂರ್ಖತೆಯ ನಿವಾರಣೋಪಾಯಗಳನ್ನು ಕಂಡು ಹಿಡಿಯುವ ತನಕ ಮಕ್ಕಳ ನೈಜಸ್ವಭಾವವನ್ನು ತಿದ್ದುವುದು ಸರ್ವಜ್ಞಮತದಂತೆ ಪ್ರಕೃತದಲ್ಲಿ ಅಶಕ್ಯವೆನ್ನಬೇಕು.

ಸರ್ವಜ್ಞನು ಓದು ಬರಹ ಲೆಕ್ಕಗಳನ್ನು ಲೌಕಿಕ ವಿದ್ಯೆಯೆಂದೂ ಅದರಿಂದಲೇ ಮೋಕ್ಷಸಾಧನೆಯು ಸಾಧ್ಯವಲ್ಲವೆಂದೂ ತಿಳಿಯುವನು. ರಾಮಾಯಣ ಮಹಾಭಾರತಾದಿ ಕಾವ್ಯಗಳ ಅಭ್ಯಾಸವೂ, ಜ್ಯೋತಿಷ್ಯದ ಪರಿಚಯವೂ 'ಗಾನ ವಿದ್ಯೆಯೇ ಲೇಸು' ಎಂದು ಹೇಳಿದ್ದರಿಂದ ಗಾನಕಲೆಯೂ, ಇವೆಲ್ಲಾ ಅವನ ಲೌಕಿಕ ವಿದ್ಯೆಯಲ್ಲಿ ಸೇರಿವೆ. ಇದನ್ನೇ ನಾವು ಸಾಹಿತ್ಯ ವಿದ್ಯೆ (Literary Education) ಎಂದು ಸ್ಥೂಲವಾಗಿ ಕರೆಯುತ್ತೇವೆ. ಈ ಸಾಹಿತ್ಯ ವಿದ್ಯಾಪ್ರಸಾರದಿಂದ ದೇಶಕ್ಕೆ ಹಿತವಾಗುವ ಬದಲು ನಿರುದ್ಯೋಗಿಗಳಾಗಿ ಸರಕಾರದ ಆಫೀಸುಗಳಲ್ಲಿ ನೌಕರಿಗಳನ್ನು ಬೇಡತಕ್ಕ ತಿರುಕರ ಸಂಖ್ಯೆಯೇ ನಮ್ಮಲ್ಲಿ ಹೆಚ್ಚುತ್ತಿದೆಯೆಂತಲೂ ಪ್ರಜೆಗಳ ಆರ್ಥಿಕ ಸ್ಥಿತಿಯನ್ನೂ ದೇಶೋನ್ನತಿಯನ್ನೂ ವರ್ಧಿಸುವುದಕ್ಕೆ ವಿಜ್ಞಾನದ (Scientific Education) ಪ್ರಸರಣೆಯಾಗಬೇಕೆಂತಲೂ ಈಗ ತಾನೆ ವಿದ್ವಾಂಸರು ಘೋಷಿಸುತ್ತಿದ್ದಾರೆ. ಇದೇ ಸೂಕ್ಷ್ಮವನ್ನು ಎಷ್ಟೋ ವರ್ಷಗಳ ಹಿಂದೆ ಬದುಕಿದ್ದ ಸರ್ವಜ್ಞನು ವ್ಯಕ್ತಪಡಿಸಿದ್ದಾನೆಂದು ಹೇಳಿದರೆ ಯಾರಿಗೆ ಆಶ್ಚರ್ಯವಾಗಲಿಕ್ಕಿಲ್ಲ? ನಮ್ಮ ಹಿರಿಯರು ವರ್ಗೀಕರಿಸಿದ ೬೪ ವಿದ್ಯೆಗಳಲ್ಲಿ 'ಅಕ್ಷರವು ಲೇಖಕ್ಕೆ, ತರ್ಕ ತಾ ವಾದಕ್ಕೆ; ಮಿಕ್ಕ ವಿದ್ಯೆಗಳು ತಿರುಪೆಗೆ' ಎಂಬ ಸರ್ವಜ್ಞನ ಮಾತು ತಂಡತಂಡವಾಗಿ ಪಾಸಾಗುವ ತರುಣರ ವಿಷಯದಲ್ಲಿ ಇತ್ತಲಾಗಿ ದೃಷ್ಟಾಂತಕ್ಕೆ ಬಂದು, ಆ ಶೋಚನೀಯ ಸ್ಥಿತಿಯನ್ನು ತಗ್ಗಿಸುವುದಕ್ಕೆ ಶಾಲೆಗಳಲ್ಲಿ ಕೃಷಿಕೈಗಾರಿಕೆಗಳನ್ನು ಕಲಿಸುವ ಏರ್ಪಾಡುಗಳು ಈಗೀಗ ನಡೆಯುತ್ತಿವೆ. ಆದರೆ ಸರ್ವಜ್ಞನು ಕಾಲಜ್ಞಾನ ಹೇಳಿದಂತೆ ಈ ವಿಷಯವಾಗಿ ಹೇಳುವುದನ್ನು ಕೇಳಿ!

'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು!
ಮೇಟಿಯಿಂ ರಾಟಿ ನಡೆಬುದಲ್ಲದೆ ದೇಶ
ದಾಟವೇ ಕೆಡುಗು! ಸರ್ವಜ್ಞ.'

ಮೇಟಿ ವಿದ್ಯೆಯೆಂದರೆ ನೇಗಿಲಿನ ತಿಳಿವಳಿಕೆ, ಒಕ್ಕಲತನಕ್ಕೆಬೇಕಾದಕೃಷಿವಿದ್ಯೆ(Agricultural Education); ರಾಟಿ ಎಂದರೆ ಕೈಗಾರಿಕೆಯ ಯಂತ್ರ ಎಂದರ್ಥ. ದೇಶದ ಸಂಪತ್ತು ಸೌಭಾಗ್ಯಗಳು ಶುಷ್ಕವಾದ ಸಾಹಿತ್ಯ ವಿದ್ಯೆಯಿಂದ ಹುಟ್ಟುವುದಿಲ್ಲ; ಅವು ಹೊಲಗದ್ದೆಗಳ ಬೇಸಾಯದಿಂದಲೂ ನೂಲಿನ ಚರಕ ಸಣಬಿನ ರಾಟೆ, ಎಣ್ಣೆಯ ಗಾಣ, ನೀರಿನ ಏತ ಮೊದಲಾದ ಯಂತ್ರಗಳ ಸಹಾಯದಿಂದಲೂ, ಕೈಗಾರಿ

ಕೆಯ ಕೆಲಸಗಳಿಂದಲೂ ಪ್ರಾಪ್ತವಾಗುತ್ತವೆ. ಮಹಾತ್ಮಾ ಗಾಂಧಿಯವರ ಚರಕ ಶ್ಲೋಕದ ಮೂಲ ಮಂತ್ರವು ಮೇಲಿನ ತ್ರಿಪದಿಯಲ್ಲಿ ಎಷ್ಟು ಉಜ್ವಲವಾಗಿ ಕೇಳಿಸುತ್ತದೆ! 'ಸರಸ ಮಾತುಗಳಲ್ಲಿ ಬೆರಸಿ ಸಿಡಿಲಿನ ನೀರ ಸುರಿಸಿದ ವಚನವಿದು.' ಮೇಲಿನಂಥ ಸರ್ವಜ್ಞನ ವಚನಗಳು ಸಾವಿರಾರು ಮಂದಿ ಜನಗಳನ್ನುಎಚ್ಚರಿಸಿರಬಹುದು, ಅನೇಕರ ಮನಸ್ಸನ್ನು ತಿದ್ದಿರಬಹುದು, ಕೆಲವರನ್ನಾದರೂ ತಮ್ಮನ್ನು ತಾವು ಅರಿಯುವಂತೆ ಮಾಡಿರಬಹುದು. ಒಂದು ಸರ್ವಜ್ಞ ವಚನವು ಸ್ವತ: ನನ್ನಲ್ಲಿ ಯಾವ ಪರಿಣಾಮವನ್ನು ಉಂಟುಮಾಡಿತೆಂದು ಹೇಳಿ ಈ ಲೇಖವನ್ನು ನಾನು ಮುಗಿಸುತ್ತೇನೆ.

ಸುಮಾರು ೪೭ ವರ್ಷಗಳ ಹಿಂದೆ ನಾನು ಹಳ್ಳಿಯ ಸಾಲೆಯಲ್ಲಿ ಓದುತ್ತಿದ್ದಾಗ ನಮ್ಮ ಉಪಾಧ್ಯಾಯರು ನಾವು ಆಟವಾಡಿ ಕಾಲ ಕಳೆದು ಮನೆಲೆಕ್ಕ ಮಾಡದ ಅಪರಾಧಕ್ಕೆ ನಮಗೆ ಶಿಕ್ಷೆಯನ್ನು ವಿಧಿಸುವ ಮೊದಲು ಯಾವಾಗಲೂ ಸರ್ವಜ್ಞನನ್ನು ಹೀಗೆ ಸ್ಮರಿಸುತ್ತಿದ್ದರು:—

'ಆಡದೆ ಮಾಡುವನು ರೂಢಿಯೊಳಗುತ್ತಮನು,
ಆಡಿ ಮಾಡುವನು ಮಧ್ಯಮನು, ಅಧಮ ತಾ
ಆಡಿ ಮಾಡದವ! ಸರ್ವಜ್ಞ.'

ಅಂದಿನಿಂದ, ಆಟವಾಡುವುದು ಪಾಪವೆಂದೂ ಓದುಬರಹ ಗಳು ಪುಣ್ಯವೆಂದೂ ಒಂದು ಬಗೆಯ ಭಾವನೆ ನನ್ನಲ್ಲಿ ಗಟ್ಟಿ ಯಾಯಿತು. 'ಮಕ್ಕಳು ಓದಬೇಕು ಬರೆಯಬೇಕು, ಆಡಲೇ ಬಾರದು' ಎಂಬೀ ಹಿಂದಿನ ಅಯ್ಗಳ ಹೇಳಿಕೆಗೆ ಈ ವಚನವೇ ಬಹುಶ: ಬೆಂಬಲವಾಗಿದೆ. ಇದೇ ವಚನವು ಮಾತು ಕೊಟ್ಟು ತಪ್ಪುವವನಲ್ಲಿಯೂ ಸರಿಹೋಗುತ್ತದೆಂದು ಅದರ ಅರ್ಥ ಮಾಡುವುದಕ್ಕೆನನಗೆ ಕೆಲಕಾಲ ಹಿಡಿಯಿತು. ಆದರೆ ಹಳ್ಳಿಯ ಉಪಾಧ್ಯಾಯರು ಎಂದೆಂದಿಗೂ ಮರೆಯಲಾಗದ ಇನ್ನೊಂದು ಬುದ್ಧಿವಾದವು ಈ ಪದ್ಯದಲ್ಲಿಯೇಅಡಕವಾಗಿದೆ ಎಂಬರ್ಥವು ನಾನು ಟ್ರೈನಿಂಗ್ ಕಾಲೇಜನ್ನು ಸೇರಿಕೊಂಡ ನಂತರ ನನ್ನ ಮನಸ್ಸಿಗೆ ಹೊಳೆಯಿತು.

ನಮ್ಮಲ್ಲಿ ಅನೇಕರು ಮಕ್ಕಳಿಗೆ ಹೇಳುವುದು ಪಾಠ, ಆಟವಲ್ಲ;ವ್ಯಾಖ್ಯಾನ ಪ್ರಯೋಗವಲ್ಲ.ಬರಿಯಮಾತುಗಳಿಂದ ವಿಷಯವು ಮಕ್ಕಳ ಎಳೆಯ ಮನಸ್ಸಿಗೆ ಹತ್ತುವುದಿಲ್ಲ. ವಸ್ತುಗಳನ್ನು ತಂದು ತೋರಿಸಿ 'ಪ್ರತ್ಯಕ್ಷಮಂ ಪ್ರಮಾಣಿಸಿದರೆ' ಮಾತ್ರವೇ ವಿಷಯವು ಸರಿಯಾಗಿ ಮನಸ್ಸಿಗೆ ಹಿಡಿಯುತ್ತದೆ. ಗಣಿತ, ವಿಜ್ಞಾನ, ಇತಿಹಾಸ, ಕಾವ್ಯ ಅಂತು ಯಾವ ವಿಷಯ ವನ್ನೇ ಆಗಲಿ ಮಾತುಗಳಿಂದ ವಿಸ್ತರಿಸಿ ಹೇಳುವುದಕ್ಕಿಂತ ವಸ್ತುಗಳ ಮೂಲಕವೊ ಚಿತ್ರಗಳನ್ನು ತೋರಿಸಿಯೊ ಪಠ ಗಳನ್ನು ಬರೆಯಿಸಿಯೊ, ಕೃತಿಗಳನ್ನು ಮಾಡಿಸಿಯೊ ಕಲಿಸ ಯತ್ನಿಸಬೇಕು. ಉಪಾಧ್ಯಾಯನು ಮಾತುಗಳನ್ನೇ ಆಡುವುದಕ್ಕಿಂತ ಮಾಡಿ ಕಲಿಸುವುದೇ ಶಾಸ್ತ್ರಸಮ್ಮತವು. ಆಡಬಾರದು, ಮಾಡಬೇಕು, ಆಡದೇ ಮಾಡುವವನು ನಿಜವಾದ ಉಪಾಧ್ಯಾಯನಾಗುವನು. ಪ್ರಯೋಗಗಳನ್ನು ಮಾಡಿ ತೋರಿಸದೆ ಪ್ರವಚನಗಳನ್ನು ಮಾತ್ರ ತಲೆಬೇನೆ ಏಳುವಂತೆ ಹೇಳುವವನು, 'ಆಡಿ ಮಾಡದವನು ಅಧಮನು' ಇದೀಗ ಹಳ್ಳಿಯ ಉಪಾಧ್ಯಾಯರು ನಿತ್ಯವೂ ಜಪಿಸತಕ್ಕ ಬೀಜಾಕ್ಷರೀ ಮಂತ್ರ!

ಸರ್ವಜ್ಞನು ಸೃಷ್ಟಿಯನ್ನು ಬಲ್ಲವನು, ಕನ್ನಡದ ನುಡಿಗಾರ, ಸತ್ಯಸಮದರ್ಶಿ,ಖಂಡಿತವಾದಿ,ರಸಿಕ ಕವಿ;ಇಂಥವನು ಗಹನವಾದ ಧರ್ಮಸೂತ್ರಗಳನ್ನು ಸಂತೆಯ ಜನಗಳು ತಿಳಿಯುವಷ್ಟು ಚೆನ್ನಾಗಿ ಬೋಧಿಸಿದ್ದು ನಿಜವಾದರೆ, ಅವನು ಉತ್ತಮ ವರ್ಗದ ಉಪದೇಶಕನಿರಲೇಬೇಕಷ್ಟೆ; ಇಂಥವನ ಕೃತಿಯಲ್ಲಿ ಶಿಕ್ಷಣ ಶಾಸ್ತ್ರದ ಅನೇಕ ಮೂಲ ತತ್ವಗಳು ಅಲ್ಲಲ್ಲಿ ಹರಡಿರುವುದು ಏನೊಂದೂ ಆಶ್ಚರ್ಯವಲ್ಲ. ಆದರೆ ಅವನ್ನು ನಮ್ಮಲ್ಲಿಯ ಅಧ್ಯಾಪಕರು ಬೆಳಕಿಗೆ ತಾರದಿರುವುದು ಮಾತ್ರ ಸೋಜಿಗ! ಅವರು ತಮ್ಮ ವ್ಯವಹಾರಗಳಲ್ಲಿ ಆಧಾರಗಳನ್ನು ಕೊಡಬೇಕಾದ್ದಲ್ಲಿ, ಉಚಿತವಾದ ಸಂದರ್ಭಗಳು ದೊರಕಿದ್ದಲ್ಲಿ, ಮುಡಿಯಷ್ಟು ಅಭಿಪ್ರಾಯವನ್ನು ಹಿಡಿಯಷ್ಟು ಮಾತುಗಳಲ್ಲಿ ಹೇಳಬೇಕಾದ್ದಲ್ಲಿ ಗುರಿ ತಗಲುವಂತೆ ಮಾತು ಎಸೆಯಬೇಕಾದ್ದಲ್ಲಿ ಸರ್ವಜ್ಞೋಕ್ತಿಗಳನ್ನು ಉದ್ಧರಿಸಿ ಹೇಳಿದರೆ, ನಮ್ಮ ಅಭಿಮಾನವನ್ನು ನಾವು ಕಾಪಾಡಿದಂತಾಗುವುದು. ಸರ್ವಜ್ಞ ಕವಿಗೆ ಸಲ್ಲತಕ್ಕ ಮನ್ನಣೆಯನ್ನು ಸಲ್ಲಿಸಿದಂತಾಗುವುದು. ಕನ್ನಡಕ್ಕೆ ಅದಷ್ಟು ಸೇವೆಯನ್ನು ಮಾಡಿದಂತಾಗುವುದು.

ಕನ್ನಡವ ಬರೆವಂದು ಕನ್ನಡವ ಒರೆವಂದು
ಪನ್ನತಿಕೆಯುಕ್ಕು ಪದವಕ್ಕು ಗತರಾಜ್ಯ
ತನ್ನದೇ—ಅಕ್ಕು— ಇದು ಸಿದ್ಧ !

'ಕಂಠೀರವ'

# ಹಳೆಯ ಸಬ್ ಎಸಿಸ್ಟಾಂಟನ ಸುಳ್ಳು ಡೈರಿಯಿಂದ

ನಾನು ಸರಕಾರ ನೌಕರಿಯನ್ನು ಮೊದಲು ಕೈಕೊಂಡದ್ದು ಉಪಾಧ್ಯಾಯನಾಗಿ, ಕಡೆಗೆ ಕೆಳಗಿಟ್ಟದ್ದು ಉಪಾಧ್ಯಾಯನಾಗಿ; ಇವೆರಡರ ನಡುವೆ ಮಾತ್ರ ಚಿಕ್ಕದೊಂದು ಅವಧಿಯು ಕಡುಬಿನೊಳಗಣ ಹೂರಣದಂತೆ ಮಧ್ಯಸ್ಥವಾಗಿತ್ತು. ಈ ಕಾಲಾವಧಿಯ ಹದಿನಾಲ್ಕು ವರ್ಷಗಳಲ್ಲಿ ನಾನು ನಮ್ಮ ಜಿಲ್ಲೆಯ ಗ್ರಾಮಗಳನ್ನು ಸುತ್ತಾಡಿ ಹಳ್ಳಿಯ ಶಾಲೆಗಳನ್ನು ನೋಡಿದ ವೇಳೆ ನನ್ನ ಲಕ್ಷ್ಯಕ್ಕೆ ಬಂದಿದ್ದ ಹಳ್ಳಿಯವರ ರೀತಿ, ಅಯ್ಗಳರ ಚರ್ಯೆ, ಮಕ್ಕಳ ಮಾತು, ಇವನ್ನು ನನ್ನ ಮನಸ್ಸು ಈಗಲೂ ನೆನವರಿಸಿ,- ಮುಪ್ಪಿನ ಮೇಬಳ್ಳಿಗೆ ಸಿಲುಕಿ ಬಿದ್ದಲ್ಲೇ ಬಿದ್ದುಕೊಂಡಿದ್ದರೂ,-ಆ ನೆನಹುಗಳನ್ನು ಮತ್ತು ಮತ್ತು ಈಚೆಗೆ ತಂದು ಮೆಲುಕಾಡುವುದಕ್ಕೆ ಬಯಸುತ್ತಿದೆ.

ನನ್ನ ಸರ್ವಿಸ್ ಜಾತಕದ ಮೇರೆಗೆ ನನಗೆ ಮಂಗಳೂರು ಗವರ್ನರ್ಮೆಂಟ್ ಕೊಲೇಜಿನಲ್ಲಿ ಹನ್ನೊಂದು ವರ್ಷಗಳ ತನಕ ಹಿಡಿದಿದ್ದ ಅಧ್ಯಾಪಕನ ಸ್ಥಿರಗತಿ ತಪ್ಪಿ, ೧೯೦೬ ರಲ್ಲಿ ಗ್ರಾಮ ಸಂಚಾರದ ಗ್ರಹಗತಿ ಪ್ರಾಪ್ತವಾಯಿತು. ಅದೇ ವರ್ಷ ಗ್ರಾಮ ಶಾಲೆಗಳ ವಿಚಾರವೇದಿಕೆಗೆ ಇದ್ದ 'ಡೆಪ್ಯುಟಿ ಇನ್ಸಪೆಕ್ಟರ್' ಎಂಬ ಹಳೆಯ ಹೆಸರು ಹೋಗಿ, 'ಸಬ್ ಎಸಿಸ್ಟಾಂಟ್' ಎಂದು ಹೊಸ ನಾಮಕರಣವಾಯಿತು. ಇದರಿಂದ ಆ ಪದವಿಯ ಮಾನಮನ್ನಣೆಗೆ ಬಹುಶ: ಯಾವ ಕೊರತೆಯೂ ಬಂದಿರಲಿಲ್ಲ. ಮನ್ನಣೆ ಕಡಮೆಯಾದದ್ದು ಇದ್ದರೆ, ಅದು ಜಾಗದ ಹೆಸರಿನ ಬದಲಾವಣೆಯಿಂದಲ್ಲ; ಅದರ ಕಾರಣವೇ ಬೇರೆ. ಹಿಂದಕ್ಕೆ ಗುತ್ತಿನ ಪಟೇಲಿಕೆ, ಗ್ರಾಮದ ಶ್ಯಾನುಭೋಗಿಕೆ, ತಾಲೂಕು ಗುಮಾಸ್ತಿಕೆ, ಪೊಲೀಸ್ ಕೈದುಗಾರಿಕೆ ಹೀಗೆ ಜುಜುಬಿ ಸರಕಾರ ಕೆಲಸಕ್ಕೆ ಪ್ರಾಯ್ಮೆರಿ ಪರೀಕ್ಷೆಯ ಪಾಸುಪಡಿಯಲೇ ಬೇಕಾಗಿತ್ತು. ೧೯೦೮ರಲ್ಲಿ 'ಇಂದಿನಿಂದ ಈ ಪ್ರಾಯ್ಮೆರಿ ಪರೀಕ್ಷೆ ವಜಾ ಆಗಿದೆ, ಪಾಸಿನ ಪ್ರಸಾದದಿಂದ ಫಲವಿಲ್ಲ' ಎಂದು ಸರಕಾರದ ನುಡಿಕಟ್ಟಾಯಿತು; ಇದರಿಂದ ಸರ್ಟಿಫಕೇಟಿನ ಪ್ರಭಾವವು ನಿಂತು ಹೋಗಿ, ಶಾಲಾ ಇಲಾಖೆಯವರು ಹಳ್ಳಿಯ ಮಕ್ಕಳಿಗೆ ಹಂಚುತ್ತಲಿದ್ದ ಶ್ರೀಮುಡಿ ಗಂಧಪ್ರಸಾದದ ಮೇಲೆ ಹಳ್ಳಿಯವರಿಗಿದ್ದ ಪೂರ್ವದ ಭಕ್ತಿವಿಶ್ವಾಸಗಳು ಕಡಮೆಯಾದುವು.

ನಾನು 'ಸಬ್ ಎಸಿಸ್ಟಾಂಟನ' ಸ್ಥಳದಲ್ಲಿ ಕಾಲಿಟ್ಟಾಗ ಹಳ್ಳಿಯ ಉಪಾಧ್ಯಾಯರ ಹಿಂದಿನ ಹಲವು ಸಂಪ್ರದಾಯಗಳು ಉದುರಿ ಹೋಗಿ; ಹೂವಿನ ಎಡೆಯಲ್ಲಿ ಒಣ ಎಲೆ ಮಾತ್ರವೇ ಉಳಿದಿತ್ತು. ಮರ್ಯಾದೆಯಲ್ಲಿ ಹಿಂದಿನಷ್ಟು ವಿಜೃಂಭಣೆ ಇಲ್ಲ. ಮುಂಚೆ ಕೊಂಬು, ಕಹಳೆ ಇರುವಲ್ಲಿ ಈಗ ಕೈಮುಗಿತ, ನಜರು ಕಾಣಿಕೆ ಕೊಡುವಲ್ಲಿ ಎಳನೀರು, 'ಸ್ವಾಮಿ! ದೇವ್ರು!' ಎಂದು ಸಂಬೋಧಿಸುವಲ್ಲಿ 'ಹೌದು ಸೆರ್, ಇಲ್ಲ ಸಾರ್'-ಇಷ್ಟಕ್ಕೆ ಇಳಿದಿತ್ತು. 'ಈಗ ಶಾಲೆಯವರಿಗೆ ಹಳ್ಳಿಯಲ್ಲಿ ಮುಂಚಿನ ಭರಮು ಇಲ್ಲ, ಸೆರ್! ಪಾಯ್ಮರಿ ಇದ್ದಾಗ ಕೈತುಂಬಾ ಗ್ರೆಂಟು ಹಣ ಹಂಚುತಿದ್ದರು; ಮರ್ಯಾದೆಯೂ ಬರುತಿತ್ತು. ಈಗ ಹೆಸರು ಮಾತ್ರ ದೊಡ್ಡದು— ಸಬ್ ಅಶಿಶ್ಟಾಂಟ್ ಇನ್ಸಪೇಟರ್! ಯಾರು ಮೂಸುತ್ತಾರೆ, ಶೆರ್?' ಈ ರೀತಿಯ ಉಪಾಧ್ಯಾಯರ ಅಭಿಪ್ರಾಯವನ್ನೇ ಹಳ್ಳಿಯ ದೊಡ್ಡ ಮನುಷ್ಯರೊಬ್ಬರು ನನ್ನ ಮುಂದೆ ಕಾರ್ಯರೂಪವಾಗಿ ಮಾಡಿ ತೋರಿಸಿದ ಸಂಗತಿ ನನ್ನ ನೆನಪಿನಲ್ಲಿದೆ.

ನಾನು ಒಂದು ದಿನ ಮಧ್ಯಾಹ್ನ ಗುಡ್ಡದ ಪದವಿನಿಂದ ಕೆಳಗಿನ ಬಯಲಿಗೆ ಇಳಿಯುತಿದ್ದುದನ್ನು ಆ ದೊಡ್ಡ ಮನುಷ್ಯರು ಕಂಡು, ತಮ್ಮ ಕೈಯಲ್ಲಿದ್ದ ಕೊಡೆಯನ್ನು ಮುಚ್ಚಿ, ಕೆಲಸಾರಿ ಕೆರಕಳಚಿ ಕೈ ಮುಗಿದು, ತಾವಾಗಿ ನನ್ನ ಹಿಂದೆಯೇ ಬರುವಂಥವರಾದರು. ನಾವು ಹತ್ತು ಮಾರು ಮುಂದೆ ಹೋಗುವಷ್ಟರಲ್ಲಿ ಶಾಲೆಮನೆ ಎದುರಾಗಲು, ಉಪಾಧ್ಯಾಯರು ಹೊರಬಂದು **ನನಗೆ** ನಮಸ್ಕಾರ ಮಾಡಿದರು. ಇದನ್ನು ಕಂಡರೊ ಇಲ್ಲವೊ ನನ್ನ ಪಕ್ಕದಲ್ಲಿ ಬಂದವರು ಬೆಬ್ಬಳಿಸಿ ಹೋಗಿ 'ಉಳೊ ಅಪ್ಪಾ! ಒಯ್!' ಎಂದು ಬಾಯಿ ಬಿಟ್ಟರು; ಮತ್ತು ಅದೇ ಬಾಯಿಂದ ಅವರು ನನ್ನನ್ನು ಕುರಿತು ಉಪಾಧ್ಯಾಯರ ಹತ್ತಿರ 'ಒಯ್! ಉಂಟೆ ಇದು? ನಾನು ಇದು ಪೋಲಿಸು ಇನ್ಸಪೇಟರ್ ಎಂದು ಗ್ರಹಿಸಿ ಸುಮ್ಮನೆ ನಡೆದು ಬಂದದ್ದು! ಈಗ ನೋಡಿದರೆ ಇದು ಪೋಲಿಸ್ ಅಲ್ಲ, ಇದು ಪೋಲಿ ಇನ್ಸಪೆಕ್ಟೆ! ಪೋಲಿ ಮಕ್ಕಳನ್ನು ನೋಡ ಬರುವ ಇದಕ್ಕೆ ನಾನು ಕೈಯೆತ್ತುವುದುಂಟೆ? ಕಾಸಿನ ಪ್ರಯೋಜನವಿಲ್ಲದೆ ಕಾಲು ದಣಿಸಿ ಬಂದದ್ದು ನಾನು! ಒಯ್! ಉಂಟೆ ಇದು? ಥೂ!'

ನಮ್ಮ ಹಳ್ಳಿಯ ಪಟೇಲರ ಭ್ರಮೆಗೆ ಕಾರಣವಿತ್ತು. ಕೆಲವು ದಿನಗಳ ಹಿಂದೆ ಅದೇ ಹಳ್ಳಿಯಲ್ಲಿ ನಡೆದ ಒಂದು ಖೂನಿಯ ತನಖಿಗಾಗಿ ಹೊಸ ಪೊಲೀಸ್ ಇನ್ಸಪೆಕ್ಟರರ ನೇಮಕವಾಗಿದ್ದು, ಅವರ ಬರೋಣವನ್ನು ಪಟೇಲರು ಎದುರು ನೋಡುತಿದ್ದರು. ಹೀಗೆ ಅವರ ಸವಾರಿಯ ದಾರಿ ಕಾಯುತಿದ್ದ ಪಟೇಲರ ಕಣ್ಣಿಗೂ ಶಾಲೆ ಎಲ್ಲಿ ಎಂದು ಯೋಚಿಸುತಿದ್ದ ನನ್ನ ತಲೆಗೂ ಗುಡ್ಡದ ಹೊಡೆಯ ಮೇಲೆ ಅಕಸ್ಮಾತ್ತಾಗಿ ಭೇಟಿಯಾಯಿತು. ಹಿಂದೆ ನನ್ನದೊಂದು ಸಂಪ್ರದಾಯವಿತ್ತು;

ನಾನು ತಲೆಬಿಟ್ಟು ಸರಕಾರ ಕೆಲಸದ ಮೇಲೆ ಹೋಗುತಿರಲಿಲ್ಲ. ಏಕೆಂದರೆ ಒಳತಲೆ ಬತ್ತಲೆ ಇದ್ದರೂ ಭರತಿ ತಲೆ ಎಂದು ತೋರಬೇಕಾದರೆ ಅದರ ಮೇಲೊಂದು ಮುಂಡಾಸು ಏರಿಸಬೇಕಷ್ಟೆ. ನನಗೆ ಕೆಲಸ ಕಾಯಮ್ ಆಗುವ ತನಕ ನನ್ನ ತಲೆಗೊಂದು ಅಗಲ ಸರಿಗೆಯ ಕೆಂಪು ಪೇಟಾ ಇರುತಿತ್ತು. ಕೆಂಪು ಪಗಡಿಯ ಮೇಲೆ ಪಟೇಲರಿಗಿದ್ದ ಭೀತಿಯಿಂದ ಹುಟ್ಟಿದ ಅವರದೊಂದು ನಮಸ್ಕಾರವು ವೆಚ್ಚವಾಯಿತು. ಕೈಮುಗಿತವು ನಮ್ಮ ಮುಂದಿನ ಪ್ರಯೋಜನಕ್ಕಾಗಿ ಹೆರರಿಗೆ ಕೊಡುವ ಕೈಸಾಲ— ಹೀಗೆ ಪಟೇಲರು ಯೋಚಿಸಿರಬೇಕು.

ವಾಸ್ತವಿಕವಾಗಿ ನಾವು ಹಾಗೆ ತಿಳಿಯುವುದಿಲ್ಲ. ನಮಸ್ಕಾರವೆಂಬುದು ಸಭ್ಯಜನರ ಮಾತುಕಥೆಯ ಮುನ್ನುಡಿ ಎಂದು ನಮ್ಮ ಅಭಿಪ್ರಾಯ. ಆದರೆ ಹಳ್ಳಿಯವರ ಗ್ರಹಿಕೆ ಬೇರೆ. ಕೈ ಮುಗಿಯುವುದು ಅಂದರೆ ಕೆಳಜಾತಿಯವರು ಮೇಲಿನವರಿಗೆ ಕೊಡಲೇಬೇಕಾದ ಮರ್ಯಾದೆ ಎಂದು ಅವರು ಭಾವಿಸುತ್ತಾರೆ; ನಮಸ್ಕಾರ ಅಂದರೆ ಅಧಿಕಾರಕ್ಕೆ ಸಲತಕ್ಕ ಪುರುಸ್ಕಾರ ಎಂಬದಾಗಿಯೂ ಅವರ ತಿಳಿವಳಿಕೆ ಇದೆ. ಆದುದರಿಂದಲೇ ಅವರು ಕೈ ಮುಗಿಯುವ ಈ ಬಗೆಯ ಹಸ್ತಚೇಷ್ಟೆಯಲ್ಲಿ ವೈವಿಧ್ಯ ಬಂದಿದೆ. ಹುದ್ದೆದಾರನ ಮೈ ಬಣ್ಣ, ಉಡುಪಿನ ತಳಕು, ಸಂಬಳದ ಮಹತ್ವ, ಇಲಾಖೆಯ ಹಿರಿಮೆ, ಜಾತಿಯ ಅಂತಸ್ತು, ಮುಖ್ಯವಾಗಿ ಅಧಿಕಾರಿಯ ಉಪದ್ರಕಾರಕ ಶಕ್ತಿಯನ್ನು ಹೊಂದಿಕೊಂಡು ನಮಸ್ಕಾರವಿಧಿಯು ಮಾರ್ಪಡುತ್ತದೆ. ಹಳ್ಳಿಯವರಿಗೆ ಸರಕಾರ ಉದ್ಯೋಗಸ್ಥರ ಮೇಲೆ ಸರ್ವಸಾಧಾರಣವಾಗಿ ಅಳುಕು ಇದೆ, ಅಂಜಿಕೆ ಇದೆ, ಅಪಾಯ ಭೀತಿ ಇದೆ; ಆದರೆ ಅಕ್ಕರೆ ಕಡಿಮೆ. ಅಕ್ಕರೆ ಇದ್ದಲ್ಲಿ ಅವರಿಗೆ ನಿಜವಾದ ಅಭಿಮಾನವಿದೆ. ಅದು ಇಲ್ಲದ್ದಲ್ಲಿ ಅವರ ಮನಸ್ಸಿನೊಳಗಣ ನಂಬುಗೆ ಹೀಗಿದೆ—'ಮುಕ್ಕಾಲು ಮೂರು ವೀಸ ಅಧಿಕಾರಿಗಳು ಸರೀಸೃಪಗಳಂತೆ ಉದರ ಗಾಮಿಗಳು. ಈ ರೂಪಕವನ್ನು ನನಗೆ ಮಂದಟ್ಟಾಗುವಂತೆ ಹೇಳಿದ ಒಬ್ಬ ಉಪಾಧ್ಯಾಯರ ಮಾತುಗಳು ಇಲ್ಲಿವೆ.

'ಸರಕಾರದವರಲ್ಲಿ ಸಿವಿಲಿನವರು ಹೆಬ್ಬಾವುಗಳು, ಪೋಲೀಸಿನವರು ನಾಗರಹಾವುಗಳು, ಅಬ್ಕಾರಿ ಜಂಗ್ಲಿಯವರು ಮಂಡಲಿಗಳು.'

'ಟಪ್ಪಾಲಿನವರೋ?'

'ಟಪ್ಪಾಲ್ ಇನ್ಸಪೇಟರ್ ಹಸುರು ಹಾವು ಸೆರ್!'

'ಹಾಗಾದರೆ ಕೇರೆ ಹಾವು ಯಾರು?'

'ರೆವಿನ್ಯು ಇನ್ಸಪೇಟರ್, ಸಾರ್!'

'ನಾವು ಶಾಲಾ ಇಲಾಖೆಯವರು ಯಾವ ವರ್ಗದಲ್ಲಿ?'

'ತಾವು ಸೆರ್? ತಮ್ಮ ವರ್ಗ ವೊಳ್ಳೆಯದು, ಬುದ್ಧಿ!' ಮಾಸ್ತರರ ಕಡೆಯ ಮಾತಿನಲ್ಲಿ ನೀರ್ವೊಳ್ಳೆಯ ಅರ್ಥದ ಮರ್ಮ ನೋಡಿ!'

ಹೀಗೆ ಬಾಯಿಬಿಟ್ಟು ಉಪಾಧ್ಯಾಯರು ಉದ್ಯೋಗಸ್ಥರೊಂದಿಗೆ ಮಾತಾಡುವುದಿಲ್ಲವೆಂದಿಲ್ಲ. ಸಲುಗೆ ಇದ್ದರೆ ಸರಿಯಾಗಿ ಮಾತಾಡುತ್ತಾರೆ. ಅಧಿಕಾರಿಯು ರಾವಣೇಶ್ವರನೊ ಬೆಂಕಿ ನವಾಬನೊ ಆಗಿದ್ದರೆ ಹಳ್ಳಿಯವರ ಬಾಯಿಂದ ಸತ್ಯಸ್ಥಿತಿಯು ಹೊರಬರುವುದಕ್ಕೆ ಸಂಕೋಚಪಡುತ್ತದೆ. 'ಹಿರಿದೆನಿಸಿ ಅವ ಕ್ರೂರನಾದಡೆ, ನರರಳುಕಿ ಹೋಹರು, ವಸಂತದ ಖರಕಿರಣನಂತರ್ನಿವರ್ತನವಾಗ ಬೇಕೆಂದಾ!' ಹೀಗಿದ್ದರೂ ತಾಬೇದಾರರನ್ನು ಆಫಿಸರರ ಹತ್ತಿರ ಬರಲೀಸದ ಒಂದು ಮಾಯಾವರಣವಿದೆ. ಇದಕ್ಕೆ ದೌಲತ್ತು ಎಂದು ಹಳ್ಳಿಯವನ ಹೆಸರು. ದೌಲತ್ತು ಕಾಲಿನ ಎಕ್ಕಡ ಕಾಲಡಿಯಲ್ಲಿಯೇ ಇರಬೇಕೆಂದು ಹೇಳುವುದು. ಮುದ್ದುಮಾಡಿದ ಮನೇ ನಾಯಿ ಮಡಿಪಾತ್ರೆನೆಕ್ಕುವುದೆಂಬ ಸಂಶಯದಿಂದ ನಟಿಸಿದ್ದ ತಾಟಸ್ಥ್ಯವು ದೌಲತ್ತು ಅಲ್ಲ. ಮೇಲಿನ ಅಧಿಕಾರಿಯ ಅಸತ್ಯವನ್ನೂ ಅಸಮರ್ಥತೆಯನ್ನೂ ಪಾಪದವರ ಕಣ್ಣಿನಿಂದ ಮರೆಯಿಸುವ ಒಂದು ಅಂತರ್ಪಟವಿದೆ,ಅದೇ ದೌಲತ್ತು. ನನ್ನ ಸಮಕಾಲೀನರಾದ ಇಲಾಖಾ ಆಫಿಸರರು ಏನಿದ್ದರೂ ದೌಲತ್ತುದಾರರಾಗಿರಲಿಲ್ಲ. ಅವರಿಗೂ ಅವರ ಕೆಳಗಿನ ಉಪಾಧ್ಯಾಯರಿಗೂ ನಡುವೆ ಒಂದು ಬಗೆಯ ಅಡ್ಡಗೋಡೆ ಇರಲಿಲ್ಲ.ಅವರು ಉಪಾಧ್ಯಾಯರೊಂದಿಗೆ ಕಲೆತು ಅವರಿಂದ ಕಲಿತು ಅನ್ಯೋನ್ಯವಾಗಿದ್ದರು. ಸವೂರ ರಾಘವೇಂದ್ರರಾಯರು, ಕೂಡ್ಲು ವಿಶ್ವೇಶ್ವರರಾಯರು, ನಾರಾವಿ ಕೃಷ್ಣರಾಯರು, ಉಳ್ಳಾಲ ಮಂಗೇಶರಾಯರು, ಇಂಥವರ ಹೆಸರುಗಳು ಉಪಾಧ್ಯಾಯರ ನಾಲಗೆಗಳಲ್ಲಿ ಈಗಲೂ ನಿಂತಿವೆ. 'ಆ ರಾಯರು ನಮ್ಮನ್ನು ಕಾಯಿದೆ ಬಿಡದೆ ಕಾಯುತಿದ್ದರು, ಕಾಯಿಸುತಿರಲಿಲ್ಲ.' 'ಈ ರಾಯರು ಬೆನ್ನಿಗೆ ಬಡಿಯುತಿದ್ದರು, ಆದರೆ ಹೊಟ್ಟೆಗೆ ಹೊಡೆಯುತಿರಲಿಲ್ಲ.' 'ಅವರು ಇದ್ದ ಕಾಲಕ್ಕೆ ಬೆಲ್ಲ ಕೊಟ್ಟರು, ಇಲ್ಲದ ಕಾಲಕ್ಕೆ ಬೆಲ್ಲದಂಥ ಮಾತುಕೊಟ್ಟರು.' 'ಇವರು ಉಪಾಧ್ಯಾಯ ಕುಟುಂಬಿ, ಸರ್!ಇವರಿಗೆ ಹೆಂಡತಿಮಕ್ಕಳ ಚಿಂತೆಗಿಂತ ಶಾಲೆ ಮಾಸ್ತರರ ಚಿಂತೆ ಹೆಚ್ಚು.'

ನಾನು ಹೊಸಂಗಡಿ ಶಾಲೆಯನ್ನು ಪ್ರಥಮತ: ಸಂದರ್ಶಿಸಿದ್ದು ಆಶ್ವೀಜ ಬಹುಳ ಅಮವಾಸ್ಯೆ ದಿನ. ಆ ಶಾಲೆ ನೀರ ಮೇಲಿನಗುಳ್ಳೆ ಶಾಲೆ, ತೋರಿ ಅಡಗುತ್ತದೆ, ಆದ್ದರಿಂದ ಅದನ್ನು ಗುಟ್ಟಾಗಿ ಹೋಗಿ ನೋಡಬೇಕೆಂದು ನನಗೆ ಅಪ್ಪಣೆ ಇತ್ತು. ಆದರೆ ನಾನು ಹಳ್ಳಿಗೆ ಬರುವ ಸಂಗತಿ ನಮ್ಮ ಉಪಾಧ್ಯಾಯರಿಗೆ ಗಾಳಿ ಸಮಾಚಾರದಿಂದ ಮೊದಲೇ ಗೊತ್ತಾಗಿತ್ತು. ಉಪಾಧ್ಯಾಯರ ಶಾಲೆಯು ವರ್ಷಾವಧಿ ಪರೀಕ್ಷೆಗೆ ಸಿದ್ಧವೇ ಇತ್ತು. ನಾನು ಉಪಾಧ್ಯಾಯರನ್ನು ಕಂಡು, 'ನಮಸ್ಕಾರ! ಹ್ಯಾಗಿದ್ದೀರಿ, ಮಾಸ್ತರ್ರೇ?' ಎಂದು ಕೇಳಿದೆ.

ಉತ್ತರ:—'ಪ್ರಾಕಿನವರು ಇಡಿಸಿದ ಹಾಗೆ ಇದ್ದೇನೆ, ಸ್ವಾಮಿ?'
ಪ್ರಶ್ನೆ:—'ಪ್ರಾಕಿನವರು ಎಂದರೆ ಯಾರು?'
ಉತ್ತರ:—'ಪ್ರಾಕಿನವರು ಎಂದರೆ ರಾಘವೇಂದ್ರರಾಯರು. ಅವರು ನಮ್ಮ ತಂದೆ; ಈ ಶಾಲೆ ಮಂಜೂರುಮಾಡಿ ರಿಕೊಗ್ನಿಶನ್ ಹುಕುಂ ಕೊಟ್ಟವರು ಅವರು?'
ಪ್ರಶ್ನೆ:—'ವಿಶ್ವೇಶ್ವರರಾಯರು?'
ಉತ್ತರ:—'ಅವರು ದೊಡ್ಡತಂದೆ; ಅವರು ನಮ್ಮ ಶಾಲೆಗೆ ಗ್ರ್ರೆಂಟ್ ಹಣ ಕೊಡಿಸಿದವರು.'
ಪ್ರಶ್ನೆ:—'ನಾರಾಯಿಯವರನ್ನು ಬಲ್ಲಿರೊ?'
ಉತ್ತರ:—'ಕೃಷ್ಣರಾಯರನ್ನೊ? ಅವರು ನಮ್ಮ ತಾಯಿ, ಸ್ವಾಮಿ! ಈ ಶಾಲೆಯನ್ನು ಸಾಕಿ ಬೆಳಿಸಿದವರು ಅವರೆ ತಾನೆ!'

ಮುಂದುವರಿವರೆ ನನ್ನ ಹೆಸರು ಉಪಾಧ್ಯಾಯನ ಮಗನ ಸ್ಥಾನದಲ್ಲಿ ನಿಂತೀತೆಂಬ ಅನುಮಾನದಿಂದ ಸಂಭಾಷಣೆಯು ಇನ್ನೊಂದು ದಾರಿಗೆ ತಿರುಗಿತು.

ನಾನು:—'ಪರೀಕ್ಷೆಯಾಗಲಿಕ್ಕೆ ಅಡ್ಡಿ ಇದೆಯೇ?'
ಮಾಸ್ತರ್:—'ತಮ್ಮ ಶಾಲೆ, ತಮ್ಮ ಹುಡುಗರನ್ನು ತಾವು ಪರೀಕ್ಷೆ ಮಾಡಲಿಕ್ಕೆ ತಮಗೆ ಯಾರದು ಅಡ್ಡಿ, ಸ್ವಾಮಿ?'
ನಾನು:—'ಈ ಹೊತ್ತು ರಜೆಯಲ್ಲವೆ, ಆದ್ದರಿಂದ ಕೇಳಿದೆ.'
ಮಾಸ್ತರ್:—'ತಾವು ಬರುತ್ತೀರೆಂದು ಕೇಳಿ, ರಜೆಯಾದ್ದರಿಂದಲೇ ನಾನು ಮನೆಮನೆಗೆ ಓಡಿ,ಮಕ್ಕಳನ್ನು ಜಮಾಯಿಸಿಬಿಟ್ಟಿದ್ದೇನೆ. ನಾಳೆ ಎಲ್ಲಿ ಸಿಕ್ಕುತ್ತಾರೆ ಅವರು.?'
ನಾನು:—'ನಾಳೆ ನನಗೆ ಇಲ್ಲಿಂದ ವೇಣೂರಿಗೆ ಹೋಗಬೇಕು.'
ಮಾಸ್ತರ್:—'ನನಗೆ ಈ ರಾತ್ರಿಯೇ ಇಲ್ಲಿಂದ ಎದ್ದು ಹೋಗದೆ ನಿರ್ವಾಹವಿಲ್ಲ.'
ನಾನು:—'ಅದೇನಯ್ಯಾ ಹಾಗೆ?'
ಮಾಸ್ತರ್:—'ಅದು ಹಾಗೆಯೇ! ಊರೆಲ್ಲಾ ಸಾಲವಾದರೆ ಆಶ್ವೀಜ ಬಹುಳ ಅಮಾವಾಸೆಯ ನಂತರ ಹಳ್ಳಿಯಲ್ಲಿ ಯಾರು ನಿಲ್ಲುತ್ತಾರೆ, ಸ್ವಾಮಿ?'
ನಾನು:—'ಸಾಲ? ಸಾಲ ಹೇಗಾಯಿತು?'
ಮಾಸ್ತರ್:—'ಸಾಲಅಲವೊ? ಹಿಂದಿನ ಪಾಯ್ಕರಿ ವಜಾ ಮಾಡಿದರು. ಗ್ರ್ರೆಂಟ್ ಹಣ ಕೊಯ್ದುಬಿಟ್ಟರು. ವೇಣೂರಲ್ಲಿ ಬೋರ್ಡು ಶಾಲೆ ಹಾಕಿದರು. ನನ್ನ ಖಾಸಗಿ ಶಾಲೆಯ ಬೇರಿಗೆ ನೀರಿಟ್ಟರು. ಹಿಂದೆ ವರ್ಷಾವಧಿ ನಾನ್ನೂರು ರೂಪಾಯಿ ಗ್ರ್ರೆಂಟ್ ಬರುವಲ್ಲಿ ಈಗ ನಾಲ್ವತ್ತು ರೂಪಾಯಿ ಪ್ರಾಪ್ತಿ ಇಲ್ಲದಿದ್ದರೆ, ನಾಲ್ಕು ಜನರ ಹೊಟ್ಟೆಯ ಪಾಡು ಸಾಲಮಾಡದೆ ಹ್ಯಾಗೆ ಸಾಗಬೇಕು? ಅಪ್ಪಣೆಯಾಗಲಿ!

ನಾನು:—'ಅಡ್ಡ ಕಸಬು ಇಲ್ಲವೇ?'
ಮಾಸ್ತರ್:—'ಕಳೆದ ವರ್ಷ ಮಗನಿಗೆ ಒಂದು ಅಂಗಡಿ ಮಾಡಿಕೊಡಬೇಕೆಂದು ಯೋಚಿಸಿ,ಜೈನಪೇಟೆಯಿಂದ ಸಾಲತಂದು, ಅಂಗಡಿ ಪೂಜೆಯ ದಿನ ಮುಹೂರ್ತ ನೋಡಿ ಹುಡುಗನನ್ನು ಮುಂಡದ ಮೇಲೆ ಕೂರಿಸಿದೆ. ಒಂದು ತಿಂಗಳು ಹೋಗಲಿಲ್ಲ. ಗುಮ್ಮಟ ಪಾದೆಕಲ್ಲಿನ ಹಾಗೆ ಗಟ್ಟಿಯಿದ್ದ ಹುಡುಗ ಎರಡು ದಿವಸದ ಜ್ವರದಿಂದ ನನ್ನ ಕಣ್ಣಿನ ಮುಂದೆ ದೇವರಿಗೆ ಸಂದ. ಅವನ ಹನ್ನೆರಡನೆಯ ದಿನ ಕಳೆಯಲಿಲ್ಲ. ಅಷ್ಟರಲ್ಲಿ ಅವನ ತಾಯಿ ನೀರಿಗೆ ಹೋದವಳು ಕಾಲುಜಾರಿ ಬಾವಿಗೆ ಬಿದ್ದು ಗಂಗಾಮ್ಮನ ಪಾದ ಸೇರಿಕೊಂಡಳು. ಇನ್ನು ಏಳು ವರ್ಷದ ಒಂದು ಕೂಸು ಇದೆ. ಅದನ್ನು ಕಟ್ಟಿಕೊಂಡು ಈ ಹಳ್ಳಿಯಲ್ಲಿ ನಾನೇನು ಮಾಡಲಿ?'
ನಾನು:—'ಮಗುವನ್ನು ಏನು ಮಾಡುತ್ತೀರಿ? ಇಲ್ಲೇ ಇದೆಯೆ?'
ಮಾಸ್ತರ್:—'ಇಲ್ಲೇ ಇದೆ. ಅದನ್ನು ಅಜ್ಜಿಯ ಮನೆಯಲ್ಲಿ ಸದ್ಯಕ್ಕೆ ಬಿಡುತ್ತೇನೆ. ಯಾವುದಕ್ಕೂ ಶಾಲೆ ಪರೀಕ್ಷೆಯೊಂದು ತೀರದೆ ಇಲ್ಲಿಂದ ಏಳುವುದಕ್ಕೆ ನನಗೆ ಆಗುವುದಿಲ್ಲವಷ್ಟೆ!'
ನಾನು:—'ಮುಂದೆ ಶಾಲೆ ನೋಡುವುದು ಯಾರು?'
ಮಾಸ್ತರ್:—'ನೋಡುವುದೇನು? ಅದನ್ನು ನಾಳೆಯಿಂದ ಮುಚ್ಚಿ ಬಿಡುತ್ತೇನೆ.'
ನಾನು:—'ತೆರೆಯುವುದು ಯಾವಾಗ?'
ಮಾಸ್ತರ್:—'ಮಾರ್ಚಿ ತಿಂಗಳ ಗ್ರ್ರೆಂಟಿನ ಹಣದ ಬೀಲು ಬಂದರೆ ಸಿಕ್ಕಿದಷ್ಟು ಹಣದಿಂದ ಸಾಲ ಸಂದಾಯ ಮಾಡಿ, ಆ ಮೇಲೆ ಶಾಲೆ ತೆರೆಯುತ್ತೇನೆ.'

ಇದು ಸಂಸಾರ ಕಷ್ಟದಿಂದ ಬೆಂದ ಉಪಾಧ್ಯಾಯನ ಮನಸ್ಸಿನ ಮೊರೆ. ಈ ಮೊರೆಯಲ್ಲಿ ಮಾತಿನ ಮೆರಗು ಇಲ್ಲ, ನಿಜ. ಆದರೆ ಸಲುಗೆಯ ಭರವಸೆಯಿಂದ ಹೊರಟ ಆ ಸೊಲ್ಲಿನಲ್ಲಿ ಸುಳ್ಳಿನ ಸುಳಿವೂ ಇಲ್ಲ. ನಾವು ಸುಳ್ಳುಶಾಲೆಯೆಂದು ಸಂದೇಹಪಟ್ಟು ಹಳ್ಳಿಯ ಮಾಸ್ತರನ ಶಾಲೆಯ ಹಣೆಬರಹದ ಮೇಲೆ ಕೆಂಪು ಗೀಟು ಎಳೆಯುವ ಮುಂಚೆ ಆತನ ಬಡತನದ ಬಾಳಿನ ಸಾಲಸೋಲಗಳನ್ನು ವಿಚಾರಿಸಿಕೊಳ್ಳತಕ್ಕದ್ದೆಂಬ ಮೂಲಪಾಠವನ್ನು ನಾನು ಮೊತ್ತಮೊದಲು ಕಲಿತುಕೊಂಡದ್ದು ಈ ಹೊಸಂಗಡಿ ಉಪಾಧ್ಯಾಯರಿಂದ! ಬಡತನದಿಂದ ಆತನ ಸಾಲ ಹುಟ್ಟಿತೋ ಇಲ್ಲವೆ ಸಾಲದಿಂದ ಆತನ ಬಡತನ ಹುಟ್ಟಿತೊ, ಇದನ್ನು ನಾನು ನಿಷ್ಕರ್ಷಿಸಿ ಹೇಳಲಾರೆ. ಆದರೆ ಸಾಲ, ಬಡತನಗಳಿಂದ ಹಳ್ಳಿಯ ಮಾಸ್ತರನು ಹುಟ್ಟಿದನೆಂಬುದು ನನಗೆ ಗೊತ್ತು.

ಬಡ ಉಪಾಧ್ಯಾಯರಲ್ಲಿ ತಪ್ಪುಗಳು ಇವೆ. ಹುಡುಕು

ವವರಿಗೆ ಅವು ಸಿಕ್ಕುವುದಿಲ್ಲವೆಂದು ನಾನು ಹೇಳುವುದಿಲ್ಲ. ಆದರೆ ಅವು ತಿಳಿವಳಿಕೆ ಇಲ್ಲದ ಜುಜಿಬಿ ತಪ್ಪುಗಳು; ಹೆರವರ ಮನೆ ತೆಗೆಯುವ, ತಲೆ ಹೊಡೆಯುವ, ಆಸ್ತಿ ಅಪಹರಿಸುವ ಅಪರಾಧಗಳಲ್ಲ. ಶಾಲೆಯ ಏರ್ಪಾಟು, ಶಿಸ್ತು, ಶಿಕ್ಷಣ, ರಿಜಿಸ್ತ್ರಿಗಳ ಸಂಬಂಧವಾಗಿ ಆಗಾಗ ಇಲಾಖೆಯವರು ಮೂಡುತ್ತಲಿರುವ ಹೊಸ ಹೊಸ ತಿದ್ದುಪಾಟುಗಳನ್ನು ಅನುಸರಿಸುವಾಗ ಹಳೆಯ ಪದ್ಧತಿಯ ಉಪಾಧ್ಯಾಯರು ಎಡವಿಬೀಳುತ್ತಾರೆ. ಹಳ್ಳಿಶಾಲೆ ಸುಳ್ಳು ಹಾಜರಿ ಶಾಲೆ—ಈ ಅಪವಾದವನ್ನು ನಾನೂ ಕೇಳಿದ್ದೆ. ಒಮ್ಮೆ ಕೊಂಬಾರು ಶಾಲೆಯ ಹಾಜರು ಪಟ್ಟಿಯನ್ನು ಪರಾಮರ್ಶಿಸಿ 'ಏನಯ್ಯಾ ಇದು? ಹಾಜರಿ ಬರೆಯುವುದಕ್ಕೆ ಕಲಿಸಿದ್ದು ಯಾರಯ್ಯಾ ನಿಮಗೆ?'ಎಂದು ನಾನು ಪ್ರಶ್ನೆಮಾಡಿದೆ.

'ಸುಪರ್‌ವಾಯ್ಸರು, ಸಾರ್!' ಎಂದು ಉತ್ತರ ಬಂತು.

'ಸುಮ್ಮನೆ ಹೇಳಬೇಡಿ! ನವೆಂಬರ್ ತಿಂಗಳು ಇನ್ನೂ ಕಳೆದಿಲ್ಲ, ನೀವು ಡಿಸೆಂಬರ್ ತಿಂಗಳ ಹಾಜರಿಯನ್ನೂ ತುಂಬಿಸಿ ಬಿಟ್ಟಿದ್ದೀರಿ!'

'ಇಲ್ಲ ಸೆರ್, ಸುಪರ್‌ವಾಯ್ಸರು ಪರೀಕ್ಷೆಯ ಮೊದಲೇ ೧೯೦೯-೧೦ರ ಸಂಪೂರ್ಣ ಹಾಜರಿಯ ಲೆಕ್ಕಮಾಡಿ ಇಡಬೇಕೆಂದು ಅಪ್ಪಣೆಮಾಡಿ ಹೋಗಿದ್ದರು. ಈ ಇಡೀ ವರ್ಷದ ಹಾಜರಿಯನ್ನು ಹೇಳಿದ ಹೊತ್ತಿಗೆ ಭರಾಯಿಸಿ ಇಟ್ಟಿದ್ದೇನೆ.' ೧೯೦೯ — ೧೦ನೆಯ ವರ್ಷವೆಂದರೆ ೧೯೧೦ನೇ ಮಾರ್ಚಿಗೆ ಅಂತ್ಯವಾಗುವ ಹನ್ನೆರಡು ತಿಂಗಳು ಬಿಟ್ಟು ೧೯೧೦ಡಿಸೆಂಬರ್ ಕೊನೆಗೆ ಮುಗಿಯುವ ವರ್ಷವೆಂದು ಉಪಾಧ್ಯಾಯರು ತಿಳಿಯದೆ ಮಾಡಿದ್ದೇ ಸುಳ್ಳು ಹಾಜರಿಯ ನಿಜವಾದ ಕಾರಣವಾಗಿತ್ತು.

ಸಲುಗೆ ಇದ್ದರೆ ಉಪಾಧ್ಯಾಯರು ತಮ್ಮ ತಪ್ಪನ್ನು ಒಪ್ಪಿಕೊಳ್ಳುವುದಕ್ಕೆ ಹಿಂಜರಿಯುವುದಿಲ್ಲ. ಆದರೆ ಹಾಗೆ ಒಪ್ಪಿಕೊಳ್ಳುವಾಗ ಬಾಯ್ದೆರೆ ಮಾತಿನ ಬದಲು ಬರಹದ ಮಾತಿನಲ್ಲಿ ಒಪ್ಪಿಕೊಂಡರೆ, ಅದರಿಂದ ಮುಂದೆ ಒಂದಲ್ಲ ಒಂದು ಕಾಲದಲ್ಲಿ ತಮಗೆ ಅಪಾಯ ಬರಬಹುದೆಂಬ ಅವರ ಮನಸ್ಸಿನ ಸಂದೇಹವನ್ನು ಅವರ ರಿಪೋರ್ಟುಗಳ ಒಕ್ಕಣೆಯು ತೋರಿಸುತ್ತದೆ. ಒಂದು ಸರ್ತಿ ಮಾಸ್ತರರೆಲ್ಲ ತಮ್ಮ ತಮ್ಮ ಉಪಾಧ್ಯಾಯ ಸರ್ಟಿಫಕೇಟುಗಳನ್ನು ನನ್ನ ಆಫೀಸಿಗೆ ರವಾನಿಸಬೇಕೆಂಬ ಹುಕುಮಿಗೆ ವಿಧೇಯವಾಗಿ ಗುರುಪುರದ ಮಾಸ್ತರರೊಬ್ಬರು ವಿನಂತಿಮಾಡಿಕೊಂಡ ಕ್ರಮವೆಂತೆಂದರೆ-

'ನನ್ನಲ್ಲಿ ಬೇರೆ ಯಾವುದೊಂದು ಸರ್ಟಿಫಕೇಟು ಇಲ್ಲ. ಮೆಹರ್ಬಾನ್ ಮದ್ರಾಸ್ ಗವರ್ನರ್ ಸಾಹೇಬರವರು ತಮ್ಮ ಹೆಸರು ಮೊಹರು ನಿಶಿ ೧೯೧೧ರಲ್ಲಿ ನನಗೆ ದಯಪಾಲಿಸಿರುವ ಕೆಂಪು ಬರಹದ ಅರ್ಧ ಹಾಳೆಯ ದೊಡ್ಡ ಸರ್ಟಿಫಕೇಟು ಮಾತ್ರ ನನ್ನಲ್ಲಿದೆ. ಅದನ್ನು ತಮ್ಮ ಆಫೀಸಿಗೆ ಟಪ್ಪಾಲ ದ್ವಾರಾ ಕಳುಹಿಸುವಾಗ ನನ್ನ ದುರದೃಷ್ಟದಿಂದ ಅದು ಗೈರ್‌ವಿಲೆಯಾಗಿ ಹೋಗಬಹುದಷ್ಟೆ. ಹಾಗೆ ಹೋದ್ದಲ್ಲಿ ನನಗೆ ಹೊಸ ಗವರ್ನರ್ ಸಾಹೇಬರವರ ಹೆಸರು ಮೊಹರು ನಿಶಿ ಸರ್ಟಿಫಕೇಟು ಸಿಕ್ಕಲಾರದ್ದರಿಂದ, ಅಸಲನ್ನು ನಾನು ಇಟ್ಟುಕೊಂಡಿದ್ದೇನೆ. ಅದರ ತಾಜಾ ನಕಲನ್ನು ಕಳುಹಿಸಬೇಕೆಂದು ಹುಕುಂ ಆದ್ದಲ್ಲಿ ತ್ವರ್ಯದಲ್ಲಿ ಕಳುಹಿಸುತ್ತೇನೆ.'

ಇದನ್ನು ನೋಡಿದೊಡನೆ ಗವರ್ನರ್ ಸಾಹೇಬರಿಂದ ಸರ್ಟಿಫಿಕೇಟು ಪಡೆದ ಈ ದೊಡ್ಡ ವ್ಯಕ್ತಿಯನ್ನು ಸಂದರ್ಶಿಸಲು ನಾನೇ ಗುರುಪುರಕ್ಕೆ ಕೂಡಲೇ ಹೊರಟುಹೋದೆ. ಸರ್ಟಿಫಿಕೇಟ್ ಹೌದು; ಆದರೆ ಶಾಲೆಗೂ ಅದಕ್ಕೂ ಏನೂ ಸಂಬಂಧವಿರಲಿಲ್ಲ. ೧೯೧೧ರ ಖಾನೆಶುಮಾರಿಯಲ್ಲಿ ಎನ್ಯುಮರೇಶನ್ ಕೆಲಸ ಮಾಡಿದವರಿಗೆಲ್ಲಾ ಸಾಮಾನ್ಯವಾಗಿ ಕೊಡೋಣಾಗುವ ಸರ್ಟಿಫಿಕೇಟು!

ಉಪಾಧ್ಯಾಯ ಸರ್ಟಿಫಿಕೇಟು ತನ್ನಲ್ಲಿಲ್ಲವೆಂದು ಬರಹ ಮೂಲಕ ಒಪ್ಪಿಕೊಂಡರೆ ಆ ಒಪ್ಪಿಗೆ ತನ್ನ ಕೊರಳಿಗೆ ಸುತ್ತಿಕೊಂಡೀತೆಂದು ಗುರುಪುರ ಮಾಸ್ತರರು ಭೀತರಾದಂತೆ— ಶಾಲೆಯ ಮಕ್ಕಳಿಂದ ಅಕ್ಕಿಯ ಸರಬರಾಯಿಯನ್ನು ಗುಟ್ಟಾಗಿ ಮಾಡಿಸಿಕೊಳ್ಳುತ್ತಿದ್ದ ಮತ್ತೊಬ್ಬ ಉಪಾಧ್ಯಾಯರು ತಮ್ಮ ತಪ್ಪನ್ನು ಒಪ್ಪಿಕೊಂಡ ಉದಾಹರಣೆಯ ಕ್ರಮವೂ ಓದ ತಕ್ಕುದಾಗಿದೆ:-

'ಶಾಲೆಯ ಮಕ್ಕಳ ಸಂಬಳದ ಹಣವನ್ನು ಹೆತ್ತವರು ಸತ್ತರೂ ಕೊಡುವುದಿಲ್ಲ. ತಿಂಗಳು ತಿಂಗಳ ಸಂಬಳವನ್ನು ಬೋರ್ಡಿನ ಲೆಕ್ಕಕ್ಕೆ ನಾನೇ ಕೈಯಿಂದ ಕಟ್ಟಿ ನನಗೆ ಸಾಕು ಸಾಕಾಗುತ್ತದೆ. ಪಾಸುಮಾಡಲು ಪರೀಕ್ಷೆಯವರು ಬರುವ ಕಾಲದಲ್ಲಿ ಸರಬರಾಯಿ ಬೇಕೆಂದು ಕೇಳಿದರೆ, ಆಗ ಮಾತ್ರ ಮಕ್ಕಳ ಮನೆಯವರು ಬತ್ತ ಬಿಚ್ಚುತ್ತಾರೆ. ಆಫೀಸರರಿಗೆ ಸರಬರಾಯಿ ಎಂದು ನಂಬಿಸಿ ನಾನು ಅಕ್ಕಿ ತರಿಸಿಕೊಂಡದ್ದಿಲ್ಲ. ಆದರೆ ಮಕ್ಕಳು ತಾವಾಗಿ ತಂದ ಬತ್ತವನ್ನು ಅವರ ಸಂಬಳಕ್ಕಾಗಿ ವಾಡಿಕೆಯಂತೆ ನಾನು ಭರತಿಮಾಡಿಕೊಂಡಿದ್ದೇನೆ. ನಾನು ಬತ್ತ ತಿನ್ನುತ್ತೇನೆಂದು ಹೇಳುವುದು ನನ್ನ ಹಗೆಯವರ ಚಾಡಿ ಮಾತು.'

ಹೀಗೆಯೇ ಬೆಳ್ತಂಗಡಿಯವರೊಬ್ಬರು ಬತ್ತವನ್ನಲ್ಲ, ಮಕ್ಕಳಿಂದ ಹಣ್ಣುಕಾಯಿ, ತರಕಾರಿ, ಎಲೆ, ಅಡಕೆ ಸೆಳೆದುಕೊಳ್ಳುತ್ತಿದ್ದರಿಂದು ಪುಕಾರು ಬಂದಿತ್ತು. ಇದಕ್ಕೆ ಅವರ ಹೇಳಿಕೆ ನನ್ನ ಆಫೀಸಿನ ಹುಕುಮಿಗೆ ಒಳಪಟ್ಟೇ ಇತ್ತು, ಹೇಗೆಂದರೆ:-

'ಚಿತ್ರಲೇಖನವನ್ನು ಕಲಿಸುವಲ್ಲಿ ಉಪಾಧ್ಯಾಯರು ಮಕ್ಕಳಿಂದಲೇ ಎಲೆ, ಹೂ ಹಣ್ಣು – ಮೊದಲಾದ್ದನ್ನು ತರಿಸಿ

ಕೊಂಡು, ಚಿತ್ರಗಳನ್ನು ತೆಗೆಯಿಸಬೇಕೆಂದು ತಮ್ಮ ಆಫೀಸ್ ನಂಬ್ರ....ನೇ ಹುಕುಮನ್ನು ಶಿರಸಾವಹಿಸಿ, ಚಿತ್ರ ಲೇಖನದ ಪಾಠಕ್ಕಾಗಿ ವೀಳ್ಯದ ಎಲೆ, ಬಾಳೆ ಎಲೆ, ತೆಂಗಿನ ಕಾಯಿ, ಬದನೆ ಕಾಯಿ, ಮಾವಿನ ಹಣ್ಣು, ಇಷ್ಟನ್ನು ಮಾತ್ರ ಮಕ್ಕಳಿಂದ ನಾನು ತರಿಸಿದ್ದುಂಟು. ಪಾಠ ಮುಗಿದ ನಂತರ ಆ ವಸ್ತುಗಳನ್ನು ಏನು ಮಾಡಬೇಕೆಂದು ಖಾವಂದರ ಹುಕುಮಿನಲ್ಲಿ ಹೇಳದೆ ಇದ್ದ ಪ್ರಯುಕ್ತ ಅವನ್ನು ಶಾಲೆಯ ಪಕ್ಕದ ನನ್ನ ಮನೆಯಲ್ಲಿ ಇಟ್ಟಿರುತ್ತೇನೆ. ಅವುಗಳ ದುರ್ವ್ಯಯವಾಗಲಿಲ್ಲ.'

ಇಂಥ ಹಲವು ತಪ್ಪುಗಳನ್ನು ಚಾಡಿಯ ಮಾತಿನ ಬದಲು ಮಕ್ಕಳ ಬಾಯಿಯೇ ಬಯಲಿಗೆ ತರುತಿತ್ತು. ಒಮ್ಮೆ ಬಡಗು ಬೆಟ್ಟಿನ ಶಾಲೆಯ ಮಕ್ಕಳಿಗೆ ಓದುಗಾರಿಕೆಯಲ್ಲಿ ನಾನು ಪರೀಕ್ಷೆಮಾಡುವ ಸಂದರ್ಭದಲ್ಲಿ 'ಹಳೆಯ ಮರವನ್ನು ಕಡಿದುಹಾಕಬೇಡ' ಎಂಬ ಪಾಠವನ್ನು ಓದು ಎಂದು ಪ್ರಶ್ನೆಮಾಡಿದೆ. ಅದಕ್ಕೆ ಹುಡುಗರು ಓದದೆ, ಮಾಸ್ತರರ ಮುಖವನ್ನು ಮಿಟಮಿಟನೆ ನೋಡುತ್ತಾ ನಿಂತರು. ಓದಲಿಕ್ಕೆ ಬರುವುದಿಲ್ಲವೇ ಎಂದು ನಾನು ಒತ್ತಿ ಕೇಳಿದೆನು. 'ಆ ಪಾಠ ಎಂದರೆ ಮಾಸ್ತರರಿಗೆ ಸಿಟ್ಟು' ಎಂಬದಾಗಿ ಚಿಕ್ಕ ಹುಡುಗನೊಬ್ಬನು ಉಸುರಿ 'ಅದನ್ನು ಯಾರೂ ಓದಬಾರದೆಂದು ಹೇಳುತ್ತಾರೆ' ಎಂದು ಮುಂದೆ ಬಂದು ಹೆದರದೆ ಪಾಠವನ್ನು ಓದಿ ಒಪ್ಪಿಸಿಬಿಟ್ಟನು. ಈ ಸಂಗತಿಯನ್ನು ಕುರಿತು ಮತ್ತೆ ವಿಚಾರಿಸಿದ್ದಲ್ಲಿ ಒಂದು ಹಳೆಯ ಮರ ಕಡಿದು ಹಾಕಿದ ನಂಬ್ರದಲ್ಲಿ ಉಪಾಧ್ಯಾಯರು ಜಂಗ್ಲಿಯವರಿಗೆ ೧೦ ರೂಪಾಯಿ ಜುರುಮಾನೆ ಕೊಡಬೇಕಾಯಿತೆಂಬದು ನನಗೆ ಗೊತ್ತಾಯಿತು.

ಇದರಂತೆ ಮರ್ಕಂಜೆ ಶಾಲೆಯಲ್ಲಿ ಗುಬ್ಬಿಯ ಕಥೆ ಹೇಳು ಎಂದು ನಾನು ಕೊಟ್ಟ ಪ್ರಶ್ನೆಯನ್ನು ಕೇಳಿ, ಕ್ಲಾಸಿನ ಮಕ್ಕಳು ನಗುವಿನಿಂದ ತಾರಾಮಾರು ಮಾಡಿದರೆಂಬದಾಗಿಯೂ ಅಂದು ಶಾಲೆಗೆ ಬಂದಿದ್ದ ಹಳ್ಳಿಯ ಮುಖಂಡ ಮನುಷ್ಯರಿಬ್ಬರು ಹೊಟ್ಟೆ ತುಂಬ ನಗಲು ಹೊರಕ್ಕೆ ಹೋದರೆಂಬದಾಗಿಯೂ ನನ್ನ ನೆನಪು. ಪ್ರಶ್ನೆಯಿಂದ ಮಾಸ್ತರರು ಮನಸ್ಸಿನಲ್ಲಿ ನೊಂದಂತೆ ನಿಂತುಕೊಂಡರು. ನಾನು ಗುಬ್ಬಿಯ ಕಥೆ ಬಿಟ್ಟು ಮತ್ತೊಂದು ಕಥೆ ಕೇಳಿ ಪರೀಕ್ಷೆಯನ್ನು ಮುಂದರಿಸಿದೆ. ಇದರ ಆರು ತಿಂಗಳ ಹಿಂದೆ ಶಾಲೆಯ ಬಳಿಯ ಗುಬ್ಬಿ ಹೆಂಗಸಿನ ನಂಬ್ರದಲ್ಲಿ ಯಾರೊ ಯಾರೊ ಸೇರಿದ್ದರೆಂಬ ಪೂರ್ವ ಕಥೆಯೊಂದನ್ನು ಮಾಸ್ತರರು ನನ್ನ ಕಿವಿಗೆ ಮತ್ತೆ ಹಾಕಿದರು.

ಪೇಜಾವರ ದಾವಿದ ಮತ್ತು ಜನ್ನಪ್ಪ ಮಾಸ್ತರರ ಸಂಗತಿಯೊಂದು ಅಪೂರ್ವರೀತಿಯಿಂದ ಹೊರಬಿದ್ದದ್ದು ಹುಡುಗರ ಬಾಯಿಪಾಠದ ಪರೀಕ್ಷೆಯಲ್ಲಿ.

ಆ ಶಾಲೆಯಲ್ಲಿ ಅವರಿಬ್ಬರಲ್ಲದೆ ರಾಘವನೆಂಬ ಮೂರನೆಯ ಮಾಸ್ತರರು ಇದ್ದರು. ದಾವಿದ ಮತ್ತು ಜನ್ನಪ್ಪ ಇವರ ನಡತೆಯ ವಿಷಯವಾಗಿ ಮೊದಲು ನನಗೊಂದೂ ಗೊತ್ತಿರಲಿಲ್ಲ. ಆದರೆ ರಾಘವ ಮಾತ್ರ ಇವರಿಬ್ಬರ ಮಧ್ಯಸ್ಥನಾಗಿದ್ದು ಶಾಲೆಯ ಮರ್ಯಾದೆಯನ್ನು ಕಾಪಾಡುತ್ತಿದ್ದನು. ನಾನು ಬಂದ ದಿನ ಬಾಯಿಪಾಠದಲ್ಲಿ ಪರೀಕ್ಷೆ. ಹುಡುಗರು ನಳಚರಿತ್ರೆಯ ಒಂದೊಂದೇ ಪದ್ಯವನ್ನು ಒಬ್ಬೊಬ್ಬರೇ ಕ್ರಮವಾಗಿ ಹಾಡುತ್ತಾ ಬಂದರು. ಸುಮಾರು ಐದು ಪದ್ಯಗಳು ಮುಗಿಯುತ್ತಲೇ ಜನ್ನಪ್ಪ ಮಾಸ್ತರರು 'ಮುಂದೆ ಮಕ್ಕಳಿಗೆ ಗೊತ್ತಿಲ್ಲ, ಸೆರ್!' ಎಂದರು. ಆಗ ಒಬ್ಬ ಹುಡುಗನು ಮುಂದೆ ಬಂದು 'ನನಗೆ ಗೊತ್ತಿದೆ, ನಾನು ಹೇಳುತ್ತೇನೆ ಸಾರ್' ಎಂದು ಹೇಳಿ ಹೀಗೆ ಮುಗಿಸಿದನು.

'ಜನಪನಾ ದಾವಿದನ ಮರು ಜೂ
'ಜಿನಲಿ ಗೆಲ್ದನು ದರೆಯನಾಳ್ದನು
'ಜನಪ ಸಂಮುಗಿಲೆನಿಸಿ ರಾಘವ ಕೇಳು ಪೂರ್ವದಲಿ॥

ಶಾಲೆಯ ಮೂಡುಕಡೆ ಒಂದು ಅಂಗಡಿಯಲ್ಲಿ ಜನಪ ದಾವಿದರು ಯಾವಾಗಲೂ ಜುಗಾರಾಡುತ್ತಿದ್ದರೆಂದೂ ಇತ್ತಲಾಗೆ ಜನಪ ಮಾಸ್ತರನು ಸರಿಮುಗಿಲು ಆಡಿ ದಾವಿದನನ್ನು ಸೋಲಿಸಿದನೆಂದೂ ರಾಘವ ಮಾಸ್ತರರು ಕೇಳಿದ್ದ ಸಂಗತಿಯು ಮಕ್ಕಳು ಉರುಹಾಕಿದ ಪದ್ಯದಿಂದ ನನಗೂ ತಿಳಿದು ಬಂತು.

ಹೀಗೆ ಮಕ್ಕಳು ಮಾಸ್ತರರ ಗುಟ್ಟನ್ನು ತಿಳಿಯದೆ ಬಯಲಿಗೆ ತರುವ ಹಾಗೆ ನಮ್ಮ ವಿಷಯವಾಗಿಯೂ ಹೇಳಬಾರದ ಸಂಗತಿಗಳನ್ನು ಹೊರಗೆಡವಿದ್ದು ಉಂಟು. ಸಿವಿಕ್ಸ್ ಎಂಬ ಹೊಸ ಪಾಠವು ಮಕ್ಕಳ ತಲೆಮೀರಿದ ವಿಷಯ; ಆದರೂ ಮಕ್ಕಳು ಆ ವಿಷಯದಲ್ಲಿ ಕೊಟ್ಟ ಉತ್ತರಗಳು ನನಗಂತು ಸಮರ್ಪಕವಾಗಿ ತೋರುತ್ತಿದ್ದುವು.

ಬಿಳಿಯೂರ ಶಾಲೆ ಗುಡ್ಡದ ಮೇಲೆ, ಅಲ್ಲಿ ಬಿಸಿಲಿಗೆ ಏರಿ ಹೋದರೆ ಬಾಯಾರಿ ಹೊಟ್ಟೆ ಹಸಿದು ದಣಿವಾಗುತ್ತದೆಂಬುದನ್ನು ಲಕ್ಷ್ಯದಲ್ಲಿಟ್ಟು ಕೆಳಗಿನ ಮಾತುಗಳನ್ನು ಓದಬೇಕು.

ಪ್ರಶ್ನೆ:—'ಸುಪರ್‌ವಾಯ್ಸರ ಕೆಲಸಗಳೇನು?'

ಉತ್ತರ:—'ಮಧ್ಯಾಹ್ನ ಬಂದರೆ ನಿದ್ದೆಮಾಡುವುದು, ಬೆಳಗ್ಗೆ ಬಂದರೆ ಅಡಿಗೆ ನೋಡುವುದು.'

ಪ್ರಶ್ನೆ:—'ಸಬ್ ಎಸಿಸ್ಟಾಂಟರ ಕೆಲಸವೇನು?'

ಉತ್ತರ:—'ಶಾಲೆಗೆ ಬಂದ ಕೂಡಲೇ ಎಳನೀರು ಕುಡಿಯುವುದು, ಬೋರ್ಡು ಉಜ್ಜುವುದು; ಸಂಜೆ ಸಿಗರೇಟ್ ಸೇದುವುದು.'

ಬೋರ್ಡ್ ಎಂದ ಕೂಡಲೇ ನಮ್ಮ ಸ್ನೇಹಿತ ತಿಮ್ಮಪ್ಪ

ಮಾಸ್ತರರ ಹೆಸರು ನನ್ನ ನೆನಪಿಗೆ ಬರುತ್ತದೆ. ತಿಮ್ಮಪ್ಪ ಮಾಸ್ತರರ ಶಾಲೆ ಪುತ್ತೂರಲ್ಲಿ, ಮನೆ ಬಾಯಾರಲ್ಲಿ; ಹಾಜರಿ ಶಾಲೆಯಲ್ಲಿ, ಕೆಲಸ ಎಲ್ಲರ ಮನೆಗಳಲ್ಲಿ. ಅವರು ಶಾಲೆಯ ಕೆಲಸ ಒಂದು ಹೊರತು ಮಿಕ್ಕ ಯಾವ ಕೆಲಸವನ್ನಾದರೂ ಸರಿಯಾಗಿ ಚೆನ್ನಾಗಿ ಮಾಡುತಿದ್ದರು. ಚಿಪ್ಪಾರು ಅರಮನೆ ಸಂಕಯ್ಯ ಹೆಗ್ಗಡೆಗೆ ಬೆನ್ನುಪಣಿಯಾದರೆ ಹರಿಕಳ ಬೈದ್ಯ ರನ್ನು ಕರಕೊಂಡು ಬರಲಿಕ್ಕೆ ಓಡಬೇಕು ತಿಮ್ಮಪ್ಪ ಮಾಸ್ತ ರರು. ಕುಲುಗುಂದ ಸಂತೆಯ ಕೋಣನ ಜೋಡಿ ಬಿದರೆ ಕಂಬಳಕ್ಕೆ ತರಬೇಕಾದರೆ ಹಲ್ಲನ್ನೆಣಿಸಿ ಪ್ರಾಯ ಪರೀಕ್ಷೆ ಮಾಡಬೇಕು-ತಿಮ್ಮಪ್ಪ ಮಾಸ್ತರರು. ಮರ್ದಾಳು ಬೀಡಿನ ಅನಂತಮತಿಗೆ ಮದುವೆಯಾದರೆ ಬಂದವರಿಗೆ ಎಳನೀರು ಅವಲಕ್ಕಿ ಕೊಡಲಿಕ್ಕೆ ತಿಮ್ಮಪ್ಪ ಮಾಸ್ತರು. ಕಾರಂಜೆ ಜಾತ್ರೆ ಯಲ್ಲಿ ಪಾದೆಕಲ್ಲಿನ ನೆತ್ತಿಯ ಮೇಲೆ ನಿಂತುಕೊಂಡು 'ಓ ಕೋಟಿ! ಓ ದೂಮು!' ಎಂದು ಇರುಳೆಲ್ಲ ಕೂಗಿ ಕರೆಯಲಿಕ್ಕೆ ತಿಮ್ಮಪ್ಪ ಮಾಸ್ತರು. ಉಮ್ಮಬ್ಬ ಬ್ಯಾರಿಗೆ ಚೊಕ್ಕಾಡಿ ಭಟ್ಟರ ಅಡಿಕೆ ತೋಟವನ್ನು ದಸ್ತೈವಜು ಇಲ್ಲದೆ ವಾಯಿದೆ ಗೇಣಿಗೆ ಬಾಯ್ದೆರೆ ಮಾತಿನಿಂದ ಕೊಡಿಸಲಿಕ್ಕೆ ತಿಮ್ಮಪ್ಪ ಮಾಸ್ತರು. ಪೇರಾರು ಗುತ್ತಿನ ಯಜಮಾನರ ಮೇಲೆ ಕತ್ತಿ ಕಟ್ಟಿದ ಅಳಿ ಯಂದಿರನ್ನು ಬೆನ್ನು ತಟ್ಟಿ ಒಡಂಬಡಿಸಲಿಕ್ಕೆ ತಿಮ್ಮಪ್ಪ ಮಾ ಸ್ತರು. ದಾಸಣ್ಣ ಭಾಗವತರ ಕುಂಬಳೆ ಸೀಮೆಯ ತಾಳಮದ್ದ ಳೆಯ ಗದ್ದಲದಲ್ಲಿ ಆಫೀಸ್ ಜನರು ಸೈಸೈಯೆಂದು ಮೆಚ್ಚುವ ಹಾಗೆ ಗುಂಡನ ಎದುರು ಕರ್ಣನ ಅರ್ಥವಿಸ್ತರಣೆಗೆ ಕೂತು ಕೊಳ್ಳಬೇಕು ತಿಮ್ಮಪ್ಪ ಮಾಸ್ತರು. ಹೀಗೆ ತಿಮ್ಮಪ್ಪ ಮಾಸ್ತ ರನ್ನು ಮನೆಗೆ ಹುಡುಕಿಕೊಂಡು ಬರುವ ಜನರಿಂದ ಅವರಿಗೆ ಶಾಲೆಯಲ್ಲಿ ಕೂತುಕೊಳ್ಳುವುದಕ್ಕೆ ಪುರುಸತ್ತೇ ಇರಲಿಲ್ಲ. ಆದರೂ ಇವರ ಮೇಲೆ ಪುಕಾರು ಇಲ್ಲ, ಫಿರ್ಯಾದು ಇಲ್ಲ. ಇವರು ತರಬೇತಾಗದ ಉಪಾಧ್ಯಾಯರು, ಕಲಿಸುವುದು ಕಡಮೆ, ಕ್ರಮ ತಪ್ಪು ಎಂದು ಕಂಡಾಬಟ್ಟೆ ಯಾರೂ ಹೇಳಿ ದ್ದಿಲ್ಲ. ಮಕ್ಕಳು ಕಲಿಯುವ ವಿಷಯಗಳು, ಎಂದರೆ ಓದು ಬರಹ, ಲೆಕ್ಕ, ಇವಿಷ್ಟು ಅವರಿಗೆ ಚೆನ್ನಾಗಿ ಬರುತ್ತಿತ್ತು.

ಒಂದು ದಿನ ಈ ಶಾಲೆಯಲ್ಲಿ ನಾನು ಪರೀಕ್ಷೆಯ ಲೆಕ್ಕ ಗಳನ್ನು ಕಪ್ಪು ಹಲಗೆಯ ಮೇಲೆ ಬರೆಯಲಿಕ್ಕೆಂದು 'ಮಾಸ್ತ ರೇ!ಬೋರ್ಡು ಇದೆಯೇ' ಎಂದು ವಿಚಾರಿಸಿದೆ.

ಮಾಸ್ತರ್:—'ಇದೆ ಸ್ವಾಮಿ! ತಮ್ಮ ಬೆನ್ನ ಹಿಂದೆ—'

ನಾನು ಹಲಗೆಯ ಹತ್ತಿರ ನಿಂತು ಹುಡುಕುತ್ತಾ 'ಬರೆ ಯಲಿಕ್ಕೆ ಚಾಕ್ ತುಂಡು ಎಲ್ಲಿ?' ಎಂದು ಕೇಳಿದೆ.

ಮಾಸ್ತರ್:—'ಚಾಕ್ ತುಂಡು ಇಡಲಿಲ್ಲ ಬುದ್ಧಿ!'

ನಾನು:—'ಚಾಕ್ ಇಲ್ಲದೆ ಬೋರ್ಡು ಯಾಕಯ್ಯಾ? ನಿಮ್ಮ ಶಾಲೆ ಹ್ಯಾಗೆ 'ರೆಕಗ್‌ನ್ಯಾಸ್' ಆಯಿತು?'

ಮಾಸ್ತರ್:-'ಶಾಲೆ ರೆಕೊಗ್‌ಶನ್ ಆಗಬೇಕಾದರೆ ಬೋರ್ಡು ಇಟ್ಟಿರಬೇಕೆಂದು ಅಪ್ಪಣೆಯಿತ್ತು. ಅಪ್ಪಣೆ ಮೇರೆಗೆ ಬೋರ್ಡು ಮಾಡಿಸಿ ಶಾಲೆ ರೆಕೊಗ್‌ಶನ್ ಆಯಿತು. ಚಾಕ್ ಇಟ್ಟಿರಬೇಕೆಂದು ಹುಕುಂ ಇರಲಿಲ್ಲ.'

ಹೀಗೆ ಹೇಳಿ ಮಾಸ್ತರರು ಶಾಲೆಯಲ್ಲಿ ನಿಲ್ಲದೆ ಕೆಳಗಿನ ಮನೆಗೆ ಓಡಿಹೋಗಿ, ಒಂದು ಜೇಡಿ ಹೆಟ್ಟೆ ಹಿಡಿದುಕೊಂಡು ಬಂದರು. ಈ ಮರಳು ಜೇಡಿಯಿಂದ ನಾನು ಹೇಗೋ ಮಾಡಿ ನಾಲ್ಕು ಪಂಕ್ತಿ ಸವಾಲನ್ನು ಬೋರ್ಡಿನ ಮೇಲೆ ಕೆರೆದು ಬಿಟ್ಟೆ. ಅದು ಅವಲ್‌ತರದ ಜೇಡಿಯೆಂದು ನನ್ನ ಊಹೆ. ಏಕೆಂದರೆ, ಮರುವರ್ಷ ನಾನು ಅದೇ ಶಾಲೆಗೆ ಹೋಗಿದ್ದಾಗ ಬೋರ್ಡಿನ ಸವಾಲು ಬೋರ್ಡಿನ ಮೇಲೆಯೇ ಉಳಿದಿತ್ತು. ಆದರೆ ಈ ಅವಧಿಯಲ್ಲಿ ಮಾಸ್ತರರ ಎಡಗಣ್ಣೊಂದು ಮಾತ್ರ ಕುರುಡಾ ಗಿತ್ತು. ಅದರ ಸಂಗತಿ ಅವರ ಮಾತಿನಲ್ಲಿ ಹೇಳೋಣ!

'ಸ್ವಾಮಿ, ಒಂದು ದಿನ ಸುಪರ್‌ವಾಯ್ಸರು ಶಾಲೆಗೆ ಬಂದು, ಮಕ್ಕಳಿಗೆ ಒಂದು ಪಾಠ ಮಾಡಿ ಎಂದು ನನಗೆ ಅಪ್ಪಣೆ ಮಾಡಿದರು. 'ಡೊಂಬರ ಚೆನ್ನೆಯ ಪಾಠ'-ಅದು ತಮ್ಮ ಕವನವಂತೆ; ಆ ಪಾಠ ಕಲಿಸುವಾಗ 'ಬೇಗ ತಿರ್ರನೆ ತಿರುಗಿ ಸರ್ರನೆ ಲಾಗ ಹಾಕಿದ ಡೊಂಬನು' ಎಂಬ ಚರಣ ಬಂತು. ಅದರ ಅರ್ಥ ಮಕ್ಕಳಿಗೆ ಹತ್ತಲಿಲ್ಲ. ಆಗ ನಾನೇ ಡೊಂಬ ನಾದೆ, ಲಾಗ ಹಾಕಿ ತೋರಿಸಿದೆ. ಹೊಡೆದ ಲಾಗಕ್ಕೆ ಕೈ ತಪ್ಪಿ ನಾನು ನೆಲದ ಮೇಲಾದೆ; ನನ್ನ ಕಾಲು ತಾಗಿ, ಬೋರ್ಡು ಜಾರಿ ನನ್ನ ಮುಖಕ್ಕೆ ಬಂದು ಬಡಿಯಿತು. ಬೋರ್ಡಿನ ಅಂಚಿನ ಮೊನೆಯ ಪೆಟ್ಟು ಕಣ್ಣಿಗೇ ಬಿತ್ತು. ಮದ್ದು ಮಾಡಿದೆ, ಲೇಪ ಹಚ್ಚಿದೆ; ಏನು ಮಾಡಿದರೂ ಕಣ್ಣೊಂದು ಇಂಗಿ ಹೋಯಿತು!'

ಈ ವ್ಯಸನಕರವಾದ ಸ್ಥಿತಿ ನೋಡಿ ನನ್ನಲ್ಲಿ ಕನಿಕರ ವಾದರೂ ಮಾಸ್ತರರ ಮಾತುಗಳಲ್ಲಿ ಕೊರಗು ಇರಲಿಲ್ಲ. 'ದೇವರ ದಯೆಯಿಂದ ಒಂದು ಕಣ್ಣಾದರೂ ಉಳಿಯಿತಷ್ಟೆ. ಸ್ವಾಮಿ! ಹೋದ ವರ್ಷ,-ತಮ್ಮ ಕಣ್ಣು ಶಾಲೆ ಬೋರ್ಡಿನ ಮೇಲೆ ಬಿತ್ತು. ಈ ವರ್ಷ, ಶಾಲೆ ಬೋರ್ಡು ನನ್ನ ಕಣ್ಣ ಮೇಲೆ ಬಿತ್ತು'-ಎಂಬುದಾಗಿ ನಗುನುಡಿಯಿಂದ ಕಥೆ ಮುಗಿ ಸಿದರು. ತರಬೇತ್ ಆಗದ ಮಾಸ್ತರು ಖರೆ! ಆದರೆ ಅವರ ಹಸನ್ಮುಖ, ಮೃದು ನುಡಿ, ವಿಶಾಲ ಹೃದಯ, ಉದಾರ ಬುದ್ಧಿ ಪರೋಪಕಾರ, ಶಾಂತ ಜೀವನ-ಇವನ್ನು ನಾನು ಮರೆಯುವ ಹಾಗಿಲ್ಲ.

ಒಂದು ವರ್ಷ ತಿಮ್ಮಪ್ಪ ಮಾಸ್ತರರ ಶಾಲೆಗೆ ಗ್ರೆಂಟ್ ಹಣವು ಸ್ವಲ್ಪ ಹೆಚ್ಚಾಗಿ ದೊರೆಯಿತು. ಆ ಕುರಿತು ಬೇರೆ ಉಪಾಧ್ಯಾಯರು ಅನೇಕರು ಬಹು ಕಾಲದ ವರೆಗೆ ತಮ್ಮೊಳಗೆ ಆಡಿಕೊಳ್ಳುತ್ತಿದ್ದ ಗೇಲಿ ಮಾತುಗಳು ನನ್ನ ಜ್ಞಾಪಕದಲ್ಲಿವೆ.

ಒಬ್ಬಿಬ್ಬರು ಆ ಸಂಗತಿಯನ್ನು ಪ್ರಾಸಬದ್ಧಗದ್ಯವಾಗಿ ಕಟ್ಟಿದ್ದು ಇಲ್ಲಿದೆ:—

'ತಿಮ್ಮನ ಶಾಲೆಯ ಸ್ಟೇಟಮೆಂಟು
'ಸುಳ್ಳೇ ಸುಳ್ಳೆಂದು ಕೇಳಿದ್ದುಂಟು!
'ಆದರೆ ಅವನಿಗೆ ಆಫೀಸ್ ನಂಟು
'ಇದ್ದುದರಿಂದ ತುಂಬಾ ಗ್ರೆಂಟು
'ಸಿಕ್ಕಿದೆ—ಐನೂರಹದಿನೆಂಟು
'ರೂಪಾಯಿ ಹಣದ ಒಂದೇ ಗಂಟು!'

ತಿಮ್ಮಪ್ಪ ಮಾಸ್ತರರ ಶಾಲೆಯು ನಿಜವಾಗಿಯೂ ಸಾಧಾರಣ ತರದ್ದು; ಇನ್ನೂರು ರೂಪಾಯಿ ಗ್ರೆಂಟ್ ಪಡೆಯುವಷ್ಟು ಅರ್ಹತೆಯುಳ್ಳದ್ದಲ್ಲ. ಮೂವರು ಮಾಸ್ತರರು ಇದ್ದು ಐವತ್ತು ಮಂದಿ ಮಕ್ಕಳುಳ್ಳ ಈ ಬಡ ಶಾಲೆಗೆ ೫೧೮ ರೂಪಾಯಿ ಹಣವು ಯಾವ ನಿಬಂಧನೆ ಪ್ರಕಾರವಾದರೂ ದೊರೆಯತಕ್ಕದ್ದಲ್ಲ. ಮೂರು ಮಂದಿ ಉಪಾಧ್ಯಾಯರಿಗೆ ೩×೩೬ ಅಂದರೆ ೧೦೮ ರೂಪಾಯಿ, ಮತ್ತು ೫೦ ಮಂದಿ ಹುಡುಗರಿಗೆ ತಲಾ ಒಂದ ರಂತೆ ೫೦ ರೂಪಾಯಿ, ಹೀಗೆ ಜುಮ್ಲಾ ೧೫೮ ರೂಪಾಯಿ ಎಂದು ಸರಕಾರಿ ಲೆಕ್ಕ. ಈ ೧೫೮ ಎಂಬ ಸಂಖ್ಯೆಯು ೫೧೮ ಆದ ಅಂಕಪಲ್ಲಟಕ್ಕೂ ಆಗಮಾದೇಶಗಳಿಗೂ ವಿಧಿ ಯಾವುದು? ಗಾಣದ ಎತ್ತಿನಂತೆ ಶಾಲೆಯ ಕೆಲಸದಲ್ಲೇ ಸುತ್ತುತ್ತಿರುವ ಇತರ ಹಳ್ಳಿಯ ಉಪಾಧ್ಯಾಯರಿಗೆ ಎಟುಕದ ಸಹಸ್ರಾರ್ಧ ರೂಪಾಯಿ ಹಣದ ಗಂಟು ಬಿಟ್ಟೀಬಸವಯ್ಯನಂತೆ ಬರಿಯ ಗ್ರಾಮಸೇವೆಯನ್ನೇ ಮಾಡುತ್ತಿದ್ದ ತಿಮ್ಮಪ್ಪ ಮಾಸ್ತರನ ಕೈಗೆ ಕೇಳದೆ ಬಂದು ಬೀಳುವುದಕ್ಕೆ ಕಾರಣವೇನು? ಇದು ಆಫೀಸ್ ಗುಮಾಸ್ತರು ತಿಳಿದು ಮಾಡಿದ ಕೈತಪ್ಪಿನ ಪ್ರಸಾದವೊ? ಸಬ್ ಎಸಿಸ್ಟಾಂಟರು ತಿಮ್ಮಪ್ಪನ ಮುಖ ನೋಡಿ ಮಾಡಿದ ಸುಳ್ಳು ಶಿಫಾರಸಿನ ಪ್ರಯೋಜನವೊ? ಇಲ್ಲವೆ ಮೇಲಿನ ಆಫೀಸಿನಲ್ಲಿ ಗುಟ್ಟಾಗಿ ಮಾಡಿದ ಕೂರ್ಮಾಟದ ಫಲವೊ? ಇದು ಯಾವುದೊಂದೂ ಕಾರಣವಲ್ಲ; ಏಕೆಂದರೆ ದೊಡ್ಡ ದೊರೆಗಳೇ ಸ್ವತಃ ಶಾಲೆಯನ್ನು ಸಂದರ್ಶಿಸಿ, ೫೧೮ ರೂಪಾಯಿ ಗ್ರೆಂಟ್ ಕೊಡಲಾದೀತೆಂದು ಸ್ವಹಸ್ತಾಕ್ಷರದ ಪ್ರತ್ಯೇಕ ಹುಕುಮನ್ನು ಕೊಟ್ಟಿದ್ದರು. ಹೆಚ್ಚಿನ ಹಣವು ದೊರಕಿದ ರಹಸ್ಯವು ಇತರ ಉಪಾಧ್ಯಾಯರಂತೆ ನನಗೂ ಕೆಲವು ತಿಂಗಳುಗಳ ವರೆಗೆ ಬಗೆ ಹರಿಯದಾಯಿತು.

ಹೀಗಿರಲು ಒಂದು ವರ್ಷದ ತರುವಾಯ ದೊಡ್ಡ ದೊರೆಗಳು ನಮ್ಮಲ್ಲಿ ಚಿತ್ತಯಿಸಿದ್ದಾಗ, ಹಳ್ಳಿಯ ಶಾಲೆಗಳ ಮಾತುಕಥೆಯಲ್ಲಿ ಈ ಶಾಲೆಯ ಗ್ರೆಂಟಿನ ಹಣದ ಸಂಗತಿ ಹೊರಕ್ಕೆ ಬಿತ್ತು; ದೊರೆಗಳಿಗೆ ತಿಮ್ಮಪ್ಪ ಮಾಸ್ತರರ ಮೇಲೆ ವಾತ್ಸಲ್ಯವಿತ್ತೆಂಬುದೂ ಗೊತ್ತಾಯಿತು. ಅವರು ತಿಮಪ್ಪ ಎಂದು ಹೇಳದೆ ದಿ. ಮಫ್ (ಮಫ್ ಎಂದರೆ ಇಂಗ್ಲಿಷಿನಲ್ಲಿ ದಡ್ಡ, ಹುಂಬ ಎಂದರ್ಥ) ಎಂಬ ಸಲುಗೆ ಹೆಸರನ್ನು ಇಟ್ಟಿದ್ದರು. ಅವರು ಅಂದು ಇಂಗ್ಲಿಷಿನಲ್ಲಿ ಹೇಳಿದ ನಾಲ್ಕು ವಾಕ್ಯಗಳ ಕನ್ನಡ ಅನುವಾದವು ಇಲ್ಲಿ ಕೊಟ್ಟಿದೆ:—

'ತಿ. ಮಫ್ ಇವರು ಕನ್ನಡ ಜಿಲ್ಲೆಯ ಹಳ್ಳಿಗೆ ಹೇಳಿದ ಉಪಾಧ್ಯಾಯರು. ಇವರು ಉದಾರ ಮನಸ್ಕರು. ತಾನು ಬ್ರಾಹ್ಮಣನೆಂಬುದನ್ನು ಲಕ್ಷಿಸದೆ, ವಿದ್ಯೆಯಲ್ಲಿ ಹಿಂದುಳಿದ ತನ್ನ ಗ್ರಾಮದ ಕಪ್ಪು ಜನರನ್ನು (ಹೊಲೆಯರನ್ನು) ಮುಂದಕ್ಕೆ ತರಲು ಪ್ರಯತ್ನ ಮಾಡುವವರು. ಇವರ ಸಹಾಯಕ ಉಪಾಧ್ಯಾಯರಿಬ್ಬರೂ ಕಪ್ಪು, ಶಾಲೆಯ ಮಕ್ಕಳಲ್ಲಿ ಹಲವರು ಕಪ್ಪು ಇದನ್ನೆಲ್ಲಾ ನಾನು ಸ್ವತಃ ಕಂಡಿರುವುದರಿಂದ ಈ ಶಾಲೆಯ ಗ್ರೆಂಟ್ ಹಣವನ್ನು ಈ ಮೂಲಕ ಹೆಚ್ಚಿಸಿರುತ್ತೇನೆ.'

ಇದನ್ನು ಕೇಳಿ ನಾನು ದೊರೆಗಳ ಹತ್ತಿರ 'ತಾವು ಸಂದರ್ಶಿಸಿದಾಗ ಶಾಲೆಯಲ್ಲಿ ಸಹಾಯಕ ಉಪಾಧ್ಯಾಯರು ಇದ್ದರೇ?' ಎಂದು ವಿನಯಪೂರ್ವಕವಾಗಿ ಕೇಳಿದೆ.

ದೊರೆ:— 'ಹೌದು, ಇಬ್ಬರು ಕಪ್ಪು; ಒಬ್ಬ ಕುಕಪ್ಪು; ಮತ್ತೊಬ್ಬ ಚಿಕಪ್ಪು.'

ನಾನು:—'ಪಂಚಮ ಹುಡುಗರು ಆ ಶಾಲೆಯಲ್ಲಿ ಇದ್ದರೇ?'

ದೊರೆ:— 'ಸಂಕಪ್ಪು, ಲಕಪ್ಪು, ಎಂಕಪ್ಪು, ಲೋಕಪ್ಪು ವಿನಾಯಕಪ್ಪು, ಈ ಹುಡುಗರೆಲ್ಲ ಕಪ್ಪು. ಹೊಲೆಯರ ಕಪ್ಪು ಹುಡುಗರನ್ನು ಸೇರಿಸಿಕೊಂಡ ಮೊದಲನೇ ಶಾಲೆ ಇದು; ಆದ್ದರಿಂದ ನಾನೇ ಗ್ರೆಂಟ್ ಹಣವನ್ನು ಹೆಚ್ಚಿಸಿರುತ್ತೇನೆ.'

ನಾನು 'ಅಲ್ಪವಿದ್ಯಾ ಮಹಾ ದಾನಿ! ತಿಮ್ಮಪ್ಪ ಬಹು ಪುಣ್ಯವಾನ್!' ಎಂದು ಮನಸ್ಸಿನಲ್ಲಿಯೇ ಅಂದುಕೊಂಡೆ.

ಈ ಮಾಸ್ತರರು ಮಾತ್ರ ಈ ಹೆಚ್ಚಿನ ಹಣದಿಂದ ತಮ್ಮ ಶಾಲೆಯ ಮುರುಕು ಕಟ್ಟಡವನ್ನು ದುರಸ್ತು ಮಾಡಿಸಲಿಲ್ಲ; ಬೇಕಾದ ಸಾಹಿತ್ಯ ಸಾಮಗ್ರಿಗಳನ್ನು ಶಾಲೆಗಾಗಿ ಒದಗಿಸಿಕೊಳ್ಳಲಿಲ್ಲ; ಹಣವನ್ನು ತನ್ನ ಸಹಾಯಕ ಉಪಾಧ್ಯಾಯರಿಗೆ ಹಂಚಿ ಕೊಡಲೂ ಇಲ್ಲ. 'ಹತ್ತು ಜನರಿಗೆ ಬೇಕಾಗುವ ಹಳ್ಳಿಯಲ್ಲಿ ಹಾಳು ಬಿದ್ದಿರುವ ಕೆರೆಗೆ ಕಲ್ಲು ಕಟ್ಟಿಸುವುದಕ್ಕೆ ನೀವು ಏಕೆ ಹಣ ಖರ್ಚುಮಾಡಿದಿರಿ?' ಎಂದು ಉಪಾಧ್ಯಾಯರೊಬ್ಬರು ತಿಮ್ಮಪ್ಪನವರಿಗೆ ಹಾಕಿದ ಪ್ರಶ್ನೆಗೆ, 'ಕೆರೆಯ ನೀರನು ಕೆರೆಗೆ ಚೆಲ್ಲಿರೊ' ಎಂಬ ಪಲ್ಲವಿಯ ಹಾಡೇ ತಿಮ್ಮಪ್ಪ ಮಾಸ್ತರರ ಉತ್ತರವಾಗಿತ್ತಂತೆ!

ತಿಮ್ಮಪ್ಪ ಮಾಸ್ತರರಿಗೆ ನಮ್ಮ ದೊರೆಗಳು ತಿ. ಮಫ್ ಎಂದಿಟ್ಟ ಸಲುಗೆಯ ಹೆಸರು ನಮ್ಮ ಬಾಯೊಳಗೆ ಮಾತ್ರವೇ ಹೊರತು ನಮ್ಮ ಹೊರಗೆ ಪ್ರಚಾರವಾಗಲಿಲ್ಲ. ತಿಮ್ಮಪ್ಪ ಮಾಸ್ತರರ ಹಾಗೆಯೇ ಇನ್ನಿಬ್ಬರು ಉಪಾಧ್ಯಾಯರು ಇದ್ದರು; ಒಬ್ಬರು ನೆಟ್ಟ ಶಾಲೆಯಲ್ಲಿ, ಇನ್ನೊಬ್ಬರು ವಿಟ್ಲ ಶಾಲೆಯಲ್ಲಿ.

ಒಬ್ಬರ ಎಡಗಣ್ಣು ಹೊಟ್ಟು, ಮತ್ತೊಬ್ಬರ ಬಲಗಣ್ಣು ಕುರುಡು. ಇವರಿಬ್ಬರನ್ನು ಅಡ್ಡ ಹೆಸರುಗಳಿಂದಲೇ ಕರೆಯುವುದು ಏತಕ್ಕೋ ವಾಡಿಕೆಯಾಗಿತ್ತು. ಶುಕ್ರಾಚಾರಿ ಎಂದರೆ ನೆಟ್ಟ ದವರಂತೆ, ಡೆಸಿಮಲ್ ಒಂದು (.೧) ಎಂದರೆ ವಿಟ್ಲದವರಂತೆ; ಆದರೆ ತಿಮ್ಮಪ್ಪ ಮಾಸ್ತರರು, ಮಾತ್ರ ಹೀಗೆ 'ಬಿರುದಂಕಿತ ರಾಗಿ' ಇರಲಿಲ್ಲ. 'ಬಿರುದಂಕಿತಗಳು' ಅಡ್ಡ ಹೆಸರುಗಳೆಂದೂ ದೊಡ್ಡ ಹೆಸರುಗಳೆಂದೂ ಎರಡು ತೆರನಾಗಿವೆ. ರಾಯ ಬಹ ದ್ದೂರ್ ಮೊದಲಾದುವು ದೊಡ್ಡ ಹೆಸರುಗಳು, ತಿಮೂರ್ ಲಂಗಡ ಮೊದಲಾದುವು ಅಡ್ಡ ಹೆಸರುಗಳು. ದೊಡ್ಡ ಹೆಸ ರುಗಳು ನಮ್ಮ ನಮ್ಮ ಲೋಕೋತ್ತರವಾದ ಕಾರ್ಯಗಳ ಇಲ್ಲವೆ ಜ್ಞಾನವಿಜ್ಞಾನ ಶೋಧಗಳ ಮಹತ್ವವನ್ನು ಸರಕಾರವು ಲಕ್ಷಿಸಿ, ನಮಗೆ ದಯೆಪಾಲಿಸುವ ಮೆಚ್ಚುಗೆಯ ಬಿರುದು ಗಳು. ಅಡ್ಡ ಹೆಸರುಗಳು ನಮ್ಮ ನಮ್ಮ ಅಂಗವೈಕಲ್ಯವನ್ನೋ, ಕಾರ್ಯಸ್ಖಾಲಿತ್ಯವನ್ನೊ ಕಂಡು, ಸಾಮಾನ್ಯ ಜನರು ವಿನೋ ದಾತ್ಮಕವಾಗಿ ಅಲಂಕಾರ ರೂಪದಲ್ಲಿ ಹೇಳಿದ ಉಪಮಾನ ಗಳು. ದೊಡ್ಡ ಹೆಸರುಗಳು ಮಕ್ಕಳ ಬರಹ ಪುಸ್ತಕದ ಮೇಲ್ಪಂತಿಯಂತೆ ಒಂದೇ ತೆರ; ಅಡ್ಡ ಹೆಸರುಗಳು ಮಕ್ಕಳು ಕೇಳುವ ಪ್ರಶ್ನೆಗಳಂತೆ ವಿವಿಧವಾಗಿವೆ. ದಂತವಕ್ರ ಸೆಟ್ಟಿ, ಲಂಬೋದರರಾಯರು, ಘಂಟಿ ಹನುಮಂತಯ್ಯ ಮಾಸ್ತರರು, ಇತ್ಯಾದಿ ಅಡ್ಡ ಹೆಸರುಗಳನ್ನು ಕಲ್ಪಿಸಿದವರಲ್ಲಿ ಕಾವ್ಯದೃಷ್ಟಿ ಇದೆ. ದೊಡ್ಡ ಹೆಸರುಗಳು ಸೀಮೆ ಬಟ್ಟೆಯ ಕೆಂಬಣ್ಣದಂತೆ ಅವನ್ನು ಧರಿಸಿಕೊಂಡವರ ಜೀವಮಾನ ಪರ್ಯಂತರ ಮಾತ್ರ ಶೋಭಿಸಿದ್ದು, ಜೀರ್ಣ ವಸನಸ್ಥಿತಿಯಲ್ಲಿ ಬಿಟ್ಟು ಹೋಗ ತ್ತವೆ. ಅಡ ಹೆಸರು ಹಾಗಲ್ಲ; ಒಂದು ಸಲ ಒಬ್ಬನ ಬೆನ್ನು ಹಿಡಿಯಿತೆಂದರೆ ಬ್ರಹ್ಮಕಪಾಲದಂತೆ ಬಿಟ್ಟು ಹೋಗುವುದು ಸ್ವಲ್ಪ ಕಷ್ಟ. ಇದಕ್ಕೆ ನಮ್ಮ ಕದನೆ ಬಾಯಿಯ ಹಳ್ಳಿ ಶಾಲೆಯ ಮಾಸ್ತರರೇ ಸಾಕ್ಷಿ.

ಕದನೆಬಾಯಿ ಶಾಲೆಯ ಮಾಸ್ತರರ ಹೆಸರು ಕೂಡ ತಿಮ್ಮಪ್ಪ, ಆದರೆ ಅವರನ್ನು ಆ ಹೆಸರಿಂದ ಕರೆಯುವುದು ತೀರ ಅಪರೂಪವಾಗಿತ್ತು. ಅವರ ವಿಷಯವಾಗಿ ಮಾತಾಡು ವಾಗ ಅವರ ಅಡ್ಡ ಹೆಸರೇ ಎಲ್ಲರ ಬಾಯಿಂದ ಬರುತಿತ್ತು. ಆ ಅಡ್ಡ ಹೆಸರು ಅವರಿಗೆ ಪ್ರಾಪ್ತವಾದ ಸಂಗತಿಯು ಹೇಳತಕ್ಕ ದ್ದಾಗಿದೆ.

ಕದನೆಬಾಯಿ ಶಾಲೆ ಬೋರ್ಡು ಶಾಲೆ; ತಿಮ್ಮಪ್ಪ ಒಬ್ಬರೇ ಅಲ್ಲಿಯ ಉಪಾಧ್ಯಾಯರು. ನಾನು ಡಿಕ್ಟೇಶನ್ ಪಾಠದಲ್ಲಿ ಪಠ್ಯಪುಸ್ತಕದೊಳಗಣ ವಾಕ್ಯಗಳನ್ನು ಮಕ್ಕಳಿಂದ ಹೇಳಿ ಬರೆಯಿಸುತ್ತಿರಲಿಲ್ಲ. ಮಕ್ಕಳು ತಮ್ಮ ಜತೆಯವರ ಹೆಸರುಗಳನ್ನಾಗಲಿ ಹಿರಿಯವರ ಹೆಸರುಗಳನ್ನಾಗಲಿ ತಪ್ಪಿಲ್ಲದೆ ಅಂದವಾಗಿ ಬರೆದರೆ, ನನ್ನ ಡಿಕ್ಟೇಶನ್ ಪರೀಕ್ಷೆಗೆ ಸಾಕಾಗು ತಿತ್ತು. ಈ ಶಾಲೆಯ ವರ್ಷಾವಧಿ ಪರೀಕ್ಷೆಯ ದಿನ ಮಕ್ಕಳಿಗೆ 'ನಿಮ್ಮ ಮಾಸ್ತರರ ಹೆಸರನ್ನು ಸ್ಲೇಟಿನ ಮೇಲೆ ಬರೆಯಿರಿ' ಎಂದು ನಾನು ಹೇಳಿದೆ. ಹನ್ನೆರಡು ಮಂದಿ ಹುಡುಗರಲ್ಲಿ ಒಬ್ಬನು ಮಾತ್ರ ಕದನೆಬಾಯಿ ತಿಮ್ಮಪ್ಪ ಎಂದು ಸ್ಲೇಟಿನ ಮೇಲೆ ಗೀಚಿದ್ದನು. ಮಿಕ್ಕವರೆಲ್ಲ ಒಂದೇ ರೀತಿಯಾಗಿ ಹೇಳಿ ಕೊಟ್ಟಂತೆ ಸರಿಯಾಗಿ ಬರೆದಿದ್ದರು. 'ಬದನೆಕಾಯಿ ತಿನ್ನಪ್ಪ' 'ಬದನೆಕಾಯಿ ತಿನ್ನಪ್ಪ' 'ಬದನೆಕಾಯಿ ತಿನ್ನಪ್ಪ' – ಹೀಗೆ ಹನ್ನೊಂದು ಸ್ಲೇಟುಗಳಲ್ಲಿ ಒಂದೇ ಹೆಸರು ಅಂಕಿತವಾಗಿತ್ತು. ಹುಡುಗರು ಮೊದಲೇ ಕಿವಿಯಿಂದ ಕೇಳಿ ಕಲಿತದ್ದನ್ನೇ ಹೀಗೆ ಬರೆದು ಹಾಕಿದರೊ, ಇಲ್ಲವೆ ಹಠಾತ್ತಾಗಿ ಆದಿನ ತಾವೇ ಕಲ್ಪಿಸಿ ಕೊಂಡು ಬರೆದರೊ ನನಗೆ ಗೊತ್ತಾಗಲಿಲ್ಲ; ಆ ವಿಚಾರಕ್ಕೆ ನಾನು ಹೋಗಲೂ ಇಲ್ಲ. ಆದರೆ ಅಂದಿನಿಂದ ಆ ಮಾಸ್ತರರ ಹೆಸರು ಮಾತ್ರ ಅಸ್ತ್ಯವ್ಯಸ್ತವಾಗಿ ನಿಂತುಬಿಟ್ಟಿತು. ಈ ಅಡ್ಡ ಹೆಸರಿನ ದೆಸೆಯಿಂದ ಆ ಮಾಸ್ತರರಿಗೆ ಹೋದ ಹೋದಲ್ಲಿ ಬದನೆಕಾಯಿ ಮಾತು ಬಂದು ಮಕ್ಕಳ ನಗುಬಾಯನ್ನು ಮುಚ್ಚುವುದೂ ಕ್ಲಾಸ್ ನಡಿಸುವುದೂ ಬಹಳ ದುಸ್ತರ ವಾಯಿತು.

ಹಳ್ಳಿಯ ಮಾಸ್ತರರಿಗೆ ಅಡ್ಡ ಹೆಸರುಗಳು ಇದ್ದಂತೆ ಯೇ ಶಾಲಾ ಇಲಾಖಾ ಆಫಿಸರರನ್ನು ಕುರಿತು ಕೆಲವು ಗೂಢ ನಾಮಗಳು ಉಪಾಧ್ಯಾಯರ ವ್ಯವಹಾರದಲ್ಲಿ ವಾಡಿಕೆಯಾಗಿ ದ್ದುವು. ಉಪಾಧ್ಯಾಯರು ಜಿಲ್ಲೆಯ ಶಾಲಾ ಇಲಾಖಾ ಆಫೀಸರರನ್ನೆಲ್ಲಾ ಪಂಚಭೂತಗಳಲ್ಲಿ ಗಣಿಸಿದ್ದರು. ಈ ಭೂತಗಳಲ್ಲಿ ಗುಳಿಗ ಎಂಬುದು ಇನ್ಸಪೆಕ್ಟರ್ ದೊರೆಗೆ ಇಟ್ಟ ಸಂಕೇತ. ಮುಂಡತ್ತಾಯ, ಕೊಡಮಣ್ತಾಯ, ಮಲ್ರಾಯ, ಜಾರಂತಾಯ, ಈ ಹೆಸರುಗಳಲ್ಲಿ ಯಾವುದಾದರೂ ಸರಿಯೆ –ಎಸಿಸ್ಟಾಂಟ್ ಇನ್ಸಪೆಕ್ಟರನನ್ನು ನಿರ್ದೇಶಿಸುತಿತ್ತು; ಈ ಆಫಿಸರನು ಕ್ರೈಸ್ತನಾದರೆ, ಪೊಸಭೂತ ಎಂಬದೇ ಅದರ ಸೂಚನೆ. ಜುಮಾದಿ, ತೋಡಕನ್ನಾಯೆ, ಕೋಟಿಚೆನ್ನಯರು, ಎಂದರೆ ಸಬ್ ಎಸಿಸ್ಟಾಂಟ್ ಎಂದರ್ಥ. ಮುಸುಲ್ಮಾನ ಶಾಲೆಗಳ ವಿಚಾರಕರ್ತನೇ ಅಲಿಭೂತ! ಇನ್ನೂ ಬೊಬ್ಬಿಡುವ ಅಧಿಕಾರಿಯನ್ನು ಬೊಬ್ಬರ್ಯೆ ಎಂದೂ, ಲಂಚ ತಿನ್ನುವವ ನನ್ನು ಕಲ್ಲುರ್ಟಿ ಎಂದೂ, ಕುಡುಕನನ್ನು ಕಲ್ಕುಡ ಎಂದೂ, ಸುಪರ್‌ವಾಯ್ಸರರಿಗೆ 'ಕಿನ್ನಿಮಾನಿಗಳು' ಎಂದೂ ಗುಟ್ಟಿನ ಹೆಸರುಗಳು. 'ಪತ್ರೆನಾಜಿತ್ ಮಲೆರಾಯನ ವರಾಸರಿ' ಎಂದರೆ ೧೬ನೇ ತಾರೀಕಿಗೆ ಎಸಿಸ್ಟಾಂಟ್ ಇನ್ಸಪೆಕ್ಟರರ ಸವಾರಿ ಬರುತ್ತದೆಂದು ಅಭಿಪ್ರಾಯ. ನನ್ನ ಕಾಲದಲ್ಲಿದ್ದ ಪ್ರತಿಯೊಬ್ಬ ಶಾಲಾ ಆಫಿಸರನನ್ನು ಸೂಚಿಸ ತಕ್ಕ ಒಂದೊಂದು ಭೂತದ ಹೆಸರು ಈ ನಾಮಾವಳಿಯಲ್ಲಿದೆ. ಆಫಿಸರನ ಸರ್ಕಿಟು ಒಪ್ಪೊತ್ತಾದರೆ 'ತಂಬಿಲು', ಮೂರು ದಿನಗಳದ್ದಾದರೆ

'ನೇಮ'— ಹೀಗೆಲ್ಲಾ ನನ್ನ ಸಮಕ್ಷದಲ್ಲಿ ನಮ್ಮ ವಿಷಯವಾಗಿ ಉಪಾಧ್ಯಾಯರು ತಮ್ಮೊಳಗೆ ಆಡಿಕೊಳ್ಳುತ್ತಿದ್ದ ಮಾತುಗಳನ್ನು ನೆನಸುವಾಗ, ಅಂಥ ಉಪಾಧ್ಯಾಯರು ಈಗ ಇರುತ್ತಿದ್ದರೆ ಅವರೊಂದಿಗೆ ನಾನು ಅಜ್ಞಾನಪೂರ್ವಕವಾಗಿ ಮಾಡಿರಬಹುದಾದ ತಪ್ಪುಗಳಿದ್ದಲ್ಲಿ ಅವನ್ನು ಕ್ಷಮಿಸಬೇಕೆಂದು ನಾನು ಕೇಳದೆ ಬಿಡುತ್ತಿರಲಿಲ್ಲ.

ನನ್ನ ಒಡನಾಡಿಗಳಾಗಿದ್ದು ನನ್ನೊಂದಿಗೆ ಕೆಲಸಮಾಡಿದ ಹಳ್ಳಿಯ ಉಪಾಧ್ಯಾಯರು ಹಲವರು ತಮ್ಮ ಇಹಲೋಕ ಯಾತ್ರೆಯನ್ನು ಮುಗಿಸಿ ಹೋಗಿಬಿಟ್ಟರು! ಅವರು ತಮ್ಮ ಹಿಂದಿನವರಿಂದ ತಮ್ಮ ಕೈಗೆ ದೊರೆತ ಕೆಲಸಗಳನ್ನು ಕೈಲಾದ ಮಟ್ಟಿಗೆ ಮಾಡಿ ಕೃತಕೃತ್ಯರಾದರು. ಅವರು ಕಲಿತದ್ದು ಕಡಮೆಯಾದರೂ ಅವರ ಕಷ್ಟಗಳು ಹೆಚ್ಚು, ಅವರ ಬಾಳು ಬಡಬಾಳು. ಅವರು ಒಂದು ವಿಷಯವನ್ನು ಮಾತ್ರ ಅಂದಿನ ಮಕ್ಕಳಿಗೆ ಚೆನ್ನಾಗಿ ಕಲಿಸುತ್ತಿದ್ದರು. ಅವರು ನಿರಂತರ ತಾವು ಹಾಡುತ್ತಿದ್ದ ಮತ್ತು ಮಕ್ಕಳಿಂದ ಹಾಡಿಸುತ್ತಿದ್ದ ಆ ಪಾಠವು ಇಲ್ಲಿದೆ:-

"ಏನು ಕಲಿತಡದೇನು? ಯತ್ನದ
ಲೇನು ಮಾಡಿದಡೇನು? ಸರ್ವವು
ಕಾನನದ ಬೆಳದಿಂಗಳಂದದಿ ವ್ಯರ್ಥವಾಗಿಹುದು ॥
ತಾನು ದೇವರ ಭಯವ ಕಲಿಯದೆ,
ಮಾನವನು ಬದುಕಿದಡದೇನ್ಕೆ?
ಶ್ವಾನಸೂಕರದಂತೆ ಹೊಟ್ಟೆಯು ಹೊರೆದುಕೊಂಡಿಹನು." ॥

ದೇವರ ಭಯವನ್ನು ಮಕ್ಕಳಿಗೆ ಬಿಡದೆ ಕಲಿಸುತಿದ್ದ ಈ ಉಪಾಧ್ಯಾಯರ ಶಾಲೆಗಳೆಲ್ಲಾ ಈಗ ಗುರುತು ಸಿಕ್ಕಲಾರದಷ್ಟು ರೂಪಾಂತರಗೊಂಡಿರಬಹುದು. ಈ ಅಧ್ಯಾಪಕರು ವಾಸವಾಗಿದ್ದ ಹುಲ್ಲು ಗುಡಿಸಲುಗಳು ಹಳ್ಳಿಯಲ್ಲಿ ಈಗ ಪಾಳುಬಿದ್ದಿರಬಹುದು. ಈ ಮೇಸ್ತ್ರರ ಹೆಸರುಗಳನ್ನು ಕೂಡ ಹಳ್ಳಿಯವರು ಮರೆತಿರಬಹುದು. ಇಷ್ಟರಿಂದ ಇವರು ಮಾಡಿದ ಸತ್ಕಾರ್ಯಗಳೆಲ್ಲ ಇವರ ಹಿಂದೆಯೇ ನಶಿಸಿ ಹೋದುವೆಂದು ಭಾವಿಸಲಾಗದು. ನಮ್ಮ ಜಿಲ್ಲೆಯ ಗುಡ್ಡ ಗುಡ್ಡಗಳ ಬುಡದಲ್ಲಿ ಒಂದರ ಮೇಲೆ ಒಂದಾಗಿ ಅಟ್ಟಳಿಗೆಯಂತೆ ಎಬ್ಬಿಸಿದ ಹೊಲಗದ್ದೆಗಳಲ್ಲಿ ಹಚ್ಚಗೆ ಕಂಗೊಳಿಸುತ್ತಿರುವ ಕಳಮಶ್ರೀಯನ್ನು ನಾವು ಕಂಡು ಅಲ್ಲಲ್ಲಿಯ ಗುತ್ತಿನ ಮನೆಯ ವರ್ಗದಾರರ ಕೃಷಿಕಾರ್ಯವನ್ನು ಕೊಂಡಾಡುವಾಗ, ಬಹುಕಾಲದ ಹಿಂದಿನಿಂದ ಮಳೆಯೆನ್ನದೆ ಬಿಸಿಲೆನ್ನದೆ ಪೆಟ್ಟಿನ ಮೇಲೆ ಪೆಟ್ಟು ಬಡೆದು ಬೆಟ್ಟವನ್ನು ಬಯಲನ್ನಾಗಿ ಮಾಡಿದ ಬಡ ಕೂಲಿಯವರ ಕಾಯಕಷ್ಟವು ನಮ್ಮ ಮನಸ್ಸಿಗೆ ಹೊಳೆಯುವುದಿಲ್ಲ. ನಾವು ಮಂಗಳೂರು ಸೇತುವೆಯ ಮೇಲೆ ನಿಂತುಕೊಂಡು ಸಮುದ್ರದೊಡನೆ ಸಂಗಮವಾಗುವ ನದಿಯ ದಿವ್ಯರೂಪವನ್ನು ದರ್ಶಿಸಿ ಮುಗ್ಧರಾಗಿ ಹೋಗುತ್ತೇವೆ; ಆದರೆ ಅದೇ ಕಾಲದಲ್ಲಿ ಆ ನೇತ್ರಾವತಿ ನದಿಯ ವಿಸ್ತಾರ ಪ್ರಯೋಜನ ಸೌಂದರ್ಯಾದಿಗಳನ್ನು ನಮ್ಮ ಕಣ್ಮುಂದೆ ಒದಗಿಸಿ ತಂದುಕೊಡಲು ಹಳ್ಳಿಹಳ್ಳಿಯಿಂದ ಎಷ್ಟು ಹಳ್ಳಗಳು ಹರಿದೋಡಿ ಬಂದುವು, ಎಷ್ಟು ತೋಡುಗಳು ಮುಂದೋಡಲಾರದೆ ಬತ್ತಿ ಹೋದುವು, ಎಷ್ಟು ತೊರೆಗಳು ತಮ್ಮ ಜೀವನವನ್ನೇ ಮುಗಿಸಿಬಿಟ್ಟುವು ಎಂಬದನ್ನು ಲಕ್ಷಿಸುವುದಿಲ್ಲ. ನಮ್ಮ ಜಿಲ್ಲೆಯಿಂದ ಐ. ಸಿ. ಎಸ್. ಪರೀಕ್ಷೆಯಲ್ಲಿ ಉತ್ತೀರ್ಣರಾದ ಅನೇಕರ ಕೀರ್ತಿ, ಹಾಯ್‌ಕೋರ್ಟಿನಲ್ಲಿ ಧರ್ಮಾವತಾರರೆನ್ನಿಸಿಕೊಂಡವರ ಮಹತ್ವ, ನ್ಯಾಯವಿಧಾಯಕ ಸಭೆಗಳಲ್ಲಿ ಸಭಾಸದರಾದವರ ಪ್ರಶಸ್ತಿ, ಶಸ್ತ್ರಕ್ರಿಯೆಯಲ್ಲಿ ಪಾರಂಗತರಾದವರ ಹೆಸರುವಾಸಿ, ದೊಡ್ಡ ವರ್ತಕರೆನ್ನಿಸಿದವರ ಪ್ರಸಿದ್ಧಿ, ಸಮಾಜ ಸಂಸ್ಕರಣ ವಿದ್ಯಾಪ್ರಸಾರ ಹರಿಜನೋದ್ಧಾರ ಇತ್ಯಾದಿ ದೇಶಸೇವೆಯಲ್ಲಿ ದೀಕ್ಷಾಬದ್ಧರಾದ ರಾಷ್ಟ್ರಭಕ್ತರ ಲೋಕೋತ್ತರವಾದ ಯಶಸ್ಸು-ಇಷ್ಟೆಲ್ಲಾ ಮಹಾ ವಟವೃಕ್ಷದಂತೆ ಹಬ್ಬಿದುದನ್ನು, ಇನ್ನೂ ಹಬ್ಬುವುದನ್ನು ನೋಡುವಾಗ, 'ಇದೆಲ್ಲಾ ಬಹುಮಟ್ಟಿಗೆ ಅರಿಯುಣ್ಣುವ ಮಕ್ಕಳೊಂದಿಗನಾದ ಹಳ್ಳಿಯ ಮಾಸ್ತರನು ಹರಡಿದ ಬೀಜದ ಫಲ' ಎಂಬದೊಂದು ಸೊಲ್ಲು ನನ್ನ ಅಂತರಂಗದಲ್ಲಿ ಜಿನುಗುತ್ತಿದೆ. ಇನ್ನು ತಾಳಮದ್ದಳೆಯವರ ಅರ್ಥ, ಬೈಲಾಟದ ವೇಷಧಾರಿಗಳ ಮಾತು, ಕನ್ನಡ ವಿದ್ವಾನ್ ಪಂಡಿತರ ಪಾಂಡಿತ್ಯ, ವಾರ್ತಾಪತ್ರಿಕೆಗಳಲ್ಲಿಯ ಲೇಖ, ದಸರಾ ಹಬ್ಬದಲ್ಲಿಯ ಕನ್ನಡ ಸಾಹಿತ್ಯ, ಮುದ್ದಣ ಕವಿಯ ಸ್ಮಾರಕೋತ್ಸವ ಸಮಾರಂಭ — ಹೀಗೆ ಬಹುಮುಖವಾಗಿ ಇಂದು ಕನ್ನಡ ಭಾಷಾಭಿವೃದ್ಧಿಯೂ ದೇಶಸೇವೆಯೂ ನಮ್ಮ ಜಿಲ್ಲೆಯಲ್ಲಿ ಆಗುತ್ತಲಿದ್ದರೆ, ಅದರ ಪುಣ್ಯದಲ್ಲಿ ಒಂದು ಗುಲಗುಂಜಿ ತೂಕದಷ್ಟಾದರೂ ಪಾಲು, ಈ ಬಡ ಹಳ್ಳಿಯ ಉಪಾಧ್ಯಾಯರಿಗೆ ಸಲತಕ್ಕದ್ದೆಂಬದನ್ನು ಮರೆಯಲಾಗದು.

# ಭಾರತ ಶ್ರವಣ

ವರ್ಷಕಾಲವಾಗಿತ್ತು. ಹಗಲಿರುಳು ಬಿಡದೆ ಸುರಿವ ಮಳೆಯಿಂದ ವೀರಪುರವು ಚಳಿಕಟ್ಟಿ ಹೋಗಿತ್ತು. ಜನರ ಕ್ರಿಯಾಕಲಾಪಗಳು ಉಡುಗಿಹೋಗಿದ್ದುವು. ಗಟ್ಟದ ಸೀಮೆ ಯಿಂದ ಜಿನಸಿನ ಗಾಡಿಗಳು ಬರುವುದು ನಿಂತುಹೋದುದ ರಿಂದ, ವ್ಯಾಪಾರವೆಲ್ಲಾ ಸ್ತಬ್ಧವಾಗಿತ್ತು. ವ್ಯಾಪಾರಕ್ಕೆ ಹೆದ್ದಾರಿಯಾದ ನೇತ್ರಾವತೀ ನದಿಯು ನೆರೆತುಂಬಿ ಸಾಗರೋ ಪಮಾನವಾಗಿ ಪ್ರವಹಿಸಿ, ವೀರಪುರವನ್ನು ದ್ವೀಪದಂತೆ ಆವ ರಿಸಿಕೊಂಡಿತ್ತು. ವೀರಪುರದ ವರ್ತಕರೆಲ್ಲರು ಬೇಸಿಗೆಯಲ್ಲಿ ಗಟ್ಟಿದ ಗೌಡರಿಂದ ದುಡಿದುದನ್ನು ಮಳೆಗಾಲದಲ್ಲಿ ಉಣ್ಣು ತ್ತಿದ್ದರು. ಹಾಗೂ ಬೇಸಿಗೆಯಲ್ಲಿ ಮಾಡಿದ ವ್ಯಾಪಾರದ ಮರೆ ಮೋಸದ ಪ್ರಾಯಶ್ಚಿತ್ತಕ್ಕಾಗಿ ಇನ್ನೇನೂ ಕೃತ್ಯವಿಲ್ಲದುದ ರಿಂದ, ಪುರಾಣಶ್ರವಣವನ್ನು ಮಾಡುತ್ತಲಿದ್ದರು. ಈ ವರ್ಷ ಅಕ್ಕಿಯ ಧಾರಣೆ ಏರಿದುದರಿಂದ, ವೀರಪುರದ ವರ್ತಕರೂ ವ್ಯವಸಾಯಗಾರರೂ ಪುರಾಣಶ್ರವಣವನ್ನು ಮಹಾಸಂಭ್ರಮ ದಿಂದ ಮಾಡಬೇಕೆಂದು ಇದ್ದರು.ಜ್ಯೇಷ್ಠ ಶುದ್ಧ ಪಂಚಮಿಯ ದಿನ ಊರುಗರು ಸಭೆಕೂಡಿದರು. ಸಭೆಯಲ್ಲಿ ಧನಿಕರೂ ದರಿ ದ್ರರೂ ನೆರೆದಿದ್ದರು. ಶುಭಕಾರ್ಯಕ್ಕೋಸ್ಕರ ಸಭಿಕರು ತಂತಮ್ಮಯೋಗ್ಯತಾನುಸಾರವಾಗಿ ವಂತಿಗೆಯನ್ನುಎಂದಿನಂತೆ ಕೊಡಲು ಉದ್ಯುಕ್ತರಾದರು. ಚಿಕ್ಕಪೇಟೆ ಹಿರಿಯಣ್ಣನವರು, ೨೫ ವರಹಗಳನ್ನು ಹರಿವಾಣದಲ್ಲಿ ಸುರಿದುಬಿಟ್ಟರು. ಮೇಲೂರು ಲಕ್ಕಣಾಜ್ಜರು ೭೦ ರೂಪಾಯಿ, ನಾಗರಾಜರು ೫೦ ಕೊಟ್ಟರು. ಉಳಿದವರಲ್ಲಿ ಕೆಲವರು "ಶಕ್ತ್ಯಾನುಸಾರ ವಾಗಿ ಕೊಡುವೆವು" ಎಂದು ವಾಗ್ದಾನಮಾಡಿದರು. ಗದ್ದೆ ಮನೆ ನರಸ ಪಾಂಡಿ ಉಡಿಯಲ್ಲಿದ್ದ ಎರಡು ರೂಪಾಯಿಗಳನ್ನು ಹರಿವಾಣದ ಬಳಿಯಲ್ಲಿಟ್ಟು ನಮಸ್ಕಾರ ಮಾಡಿದನು. ಮಳಲು ಬಿಟ್ಟು ಭೂಪಸೆಟ್ಟಿ ತಲೆಬಟ್ಟೆಯ ಕೊನೆಗೆ ಸುತ್ತಿದ್ದ ಏಳು ಚಕ್ರ ಗಳನ್ನು ಬಿಚ್ಚಿ, ಭಕ್ತಿಪೂರ್ವಕವಾಗಿ ಸಮರ್ಪಿಸಿ, ಪ್ರಸಾದ ವನ್ನು ಕೈಯಲ್ಲಿ ಕೊಂಡನು. ವಂತಿಗೆಯ ಹಣವು ಸುಮಾರು ೪೦೦ ರೂಪಾಯಿ ಎಂದು ನಿರ್ಣಯವಾದ ಮೇಲೆ ಯಾವ ಗ್ರಂಥವನ್ನುಓದಬೇಕೆಂಬಚರ್ಚೆ ನಡೆಯಿತು.ಕೊನೆಗೆ ಕನ್ನಡ ಮಹಾಭಾರತವನ್ನೇ ಓದಿಸಬೇಕೆಂದು ನಿಷ್ಕರ್ಷೆಯಾಯಿತು. ಗ್ರಂಥವನ್ನು ಓದುವುದಕ್ಕೂ ಅರ್ಥವನ್ನು ವಿಸ್ತರಿಸುವುದಕ್ಕೂ ಸಮರ್ಥರನ್ನು ಕರೆತರುವ ವಿಷಯದಲ್ಲಿ ಕೊಂಚ ಮಾತುಗಳು ನಡೆದುವು. ಕೆಲವರು ಶಿವಳ್ಳಿ ಬ್ರಾಹ್ಮಣರನ್ನು ಆಮಂತ್ರಿಸ ಬೇಕೆಂದೂ, ಕೆಲವರು ಗೋಮಾಂತಕ ಬ್ರಾಹ್ಮಣರನ್ನು ಕರೇ ಕಳುಹಿಸಬೇಕೆಂದೂ ವಿವಾದಿಸಿದರು. ಕೊನೆಗೆ ಕಮಲಪುರದ ರಾಮಕೃಷ್ಣ ಭಾಗವತರನ್ನು ಅರ್ಥ ವಿಸ್ತರಣೆಗೂ, ಹೊಲ ಸೂರು ಜನಾರ್ಧನಯ್ಯನವರನ್ನು 'ವಾಚಕಕ್ಕೂ' ತರಬೇಕೆಂದು ಆಳನ್ನು ಅಟ್ಟಿದರು.

ಜ್ಯೇಷ್ಠ ಶುದ್ಧ ಪೂರ್ಣಿಮಿ ಬುಧವಾರ. ವೀರಪುರದ ವೆಂಕಟರಮಣಸ್ವಾಮಿಯ ದೇವಸ್ಥಾನವು ಜನಸ್ತೋಮದಿಂದ ಬಾಯ್ಕಟ್ಟಿ ಹೋಗಿತ್ತು. ದೇವಸ್ಥಾನದ ಗೋಪುರದ ಸುತ್ತಲು ಹಸುರೆಲೆ ತೋರಣಗಳು ಗಾಳಿಯಲ್ಲಿ ತೂಗುತ್ತಿದ್ದುವು. ಹೆಬ್ಬಾಗಿಲ ಮುಂದಿರಿಸಿದ ಬಾಳೆಯ ಕಂಬಗಳು ಗಂಭೀರ ವಾಗಿ ನಿಂತಿದ್ದುವು. ಇವುಗಳ ತಲೆಯಲ್ಲಿ ಅಲ್ಲಾಡುವ ಪರ್ಣ ಗುಚ್ಛವು ಜನರನ್ನು ಕರೆವಂತೆ ವಾಯುವಿನಲ್ಲಿ ಕೈಸನ್ನೆ ಮಾಡು ತ್ತಿತ್ತು. ಒಳಕ್ಕೆ ಕಾಲಿಡುತ್ತಲೇ ಎರಡೂ ಭಾಗಗಳಲ್ಲಿ ಸರ್ವ ಜನ ಪರಿಪೂರಿತವಾದ ಪ್ರಸ್ತರ ನಿರ್ಮಿತವಾದ ಚಂದ್ರಶಾಲೆ ಗಳು ವಿರಾಜಮಾನವಾಗಿದ್ದುವು. ಪುರಾಣ ಶ್ರವಣಾರ್ಥಿಗಳು ನಡುವಿನಲ್ಲಿ ಸ್ಥಳವನ್ನು ಬಿಟ್ಟು ಸಾಲ್ಗೊಂಡು ಮುಂಡಿಸಿದ್ದರು. ಸ್ಥಳವನ್ನು ಬಿಟ್ಟುದರಿಂದ,ಪುರಾಣವನ್ನು ಓದುವ 'ವಾಚಕರ' ಮುಖವು ಎರಡೂ ಚಂದ್ರಶಾಲೆಗಳಲ್ಲಿ ಕುಳಿತಿದ್ದ ಜನರಿಗೆ ಸ್ಪಷ್ಟವಾಗಿ ಕಂಡುಬರುತ್ತಿತ್ತು. 'ವಾಚಕರ' ಮುಂದೆ ವ್ಯಾಸ ಪೀಠದ ಮೇಲೆ ಭಾರತದ ಓಲೆಯ ಪ್ರತಿಯು ಅಲಂಕೃತವಾ ಗಿತ್ತು. ಈ ವ್ಯಾಸಪೀಠದ ಸಮೀಪದಲ್ಲಿ ಎರಡು ಕಂಚಿನ ಕಾಲ್ದೀಪಗಳು ಬೆಳಗುತ್ತಿದ್ದುವು, ಮಧ್ಯಾಹ್ನಕಾಲವಾದುದ ರಿಂದ ಇವು ಹಚ್ಚಿರಲಿಲ್ಲ. ಇದರ ಬದಲಾಗಿ ಮತ್ತೊಂದು ಸಣ್ಣ ದೀಪವು ಅಲ್ಲಿಯೇ ಬೆಳಗುತ್ತಿತ್ತು. ಗಂಧ, ದಶಾಂಗ, ಧೂಪ ಮೊದಲಾದುವುಗಳ ಸುವಾಸಿತವಾದ ಧೂಮ್ರವು ದೇವ ಸ್ಥಾನದ ಸರ್ವಭಾಗಗಳಲ್ಲಿಯೂ ಪರಿಮಳಿಸುತ್ತಿತ್ತು. 'ವಾಚ ಕರು' ಪದ್ಯವನ್ನು ಓದುವ ಗಂಭೀರವಾದ ನಿಸ್ವನವು ಚಂದ್ರ ಶಾಲೆಯಲ್ಲಿ ಪ್ರತಿಧ್ವನಿಸಿ, ಸಭಾಸದರ ಕರ್ಣಕುಹರವನ್ನು ಪ್ರವೇಶಿಸಿ, ಹೊರಗಿನ ವಾಯುಮಂಡಲದಲ್ಲಿ ವಿಲೀನವಾಗಿ ಹೋಗುತ್ತಲಿತ್ತು. ಕೂಡಲೇ ನೆರೆದಿದ್ದ ಜನರು ತಮ್ಮ ಎತ್ತಿದ ಕೊರಲುಗಳನ್ನು ಕೊಂಕಿಸಿ, ರಾಮಕೃಷ್ಣ ಭಾಗವತರ ಮುಖ ವನ್ನು ದೃಷ್ಟಿಸುತ್ತ, ಅವರು ಅಭಿನಯ ಯುಕ್ತವಾಗಿಯೂ, ವರ್ಣಯುಕ್ತವಾಗಿಯೂ ಹೇಳುವವಿಸ್ತಾರವಾದ ಅರ್ಥವನ್ನು ಕಿವಿಗಳಿಂದ ಕುಡಿದು ಸಂತುಷ್ಟರಾಗುತ್ತಿದ್ದರು. ಆಗಾಗ ಚಿಕ್ಕಪೇಟೆ ಹಿರಿಯಣ್ಣನವರು ಕೈಯ್ಯಲ್ಲಿ ನಶ್ಯವನ್ನು ಹಿಡಿದು ಭಾಗವತರಿಗೆ ಅರ್ಪಿಸುತ್ತಿದ್ದರು. ಇವರ ಸಮ್ಮುಖದಲ್ಲಿಯೇ ಲಕ್ಕಣಾಜ್ಜರು ವಜ್ರದುಂಗುರದ ಬೆರಳಿಂದ ಹಣೆಯನ್ನು ಪದೇ ಪದೇ ಸವರುತ್ತಿದ್ದರು. ಅಜ್ಜರ ಎಡದಲ್ಲಿ ನಾಗರಾಜರು

ಗೋಡೆಗೆ ಒರಗಿ ತಲೆದೂಗುತ್ತಿದ್ದರು. ಚಂದ್ರಶಾಲೆಯ ಮಿಕ್ಕ ಸ್ಥಳವನ್ನು ಭಾಗವತರ ಸ್ವಜಾತಿಯವರೂ ಸ್ನೇಹಿತರೂ ಆಕ್ರಮಿಸಿದ್ದರು. ಹೀಗಾದುದರಿಂದ ವಂಶಿಗೆ ಕೊಟ್ಟನರಸಪಾಂಡಿ, ಅಣ್ಣಪ್ಪ ಆಳ್ವ, ಭೂಪಸೆಟ್ಟಿ ಮೊದಲಾದವರು ಮತ್ತೊಂದು ಚಂದ್ರಶಾಲೆಯಲ್ಲಿ ಕುಳಿತುಕೊಳ್ಳಬೇಕಾಯಿತು. ಯಾರೊಬ್ಬರೂ ತುಟಿ ಅಲ್ಲಾಡಿಸುತ್ತಿದ್ದಿಲ್ಲ; ಎಲ್ಲರೂ ಏಕಾಗ್ರಚಿತ್ತದಿಂದ ಶ್ರವಣ ಮಾಡುತ್ತಿದ್ದರು. ಆದಿ ಪರ್ವದಲ್ಲಿ ಅನೇಕ ಸಂಧಿಗಳನ್ನು ನಾಲ್ಕು ದಿನಗಳ ಹಿಂದೆಯೇ ಓದಿ ಮುಗಿಸಿದ್ದರು. ಈ ದಿನ ಹತ್ತನೆಯ ಸಂಧಿ.

ರಾತ್ರಿ ಏಳು ಗಂಟೆಯಾಯಿತು. ಸಂಧಿಯು ಸಮಾಪ್ತವಾಗಲು ಬಂತು. ಆಗ ಜನಾರ್ಧನಯ್ಯನವರು ಈ ಶ್ಲೋಕಾರ್ಥವನ್ನು ಓದಿದರು:—

ಬಳಿಕ ಹರಿಯುಸು ಮನದಿ ವಂದಿಸಿ
ಕಳುಹಿ ನೃಪರನು ಸಂತಸದಿ ತಾಂ
ನಿಳಯವನು ಸೇರಿದನು ಧರ್ಮಜ ಭೂಪ ಕೇಳೆಂದಾ ॥

ಈ ಪದ್ಯಾರ್ಥವನ್ನು 'ವಾಚಕರು' ಹಾಡುತ್ತಲೇ, ಅವರ ಕಡೆಯ ಮಾತುಗಳ ಮುಕ್ತಾಯದ ಧಾಗತರಂಗಗಳು ಚಂದ್ರಶಾಲೆಯಲ್ಲಿ ತೇಲುತ್ತ ಝೇಂಕರಿಸುವಂತಿದ್ದುವು. ತಟ್ಟನೆ ಎಲ್ಲವೂ ನಿಶ್ಶಬ್ದವಾಯಿತು. ಒಡನೆಯೇ ಆ ಝೇಂಕೃತಿಯ ಪ್ರತಿಧ್ವನಿಯೆಂಬಂತೆ ಮತ್ತೊಂದು ಚಂದ್ರಶಾಲೆಯಿಂದ ಒ! ಒ!! ಎಂಬ ಸ್ವರವು ಸ್ಪಷ್ಟವಾಗಿ ಕೇಳಿಸಿತು. ಕೂಡಲೇ ಶ್ರವಣ ಮಾಡಲು ಬಂದ ಪ್ರಭೃತಿಗಳ ದೃಷ್ಟಿಗಳು ಆ ಕಡೆಗೆ ಹಾರಿದುವು;ಪುನ:ಆಶ್ಚರ್ಯದಿಂದ'ವಾಚಕರ'ಕಡೆಗೂ ಭಾಗವತರ ಕಡೆಗೂ ಚಲಿಸಿದುವು. ಹಿರಿಯಣ್ಣ ಮೊದಲಾದವರು ಸ್ವಲ್ಪ ಸಂಭ್ರಾಂತರಾದಂತೆ ತೋರಿದರು. ಜನಾರ್ಧನಯ್ಯನವರು ಗ್ರಂಥ ಓದುವುದನ್ನು ನಿಲ್ಲಿಸಿ, ಪತ್ರಗಳನ್ನು ಸರಿಗೊಳಿಸಿ, ಪುಸ್ತಕವನ್ನು ಕಟ್ಟಿ, ಕರ್ಪೂರದ ಆರತಿಯನ್ನು ಎತ್ತಿದರು. ಆರತಿಯನ್ನು ಸ್ವೀಕರಿಸುವುದಕ್ಕೆ ಯಾರೂ ಮುಂದೆ ಬರಲಿಲ್ಲ. ಆರತಿಯು ತಾನಾಗಿ ನಂದಿಹೋಯಿತು. ಕಡೆಗೆ ಭಾಗವತರೂ 'ವಾಚಕ'ರೂ ಮನೆಗೆ ಅಭಿಮುಖರಾಗಿ ಹೊರಟರು. ಮಿಕ್ಕವರು ಮನಸ್ಸಿನಲ್ಲಿ ನೊಂದಂತೆ,ಅವರ ಹಿಂದೆಯೇ ಮೆಲ್ಲಮೆಲ್ಲನೆ ಕಾಲ್ತೆಗೆದರು.

ಮಾರನೆಯ ದಿನ ಎಂದಿನಂತೆ ಎಲ್ಲರೂ ನೆರೆದಿದ್ದರು. ಆದರೆ ಪೂರ್ವದ ಉತ್ಸಾಹವೆಲ್ಲಾ ಆರಿಹೋಗಿತ್ತು. ಯಾವ ಕಾರಣದಿಂದ ಉತ್ಸಾಹವು ಕಡಮೆಯಾಗಿ ಹೋಗಿತ್ತೊ ಅದು ತಿಳಿಯಲಿಲ್ಲ. ನಾಗರಾಜರ ಮುಖದಲ್ಲಿ ಹುಬ್ಬುಗಂಟು; ಲಕ್ಕಣಾಜ್ಜರ ಮೋರೆಯಲ್ಲಿ ಉದಾಸೀನ ಭಾವ; ಹಿರಿಯಣ್ಣರು ಕಂಡು ಮೊಗ. ಆದರೂ ಅವರೆಲ್ಲರೂ ತಮ್ಮೊಳಗೇನೇನೋ ಗುಜುಗುಟ್ಟುತ್ತಿದ್ದರು. ಜನಾರ್ಧನಯ್ಯನವರು ಗ್ರಂಥವನ್ನು ತೆರೆದು ಓದತೊಡಗಿದರು. ಸಭೆಯು ನಿರುತ್ಸಾಹವೇನೋ ಹೋಗಲಿಲ್ಲ. ಸಭಿಕರ ಮನಸ್ಸನ್ನು ರಂಜಿಸುವಂತೆ ಭಾಗವತರು ಕಾವ್ಯಾರ್ಥವನ್ನು ಸರಸವಾಗಿಯೂ, ವಿಸ್ತಾರವಾಗಿಯೂ ವಿಶದೀಕರಿಸಿದರು. ಸ್ತ್ರೀವರ್ಣನೆಯಾದುದರಿಂದ ಭಾಗವತರ ಅರ್ಥಶಕ್ತಿಯು ಇನ್ನೂ ಚಿವಟಿದಂತಾಯಿತು- ಆದರೂ ಆ ಅವಿರಳವಾದ, ಅನರ್ಗಳವಾದ, ಶೃಂಗಾರಮಯವಾದ ಸ್ತ್ರೀವರ್ಣನೆಯು ಶ್ರಾವಕರ ಉದಾಸೀನ ಹೃದಯಗಳ ಮೇಲೆ ನಿರರ್ಥಕವಾಗಿ ಹೋಯಿತು. ಅಷ್ಟರಲ್ಲಿ ನಾಗರಾಜರು ತಮಗೆ ಮನೆಯಲ್ಲಿ ವಿಶೇಷವಾದ ಕೆಲಸವುಂಟೆಂದು ಹೇಳಿ ಎದ್ದು ನಿಂತರು. ಲಕ್ಕಣಾಜ್ಜರು ಅವರನ್ನು ಬಲತ್ಕಾರಪಡಿಸಿ ಅಲ್ಲಿಯೆ ತಡೆಯಿಸಿದರು. ಆದಿಪರ್ವದಲ್ಲಿ ಆ ದಿನ ಓದಲು ಹಿಡಿದ ಅಧ್ಯಾಯವು೧೦೦ಪದ್ಯಗಳಿಗಿಂತ ಮೀರದೆ ಇದ್ದುದರಿಂದಲೂ, ಸಭಾಸದರ ಶ್ರವಣೋತ್ಸಾಹವು ಕ್ಷೀಣವಾದುದರಿಂದಲೂ, ಭಾಗವತರು ಆ ದಿನದ 'ವಾಚಕ'ವನ್ನು ಮುಗಿಸಬೇಕೆಂದು ಜನಾರ್ಧನಯ್ಯನವರಿಗೆ ಸೂಚಿಸಿದರು. ಜನಾರ್ಧನಯ್ಯನವರು ಕೆಳಗಿನ ಭಾಮಿನಿ ಶ್ಲೋಕವನ್ನು ಕಂಠಾಗ್ರಸ್ವರದಿಂದ ಪೂರೈಸಿದರು:-

ಇಂದುಮುಖಿಯನು ಸಂತವಿಡುತ ಮು
ಕುಂದ ರಥವೇರಿದನು ಪರಮಾ
ನಂದದಲಿ ದ್ವಾರಕೆಯ ಸಾರಿದ ನರಸಕೇಳೆಂದಾ ॥

ಕೂಡಲೇ ಬಡವರು ಕುಳಿತಿದ್ದ ಚಂದ್ರಶಾಲೆಯಿಂದ ಒ! ಒ!! ಎಂಬ ಸ್ವರವು ಪ್ರತಿಧ್ವನಿಸಿತು. ಈ ಸ್ವರವನ್ನು ಕೇಳಿದರೊ ಇಲ್ಲವೊ ನಾಗರಾಜರು ಎದ್ದು ಹೊರಕ್ಕೆ ನಡೆದುಬಿಟ್ಟರು. ಲಕ್ಕಣಾಜ್ಜರು ವಜ್ರದುಂಗುರವನ್ನು ಸರಿಗೊಳಿಸುತ್ತ ಅವರನ್ನು ಹಿಂಬಾಲಿಸಿದರು. ಹಿರಿಯಣ್ಣನವರು ಏನೋ ಅವಮಾನಗೊಂಡಂತೆ ಮುಖವನ್ನು ತಗ್ಗಿಸಿಬಿಟ್ಟರು. ಅವರ ಬಳಿಗೆ ಗ್ರಂಥಕ್ಕೆ ಎತ್ತಿದ ಆರತಿಯನ್ನು ತಂದರು. ಆದರೆ ಅದರ ಮೇಲೆ ಅವರ ಕೈಸುಳಿಯಲಿಲ್ಲ. ನರಸ ಪಾಂಡಿ ಮಾತ್ರ ಸಂತೋಷಗೊಂಡಂತೆ ಭಾಗವತರ ಬಳಿಯಲ್ಲಿ ಕೈಕಟ್ಟಿ ನಿಂತು, ಕೊನೆಗೆ ವ್ಯಾಸಪೀಠಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿ, ಮನೆಗೆ ಹಿಂತೆರಳಿದನು. ಅಣ್ಣಪ್ಪಆಳ್ವ ಮತ್ತು ಭೂಪಸೆಟ್ಟಿ ಎಂದಿನಂತೆ ಪ್ರಸಾದವನ್ನು ಸ್ವೀಕರಿಸಿ ಮನೆಗೆ ನಡೆದುಬಿಟ್ಟರು. ಕೊಂಚ ಹೊತ್ತಿನಲ್ಲಿ ರಾಮಕೃಷ್ಣ ಭಾಗವತರೂ ಜನಾರ್ಧನಯ್ಯನವರೂ ಶ್ರಾವಕರ ಅಂದಿನ ಔದಾಸೀನ್ಯವನ್ನು ಕುರಿತು ಚಿಂತಿಸುತ್ತ, ಅದರ ಕಾರಣವನ್ನು ತಮ್ಮೊಳಗೆ ವಿಚಾರಿಸುತ್ತ, ಮನೆಗೆ ಅಭಿಮುಖರಾದರು.

ಶುಕ್ರವಾರ ಮಧ್ಯಾಹ್ನ ಒಂದು ಗಂಟೆಗೆ ನಾಗರಾಜರೂ ಲಕ್ಕಣಾಜ್ಜರೂ ಎಲ್ಲರಿಗಿಂತಲೂ ಮೊದಲೇ ದೇವಸ್ಥಾನದಲ್ಲಿ ಬಂದು ಕೂಡಿದರು. ಒಡನೆ ಹಿರಿಯಣ್ಣನವರು ಬಂದು ಸೇರ್

ತಿತು. ವೀಕ್ಷಕರು ಒಬ್ಬೊಬ್ಬರಾಗಿ ಬಂದು ಸೇರಿದರು. 'ವಾಚಕ' ನಡೆಯುವ ಚಂದ್ರಶಾಲೆಯಲ್ಲಿ ಏನೋ ಮಾತುಕಥೆ ನಡೆಯುತ್ತಲಿತ್ತು. "ಈ ಹಾಳು ಮಕ್ಕಳನ್ನು ನಾಬಲ್ಲೆ" ಎಂದು ನಾಗರಾಜರು ಹೇಳುವಷ್ಟರಲ್ಲಿ ಭಾಗವತರೂ 'ವಾಚಕರೂ' ಚಂದ್ರಶಾಲೆಯ ಮೇಲೆ ಕಾಲಿಟ್ಟರು. ಅವರನ್ನು ನಮಸ್ಕರಿಸುವುದಕ್ಕೆ ದೊಡ್ಡವರು ಯಾರೂ ಏಳಲಿಲ್ಲ. 'ಇಬ್ಬರು ತಮ್ಮ ತಮ್ಮ ಆಸನಗಳನ್ನು ಅಲಂಕರಿಸಿದರು. ಯಾರೂ ಇದ್ದೆಡೆಯಿಂದ ಅಲ್ಲಾಡಲಿಲ್ಲ. ದೀಪವನ್ನು ಯಾರೂ ಹಚ್ಚದೆ ಇದ್ದುದನ್ನು ನೋಡಿ ಜನಾರ್ಧನಯ್ಯನವರು ತಾವಾಗಿ ಅದನ್ನು ಹಚ್ಚಿದರು. ಬಳಿಕ ಗ್ರಂಥ ಪುಸ್ತಕಕ್ಕೆ ಕೈಮುಗಿದು, ಅಧ್ಯಾಯವನ್ನು, ತೆರೆಯುವುದಕ್ಕೆ ತೊಡಗಿದರು. ಅಷ್ಟರಲ್ಲಿ ನಾಗರಾಜರು ಗುಲ್ಲಿಡುವುದನ್ನು ನೋಡಿ, "ವಾಚಕಕ್ಕೆ" ಸಿದ್ಧವಾಯಿತೆಂದು ಜನಾರ್ಧನಯ್ಯನವರು ಮೆಲ್ಲನೆ ಸೂಚಿಸಿದರು.

"ಬೇಡಯ್ಯ ನಿಮ್ಮ ವಾಚಕ! ಕಟ್ಟಿಡಿ!" ಎಂದು ನಾಗರಾಜರು ಒದರಿದರು.

"ಸಂಗತಿ ಏನು?" ಎಂದು ಭಾಗವತರು ಕೇಳಿದರು.

ಜನಾರ್ಧನಯ್ಯನವರು ಗ್ರಂಥವನ್ನು ತೆರೆದರು.

"ಬ್ಯಾಡಾ! ಕಟ್ಟಿ! ಕಟ್ಟಿ!!" ಎಂದು ಪುನಃ ನಾಗರಾಜರು ಒತ್ತಿ ಹೇಳಿದರು.

"ಬಿಡಿ! ಬೇಡಯ್ಯ! ಕಟ್ಟಿ! ನಮಗೆಲ್ಲ ಗೊತ್ತಿದೆ! ಕಟ್ಟಿ! ಪುಸ್ತಕ ಕಟ್ಟಿ!" ಎಂದು ಲಕ್ಕಣಾಜ್ಜರು ಉಂಗುರದ ಬೆರಳನ್ನು ತೋರಿಸುತ್ತ ಗರ್ಜಿಸಿದರು.

ಭಾಗವತರೂ 'ವಾಚಕರೂ' ನಮ್ರಭಾವದಿಂದ ಸಿಟ್ಟೇಕೆಂದು ಬೇಡಿದರು.

"...... ಮಗ! ಹಣಕ್ಕೋಸ್ಕರ ...... ಮಾರಿಬಿಡುವರು" ಎಂದು ಯಾರೋ ಬೈದುಬಿಟ್ಟರು.

ರಾಮಕೃಷ್ಣಭಾಗವತರೂ ಜನಾರ್ಧನಯ್ಯನವರೂ ಬಾಯಲ್ಲಿ ಮಾತಿಲ್ಲದವರಾಗಿ, "ರಾಯ್ರೇ! ಸಿಟ್ಟೇಕೆ! ನಮ್ಮ ಅರ್ಥದಲ್ಲ್ಯಾಗಲಿ ವಾಚಕದಲ್ಲ್ಯಾಗಲಿ ಏನೊಂದು ದೋಷ ವಿತ್ತೇ? ಮನ್ನಿಸಬೇಕು ದೇವ್ರು! ನಾವು ಏನು ತಪ್ಪುಮಾಡಿದೆವು?" ಎಂದರು.

"ನಾವು! ನಾವೆಂದು ಹೇಳಲಿಕ್ಕೆ ನೀನು ದೊಡ್ಡ ಗೌಡತಾನೆ? ಕಳ್ಳ! ಇನ್ನೊಬ್ಬರಾದ್ರೆ ಈ ಅವಮಾನಕ್ಕೆ ಮೆಟ್ಟು ತೆಗೆಯುತ್ತಿದ್ರು" ಎಂದು ನಾಗರಾಜರು ತಪ್ಪಿ ಮಾತನಾಡಲು ಹತ್ತಿದರು. ಪುನಃ "ಲಕ್ಕಣಾ! ನನಗೆ ಗೊತ್ತುಂಟು. ನಾಮಾ ಹಾಕುವ ಬ್ರಾಹ್ಮರಿವರು. ಹೆತ್ತ.....ಗುರ್ತಿಲ್ಲ ಇವ್ರಿಗೆ" ಎಂದು ಪೂರೈಸಿದರು.

ಒಡನೆ ಜನಾರ್ಧನಯ್ಯನವರು ಹಿರಿಯಣ್ಣನವರ ಬಳಿಗೆ ಬಂದು, "ಸ್ವಾಮಿ! ತಪ್ಪು ಯಾರ ಕೈಯಿಂದಲೂ ನಡೆಯುತ್ತದೆ. ನನ್ನ ಪಾಡೇನು? ನೀವು ವರ್ಗದಾರರು, ನಾವು ಒಕ್ಕಲುಗಳು. ತಾವು ನಡಿಸಿದರೆ ಸರಿ. ನನ್ನಿಂದ ಏನ್ ತಪ್ಪಾಯಿತೆಂದು ಹೇಳಿದ್ರೆ, ಸಭೆಗೆ ಸೆರಗೊಡ್ಡಿ ಬೇಡುತ್ತೇನೆ" ಎಂದರು.

ಹಿರಿಯಣ್ಣ:—"ಸರಿಯಾದ ಮಾತು! ಏನ್ ನಾಗರಾಜಾ? ಇಕ್ಕೊಳ್ಳಿ ಭಾಗವತರೇ ಇಲ್ಲಿ ಕೇಳಿ!"

ಇಬ್ಬರೂ ವಂತಿಗೆ ಕೊಟ್ಟವರ ಬಳಿಗೆ ಬಂದರು.

ಹಿರಿಯಣ್ಣ:— "ಈ 'ವಾಚಕಕ್ಕೆ' ಯಾರು ಹೆಚ್ಚು ವಂತಿಗೆಯನ್ನು ಕೊಟ್ಟರೆಂದು ಬಲ್ರೊ?"

ಭಾಗವತರು:—"ನೀವೆಲ್ಲರು ಸ್ವಾಮಿ!"

ಹಿರಿಯಣ್ಣ:—"ಓ! ನಾನು ನೂರು ರೂಪಾಯಿ ಕೊಟ್ಟಿರುವೆ. ಲಕ್ಕಣಾಜ್ಜರು ಎಪ್ಪತ್ತು, ನಾಗರಾಜರು ಐವತ್ತು. ಹೀಗಿರುವಾಗ ಗ್ರಂಥವನ್ನು ನೀವು ನಮ್ಮ ಹೆಸರೆತ್ತಿ ಹೇಳದೆ ವರ್ಗದಾರರಾದ ನಮಗೆ ಈ ಪರಿ ಅವಮಾನ ಮಾಡಿದ್ದು ನ್ಯಾಯವೇ?"

ಭಾಗವತ:—"ಎಂಥಾ ಅವಮಾನ ದೇವ್ರೆ?"

ನಾಗರಾಜ:—"ಅವಮಾನ? ಏನೆಂದೆ—?"

ಹಿರಿಯಣ್ಣ:— "ತಡಿ ನಾಗರಾಜಾ! ಭಾಗವತರೇ! ಮನೆತನದವರು 'ಗುತ್ತೇದಾರರು' ನಾವಿದ್ದಾಗ, ಈತ "ಭೂಪ ಕೇಳೆಂದ" ಎಂದು ಹೇಳಿ ಭೂಪ ಸೆಟ್ಟಿಗೆ ಮಾತ್ರ ಗ್ರಂಥ ಹೇಳಿದ್ದು ನಮಗೆ ಅವಮಾನವಲ್ಲದೆ ಮತ್ತೇನು?" ಇಬ್ಬರೂ ನಗುವನ್ನು ತಡೆದು, "ಸರಿ! ಈ ಅರ್ಥವನ್ನು ತಿಳಿಯಲಿಲ್ಲ" ಎಂದರು.

ನಾಗರಾಜ:— "ತಿಳಿಯಲಿಲ್ಲ! ಮರುದಿನ "ಸಾರಿದ ನರಸ ಕೇಳೆಂದಾ" ಎಂದುಹೇಳಿ ನರಸಪಾಂಡಿಗೆ ಭಾರ್ತವನ್ನು ಹೇಳಿದೆಯಲ್ಲಾ. ಆ ಪರದೇಶಿ ನರಸಪಾಂಡಿ ಕೊಟ್ಟದ್ದು ಎರಡು ರೂಪಾಯಿ. ಬಡ್ಡಿಮಗ, ಭೂಪ! ನನ್ನ ಒಕ್ಕಲು, ಅವ ಕೊಟ್ಟದ್ದು ಏಳು ಚಕ್ರ. ನಮ್ಮ ಎದುರಿಗೆ ಅವರ ಹೆಸರನ್ನು ನೀನು ಎತ್ತಿ ಹೇಳಿದೆಯಲ್ಲಾ?"

"ಚಿತ್ತೈಸಬೇಕು ದೇವರೆ! ದಿನಕ್ಕೆ ಒಬ್ಬೊಬ್ಬರ ಹೆಸರನ್ನು ಎತ್ತಿ ಹೇಳುವ ಪದ್ಧತಿ. ಮೊನ್ನೆ ಭೂಪನನ್ನೂ ನಿನ್ನೆ ನರಸಪಾಂಡಿಯನ್ನೂ ಹೊಗಳಿದೆವು. ವಂತಿಗೆಯಲ್ಲಿ ಅಲ್ಪ ಸಂಖ್ಯೆಯನ್ನುಕೊಟ್ಟವರ ನಾಮವನ್ನು ಪ್ರಥಮದಲ್ಲೆ ಹೇಳುವ ಸಾಂಪ್ರದಾಯ. ಕ್ರಮಪ್ರಕಾರವಾಗಿ ನಿಮ್ಮೆಲ್ಲರ ಹೆಸರುಗಳು ಭಾರತದಲ್ಲಿ ಬರೋದುಂಟು" ಎಂದು ಭಾಗವತರು ಉಪಾಯವಾಗಿ ಹೇಳಿಬಿಟ್ಟರು.

"ಹಾಗೊ! ಸರಿ! ಸರಿ! ಮೋಸ ಆಯಿತು! ಚಿಂತೆಯಿಲ್ಲ! ಕೂತು ಕೊಳ್ಳಿ! ಎಲ್ಲರೂ ಕೂತು ಕೊಳ್ಳಿ!" ಎಂಬ ಮಾತುಗಳು ಹೊರಟುವು.

ಎಲ್ಲರು ತಂತಮ್ಮ ಪೂರ್ವಸ್ಥಳಗಳಲ್ಲಿ ಕುಳಿತುಕೊಂ

ಡರು. ಉತ್ಸಾಹವು ಮುಂಚಿನಂತೆಯೇ ತುಂಬಿ ತುಳುಕಿತು. **'ವಾಚಕವು'** ಎಂದಿನಂತೆ ಸರಾಗವಾಗಿ ನಡೆಯಿತು. ಆದರೆ ದಿನಂಪ್ರತಿ ಸಮಾಪ್ತ ಕಾಲದಲ್ಲಿ "ಗದುಗಿನ ವೀರನಾರಾಯಣ" ಎಂದು ಹೇಳುವ ಬದಲಾಗಿ, ಜನಾರ್ಧನಯ್ಯನವರು ಬೇರೆ ಪಾಠಾಂತರಗಳನ್ನು ಅಲ್ಲಲ್ಲಿ ಸೇರಿಸಿದರು. ಇಲ್ಲಿ ಕೆಲವನ್ನು ಮಾತ್ರ ಕೊಟ್ಟಿರುವೆವು.

ಮನದಿ ಕೃಷ್ಣನ ಧ್ಯಾನಗೈಯುತ **ನಾಗರಾಜ ಕೇಳೆಂದಾ** ||
ಪಾಂಡುಕುವರನುಹೊಕ್ಕನರಮನೆ**ಲಕ್ಕಣಾಜ್ಞ ಕೇಳೆಂದಾ** ||

ಅಕುಟಿಲನು ಸಾಂದನು ಬಳಿಕೀ
ವಿಕಳದುಯೋರ್ಧನನು ನಿಗಮ
ಪ್ರಕರ ಮೌಳಿಯ ಮೌಳಿಯುತ್ತಲುಶಾರ್ದೂ ಮುಂದಿಸಿದ
**ಹಿರಿಯುಣ್ಣ ಕೇಳೆಂದಾ** ||

ದಿನಕ್ಕೆ ಒಂದೊಂದಾಗಿ ಹೆಸರು ಬರುತ್ತಲೇ, ಕ್ರಮ ಪ್ರಕಾರವಾಗಿ ಒಬ್ಬೊಬ್ಬರು "ಓ! ಓ!!" ಎಂದು ಉತ್ತರ ಕೊಟ್ಟು, ಮನಸ್ಸಿನಲ್ಲಿ ಹಿಡಿಯಲಾರದಷ್ಟು ಆನಂದದಿಂದ ಉಬ್ಬುತ್ತಿದ್ದರು. ಮೇಲೆ ಕೊಟ್ಟವುಗಳು ಯಾವ ಷಟ್ಪದಿಯ ಚರಣಗಳೆಂದು ನನಗೆ ತಿಳಿಯಲಿಲ್ಲ. ಇದನ್ನು ಕುರಿತು ಜನಾರ್ಧನಯ್ಯನವರೊಡನೆ ನಾಲ್ಕು ತಿಂಗಳುಗಳ ಬಳಿಕ ವಿಚಾರಿಸಲಾಗಿ "ಈ ಚರಣಗಳ ಬೆಲೆ ೧೫೦ ರೂಪಾಯಿ. ಇವುಗಳ ಅರ್ಥವನ್ನು ವಿವರಿಸಿದುದಕ್ಕೆ ೨೦೦ ರೂಪಾಯಿ ಉಚಿತ" ಎಂದು ಹೇಳಿದರು.

(ಸುವಾಸಿನಿ—೧೯೦೨)

---

# ಕಮಲಪುರದ ಹೊಟ್ಲಿನಲ್ಲಿ

ಕಮಲಪುರದ ಬಂದರ್ ಸ್ಥಳವು ವಸಂತ ಋತುವಿನ ಸಂಧ್ಯಾತಪದಿಂದ ಸುಖಹೊಂದುತಲಿತ್ತು. ವೀರಪುರದಿಂದ ಬಂದು ದಂಡೆಯಲ್ಲಿ ನಿಂತಿದ್ದ ಒಂದೆರಡು ದೋಣಿಗಳು ನೀರಿನ ಸಣ್ಣ ಅಲೆಗಳ ಮೇಲೆ ಕುಣಿಯುತಲಿದ್ದವು. ದೋಣಿಗಾರನು ಈಳಿಗೆಯನ್ನು ಕಾಲಿಂದ ಒತ್ತಿ ಹಿಡಿದು, ಕೈಯಲ್ಲಿದ್ದ ಮೀನನ್ನು ತರಿದು, ಬಳಿಯ ನೀರುತುಂಬಿದ ಮಣ್ಣಿನ ಪಾತ್ರೆಗೆ ಒಟ್ಟುತ್ತಿದ್ದನು. ಆಗಾಗ ಹಾರಿ ಬರುವ ಕಾಗೆಗಳನ್ನು ಅಟ್ಟುತ್ತಿದ್ದನು. ಸ್ವಲ್ಪ ದೂರದಲ್ಲಿ ಅಂಬಿಗರ ಹೆಂಗಸರು ಸೊಂಟಕ್ಕೆ ಮುಟ್ಟುವಷ್ಟು ನೀರಿಗೆ ಇಳಿದು ಫಕ್ಕನೆ ಮುಳುಗುಹಾಕಿ ಕೆಸರಿನಲ್ಲಿದ್ದ ಚಿಪ್ಪುಮೀನುಗಳನ್ನು ಕೈತುಂಬಾ ಆಯ್ದುಕೊಂಡು ತಮ್ಮ ಮೈ ಬಟ್ಟೆಯ ಪದರಿನ ಚೀಲವನ್ನು ತುಂಬಿಸುತ್ತಿದ್ದರು. ದಡದ ಮೇಲಿದ್ದ "ಮಾಪಿಳ್ಳೆ" ಯುವಕನು ಕೃಷ್ಣಕಾಯರಾದ ಈ ಯೋಜನಗಂಧಿಯರ ಸರ್ವಾಂಗವನ್ನು ಇಣಿಕಿ ಇಣಿಕಿ ಏನು ಏನೋ ಯೋಚಿಸುತ್ತಲಿದ್ದನು. ಎಲ್ಲಿ ನೋಡಿದರೂ ಜನಗಳ ಗಲಭೆ, ಬಂಡಿಗಳ ಚೀತ್ಕಾರ, ಹೊರೆಯಾಳುಗಳ ಕಲರವ. ಈ ಕಡೆಯಲ್ಲಿ ಗಟ್ಟದಿಂದ ಇಳಿದ ಕಾಫಿಯ ಮೂಟೆಗಳನ್ನು ಸಮುದ್ರದಲ್ಲಿನ ಹಡಗುಗಳಿಗೆ ಸಾಗಿಸುತ್ತಿರುವರು. ಇದೋ ಇಲ್ಲಿ ರಾಶಿಹಾಕಿದ ಅಕ್ಕಿ ಹೊರೆಗಳನ್ನು ಎಣಿಸಿ ಎಣಿಸಿ ವರ್ತಕನು ಆಳುಗಳನ್ನು ಕೂಗಿ ಕರೆಯುತ್ತಿರುವನು. ಅಲ್ಲಿ ಬೊಂಬಾಯಿಯಿಂದ ಬಂದ ಜೀನಸುಗಳನ್ನು ದಡದ ಮೇಲೆ ಇಳಿಸುತ್ತಿರುವರು. ಇಲ್ಲಿ "ಮಾನಿಫೆಸ್ಟ್" ಬರೆಯುವ ಗುಮಾಸ್ತ ಮುದುಕನು ಕನ್ನಡಕದ ಕಣ್ಣುಗಳನ್ನು ಎತ್ತಿ ಹಿಡಿದು ಕಿವಿಯ ಮೇಲಿನ ಲೇಖನಿಯನ್ನು ಆಗಾಗ ಸೆಳೆಯುತ್ತಾ ಪಾರುಪತ್ಯವನ್ನು ನಡೆಯಿಸುತ್ತಲಿರುವನು. ಬಿಳೀ ಸರದಾರನೊಬ್ಬನು ಬಿಳೀದೋಣಿಯ ಚುಕ್ಕಾಣಿಯನ್ನು ಕೈಯಿಂದ ಹಿಡಿದು ಕಡಲ ತಡಿಗೆ ಹೋಗುತ್ತಿರುವನು. ದೋಣಿಯಲ್ಲಿ ಅವನ ಪೇದೆಯು ಕೋವಿಯನ್ನು ಹಿಡಿದು ನಿಂತಿರುವನು. ಇತ್ತ ಕೆಲವು ಮಂದಿ ಗೃಹಸ್ಥರು ವಾಯುಸೇವನೆಗೆ 'ಕಮ್ಮಿಟಿ' ಮಾಡಿಕೊಂಡು ತಮ್ಮ ಭೂಷಣೆಯನ್ನೇ ಸಾರುತ್ತಿರುವರು. ಸರಕಾರದ ಆಫೀಸುಗಳ ಗುಮಾಸ್ತರೆಲ್ಲಾ ಸಾಯಂಕಾಲದ ವಿಹಾರಕ್ಕೆ ಬರುವುದಕ್ಕೆ ಇನ್ನೂ ಹೊತ್ತಾಗಲಿಲ್ಲ. ಬಂದಿದ್ದವರಲ್ಲಿ ಒಬ್ಬಿಬ್ಬರು ಮೂರು ಪೈಸೆ 'ಹೊಟ್ಲಿ'ನ ಕಡೆ ಹೋಗುತ್ತಿರುವರು. ಹೊಟ್ಲಿನಲ್ಲಿ ನೈವೇದ್ಯವನ್ನು ತೀರಿಸಿದವರಲ್ಲಿ ಕೆಲವರು ಮೀಸೆಗೆ ವಸ್ತ್ರಪೂಜೆಯನ್ನು ಮಾಡುತ್ತಿದ್ದರು. ಕೆಲವರು ಚುಟ್ಟಾವಿನ ಹೊಗೆಯಿಂದ ಧೂಪವನ್ನು ಹಾಕುತ್ತಿದ್ದರು. ಮತ್ತೂ ಕೆಲವರು ಬೀಡಿ ಸೇದುವುದಕ್ಕೆ ಬೆಂಕಿ ಹಚ್ಚಿ ದೀಪಾರಾಧನೆಯನ್ನು ಮಾಡುತ್ತಿದ್ದರು. ಎಲ್ಲರೂ ಹಣಕ್ಕೆ ಮೊದಲೇ ಅರ್ಘ್ಯವನ್ನು ಕೊಟ್ಟಿದ್ದರು.

'ಹೊಟ್ಲಿ'ನ ಯಜಮಾನರು ಪೂರ್ಣಸಾಮಿ ಅಯ್ಯಂಗಾರರು. ಈ ಹೆಸರನ್ನು ಕೆಲವರು ಪೊನ್ನುಸ್ವಾಮಿ ಎಂದು ಸಂಕ್ಷೇಪಿಸಿರುವರು. ಕೆಲವರು ಪೆಣ್ಣುಸಾಮಿ ಎಂದೂ ಪೊಣ್ಣಾಮಿ ಎಂದೂ ಸಕಾರಣವಾಗಿ ಕರೆಯುವುದುಂಟು. ಏಕೆಂದರೆ, ೨೦ ವರ್ಷಗಳ ಕೆಳಗೆ ಅಯ್ಯಂಗಾರರು ಒಂದು ಹೆಣ್ಣಿಗೋಸ್ಕರ ಊರುಬಿಟ್ಟು ಹೋಗಿದ್ದರು. ಬಳಿಕ ಶ್ರೀರಂಗ, ತಿರುಪತಿ, ಜಗನ್ನಾಥ, ರಾಮೇಶ್ವರ ಮೊದಲಾದ ಪುಣ್ಯಸ್ಥಳಗಳಿಗೆ ಯಾತ್ರೆಮಾಡಿ, ಅಂತು ಸ್ವಲ್ಪಹಣವನ್ನು ಹೇಗೊ ಕಟ್ಟಿ

ಕೊಂಡು, ಮರಳಿ ಕಮಲಪುರಕ್ಕೆ ಬಂದು, ಈ 'ಹೊಟ್ಲ'ನ್ನು ಪರೋಪಕಾರಾರ್ಥವಾಗಿಯೇ ಇಲ್ಲಿ ಸ್ಥಾಪಿಸಿದರು. ಯಾತ್ರೆಗಳಿಂದ ಲಾಭವುಂಟೆಂದು ಹೇಳುವರು. ನಮ್ಮ ಅಯ್ಯಂಗಾರರಾದರೊ,ದೇಶವಿದೇಶದ ಮಿಠಾಯಿಯಕ್ರಮವನ್ನೂ,ನಾನಾ ಭಾಷೆಗಳ ಅಲ್ಪಸ್ವಲ್ಪ ಪರಿಚಯವನ್ನೂ, ಆಶ್ಚರ್ಯಕರವಾದ ಸಮಾಚಾರ ಸಂಗ್ರಹವನ್ನೂ ಮಾಡಿಕೊಂಡಿದ್ದರು. ಅವರಿಗೆ ಮಕ್ಕಳು ಮರಿ ಇರಲಿಲ್ಲ. ಆದರೂ ನಲ್ಲೂರು ನೀಲಾಂಬೆಯ ಕಿರಿಯ ಮಗನು ಮಾತ್ರ ಇವರನ್ನು "ಅಪ್ಪಾ! ಅಪ್ಪಯ್ಯ!" ಎಂದು ಕೂಗಿ ಕರೆಯುತ್ತ ದಿನಕ್ಕೆ ಎರಡು ಬಾರಿ ಕಾಸು, ಕೊಂಡುಹೋಗುತ್ತಿದ್ದನು. ಸ್ವತಂತ್ರವಾದ ಜೀವನವನ್ನು ಕಲ್ಪಿಸಬೇಕೆಂಬ ಉದ್ದೇಶದಿಂದ 'ಹೊಟ್ಲ'ನ್ನು ತಾನು ಮಾಡಿರುವೆನಲ್ಲದೆ, ಅದರಿಂದ ಪ್ರಯೋಜನಾಂಶವೇನೂ ಇಲ್ಲವೆಂದು ಅವರು ಯಾವ ಕಾರಣದಿಂದಲೋ ಗೊಣಗುಟ್ಟುತ್ತಿದ್ದರು. ಆದರೂ ಗ್ರಾಹಕರ ಸಂಖ್ಯೆ ದಿನೇದಿನೇ ಏರಿಹೋಗುತ್ತಲಿತ್ತು. ಒಂದು ಪೈಸೆಯ ಕಾಫಿಕುಡಿಯುವುದಕ್ಕೆ ಬಂದವನು ಸಹ ಅಯ್ಯಂಗಾರರ ಯಾತ್ರಾಸಮಾಚಾರವನ್ನು ಕೇಳುತ್ತಕೇಳುತ್ತ, ತಿಂದ ತಿಂಡಿಯನ್ನು ತಿಳಿಯದೆ, ಉಡಿಯಲ್ಲಿದ್ದ ಹಣವನ್ನೆಲ್ಲಾ ಸಮರ್ಪಿಸಿಹೋಗುತ್ತಿದ್ದನು. ಒಬ್ಬೊಬ್ಬರು,ಅಯ್ಯಂಗಾರರು ತಮ್ಮಸಮಾಚಾರಗಳ 'ಮೂಟೆಯನ್ನು ಬಿಚ್ಚುವಂತೆ' ಮಾಡಿ, ಅವರು ಅದರ ಆನಂದದಲ್ಲಿ ಮಗ್ನರಾಗಿದ್ದ ಸಮಯ ನೋಡಿ, ಮೆಲ್ಲನೆ ಮಾಯವಾಗುತ್ತಿದ್ದರು. ತತ್‌ಕ್ಷಣದಲ್ಲಿಯೇ ಅಯ್ಯಂಗಾರರು ಬೆಚ್ಚಿಬಿದ್ದಂತಾಗಿ, ಅವರ ಬೆನ್ನುಹಿಡಿದು, ಹಣವನ್ನು 'ವಸೂಲ್' ಮಾಡುತ್ತಿದ್ದರು. ಮೊದಲು ಮೊದಲು ಪೂರ್ಣಸ್ವಾಮಿಯವರಿಗೆ ಕಮಲಪುರದ ಯುವಕರನ್ನು ಕುರಿತು ಒಳ್ಳೆಯ ಅಭಿಪ್ರಾಯವಿತ್ತು. ಇತ್ತಲಾಗೆ ಆ ಅಭಿಪ್ರಾಯವು ಬೇರೆಯಾಗಿ ಹೋಯಿತು. ಅನೇಕ ಗ್ರಾಹಕರು ಲಡ್ಡು ತಿನ್ನುವ ಬದಲಾಗಿ ದುಡ್ಡು ತಿನ್ನಲು ಪ್ರಾರಂಭಿಸಿದರು. ಈ ರೋಗವನ್ನು ನಿವಾರಿಸುವುದಕ್ಕೆ ಅಯ್ಯಂಗಾರರು ನಾನಾ ಉಪಾಯ ಮಾಡಿದರು. ಬರತಕ್ಕ ಹಣವನ್ನು ಲೆಕ್ಕದ ಪುಸ್ತಕದಲ್ಲಿ ಮುಂದೆ ಸಾಗಿಸುತ್ತ ಹೋದರು. ಕಾರಣಾಂತರಗಳಿಂದ ದೂರ ದೇಶಗಳಿಗೆ ಹೋಗಿದ್ದ ಪ್ರಿಯ ಗ್ರಾಹಕರಿಗೆ ತನ್ನ ಕ್ಷೇಮವಾರ್ತೆಯನ್ನು ಕುರಿತು ಕಾಗದಗಳನ್ನು ಬರೆದು ನೋಡಿದರು. "ಬಡವನ ಬಿನ್ನಹ" ಎಂದು ಹಲಗೆಯಲ್ಲಿ ಸಾಲಗಾರರ ಹೆಸರು ಬರೆದು 'ಹೊಟ್ಲ'ನ ಗೋಡೆಗೆ ತೂಗಾಡಿಸಿದರು. ಕೊನೆಗೆ ಲೆಕ್ಕವನ್ನು ಹೇಗೂ ಸರಿ ಮಾಡದೆ ಬಿಡಲಿಲ್ಲ; ಆರು ವರ್ಷಗಳಿಂದ ಸಾಗಿಸಿತಂದ ಸಾಲಗಾರರ ಹೆಸರನ್ನೆಲ್ಲಾ ಲೆಕ್ಕದ ಪುಸ್ತಕದಲ್ಲಿ ಕೆಂಪು ಶಾಯಿಯ ಗೆರೆಗಳಿಂದ ಅಡಗಿಸಿಬಿಟ್ಟರು.

ಈ ದಿನ ಸಾಯಂಕಾಲದಲ್ಲಿ 'ಹೊಟ್ಲ'ನೊಳಗೆ ಅನೇಕರು ಕೂಡಿದ್ದರು. ಕರಿಯೂರು ಶ್ಯಾಮರಾಯರು ಗೋಧಿಯ ರೊಟ್ಟಿಯನ್ನು ಕಾಫಿ ತುಂಬಿದ ಪಾತ್ರೆಯಲ್ಲಿ ನೆನೆಹಾಕುತ್ತಿದ್ದರು. ಮಲೆನಾಡು ಕುಪ್ಪಣ್ಣನವರು 'ಟೀ ಗ್ಲಾಸನ್ನು' ಮುಂದಿರಿಸಿ, ತುಟಿಯಿಂದ ಮೆಲ್ಲಮೆಲ್ಲನೆ ಚೀಪುತ್ತಿದ್ದರು. ಇವರಿಬ್ಬರ ಮೇಲೆ ಅಯ್ಯಂಗಾರರು ವಕ್ರವಾಗಿದ್ದರು. ಅಯ್ಯಂಗಾರರಿಗೆ ಸಿಟ್ಟು ಬರುವುದೆಂದೇ ಇವರಿಬ್ಬರೂ ಕುಚೇಷ್ಟೆಯನ್ನು ಆರಂಭಿಸುತ್ತಿದ್ದರು. ಎರಡು ದಿನಗಳ ಹಿಂದೆ ಈ ಪುಣ್ಯಾತ್ಮರು 'ಹೊಟ್ಲ'ನಲ್ಲಿ ಹೊಟ್ಟೆತುಂಬಾ ತಿಂದು, ಕುಡಿದು,ಅಯ್ಯಂಗಾರರನ್ನು ಕೆರಳಿಸಿ ಹೋಗಿಬಿಟ್ಟಿದ್ದರು. ಅಯ್ಯಂಗಾರರು "ಸ್ವಂತ ಅನುಭವ"ವನ್ನುಕುರಿತು ಕೆಲವು ಮಾತುಗಳನ್ನು ಬಂದವರೊಡನೆ ಮನೋರಂಜನೆಗಾಗಿ ಹೇಳುತ್ತಿದ್ದಾಗ, ಅಯ್ಯಂಗಾರರು ಹೇಳುವುದೆಲ್ಲಾ ಸುಳ್ಳೆಂದೂ, ಗ್ರಾಹಕರು ತನ್ನೊಡನೆ ತಿಳಿದೂ ತಿಳಿಯದೆ ಹೆಚ್ಚು ವ್ಯಾಪಾರ ಮಾಡುವುದಕ್ಕೋಸ್ಕರ ಅತಿಶಯೋಕ್ತಿಯನ್ನು ಹೇಳುವ ಉಪಾಯ ಮಾಡಿರುವರೆಂದೂ ಈ ಮುಟ್ಠಾಳರು ಜಗಳವಾಡಿದರು. ಅಯ್ಯಂಗಾರರು ತಾನೆಂದ ಸಮಾಚಾರ ಸುದ್ದಿಯೆಲ್ಲಾ ಸುಳ್ಳಲ್ಲವೆಂದು ಈ ಅಧಮರಿಗೆ ಮನಗಾಣಿಸುವ ಉಪಾಯವನ್ನು ನಿಶ್ಚಯಿಸಿದರು. ಈ ದಿನ ಕುಪ್ಪಣ್ಣನವರು ಕಲಹಕ್ಕೆ ನಾಂದಿಯಾಗಿ "ರಾಯರೇ! ಅಯ್ಯಂಗಾರರು ರಾಮೇಶ್ವರ ಸಮುದ್ರವನ್ನು ಈಸಿಹೋದ ಸಂಗತಿಯನ್ನು ಬಲ್ರೇ?" ಎಂದು ಕೇಳಿದರು.

ಪೂರ್ಣಸ್ವಾಮಿ ಅಯ್ಯಂಗಾರರು ಎಂದಿನಂತೆ ಹುಬ್ಬುಗಂಟಿಕ್ಕದೆ, ಮನಸ್ಸಿನೊಳಗೆ ಆನಂದದಿಂದ ಉಕ್ಕುತಲಿದ್ದರು.

ಶ್ಯಾಮರಾಯ:—"ಅಂದು ನಿಮ್ಮೊಡನೆ ಯಾರಿದ್ದರು ಅಯ್ಯಂಗಾರ್ರೆ? ಈ ಆಪತ್ತಿನಿಂದಲೂ ನಿಮ್ಮನ್ನು ಪಾರುಮಾಡಿಸಿದವರು ಆ ಗುಂಡಾಚಾರ್ರೆ?"

ಕುಪ್ಪಣ್ಣ:—"ಹಾಗಾಗಿರಬೇಕು. ಇಲ್ಲವಾದರೆ ನಮ್ಮಅಯ್ಯಂಗಾರ್ರು ಅಂಡಮಾನ್ ದ್ವೀಪಗಳಿಗೆ ಹೋಗುತ್ತಿದ್ದರೊ ಏನೊ?"

ಅಯ್ಯಂಗಾರರು ಮೌನವ್ರತವನ್ನು ಅವಲಂಬಿಸಿದ್ದುದನ್ನು ನೋಡಿ, ಶ್ಯಾಮರಾಯರು "ನಿಮ್ಮ ಗುಂಡಾಚಾರ್ರು ಈಗ ತಾನೇ ಎಲ್ಲಿರುವರು?" ಎಂದು ಕೇಳಿದರು.

ಇಷ್ಟರಲ್ಲಿ ಯಾರೋ ಒಬ್ಬರು 'ಹೊಟ್ಲ'ನ'ಒಳಕ್ಕೆ ಕಾಲಿಟ್ಟರು. ಅಯ್ಯಂಗಾರರು ಕಾರ್ಯಾಂತರದಿಂದ ಒಳಕ್ಕೆ ಹೋಗಿದ್ದರಿಂದಲೂ, ಉಳಿದವರ ಪರಿಚಯವು ವ್ಯಕ್ತಿಗೆ ಇಲ್ಲದಿದ್ದುದರಿಂದಲೂ, ಬಂದವನು ಒಂದು ನಿಮಿಷ ಅಲ್ಲಿಯೇ ನಿಂತುಬಿಟ್ಟನು. ಅಯ್ಯಂಗಾರರು ಹೊರಕ್ಕೆಬರುತ್ತಲೇ ವ್ಯಕ್ತಿಯನ್ನು ನೋಡಿ ಉಬ್ಬಿದರು. ಬಂದವನು ಪ್ರತಿಯಾಗಿ ನಗುವನ್ನು ತೋರಿಸುತ್ತ "ಏನ್ ಅಯ್ಯಂಗಾರರೇ?" ಕ್ಷೇಮವೇ ಎಂದು ಕೇಳಿದನು.

ಅಯ್ಯಂಗಾರರು ಬಂದವನನ್ನು ಯಥೋಚಿತವಾಗಿ ಮನ್ನಿಸಿ "ಎಂದು ಬಂದ್ರಿ ಗುಂಡಾಚಾರ್‍ರ್ರೇ?" ಎಂದು ಕೇಳಿದರು.

ಉಳಿದವರು ಸ್ತಬ್ಧರಾಗಿ ಬಂದವನನ್ನು ಕಣ್ಣಿಟ್ಟು ನೋಡುತ್ತ ಕುಳಿತರು.

ವ್ಯಕ್ತಿಯು "ಅಯ್ಯಂಗಾರರೇ! ಏನು ಹೇಳಲಿ! ನಿಮ್ಮನ್ನು ೧೦ ವರ್ಷಗಳಿಂದ ನಾವು ಹುಡುಕುತ್ತಲಿರುವೆವು. ಈ ಹೊತ್ತು ನಿಮ್ಮ ದರ್ಶನವಾಯಿತು." ಎಂದು ಹೇಳಿ ದಣುವನ್ನು ಆರಿಸುತ್ತಿದ್ದನು. ಅಯ್ಯಂಗಾರರು ಸ್ವಲ್ಪ ಆಲೋಚಿಸಿದಂತೆ ಮಾಡಿ, "ಆ ಬಳಿಕ ನಮಗೂ ತಮಗೂ ಭೇಟಿ ಸಿಗಲಿಲ್ಲ ಅಲ್ಲವೇ?" ಎಂದು ಕೇಳಿ ನಗುತ್ತ, ಕುಪ್ಪಣ್ಣನವರನ್ನು ನೋಡಿದರು.

ಕುಪ್ಪಣ್ಣ:—"ಯಾರ ಭೇಟಿ?"

ಅಯ್ಯಂಗಾರರು ಅಲಕ್ಷ್ಯದಿಂದ "ನಮಗೂ ತಮಗೂ ಆ ಮೇಲೆ ದರ್ಶನವಾಗಿಲ್ಲ. ನಾನು ರಾಮೇಶ್ವರ ಸಮುದ್ರ ದಾಟಿ, ಮುಣುಗಿದ ಹಡಗನ್ನು ಬೆನ್ನುಕೊಟ್ಟು ತೇಲಿಸಿ ಕುಮಾರಿಯ ಭೂಶಿರವನ್ನು ಮುಟ್ಟಿದ ಮೇಲೆ ತಮ್ಮನ್ನು ನೋಡಲಿಲ್ಲ, ನಿಜ" ಎಂದು ಹೇಳಿ ಶ್ಯಾಮರಾಯರ ಮೋರೆಯನ್ನೆ ದೃಷ್ಟಿಸಿದರು.

ವ್ಯಕ್ತಿಯು "ಸರಿ ಸರಿ. ಆ ದಿನಗಳೆಲ್ಲಾ ಹೋಯ್ತು. ಈಗ ನಮ್ಮ ಮಾತುಗಳನ್ನು ಕೂಡಾ ನಂಬುವವರು ಯಾರೂ ಇಲ್ಲ" ಎಂದು ಹೇಳಿ ತನ್ನನ್ನೇ ನೋಡತ್ತಿದ್ದ ಕುಪ್ಪಣ್ಣನವರನ್ನು ಕುರಿತು ಅಯ್ಯಂಗಾರರೊಡನೆ "ಇವರು ಯಾರು?" ಎಂದು ಕೇಳಿದನು.

ಕುಪ್ಪಣ್ಣನವರು ಈ ಸಂದರ್ಭವನ್ನು ಹಿಡಿದು ಮಾತನಾಡುವಂತೆ ಮುಂದೆ ಬಂದು "ಆಚಾರ್‍ರೇ! ನಿಮ್ಮ ಹೆಸ್ರನ್ನು ನಾವು ಅಯ್ಯಂಗಾರ್‍ರ ಬಾಯಿಂದ ದಿನೇ ದಿನೇ ಕೇಳಿಗೊತ್ತುಂಟು. ನಮ್ಮ ಪೂರ್ಣಸ್ವಾಮಿ ಅಯ್ಯಂಗಾರರು ಕಾವೇರಿ ಸ್ನಾನದಲ್ಲಿ . . . . . . ."

ವ್ಯಕ್ತಿಯು "ಹೌದು! ಹೌದು!" ಎಂದು ತಲೆದೂಗಿ "ಅವರನ್ನು ರಕ್ಷಿಸಿದ ಗುಂಡಾಚಾರ್‍ರು ನಾವು. ನಾವು ಇಲ್ಲದಿದ್ರೆ ನಮ್ಮ ಅಯ್ಯಂಗಾರರು ಅಂದು ಮೊಸಳೆಗೆ ಆಹುತಿಯಾಗುತ್ತಿದ್ದರು. ಏನ್ ಅಯ್ಯಂಗಾರರೇ? ೫೦ ಅಡಿ ಉದ್ದ ಮೊಸಳೆ ಎಲ್ಲಿ? ನಮ್ಮ ಚಿಕ್ಕದೊಂದು ಪವಿತ್ರದರ್ಭೆ ಎಲ್ಲಿ? ಇವರು ಯಾರು!" ಎಂದು ಅಯ್ಯಂಗಾರರೊಡನೆ ಕೇಳಿದನು.

ಅಯ್ಯಂಗಾರರು ಅಲಕ್ಷ್ಯದಿಂದ "ಅವರು ದಲಾಲ್ ಕುಪ್ಪಣ್ಣ. ನಮಗೆ ಅವರ ಗೊಡವೆ ಯಾಕೆ? ಈ ವೂರಲ್ಲಿಯಾರು ಅವನ್ನುಬಲ್ಲರು? ನಾವೆನ್ನುವುದೆಲ್ಲಾ ಸುಳ್ಳೆಂದು ಹೇಳುವ ಗೃಹಸ್ಥರು" ಎಂದು ಹೇಳಿದರು.

ಶ್ಯಾಮರಾಯ:– "ಇವರೇ ಏನ್ ಗುಂಡಾಚಾರ್‍ರು?"

ಗುಂಡಾಚಾರ್ಯ:–ಕಾವೇರಿಸ್ನಾನದಲ್ಲಿ ಮೊಸಳೆ ಬಾಯಿಂದ ಅಯ್ಯಂಗಾರರನ್ನು ಬಿಡಿಸಿ ಕಾಯ್ದ ಗುಂಡಾಚಾರ್ಯರು ನಾವೇ! ಮಲೆಯಾಳ ಸೀಮೆಯಲ್ಲಿ ಅಯ್ಯಂಗಾರರು ರೋಗದಿಂದ ಹಾಸಿಗೆ ಹಿಡಿದು ಮಲಗಿದ್ದಾಗ, ಅವರ ಆರೈಕೆಯನ್ನು ನೋಡಿ ಅವರನ್ನು ಬದುಕಿಸಿದ ಗುಂಡಾಚಾರ್ಯರೂ ನಾವೇ! 'ನನ್ನನ್ನು ಎಂದೂ ಮರೆಯಲಾರೆ! ನನ್ನನ್ನು ಎಂದೂ ಬಿಟ್ಟು ಹಾಕಲಾರೆ' ಎಂದು ಅಯ್ಯಂಗಾರರು ನನಗೆ ಮಾತುಕೊಟ್ಟಿದ್ದರು. ನಾನು ಒಬ್ಬಂಟಿಗನಾಗಿ ತಿರುಗಾಡುತ್ತಿದ್ದಾಗ, ಎಷ್ಟೋ ಸಲ ಅಯ್ಯಂಗಾರರನ್ನು ನೆನೆದೆ. ಒಂದು ಸಲ ಅಯ್ಯಂಗಾರರನ್ನು ನೋಡಿದರೆ, ನನ್ನ ಕಷ್ಟಗಳೆಲ್ಲಾ ಪರಿಹಾರವಾಗುವವು ಎಂದು ತಿಳಿದುಕೊಂಡೆ. ಶ್ರೀಕೃಷ್ಣನ ದಯೆಯಿಂದ ಈ ಹೊತ್ತು ಇವರನ್ನು ನೋಡಿ ಧನ್ಯನಾದೆ. ಅಯ್ಯಂಗಾರ್‍ರೇ! ಎಲ್ಲಾ ಮರೆತಿರುವಿರೇ?"

ಅಯ್ಯಂಗಾರ:—"ಇಲ್ಲ! ಸ್ವಾಮಿ! ನನ್ನ ಪ್ರಾಣ ಉಳಿದದ್ದು ತಮ್ಮಿಂದ. ತಮ್ಮ ಉಪಕಾರವನ್ನು ಆಜನ್ಮ ಮರೆಯಲಾರೆ. ಪ್ರತ್ಯುಪಕಾರ ಮಾಡಲು ಸಾಮರ್ಥ್ಯವಿದ್ದರೆ ನಾನು ಸಿದ್ಧನಾಗಿರುವೆ."

ಕುಪ್ಪಣ್ಣ:—"ಅವರು ಸಾಯುವ ಹಾಗಿದ್ದರೆ, ನೀವು ಸಹಾಯ ಮಾಡುವುದೇ ಪ್ರತ್ಯುಪಕಾರ."

ಅಷ್ಟರಲ್ಲಿ ಅಯ್ಯಂಗಾರರ ಮಾತಿನ ಪ್ರಕಾರ ನೌಕರನು ಕಾಫಿ ತುಂಬಿದ ಪಾತ್ರೆಗಳನ್ನೂ ತಿಂಡಿಯ ದೊನ್ನೆಗಳನ್ನೂ ತಂದಿಟ್ಟನು. ಗುಂಡಾಚಾರ್ಯರು ಒಂದು ಕಣ್ಣನ್ನು ಭಕ್ಷ್ಯದ ಕಡೆಗೂ ಒಂದು ಕಣ್ಣನ್ನು ಕುಳಿತವರ ಕಡೆಗೂ ಇಟ್ಟು, "ಅದಕ್ಕಿಂತಲೂ ಸಿಂಹಲ ದ್ವೀಪದಲ್ಲಿ ಇವರನ್ನು ಮೂರು ಕಾಡಾನೆಗಳು ಅಟ್ಟಿಕೊಂಡು ಬಂದಾಗ ನಾವು . . . . ." ಎಂದು ಅರೆನುಡಿಯಲ್ಲಿ ತಿಂಡಿಯನ್ನು ನೋಡುತ್ತ ಕುಳಿತರು.

ತಮ್ಮ 'ಟಿಫಿನ್' ತೀರಿಸಿ ಕುಳಿತ ಕುಪ್ಪಣ್ಣ, ಶ್ಯಾಮರಾಯರು ಇವರ ಸಮಾಚಾರಕ್ಕೆ ಆಸೆಗೊಂಡು, ಗುಂಡಾಚಾರ್ಯರ ಹತ್ತಿರಕ್ಕೆ ಬಂದರು. ಅಯ್ಯಂಗಾರರು "ತಿನ್ನಿ! ತಿನ್ನಿ!" ಎಂದು ಹೇಳಿದಾಗ ಈ ಮಾತನ್ನು ತನ್ನನ್ನು ಉದ್ದೇಶಿಸಿ ಹೇಳಿದ್ದೆಂದು ತಿಳಿದು, ಕುಪ್ಪಣ್ಣನವರು ದೊನ್ನೆಯೊಳಗೆ ಬೆರಳು ಮುಳುಗಿಸಿ, ಎಡಗೈಯಿಂದ ಕಾಫಿಯ ಪಂಚಪಾತ್ರೆಯನ್ನು ಹಿಡಿದುಕೊಂಡರು. ಶ್ಯಾಮರಾಯರ ಕೈಗಳೂ ಹಾಗೆಯೇ ಮಾಡತೊಡಗಿದುವು. ಅಯ್ಯಂಗಾರರು ಚೇಳು ಕಚ್ಚಿದ ಮೋರೆ ಮಾಡಿದರು.

ನಿಮಿಷ ಮಾತ್ರದಲ್ಲಿ ಭಕ್ಷ್ಯವೆಲ್ಲಾ ಮಾಯವಾಯಿತು. ಗುಂಡಾಚಾರ್ಯರು "ಇನ್ನೂ ದಣುವು ಆರಲಿಲ್ಲ" ಎಂದು

ಬೇಸರದಿಂದ ಹೇಳಿದರು. ಅಯ್ಯಂಗಾರರು ಉಳಿದ ಇಬ್ಬರನ್ನು ವಕ್ರದೃಷ್ಟಿಯಿಂದ ನೋಡುತ್ತ, ಮನಸ್ಸಿಲ್ಲದ ಮನಸ್ಸಿನಿಂದ ಮುತ್ತಿಪ್ಪನ್ನು ಗುಂಡಾಚಾರ್ಯರ ಕೈಬಳಿಯಲ್ಲಿಯೇ ತಂದಿಟ್ಟು, "ಮಹಾರಾಯ್ರೇ! ನಾನು ಮುಂಚೆ ಹೇಳಿದ ಸಂಗತಿಗಳೆಲ್ಲಾ ಪೂರ್ಣಸತ್ಯವೆಂದು ಈಗ ನಂಬುಗೆಯಾಯ್ತೇ?" ಎಂದು ಕೇಳಿದರು.

ಕುಪ್ಪಣ್ಣ:— "ಈ ಹೊತ್ತಿನ ಫಲಾಹಾರದಲ್ಲಿ ಮೊಸಳೆಯ ಸಂಗತಿಯೊಂದು ನಿಶ್ಚಯವೆಂದು ಕಂಡುಬಂತು-ಗುಂಡಾಚಾರ್ರೇ! ಇಲ್ಲಿ ಎಷ್ಟು ದಿನವಿರುವಿರಿ?"

ಗುಂಡಾಚಾರ್ಯ:— "ನಮ್ಮ ಋಣಾನುಬಂಧ ಇದ್ದಷ್ಟು ದಿನಾ ಇಲ್ಲಿ ಇರುವೆವು."

ಅಯ್ಯಂಗಾರರಿಗೆ ಈ ಮಾತು ತಾನೇ ರುಚಿಸಲಿಲ್ಲ. ಗುಂಡಾಚಾರ್ಯರು ಕೈತೊಳೆದು ನಶ್ಯವನ್ನು ಕೇಳಿದರು. ಅಯ್ಯಂಗಾರರು ನಶ್ಯದ ಡಬ್ಬಿಯನ್ನು ಕೊಟ್ಟರು. ಗುಂಡಾಚಾರ್ಯರು ನಶ್ಯವನ್ನು ಕೈಯಲ್ಲಿ ಸುರಿದು, ಡಬ್ಬಿಯನ್ನು ಶ್ಯಾಮರಾಯರ ಕೈಗಿತ್ತರು. ಇವರು ಎರಡು ಮೂರು ಸಲ ಕೈಯಲ್ಲಿ ಕೊಂಡರೂ ಚಿವಟಿಯು ಸರಿಬಾರದೆ ಇದ್ದುದರಿಂದ, ಅರ್ಧ ತೊಲೆ ನಶ್ಯವನ್ನು ಮೂಗಿಗೆ ಸೇರಿಸುವ ಬದಲು, ತಮ್ಮ ಡಬ್ಬಿಗೆ ಸೇರಿಸಿಬಿಟ್ಟರು. ಅಯ್ಯಂಗಾರರು ಹಲ್ಲು ಕಿತ್ತ ಹಾವಿನಂತೆ ತಳಮಳಗೊಂಡರು. ಕೊನೆಗೆ ಶ್ಯಾಮರಾಯರೂ ಕುಪ್ಪಣ್ಣನವರೂ ಮರುದಿನ ಬರುವೆವು ಎಂದು ಇಬ್ಬರಿಗೂ ಅಭಯಕೊಟ್ಟು ನಡೆದುಬಿಟ್ಟರು

ಗ್ರಾಹಕರೆಲ್ಲರು 'ಹೊಟ್ಲಿಂದ' ಹೋದ ಬಳಿಕ ಗುಂಡಾಚಾರ್ಯರು ಮೀಸೆ ತಿರುವುತ್ತ "ಅಯ್ಯಂಗಾರರೇ! ನಾನು ಮಾಡಿದ್ದು ಹ್ಯಾಗಾಯಿತು? ಆ ಪಾಪಿಗಳು ನಿಮ್ಮನ್ನು ನಂಬುವ ಹಾಗೆ ಮಾಡಿದೆನೊ ಇಲ್ಲವೊ ಹೇಳಿ" ಎಂದರು.

ಅಯ್ಯಂಗಾರ:—"ಸ್ವಲ್ಪ ತಾನೇ ಮೀರಿ ಹೋಯ್ತು. ನಾನು ಹೇಳಿದಷ್ಟೆ ಆಡಿದ್ದರೆ ಚೆನ್ನಾಗಿತ್ತು. ನೀನು ಸುಳ್ಳು ಹೆಚ್ಚು ಬೆರಿಸಿಬಿಟ್ಟೆ."

ಗುಂಡಾಚಾರ್ಯ:— "ಹಾಗೆ ಮಾಡಿದ್ರಿಂದ ಆ ಪಾಪಿಗಳು ನಂಬಿದ್ರು. ನಾನು ಬಣ್ಣ ಹಾಕಿದ್ರೂ ನನ್ನ ಮಾತುಗಳನ್ನು ಯಾರೂ ಸುಳ್ಳೆಂದು ಹೇಳಲಾರ್ರು."

ಅಯ್ಯಂಗಾರ:— "ನನ್ನ ನಶ್ಯೆಯನ್ನೆಲ್ಲಾ ಹಂಚಿಬಿಟ್ಟು ಖಾಲಿ ಡಬ್ಬಿಯನ್ನು ಇಟ್ಟೆದ್ದಿ."

ಗುಂಡಾಚಾರ್ಯ:—"ನಾನು ಮಾತನಾಡುತ್ತಾ ಸ್ವಲ್ಪ ಆವೇಶಗೊಂಡಂತಾದೆ, ನೀವು ಹೇಳಿದ್ದನ್ನೆಲ್ಲಾ ಮರ್ತುಬಿಟ್ಟೆ."

ಅಯ್ಯಂಗಾರ: —"ಹೌದು, ನೀನು ನಾಡದು ಆಗಬೋಟ ಹತ್ತಿ, ಹೊನ್ನೂರಿಗೆ ಹೋಗುತ್ತೇನೆಂದು ಅವರೊಡನೆ ಹೇಳದೆ ಹೋದೆ."

ಗುಂಡಾಚಾರ್ಯ:— "ನಾಳೆ ಹೇಳಿದರೆ ಸರಿಯಷ್ಟೆ. ಅದು ಹೋಗಲಿ! ನಾವು ಮಾಡಿದ ಆಟ ಆ ಮುಟ್ಠಾಳರ ಕಣ್ಣು ಕಟ್ಟಿತು."

ಅಯ್ಯಂಗಾರ:— "ನಾಳೆ ಬೆಳಗಿನಿಂದಲೇ ನೀನು ಹೋಗುವೆನೆಂದು ಮೆಲ್ಲನೆ ಹೇಳುತ್ತಿರು. ಅಳಿಯನ ಮನೆಗೆ ಹೋಗುವೆನೆಂದು ಹೇಳು. ನಾಡದು ಹೋಗೋದಾದ್ರೆ, ನಮ್ಮ ಕರಾರ್ ಪ್ರಕಾರ ಒಂದು ವರಹಾ ಕೊಡುತ್ತೇನೆ."

ಗುಂಡಾಚಾರ್ಯರು ನಗುವನ್ನು ಅಡಗಿಸಿ ಮಾತೆತ್ತುವಷ್ಟರಲ್ಲಿ, ಯಾರೋ ಒಬ್ಬರು ಹೊಟ್ಲಿನ ಬಾಗಿಲ ಹಿಡಿದು ಕರೆದರು. ಅಯ್ಯಂಗಾರರು ಧ್ವನಿಯಿಂದ ಕುಪ್ಪಣ್ಣನವರಾಗಿರಬೇಕು ಎಂದು ತಿಳಿದು, "ಇಷ್ಟು ಹೊತ್ತಿಗೆ ಇಲ್ಲಿ ಕಾಫಿ ಸಿಕ್ಕಲಾರದೈಯ್ಯಾ!" ಎಂದು ಹೇಳಿ ಒಳಕ್ಕೆ ನಡೆದುಬಿಟ್ಟರು. ಗುಂಡಾಚಾರ್ಯರು ಹೊಟ್ಟೆಗೆ ಹಸಿವಿಲ್ಲದುದರಿಂದ ಅಯ್ಯಂಗಾರರ ಹಾಸಿಗೆಯನ್ನು ಹಾಸಿ ಮಲಗಿಬಿಟ್ಟರು. ಅಯ್ಯಂಗಾರರು ಊಟ ತೀರಿಸಿ ಶಯ್ಯಾಸೀನರಾದ ಗುಂಡಾಚಾರ್ಯರನ್ನು ನೋಡಿ, ಮನದೊಳಗೆ ಕುದಿಯುತ್ತ, ಹಲ್ಲು ಮಸೆಯುತ್ತ, ಒಳಕ್ಕೆ ಹೋದರು.

ಭಾನುವಾರ ಆಗಬೋಟು ಕಮಲಪುರಕ್ಕೆ ಮುಟ್ಟಿತು ಅಯ್ಯಂಗಾರರು ಆಗಬೋಟು ಬಂದಿದೆ ಎಂದು ಎರಡು ಮೂರು ಸಲ ಗುಂಡಾಚಾರ್ಯರಿಗೆ ತಿಳಿಸಿದರು. ಗುಂಡಾಚಾರ್ಯರು ಈ ಮಾತನ್ನೇ ಕಿವಿಗೆ ಹಾಕಿಕೊಳ್ಳಲಿಲ್ಲ. 'ಹೊಟ್ಲಿನಲ್ಲಿ' ಬಂದವರೆಲ್ಲರೂ "ಗುಂಡಾಚಾರ್ಯರು ಈ ದಿನ ಹೋಗುವರು" ಎಂಬುದನ್ನು ತಿಳಿದಿದ್ದರು. ಆದರೆ ಗುಂಡಾಚಾರ್ಯರು ಬಂದವರೊಡನೆ ಮಾತು ಕಥೆ ನಡೆಯಿಸುತ್ತಿರುವಾಗ, ತನ್ನ ಪ್ರಸ್ತಾನವನ್ನು ಕುರಿತು ಒಂದು ಸೂಚನೆಯನ್ನಾದರೂ ಹಾಕಲಿಲ್ಲ. ಅಯ್ಯಂಗಾರರು ಅವರ ಮಾತುಗಳ ಪ್ರಸ್ತಾಪವನ್ನು ಆಗಾಗ ತಿರುಗಿಸಲು ಪ್ರಯತ್ನಿಸಿದರು. ಗುಂಡಾಚಾರ್ಯರು ಪ್ಲೇಗ್ ಔಷಧವನ್ನು ಕುರಿತು ಮಾತನಾಡುವಾಗ, ಅಯ್ಯಂಗಾರರು ಹೊನ್ನೂರ ರಥೋತ್ಸವವನ್ನು ಪ್ರಸ್ತಾಪಿಸಿ ಹುಬ್ಬುಗಳನ್ನು ಮೀಟುತ್ತಿದ್ದರು. ಅಯ್ಯಂಗಾರರು ಇದನ್ನೆಲ್ಲ ಬಹಳ ತಾಳ್ಮೆಯಿಂದ ಸಹಿಸಿದರು. ಗಿರಾಕಿಗಳೆಲ್ಲರೂ ಕತ್ತಲಾದ ಬಳಿಕ ತಂತಮ್ಮ ಮನೆಗೆ ಹೋದರು.

ಅಯ್ಯಂಗಾರರು ಸಿಟ್ಟಿನಿಂದ ಕಿಡಿಕಿಡಿಯಾಗಿ "ಇದರ ಅರ್ಥವೇನು?" ಎಂದು ಒದರಿದರು.

ಗುಂಡಾಚಾರ್ಯರು ಸಮಾಧಾನದಿಂದ "ಯಾವದರ ಅರ್ಥ? ಪೊನ್ನಾಮಿ?" ಎಂದರು.

"ನನ್ನನ್ನು ಪೊನ್ನುಸಾಮಿ ಎಂದು ಕರೆಯೋದು ಬೇಡ. ನಾಳೆ ಬೆಳಗ್ಗೆ ನೀನು ಇಲ್ಲಿಂದ ಹೊರಡಬೇಕು, ನೋಡು!"

ಎಂದು ಅಯ್ಯಂಗಾರರು ಗರ್ಜಿಸಿದರು.

ಗುಂಡಾಚಾರ್ಯ:—"ಹೋಗಬೇಕು? ಎಲ್ಲಿ ಹೋಗಬೇಕು?"

ಅಯ್ಯಂಗಾರ:— "ಬೇಕಾದಲ್ಲಿ ಹೋಗು! ನೀನು ಇಲ್ಲಿಂದ ಹೋದ್ರೆ ಸರಿ."

ಗುಂಡಾಚಾರ್ಯ:—"ಅಯ್ಯಂಗಾರ್ರೆ! ಏನೋ ಏನೋ ಮಾತನಾಡುತ್ತೀರಿ. ನಿನ್ನೆ ರಾತ್ರಿ ನಿದ್ದೆ ಹತ್ತಲಿಲ್ಲವೇನು?"

ಅಯ್ಯಂಗಾರ:— "ನಾಳೆ ಬೆಳಗ್ಗೆ ನೀನು ಹೋದ್ರೆ ಸರಿ! ಇಲ್ಲಾದ್ರೆ, ನಾನೇ ಕುತ್ತಿಗೆಗೆ ಕೈಯಿಕ್ಕುತ್ತೇನೆ. ನಾನು ಮಾಡಿದ ಕರಾರ್ ಗೊತ್ತುಂಟಲ್ಲವೇ?"

ಗುಂಡಾಚಾರ್ಯ:— "ಯಾವ ಕರಾರ್? ಕರಾರೊ, ಹುಣಸೆ ಪಚ್ಚಿಯೊ! ನಾಳೆ ತಲೆಗೆ ಎಣ್ಣೆ ಬಳಿದುಕೊಂಡು ಸ್ನಾನ ಮಾಡಬೇಕೆಂದಿರುವೆ . . . . .

ಅಯ್ಯಂಗಾರರು ಸಿಟ್ಟನ್ನು ತಡೆಯಲಾರದೆ, "ನೀನು ಹೋಗುವೆಯೋ ಇಲ್ಲವೋ ನಾಳೆ? ಆ ಅಧಮರಿಗೆ ನಾನು ಹೇಳಿದ್ದೆಲ್ಲಾ ಸರಿಯೆಂದು ತೋರಿಸಲಿಕ್ಕೆ ನಿನ್ನನ್ನು ಒಂದು ಸರಸ ಚೇಷ್ಟೆಗೆ ಇಲ್ಲಿ ಕರೆತಂದೆ. ಇಲ್ಲೇ ಅಂಟಿದೆ ನೀನು."

ಗುಂಡಾ:-"ಅಂದು ಮಾಡಿದ ಉಪಕಾರವೆಲ್ಲಾ ಹೋಯಿತೇ? ಮೊಸಳೆ ಕಚ್ಚಿದಾಗ ನಾನೊಬ್ಬನೇ ನನ್ನ ಪವಿತ್ರ ಧರ್ಭೆಯಿಂದ . . . . . .''

ಅಯ್ಯಂಗಾರ:—"ಸುಮ್ಮನೆ ತೊಂದರೆ ಕೊಡಬೇಡ. ನನ್ನನ್ನು ಮೊಸಳೆ ಹಿಡಿದದ್ದೂ ಇಲ್ಲ; ಗುಂಡಾಚಾರ್ಯ ಬಿಡಿಸಿದ್ದೂ ಇಲ್ಲ."

ಗುಂಡಾ:—"ಕೃತಘ್ನತೆಗೆ ಮದ್ದಿಲ್ಲ. ನಾನು ನಿನ್ನ ಜೀವ ಉಳಿಸಿದ್ದನ್ನು ಮರೆತೆಯಾ?"

ಹೀಗೆಂದು ಹೇಳಿ ಗುಂಡಾಚಾರ್ಯರು ಕಣ್ಣೀರು ಒರಸಿದಂತೆ ತನ್ನ ಕೈಬೆರಳುಗಳಿಂದ ಕಣ್ಣನ್ನು ಸವರುತ್ತಿದ್ದರು. ಹೊರಕ್ಕೆ ಯಾರೊ ಮಾತನಾಡುವಂತೆ ಕೇಳಿಸಿತು.

ಅಯ್ಯಂಗಾರ:—"ಹಾ! ೧೫ ರೂಪ್ಯಾ ಕೊಡುವೆ. ನೀನು ಸುಮ್ಮನೆ ಹೋಗುವೆಯಾ?"

ಗುಂಡಾಚಾರ್ಯ:— "ಅಯ್ಯಂಗಾರರೇ! ನೀವು ಈಗ ನಿದ್ದೆ ಹೋಗಿ. ನಾಳೆ ಮಾತಾಡಬಹುದು. ನಿದ್ದೆ ಇಲ್ಲದಿದ್ದರೆ ಬುದ್ಧಿ ಹೋಗುತ್ತೆ."

ಅಯ್ಯಂಗಾರರಿಗೂ ಗುಂಡಾಚಾರ್ಯರಿಗೂ ಜಗಳವಾಗಿತ್ತು ಎಂಬ ಸುದ್ದಿಯು ಊರಲ್ಲಿ ಹಬ್ಬಿತು. ಕುಪ್ಪಣ್ಣನವರೂ ಶ್ಯಾಮರಾಯರೂ ಇದನ್ನು ಕುರಿತು ಅಯ್ಯಂಗಾರರೊಡನೆ ಕೇಳಬೇಕೆಂದಿದ್ದರು. ಆದರೆ ಇತ್ತಲಾಗೆ ಅಯ್ಯಂಗಾರರು ಕಡ ಕೊಡುವ ಸಾಂಪ್ರದಾಯವನ್ನು ತೆಗೆದು ಹಾಕಿದ್ದರಿಂದ, ಇವರಿಬ್ಬರಿಗೂ ಅಲ್ಲಿ ಹೋಗಲು ಅಷ್ಟು ಧೈರ್ಯವಿರಲಿಲ್ಲ. ರವಿವಾರ ದಿನದ ಆಗಬೋಟು ಹತ್ತಿ ಹೋಗದಿದ್ದರೆ, ಗುಂಡಾಚಾರ್ಯರು ಇನ್ನೂ ಮೂರು ನಾಲ್ಕು ದಿನಗಳಲ್ಲಿ ತನ್ನ 'ಹೊಟ್ಲನ್ನು' ಹೀರಿಬಿಡುವರೆಂದು ಹೆದರಿ, ಅಯ್ಯಂಗಾರರು "ಎಲೊ! ಗುಂಡಾ! ನೀನು ನಾಳೆ ಹೋದ್ರೆ ಸರಿ! ಇಲ್ಲಾದ್ರೆ ನಾನೇ ಅವರಿಗೆಲ್ಲಾ ನಾಳೆ ಬಾಯ್ಬಿಟ್ಟು ಹೇಳಿ, ನಿನ್ನನ್ನು ಇಲ್ಲಿಂದ ದೊಬ್ಬಿ ಬಿಡುವೆ" ಎಂದರು.

ಗುಂಡ:-"ನಾನು ಬರುವ ಚಂದ್ರವಾರ ಹೋಗ್ತೇನೆ ಆಗದೋ? ಕೈಯಲ್ಲಿ ಕಾಸಿಲ್ಲ. ನೀನು ಕೊಡುವ ೧೫ ರೂಪಾಯಿ ದಾರಿಯ ಖರ್ಚಿಗೆ ಸಾಕಾಗದು. ನಿನಗೋಸ್ಕರ ಇದೆಲ್ಲಾ ಸುಳ್ಳು ಹೇಳಿ ನಾನು ಹಾಳಾದೆ."

ಅಯ್ಯಂಗಾರ:- "ಇಕೊ! ನೀನು ಹೋದ್ರೆ ಸರಿ" ಎಂದು ಹೇಳಿ, ಅವನ ಕೈಗೆ ೧೬ ರೂಪ್ಯಾ ಸುರಿದರು.

ಮರುದಿನ ೧೦ ಗಂಟೆಗೆ ಗುಂಡಾಚಾರ್ಯರು ಹೋಗುವರೆಂದು ಊರಲ್ಲಿ ಸುದ್ದಿ ಹಬ್ಬಲು, ಕುಪ್ಪಣ್ಣನವರು ಮತ್ತು ಶ್ಯಾಮರಾಯರು ಹೊಟ್ಲಿಗೆ ಬಂದರು. ಗುಂಡಾಚಾರ್ಯರು ತೆರಳುವುದಕ್ಕೆ ಸಿದ್ಧರಾಗಿದ್ದರು

ಗುಂಡಾಚಾರ್ಯರು ಇವರನ್ನೆಲ್ಲಾ ನೋಡುತ್ತಲೇ "ನಾನು ಎಷ್ಟೋ ಊರು ನೋಡಿದೆ. ಎಷ್ಟೋ ಜನಗಳನ್ನು ನೋಡಿದೆ. ಆದರೆ ಇದಕ್ಕಿಂತ ಒಳ್ಳೇದನ್ನೂ ನಿಮಗಿಂತಲೂ ಯೋಗ್ಯರನ್ನೂ ನಾನು ಎಲ್ಲಿಯೂ ನೋಡಿಲ್ಲ."

ಕುಪ್ಪಣ್ಣನವರು ಗುಂಡಾಚಾರ್ಯರೊಡನೆ "ನಮ್ಮನ್ನು ಮರೆಯಬಾರದು" ಎಂದು ಬೇಡಿದರು.

ಗುಂಡಾಚಾರ್ಯ:—"ಈ ವೃದ್ಧಾಪ್ಯದಲ್ಲಿ ನಾನು ದಿಕ್ಕಿಲ್ಲದೆ ಊರೂರು ಸುತ್ತುತ್ತಿರುವಾಗ ನಿಮ್ಮ ನೆನಪು ಎಂದೂ ಆಗದೆ ಇರಲಿಕ್ಕಿಲ್ಲ. ಹೊಟ್ಟೆಗೋಸ್ಕರ ನಾನು ಕಷ್ಟ ಪಡುವಾಗ ಈ 'ಹೊಟ್ಲಿ'ನ ಜ್ಞಾಪಕವು . . . .

ಶ್ಯಾಮರಾಯ:-"ನೀವು ಮಗಳ ಮಾವನ ಮನೆಗೆ ಹೊನ್ನೂರಿಗೆ ಹೋಗುವಿರಲ್ಲವೇ?"

ಗುಂಡಾಚಾರ್ಯರು ಮೆಲ್ಲನೆ ನಗುತ್ತ ತಲೆಯಲ್ಲಾಡಿಸಿ "ನನಗೆ ಮಗಳೂ ಇಲ್ಲ, ಬೀಗನೂ ಇಲ್ಲ. ಈ ಲೋಕದಲ್ಲಿ ನಾನು ಒಬ್ಬನೇ. ನನ್ನಿಂದ ಉಪಕಾರ ಹೊಂದಿದವರು ಹಲವರಿದ್ದಾರೆ" ಎಂದರು.

ಈ ಮಾತುಗಳನ್ನು ಕೇಳುತ್ತಲೇ ಎಲ್ಲರು ಕನಿಕರಗೊಂಡಂತೆ ಅಯ್ಯಂಗಾರರ ಮುಖವನ್ನು ನೋಡಿದರು.

ಕುಪ್ಪಣ್ಣ:-"ನೀವು ಮಗಳ ಮನೆಗೆ ಹೋಗುವಿರೆಂದು ಅಯ್ಯಂಗಾರರೇ ನಮ್ಮೊಡನೆ ಹೇಳಿದರು".

ಅಯ್ಯಂಗಾರರು ಸಿಟ್ಟಿನಿಂದ ಎದ್ದು ನಿಂತು ವಕ್ರಮುಖವನ್ನು ಮಾಡಿದರು.

ಶ್ಯಾಮರಾಯ:-"ಅಯ್ಯಂಗಾರರು ನಿಮ್ಮನ್ನು ಒತ್ತಾಯ ಮಾಡಿದರೂ ನೀವು ಹೊರಡಲಿಕ್ಕೆ ಹಟಹಿಡಿದಿರುವಿರೆಂದು

ನಮ್ಮೊಡನೆ ಹೇಳಿದರು."

ಗುಂಡಾಚಾರ್ಯ:–"ಶುದ್ಧ ಸುಳ್ಳು! ಅವರು ಒಂದು ಮಾತು ಹೇಳಿದ್ದರೆ ನಾನು ಇಲ್ಲಿಯೇ ಉಳುಕೊಳ್ಳುತ್ತಿದ್ದೆ. ನಾನು ಇಲ್ಲಿರೋದು ಅವರಿಗೆ ಮನಸ್ಸಿಲ್ಲ. ನನಗೆ ಒಪ್ಪೊತ್ತು ಕೊಡುವ ಊಟ ಅವರ ಕಣ್ಣಿಗೆ ಹೆಚ್ಚಾಗಿ ತೋರುತ್ತೆ. ನಾನು ಹೊನ್ನೂರಿಗೆ ಹೋಗುವೆನೆಂದು ಅವರೇ ಸುದ್ದಿ ಹುಟ್ಟಿಸಿದರು. ಅವರು ಸುಳ್ಳಾಡೋದು ನನಗೆ ಮನಸ್ಸಿರಲಿಲ್ಲ. ಸಟೆಯಿಂದಲೇ ಸಟೆಯನ್ನು ಬಿಗಿ ಮಾಡಬೇಕೆಂದು ಹೇಳಿದ್ರು. ಕಡೆಗೆ ನಾನು ಎಲ್ಲಾದರೂ ಹೋಗಿಬಿಡುವೆನೆಂದು ನಿಶ್ಚಯಮಾಡಿದೆ. ಆದರೆ ಹೋಗುವಾಗ ನಿಮ್ಮೊಡನೆ ಸುಳ್ಳಾಡಿ ಹೋಗ ಬೇಕು ಯಾಕೆ?"

ಈ ಮಾತನ್ನು ಕೇಳಿ ಎಲ್ಲರು ಸ್ತಬ್ಧರಾದರು.

ಗುಂಡಾಚಾರ್ಯ:–"ನನಗೆ ಮಕ್ಕಳು ಮರಿ ಇಲ್ಲ. ನನ್ನನ್ನು ಹೊರಕ್ಕೆ ಅಟ್ಟಿಬಿಡುವೆನೆಂದು ಅಯ್ಯಂಗಾರರು ಗದರಿ ಸಿದ್ದರಿಂದ ನಾನು ಹೋಗುವೆ. ಅವರು ಒಂದು ಮಾತು ಹೇಳಿದ್ರೆ ಇಲ್ಲೇ ಉಳುಕೊಳ್ಳುತ್ತಿದ್ದೆ."

ಗುಂಡಾಚಾರ್ಯರು ಹೀಗೆ ಹೇಳಿ ನಗುಗಣ್ಣುಗಳಿಂದ ಅಯ್ಯಂಗಾರರನ್ನು ನೋಡುತ್ತ ಹೊರಕ್ಕೆ ನಡೆದುಬಿಟ್ಟರು. ಅವರು ಎಲ್ಲಿ ಹೋದರೋ ಇದುವರೆಗೆ ತಿಳಿಯಲಿಲ್ಲ. ಕುಪ್ಪಣ್ಣನವರೂ ಶ್ಯಾಮರಾಯರೂ ಇವರು ಹೋದ ಮೇಲೆ ಇವರ ಜಾತಕವನ್ನು ಸ್ಫುಟಮಾಡಿದ್ದಲ್ಲಿ, ಇವರು ನಲ್ಲೂರು ನೀಲಾಂಬೆಯ ತಮ್ಮನಾಗಿದ್ದನೆಂದು ತಿಳಿದು ಬಂದಿತು. ಈಗಲೂ ಕೆಲವರು ಅಯ್ಯಂಗಾರರ ಜೀವನ ಚರಿತ್ರೆಯನ್ನು ಅವರ ಇದಿರಿಗೇನೇ ವ್ಯಾಖ್ಯಾನ ಮಾಡುತ್ತಿರುವಾಗ, ಗುಂಡಾಚಾರ್ಯರ ಆಗಮನದ ಕೆಲವು ಸಂಗತಿಗಳನ್ನು ಟಿಪ್ಪಣಿಯಾಗಿ ಕೊಡುವುದುಂಟು.

(ಸುವಾಸಿನಿ)

---

# ವೈದ್ಯರ ಒಗ್ಗರಣೆ

ವಲ್ಲಭಾಚಾರ್ಯರು ೧೮೬೨ರಲ್ಲಿ ಕಮಲಪುರದ ಅಮಲ್ದಾರರಾಗಿದ್ದರು. ಆ ಕಾಲದಲ್ಲಿ ಜನಗಳಿಗೆ ಕುಂಪಣಿ ಸರಕಾರದಲ್ಲಿ ಹುದ್ದೆ ದೊರಕುವುದಕ್ಕೆ ಅಷ್ಟೊಂದು ತೊಂದರೆ ಇರಲಿಲ್ಲ. ಜನಗಳಲ್ಲಿ ಸಾಕಷ್ಟು ಅನುಕೂಲತೆ ಇದ್ದಿತ್ತು; ಹೊಟ್ಟೆ ತುಂಬಾ ಉಂಡು ಕೂತುಕೊಳ್ಳಬಹುದಾದಷ್ಟು ಇದ್ದಿತ್ತು. ಸರಕಾರಿ ಹುದ್ದೆಗಳಿಗೋಸ್ಕರ ಮೇಲಾಟ ಇರಲಿಲ್ಲ. ಪೇಚಾಟ ಇರಲಿಲ್ಲ. ಇಂದಿನಂತೆ ಅನೇಕ ಪರೀಕ್ಷೆಗಳೂ ಇರಲಿಲ್ಲ. ಒಂದು ಬಹಿರಂಗ ಪರೀಕ್ಷೆ; ಒಂದು ಅಂತರಂಗ ಪರೀಕ್ಷೆ—ಇಷ್ಟೆ. ವಲ್ಲಭಾಚಾರ್ಯರು ಬಹಿರಂಗ ಪರೀಕ್ಷೆಯನ್ನು ತೇರಿದ್ದರು. ಕಲೆಕ್ಟರ್ ರೋರಿಂಗ್ ದೊರೆಗಳು ಇವರ ಅಂಗವನ್ನು ತಾನೆ ಸ್ವತಃ ನೋಡಿದ್ದರು. ಇವರ ಸ್ಥೂಲದೇಹ; ಗೋಷ್ಪದ ಕೇಶ, ದೀರ್ಘ ನಾಮ, ಕರ್ಣತುಳಸಿ, ಗಂಧಲೇಪನ, ಲಂಬೋದರ—ಇವೇ ಅಮಲ್ದಾರ್ ಹುದ್ದೆಯ ಮುಖ್ಯ ಲಕ್ಷಣಗಳಾಗಿದ್ದುವು ರೋರಿಂಗ್ ದೊರೆಗಳು ಸಂಸ್ಕೃತ ಭಾಷಾಪ್ರಿಯರು, ದೇಶೀಯರ ಪ್ರಸನ್ನರು. ವಲ್ಲಭಾಚಾರ್ಯರು ಸಂಸ್ಕೃತ ಭಾಷಾಭಿಜ್ಞರೆಂದು ಕಲೆಕ್ಟರ್ ದೊರೆಗಳ ತಿಳುವಳಿಕೆಗೆ ಹೇಗೋ ಬಂದಿತ್ತು. ಆಚಾರ್ಯರು ಚತುರ್ವೇದಗಳ ಸಂಗ್ರಹ ಮಾಡಿ ಇಟ್ಟಿದ್ದರು. ಭಾರತರಾಮಾಯಣಗಳ ಕಥಾಭಾಗವನ್ನು ಬಾಲ್ಯದಲ್ಲಿಯೇ ಕೇಳಿದ್ದರು. ಹಾಗೂ ಸಂಸ್ಕೃತ ಸಂಧ್ಯಾವಂದನೆಯ ಪುಸ್ತಕಪಾಠವು ಅವರಿಗೆ ನಿರಂತರವೂ ಇದ್ದಿತ್ತು. ಕಮಲಪುರದ ಅಮಲ್ದಾರರಲ್ಲಿ ಇವರಷ್ಟು ಮಹಾಕೀರ್ತಿಯನ್ನು ಯಾರೂ ಪಡೆದಿರಲಿಲ್ಲ. ಅವರಿಗೆ ಇಂಗ್ಲೀಸು ಭಾಷಾಜ್ಞಾನವೂ ಇತ್ತೋ ಇಲ್ಲವೋ ನಾವು ಅರಿಯೆವು. ಇಂಗ್ಲೀಸು ಮಾತನಾಡಲು ತಿಳಿದಿತ್ತು ಎಂದು ನಮ್ಮ ಮನೆ ಅಜ್ಜಿಯೊಂದು ಈಗಲೂ ಹೇಳುತ್ತಿರುವಳು. ಇವರ 'ಜಜ್ಜ್ಮೆಂಟುಗಳು' ಬಹಳ ನೂತನವಾಗಿದ್ದುವೆಂದು ಬಾಜಾರಿನಲ್ಲಿ ಈಗಲೂ ವರ್ತಮಾನವಿದೆ. ವಲ್ಲಭಾಚಾರ್ಯರು 'ಪೀನಲ್ ಕೋಡನ್ನು' ಅಷ್ಟು ಚೆನ್ನಾಗಿ ಮನ್ನಿಸುತ್ತಿರಲಿಲ್ಲ. ಆ ಕೋಡು ಬಿಳೀ ಜನರ ತಲೆಯ ಮೇಲೆ ಚೆನ್ನಾಗಿ ತೋರುವುದಲ್ಲದೆ, ನಾವು ಅದನ್ನು ಧರಿಸುವುದಕ್ಕೆ ಎತ್ತುಗಳಲ್ಲವೆಂದು ಅವರ ಅಭಿಪ್ರಾಯವಿತ್ತು. 'ಜಜ್‌ಮೆಂಟು'ಗಳಲ್ಲಿ ಭಾರತರಾಮಾಯಣದಿಂದಲೇ ಬೇಕಾದಷ್ಟು ಆಧಾರಗಳನ್ನು ಕೊಟ್ಟು 'ಕೇಸುಗಳನ್ನು' (Cases) ತೀರಿಸುತ್ತಿದ್ದರು. ಅವರು ನಿರಪರಾಧಿಗಳಿಗೆ ಆಧಾರರಾಗಿದ್ದರು. ದಂಪತಿಗಳ ವಾದವಿವಾದಗಳು ಕಚೇರಿಗೆ ಬಂದರೆ, ಅವರ ಮನಸ್ಸು ಇಂದಿನ ಸಮಾಜ ಸುಧಾರಕರ ಮನಸ್ಸಿನಂತೆ ಹೆಂಗಸಿನ ಪಕ್ಷವಾಗಿ ಮಾಲುತ್ತಿರುವುದು. ಹೆಂಗಸರು ಸಾಕ್ಷಿಗಾರರಾಗಿದ್ದರೆ ಅವರನ್ನು ದಯಾದೃಷ್ಟಿಯಿಂದ ನೋಡಿ, ಅದರ ಆಧಾರದಿಂದಲೇ ಕಕ್ಷಿಗಳಿಗೆ ಗುಣಮಾಡುತ್ತಿದ್ದರು. ಅಮಲ್ದಾರರಿಗೆ ತಿಂಗಳಿಗೆ ಒಂದು ಬಾರಿ 'ಸರ್ಕಿಟ್' ತಿರುಗುವ ಸಂಪ್ರದಾಯ

ವಿತ್ತು. ಈ 'ಸರ್ಕಿಟ್' ಸುಖಭೋಗದಲ್ಲಿ ಅಮಲ್ದಾರರ 'ಹೆಡ್ ಮುನಿಶಿ' ವೈಕುಂಠ ವ್ಯಾಸಾಚಾರ್ಯರಿಗೂ ಪಾಲಿತ್ತು. 'ಸರ್ಕಿಟಿಗೆ' ಸರಕಾರಿ ಉದ್ಯೋಗಸ್ಥರೂ ಅವರ ಆಪ್ತ ಮಿತ್ರರೂ—ಯಮುನ ಮದುವೆಯ ದಿಬ್ಬಣದಂತೆ—ಏಕತ್ರ ವಾಗಿ ಹೋಗುತ್ತಿದ್ದರು. ಅಂದು ಸರಕಾರದ ಉದ್ಯೋಗಸ್ಥ ರಿಗೆ ಸಂಬಳ ಕಡಿಮೆ; 'ಸರ್ಕಿಟ್' ಹೆಚ್ಚು. ಅದು ಕಾರಣ ದಿಂದ ಉದರ ನಿರ್ವಾಹವು ಒಟ್ಟಾರೆ ಸರಿಹೋಗುತಲಿತ್ತು. ಗುಮಾಸ್ತ ಶ್ರೀರಂಗ ಸೂರಿಯವರು ಮಗಳ ಮದುವೆಯನ್ನು ನಿಶ್ಚಯಿಸಿ,ಅಮಲ್ದಾರರೊಡನೆ'ಜಮಾ ಬಂದಿ'ಯ ಸರ್ಕಿಟಿಗೆ ಹೋಗಬೇಕೆಂದಿದ್ದರು. 'ಮುನಿಶಿ' ಹಯವದನರ ತಂದೆಯ ವರು ಬಿದ್ದುಹೋದ ದೇವಸ್ಥಾನದ ಜೀರ್ಣೋದ್ಧಾರ ಮಾಡಲು ಆಲೋಚಿಸಿ, ಈ ವರ್ಷ ಸಪ್ತಗ್ರಾಮದಲ್ಲಿ ನಡೆ ಯುವ 'ಜಮಾಬಂದಿಯ' ಮಹೋತ್ಸವಕ್ಕೆ ಮಗನೊಡನೆ ಹೊರಡಲಿದ್ದರು.ಆದರೆ ಈ ವರ್ಷ ಅಮಲ್ದಾರರು ಯಾರನ್ನೂ ಬರಲೀಸದೆ ತನ್ನ 'ಹೆಡ್ ಮುನಿಶಿ' ವೈಕುಂಠ ವ್ಯಾಸಾಚಾ ರ್ಯರ ಸಮೇತರಾಗಿ'ಸರ್ಕಿಟಿಗೆ'ತೆರಳಿದರು. ಸಪ್ತಗ್ರಾಮವು ಕಮಲಪುರದಿಂದ ೪೦ ಮೈಲು ದೂರ. ಈಗ ಸಪ್ತಗ್ರಾಮಕ್ಕೆ ಹೋಗಲು ರಾಜಮಾರ್ಗವಿದೆ. ೩೦ವರ್ಷಗಳ ಹಿಂದೆ ಸಪ್ತ ಗ್ರಾಮಕ್ಕೆ ಹೋಗುವವರು ಮೊದಲು ದೋಣಿ ಹತ್ತಿ, ವೀರ ಪುರದಲ್ಲಿ ಇಳಿಯಬೇಕಿತ್ತು. ರೋರಿಂಗ್ ದೊರೆಗಳು ಕುದುರೆ ಯನ್ನು ಏರಿ ವೀರಪುರಕ್ಕೆ ಹೋದರು. ವೀರಪುರದವರು ದೊರೆಗಳನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಕಳುಹಿಸಿದರು. ದೊರೆ ಗಳು ಮಹಾ ವಾದ್ಯ ಘೋಷದೊಡನೆ ಸಪ್ತಗ್ರಾಮಕ್ಕೆ ಬಂದರು. ಊರಲ್ಲೆಲ್ಲಾ ತೋರಣಗಳ ಶೃಂಗಾರ; ಜೈನರ ಬಸ್ತಿ ಗಳಲ್ಲೆಲ್ಲಾ ಧ್ವಜಗಳ ಅಲಂಕಾರ. 'ಜಮಾ ಬಂದಿ'ಗೆ ಬಂದಿದ್ದ ಕಲೆಕ್ಟರ್ ದೊರೆಗಳು ನೋಡಬೇಕಾದ ಶಿಲ್ಪ ಚಿತ್ರಗಳನ್ನೆಲ್ಲಾ ನೋಡಿದರು; ಅವಶ್ಯವಿದ್ದ ಶಾಸನಗಳ ಪ್ರತಿಗಳನ್ನು ಸಂಪಾದಿ ಸಿದರು. ಬಸ್ತಿಯ ಭಂಡಾರದಲ್ಲಿದ್ದ ಪುಸ್ತಕಗಳನ್ನು ಕುರಿತು ಪ್ರಸ್ತಾಪ ಬಂತು. ಜೈನರ ಮುದಿ ಗುರುಗಳು ಅವನ್ನು ಹೊರಕೊಡುವುದಕ್ಕೆ ಒಪ್ಪಲಿಲ್ಲ. ದೊರೆಗಳು ಪುಸ್ತಕಗಳ ಆಶೆಯನ್ನು ಬಿಟ್ಟು 'ಜಮಾ ಬಂದಿ'ಯನ್ನು ಮುಗಿಸಿದರು.

'ಜಮಾಬಂದ್' ಎಂಬುದು ಹಿಂದುಸ್ಥಾನಿ ಭಾಷೆಯ ಪದವು. ಸರಕಾರಕ್ಕೆ ವರ್ಷಂಪ್ರತಿ ಬರುವ ಭೂಮಿಯ ತೀರ್ವೆ ಯ ಜಮೆಯನ್ನು 'ಬಂದ್' ಮಾಡುವುದು (ಮುಗಿಸುವುದು) ಎಂಬ ಅರ್ಥವನ್ನು ಕೆಲವರು ಕಲ್ಪಿಸಿರುವರು. ಇದು ಶುದ್ಧ ತಪ್ಪು. 'ಜಬಾನ್ ಬಂದ್' ಎಂದರೆ ನಾಲಗೆಯನ್ನು ಕಟ್ಟು ವುದು; ಇದುವೆ ಅಪಭ್ರಂಶವಾಗಿ 'ಜಮಾಬಂದ್' ಎಂದಾ ಯಿತು; ಜನಗಳ 'ಹಾಲ್ ಹವಾಲೆಯನ್ನು' ಹೇಳುವ ನಾಲಗೆ ಯನ್ನು ಕಟ್ಟುವುದು ಎಂಬ ಅರ್ಥ. ಈ ಅರ್ಥಕ್ಕೆ ಸರಿಯಾಗಿ ಮುಂಚಿನವರು ಕುಳುವಾರುಗಳ ಸ್ಥಿತಿಗತಿಗಳನ್ನೂ ನೋಡಿ, ಗೋಳನ್ನೂ ಕೇಳಿ, ದವಸ ತುಟ್ಟಿಯಾದ ಕಾಲದಲ್ಲಿ ತೀರ್ವೆ ಯಲ್ಲಿ ಬೇಕಾದಷ್ಟನ್ನು ಮುಜುರೆ ಕೊಟ್ಟು, ಅವರ ಬಾಯನ್ನೂ ಕೂಗನ್ನೂ ತಡೆಸುತ್ತಿದ್ದರು.

ಅಮಲ್ದಾರರು ಸರ್ಕಿಟಿಗೆ ಬರುವ ಹಾಗಿದ್ದರೆ, ಅವರ ಗೋಸ್ಕರ ಅಡಿಗೆಯವರನ್ನು ಒದಗಿಸುವುದು ಪಟೇಲನ ಕಷ್ಟ ತರದ ಕೆಲಸವಾಗಿತ್ತು. ವಲ್ಲಭಾಚಾರ್ಯರು ಸ್ತ್ರೀಪಾಕ ನಿಯಮಿಷ್ಟರು; ಅವರಿಗೆ ಹೆಂಗಸರ ಅಡಿಗೆ ಮೆಚ್ಚುತ್ತಿತ್ತಲ್ಲದೆ, ಗಂಡಸರ ಅಡಿಗೆಯು ರುಚಿಸುತ್ತಿರಲಿಲ್ಲ. ಅದು ಕಾರಣ ದಿಂದ ಆಚಾರ್ಯರು ಹೋಗುವ ಸ್ಥಳಗಳಲ್ಲಿ ಅವರ ಬಗ್ಗೆ ಅಡಿಗೆಯ ಹೆಂಗಸರನ್ನು ಪಟೇಲರು ಗೊತ್ತುಹಚ್ಚುತ್ತಿದ್ದರು. ಆದರೆ ಒಂದೆರಡು ದಿನಗಳ 'ಚಾಕ್ರಿಗೆ' ಹೆಂಗಸರು ನಿಲ್ಲುವು ದಕ್ಕೆ ಈಚೀಚೆಗೆ ಒಪ್ಪುತ್ತಿರಲಿಲ್ಲ. ಒಂದೊಂದು ಪ್ರಸಂಗದಲ್ಲಿ- ವಲ್ಲಭಾಚಾರ್ಯರಿಗೆ ಅಡಿಗೆಮಾಡಲು ಹೋದ ಹೆಂಗಸನ್ನು ಗಂಡನು ವಿನಾಕಾರಣವಾಗಿ ಬಿಟ್ಟುಬಿಡುತ್ತಿದ್ದನು; ಒಂದೊಂ ದು ಪ್ರಸಕ್ತಿಯಲ್ಲಿ ಅಂಥಾ ಹೆಂಗಸನ್ನು ಬಹಿಷ್ಕಾರ ಪ್ರಕರ ಣಕ್ಕೆ ಜಾತಿಗೃಹಸ್ಥರು ಒಳಗಾಗಿಸುತ್ತಿದ್ದರು. ಅದೂ ಅಲ್ಲದೆ ಸಪ್ತ ಗ್ರಾಮದಲ್ಲಿ ಬ್ರಾಹ್ಮಣರು ಕಡಮೆ. ಪಟೇಲನು ಎಷ್ಟು ಪ್ರಯತ್ನಮಾಡಿದರೂ ಅಡಿಗೆಯವಳು ಒಬ್ಬಳಾದರೂ ಸಿಕ್ಕದೆ ಹೋದಳು. ಹೊತ್ತು ಏರಿ ಬಂದಿತು. ಅಮಲ್ದಾರರು ಕಚೇರಿ ಯಲ್ಲಿ ಹಾಡು ಹಾಡಲು ತೊಡಗಿದರು. ಅಮಲ್ದಾರರು ಕಚೇರಿಯಿಂದ ಕೆಲಸ ಮುಗಿಸಿ ಬರುವ ಮೊದಲು,ಸಂತೋಷ ಚಿತ್ತರಾಗಿ ಹಾಡುವ ಅಭ್ಯಾಸವಿತ್ತು. ಹೊರಗಿದ್ದ ಪಟೇಲನಿಗೆ ಹಾಡು ಕೇಳಿಸುತಿತ್ತು–

ತರಬೇಕು ತರುಣಿಯಳ—ಕಾಮನ ಮುಂಗೈ
ಅರಗಿಣಿಯಂತಿಹಳ ॥
ಸ್ಮರನ ಸಿಂಗಾಡಿ ಪುರ್ಬಿನ, ನೀರೆ, ಮಲ್ಲಿಗೆ
ಪರಿಮಳಿಸುವ ಮೈಯ್ಯ ವರ ಕರಿಗಮನೆಯ ॥

ಹೀಗೆ ಹಾಡುತ್ತ ಕಟ್ಟಿಟ್ಟ ದಪ್ತರದ ಮೇಲೆ ಕೈ ಬಡಿದು ತಾಳ ಹಾಕುತ್ತಲಿದ್ದರು.

ಅಮಲ್ದಾರರು ಮನೆಗೆ ಬರುವ ಹೊತ್ತಾಯಿತೆಂದು ಪಟೇಲನು ಅರಿತನು. ಆದರೆ ಅಡಿಗೆಯು ಏನೋ ಸಿದ್ಧವಾಗ ಲಿಲ್ಲ. ಪಟೇಲನು ಜಾತಿಯಲ್ಲಿ ಜೈನ, ತಾನೇ ಅಡಿಗೆ ಮಾಡು ವುದಕ್ಕೆ ಉಪಾಯವಿಲ್ಲ. ಅಮಲ್ದಾರರು ಮಾರ್ಗಕ್ಕೆ ಇಳಿ ದರು. ಪಟೇಲನು ಎರಡೂ ಕೈಗಳನ್ನು ಸರಿಯಾಗಿ ಜೋಡಿಸಿ ದೊಡ್ಡ ನಮಸ್ಕಾರವನ್ನು ಮಾಡಿದನು. ನಮಸ್ಕಾರ ಮಾಡಿದ ಷ್ಟಕ್ಕೆ ಅಮಲ್ದಾರರ ಸಿಟ್ಟು ಇಳಿಯುವುದೆಂದು ಪಟೇಲನು ತಿಳಿದಿದ್ದನು. ಅಮಲ್ದಾರರು ಪಟೇಲನನ್ನು ನೋಡಿ "ಪದ್ಮ ರಾಜಾ! ಈವತ್ತು ಅಡಿಗೆಗೆ ಯಾರು?" ಎಂದು ಕೇಳಿದರು.

ಪಟೇಲನು ಮತ್ತೊಂದು ನಮಸ್ಕಾರವನ್ನು ಸಮರ್ಪಿಸಿ, "ಬುದ್ಧಿ! ಇಂದು ಎಲ್ಲೆಲ್ಲಿ ಹುಡುಕಿದ್ರೂ ಯಾರೂ ಸಿಕ್ಕಿಲ್ಲಾ" ಎಂದು ಹೇಳಿ ಪುನಃ ಕೈಮುಗಿದನು.

ಅಮಲ್ದಾರ:— ಅದೇನು ಸಂಗ್ತಿ? ಈಗ ಹೊತ್ತೇರಿತು. ಅನ್ನ ಇಲ್ಲದೆ ಉಪವಾಸ ಬೀಳೋದೇನು?

ಪಟೇಲನು:— "ಅಪ್ಪಣೆಯಾದಂತೆ ನಡಕೊಳ್ಳುತ್ತೇನೆ. ಇಲ್ಲಿ ಬ್ರಾಹ್ಮರು ಯಾರೂ ಇಲ್ಲ ಬುದ್ಧಿ! ಎಲ್ಲರೂ ಶ್ರೀಕಾಂತ ಜಾತ್ರೆಗೆ ನಡೆದುಬಿಟ್ಟಿದ್ದಾರೆ ಬುದ್ಧಿ!" ಎಂದು ಹೇಳಿ, ಕೈಜೋಡಿಸಿ, ಮತ್ತೆ ತನ್ನ ಮಣಿಗಂಟನ್ನು ಸವರುತ್ತಾ ನಿಂತಿದ್ದನು.

ಅಮಲ್ದಾರ:— "ಈಗ ಯಾರನ್ನಾದ್ರೂ ಹಿಡಿಯದಿದ್ರೆ ಉಪಾಯ ಇಲ್ಲವಷ್ಟೆ. ಯಾರನ್ನಾದ್ರು ಬಿಟ್ಟಿಗೆ ಹಿಡಿದ್ರೆ ಸರಿ."

ಪಟೇಲ:— "ಹಣ ಕೊಟ್ರೆ ಆಳು ಶಿಕ್ಕೋಲ್ಲ. ಇಲ್ಲಿ ಬಿಟ್ಟಿಗೆ ಯಾರು ಬರ್ತಾರೆ?"

ಪಟೇಲನು ಈ ಸಲ ನಮಸ್ಕಾರ ಮಾಡಲಿಲ್ಲ. ಅಮಲ್ದಾರರು ಸಿಟ್ಟಿಗೆದ್ದರು. ಪಟೇಲನ ಮಾತುಗಳಲ್ಲಿ 'ಬುದ್ಧಿ; ಖಾವಂದ್ರೆ' ಎಂಬ ನುಡಿಗಳೂ ಇರಲಿಲ್ಲ. ಅಮಲ್ದಾರರು— "ಎಲಾ! ಯಾರಿಗಾದ್ರು ಬಿಟ್ಟಿಗೆ ಹಿಡಿದು ತಂದ್ರೆ ಸರಿ! ಇಲ್ಲಾದ್ರೆ ನಿನ್ನ ಕೆಲ್ಸಕ್ಕೆ ರಾಜೀನಾಮೆ ಕೊಡು, ನಡಿ!" ಎಂದು ಗದರಿಸಿದರು.

ಅಮಲ್ದಾರರಿಗೂ ಪಟೇಲನಿಗೂ ಈ ರೀತಿ ಮಾತು ನಡೆಯುತ್ತಲಿರುವುದನ್ನು ದಾರಿಗನೊಬ್ಬನು ನೋಡಿ, ಅಲ್ಲಿಯೇ ತಳುವಿದನು. ಅವನು ಶ್ರೀಕಾಂತ ಜಾತ್ರೆಗೆ ಹೋಗುವವನು. ಅವನ ವಿಷಯವಾಗಿ ಸವಿಸ್ತಾರವಾಗಿ ಮತ್ತೆ ಹೇಳುವೆವು. ಅವನು ಅಮಲ್ದಾರರನ್ನು ನೋಡಿದನು. ನೋಡಿ ಕೈ ಮುಗಿಯದೆ ಏನೋ ಕಾರಣದಿಂದ ನಗುತ್ತ ಹೋಗುತ್ತಿದ್ದನು. ಅವನ ನಗುವಿಂದ ಅಮಲ್ದಾರರ ಹಸಿದ ಹೊಟ್ಟೆಗೆ ಬಿಸಿ ಕೆಂಡ ಇಟ್ಟಂತಾಯಿತು. ಅಮಲ್ದಾರರು ಪಟೇಲನೊಡನೆ "ಇಕೊ! ಪದ್ಮರಾಜಾ! ಅತ್ತ ಹೋಗುವವನನ್ನು ಬಿಟ್ಟಿಗೆ ಹಿಡಿ!" ಎಂದು ಕಟ್ಟಾಜ್ಞೆ ಮಾಡಿದನು.

ಆ ಕಾಲದಲ್ಲಿ ಪಟೇಲನಿಗೆ ಸರಕಾರದಿಂದ ಪೇದೆ ಸಿಕ್ಕುತ್ತಿರಲಿಲ್ಲ. 'ಪೇದೆಯ ಚಾಕ್ರಿಯನ್ನು' ಪಟೇಲನೇ ಮಾಡಬೇಕಾಗಿತ್ತು. ಪ್ರತಿಯಾಗಿ ವರ್ಷಕ್ಕೆ ಒಂದು ವರಹ ಸಂಬಳ ಹೆಚ್ಚು ಸಿಕ್ಕುತ್ತಿತ್ತು. ಪಟೇಲನು ದಾರಿಗನನ್ನು ಮುಂದರಿಸಲೀಸದೆ ತಡೆದನು.

ದಾರಿಗ:— "ಇದೇನಯ್ಯಾ? ನನ್ನನ್ನು ಹೋಗಬಿಡೋದಿಲ್ಲ?"

ಪಟೇಲ:— "ಹೆಚ್ಚು ಮಾತು ಬೇಡ! ಹೇಳಿದ ಹಾಗೆ ಕೇಳಿದ್ರೆ ಸರಿ!"

ದಾರಿಗ:— "ಯಾರು ಹೇಳಿದ ಹಾಗೆ ಕೇಳಬೇಕು? ಹಾಗೆ ಕೇಳಲಿಕ್ಕೆ ನಾನು ನಿಮ್ಮ ಅಡಿಗೆ ಭಟ್ಟನೇ?"

ಪಟೇಲ:— "ಯಾರಾದ್ರೆ ನಮಗೇನು? ಈಗ ನೀನು ಅಡಿಗೆ ಭಟ್ಟನಾಗಲೇ ಬೇಕು"

ದಾರಿಗ:— "ನಾನು ಅಡಿಗೆಯವನಲ್ಲಯ್ಯ! ನಾನು ವೈದ್ಯ. ನಾನು ಮದ್ದು ಕೊಡುವೆ; ಅಡಿಗೆ ಮಾಡಲಾರೆ! ನನ್ನನ್ನು ಬಿಡಿ, ಅಯ್ಯಾ! ನನಗೆ ಶ್ರೀಕಾಂತ ಜಾತ್ರೆಗೆ ಇಂದು ಹೋಗದೆ ನಿರ್ವಾಹವಿಲ್ಲ."

ಪಟೇಲ:— "ನಿರ್ವಾಹವಿಲ್ಲ! ಬಾಯ್ಮುಚ್ಚು! ಕಳ್ಳ! ವೈದ್ಯ ನೀನು? ಎಂಥಾ ವೈದ್ಯ? ಸುಮ್ಮನೆ ನನ್ನ ಹಿಂದೆ ಬಂದ್ರೆ ಸರಿ. ಇಲ್ವಾದ್ರೆ ಕೈಗೆ ಕೋಳಾ ಹಾಕಿಸುವೆ."

ವೈದ್ಯರು ಸುಮ್ಮನಾದರು; ಗುದ್ದು ಕೊಟ್ಟರೆ ಮದ್ದು ಇಲ್ಲವೆಂದು ಸುಮ್ಮನಾದರು. ಸರಕಾರದ ಹುದ್ದೆದಾರರೊಡನೆ ದಂಡೋಪಾಯ ನಡೆಸಿದರೆ ಪ್ರಯೋಜನವಿಲ್ಲವೆಂದು ತಿಳಿದು, ವೈದ್ಯರು ಪಟೇಲನ ಆಜ್ಞೆಗೆ ಒಳಗಾದರು. ವೈದ್ಯರು ಅಮಲ್ದಾರರಿಗೆ ಅಡಿಗೆ ಮಾಡಲು ಒದಗಿಸಿದ ಮನೆಗೆ ಉಸಿರೆತ್ತದೆ ನಡೆದರು.

ವೈದ್ಯರ ಹೆಸರು ಕೃಷ್ಣ. ಕೃಷ್ಣವೈದ್ಯ ಎಂದು ವಾಡಿಕೆಗೆ ಕರೆಯುತ್ತಿದ್ದರು. ಕೃಷ್ಣವೈದ್ಯರು ಸ್ವತಃ ಆಯುರ್ವೇದವನ್ನು ಓದಿರಲಿಲ್ಲ. ಇವನ ಮುತ್ತಜ್ಜನು ಮಾತ್ರ ಹಾವಿನ ವಿಷಕ್ಕೆ ಔಷಧ ಬಲ್ಲವನೆಂದು ಖ್ಯಾತಿಗೊಂಡಿದ್ದನು. ಅದು ಕಾರಣದಿಂದಲೇ ಜನಗಳಿಗೆ ಕೃಷ್ಣವೈದ್ಯರ ಮೇಲೆ ಸ್ವಲ್ಪ ಅಭಿಮಾನವಿದ್ದಿತು. ಅದಲ್ಲದೆ ಕೃಷ್ಣವೈದ್ಯರು ಬಾಲ್ಯದಲ್ಲಿ ಕಮಲಪುರದ ಅನಂತವೈದ್ಯರ ಕಾಲಬುಡದಲ್ಲಿ ಕೆಲವು ಕಾಲ ಶಿಕ್ಷಣವನ್ನು ಹೊಂದಿದ್ದರು. ವೈದ್ಯಶಾಸ್ತ್ರವನ್ನು ಕಲಿಯುವ ಮೊದಲು ಸೂಪಶಾಸ್ತ್ರದ ಅನುಭವವು ಅಗತ್ಯವೆಂದು ಗುರುಗಳು ಹೇಳಿದುದರಿಂದ, ಕೃಷ್ಣವೈದ್ಯರು ಸುಮಾರು ೫ವರ್ಷಗಳ ವರೆಗೆ ಅನಂತವೈದ್ಯರ ಮನೆಯಲ್ಲಿ ಸ್ವಯಂಪಾಕ ವಿಧಿ ವಿಧಾನಗಳನ್ನು ಕಲಿಯಬೇಕಾಯಿತು. ಅಷ್ಟು ಶೀಘ್ರಕಾಲದಲ್ಲಿಯೇ ವೈದ್ಯರು ಸೂಪಶಾಸ್ತ್ರವನ್ನೂ ವೈದ್ಯಶಾಸ್ತ್ರವನ್ನೂ ಕರತಲಾಮಲಕವಾಗಿ ಮಾಡಿದರು. ಪ್ರಕೃತದಲ್ಲಿ ವೈದ್ಯರು ಅನೇಕರಿಗೆ ಪ್ರಯೋಜನಕ್ಕೆ ಬೀಳುತ್ತಿದ್ದರು. ಮದುವೆಯಾಗದವರು, ಗಂಡ ಸತ್ತವರು, ಧನಿಕರು, ಮಠಾಧೀಶರು ಮೊದಲಾದವರಲ್ಲಿ ಕೆಲವರ ಆಶ್ರಯದಿಂದ ವೈದ್ಯರ ಉದರ ನಿರ್ವಾಹವು ನಡೆಯುತ್ತಲಿತ್ತು. ಕ್ಷೇತ್ರದ ಲಿಂಗರಾಜ ಹೆಗ್ಗಡೆಯವರು ಕೃಷ್ಣ ವೈದ್ಯರನ್ನು ಚಿರಕಾಲ ತನ್ನ ಬಳಿಯಲ್ಲಿರಿಸಿದರು. ಹೆಗ್ಗಡೆಯವರಿಗೆ ಗುಣಾಂಶ ಸಿಕ್ಕಿತೋ ಇಲ್ಲವೋ ನಾವು ಅರಿಯೆವು. "ಇನ್ನೂ ತನಗೆ ವೈದ್ಯರ ಹಂಗೇನು?" ಎನ್ನುತ್ತಿದ್ದರು ಹೆಗ್ಗಡೆಯವರು. ಸಾಧಾರಣ ಜನಗಳ ಅನುಭವಕ್ಕೆ ನೋಡಸಿಕ್ಕದ ರೋಗಗಳಿಗೆ ಕೃಷ್ಣ ವೈದ್ಯರು ಚಿಕಿತ್ಸೆಯನ್ನು ಮಾಡಬಲ್ಲರೆಂದು ಸಮಾಚಾರವಿದ್ದು

ದರಿಂದ, ಶ್ರೀಕಾಂತ ದೇವಸ್ಥಾನದ ಪಾರುಪತ್ಯಗಾರರು ಇವರನ್ನು ಬರಮಾಡಿದ್ದರು. ಇವರ ಅಭಿಪ್ರಾಯದಲ್ಲಿ ಪ್ರಕೃತಿಯು 'ಪಿತ್ತ,' 'ವಾತ,' 'ಕಫ' ಎಂದು ತ್ರಿಗುಣಾತ್ಮಕವಾಗಿರಲಿಲ್ಲ. ಎಲ್ಲವೂ 'ಮೋಹ'ಮಯವಾಗಿರುವುದು. ಈ 'ಮೋಹ'ವೇ ಪೂರ್ವದಲ್ಲಿ 'ಮೋಹ'ವಾಗಿತ್ತು. ಬ್ರಹ್ಮಾಂಡ ಸೃಷ್ಟಿಯಲ್ಲಿ 'ಮೋಹ'ವೇ ಮುಖ್ಯ ಹೇತುವಾದುದರಿಂದ ಮಾನವ ಪ್ರಕೃತಿಯಲ್ಲಿ 'ಮೋಹ'ವೇ ಸರ್ವರೋಗಗಳಿಗೂ ಮೂಲಕಾರಣವಾಯಿತು.

"ಕೃಷ್ಣವೈದ್ಯರನ್ನು ಬಲಾತ್ಕಾರದಿಂದ ಅಡಿಗೆ ಮಾಡುವುದಕ್ಕೆ ಹಿಡಿದುದು ನಮ್ಮ ತಪ್ಪಾಗ ಬಹುದೇ?" ಎಂದು 'ಹೆಡ್ ಮುನಿಶಿ' ವೈಕುಂಠ ವ್ಯಾಸಾಚಾರ್ಯರು ಅಮಲ್ದಾರರೊಡನೆ ಚರ್ಚಿಸಿದರು. ಅದು ತಪ್ಪಲ್ಲವೆಂದು ಅಮಲ್ದಾರರು ಆಧಾರ ಕೊಟ್ಟು ಹೇಳಿದರು. "ವಿರಾಟರಾಯನು ಭೀಮಸೇನನನ್ನು ಅಡಿಗೆಗೆ ನಿಲ್ಲಿಸಿರಲಿಲ್ಲವೇ? ನಳ ಚಕ್ರವರ್ತಿ ಸ್ವಯಂ ಪಾಕ ಮಾಡಲಿಲ್ಲವೇ? ಶ್ರೀ ಕೃಷ್ಣದೇವರು ಮೋಹಿನಿ ರೂಪದಿಂದ ದೇವಾಸುರರಿಗೆ ಅಮೃತವನ್ನು ಬಡಿಸಿರಲಿಲ್ಲವೇ?' ಎಂದು ಅಮಲ್ದಾರರು ತಮ್ಮ 'ಪೀನಲ್ ಕೋಡಿನಿಂದ' ಆಧಾರಗಳನ್ನು ಕೊಟ್ಟು, ತಮ್ಮ ಕಾರ್ಯವನ್ನು ಭದ್ರಪಡಿಸಿದರು. ಇತ್ತ ಕೃಷ್ಣವೈದ್ಯರು ಉಪಾಯವಿಲ್ಲದೆ ಅಡಿಗೆ ಮಾಡತೊಡಗಿದರು. ಜಾತ್ರೆ ಹೋಗಿ, ಪಾತ್ರೆ ಎತ್ತಬೇಕಾಯಿತು. ಹೇಗೂ ಹೊತ್ತು ಮುಳುಗುವುದರೊಳಗೆ ಅಡಿಗೆ ಸಿದ್ಧವಾಗದೆ ಹೋಗಲಿಲ್ಲ. ಅಮಲ್ದಾರರು ಸ್ನಾನ ಮಾಡಿ ಊಟಕ್ಕೆ ಕೂತುಕೊಳ್ಳುವುದಕ್ಕೆ ಬಂದರು. ಊಟಕ್ಕೆ ಬರುವ ಮೊದಲು ಉಲ್ಲಾಸದಿಂದ–

"ಮುದದಿ ತಾ ಚೆಲುವಾಗಿ ಅಡಿಗೆಮಾಡುವಳು"

ಎಂದು ನಿತ್ಯವೂ ದಾಸರ ಪದದ ಸೊಲ್ಲು ಹಾಡುವ ಅಭ್ಯಾಸ. ಅದರಂತೆ ಈ ಹೊತ್ತೂ ಅದನ್ನೇ ಹಾಡಿದರು. ಒಡನೆ ಅಡಿಗೆಯವನ ಮುಖವನ್ನು ನೋಡಿ, ತನ್ನ ಹಾಡು ಈ ಹೊತ್ತು ಅನುಚಿತವಾಯಿತೆಂದು ವ್ಯಸನರಾದರು.

ಎರಡು ದಿನಗಳು ನಿಲ್ಲದೆಯೆ ಕಳೆದುವು. ವಲ್ಲಭಾಚಾರ್ಯರ 'ಜಮಾಬಂದಿಯ' ಕೆಲಸವೇನೂ ಮುಗಿಯಲಿಲ್ಲ. ಪಟೇಲ ಪದ್ಮರಾಜನಿಗೆ ಮತ್ತೊಬ್ಬ ಅಡಿಗೆಯವನು ಇನ್ನೂ ಸಿಕ್ಕಲಿಲ್ಲ. ಅದು ಕಾರಣದಿಂದ ಹುದ್ದೇದಾರರು ಇದ್ದಷ್ಟು ದಿನ ವೈದ್ಯರು ಒಲೆಯ ಬಳಿ ಹೇಗಸಿನಂತೆ ಬೇಯಬೇಕಾಯಿತು. ಮೂರನೆಯ ದಿನ ಮಧ್ಯಾಹ್ನದಲ್ಲಿ ಕೃಷ್ಣವೈದ್ಯರು ಯಾವುದನ್ನೋ ನೆನೆಸುತ್ತ ಕುಳಿತಿದ್ದರು. ಅಮಲ್ದಾರು ಮನೆಯ ಇನ್ನೊಂದು ಕೊಟಡಿಯಲ್ಲಿ ಇದ್ದರು. ವೈದ್ಯರು ತುಟಿಯೊಳಗೆ ನಗುತ್ತಿದ್ದರು. ಒಲೆಯನ್ನು ಬೀಸಿ ಮೀನನ್ನು ಎದುರುನೋಡುತಿದ್ದ ಅಂಬಿಗನ ಮೋರೆಯಲ್ಲಿ ತೋರುವ ನಗುವು ವೈದ್ಯರ ಮುಖದಲ್ಲಿ ಮೊನೆಯೂರಿತ್ತು. ವೈದ್ಯರು ಏನೋ ಉಪಾಯವನ್ನು ಕಂಡು ಹಿಡಿದು ಜಾತ್ರೆಗೆ ತೆರಳಬೇಕೆಂದು ಉಕ್ಕುತ್ತಿದ್ದರು. ಹಗೆಯವನು ವೈದ್ಯನೊಡನೆ ಮದ್ದು ಕೇಳಲು ಬಂದರೆ, ವೈದ್ಯನು ಮನಸ್ಸಿನಲ್ಲಿ ಯಾವ ಪ್ರಕಾರ ಉಲ್ಲಾಸಗೊಳ್ಳುವನೋ, ಆ ಪ್ರಕಾರದಲ್ಲಿ ಕೃಷ್ಣವೈದ್ಯರು ಮನಸ್ಸಿನಲ್ಲಿ ಉಕ್ಕುತ್ತಿದ್ದರು.

ಅಷ್ಟರಲ್ಲಿ ಯಾರೋ ಒಬ್ಬನು ಬಂದು "ಎಲಾ! ಬಾ! ಬಾಬಾ! ಏಳೇಳು!" ಎಂದು ಗಾಬರಿಗೊಳ್ಳುವಂತೆ ಹೇಳಿದನು. ಕೃಷ್ಣವೈದ್ಯರು ಸಾವಧಾನ ಚಿತ್ತರಾಗಿ, "ಏನು ಸಂಗ್ತಿ? ಅವಸರ ಮಾಡ್ತಿ ಯಾಕೆ?" ಎಂದು ಪ್ರಶ್ನೆ ಮಾಡಿದರು.

ಬಂದವ:–"ಅಯ್ಯೊ! ಬೇಗ ಏಳು! ಅಮಲ್ದಾರರು ಅಯ್ಯೋ! ಅಮಲ್ದಾರರು-"

ವೈದ್ಯ:—"ಏನ್ ಸತ್ತರೇ?"

ಬಂದವ:–"ಪ್ರಾಣಾಂತಿಕ, ನೀನು ಬಾರದೆ ಆಗದು."

ವೈದ್ಯರು ಸ್ವಲ್ಪ ಅಸಮಾಧಾನಗೊಂಡು, "ನಾನು ಕಾಯಂ ಅಡಿಗೆಯ ಭಟ್ಟನಲ್ಲ. ನಾನು ಹೆಣ ಹೊರಲಾರೆ" ಎಂದು ಹೇಳಿಬಿಟ್ಟರು.

ಬಂದವ:–"ಏನು ಹರಟುವೆ ನೀನು? ಅಮಲ್ದಾರರು ನಿನ್ನನ್ನು ಕರಕೊಂಡು ಬರಬೇಕೆಂದು ಹೇಳಿದ್ದಾರೆ. ಬಾ! ಬಾ!"

ಬಂದವನ ಆಶೆಯ ಪ್ರಕಾರ ಕೃಷ್ಣವೈದ್ಯರು ಕೊಟಡಿಗೆ ಹೋದರು. ವಲ್ಲಭಾಚಾರ್ಯರು ನೆಲದ ಮೇಲೆ ಹೊರಳಾಡುತ್ತಿದ್ದರು. ಮೋರೆಯು ನೋವಿನಿಂದ ತಿರುಪಿದಂತಿತ್ತು. ಅಮಲ್ದಾರರು ವೈದ್ಯರನ್ನು ನೋಡಿ "ಅಯ್ಯೊ! ಸತ್ತೆ! ಏ ದೇವ್ರೆ! ಸತ್ತೆ!" ಎಂದು ಗೋಳಿಡುತ್ತಿದ್ದರು.

ವೈದ್ಯರು:–"ರಾಯ್ರೆ! ಏನ್ ಬೇಕು? ಬೆಳಗಿನ ಕೇಶರಾನ್ನ ಇಷ್ಟು ತರಲೇ?" ಎಂದು ಕೈಮುಗಿದು ಬಿನ್ನವಿಸಿದರು.

ಅಮಲ್ದಾರರು:– "ಕೇಶರಾನ್ನ? ಕೇಶರಾನ್ನ ಸುಡು! ನನಗೆ ಒಂದು ಔಷಧ ಕೊಡು, ಮಹಾರಾಯ!" ಎಂದು ಹೇಳುತ್ತ, "ಹೊಟ್ಟೆನೋವು – ಅಯ್ಯೊಯ್ಯೋ! ಉದರ ಶೂಲೆ–ಏನೂ ತಾಳಲಾರೆ" ಎಂದು ತನ್ನ ಅವಸ್ಥೆಯನ್ನು ಒಪ್ಪಿಸಿದರು.

ವೈದ್ಯ:– ನಾನು ವೈದ್ಯನಲ್ಲ, ಮಹಾಸ್ವಾಮಿ! ನಾನು ಅಡಿಗೆಯವ, ಖಾವಂದರಿಗೆ ವೇದ್ಯವಾಗಿದೆ."

ಅಮಲ್ದಾರರು ಹೊರಳುತ್ತ ತೆವಳುತ್ತ "ನೀನು ಮದ್ದು ಕೊಡೋದಿಲ್ಲವಾದ್ರೆ, ಈಗ ಕೋಳಾ ಹಾಕಿಸುವೆ."

ವೈದ್ಯರು ತಲೆಯಲ್ಲಾಡಿಸಿದರು. "ನನ್ನನ್ನು ಅಡಿಗೆಯವನೆಂದು ಇಲ್ಲಿ ಹಿಡಿದಿರುವರು" ಎಂದು ಮೆಲ್ಲನೆ ಹೇಳಿದರು.

"ಅಯ್ಯೊಯ್ಯೊ! ನಾನು ಸಾಯ್ತೇನೆ! ಏನಾದ್ರೂ ಮದ್ದು ಕೊಡು! ಒಂದು ಔಷಧ ಕೊಡು" ಎಂದು ಅಮಲ್ದಾರರು

ಹೊರಳಾಡಿದರು.

ವೈದ್ಯ:—"ನನ್ನ ಬಳಿ ಒಂದು ಮದ್ದುಂಟು. ಖರ್ಚು ಹೆಚ್ಚು ಬೀಳುತ್ತೆ. ಹಣಕೊಡದೆ ಮಾತ್ರ ಸಿಕ್ಕಲಾರದು?

ಅಮಲ್ದಾರ:—"ಇಕೊ!೨೫ರೂಪಾಯಿ ಕೊಡ್ತೇನೆ. ಬೇಗ ಮದ್ದು ಕೊಡು. ಅಯ್ಯೊಯ್ಯೊ! ಓ! ವೈಕುಂಠವಾಸ! ವೈಕುಂಠವಾಸ!"

ಕೃಷ್ಣವೈದ್ಯರು ಸಮೀಪಕ್ಕೆ ಬಂದು "ಮದ್ದು ಪ್ರಾರಂಭಿಸುವ ವೇಳೆಯಲ್ಲಿ ರೋಗಿಗಳು ವೈಕುಂಠವಾಸದ ನೆನಪನ್ನು ಮಾಡಬಾರದು" ಎಂದು ಮೆಲ್ಲನೆ ಸೂಚಿಸಿದರು.

ಅಮಲ್ದಾರರು ವೈಕುಂಠವ್ಯಾಸಾಚಾರ್ಯರನ್ನು ಕೂಗಿ ಕರೆದಿದ್ದರು. ವ್ಯಾಸಾಚಾರ್ಯರು ಸಮೀಪದಲ್ಲಿ ಇದ್ದಿರಲಿಲ್ಲ.

ವೈದ್ಯ:—"ರಾಯರೇ! ನನ್ನ ಔಷಧ ಕಹಿ ಎಂದು ಬೇಸರ ಮಾಡಬಾರದು. ಈ ಒಂದು ಮಾತ್ರೆ ಕೊಟ್ಟು ನಾಳೆಗೆನೇ ಶ್ರೀಕಾಂತ ಜಾತ್ರೆಗೆ ಹೋಗುವ ಹಾಗೆ ಮಾಡುವೆ —ಬಲ್ರೋ?"

ಅಮಲ್ದಾರರಿಗೆ ಈ ಮಾತು ತಾನೇ ರುಚಿಸಲಿಲ್ಲ.

ವೈದ್ಯರು ತಮ್ಮ ಕಂತೆಯೊಳಗಿಂದ ಔಷಧವನ್ನು ತೆಗೆದು ರೋಗಿಯ ನಾಡಿಯನ್ನು ಹಿಡಿದು" ಈ ರೋಗವು ಮೇಹೋದರ ಶೂಲೆ" ಎಂದರು.

ಅಮಲ್ದಾರರು ನಿರಾಶೆಯಿಂದ "ಮೇಹೋದರವೊ? ಮಹೋದರವೊ? ಇದರಲ್ಲಿ ಜನಗಳು ಬದುಕುತ್ತಾರೋ?" ಎಂದು ಕೇಳಿದರು.

ವೈದ್ಯ:—ಅಪಾಯವುಂಟು. ಶೇಕಡಾ ಒಂದ್ರಂತೆ ಬದುಕುತ್ತಾರೆ. ಇದು ಮೇಹೋದರವೇ."

ಅಮಲ್ದಾರ:—"ವೈದ್ಯರೇ! ಇದು ಯಾವದ್ರಿಂದ ಉಂಟಾಯಿತು?"

ವೈದ್ಯ:—"ಕಾಯಿ ಕಿಚಡಿ ತಿಂದ್ರೆ ಉಂಟಾಗುತ್ತೆ. ದುಡ್ಡು ತಿಂದ್ರೆ ಜೀರ್ಣಕ್ಕೆ ಬಾರದೆ ಉಂಟಾಗುತ್ತೆ" ಎಂದು ತನ್ನೊಳಗೇನೆ ಹೇಳಿದರು.

ಅಮಲ್ದಾರರು ಈ ವಿಧವಾಗಿ ಅವಸ್ಥೆ ಪಡುತ್ತಿರುವಾಗ ಪಟೇಲನು ಬಂದು "ಬೇಗ ಬನ್ನಿ! ಏಳಿ! ಏಳಿ! ವೈಕುಂಠ ವ್ಯಾಸಾಚಾರ್ಯರಿಗೆ ಕಾಹಿಲೆ;ಪ್ರಾಣಾಂತಿಕ ಕಾಹಿಲೆ"ಎಂದು ಅವಸರಗೊಂಡನು.

ಕೃಷ್ಣವೈದ್ಯರು ವ್ಯಾಸಾಚಾರ್ಯರ ಹತ್ತಿರಕ್ಕೆ ಬಂದು "ಏನಯ್ಯಾ! ನಮಗೆ ಯಾಕೆ ತೊಂದರೆ ಕೊಡುತ್ತೀರಿ?" ಎಂದರು.

ವ್ಯಾಸಾಚಾರ್ಯರು ಚಾಪೆಯ ಮೇಲೆ ಹೊರಳಾಡುತಿದ್ದರು. ಅವರು ವೈದ್ಯರನ್ನು ನೋಡಿ "ಒಂದಿಷ್ಟು ಮದ್ದು ಕೊಡಿ! ಸಾಯ್ತೇನೆ" ಎಂದರು.

ವೈದ್ಯ:—ಹಾಗಾದ್ರೆ ಔಷಧ ಯಾಕೆ? ಕೆಡುವ ಕಾಲಕ್ಕೆ ಬುದ್ಧಿ ಇಲ್ಲ. ಮರಣ ಕಾಲಕ್ಕೆ ಮದ್ದು ಇಲ್ಲ-ಎಂದು ಗೊತ್ತಿಲ್ಲವೆ?

ವ್ಯಾಸಾಚಾರ್ಯ:—"ಅಕಟಾ! ನಿಮ್ಮ ಮಾತು ಬೇಡ! ಒಂದು ಔಷಧ ಕೊಡಿ."

ವೈದ್ಯ:— ಇದ್ದದ್ದು ಹೋಯಿತು ಮದ್ದಿನ ಗುಣ ಎಂದಾದೀತು. ನಿಮಗೆ ಮುಗ್ಗಿ ಬರುವುದೇ?"

ವ್ಯಾಸಾಚಾರ್ಯ:—ಇಲ್ಲಪ್ಪಾ ಇಲ್ಲಾ!"

ವೈದ್ಯ:—"ಮುಗ್ಗಿ ಬಾರದವನಿಗೆ ನುಗ್ಗೆಕಾಯಿ ಮದ್ದೇ? ಎಂಬ ಗಾದೆಯುಂಟು. ನುಗ್ಗೆಕಾಯಿ ಆಗೋದಿಲ್ಲ. ನಿಮ್ಮ ನಾಡಿ ನೋಡ್ತೇನೆ. ನಾಡಿ ನೋಡದೆ ಮದ್ದು ಕೊಟ್ಟರೆ, ಕಾಡು ರೋಗ ಬರುವುದೆಂದು ಗಾದೆ ಇದೆ."

ವ್ಯಾಸಾಚಾರ್ಯ:—"ನಿಮ್ಮ ಗಾದೆ ಸಾಕುಮಾಡಿ!"

ವೈದ್ಯರು "ಮದ್ದು ಕೊಟ್ಟರೆ ಎದ್ದು ನಿಲ್ಲಬೇಕು" ಎಂದು ಹೇಳಿ ಕಂತೆಯಿಂದ ಔಷಧ ಕೊಟ್ಟರು.

ಎರಡು ದಿನಗಳ ವರೆಗೆ ಅಮಲ್ದಾರರೂ ವ್ಯಾಸಾಚಾರ್ಯರೂ ಕಾಹಿಲೆಯಿಂದ ಬಹಳ ಬೇಸತ್ತರು. ವೈದ್ಯರ ಕಹಿಮದ್ದಿನಿಂದಲೂ ಗಂಜಿನೀರಿಂದಲೂ ಇಬ್ಬರ ನಾಲಿಗೆಯೂ ರುಚಿ ಕೆಟ್ಟುಹೋಯಿತು. ನಡುನಡುವೆ ವೈದ್ಯರು ಇಬ್ಬರ ಹಾಸಿಗೆಯ ಬಳಿಗೆ ಬಂದು, "ಜನಗಳನ್ನು ಬಿಟ್ಟಿಗೆ ಹಿಡಿದರೆ ಉಂಟಾಗುವ ಫಲವನ್ನು ಕುರಿತು" ಸಣ್ಣ ಕತೆಗಳನ್ನು ಹೇಳಿ ಉಲ್ಲಾಸಗೊಳಿಸುತ್ತಿದ್ದರು. ನಾಲ್ಕನೆಯ ದಿನ ಇಬ್ಬರೂ ಪೂರ್ಣ ಗುಣಹೊಂದಿದ್ದರು.

ಕೃಷ್ಣವೈದ್ಯರು ಇಬ್ಬರ ಅಪ್ಪಣೆಯನ್ನು ಹೊಂದಿ ಶ್ರೀಕಾಂತ ಜಾತ್ರೆಗೆ ಹೊರಟರು. ಹಾದಿಯಲ್ಲಿ ಪಟೇಲ ಪದ್ಮರಾಜನು ಅವರ ಬಳಿಗೆ ಬಂದು "ಹುದ್ದೇದಾರರಿಗೆ ಈ ಅವಸ್ಥೆ ಆಗಲಿಕ್ಕೆ ಕಾರಣವೇನು?" ಎಂದು ಕೇಳಿದನು.

ವೈದ್ಯ:—"ಔಷಧಕಾರರನ್ನು ಅಡಿಗೆಗೆ ಹಿಡಿದದ್ದರಿಂದ"

ಪಟೇಲ:—"ಅದು ಹ್ಯಾಗೆ?"

ವೈದ್ಯ:—"ನನಗೆ ಅಡಿಗೆಯ ಅನುಭವ ಅಷ್ಟಿಲ್ಲ. ಹಿಂಗಿನ ಒಗ್ಗರಣೆ ಹಾಕಲಿಕ್ಕೆ ಮರೆತು, ಮಣಿಮಂತ ಚೂರ್ಣವನ್ನು ಬೆರೆಸಿಬಿಟ್ಟೆ." ಹೀಗೆಂದು ಹೇಳಿ ಕೃಷ್ಣವೈದ್ಯರು ಶ್ರೀಕಾಂತ ಜಾತ್ರೆಯ ಹಾದಿ ಹಿಡಿದರು.

---

# ಹಲ್ಲಿ

ನಮ್ಮ ಮನೆಗೆ ದಿನಂಪ್ರತಿ ಬರುವ ಸ್ನೇಹಿತರಲ್ಲಿ ಹಲ್ಲಿಯು ಒಂದು. ಇರುಳು ನಾನು ಬೆಳಕನ್ನು ಇಟ್ಟು ಓದಲು ಕುಳ್ಳಿರುವಾಗ, ಹಲ್ಲಿಯು ಪ್ರತಿ ರಾತ್ರಿ ನನ್ನ ಭೇಟಿಗೆ ಬಾರದೆ ಇರುವುದಿಲ್ಲ. ಹಲ್ಲಿಗಳಿಗೆ ಮನೆಗಳೆಂದರೆ ಪ್ರೀತಿ. ಅವು ಪೂರ್ವಕಾಲದ ಸೇವಕರಂತೆ ಒಂದು ಮನೆಯಲ್ಲಿ ನಿಂತರೆ, ಅದನ್ನು ಬಿಟ್ಟು ಹೋಗುವುದಿಲ್ಲ. ಆದ್ದರಿಂದಲೇ ಇದನ್ನು ಸಂಸ್ಕೃತದಲ್ಲಿ 'ಗ್ರಹಗೋಧಿಕೆ' ಎಂದು ಕರೆಯುವರು. ಹಲ್ಲಿಯು ದೊಡ್ಡ ಮನೆತನಕ್ಕೆ ಸೇರಿದ್ದು. ಮೊಸಳೆ, ಉಡು ಮತ್ತು ಹಲ್ಲಿ ಅಕ್ಕತಂಗಿಯರು. ಇವು ಮನೆಮಾಡಿಕೊಳ್ಳಲು ಎಲ್ಲವನ್ನು ಒದಗಿಸಿಕೊಂಡು ಮೊಸಳೆಯು ನೀರು ತರುವುದಕ್ಕೆ ಕಡಲಿಗೂ, ಉಡು ಕಟ್ಟಿಗೆ ಕಡಿಯುವುದಕ್ಕೆ ಕಾಡಿಗೂ, ಹಲ್ಲಿಯು ಬೆಂಕಿ ಉರಿಸುವುದಕ್ಕೆ ನಾಡಿಗೂ ಹೋದುವಂತೆ. ಅಷ್ಟರೊಳಗೆ ಕಲಿಕಾಲವು ಕಾಲು ಹಾಕಿದ್ದರಿಂದ, ಹೋದವರು ಅಲ್ಲಲ್ಲೆ ಉಳಕೊಳ್ಳಬೇಕಾಯಿತೆಂದು ನಮ್ಮ ಮುದಿ ಹೆಂಗಸರು ಆಡಿಕೊಳ್ಳುವುದುಂಟು. ಕಂಡವರ ನೆತ್ತರನ್ನು ಹೀರಿಕೊಳ್ಳುವಂತೆ, ಜನಗಳನ್ನು ನೋಡುತ್ತಲೇ ತಲೆ ಎತ್ತಿ ಕೆಂಪೇರುವ ಓತಿಯು, ಅತ್ತಿತ್ತ ಅಡ್ಡಾಡುವ ಹಾವುರಾಣಿಯು-ಇವುಗಳಿಗೆ ದೂರದ ತಮ್ಮಂದಿರಾಗಬೇಕು. ಮನೆತನದ ಆಸ್ತಿಯೆಲ್ಲಾ ಹೆಣ್ಣುಮಕ್ಕಳ ಪಾಲಾದ್ದರಿಂದ, ಈ ಓತಿಯು ಹಿತ್ತಲಿಂದ ಹಿತ್ತಲಿಗೆ ಓಡಾಡುತ್ತ ಕಂಡವರು ಎಸೆದ ಕಲ್ಲುಗಳಿಗೆ ತಲೆ ಕೊಟ್ಟು ಸಾಯುತ್ತಿದೆ.

ಹಲ್ಲಿಯ ವಿಷಯವಾಗಿ ಹುಡುಗರು ಇಂಥಾ ಅತ್ಯಾಚಾರವನ್ನು ನಡಿಸುವುದಿಲ್ಲ. ನಮ್ಮ ಪೂರ್ವಿಕರು ಹಲ್ಲಿಯನ್ನು ಜೋಯಿಸನೆಂದು ಭಾವಿಸುತ್ತಿದ್ದರು. ಗೌಳಿಯ ಚರ್ಯೆ ಚೇಷ್ಟೆಗಳನ್ನು ನೋಡಿ ತಮ್ಮ ಕಾರ್ಯಗಳನ್ನು ಕೈಕೊಳ್ಳುತ್ತಿದ್ದರು. ಪಯಣ ಹೊರಡುವಾಗ ಹಲ್ಲಿಯು ಚೀರಿದರೆ ಪಯಣವನ್ನು ನಿಲ್ಲಿಸಿಬಿಡುವರು. ಗಂಡಸಿನ ತಲೆಯ ಮೇಲೆ ಬಿದ್ದರೆ ಮರಣವು ಸಿದ್ಧ; ಹೆಂಗಸಿನ ಹೆಗಲ ಮೇಲೆ ಬಿದ್ದರೆ, ಬೊಟ್ಟಿನ ಕುಂಕುಮ ಉಳಿಯದು. ಇವನ್ನೆಲ್ಲಾ ಹೇಳಿತೀರದು. ಹಲ್ಲಿ ಶಕುನ ಎಂಬ ಹೆಸರಿನ ಅನೇಕ ಪುಸ್ತಕಗಳು ಹಲ್ಲಿಯ ಮಹಾತ್ಮೆಯನ್ನೂ ಅದರ ಮೇಲೆ ಜನಗಳಿಗಿರುವ ಮೂಢ ವಿಶ್ವಾಸಗಳನ್ನೂ ತೋರಿಸುತ್ತವೆ. ಬೇಕಾದವರು ಅಂಥ ಪುಸ್ತಕಗಳನ್ನು ಓದಿ ಓದಿ ತಲೆ ಮರುಳುಮಾಡಿಕೊಳ್ಳಬಹುದು.

ಹಿಂದುಗಳು ಹಲ್ಲಿಯನ್ನು ಇಂಥಾ ಮೂಢಭಕ್ತಿಯಿಂದ ದುರ್ಗಾದೇವಿಯಂತೆ ಭಾವಿಸಿದರೂ, ದುರ್ಗೆಯಂತೆ ಇದಕ್ಕೆ ಎಂಟು ಕೈಗಳೂ ಇಲ್ಲ; ಭೀಕರ ಮುಖವೂ ಇಲ್ಲ. ಆದರೂ ಹಲ್ಲಿಯು ತನ್ನ ನಾಲ್ಕು ಕಾಲುಗಳಿಂದ ನಯವಾದ ಗೋಡೆಯನ್ನು ಹ್ಯಾಗೆ ಹತ್ತುತ್ತದೆಂಬುದು ಆಶ್ಚರ್ಯವಾಗಿದೆ. ಸಾವಿರ ವರ್ಷ ಗರಡೀ ಸಾಧಕ ಮಾಡಿದ ಜಟ್ಟಿಯು ಮನೆ ಅಜ್ಜಿಯ ಸೊಂಟ ಮುರಿದಾನಲ್ಲದೆ ಇಂಥಾ ಅಸಾಧ್ಯ ಕೃತ್ಯವನ್ನು ಮಾಡಲಾರನು. ಇದರ ಗುಟ್ಟನ್ನು ಅರಿಯ ಬೇಕೆಂದಿರುವವರು ಹಲ್ಲಿಯ ಕಾಲುಹಿಡಿಯಬೇಕು; ಆಗ ತಾನೆ ತಿಳಿದೀತು. ಆದರೆ ಹಲ್ಲಿಯು ನಮ್ಮ ಕುಲ ಸ್ತ್ರೀಯಂತೆ ಮಂದಮತಿಯಲ್ಲ, ಅದರ ಕಾಲುಗಳನ್ನು ಹಿಡಿಯಲು ಯತ್ನಿಸುವಾಗ, ನಿಮ್ಮ ಗುರಿ ತಪ್ಪಿ ಅದರ ಕಾಲು ಸಿಗದೆ ಬಾಲಕ್ಕೆ ಕೈ ಬೀಳುವುದು. ಜೀವದಾಸೆಯಿಂದ ಓಡುವ ತುರುಕನು ತಲೆಯ ಟೊಪ್ಪಿ ಕೊಟ್ಟು ಮೈ ತಪ್ಪಿಸಿಕೊಳ್ಳುವಂತೆ, ಹಲ್ಲಿಯ ಬಾಲವನ್ನು ನಮ್ಮ ಕೈಯಲ್ಲಿ ಬಿಟ್ಟು ಜೀವ ಕಟ್ಟಿಕೊಂಡು ಓಡುವುದು. ಕಾಲುಗಳನ್ನು ಹಿಡಿದು ನೋಡಿದರೆ ಒಂದೊಂದು ಕಾಲಿನಲ್ಲಿ ಐದೈದು ಕಿರಿ ಬೆರಳುಗಳು ಕಾಣಿಸುತ್ತವೆ. ಈ ಚಿಕ್ಕ ಬೆರಳುಗಳ ತುದಿಗಳಲ್ಲಿ ಮೊನಚಾದ ಕೂರುಗುರುಗಳಿವೆ. ಈ ಉಗುರುಗಳನ್ನು ಹಲ್ಲಿಯು ಬೆಕ್ಕಿನಂತೆ ಪಾದದ ಒಳಗೆ ಎಳೆದುಕೊಳ್ಳಬಹುದು. ಉಗುರುಗಳ ತುದಿಗಳು ಬಲೂ ಹದವಾಗಿಯೂ ಮೊನಚಾಗಿಯೂ ತೆಳುವಾಗಿಯೂ ಇರುವುದರಿಂದ ನಮ್ಮ ಕಣ್ಣಿಗೆ ಅತಿ ನುಣುಪಾಗಿ ತೋರುವ ಸುಣ್ಣ ಬಳಿದ ಗೋಡೆಯಾದರೂ ಸಾವಿರಾರು ಚಿಕ್ಕ ಚಿಕ್ಕ ಹೊಂಡಗಳಿರುವ ಅಂಗಳದಂತೆ ಕರಕಲಾಗಿದ್ದು, ಉಗುರುಗಳಿಂದ ಒತ್ತಿಹಿಡಿಯುವುದಕ್ಕೆ ಅವಕಾಶವನ್ನು ಕೊಡುವುದು. ಒಂದು ವೇಳೆ ಕಾಲುಜಾರಿದರೆ, ಕೆಳಕ್ಕೆ ಬೀಳದಹಾಗೆ ಗೋಡೆಯನ್ನು ಅಂಟಿಕೊಳ್ಳಲು ಹಲ್ಲಿಯು ಇನ್ನೊಂದು ಉಪಾಯವನ್ನು ಮಾಡುತ್ತಿದೆ. ಮಕ್ಕಳು ಪಂಚಪಾತ್ರೆಯನ್ನು ಬಾಯಿಯ ಬಳಿಯಲ್ಲಿ ಅಮುಕಿ ಹಿಡಿದು ಒಳಗಿನ ಗಾಳಿಯನ್ನು ಸೇದಿಕೊಂಡು ಪಾತ್ರೆಯನ್ನು ಬಿಗಿ ಹಿಡಿದು ಆಡುವುದನ್ನು ನಾವು ನೋಡುತ್ತೇವೆ. ಕರಡೆಯೊಳಗಿನ ಗಾಳಿಯನ್ನು ಯಂತ್ರದ ಮೂಲಕವಾಗಿ ಪೂರಾತೆಗೆದು ಬಿಟ್ಟರೆ, ಮುಚ್ಚಳವನ್ನು ತೆಗೆಯ ಬೇಕಾದರೆ, ಹಲವು ಜನಗಳು ಇಕ್ಕಡೆಯಿಂದ ಎಳೆದರೂ ಕರಡಿಗೆಯು ಬಾಯಿ ಬಿಡಲಾರದು. ಹಲ್ಲಿಗೆ ಪಾದದ ಕೆಳಕ್ಕೆ ಸಿಂಬಿಯಂತಿದೆ. ಹಲ್ಲಿಯು ಈ ದುಂಡಗಾದ ಸಿಂಬಿಯನ್ನು ಗೋಡೆಗೆ ಒತ್ತಿಟ್ಟು ಅದರ ಕೇಂದ್ರವನ್ನು ಮೇಲಕ್ಕೆ ಎಳೆದು ಬಿಡುತ್ತಲೆ, ಗೋಡೆಗೂ ಸಿಂಬಿಗೂ ನಡುವಿನಲ್ಲಿದ್ದ ಗಾಳಿಯು ಹೋಗಿ ಬಿಡುತ್ತದೆ. ಆಗ ಸಿಂಬಿಯು, ಮಗುವಿನ ಮೋರೆಯಲ್ಲಿ ಪಂಚಪಾತ್ರೆಯು ಅಂಟಿಕೊಳ್ಳುವಂತೆ, ಗೋಡೆಯನ್ನು ಬಿಗಿ

ಹಿಡಿಯುತ್ತದೆ. ಮಗುವು ಒಳಗಿನಿಂದ ಉಸಿರು ಬಿಡುತ್ತಲೇ ಪಾತ್ರೆಯು ಬೀಳುವಹಾಗೆ ಹಲ್ಲಿಯು ಸಿಂಬಿಯ ಕೇಂದ್ರವನ್ನು ತನಗೆ ಬೇಕಾದಾಗ ಸಡಲಿಸಿ ಬಿಟ್ಟು ಮುಂದರಿಸುತ್ತದೆ. ಓಡುವಾಗ ಕಾಲುಗಳ ಹಿಡಿತಕ್ಕೆ ಅನುಕೂಲವಾಗುವಂತೆ ಮೈಯನ್ನು ತಿರುವುಮುರುವು ಮಾಡಿ ಸರಾಗವಾಗಿ ಹೋಗುತ್ತದೆ. ಚುಕ್ಕಾಣಿಯು ದೋಣಿಯನ್ನು ಬೇಕಾದ ಕಡೆಗೆ ತಿರುಗಿಸುವಂತೆ ಬಾಲವು ಹಲ್ಲಿಗೆ ಓಡಾಟದಲ್ಲಿ ಸಹಾಯವಾಗುತ್ತದೆ.

ಹಲ್ಲಿಯ ಆಟವನ್ನು ಇರುಳು ನೋಡಬೇಕು. ಅದು ನಮ್ಮ ನಾಟಕದ ವೇಷಗಾರರಂತೆ ಹಗಲೆಲ್ಲ ಕತ್ತಲು ಮೂಲೆಯಲ್ಲಿ ಅವಿತುಕೊಂಡು ನಿದ್ದೆ ಮಾಡಿ, ದೀಪ ಹಚ್ಚುತ್ತಲೇ ರಂಗಭೂಮಿಗೆ ಇಳಿಯುತ್ತದೆ. ಶಲಭವಧೆಯಲ್ಲಿ ಮುಖ್ಯ ಪಾತ್ರವು ಮುಸಲಿಯೆ. ವೊತ್ತವೊದಲು ಮುಸಲಿಯು ಧ್ಯಾನಾರೂಢನಾದಂತೆ ನಿಶ್ಚಲಿತವಾಗಿದ್ದು ಸುತ್ತಲೂ ಹರಿದು ಹಾರಿ ಪ್ರಪಂಚಕ್ಕೆ ಬಾಧೆಯನ್ನುಂಟುಮಾಡುವ ಸಾವಿರಾರು ಶಲಭಾಸುರರನ್ನು ತಲೆಯಲ್ಲಿ ಕೆತ್ತಿದಂತಿರುವ ದೊಡ್ಡದಾದ ಅಲುಗು ಕಣ್ಣುಗಳಿಂದ ಹೊಂಚಿ ನೋಡುವುದು. ಮುಸಲಿಗೆ ನಮ್ಮ ಹಾಗೆ ಕಿವಿಯಿಲ್ಲದಿದ್ದರೂ, ಕಣ್ಣುಗಳ ಹಿಂದುಗಡೆಯಲ್ಲಿ ಎರಡು ರಂಧ್ರಗಳಿವೆ. ಇವುಗಳ ಮೂಲಕವಾಗಿ ಹಲ್ಲಿಗೆ ತುಸು ಸದ್ದಾದರೂ ಕೇಳಿಸುತ್ತದೆ. ಕೂಡಲೇ ಮುಸಲಿಯು ಕತ್ತನ್ನು ನೀಡಿ ಕಣ್ಣನ್ನು ಕೆರಳಿಸಿ ಬಾಯನ್ನು ಅಗಲಿಸಿ ಬಿರ್ರೆಂದು ಮಂಡಳಿಸುತ್ತಲಿರುವ ಶಲಭಗಳ ಮೇಲೆ ಧೀಂಕಿಟ್ಟು ಅವನ್ನು ಸಂಹಾರಮಾಡುವದು. ಬಳಿಕ ತನ್ನ ತಲೆಗಿಂತಲೂ ಗಾತ್ರವಾಗಿರುವ ಹುಳಗಳನ್ನು ಆದರೂ ತುತ್ತುತುತ್ತಾಗಿ ನುಂಗಿಬಿಡುವುದು.

ಹಲ್ಲಿಯು ಸತ್ತ ಹುಳಗಳನ್ನು ಮುಟ್ಟದು; ಅದು ಕ್ರಿಮಿಕೀಟಗಳನ್ನೇ ಕೊಂದು ತಿನ್ನುವದು. ಈ ಕೃತ್ಯವು ಮಹಾ ಹಿಂಸೆ ಎಂದು ತೋರಬಹುದಾದರೂ, ಹಲ್ಲಿಯು ಹೀಗೆ ಹುಳಗಳನ್ನು ಸಂಹರಿಸದಿದ್ದರೆ, ಕೀಟದ ಕಾಟವು ಮನೆಯಲ್ಲಿ ಎಷ್ಟಾಗುತ್ತಿತ್ತೋ, ಹೇಳಬರುವುದಿಲ್ಲ. ಹಲ್ಲಿಯು ವಿಷಕರ ಜಂತುವೆಂದು ಅದರ ಉಚ್ಛಿಷ್ಟವು ಮರಣಕರವೆಂದೂ ಹೇಳುವ ಮಾತು ಸುಳ್ಳಾಗಿದೆ. ಅದು ಆಕಾರದಲ್ಲಿ ಕುರೂಪಿಯೆಂಬುದೇನೋ ನಿಜ. ಅದರ ಮಸುಕಾದ ಬಣ್ಣ, ವಿಕಾರವಾದ ತಲೆ, ತಣ್ಣಗಾದ ಮೈ, ಇವುಗಳಿಂದ ಹಲ್ಲಿಯು ಜನಗಳಿಗೆ ಅಷ್ಟು ಪ್ರೀತಿಪಾತ್ರವಾಗಿಲ್ಲ. ಅದರಲ್ಲಿ ಒಂದು ದುರ್ಗುಣವಿದೆ. ಹಲ್ಲಿಯು ಸುಮ್ಮನೆ ಬಿದ್ದುಕೊಂಡಿರುವಾಗ ಕೂಡಾ ಏನನ್ನೋ ನುಂಗುವಂತೆ ಬಾಯಿಂದ ಮುಕ್ಕುತ್ತಿರುವ ದುರಭ್ಯಾಸವೂ ಅದಕ್ಕುಂಟು. ಇದರಲ್ಲಿ ವಿಚಿತ್ರವೇನೂ ಇಲ್ಲ. ನಾವು ಉಸಿರು ಸೇದಿಕೊಳ್ಳುವಾಗ ಹೀಗೆಯೆ ಮಾಡುತ್ತೇವೆ. ಹೊರಗಣ ವಾಯುವನ್ನು ನಾವು ಸೊಳ್ಳೆಗಳ ಅಥವಾ ಬಾಯಿಯ ಮೂಲಕ ಸೇದಿಕೊಳ್ಳುತ್ತಲೇ ಗಾಳಿಯು ಒಳಗಿನ ಶ್ವಾಸಕೋಶಗಳಲ್ಲಿ ಸೇರಿ ಎದೆಯು ಉಬ್ಬೇರುತ್ತದೆ. ಗಾಳಿಯನ್ನು ಸೇದಿ ಹೊರಬಿಡುವಾಗ ಎದೆಯು ಮುದುಡಿಕೊಳ್ಳುತ್ತದೆ. ಹಲ್ಲಿಗೆ ಪಕ್ಕೆಲುಬುಗಳು ಇಲ್ಲದಿದ್ದುದರಿಂದ, ನಮ್ಮ ಹಾಗೆ ಪುಪ್ಪುಸಗಳನ್ನು ಉಬ್ಬಿಸಲಾರದೆ ಗಾಳಿಯನ್ನು ಗುಟುಕುಗುಟುಕಾಗಿ ಹೀರುತ್ತದೆ. ಹಲ್ಲಿಯು ಬಾಯಿಯನ್ನು ಮುಚ್ಚಿಕೊಂಡು ಸೊಳ್ಳೆಗಳ ಮೂಲಕವಾಗಿ ಗಾಳಿಯನ್ನು ಸೇದಿಕೊಂಡು ಒಂದೊಂದೇ ಗುಟುಕನ್ನು ಕೆಳಕ್ಕೆ ತಳ್ಳಿಬಿಡುತ್ತದೆ. ಇಷ್ಟು ಪ್ರಯತ್ನ ಪಟ್ಟರೂ ಅದು ಒಳಕೊಳ್ಳುವ ಗಾಳಿಯು ಅದರ ನೆತ್ತರನ್ನು ಬಿಸಿಮಾಡಲು ಸಾಕಾಗುವುದಿಲ್ಲ. ನಮ್ಮ ನೆತ್ತರು ಬೆಚ್ಚಗಿರಲು ನಾವು ಉಸಿರಾಡುವದೇ ಕಾರಣವಾಗಿದೆ. ನಾವು ಎತ್ತರವಾದ ಗುಡ್ಡವನ್ನು ಹತ್ತುವಾಗ ಉಸಿರಾಡುವದು ಹೆಚ್ಚಾಗಿ, ಒಲೆಯ ಮೇಲಿಟ್ಟ ನೀರಿನಂತೆ ಮೈಯ ನೆತ್ತರು ಬೆಚ್ಚನಾಗುವದು. ಹಲ್ಲಿಯು ಎಳಕೊಳ್ಳುವ ಗಾಳಿಯು ಅದರ ಜೀವನಾಧಾರಕ್ಕೆ ಮಾತ್ರ ಸಾಲುವದಲ್ಲದೆ ಅದರ ತಣ್ಣಗಾದ ನೆತ್ತರನ್ನು ಬೆಚ್ಚಗಾಗಿಸಲು ಸಾಕಾಗುವದಿಲ್ಲ.

(ಸತ್ಯದೀಪಿಕೆ)

---

# ಅಮ್ ನಹಿಂ ಗದ್ಧಾ! *

## (ನಾನು ಕತ್ತೆಯಲ್ಲವೆ)

ಕೆಲವು ವರ್ಷಗಳ ಹಿಂದೆ ಲಕ್ಷ್ಮಣಾವತಿಯಲ್ಲಿ (Lucknow) ೧೭ನೆಯ ವರ್ಗದ ದೇಶೀಯ ಸಿಪಾಯರ ದಂಡು ಇದ್ದಿತು. ಸಿಪಾಯರ ಮನೆಗಳು 'ಮೈದಾನಿನಲ್ಲಿ' ಕಟ್ಟಿದ್ದುವು; ಹಾಗೂ ಸೈನ್ಯದ ಅಧಿಕಾರಿಗಳ 'ಬಂಗ್ಲೆಗಳು' ಗುಡ್ಡದ ಮೇಲೆ ನಿಂತಿದ್ದುವು. 'ಜನರಲ್' ಸಾಹೇಬರ ಮತ್ತು 'ಕರ್ನೆಲ್' ಸಾಹೇಬರ 'ಬಂಗ್ಲೆಗಳು' 'ಲೆಫ್ಟೆನೆಂಟ್' ಸಾಹೇಬರ 'ಬಂಗ್ಲೆಗಿಂತಲೂ' ಎತ್ತರದಲ್ಲಿ ಇದ್ದುವು. ಈ ಮೂವರು 'ಆಫಿಸರರ' ಬಟ್ಟೆಗಳನ್ನೆಲ್ಲಾ ಒಗೆಯುವ ಅಗಸನು ಒಬ್ಬನೇ. ಜನರಲ್ ಸಾಹೇಬರ ಮತ್ತು ಕರ್ನೆಲ್ ಸಾಹೇಬರ 'ಬಂಗ್ಲೆಗಳು' ಎತ್ತರದಲ್ಲಿ ಕಟ್ಟೆ ಇದ್ದುದರಿಂದ, ಅಗಸನು ಅವರ ವಸ್ತ್ರಗಳನ್ನು ಒಯ್ಯುವುದಕ್ಕೆ ಕತ್ತೆಯನ್ನು ಇಟ್ಟುಕೊಳ್ಳಬೇಕಾಯಿತು. ಆದರೆ ಲೆಫ್ಟೆನೆಂಟ್ ಸಾಹೇಬರ ಬಟ್ಟೆಗಳಿಗೆ ತನ್ನ ಬೆನ್ನನ್ನೇ ವಾಹನವಾಗಿ ಕೊಡುತ್ತಿದ್ದನು. ಇದರಲ್ಲಿ ನೂತನವೇನೂ ಇರಲಿಲ್ಲವೆಂದು ತಾನಾಗಿಯೇ ತೋರುವುದು. ಆದರೆ ಅಗಸನ ಈ ನಡತೆಯನ್ನು ನೋಡಿ ಲೆಫ್ಟೆನೆಂಟ್ ಸಾಹೇಬರು ರೇಗಿಬಿದ್ದರು. ಜನರಲ್ ಮತ್ತು ಕರ್ನೆಲ್ ಸಾಹೇಬರುಗಳ ವಸ್ತ್ರಗಳನ್ನು ಕತ್ತೆಯ ಮೇಲೂ, ತನ್ನ ವಸ್ತ್ರಗಳನ್ನು ಮಾತ್ರ ಬೆನ್ನ ಮೇಲೂ ಏಕೆ ಕೊಂಡುಹೋಗುತ್ತಿದ್ದನು ಎಂದು ಸಾಹೇಬರ ಬುದ್ಧಿಗೆ ತಿಳಿಯಲಿಲ್ಲ. ತನಗೆ ಇದೊಂದು ಬಗೆಯ ಅವಮಾನವೆಂದು ತಿಳಿದು, ಸಾಹೇಬರು ಆ ಬಡ ಪಾಪಿಗೆ ಬುದ್ಧಿ ಕಲಿಸಬೇಕೆಂದು ನಿಶ್ಚಯಮಾಡಿದರು.

ಸಾಹೇಬರು ಕಾರಣಾಂತರದಿಂದ ಅನೇಕ ಮಂದಿ ಸ್ನೇಹಿತರನ್ನು ಮನೆಗೆ ಒಂದು ದಿನ ಸಾಯಂಕಾಲ ಆಮಂತ್ರಿಸಿದ್ದರು. ಅತಿಥಿಗಳೆಲ್ಲಾ ಮನೆಯೊಳಗೆ ಕೂಡುತ್ತಲೇ ಸಾಹೇಬರ ಬಟ್ಟೆಗಳನ್ನು ಎಂದಿನಂತೆ ಬೆನ್ನ ಮೇಲೆ ಹೊತ್ತುಕೊಂಡು 'ಧೋಬಿಯು' ಒಳಕ್ಕೆ ಬಂದನು. ಅತಿಥಿಗಳ ಸಮಕ್ಷಮದಲ್ಲಿ ಅಗಸನು ತನಗೆ ತೋರಿಸಿದ ಈ ಅತ್ಯಾಚಾರವನ್ನು ನೋಡಿ, ಸಾಹೇಬರು ಉರಿದುಬಿದ್ದರು. ಅದಲ್ಲದೆ ತಾನು ದೇಶಭಾಷೆಯಲ್ಲಿ ಎಷ್ಟರ ಮಟ್ಟಿಗೆ ಅಭ್ಯಾಸಮಾಡಿರುವೆನೆಂದು ತನ್ನ ಮಿತ್ರಮಂಡಲಿಗೆ ತೋರಿಸುವುದಕ್ಕೆ ಸಾಹೇಬರು ಕಾಂಕ್ಷಿತರಾಗಿ, ಅಗಸನಿಗೆ ಹೀಗೆಂದು ಒದರಿದರು "ಕಂ ಹಿಯರ್ ಯು ನಿಗ್ಗರ್"[1]

ಬಡ ಅಗಸನು ನಡುನಡುಗಿ ಮುಂದುಹೋಗಿ ದೊಡ್ಡ ಸಲಾಂ ಮಾಡಿದನು.

"ವ್ಹಾಯ್ ಜನರಲ್ ಸಾಹೇಬ್ ಎಂಡ್ ಕರ್ನೆಲ್ ಸಾಹೆಬ್ ತುಂ ಗಿವ್ ಗದ್ಧಾ ಎಂಡ್ ಅಂ ನಹಿ?"[2] ಎಂದು ಸಾಹೇಬರು ಕುಪಿತಸ್ವರದಿಂ ಹೇಳಿದರು.

ಅಗಸನ ಬುದ್ಧಿ ಅಡಿಮೇಲಾಯಿತು; ಅವನಿಗೆ ಈ ಜಗಳಾಟದ ಅರ್ಥವೇನೆಂದು ಈ ಜನ್ಮದಲ್ಲಿ ತಿಳಿದು ಬರಲಿಲ್ಲ. ಅಗಸನು ಮೌನದಿಂದ ಇರುವುದೇ ಲೇಸೆಂದು ತಿಳಿದು ನಿರುತ್ತರನಾದನು. ಆದರೆ ಅವನ ನಿರುತ್ತರದಿಂದ ಸಾಹೇಬರು ಇನ್ನೂ ಕೆರಳಿದಂತಾಗಿ "ಡೆರ್ ಯೂ ಡಿನ್ಯಾ ಇಟ್, ಆ್ಯಲ್ ಬ್ರೇಕ್ ಎವೆರಿ ಬೋನ್ ಫೊರ್ ಯೂ-ಮಾಲುಂ?"[3] ಎಂದರು.

"ಖುದಾವಂದ್! ಆಪ್ ಕ್ಯಾ ಕಹತೇ ಹೊ ಹಂ ಸಮಜ್ತೇ ನೈ?"[4] ಎಂದು 'ಧೋಬಿ'ಯು ಉತ್ತರಿಸಿದನು.

"ಸಮಜ್ತೇ ನೈ? ಒಲ್ ರ್ಯಾಟ್. ಆ್ಯ ವಿಲ್ ಎಕ್ಸ್‌ಪ್ಲೇನ್ ಟು ಯೂ, ದೇಕ್ಹೊ ಖಾನ್‌ಸಾಂ"[5]

"ಜೀ ಹುಜುರ್."

"ದೇಕ್ಹೊ! ಕರ್ನೆಲ್ ಸಾಹೆಬ್ ಗದ್ಧಾ, ಜನರಲ್ ಸಾಹೆಬ್ ಗದ್ಧಾ; ಅಂ ಗದ್ಧಾ ನಹಿ?"[6]

ಇದಕ್ಕೆ ಅಗಸನು ಸುಮ್ಮನಿರಲಾರದೆ "ನಹಿ ಸಾಹೆಬ್, ಅಪ್ ಕೈಸಾ ಗದ್ಧಾ? ಅಪ್ ಗದ್ಧಾ ನಹಿ" ಎಂದನು.

ಇದನ್ನು ಕೇಳತ್ತಲೇ ಸಾಹೇಬರು ಕ್ರೋಧದಿಂದ "ಯೂ ಸ್ಟುಪಿಡ್ ಎಸ್, ಯು ಡೆರ್ ಡಿನ್ಯಾ ಮಿ ಯುವರ್

---

*'Indian Ladies Magazine' ಎಂಬ ಪತ್ರಿಕಾ ಕರ್ತರು ಆ ಪತ್ರದ ಒಕ್ಟೋಬರ್ ಸಂಚಿಕೆಯಿಂದ ಇದನ್ನು ಕನ್ನಡಿಸುವುದಕ್ಕೆ ಕೊಟ್ಟ ಅನುಮತಿಯನ್ನು ಅಭಾರಪೂರ್ವಕವಾಗಿ ಸ್ಮರಿಸುತ್ತೇವೆ.

1. ಬಾ ಇಲ್ಲಿ, ಕರಿಯ. (ನಿಗ್ರೋ ಎಂಬ ಜನರು ಕಪ್ಪಾಗಿರುವರು.)

2. ಏಕೆ ಜನರಲ್ ಸಾಹೇಬ್ ಮತ್ತು ಕರ್ನೆಲ್ ಸಾಹೇಬ್ ನೀನು ಕೊಡುವೆ ಕತ್ತೆ? ಮತ್ತು ನಾನು ಅಲ್ಲವೆ?

3. ಅಲ್ಲವೆಂದು ಹೇಳುವೆಯಾ? ನಾನು ನಿನ್ನ ಎಲುವುಗಳನ್ನೆಲ್ಲಾ ಮುರಿದುಬಿಡುವೆನು. ಕಂಡೆಯಾ?

4. ಖಾವಂದರೆ! ತಾವು ಏನನ್ನು ಹೇಳುವಿರೆಂದು ನನಗೆ ತಿಳಿಯುವುದಿಲ್ಲ.

5. ತಿಳಿಯಲಾರೆಯಾ? ಒಳ್ಳೆಯದು. ನಾನು ಹೇಳುವೆನು ನಿನಗೆ. ನೋಡು.

6. ನೋಡು! ಕರ್ನೆಲ್ ಸಾಹೇಬರು ಕತ್ತೆ, ಜನರಲ್ ಸಾಹೆಬರು ಕತ್ತೆ. ನಾನು ಅಲ್ಲವೆ?

ಡೊಂಕಿ? ವೊಟ್ ಡು ಯು ಮಿಾನ್? ಅಂ ಗದ್ಧಾ, ಒಫ್ ಕೊರ್ಸ್ ಅಂ ಗದ್ಧಾ."[7]

ಸಾಹೇಬರ ಮನಸ್ಸು ನೆಟ್ಟಗಾದ ಸ್ಥಿತಿಯಲ್ಲಿ ಇರಲಾರದೆಂದು ಸಾಹೇಬರ ಈ ಮಾತುಗಳಿಂದ ಬಡ ಅಗಸನು ನಿಶ್ಚಯಿಸಿದನು; ಏಕೆಂದರೆ ತಾನು ಕತ್ತೆ ಎಂದು ಹೇಳಿಸಿ ಕೊಳ್ಳುವ ಹಟವನ್ನು ಸಾಹೇಬರು ಏಕೆ ಹಿಡಿದಿರುವರು ಎಂದು ಅವನಿಗೆ ತಿಳಿಯಲಿಲ್ಲ. ಅಲ್ಲಿ ನೆರೆದಿದ್ದ ಅತಿಥಿಗಳೆಲ್ಲರು ಸಾಹೇಬರ ನುಡಿಗಳಿಂದ ವಿನೋದಗೊಂಡರು. ಆದರೆ ಅಗಸನು ತನ್ನನ್ನು ಅವಮಾನಗೊಳಿಸಿದನೆಂದು ಸಾಹೇಬರು ತಿಳಿದು, ತನ್ನ ಮುಷ್ಟಿಯಿಂದ ಎರಡು ಮೂರು ಪ್ರಹಾರಗಳನ್ನು ಕೊಟ್ಟು ಹೇಳಿದ್ದೇನೆಂದರೆ"ಸೇ,ಯುಇನ್‌ಫರ್‌ನಲ್-ಸೇಲೆಫ್ಟಿನೆಂಟ್ ಸಾಹೆಬ್ ಗದ್ಧಾ, ಅಲ್‌ಬತ್ ಗದ್ಧಾ, ಒಲ್‌ವೆಸ್ ಗದ್ಧಾ" "ಬೊಲೊ, ಅಂ ಗದ್ಧಾ ಹೈ, ಅದರವಾಯಸ್ ಐ ವಿಲ್ ಕಿಲ್ ಯು."[8]

ಲೆಫ್ಟಿನೆಂಟ್ ಸಾಹೇಬರೊಡನೆ ಚರ್ಚಿಸುವುದು ವ್ಯರ್ಥವೆಂದು ತಿಳಿದು ಅಗಸನು "ಅವ್ರ ಖುದಾವಂದ್ ಜಬ್ತೊ ಜೈಸಿ, ಆಪ್ ಕೀ ಮರ್ಜಿ. ತುಂ ಬಹುತ್ ಬಡಾ ಗದ್ಧಾ" ಎಂದನು.

ಈ ಸಂಗತಿಯನ್ನು ಸಾಹೇಬರು ತನ್ನ ಹಿಂದುಸ್ಥಾನಿ ಮುನ್ಶಿಗೆ ಹೇಳಿದರು. ಮುನ್ಶಿಯು ಇದರ ಯಥಾರ್ಥ ಸ್ಥಿತಿಯನ್ನು ತಿಳಿಸುತ್ತಲೇ ಸಾಹೇಬರಿಗೆ ಆದ ನಾಚಿಕೆಯನ್ನು ವಾಚಿಸುವುದಕ್ಕಿಂತಲೂ ನೀವು ಯೋಚಿಸುವುದೇ ಲೇಸು. ಹೇಗೂ ಅದು ಮುನ್ಶಿಯು ಸಂಬಳವನ್ನು ಹೆಚ್ಚಿಸುವಂತೆ ಪರಿಣಮಿಸಿತು. ದೇಶಭಾಷೆಯ ಅಭ್ಯಾಸಕ್ಕೆ ಸ್ವಲ್ಪ ಹೆಚ್ಚು ಗಮನವನ್ನು ಕೊಡುವುದಕ್ಕೆ ಸಾಹೇಬರು ತೊಡಗಿದರು; ಮತ್ತು ತಾನು ಚೆನ್ನಾಗಿ ದೇಶ ಭಾಷೆಯನ್ನು ತಿಳಿದ ಹೊರತು ಅದರಿಂದ ಒಂದೇ ಒಂದು ಅಕ್ಷರವನ್ನು ಉಚ್ಚರಿಸಲಾರೆನೆಂದು ನಿಶ್ಚೈಸಿದರು.

(ಸುವಾಸಿನಿ—೧೯೦೩)

7. ಮೂಢ ಕತ್ತೆಯೇ! ನೀನು ನಿನ್ನ ಕತ್ತೆಯನ್ನು ಕೊಡುವುದಿಲ್ಲ ಎನ್ನುತ್ತಿಯೇ? ನಾನು ಕತ್ತೆ, ನಾನು ನಿಜವಾಗಿ ಕತ್ತೆ.

೮. ಹೇಳು! ಹೇಳು—ಹೇಳು, ಲೆಫ್ಟಿನೆಂಟ್ ಸಾಹೇಬರು ಕತ್ತೆ, ನಿಜವಾಗಿ ಕತ್ತೆ, ಯಾವಾಗಲೂ ಕತ್ತೆ. ಹೇಳು, ನಾನು ಕತ್ತೆ ಅಹುದು. ಇಲ್ಲವಾದರೆ ನಾನು ನಿನ್ನನ್ನು ಕೊಲ್ಲುವೆನು.

---

# ನನ್ನ ಚಿಕ್ಕತಾಯಿ

ನನ್ನ ತಂದೆಗೆ ನಾನೊಬ್ಬನೇ ಮಗನು. ನನ್ನ ತಂದೆ ತಾಯಿಗಳು ನನ್ನನ್ನು ಮದುವೆ ಮಾಡದೆ ತೀರಿಹೋದರು. ಆ ದಿನ ಮೊದಲ್ಗೊಂಡು ನಾನು ನನ್ನ ಚಿಕ್ಕಪ್ಪನ ಮನೆಯಲ್ಲಿದ್ದೆನು. ನನ್ನ ಚಿಕ್ಕತಾಯಿಯನ್ನು ನೋಡಿದರೆ, ನನಗೆ ಮೈಯೆಲ್ಲ ಉರಿಯುತ್ತಿತ್ತು. ಆದರೆ ಅದನ್ನು ತಪ್ಪಿಸಲಿಕ್ಕೆ ಉಪಾಯವಿಲ್ಲ; ನನಗೆ ಉಪ್ಪನ್ನ ಕೊಡುವವರು ಬೇರೆ ಯಾರೂ ಇಲ್ಲ. ಇಷ್ಟರೊಳಗೆ ನನಗೆ ಮದುವೆಯಾಗಿ ಮಮ್ಮಗನ ಮೋರೆ ನೋಡುತ್ತಿದ್ದೆನು. ಈ ಮುದಿ ಗೂಗೆ—ಆದರೆ ಈಗ ಸಿಟ್ಟಿನಿಂದ ಬೈದು ಏನು ತಾನೇ ಪ್ರಯೋಜನ? ಆದುದೆಲ್ಲ ಆಗಿಹೋಯಿತು; ಜನ್ಮದ ಫಲ ತಿಂದು ಆಯಿತು. ಈಗ ಯಾಕೆ ತಾನೆ ಬೈಯುವುದು? ಕೆಲವು ತಿಂಗಳ ಹಿಂದೆ ನನ್ನ ಜಾತಕವನ್ನು ಹೊಸಪೇಟೆ ರಾಜಣ್ಣನವರು ಕೊಂಡು ಹೋಗಿ, ಅವರ ಚೊಚ್ಚಲ ಮಗಳ ಜಾತಕಕ್ಕೆ ಅದು ಕೂಡಿ ಬರುತ್ತದೆ ಎಂದು ಸಂಬಂಧದ ಪ್ರಸ್ತಾಪವನ್ನು ನಮ್ಮವರೊಡನೆ ಮಾಡುತ್ತಿದ್ದರಂತೆ. ಆದರೆ ಈ ಹಾಳು ಮೂಳಿಯ ಕೆಲಸದಿಂದ—ಬೈಯಬಾರದು; ಎಷ್ಟಾದರೂ ಚಿಕ್ಕತಾಯಿ. ನನಗೆ ಅನ್ನಕೊಟ್ಟು ಸಾಕಿದಂಥವಳು; ಮುಂದೆ ತನ್ನ ಚಿನ್ನ ಬಿಟ್ಟು ಸಾಯುವಂಥವಳು.

ನನ್ನ ಚಿಕ್ಕತಾಯಿಯು 60 ವರ್ಷದ ಯುವತಿ. ಹಣೆಯಲ್ಲಿ ಕುಂಕುಮ, ಗಂಡನು ಮದುವೆಯಾದೊಡನೆಯೇ ಊರುಬಿಟ್ಟು ಹೋದುದರಿಂದ ಯಾವಾಗಲೂ ಮುತ್ತೈದೆ. ತಲೆಯಲ್ಲಿ ತುಂಬಾ ಕೂದಲು; ಒಂದೆರಡು ಕಪ್ಪೂ ಇದ್ದಾವೆ. ದೇಹ ಸ್ವಲ್ಪ--ಮೊನ್ನೆ ಮುಕ್ತಪುರದಿಂದ ಹಿಂತಿರುಗಿ ಬರುತ್ತಿದ್ದಾಗ ದೋಣಿಯಿಂದ ಇಳಿಯುವ ಸಂದರ್ಭದಲ್ಲಿ ವಿಪರೀತವಾಯಿತು. ಪ್ರತಿನಿತ್ಯವೂ ಮೈಯ ಆಲಸ್ಯವನ್ನು ಕುರಿತು ಗುಣುಗುಟ್ಟುವಳು. ಆದರೆ ಹಗಲಿನ ಆಲಸ್ಯವು ರಾತ್ರಿಯ ಆಹಾರವನ್ನು ಕಡಿಮೆ ಮಾಡುತ್ತಿದ್ದಿಲ್ಲ. ರಾತ್ರಿ ಅನ್ನವನ್ನು ಊಟ ಮಾಡುತ್ತಿದ್ದಿಲ್ಲ. ಅವಳು ತಿನ್ನುವುದರಲ್ಲಿ ನನಗೂ ಆಗಾಗ್ಗೆ ಒಂದಿಷ್ಟು ಸಿಕ್ಕುತ್ತಿತ್ತು. "ಅಪ್ಪಾ! ಒಂದು ಸಲ ದೇವಸ್ಥಾನದ ವರೆಗೆ ನನ್ನ ಸಂಗಡ ಬಾರಿಯಾ?" ಎಂದು ಹೇಳಿ ಪ್ರತಿ ಶುಕ್ರವಾರ ರಾತ್ರಿಯಲ್ಲಿ ಒಂದು ಚಿಗಳಿಯನ್ನು ನನ್ನ ಕೈಗೆ ಹಾಕುತ್ತಿದ್ದಳು. ಹಾದಿಯಲ್ಲಿ ಹೋಗುತ್ತಿದ್ದಾಗ ತನ್ನ ಹಣವನ್ನೂ ಚಿನ್ನವನ್ನೂ ನನ್ನ ಹೆಸರಿಗೆ ಮಾಡುತ್ತೇನೆಂತಲೂ ತಾನು ಇನ್ನು ಹೆಚ್ಚುಕಾಲ ಬದುಕಲಾರೆನೆಂತಲೂ ನನ್ನೊಡನೆ ತತ್ವಜ್ಞಾನ ಎತ್ತುತ್ತಿದ್ದಳು.

ಅವಳು ಹೇಳುವಂತೆ ಅವಳ ಬಳಿಯಲ್ಲಿ ಒಂದೆರಡು

ಚಿನ್ನದ ವಸ್ತುಗಳಿದ್ದುವು. ಒಂದು ದೊಡ್ಡದಾದ ಓಲೆಜೋಡು ಕಿವಿಯಲ್ಲಿ ಸಣ್ಣದಾಗಿ ತೋರುತ್ತಿತ್ತು; ಕೈಗೆ ಎರಡು ಹಿಂಬಳೆಗಳಿದ್ದುವು. ಉಳಿದುವುಗಳೆಲ್ಲ ವಿಶೇಷ ಬೆಲೆಯುಳ್ಳುದಾಗಿದ್ದಿಲ್ಲ. ಆದರೂ ಅವುಗಳಲ್ಲಿ ಒಂದು ಆನೆಜಮೆಸರವನ್ನು ಅಧಿಕವಾಗಿ ಎಣಿಸುತ್ತಿದ್ದಳು. ಚಿನ್ನದಿಂದ ಬಿಗಿದ ಆನೆಯ ಕೂದಲುಗಳು ಮಕ್ಕಳಿಲ್ಲದ ಹೆಂಗಸರು ಇಟ್ಟುಕೊಳ್ಳುವುದು ಅಪರೂಪ. ಆದರೆ ಈ ನಗವನ್ನು ನಮ್ಮ ಚಿಕ್ಕತಾಯಿಗೆ ಯಾರೋ ಪ್ರಸಿದ್ಧ ಪೌರಾಣಿಕರು ಕೊಟ್ಟಿದ್ದರೆಂದು ಅವಳು ಹೇಳುತ್ತಿದ್ದಳು. ಈ ನಗವನ್ನು ಕೈಯಲ್ಲಿ ಹಿಡಿದು ಜಪಮಾಡಿದರೆ ಊರು ಬಿಟ್ಟು ಹೋದ ಗಂಡನು ಮರಳಿ ಬರುವನು ಎಂದು ನಂಬಿಸಿ ಕೊಟ್ಟುದರಿಂದ ಅದರ ವಿಷಯದಲ್ಲಿ ಹೆಚ್ಚಿನ ಎಚ್ಚರಿಕೆ. ಆಭರಣಗಳನ್ನೆಲ್ಲ ಅರಿವೆಯಲ್ಲಿ ಗಂಟು ಕಟ್ಟಿ ಅವುಗಳನ್ನು ಮೈಯಲ್ಲಿ ಎಲ್ಲಿಯೋ ಅಡಗಿಸುತ್ತಿದ್ದಳು. ಹಗಲು ಅವುಗಳ ಮೇಲೆ ಮನಸ್ಸು; ಇರುಳು ಅವುಗಳನ್ನು ಕುರಿತು ಕನಸು.

ಮುಕ್ತಪುರದಲ್ಲಿ ಯಾರೋ ಪೌರಾಣಿಕರು ಎರಡು ತಿಂಗಳ ಹಿಂದೆ ಬಂದಿದ್ದರು. ಪೌರಾಣಿಕರ ಜಪತಪವನ್ನೂ ಸ್ನಾನಸಮಾಧಿಯನ್ನೂ ನೋಡಲಿಕ್ಕೆ ಊರೂರಿಂದ ಜನರು ಓಡುತ್ತಿದ್ದರು. ನನ್ನ ಚಿಕ್ಕತಾಯಿಗೆ ಓಡುವುದಕ್ಕೆ ದೇಹ ಬಿಡುವುದಿಲ್ಲ. ಬಂಡಿಯನ್ನು ಒದಗಿಸಬೇಕೆಂದು ನನ್ನೊಡನೆ ಎಂದಳು. ಅವಳನ್ನು ಕೊಂಡುಹೋಗಲಿಕ್ಕೆ ಬಂಡಿಯಾಳಲ್ಲಿ ಯಾರೊಬ್ಬನೂ ಕ್ಲುಪ್ತವಾದ ಬಾಡಿಗೆಗೆ ಒಪ್ಪಲಿಲ್ಲ. ಕಡೆಗೆ ಅವಳನ್ನು ಹೇಗಾದರೂ ದೋಣಿಯಲ್ಲಿ ಕೂತುಕೊಳ್ಳಿಸಿ, ಬಳಿಕ ದೋಣಿಯ ಚಪ್ಪರವನ್ನು ಅಲ್ಲಲ್ಲಿ ಸಿಕ್ಕಿಸಿ, ಮುಕ್ತಪುರಕ್ಕೆ ನಾನು ಅವಳನ್ನು ಕಳುಹಿಸಿದೆನು. ಒಂದು ವಾರವು ಕಳೆದ ಮೇಲೆ ಅವಳು ಹಿಂತಿರುಗಿ ಬಂದಳು. ಪ್ರಯಾಣದ ಆಯಾಸವು ಅವಳಲ್ಲಿ ಕಂಡುಬರಲಿಲ್ಲ. ಯಾಕೆಂದರೆ, ಮನೆಗೆ ಬಂದಕೂಡಲೆ ಅರಿವೆಗಳನ್ನು ಬಿಚ್ಚಲಿಕ್ಕೂ ವಸ್ತ್ರಗಳನ್ನು ನೋಡಲಿಕ್ಕೂ ಕುಳಿತಳು. ಗಂಟಿಗೆ ಸುತ್ತಿದ ಒಂದು ಅರಿವೆಯನ್ನು ಬಿಚ್ಚಿದಳು; ಆ ಮೇಲೆ ಮತ್ತೊಂದನ್ನು ತೆಗೆದಳು; ಬಳಿಕ ಇನ್ನೊಂದನ್ನು ತೆಗೆದಳು. ಪುನಃ ಮತ್ತೊಂದು, ಮತ್ತೊಂದು, ಮತ್ತೊಂದು—ದ್ರೌಪದಿಯ ವಸ್ತ್ರಹರಣವು ಸ್ಮರಣೆಗೆ ಬರುವಂತೆ ಮಾಡಿದಳು.

ಎಲ್ಲವನ್ನು ಈಚೆಗೆ ತೆಗೆದ ಸ್ವಲ್ಪ ಹೊತ್ತಿನ ಮೇಲೆ "ಹೋಯ್ತು! ಅಪ್ಪಾ! ನನ್ನ ಸರ್ವಸ್ವ ಹೋಯ್ತು" ಎಂಬ ಗೋಳು ಕೇಳಿಸಿತು. ಜಗುಲಿಯಲ್ಲಿದ್ದ ನಾನು ಒಳಗೆ ಓಡಿದೆನು. ಅವಳ ಮುಖವು ಸಿಡಿಲು ಬಡಿದ ತೆರದಲ್ಲಿತ್ತು. ಅರಿವೆ ಚಿಂದಿಗಳಿಂದ ಹಣೆ ಚಚ್ಚಿಕೊಳ್ಳುವುದನ್ನು ಕಂಡು ದುಃಖದ ಕಾರಣವನ್ನು ಊಹಿಸಿದೆನು. ಒಡವೆಗಳ ಗಂಟು ಅರಿವೆಯೊಳಗೆ ಇದ್ದಿಲ್ಲ. ಮುದುಕಿಗೆ ತಕ್ಕದಾದ ಶಾಸ್ತಿಯಾಯಿತೆಂದು ನಾನು ಒಂದು ನಿಮಿಷ ಹಿಗ್ಗಿದೆನು. ಆದರೆ ಮುದುಕಿಯ ರೋದನದಲ್ಲಿ ನನ್ನ ಮನಸ್ಸು ಕರಗುತ್ತಾ ಬಂತು. ಅವಳ ದುಃಖ ಧ್ವನಿಯಲ್ಲಿಯೂ ಅವಳ ದುಃಖಾಶ್ರುಗಳಲ್ಲಿಯೂ ಅವಳ ನಿಷ್ಕಾಪಟ್ಯವೂ, ಅವಳ ಸ್ಥೂಲಬುದ್ಧಿಯೂ, ಅವಳ ವಾತ್ಸಲ್ಯವೂ ಸ್ಫುಟವಾದುವು. "ಅಪ್ಪಾ!" ತಲೆಯನ್ನು ಚಚ್ಚಿಕೊಳ್ಳುತ್ತಾ "ಅಪ್ಪಾ! ನನ್ನ ಸರ್ವಸ್ವಕ್ಕೆ ಯಾರೋ ಕೈಹಾಕಿದರು. ಹೊಟ್ಟೆಕಟ್ಟಿ ಕೂಡಿಸಿದ ಮೂರುಕಾಸುಗಳನ್ನು ನಿನಗೆ ಕೊಡಬೇಕೆಂದಿದ್ದೆನು. ಒಂದು ಕಾಸು ಕೂಡಾ ಉಳಿಯಲಿಲ್ಲ. ನಗಗಳ ಚಿಂತೆಯನ್ನು ನಾನು ಕಟ್ಟಿಕೊಳ್ಳಲಿಲ್ಲ. ಆ ಆನೆಜಮೆಸರ ಹೋಯಿತಲ್ಲ! ಇನ್ನು ನಿನ್ನ ಚಿಕ್ಕತಂದೆಯವರನ್ನು ನೋಡುವೆನೆಂಬ ಆಸೆಯು ಇಂದಿಗೆ ಆಯಿತು. ಎಲ್ಲವಾದರೂ ಹೋಗಬಹುದಿತ್ತು; ಈ ನಗವು ಉಳಿಯಬಹುದಿತ್ತು. ಬೆಳಗ್ಗೆ ನಾನು ಯಾರ ಮೋರೆಯನ್ನು ಕಂಡೆನೋ?" ಎಂದು ತಡವೆತಡವೆಗೆ ಮಕ್ಕಳಂತೆ ಹಂಬಲಿಸಿ ಅಳುತ್ತಿದ್ದಳು. ಅವಳು ಅಳುವುದನ್ನು ನೋಡಿ ನನ್ನ ಕಣ್ಣುಗಳಲ್ಲಿಯೂ ಒಂದೆರಡು ತಟಕು ನೀರು ಒಸರಿತು. ಮುಂದೆ ನನಗೆ ಸಿಕ್ಕುವ ಗಂಟನ್ನು ಯಾರೋ ಎತ್ತಿದರೆಂದು,ಒಂದು ನಿಮಿಷದ ಮೇಲೆ, "ನನ್ನ ಒಡವೆಗಳನ್ನು ಯಾರು ತೆಗೆದಿರಬಹುದು? ದೋಣಿಯಾಳು ತೆಗೆದಿರಲಾರನು; ಅವನು ನನ್ನ ಹತ್ತಿರವೇ ಮಲಗಿದ್ದನು. ಅಯ್ಯೋ! ನನ್ನ ಜಪಸರವು ಹೋಯಿತಲ್ಲ! ಅವರ ಮುಖವನ್ನು ಈ ಜನ್ಮದಲ್ಲಿ ಇನ್ನೊಂದು ಸಲ ನೋಡುವೆನೆಂಬ ಆಸೆಯು ತೀರಿತಲ್ಲ!" ಎಂದು ಪುನಃ ಪ್ರಲಾಪಿಸಿದಳು. ಸ್ವಲ್ಪ ಹೊತ್ತಿನ ಮೇಲೆ ತಾನೇ ಸಮಾಧಾನವನ್ನು ಹೊಂದಿ "ಅಪ್ಪಾ! ನೀನಾದರೂ ಪ್ರಯತ್ನಮಾಡು; ನೀನು ಸೊಂಟ ಕಟ್ಟಿದರೆ ಅವುಗಳೆಲ್ಲವು ಸಿಕ್ಕದೆ ಇರಲಾರವು. ಸಿಕ್ಕಿದರೆ ನನ್ನ ಜೊಟ್ಟಿನ ಕುಂಕುಮ ಉಳಿಸಿದ ಪುಣ್ಯ ನಿನಗೆ," ಎಂದು ಹೇಳಿದಳು. ಕಳವನ್ನು ಕುರಿತು ಪೋಲಿಸನವರಿಗೆ ವರ್ತಮಾನ ಮುಟ್ಟಿಸಿದ್ದಾಯಿತು.

ನನಗೆ ಯಾರ ಮೇಲೆಯೂ ಸಂಶಯವಿದ್ದಿಲ್ಲ; ಸಂಶಯವಿದ್ದರೂ ನನ್ನ ಸಂಶಯವು ಫಲಿಸದಿದ್ದರೆ ವಿನಾಕಾರಣವಾಗಿ ವಿರೋಧ; ವಿರೋಧವಾದರೂ ಅವಚಿಯು ನನ್ನನ್ನು ಇನ್ನೂ ಹೆಚ್ಚಾಗಿ ಪ್ರೀತಿಸಳು. ಆದರೆ ಕಳ್ಳನನ್ನು ಹುಡುಕುವುದು ಹೇಗೆ? ಅನೇಕರಾದರೊ, ಅರಿವೆ ವಾಸನೆಯಿಂದ ಹೆಜ್ಜೆ ಕುರುಹುಗಳಿಂದ, ಕೆಮ್ಮಿನ ಸ್ವರದಿಂದ, ಎಂಜಲ ರುಚಿಯಿಂದ ಪಾತಾಳದಲ್ಲಿ ಅಡಗಿದ್ದ ಕಳ್ಳನನ್ನು ಎತ್ತಿ ತಂದಿರುವರಂತೆ. ಪಂಚೇಂದ್ರಿಯಗಳ ಇಂತಹ ಗುಣವಿಶೇಷವು ನನ್ನಲ್ಲಿಲ್ಲ. ಆದರೂ ಸಾಧಿಸಬೇಕೆಂದು ದೃಢಮಾಡಿದೆನು.ಮೊದಲು ಹೆಜ್ಜೆಗಳ ಗುರುತುಗಳನ್ನು ಹಿಡಿದು ಹುಡುಕಿದೆನು. ಜಗುಲಿ

ಯ ಮೇಲೆ ಕೆಲವು ಕುರುಹುಗಳಿದ್ದುವು; ಅಂಗಳಕ್ಕೆ ಇಳಿಯುತ್ತಲೇ ಆ ಗುರುತುಗಳು ಒಂದನ್ನೊಂದು ಅಳಿಸಿಕೊಂಡು ಹೋದುವು. ಮನೆಯ ಕೊಟ್ಟಡಿಯಿಂದ ಹಿತ್ತಿಲಿನವರೆಗೆ ಎಲ್ಲವನ್ನು ಹುಡುಕಿದೆನು. ಹಿಂತಿರುಗಿ ಬರುತ್ತಿದ್ದಾಗ ಒಂದು ನಸೆಡಬ್ಬಿಯ ಬಿರುಡೆ ಹಾದಿಯಲ್ಲಿ ತೋರಿತು. ಕಳ್ಳ ಸಿಕ್ಕಿದನೆಂದು ಭಾವಿಸಿದೆನು. ಮನಸ್ಸಿನಲ್ಲಿ ಔತ್ಸುಕ್ಯವು ಕುದಿದು ಉಕ್ಕಿಬಂತು. ಅವಚಿಗೆ ತಿಳಿಸಲಿಕ್ಕೆ ಬೇಗನೆ ಓಡಿದೆನು. ಓಡುತ್ತಿದ್ದಾಗ ನನ್ನ ಉಡಿಯಿಂದ ಏನೋ ಕೆಳಗೆ ಬಿತ್ತು. ಸ್ವಲ್ಪ ಅಲ್ಲಿಯೆ ತಡೆದೆನು. ಬಿದ್ದ ಪದಾರ್ಥವನ್ನು ಕೈಯಲ್ಲಿ ಹಿಡಿದು ನೋಡಿದೆನು. ಒಳಗೆಲ್ಲ ಬರಿದಾಗಿತ್ತು. ಬಿರುಡೆ ಜಾರಿದುದರಿಂದ ನಸೆಯೆಲ್ಲ ಸುರಿದುಹೋಗಿ ಬರಿದಾದ ನನ್ನ ನಸೆಡಬ್ಬಿ. ನನ್ನ ಕೈಯಲ್ಲಿದ್ದ ಬಿರುಡೆಯನ್ನು ಅದಕ್ಕೆ ಜೋಡಿಸಿದೆನು; ಸರಿಯಾಗಿತ್ತು. ಒಂದು ತಡವೆಗೆ ನನ್ನ ಉತ್ಸಾಹದ ಮೇಲೆ ತಣ್ಣೀರು ಎರಚಿದಂತಾಯಿತು. ಒಂದು ತಡವೆಗೆ ಕಳ್ಳನು ಸಿಕ್ಕುವನೆಂಬ ನಂಬಿಕೆಯು ಮನಸ್ಸಿನಿಂದ ಕಿತ್ತುಹೋಯಿತು.

ಪ್ರಾತಃಕಾಲದಲ್ಲಿ ನಾನು ಮನೆಯಿಂದ ಹೊರಟೆನು. ಎಷ್ಟೋ ಸ್ಥಳಗಳಲ್ಲಿ ಮಾತನಾಡುತ್ತಾ ಕುಳಿತೆನು; ಒಂದೆರಡು ಮನೆಗಳಲ್ಲಿ 'ಕಾಫಿ' ಕುಡಿದಾಯಿತು. ಮಧ್ಯಾಹ್ನಕ್ಕೆ ಮನೆಗೆ ಹಿಂತಿರುಗಿದೆನು. ಹಾದಿಯಲ್ಲಿ ಒಬ್ಬ ಹೆಂಗಸನ್ನು ನೋಡಿದೆನು; ನೋಡುತ್ತಲೇ ಹೋದ ಒಡವೆ ಗಂಟು ಸ್ಮರಣೆಗೆ ಬಂತು. ಒಡವೆ ಗಂಟಿನಲ್ಲಿ ಚಿನ್ನದಿಂದ ಬಿಗಿದ ಆನೆಜಮೆ ಇತ್ತು; ಈ ಸ್ತ್ರೀಯ ಮಸ್ತಕದಲ್ಲಿ ಅಷ್ಟೇ ಬಿರುಸಾದ ಕೇಶಪಾಶಗಳು ಜಡೆಕಟ್ಟಿದ್ದುವು. ನನ್ನ ದೃಷ್ಟಿಯು ಅವಳ ಕೂದಲುಗಳಲ್ಲಿ ಸಿಕ್ಕಿಕೊಳ್ಳುತ್ತಲೇ ಅವಳು ತನ್ನ ಎಡಗೈಯಿಂದ ತುರುಬನ್ನು ಸವರಿದಳು. ನಾನು ನನ್ನಲ್ಲಿಯೇ ನಾಚಿಕೊಂಡು ಮುಂದರಿಸಿದೆನು. ಸ್ವಲ್ಪ ದೂರಕ್ಕೆ ಹೋದ ಮೇಲೆ ನಾನು ಮುಖ ತಿರುಗಿಸಿ ಹಿಂದೆ ನೋಡಿದರೂ ಅವಳ ತುರುಬು ಚೆನ್ನಾಗಿ ನೋಡಲಿಕ್ಕೆ ಸಿಕ್ಕಲಿಲ್ಲ. ಅವಳು ನನ್ನಂತೆಯೆ ಮುಖ ತಿರುಗಿಸಿ ಯಾವುದನ್ನೋ ನೋಡುತ್ತಿದ್ದಳು. ನಾನು ಮನೆಯನ್ನು ಸೇರಿದೆನು. ಆದರೆ ಅವಚಿಯ ಇದಿರು ಹೋಗಲಿಕ್ಕೆ ನನಗೆ ಮೋರೆ ಇಲ್ಲ. ಅವಳಾದರೊ? ನಾನು ಕೈಯಲ್ಲಿ ಕಳ್ಳನನ್ನು ಹಿಡಿದು ತಾರದೆ ಬಿಡೆನೆಂದು ದೃಢವಾಗಿ ನಂಬಿದ್ದಳು. ಕಳ್ಳನ ಶಿಕ್ಷೆಯ ಮೇಲೆ ಅವಳ ಮನಸ್ಸು ನಿಲ್ಲಲಿಲ್ಲ; ಅವಳ ಜೀವವು ಹೋದೊಡವೆಗಳ ಮೇಲಿತ್ತು. ನಾನು ಬರುತ್ತಲೆ ಗಂಟನ್ನು ಕುರಿತು ನನ್ನನ್ನು ಕೇಳಿದಳು. ನಾನು ಇಲ್ಲದ ವೇಳೆಯಲ್ಲಿ ಪೋಲಿಸನವನು ಬಂದು ಒಂದು ರೂಪಾಯಿಯನ್ನು ಇಸುಕೊಂಡು ಹೋದನೆಂದು ಅವಳಿಂದ ತಿಳಿದೆನು. ನಾನು ಹಗಲು ಇರುಳು ಹುಡುಕುವುದರಲ್ಲಿಯೆ ಇದ್ದೆನೆಂದು ಸುಳ್ಳು ಹೇಳಿದೆನು. ಹೀಗೆ ಸುಳ್ಳು ಹೇಳುತ್ತಾ ಮೂರು ದಿವಸಗಳನ್ನು ಕಳೆದೆನು. ಆ ದಿನ ಮೊದಲ್ಗೊಂಡು ಸುಳ್ಳೆಂದರೇನು ಸತ್ಯವೆಂದರೇನು ಎಂಬ ಭೇದವು ನನ್ನ ಮನಸ್ಸಿಗೆ ಬರುತ್ತಿದ್ದಿಲ್ಲ.

ಅನಿವಾರ್ಯವೆಂದು ತೋರುವ ಅಪಾಯಗಳನ್ನು ಪರಿಹರಿಸುವ ಉಪಾಯಗಳು ಮೂಢರ ಮನಸ್ಸಿನಲ್ಲಿಯೂ ಹೊಳೆಯುವುದುಂಟು. ಈ ಮಾತು ನನ್ನ ವಿಷಯದಲ್ಲಿ ಸಿದ್ಧವಾಗಿ ದೃಷ್ಟಾಂತಕ್ಕೆ ಬಂತು. ಆನೆಜಮೆಸರವನ್ನು ಹೇಗೂ ಶೋಧಿಸದಿದ್ದರೆ ಚಿಕ್ಕತಾಯಿಯ ಮನಸ್ಸು ಎಂದೂ ಸ್ವಸ್ಥವಾಗಿರದು; ಅವಳು ತನ್ನ ಮನೆಮಾರನ್ನು ನನ್ನ ಹೆಸರಿಗೆ ಮಾಡುವಳು ಎಂಬುದೊಂದು ಆಶೆಯು ಇನ್ನೂ ಉಳಿಯದು. ನನ್ನ ಚಿಕ್ಕತಾಯಿಗೆ ದೇವರ ಮೇಲೆ ಭಕ್ತಿಯೂ, ಪೌರಾಣಿಕರ ಮೇಲೆ ಪ್ರೀತಿಯೂ ಅಧಿಕವಾದುದರಿಂದ, ಅವಳ ಸರ್ವಸ್ವವು ಅವಳ ಮರಣವನ್ನು ನಿರಂತರ ಎದುರ್ನೋಡುತ್ತಿರುವ ಪೌರಾಣಿಕರ ಹಸ್ತಗತವಾಗುವುದಲ್ಲದೆ ಅದರಲ್ಲಿ ಒಂದು ಕಾಸು ನನ್ನ ಪಾಲಿಗೆ ಬರುವುದರಲ್ಲಿ ಬಹಳ ಸಂದೇಹವಿತ್ತು. ಆದರೆ ನಗವನ್ನು ನಾನು ಹುಡುಕಿ ತಂದರೆ ಅವಳ ವಾತ್ಸಲ್ಯವನ್ನು ನನ್ನ ಕಡೆಗೆ ತಿರುಗಿಸಿ, ಅವಳಿಗೆ ನಾನೇ ಉತ್ತರಾಧಿಕಾರಿಯಾಗುವ ಹಾಗೆ ಮಾಡಿಸಿದರೆ ನನ್ನ ಅದೃಷ್ಟವು ಮುಂದೆ ಅಷ್ಟೊಂದು ಹಾಳಾಗದು. ಈ ಕಾರಣಗಳಿಂದ ಆಭರಣಗಳನ್ನು ಹೇಗಾದರೂ ಹುಡುಕಿ ತರುವುದಕ್ಕೆ ಮನಸ್ಸನ್ನು ನಿರ್ಧರಿಸಿದೆನು. ಆದರೆ ಆಭರಣಗಳೇನೊ ಅಕ್ಕಸಾಲಿಗನ ಅಗ್ಗಿಷ್ಟಿಕೆಯನ್ನು ಸೇರಿದುವು; ಅವುಗಳು ಇನ್ನು ಚಿಕ್ಕತಾಯಿಯ ಕಣ್ಣಿಗೆ ಬೀಳುವಹಾಗಿಲ್ಲ. ಅದು ಸಿಕ್ಕದಿದ್ದರೆ ಅದರಂತೆ ಇನ್ನೊಂದನ್ನು ಒದಗಿಸಿಕೊಳ್ಳುವುದು ಕಷ್ಟಸಾಧ್ಯವೇ? ಹೀಗೆ ಒದಗಿಸಿದ ನಗದಿಂದ ಮುದಿಕಣ್ಣುಗಳನ್ನು ಮೋಸಗೊಳಿಸುವುದು ದೊಡ್ಡದೇ? ಈ ದುರಾಲೋಚನೆಗಳು ನನ್ನ ಮನಸ್ಸಿನಲ್ಲಿ ಪುನಃ ಪುನಃ ತಿರುಗಿದವು. ಮರುದಿನ ಪ್ರಾತಃಕಾಲ ಎದ್ದು, "ಅವಚಿ! ಅವಸರಪಟ್ಟರೆ ಕಾರ್ಯವು ಭಂಗವಾಗುವುದು. ಇನ್ನೊಂದು ವಾರದೊಳಗೆ ನಾನು ಕಳ್ಳನನ್ನು ಹಿಡಿಯದೆ ಬಿಡೆನು. ನನ್ನ ಮನಸ್ಸಿಗೆ ಕೆಲವು ಉಪಾಯಗಳು ನಿನ್ನೆ ರಾತ್ರಿ ಕಂಡುಬಂದುವು. ಇಂದು ಕಳ್ಳನ ಹೆಜ್ಜೆಯಲ್ಲಿಯೇ ನಾನು ನಡೆಯುತ್ತಿದ್ದೇನೆ. ನಾನು ನಗವನ್ನು ತಾರದಿದ್ದರೆ ನನ್ನ ಹೆಸರು ರಾ . . . . . ಅಲ್ಲ" ಎಂದು ಹೇಳಿ ನನ್ನ ಉಪಾಯಗಳನ್ನು ಕಾರ್ಯಗಳಲ್ಲಿ ಸಿದ್ಧಪಡಿಸಲಿಕ್ಕೆ ಹೊರಟೆನು.

ಆನೆಜಮೆಯನ್ನು ಒದಗಿಸುವುದು ಕಷ್ಟಸಾಧ್ಯವೆಂದು ನಾನು ಎಣಿಸಲಿಲ್ಲ. ಎರಡು ದಿನಗಳ ಹಿಂದೆ ಸಂಜೆಯಲ್ಲಿ ಮನೆಗೆ ಹಿಂತಿರುಗುತ್ತಿದ್ದಾಗ ಅಂತಹ ಕೂದಲುಗಳು ಸ್ತ್ರೀಮಸ್ತಕದಲ್ಲಿ ನೋಡಿದುದು ಸ್ಮರಣೆಯಲ್ಲಿತ್ತು. ಅವುಗಳಲ್ಲಿ ಒಂದೆರಡು ಕೂದಲುಗಳು ಬೆಲೆಗೆ ಸಿಕ್ಕಿದರೂ ನನ್ನ ಕಾರ್ಯವು ನೆರವೇರುವುದು. ಸ್ತ್ರೀಯರಲ್ಲಿ ಕೆಲವರು ತಮ್ಮ ಪುರು

ಷರ ಜುಟ್ಟನ್ನು ಹಿಡಿದು, ತಮಗೆ ವಿಧೇಯರಾಗಿ ಅವರನ್ನು ಇರಿಸುವರಂತೆ; ನಾನು ಅವರಂತೆಯೇ ಪ್ರೀತಿಯನ್ನು ನಟಿಸಿದರೆ ಒಬ್ಬ ಹೆಂಗಸಿನ ಕೂದಲನ್ನಾದರೂ ಹಿಡಿಯಲಾರೆನೆ? ಅದಲ್ಲದೆ ನನಗೆ ಬೇಕಾದ ಕೂದಲುಗಳಿರುವ ಹೆಂಗಸು ಸಾಮಾನ್ಯೆಯಾಗಿರುವಳು; ರಾಜಣ್ಣನವರ ನೆರಮನೆಯಲ್ಲಿ ಕೆಲಸಮಾಡಿ ಕಾಲಕ್ಷೇಪಮಾಡುವಂತಹಳು ಕಾಸುಕೊಟ್ಟರೆ ಕೂದಲು ಕೊಡಲಾರಳೇ? ಹೀಗೆ ಮನಸ್ಸಿನಲ್ಲಿ ಯೋಚಿಸುತ್ತಾ ಹಾದಿ ನಡೆದುದರಿಂದ ಗೋವಿಂದರಾಯರ ಮನೆ ದೂರದಲ್ಲಿದ್ದುದನ್ನು ತಿಳಿಯಲೇ ಇಲ್ಲ. ಕೆಲವು ಹೆಜ್ಜೆ ನಡೆಯುತ್ತಲೇ ಮನೆಯು ಸಮೀಪಿಸಿತು; ಅಂಗಳದಲ್ಲಿ ಅವಳು ಏನೋ ಕೆಲಸಮಾಡುವುದನ್ನು ಮಾರ್ಗದ ಮೇಲೆ ನಿಂತು ನೋಡಿದೆನು. ಮನೆಯ ಯಜಮಾನರನ್ನು ನೋಡಲಿಕ್ಕೆ ಬಂದೆನೆಂಬ ನೆಪಮಾಡಿ ಮನೆಯನ್ನು ಹೊಕ್ಕೆನು. ಅಂಗಳದಲ್ಲಿ ಅವಳನ್ನು ನೋಡುತ್ತಲೇ ನನ್ನ ಮನಸ್ಸು ಸ್ವಲ್ಪ ಹಿಂಜರಿಯಿತು. ಆ ರಮಣಿಯು 30ಕ್ಕೆ ಮೀರಿರಲಿಲ್ಲ. ದೇಹಕಾಂತಿಯು ಕೃಷ್ಣವರ್ಣದಿಂದ ಮಂಜುಳವಾಗಿತ್ತು; ಆ ಸಂಕುಚಿತ ಚಕ್ಷುಗಳನ್ನು ಆವರಿಸಿದ ಭ್ರೂಯುಗ್ಮವು ಲಲಾಟ ಪ್ರದೇಶದಲ್ಲಿ ಕಲಭಕೇಶದಂತಿದ್ದ ಅವಳ ಅಲಕಾವಳಿಯನ್ನು ತಡವೆ ತಡವೆಗೆ ಚುಂಬಿಸುತ್ತಿತ್ತು. ತಾಂಬೂಲದಿಂದಾರಕ್ತವಾದ ದಂತಗಳು ಅಧರನಿರೋಧವನ್ನು ಅತಿಕ್ರಮಿಸಿ ಮುಖದ ಮೇಲೆ ಅಲಂಕೃತವಾದ ಕೆಂಪು ಚಿಬ್ಬುಗಳನ್ನು ನೋಡುವಂತೆ ವಿರಾಜಿಸುತ್ತಿದ್ದುವು. ಕಂಚುಕವು ಸ್ಕಂಧಾಗ್ರದಲ್ಲಿಯೇ ಪೂರೈಸಿದುದರಿಂದ ಉಳಿದ ಹಸ್ತಭಾಗದಲ್ಲಿ ಗಾಜಿನ ಹಿಂಬಳೆಗಳಲ್ಲದೆ ಮತ್ತೊಂದಲಂಕಾರವಿರಲಿಲ್ಲ. ಜಗುಲಿಯ ಮೇಲೆ ಯಾರೂ ಇಲ್ಲದುವನ್ನು ನೋಡಿ, ಅವಳೊಡನೆ ಮಾತು ಹೇಗೆ ಎತ್ತುವುದು ಎಂದು ಒಂದು ನಿಮಿಷ ಯೋಚಿಸಿ ಅಲ್ಲಿಯೇ ತಡೆದೆನು. ಏನು ಮಾಡಿದರೂ ಹೃದಯವು ದಡದಡಿಸುವುದಲ್ಲದೆ ಮಾತು ಬಾರದು. ಕಡೆಗೆ ಪ್ರಯತ್ನಪೂರ್ವಕವಾಗಿ "ಮ್ ಮ್ ಮನೆ ಯಜಮಾನಿ ರವರೆ?" ಎಂದು ವಿಚಾರಿಸಿದೆನು. ಅಂದು ಮಾತನಾಡಿದುದು ಪೂರ್ಣ ಸ್ಮರಣೆಯಲ್ಲಿಲ್ಲ. ಆದರೆ ಅವಳು ನನ್ನ ಮಾತಿಗೆ ಪ್ರತ್ಯುತ್ತರ ಕೊಡಲಿಲ್ಲ. ಕಸಗುಡಿಸುವ ಸಪ್ಪುಳದಲ್ಲಿ ನನ್ನ ಮಾತು ಅವಳಿಗೆ ಕೇಳಿಸಲಿಲ್ಲವೆಂದು ನಾನು ಪುನಃ ವಿಚಾರಿಸಿದನು. ಅದಕ್ಕೆ ಅವಳು ಇಲ್ಲವೆಂದು ಉತ್ತರ ಕೊಟ್ಟಳು. ನಾನು ಧೈರ್ಯಗೊಂಡೆನು. ಆ ಮಾತು ನನಗೆ ಕೇಳಿಸಲಿಲ್ಲವೆಂದು ಹೇಳಿ ಅವಳ ಬಳಿಗೆ ಹೋದೆನು. ಹತ್ತಿರ ಬರುತ್ತಲೇ ನನ್ನ ಮೂಗಿನಲ್ಲಿ ವಿಜಾತೀಯವಾದ ಗಾಳಿಯು ಬೀಸಿದಂತಾಯಿತು. "ಯಜಮಾನರು ಮನೆಯಲ್ಲಿ ಇರುವರೇ?" ಎಂದು ಮತ್ತೂ ಕೇಳಿದೆನು. "ಇಲ್ಲ; ಅವರು ಬೆಳಗ್ಗೆ ಎದ್ದು ಹೋಗಿರುವರು" ಎಂದಳು. ಆ ಬಳಿಕ ಅವಳು ಸುಮ್ಮನಾದುದನ್ನು ನೋಡಿ, ನಾನು ಮನಸ್ಸಿನಲ್ಲಿಯೇ ಏನೋ ಹೇಳಿ ಹಿಂತಿರುಗಿದೆನು. ಅಗಲೇ ಒಬ್ಬ ಹೆಂಗಸು ಅಂಗಳದಿಂದ ಜಗುಲಿಯನ್ನು ಹತ್ತಿದಳು. ಅವಳು ಯಾರೆಂದು ತಿಳುಕೊಳ್ಳುವ ಶ್ರಮವನ್ನು ತೆಗೆದುಕೊಳ್ಳದೆ, ನನ್ನ ಕೃತ್ಯಕ್ಕೆ ನಾನೇ ಹೆದರಿ ಬೀದಿಗೆ ಇಳಿದೆನು. ನನ್ನ ಸತ್ಕಾರ್ಯದ ಪ್ರಸ್ತಾವನೆಯು ಇಲ್ಲಿ ಮುಗಿದುದು.

ಕಾರ್ಯಸಾಧನೆಯಲ್ಲಿ ವಿಘ್ನಗಳು ಪ್ರತಿಭಟಿಸಿದರೂ ಬುದ್ಧಿವಂತರು ಸ್ಥಿರಪ್ರಯತ್ನರಾಗಿ ಅವುಗಳನ್ನು ಕೊನೆಗಾಣಿಸಬೇಕೆಂಬುದೊಂದು ಹಿರಿಯರ ಮಾತು ಇರುವುದು. ಇದಕ್ಕನುಸಾರವಾಗಿ ನಡೆಯಬೇಕೆಂದು ನಾನು ನಿಶ್ಚಯಿಸಿದೆನು. ಚಿಕ್ಕತಾಯಿಯನ್ನು ಮೋಸಗೊಳಿಸಲಿಕ್ಕೆ ಈ ಸ್ತ್ರೀಯ ಪರಿಚಯವು, ಅದೂ ಸಾಲದಿದ್ದರೆ ಅವಳೊಡನೆ ಅನೃತ ಪ್ರಣಯವು ಅವಶ್ಯವೆಂದು ನನ್ನ ಮನಸ್ಸಿಗೆ ಖಚಿತವಾಯಿತು. ಕಳವಾದ ಆ ನಿಜಮೆಸರದಂತೆ ಮತ್ತೊಂದನ್ನು ಇವಳ ಕೂದಲುಗಳಿಂದಲ್ಲದೆ ಇನ್ನು ಯಾವ ಸಾಮಗ್ರಿಯಿಂದಲೂ ಒದಗಿಸಲಿಕ್ಕೂ ಸಾಧ್ಯವಲ್ಲವೆಂದು ನನ್ನ ಮನಸ್ಸಿಗೆ ಬಲವಾಗಿ ಕಂಡುಬಂತು. ಆದರೆ ಈ ನವೀನ ಸ್ತ್ರೀಯು ತನ್ನ ತಲೆಯನ್ನು ನನ್ನ ಕೈಯಲ್ಲಿ ಕೊಡುವುದು ಬಹಳ ಸಂದೇಹಾಸ್ಪದವಾಗಿತ್ತು. ಏಕೆಂದರೆ, ಅವಳ ತಲೆ ಮಾತ್ರವಲ್ಲ, ಸಂಪೂರ್ಣದೇಹವು ಬೇರೆಯವರ ವಶವಾಗಿರುವ ಸಂಗತಿಯಲ್ಲಿ ಅಂತಹ ಕೇಶಸಾಧನೆಯಲ್ಲಿ ನನ್ನ ಕೂದಲು ಮಾತ್ರವಲ್ಲ, ತಲೆ ಹೋದೀತೆಂಬ ಹೆದರಿಕೆಯು ನನಗಿತ್ತು. ಅದಲ್ಲದೆ ಕೋಳಿಗೆ ತನ್ನ ಚೂಡದ ಮೇಲೆ ಎಷ್ಟು ಪ್ರೇಮವೋ ಅದಕ್ಕಿಂತಲೂ ದಶಾಂಶವಾಗಿ ಅವಳಿಗೆ ತನ್ನ ವೇಣಿಯ ಮೇಲೆ ಪ್ರೇಮವಿತ್ತು. ಆದರೆ ನ್ಯಾಯಾಧೀಶನ ಸತ್ಯಸಂಧತೆಯನ್ನೂ ನಾರಿಯರ ಸತೀತ್ವವನ್ನೂ ಸೂರೆಗೊಳ್ಳುವ ಹಣವು ಒಬ್ಬ ಕ್ಷುದ್ರಸ್ತ್ರೀಯ ಒಂದೆರಡು ಕೂದಲುಗಳನ್ನು ಕೊಂಡುಕೊಳ್ಳಲಾರದೆ? ಒಂದು ಹಿಡಿ ಅಕ್ಕಿಗೋಸುಗ ದಿನವೆಲ್ಲ ಕಷ್ಟ ಮಾಡುವವಳು ಒಂದೆರಡು ರೂಪಾಯಿಗೆ ಕೆಲವು ಕೂದಲುಗಳನ್ನು ಕೊಡಲಾರಳೇ? ಈ ವಿಧವಾದ ತರ್ಕವಿತರ್ಕಗಳನ್ನು ನನ್ನಲ್ಲಿಯೇ ಮಥಿಸುತ್ತಾ ನಾನು ಪುನಃ ಮನೆಯನ್ನು ಸೇರಿದೆನು.

ಮೂರು ದಿವಸಗಳು ನಿಲ್ಲದೆ ಕಳೆದವು. ನಾಲ್ಕನೆಯ ದಿನ ರಾಯರ ಮನೆಗೆ ಹೋದೆನು. ಹೋದವನು ಕಾಲು ತೊಳೆಯುವುದಕ್ಕೆ ನೆಟ್ಟನೆ ಬಚ್ಚಲಿಗೆ ಹೋದೆನು. ಕೂದಲಿನವಳು ಒಲೆಗೆ ಕಟ್ಟಿಗೆಯನ್ನೊಟ್ಟಿ, ಬೆಂಕಿಯನ್ನುರಿಸುತ್ತಿದ್ದಳು. ನನ್ನನ್ನು ಮೆಲ್ಲಗೆ ನೋಡುತ್ತಲೇ–"ಹಾಳುಕಟ್ಟಿಗೆ! ಊದಿ ಊದಿ ಕಣ್ಣು ಹೋಯಿತು, ಇನ್ನೂ ಉರಿಯುವುದಿಲ್ಲ." ಎಂದು ತನ್ನಲ್ಲಿಯೇ ಗುಣುಗುಟ್ಟುತ್ತಿದ್ದಳು. "ಕಾಲು

ತೊಳೆಯುವುದಕ್ಕೆ ಒಂದು ತಪ್ಪಲೆ ನೀರು ಈಚೆಗೆ . . . ." ಎಂದು ದೃಢಮನಸ್ಕನಾಗಿ ಕೇಳಿದೆನು. ಅವಳು ಎದ್ದು ನಿಂತಳು. ಆದರೆ ನಿಂತವಳು ಕೈಯಲ್ಲಿ ತಪ್ಪಲೆಯನ್ನು ಕೊಳ್ಳದೆ, ಬೆಳ್ಳಿ ಬಿಗಿದ ನಸೆಡಬ್ಬಿಯನ್ನು ಕುಪ್ಪಸದಿಂದೀಚೆಗೆ ತೆಗೆದಳು. ನಸೆ ಉಂಟೋ ಇಲ್ಲವೋ ಎಂದು ನೋಡುವಂತೆ ಡಬ್ಬಿಯನ್ನು ತನ್ನ ಕಣ್ಣಿದಿರಿಗೆ (ಆದುದರಿಂದ ನನ್ನ ಕಣ್ಣಿದಿರಿಗೂ) ಹಿಡಿದು ಅಲ್ಲಿಯೇ ತಡೆದಳು. ನಾನೇನೋ ಧೈರ್ಯಗೊಂಡು, ಕಾಲು ತೊಳೆಯುವುದನ್ನು ಮರೆತು—"ಚೆಲೋ ನಸೆಡಬ್ಬಿ! ನಸೆ ಇಲ್ಲವೆ?" ಎಂದು ಕೇಳಿದೆನು. ಅವಳು ಡಬ್ಬಿಯನ್ನು ನನ್ನ ನೀಡಿದ ಕೈಗೆ ಕೊಡುವುದಕ್ಕೆ ಲಜ್ಜಿತಳಾಗಿ ನನ್ನ ಕಣ್ಣ ಮುಂದಿಟ್ಟು, ತಪ್ಪಲೆಯನ್ನು ಹಿಡಿದು, ಗುಡಾಣದಲ್ಲಿ ಮುಳುಗಿಸುತ್ತಿದ್ದಳು. ಆಗ ಏನು ಕಾರಣವೋ ನನಗೆ ಮುಗುಳುನಗೆ ಬಂತು; ನಾನು ನಗುವುದನ್ನು ಅವಳು ಓರೆ ನೋಟದಿಂದ ನೋಡದೆ ಹೋಗಲಿಲ್ಲ. ತಪ್ಪಲೆಯನ್ನು ನೀರು ತುಂಬಿ ನನ್ನ ಕೈಗೆ ಕೊಡುತ್ತಿದ್ದಾಗ ಅವಳೂ ನಗಾಡುತ್ತಿದ್ದಳು. ಆ ಸಮಯದಲ್ಲಿ ಯಾರೋ ಬರುವ ಸಪ್ಪುಳಾದುದರಿಂದ ನಾನು ಈಚೆಗೆ ಸರಿದೆನು. ಬಂದವಳು ನಮ್ಮಿಬ್ಬರನ್ನು ದೃಷ್ಟಿಸಿ, ಮನೆಯೊಳಗೆ ಸೇರಿದಳು. ನಾನು ದುರದೃಷ್ಟನೆಂದೆಣಿಸಿ ಅಲ್ಲಿಂದ ಕಾಲು ತೆಗೆದೆನು.

ಈ ವಿಧವಾಗಿ ಎರಡು ಚಿಕುರಗಳಿಗೋಸುಗ ನಾನು ನಿದ್ರಾಹಾರಾದಿಗಳನ್ನು ಬಿಟ್ಟು ಒದ್ದಾಡಿದೆನು. ನಾನು ಪಟ್ಟ ಕಷ್ಟಗಳೆಲ್ಲವನ್ನು ಕೇಳಿದರೆ (ಮದುವೆಯಾಗಿದ್ದರೆ) ನನ್ನ ಹೆಂಡತಿಯು ಜೀವದಿಂದುಳಿಯುತ್ತಿದ್ದಿಲ್ಲ. ಹಗಲೆನ್ನದೆ ಇರುಳೆನ್ನದೆ ಕೇರಿಯಿಂದ ಕೇರಿಗೆ ಓಡುತ್ತಾ, ನಿರ್ಜನ ಪ್ರದೇಶಗಳಲ್ಲಿ ಅಲೆಯುತ್ತಾ, ಅನೇಕ ಗವಿಗಳಲ್ಲಿ ಅಡಗುತ್ತಾ, ಕಷ್ಟಪಟ್ಟರೂ ಹಿಡಿದ ಕಾರ್ಯವನ್ನು ಬಿಡಲಿಲ್ಲ. ಕೂದಲುಗಳು ಸಿಕ್ಕಿದುವು; ಅವುಗಳನ್ನು ಚಿನ್ನದಿಂದ ಬಿಗಿದು ನಗವು ಸಿದ್ಧವಾಯಿತು. ಚಿಕ್ಕತಾಯಿಯ ಅನೆಜಮೊಸರಕ್ಕೂ ಈ ನಗಕ್ಕೂ ಯಾವ ವ್ಯತ್ಯಾಸವೂ ಇದ್ದಂತೆ ನನಗೆ ತೋರಲಿಲ್ಲ. ಇನ್ನು ಮುದಿ ಕಣ್ಣುಗಳಿಗೆ ಕಂಡುಹಿಡಿಯಲಿಕ್ಕೆ ಸಾಧ್ಯವೇ? ಚಿಕ್ಕತಾಯಿಯ ಸರ್ವಸ್ವವೂ ನನ್ನ ಕೈಗೆ ಸಿಕ್ಕಿತು, ಇನ್ನು ಮುಂದೆ ನನ್ನ ಸೌಭಾಗ್ಯಕ್ಕೆ ಪಾರಾವಾರವಿಲ್ಲ; ಇನ್ನು ರಾಜಣ್ಣನವರ ಅಳಿಯನಾಗುವುದರಲ್ಲಿ ನನಗೇನೂ ಸಂಶಯವಿರಲಿಲ್ಲ; ಅಳಿಯನಾದರೆ ಮುಂದೆ ಅವರ ಹಣವು ನನ್ನ ಪಾಲಿಗೇ ಬರುವುದು. (ಅವರಿಗೆ ಒಂದು ಹೆಣ್ಣು ಮಗುವಲ್ಲದೆ ಬೇರೆ ಮಕ್ಕಳಿರಲಿಲ್ಲ.) ಈ ವಿಧವಾಗಿ ಅಂತರಿಕ್ಷ ಗೋಪುರಗಳನ್ನು ಮನಸ್ಸಿನಲ್ಲಿಯೇ ಕಟ್ಟುತ್ತ ನಾನು ಮನೆಗೆ ಒಂದು ದಿನ ಸಾಯಂಕಾಲ ಹಿಂತಿರುಗುತ್ತಿದ್ದೆನು. ಎಡಬಲಗಳಲ್ಲಿ ಹೋಗುವವರನ್ನು ನಾನು ಲಕ್ಷಿಸಲಿಲ್ಲ. ಒಡನೆ ನನ್ನ ಹಿಂದೆ ಯಾರೋ ಓಡಿಬರುವ ಸಪ್ಪುಳವನ್ನು ಕೇಳಿದೆನು. ಮನೆಯನ್ನು ಮುಟ್ಟಲಿಕ್ಕೆ ಒಂದೆರಡು ಹೆಜ್ಜೆ ದೂರವಿತ್ತು. ಸಪ್ಪುಳು ನನ್ನ ಬೆನ್ನು ಹಿಂದೆಯೇ ಕೇಳಿಸಿತು. ಒಡನೆ ನನ್ನ ಹೆಗಲಿನ ಮೇಲೆ ಯಾರೊ ಕೈಯಿಟ್ಟರು. ಕತ್ತಲು ಬಲವಾದುದರಿಂದ ಯಾರೆಂದು ಚೆನ್ನಾಗಿ ತಿಳಿಯಲಿಲ್ಲ.

ವ್ಯಕ್ತಿ—"ರಾಯರೇ! ನಿಮ್ಮನ್ನು ಕರೆತರಲಿಕ್ಕೆ ನನ್ನನ್ನು ಕಳುಹಿಸಿರುವರು; ಒಂದು ಸಲ ಪೋಲಿಸ್ ಸ್ಟೇಶನಿಗೆ ದಯಮಾಡಬೇಕೆಂದು ಅಪ್ಪಣೆಯಾಗಿದೆ."

"ಇದೇನು? ಯಾರು ಅಪ್ಪಣೆ ಕೊಟ್ಟಿರುವರು?" ಎಂದು ನಾನು ತುಟಿಯಲ್ಲಾಡಿಸಿದೆನು.

ಒಡನೆ ಜನರೆಲ್ಲರು ಗುಂಪುಗುಂಪಾಗಿ ಬರಲಾರಂಭಿಸಿದರು; ಒಬ್ಬಿಬ್ಬರು "ಏತಕ್ಕೆ ಕೈದು ಮಾಡಿದರು? ಏತಕ್ಕೆ ಕೈದು ಮಾಡಿದರು?" ಎಂದು ಪರಸ್ಪರ ವಿಚಾರಿಸುತ್ತಿದ್ದರು. ಆ ಮಾತುಗಳನ್ನು ಕೇಳುತ್ತಲೇ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ಕಣ್ಣುಗಳಲ್ಲಿ ನಕ್ಷತ್ರಗಳು ಮಿಣುಕಿದುವು; ವಸ್ತುಗಳೆಲ್ಲವೂ ನನ್ನ ಸುತ್ತಲೂ ತಿರುಗುವಂತೆ ಕಂಡುಬಂದುವು; ಜನರ ಮಾತುಗಳು ದೂರದಿಂದ ಕೇಳಿಸುವಂತಾದುವು.

ವ್ಯಕ್ತಿ— "ಇವರ ಚಿಕ್ಕತಾಯಿಯ ಕೆಲವು ನಗಗಳು ಕಳವಾಗಿದ್ದುವು. ಅದಕ್ಕೋಸುಗ ಇವರನ್ನು ಸ್ಟೇಶನಿಗೆ ತರಬೇಕೆಂದು ಖಾವಂದರು ಅಪ್ಪಣೆಕೊಟ್ಟಿದ್ದರು. ಮೂರು ದಿವಸಗಳಿಂದ ಇವರನ್ನು ಹುಡುಕಿದರೂ ಇವರು ಸಿಕ್ಕಲಿಲ್ಲ. ಅವರಲ್ಲಿ ಆಗುವದೇನೂ ಇಲ್ಲ."

"ಅದು ಹೇ—ಹೇಗೆ? ನಾ—ನಾನು ಕಳವು ಮಾಡಿದೆನೆ?"

ವ್ಯಕ್ತಿ— "ನಿಮ್ಮ ಚಿಕ್ಕತಾಯಿ ಎಲ್ಲವನ್ನು ಬಲ್ಲಳು. ಅದನ್ನೆಲ್ಲ ಮತ್ತೆ ನೋಡುವ! ಈಗ ಒಂದು ಸಲ ಸ್ಟೇಶನಿಗೆ ನಡೆಯುವ!"

ನಾನು ಚಿಕ್ಕತಾಯಿಯನ್ನು ನೋಡದೆ ಬರಲಾರೆನೆಂದೆನು. ಕಡೆಗೆ ಪೋಲಿಸನವನು ಒಪ್ಪಿ, ನನ್ನ ಕೈಹಿಡಿದು ನನ್ನೊಡನೆ ಮನೆಗೆ ಬಂದನು.

ಮಾರ್ಗದ ಮೇಲೆ ಬರುತ್ತಿರುವಾಗ ನನಗೆ ಎಲ್ಲ ಸಂಗತಿಗಳು ಮನಸ್ಸಿನಲ್ಲಿ ಎದ್ದು ನಿಂತು ಸ್ಪಷ್ಟವಾಗಿ ತೋರಿದುವು. ಪೋಲಿಸನವರು ಮೊದಲಿಂದ ನನ್ನನ್ನೇ ಗುರಿ ನೋಡುತ್ತಿದ್ದರೆಂತಲೂ, ನಾನು ಮೈಮರೆವಂತೆ ಅವರು ನಂಬ್ರವನ್ನು ಸಡಿಲು ಬಿಟ್ಟರೆಂತಲೂ, ನನ್ನ ಕಳ್ಳಹೆಜ್ಜೆಗಳನ್ನು ಅವರು ಆಗಾಗ ಹೊಂಚಿನೋಡುತ್ತಿದ್ದರೆಂತಲೂ, ನನ್ನ ಮನಸ್ಸಿಗೆ ಖಚಿತವಾಯಿತು. ಅದಲ್ಲದೆ ನಾನು ಅನೇಕ ಅಕ್ಕಸಾಲಿಗರ ಅಂಗಡಿಗಳಲ್ಲಿ ಕುಳಿತಿರುವುದನ್ನೂ, ವಿಜನಸ್ಥಳಗಳಲ್ಲಿ ಒಂಟಿಗ

ನಾಗಿ ಅಲೆಯುವುದನ್ನೂ, ಕ್ಷುದ್ರಸ್ತ್ರೀಯ ಗವಿಯಲ್ಲಿ ಆಗಾಗ ನುಸುಳುವುದನ್ನೂ, ಇವರು ನೋಡಿದ್ದರೂ ಇರಬಹುದು. ಈ ವಿಷಯಗಳು ನನ್ನ ಮನಸ್ಸಿಗೆ ಪರಂಪರೆಯಾಗಿ ಸಾಲಿಡುತ್ತಲೇ ನನ್ನ ಕಳವಳವು ಭಯಂಕರವಾಯಿತು. ನನ್ನ ಚಿತೆಯನ್ನು ನಾನೇ ಸಿದ್ಧಪಡಿಸಿದಂತಾಯಿತು; ನಾನು ಅಗಿದ ಗುಣಿಯಲ್ಲಿ ನಾನೇ ಬೀಳುವುದಾಯಿತು. ಒಂದು ಕಡೆಯಲ್ಲಿ ಬಂಧನ ಶಿಕ್ಷೆ, ಇನ್ನೊಂದು ಕಡೆಯಲ್ಲಿ ದುಃಖಕರವಾದ ಕೃತಘ್ನತೆಯ ದೋಷ. ಇದನ್ನು ತಪ್ಪಿಸುವ ಹಾದಿಯಾವುದು? ಸತ್ಯವನ್ನು ಅಡಗಿಸಿದರೆ ಶಿಕ್ಷೆಯು ಎಷ್ಟು ವರ್ಷ ಎಂಬ ಪ್ರಶ್ನೆಯಲ್ಲದೆ ಮತ್ತೊಂದಿಲ್ಲ. ಸತ್ಯವನ್ನೊಪ್ಪಿದರೆ ಈ ಜನ್ಮದಲ್ಲಿ ಚಿಕ್ಕತಾಯಿಯನ್ನು ನೋಡುವುದು ಮುಗಿಯಿತು. ಆದುದರಿಂದ ಅಸತ್ಯದಿಂದ ಅಸತ್ಯವನ್ನುದೃಢಪಡಿಸಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿದೆನು.

ಪೋಲಿಸನವರು ನನ್ನನ್ನು ಹಿಡಿದಿರುವರು ಎಂಬುದನ್ನು ಚಿಕ್ಕತಾಯಿಯು ಕೆಲವು ನಿಮಿಷಗಳ ಹಿಂದೆ ತಿಳಿದಿದ್ದಳು. ನಾವಿಬ್ಬರು ಒಳಗೆ ಬರುತ್ತಲೇ ಅವಳು ನನಗೋಸ್ಕರ ಅಳುವುದನ್ನೂ, ಪೋಲಿಸನವರನ್ನು ಮಧುರಭಾಷೆಯಿಂದ ಶಪಿಸುವುದನ್ನೂ ನಾನು ಕೇಳಿದೆನು. ಒಡನೆ ಅವಳಿದ್ದಲ್ಲಿಗೆ ನಡೆದು, ಪೋಲಿಸನವನು ಬಂದ ಸಂಗತಿಯನ್ನು ತಿಳಿಸಿದೆನು; ವಿಳಂಬ ಮಾಡದೆ ನಗವನ್ನು ತಂದಿರುವೆನೆಂದು ಹೇಳಿ, ಆನೆಜಮೆಸರವನ್ನು ಅವಳ ಕೈಗೆ ಕೊಟ್ಟೆನು. ಅವಳು ಅದನ್ನು ಎಷ್ಟೋ ನೋಡಿದಳು! ನನ್ನನ್ನು ಎಷ್ಟೋ ಹೊಗಳಿದಳು! ಪೋಲಿಸನವರನ್ನು ಎಷ್ಟೋ ಬೈದಳು! ಪೋಲಿಸನವನು ನಗವನ್ನು ನೋಡಿ "ಅಮ್ಮಾ! ಆ ನಗವು ನಿಮ್ಮದೆಂದು ನೀವು ಹೇಳುವಿರೇ?" ಎಂದನು. "ನನ್ನ ನಗವನ್ನು ನಾನು ಕಂಡುಹಿಡಿಯಲಾರೆನೆ? ಇದು ಸಾವಿರ ನಗಗಳಲ್ಲಿದ್ದರೂ ನಾನು ಇದನ್ನೇ ಗುರುತು ಹಿಡಿಯುವೆನು" ಎಂದಳು. "ಇದು ನಿಮ್ಮದೆಂದು ನೀವು ಒಪ್ಪುತ್ತೀರೇ?" ಎಂದು ಪುನಃ ಕೇಳಿದನು. ಈ ಮಾತುಗಳನ್ನು ಕೇಳಿ ನನ್ನ ಮನಸ್ಸಿಗೆ ಇನ್ನೂ ಸಂಶಯವೂ ಭಯವೂ ಉಂಟಾಯಿತು; ಏಕೆಂದರೆ ಈ ಮಾತುಗಳನ್ನೇ ನನ್ನ ಚಿಕ್ಕತಾಯಿ ಮತ್ತೂ ಒಪ್ಪಿದರೆ ನಾನೇ ಕಳ್ಳನೆಂದು ಸಾಧಿಸುವುದರಲ್ಲಿ ಪೋಲಿಸನವರಿಗೆ ಕಷ್ಟವೇನೂ ಇಲ್ಲ. ಆ ಮಾತುಗಳ ಬಲವನ್ನು ತಪ್ಪಿಸಲೋಸುಗ ನಾನು ಒಂದು ನುಡಿಯನ್ನಾಡಲಿಕ್ಕೆ ಬಾಯೆತ್ತಿದೆನು. ಆದರೆ ಅಷ್ಟರೊಳಗೆ ಯಾರೊ ಒಳಗೆ ಬಂದರು. ಬಂದವನು ಒಂದು ಕಾಗದವನ್ನು ಪೋಲಿಸನವನ ಕೈಗೆ ಕೊಟ್ಟನು. ಕಾಗದವು ಚಿಕ್ಕತಾಯಿಯ ವಿಳಾಸಕ್ಕೆ ಬರೆದಿತ್ತು. ಕೂಡಲೇ ಅವಳಿಯು ಅದನ್ನೋದುವುದಕ್ಕೆ ಹೇಳಿದಳು. ಅದರಲ್ಲಿ ಬರೆದುವನ್ನು ಪೋಲಿಸನವನು ಹೀಗೆ ಓದಿದನು.

**"ನೀವು ಎರಡು ತಿಂಗಳ ಹಿಂದೆ ಇಲ್ಲಿ ಬಂದಾಗ, ಮಂದಿರದಲ್ಲಿ ನಡೆಯುವ ಪುರಾಣ ಶ್ರವಣಕಾಲದಲ್ಲಿ ನಿಮ್ಮ ನಗಗಳ ಗಂಟನ್ನು ಇಲ್ಲಿ ಮರೆತುಬಿಟ್ಟು ಹೋದಿರಿ. ನಿಮ್ಮ ಆನೆಜಮೆಸರವು ನಿಮ್ಮ ಜಪಕ್ಕೆ ನಿತ್ಯವೂ ಅವಶ್ಯವೆಂದು ಸ್ವತಃ ಗೊತ್ತಿದುದರಿಂದ, ಈ ಕಾಗದ ತರುವವನ ಕೈಯು ಅದನ್ನು ಕಳುಹಿಸಿರುತ್ತೇನೆ. ತಮ್ಮ ಮಿಕ್ಕ ನಗಗಳು ದೇವಪ್ರತಿಮೆಯ ಅಲಂಕಾರಕ್ಕಾಗಿ ಇಲ್ಲಿ ಇಟ್ಟಿರುತ್ತೇವೆ. ಕೃಷ್ಣಾಷ್ಟಮಿಯ ಉತ್ಸವವೂ ಭಜನೆಯೂ ಈ ವರ್ಷ ವಿಶೇಷ ತರದ್ದಾಗಿರುವುದರಿಂದ ತಾವು ಬರಬೇಕಾಗಿ ಪೌರಾಣಿಕರು ಅಪೇಕ್ಷಿಸುತ್ತಾರೆ."**

ಈ ಕಾಗದವನ್ನು ಓದುತ್ತಲೇ ನನ್ನ ಮೈಯೆಲ್ಲ ತಣ್ಣಗಾಯಿತು; ಕಣ್ಣುಗಳಲ್ಲಿ ಡೊಣ್ಣೆಯಿಂದ ಯಾರೋ ಬಡಿದಂತಾಯಿತು. ನಾನು ಏನು ಹೇಳಿದೆನೋ ಏನು ಮಾಡಿದೆನೋ ಈಗ ಸ್ಮರಿಸಲಾರೆನು.

ಆ ಮೇಲೆ ನಡೆದ ವಿಷಯವನ್ನು ಇಲ್ಲಿ ಹೇಳುವುದು ಅವಶ್ಯವಿಲ್ಲ. ನನಗೆ ಮನೆಗಿಂತಲೂ ಸೆರೆಯೆ ಲೇಸೆಂದು ಕಂಡುಬಂತು. ಇನ್ನು ಮಾಡುವುದೇನು? ಆದರೆ ಸಂಪೂರ್ಣ ವಿಷಯವನ್ನು ಹೇಳುವುದು ಒಳ್ಳೆಯದು. ಮರುದಿನ ಹೊಸಪೇಟೆ ರಾಜಣ್ಣನವರ ಪತ್ನಿಯು ಬಂದು, ನನ್ನ ಚಿಕ್ಕತಾಯೊಡನೆ ಈ ರೀತಿಯಲ್ಲಿ ಮಾತಾಡುವುದನ್ನು ನಾನು ಮರೆಯಲ್ಲಿದ್ದು ಕೇಳಿದೆನು—

**"ನಿಮ್ಮ ಹುಡುಗನ ಜಾತಕವು ನಮ್ಮ ಸಕಲಾವತಿಯ ಜಾತಕಕ್ಕೆ ಕೂಡಿಬರುತ್ತಿತ್ತು; ಸಂಬಂಧವು ಒಳ್ಳೆಯದಾಗಿತ್ತು. ಆದರೆ ನಿಮ್ಮ ಹುಡುಗನು ಕೆಲವು ದಿನಗಳಿಂದ ಈಚೆಗೆ ಕೇರಿಕೇರಿಗಳಲ್ಲಿ ತಿರುಗುವುದನ್ನೂ, ಒಂದೆರಡು ಸಲ-ಮನೆಗಳನ್ನು ಸೇರಿದುದನ್ನೂ ನಮ್ಮ ಮನೆಯವರು ನೋಡಿದರಂತೆ. ನಾನು ಹುಡುಗನೆಂದು ಸುಮ್ಮನಿದ್ದೆನು. ಆತನು ಹೆಚ್ಚುಸಲ ನಮ್ಮ ನೆರೆಮನೆಯ ಸೋಮಿಯೊಡನೆ ಒಬ್ಬನೇ ಮಾತಾಡುವುದನ್ನೂ ರೂಪಾಯಿ ಕೈಯಲ್ಲಿ ಹಿಡಿದುದನ್ನೂ ನಾನು ಗೋವಿಂದರಾಯರ ಮನೆಗೆ ಬರುತ್ತ ಹೋಗುತ್ತಿದ್ದಾಗ ನೋಡಿದ್ದೇನೆ. ಈ ಕಾರಣದಿಂದ ನಮ್ಮ ಮನೆಯವರಿಗೆ ಸಂಬಂಧದ ಪ್ರಸ್ತಾಪವು ಈಗ ಕಿವಿಗೇ ಹೋಗುವುದಿಲ್ಲ."**

ಇದನ್ನು ಕೇಳುತ್ತಲೇ ನನ್ನ ಜೀವದಾಸೆ ಎಲ್ಲವೂ ಮುಗಿಯಿತು. ಏನು ಮಾಡುವುದು? ಈಗ ನಾನೇನು ಮಾಡುವುದು? ಸರ್ವಜನ ಪರಿಪೂರಿತವಾದ ಈ ಲೋಕಸಾಗರದಲ್ಲಿ ನಾನು ನನ್ನ ಜೀವನ ನೌಕವನ್ನು ಮುಂದೆ ಹೇಗೆ ನಡೆಯಿಸುವುದು? ನಾನು ಏನು ಮಾಡಲಿ? ನನ್ನ ಕಥೆಯನ್ನು ಓದುವ ಅಭಿಜ್ಞ ಪಾಠಕರಲ್ಲಿ ಯಾರೊಬ್ಬನಾದರೂ ಹೆಡ್ಡನಾದ ನಾನು ಮುಂದೆ ಏನು ಮಾಡಬೇಕೆಂದು ಹೇಳಲಾರನೆ?

"ಸುವಾಸಿನಿ ೧೯೦೦"

# ನನ್ನ ಚಿಕ್ಕತಂದೆ

ನನ್ನ ಚಿಕ್ಕತಾಯಿ ನಮ್ಮಿಬ್ಬರನ್ನು ತನ್ನ ಮನೆಯಲ್ಲಿ ಬಿಟ್ಟು ಈ ಲೋಕದಿಂದ ದೂರಳಾದಳು. ಅವಳು ಸ್ವರ್ಗಕ್ಕೆ ಹೋದಳೊ ನರಕಕ್ಕೆ ಬಿದ್ದಳೊ ನನ್ನಿಂದ ಹೇಳಲು ಸಾಧ್ಯವಿಲ್ಲ. ಸ್ವರ್ಗದ ಸೋಪಾನಗಳು ಸಾವಿರವಾದರೆ, ಅವನ್ನೆಲ್ಲಾ ಹತ್ತುವಷ್ಟು ದೇಹಶಕ್ತಿ ಅವಳಲ್ಲಿ ಇಲ್ಲ. ನರಕದ ನವದ್ವಾರಗಳು ಇಕ್ಕಟ್ಟಾದರೆ, ಅವುಗಳನ್ನು ದಾಟಿಹೋಗುವಷ್ಟು ದೇಹಕೃಶತ್ವವು ಅವಳಲ್ಲಿ ಇಲ್ಲ. ಇಹದಲ್ಲಿ ಉಣ್ಣದೆ ಉಡದೆ ಕಾಸಿಗೆ ಕಾಸು ಕೂಡಿಸುವ ಪುಣ್ಯವಂತರು ಸ್ವರ್ಗವನ್ನು ಏರುವುದು ನಿಜವಾದರೆ, ಅವಳು ನರಕದಲ್ಲಿ ಬೀಳಲಿಲ್ಲ. ಸಂತಭಜನೆಯಲ್ಲಿ ದೇಹವನ್ನು ವಿನಿಯೋಗಿಸುವ 'ಮೊಂಡು ಭಕ್ತಿಯ' ವೃದ್ಧ ಪತಿವ್ರತೆಯರು ನರಕಕ್ಕೆ ಇಳಿಯುವುದು ಸತ್ಯವಾದರೆ, ಅವಳು ಸ್ವರ್ಗವನ್ನು ಸೇರಲಿಲ್ಲ. ಅವಳು ಎಲ್ಲಿ ಹೋದಳೆಂದು ಈಗ ವಿಚಾರಿಸುವುದು ಅವಶ್ಯವಿಲ್ಲ. ಒಂದು ದಿನ ನಾವೂ ನೀವೂ ಅದನ್ನು ಕಂಡು ಹಿಡಿಯದೆ ಇರಲಾರೆವು. ಹೇಗೂ ನನ್ನ ಚಿಕ್ಕತಾಯಿ ಮಾನವ ಶರೀರವನ್ನು ಬಿಟ್ಟು ಹೋದಳು. ಹೋಗುವಾಗ ತನ್ನ ಮನೆಯನ್ನು ತನ್ನೊಡನೆ ಕೊಂಡು ಹೋಗಲು ಪ್ರಯತ್ನ ಮಾಡುವುದಕ್ಕೆ ಮರೆತುಬಿಟ್ಟಳು. ಅಂದಿನಿಂದ ಅವಳ ಮನೆ ಮಾತ್ರವೇ (ಅವಳ ಒಡವೆಯ ಗೂಟು ಯಥಾರ್ಥವಾಗಿ ನನಗೆ ಸಿಕ್ಕಲಿಲ್ಲ) ನನ್ನ ಪಾಲಿಗೆ ಬರದಹಾಗಾಯಿತು. ಅಂದಿನಿಂದ ನಾವಿಬ್ಬರು—ನಾನು ಮತ್ತು ನನ್ನವಳು — ಆ ಮನೆಯಲ್ಲಿ, ನನ್ನ ಚಿಕ್ಕತಾಯ ಸ್ಥೂಲ ದೇಹಗಳತ್ ಸ್ವೇದಜಲಸಮ್ಮಾರ್ಜಿತ ಭಿತ್ತಿಯುಕ್ತವಾದ ಮನೆಯಲ್ಲಿ, ಗಡ್ಡವಿೂಸೆಗಳನ್ನು ಗಾಯವಾಗುವಂತೆ ಬೋಳಿಸಿಕೊಂಡು ಹದಿನೆರಡುದಿನ ತಣ್ಣೀರು ಮಿಂದು ಒಪ್ಪೊತ್ತು ಉಂಡುದಕ್ಕೆ ಪ್ರತಿಫಲವಾಗಿ ಸಿಕ್ಕಿದ ಮನೆಯಲ್ಲಿ, ನನ್ನ ಚಿಕ್ಕತಾಯ ಪೂರ್ವ ಮಹತ್ವಕ್ಕೆ ಇಹಲೋಕದಲ್ಲಿ ಸ್ಮಾರಕ ಚಿಹ್ನವಾಗಿ ಉಳಿದಂತಹ ಮನೆಯಲ್ಲಿ ನಾವಿಬ್ಬರು ಸ್ವಲ್ಪಕಾಲ ಸುಖವಾಗಿದ್ದೆವು. ಆದರೆ ಈ ಮನೆಯಲ್ಲಿ ನಾನು ಚಿರಕಾಲವಿರುವಂತೆ ನನ್ನ ಹಣೆಯಲ್ಲಿ ಬರೆಯುವುದಕ್ಕೆ ಬೊಮ್ಮದೇವನಿಗೆ ಮಸಿಯೂ ಲೇಖಣಿಯೂ ಇರಲಿಲ್ಲವೆಂದು ತೋರುತ್ತಿದೆ. ಇಲ್ಲವಾದರೆ ಮುದಿಗೂಗೆಯ ಗೂಡಿನಲ್ಲಿದ್ದ ಗಿಳಿಮರಿಗಳಂತಿರುವ ನಮ್ಮ ಬಳಿಗೆ ಅಕಸ್ಮಾತ್ ಈ ಮಾರ್ಜಾಲಋಷಿ ಏತಕ್ಕೆ ಬಂದನು? ಇದುವರೆಗೆ ಅಜ್ಞಾತವಾಸದಲ್ಲಿದ್ದ ಈ ವೃದ್ಧ ಯುಧಿಷ್ಠಿರನು ಮರಳಿ ಪಟ್ಟಣಕ್ಕೆ ಮೋರೆಯನ್ನು ತೋರಿಸಿದನೇತಕ್ಕೆ? ೪೦ವರ್ಷ ಊರು ಬಿಟ್ಟು ಹೋದ ನನ್ನ ಚಿಕ್ಕತಂದೆಯವರು ತಿರುಗಿ ನನ್ನ-ತನ್ನ-ಮನೆಗೆ ಏತಕ್ಕೆ ಕಾಲಿಟ್ಟರು?

ನನ್ನ ಚಿಕ್ಕತಂದೆಯವರಿಗೆ ಸುಮಾರು ೭೦ವರ್ಷ. ಕೆಲವರಿಗೆ ವಾರ್ಧಕ್ಯದಲ್ಲಿ ಯೌವನ ಪ್ರಾಪ್ತಿಯುಂಟಾಗುವುದು. ನಮ್ಮ ಚಿಕ್ಕಪ್ಪನವರಿಗೆ ಹೀಗಿದ್ದಿತು. ಅವರು ಪ್ರಾಯದಲ್ಲಿ ಮುದುಕರಾದರೂ ದೇಹದಲ್ಲಿ ವೃದ್ಧರಾಗಿರಲಿಲ್ಲ; ಹೆಣ್ಣು ಕೊಡುವವರಿದ್ದರೆ ತಲೆಗೆ ಬಾಸಿಂಗ ಸಿಕ್ಕಿಸಿಕೊಳ್ಳಲಿಕ್ಕೆ ಅವರು ಸಿದ್ಧರಾಗಿದ್ದರು. ಅವರು ಒಂದು ಎರಡು ವರ್ಷಗಳಾದರೂ, ತಮ್ಮ ಜಾತಕದ ಪ್ರತಿಯನ್ನು ತಲೆಯ ಮುಂಡಾಸಿನಲ್ಲಿಯೇ ಇಟ್ಟುಕೊಂಡು ದಿನವೆಲ್ಲ ತಿರುಗಿದರೂ, ಹೆಣ್ಣು ಮಕ್ಕಳ ಆಸೆಯಿದ್ದ ಪಾಪಿಗಳು ಯಾರೂ ಅದನ್ನು ಕುರಿತು ವಿಚಾರಿಸಲಿಲ್ಲ. ತಲೆಯಕೂದಲೆಲ್ಲಾ ನರೆತಿದ್ದುವು. ಕಣ್ಣುಗಳು ಮಾತ್ರ ಗುಂಡಿಗೆ ಇಳಿದಿರಲಿಲ್ಲ; ಅವುಗಳು ನೋಟಕರನ್ನು ಗುಂಡಿಗೆ ತಳ್ಳುವಂತಿದ್ದುವು. ಈ ಕಣ್ಣುಗಳ ನಡುವಿನಿಂದ ಮೂಗಿನ ಮೇಲ್ಭಾಗವು ಉದ್ಭವಿಸಿ, ಗರಿಗಳಿಲ್ಲದ ತೆಂಗಿನ ಸೋಗೆಯಂತೆ ಕೆಳಕ್ಕೆ ಹರಿದು, ಅದರ ಮೊಂಡಭಾಗವು ಮೇಲಿನ ತುಟಿಯನ್ನು ಅಂಟಿಕೊಂಡಿತ್ತು. ಮೂಗಿನ ಸೊಳ್ಳೆಗಳ ಇಕ್ಕಡೆಗಳಲ್ಲಿಯೂ ಗಲ್ಲಗಳ ತೊಗಲು ಸ್ವಲ್ಪ ಮುದುರಿಕೊಂಡಿತ್ತು. ತುಟಿಗಳು ಸ್ವಲ್ಪ ತೆರೆದಿರುವುದರಿಂದ ಒಳಗಿನ ಹಲ್ಲುಗಳು ಇನ್ನೂ ಬೆಳ್ಳಗಾಗಿ ತೋರುತ್ತಿದ್ದುವು. ಮೈಯಲ್ಲಿ ರೋಮವಿಲ್ಲದಿದ್ದರೂ ಒಂದು ಪ್ರಕಾರವಾದ ಕಪ್ಪುಬಣ್ಣವು ತುಂಬಿಹೋಗಿತ್ತು. ಕೆಲದಿನಗಳ ಕೆಳಗೆ ಗಟ್ಟದ ಕಾಫಿತೋಟಗಳಿಗೆ ಆಳುಗಳನ್ನು ಗೊತ್ತುಹಚ್ಚುವ 'ಕಂಟ್ರಾಕ್ಟ್ದಾರನು', ನಮ್ಮ ಚಿಕ್ಕ ತಂದೆಯವರ ಕೈಹಿಡಿದು ಬಳಿಕ ಅವರ ಕ್ಷಮಾಪಣೆಯನ್ನು ಬೇಡಿಕೊಂಡನಂತೆ. ಅವರ ಮೈಬಣ್ಣವು ಹೇಗಿರುವುದೆಂದು ಪಾಠಕ ಮಹಾಶಯರಿಗೆ ಖಚಿತ ಮಾಡುವುದಕ್ಕೆ ಅವಕ್ಕೆ ಸಾದೃಶ್ಯ ಪದಾರ್ಥವನ್ನು ಇನ್ನೂ ಹುಡುಕುತ್ತಲಿರುವೆನು. ನನ್ನ ಚಿಕ್ಕತಂದೆಯವರ ಹೆಸರು ಏನೆಂಬುದು ಈ ತನಕ ಸರಿಯಾಗಿ ನನಗೆ ಗೊತ್ತಾಗಲಿಲ್ಲ. ನನ್ನ ಚಿಕ್ಕತಾಯಿ ಜೀವಂತಳಾಗಿದ್ದಾಗ, 'ಜೋಗಳ ಹಾಡು' ಎನ್ನುವ ಬದಲಾಗಿ 'ತೊಟ್ಟಿಲು ತೂಗುವ ಪದ' ಎನ್ನುತ್ತಿದ್ದಳು. ಹಾಗೆಯೇ "ಮೇಲಿಂದ ನೀರು ಹರಿಯುವುದು" ಎನ್ನುವಳಲ್ಲದೆ "ಜೋಗು" ಎಂಬ ಪದವನ್ನು ಉಚ್ಚರಿಸುತ್ತಿದ್ದಿಲ್ಲ. ಈ ಕಾರಣಗಳಿಂದ ನಮ್ಮ ಚಿಕ್ಕತಂದೆಯವರ ಹೆಸರು "ಜೋಗಪ್ಪ" ಎಂದು ನಾನು ಸಾಧಾರಣ ನಿಶ್ಚಯಮಾಡಿದೆನು. ನಾನು 'ಚಿಕ್ಕಪ್ಪಾ! ಚಿಕ್ಕಪ್ಪಾ!' ಎಂದು ಯಾವಾಗಲೂ ಕರೆಯುತ್ತಿದ್ದುದರಿಂದ, ನನ್ನ ಸ್ನೇಹಿತರೆಲ್ಲ ಈ ಮಾತನ್ನೆ ಹಿಡಿದು, ಅವರನ್ನು ಚಿಕ್ಕಪ್ಪಯ್ಯ ಎಂದು ಸಂಬೋಧಿಸುತ್ತಿದ್ದರು. ಹಲವು

ಜನ ಪಾರಮಾರ್ಥ ಬಲ್ಲವರು ಇದಕ್ಕೆ ಬದಲಾಗಿ "ಛಿ! ಕಪ್ಪಯ್ಯ!" ಎಂತಲೂ ಹೇಳುತ್ತಿದ್ದರು. ಅವರು ಹೀಗೆ ಕರೆಯುತ್ತಿದ್ದುದು ನ್ಯಾಯವೊ ಅನ್ಯಾಯವೊ ವಾಚಕರೇ ವಿಚಾರಿಸಬಹುದು.

ನಮ್ಮ ಚಿಕ್ಕತಂದೆಯವರು ಮತದಲ್ಲಿ ಅದ್ವೈತವನ್ನು ಅವಲಂಬಿಸಿದ್ದರು. ಅವರಿಗೆ ಅನ್ಯ ಹಣ ಬೇರೆ, ತನ್ನ ಹಣ ಬೇರೆ, ಎಂಬ ದ್ವೈತಾಭಿಪ್ರಾಯವಿರಲಿಲ್ಲ; ಎಲ್ಲವೂ ತನ್ನ ಪೆಟ್ಟಿಗೆಯನ್ನೇ ಸೇರಬೇಕೆಂಬ ಸದ್ಧರ್ಮವನ್ನು ಅವರು ವಿಚಾರಿಸುತ್ತಿದ್ದರು. ಅವರು ವಿಚಾರಿಸುವಂತೆ ಅವರ ಬಳಿಯಲ್ಲಿ ಸ್ವಲ್ಪ ಹಣವಿತ್ತು. ಅದು ಎಷ್ಟಿತ್ತೆಂದು ಕಂಡು ಹಿಡಿಯುವುದಕ್ಕೆ ಅನುಕೂಲವಾದ ಸಮಯವು ಇನ್ನೂ ಒದಗಲಿಲ್ಲ ಎಂದು ನಾನು ವ್ಯಸನಪಡುತ್ತೇನೆ. ಹಣದ ಪೆಟ್ಟಿಗೆಯನ್ನು ದಿನಕ್ಕೆ ಎರಡು ಸಲ ಪೂಜಿಸುತ್ತಿದ್ದರು. ಈ ಹಣವು ಅವರೊಡನೆ ಉಂಟೆಂಬ ಪರಿಜ್ಞಾನದಿಂದಲೇ ನಾನು ನಿರಾಯಸವಾದ ಎರಡು ಊಟಗಳನ್ನು ಅವರಿಗೆ ಕೊಡುತ್ತಿದ್ದೆನು. ನಾನು ಊಟ ಹಾಕದಿದ್ದರೆ, ಪರರ ಮನೆಯಲ್ಲಿ ಈ ಹಣದ ಪೆಟ್ಟಿಗೆಯ ದರ್ಶನದಿಂದಲೇ ಉಳುಕೊಳ್ಳುವುದು ಅವರಿಗೆ ಕಷ್ಟವಾಗುತ್ತಿರಲಿಲ್ಲ. ಈ ಪೆಟ್ಟಿಗೆಯನ್ನು ನೋಡಿಕೊಂಡು ಎಷ್ಟೋ ಜನರು ಅವರ ಕಾಲುಹಿಡಿದು ತಮ್ಮ ಮನೆಯಲ್ಲಿ ಅವರನ್ನು ನಿಲ್ಲಿಸಿಕೊಂಡು ಮೋಸಹೋಗುವುದಕ್ಕೆ ಸಿದ್ಧರಾಗಿದ್ದರು. "ನನ್ನ ತಲೆಯ ಮೇಲೆ ಇನ್ನು ಹೆಚ್ಚು ದಿವಸಗಳು ಹೋಗಲಾವು" ಎಂದು ನನ್ನ ಚಿಕ್ಕತಂದೆಯವರು ನನಗೆ ಕೇಳಿಸುವಂತೆ ಪದೆಪದೇ ಹೇಳುತ್ತಿದ್ದುದರಿಂದ, ನಾನು ವೆಚ್ಚದ ವಿಷಯದಲ್ಲಿ ಅಷ್ಟು ವಿಚಾರಮಾಡುತ್ತಿದ್ದಿಲ್ಲ. ಆದರೆ ಒಂದೊಂದು ಸಲ "ದಿನ ಹೋಗದಿದ್ದರೂ ವರ್ಷಗಳು ಹೋಗಬಹುದಲ್ಲವೆ" ಎಂದು ಸಂಶಯ ಮನಸ್ಕನಾಗುತ್ತಿದ್ದೆನು. ಅವರಿಗೆ ಇನ್ನೂ ದೀರ್ಘಕಾಲ ಬದುಕಬೇಕೆಂಬ ಆಸೆ ಇತ್ತೊ ಇಲ್ಲವೊ ನನ್ನಿಂದ ಹೇಳಲು ಬರುವುದಿಲ್ಲ. ಆದರೆ ಅಭ್ಯಂಗಸ್ನಾನಗಳಲ್ಲಿ ದಿನ ತಪ್ಪುತ್ತಿದ್ದಿಲ್ಲ; ಊಟಗಳಲ್ಲಿ ಗಂಟೆ ತಪ್ಪುತ್ತಿದ್ದಿಲ್ಲ; ಫಲಾಹಾರ ವಿಷಯದಲ್ಲಿ ನಿಮಿಷ ತಪ್ಪುತ್ತಿದ್ದಿಲ್ಲ.

ನಮ್ಮ ಚಿಕ್ಕತಂದೆಯವರು—

ಪಾಠಕಮಹಾಶಯರು ಇನ್ನೂ ತಾಳಲಾರರು. ನನ್ನ ಚಿಕ್ಕತಂದೆಯವರನ್ನು ಕುರಿತು ಓದಿ ಓದಿ ನಿಮ್ಮ ಸಹನಾಶಕ್ತಿಯು ಸಾಕುಸಾಕಾಯಿತು. "ಇನ್ನೂ ಈತನ ಚಿಕ್ಕತಂದೆಯವರು ಹೋಗಲಿಲ್ಲ" ಎಂದು ಮಹಾಶಯರು ಕೋಪಿಸಿ "ಸತ್ತುಹೋಗಲಿ" ಎಂದು ಪುಸ್ತಕವನ್ನು ಬಿಸುಡುವರೆಂದು ನಾನು ಸಂಶಯಪಡುತ್ತೇನೆ. 'ಹಾಗೆ ಆಗಲಿಲ್ಲವಲ್ಲ!' ಎಂದು ನಾನೂ ವ್ಯಸನಪಟ್ಟರೂ, ನನ್ನ ಚಿಕ್ಕತಂದೆಯವರ ಅಂಥ ಸ್ಥಿತಿಯನ್ನು ನೋಡಲು ನೀವು ಸಂತೋಷಪಡುವುದಾದರೆ ನಾನು ಮುಂದೆ ಹೇಳತೊಡಗುವೆನು. ಆದರೆ ಅಷ್ಟರಲ್ಲಿ ನಮ್ಮ ಮನೆಯಲ್ಲಿದ್ದ ಮತ್ತೊಬ್ಬ ವ್ಯಕ್ತಿಯನ್ನು ಕುರಿತು ಕೆಲವು ಮಾತುಗಳನ್ನು ಹೇಳಲು ಬಯಸುವೆನು.

ಈ ವ್ಯಕ್ತಿಯ ಪರಿಚಯವು ಊರಲ್ಲಿ ಎಲ್ಲರಿಗೂ ಇತ್ತು. ಊರಲ್ಲಿ ಹೆಣ್ಣುಮಕ್ಕಳು ಅಳುತ್ತಿದ್ದರೆ,ಮುದ್ದಣ್ಣನಿಗೆ ಮದುವೆ ಮಾಡಿಕೊಡುತ್ತೇವೆ ಎಂದು ತಂದೆತಾಯಿಗಳು ಅಣಕಿಸುವುದುಂಟು. ಮುದ್ದಣ್ಣನು ನಮ್ಮೆಲ್ಲರಿಗೂ ಅನ್ನದಾತಾರನಾಗಿದ್ದನು. ಅಡಿಗೆ ಮಾಡುವುದು ಅವನ ಕೆಲಸವಾದರೂ, 'ಅಡಿಗೆಭಟ್ಟ' ಎಂದು ಯಾರಾದರೂ ಕರೆದರೆ, ರೇಗುವನು. ರೂಪಲಾವಣ್ಯವು ಅಷ್ಟೊಂದು ವಿಶೇಷವಾಗಿರಲಿಲ್ಲ. ಕಣ್ಣು ಚಿಕ್ಕವು, ಕಿವಿ ಕೊಂಕು, ಮೂಗು ಮೊಂಡ, ಮುಖ ಮಂದ. ಕೆಲವರು ಈತನನ್ನು ಹುಚ್ಚನೆಂದು ನೋಡುತ್ತಲೇ ಹೇಳುತ್ತಿದ್ದರು. 'ಹುಚ್ಚು ಹೌದು. ಕಂಡವರ ಮೇಲೆ ಕಲ್ಲೆಡುವ ಹುಚ್ಚಲ್ಲ.' ತ್ರಿದಶ ವರ್ಷಗಳ ವರೆಗೆ ಧನ ಬಲವಿಲ್ಲದೆ ಕಠೋರ ಬ್ರಹ್ಮಚರ್ಯವ್ರತವನ್ನು ಅವಲಂಬಿಸಿದ ಮಹಾತ್ಮನಿಗೆ ಯಾವ ಬುದ್ಧಿವಿಕಲತೆಯು ಉಂಟಾಗಬಹುದೋ ಆ ಹುಚ್ಚು ಇವನನ್ನು ಹಿಡಿದಿತ್ತು. ಇದು ಕಾರಣದಿಂದ ಅವನು ಮಾತಿನಲ್ಲಿ ಯಾರೊಡನೆಯೂ ತಡವರಿಸುತ್ತಿದ್ದಿಲ್ಲ. ಆಮಂತ್ರಿತರಾದ ಗೃಹಸ್ಥರು ನಮ್ಮ ಮನೆಗೆ ಬಂದ ಕಾಲದಲ್ಲಿ ಮುದ್ದಣ್ಣನು ಅಡಿಗೆಮಾಡುವುದನ್ನು ಬಿಟ್ಟು, ಹೊಸ ಧೋತ್ರವನ್ನು ಉಟ್ಟುಕೊಂಡು ತನ್ನ ವಿದ್ಯಾರ್ಜನೆಯನ್ನೂ, ತನ್ನ ಕುಲೀನತೆಯನ್ನೂ,ತನ್ನ ಧನಸಂಪನ್ನತೆಯನ್ನೂ ಕುರಿತು ಅವರ ಮುಂದೆ ವ್ಯಾಖ್ಯಾನ ಮಾಡುವನು. ಅವನಲ್ಲಿ ಇವೆಲ್ಲವು ಕೊಂಚಕೊಂಚವಾಗಿ ಇಲ್ಲದೆ ಇರಲಿಲ್ಲ. ನೆರೆಯಲ್ಲಿದ್ದ ಸ್ತ್ರೀಯರು ನಮ್ಮ ಮನೆಯಲ್ಲಿ ಹಾಳುಹರಟೆಗಳನ್ನು ಜಗಿಯುವುದಕ್ಕೆ ಕೂಡಿದರೆ, ಈ ಸುಂದರ ಪುರುಷನು ಅಡಿಗೆಮನೆಯನ್ನು ಬಿಟ್ಟು, ಅವರ ಸಮ್ಮುಖದಲ್ಲಿ ಬಂದು ಗಂಭೀರಭಾವವನ್ನು ಧರಿಸಿ, ಕುರ್ಚಿಯ ಮೇಲೆ ಕುಳಿತುಕೊಳ್ಳುವನು. ಹಾಗೆಯೇ ಮೇಜಿನ ಮೇಲಿದ್ದ ಒಂದು 'ಸೋಶಲ್ ರಿಫೋರ್ಮರ್' ಸಂಚಿಕೆಯನ್ನು ಕೈಯಲ್ಲಿ ಕೊಂಡು "ವಾಂಟೆಡ್ ಏ ಯಂಗ್ ಮೆನ್ ಟು ಮೆರ್ರಿ ಏ ವರ್ಜಿನ್ ವಿಡೊ" ಎಂದು ಓದಿಕೊಂಡು ಒಮ್ಮೆ ಸ್ತ್ರೀಯರ ಮುಖವನ್ನು ನೋಡುತ್ತಾ, ಒಮ್ಮೆ 'ವರ್ಜಿನ್ ವಿಡೊ' ಎಂದು ಹೇಳಿ ತಲೆದೂಗುತ್ತಾ, ಆನಂದಪರವಶನಾಗುವನು. ತಾನು ಇತರರಂತೆ ಸದ್ವಂಶದಲ್ಲಿ ಹುಟ್ಟಿರುವೆನೆಂದು ಮರಳಿಮರಳಿ ನಮ್ಮ ಕಿವಿಗೆ ಹಾಕುತ್ತಿದ್ದನು. ಅವನು ಹೇಳುವಂತೆ ಅವನ ಸೋದರಮಾವನೊಬ್ಬನು ಜಿಲ್ಲಾ ಮುನ್ಸೀಫನಾಗಿದ್ದನು; ಮತ್ತೊಬ್ಬನು ತಾಲೂಕು ಅಮಲ್ದಾರನಾಗಿದ್ದನು. ಆದರೆ ಈ ಪುಣ್ಯಾತ್ಮರಿಗೆ ಅಳಿಯನ ಪರಿಚಯವೇನೂ ಇರ

ಲಿಲ್ಲ. ಅಳಿಯುವ ಮೊದಲೇ ಅಳಿಯನಾಗಬೇಕೆಂಬ ಆಸೆಯಿಂದ ಅವನು ಸ್ವಲ್ಪ ಹಣವನ್ನು ಕೂಡಹಾಕಿದ್ದನು. ಈ ಧನ ಲೋಲುಪ್ತಿಯ ವಿಷಯದಲ್ಲಿ ಅವನು ನನ್ನ ಚಿಕ್ಕಪ್ಪನವರ ಸಾಕಣೆ ಮಗ ಎಂದು ಕರೆಯಲ್ಪಡುವಷ್ಟು ಅವರ ಪೂರ್ಣ ಅನುವರ್ತಿಯಾಗಿದ್ದನು. ಮೊದಲು ಮೊದಲು 'ಜೋಗಪ್ಪನ ದತ್ತಕಪುತ್ರ' ಎಂದು ಸರಸಕ್ಕೆ ಇವನನ್ನು ಯಾರಾದರೂ ಕರೆದರೆ ಈತನು ಉರಿದು ಬೀಳುತ್ತಿದ್ದರೂ, ಕ್ರಮೇಣ ಈ ಹೆಸರು ಹೇಳಿದರೆ ಅವನಿಗೆ ಒಂದು ಪ್ರಕಾರದ ಆನಂದವುಂಟಾಗುತ್ತಲಿತ್ತು. ಯಾವ ಕಾರಣದಿಂದಲೊ ಇವರಿಬ್ಬರೊಳಗೆ ಪರಸ್ಪರ ಗೂಢ ಸ್ನೇಹವುಂಟಾಯಿತು. ಈ ರಹಸ್ಯವಾದ ಅನ್ಯೋನ್ಯ ಮೈತ್ರಿಯೇ ನನ್ನನ್ನು ಇನ್ನೊಮ್ಮೆ ಜೈಲಿಗೆ ಅಟ್ಟಿಬಿಟ್ಟಿತು. ಆದರೂ ಈ ಮುದ್ದಣ್ಣನ ಮೇಲೆ ನನಗೆ ಕೋಪವಿರಲಿಲ್ಲ. ಏಕೆಂದರೆ ಆತನು ಸಜ್ಜನ ಸ್ವಭಾವದವನು, ಸಹನಾ ಶಕ್ತಿಯುಳ್ಳವನು. ಅಡಿಗೆಮನೆಯಲ್ಲಿ ಬೆಕ್ಕಿನಂತೆ ಯಾರ ಅಪ್ಪಣೆಯನ್ನೂ ಕೇಳದೆ ಕಣ್ಮುಚ್ಚಿ ತಿನ್ನುವುದಾಗಲಿ, ಚಿಕ್ಕಮನೆಯಲ್ಲಿ ಹಾಸಿದ ಹಾಸಿಗೆಯ ಮೇಲೆ ಅಂತರಂಗದಿಂದ ಬಂದು ಮನೆಯ ಯಜಮಾನನಂತೆ ಮಲಗುವುದಾಗಲಿ, ಅವನ ಕೃತ್ಯಗಳಲ್ಲಿ ಕಾಣಿಸಲಿಲ್ಲ.

ಸೋಮವಾರ ದಿನ ನನ್ನ ಚಿಕ್ಕತಂದೆಯವರು ನಿತ್ಯ ಕರ್ಮದಂತೆ ಊಟಕ್ಕೆ ಕುಳಿತಿದ್ದರು. ಅಡಿಗೆಯವನು ಪ್ರೇಮಪೂರ್ವಕವಾಗಿ ಸೇವಿಸುತ್ತಿದ್ದನು. ನಾನು ಸ್ನಾನವನ್ನು ತೀರಿಸಿ ಭೋಜನಕ್ಕೆ ಸಿದ್ಧನಾಗಿ ಅಡಿಗೆ ಮನೆಗೆ ಹೋಗುತ್ತಿದ್ದೆನು. ಆದರೆ ಅವರಿಬ್ಬರಿಗೂ ನಡೆಯುವ ಅಂತರಂಗದ ಸಂಭಾಷಣೆಯಲ್ಲಿ ಕೆಲವು ಮಾತುಗಳು ಹಿಂಮುಗಡೆಯಲ್ಲಿದ್ದ ನನ್ನ ಕಿವಿಗಳಲ್ಲಿ ಇಳಿದುದರಿಂದ ನಾನು ಕುತೂಹಲಮನಸ್ಕನಾಗಿ ಅಲ್ಲಿಯೇ ತಡೆದೆನು.

ಚಿಕ್ಕಪ್ಪ—'ನಾನು ನನಗೆ ಬೇಕಾದ ಒಬ್ಬಿಬ್ಬರೊಡನೆ ಹಣವನ್ನೆಲ್ಲಾ ನಿನ್ನ ವಶಮಾಡುವೆನೆಂದು ಹೇಳಿದುದರಿಂದ, ನನ್ನ ಸಾಕಣೆಮಗ ಎಂದು ಎಲ್ಲರೂ ನಿನ್ನನ್ನು ಹೇಳಲು ಕಾರಣವಾಯಿತು'.

ಮುದ್ದಣ್ಣ-'ಮನೆಯ ಯಜಮಾನರು ನಿಮ್ಮ ಸೋದರ ಮಗ ಅಲ್ಲವೇ? ನಿಮ್ಮ ಹಣವೆಲ್ಲಾ ಅವರ ಪಾಲಿಗೆ ಹೋಗದೆ ನನ್ನ ವಶಕ್ಕೆ ಬರಲು ನ್ಯಾಯವು ಬಿಡುವುದೇ?'

ನಾನು ನಿಂತಲ್ಲಿಯೇ ಇದರ ಸಂಪೂರ್ಣ ಅರ್ಥವನ್ನು ಗ್ರಹಿಸಿದೆನು.

ಚಿಕ್ಕಪ್ಪ-'ಹುಚ್ಚಾ! ನೀನರಿಯೆ. ಈ ಮನೆಯ ಯಜಮಾನ ನಾನು; ಅವನಲ್ಲ. ಇದು ಆಗಿಹೋದ ನನ್ನ ಧರ್ಮಪತ್ನಿಯ ಮನೆ. ಆದುದರಿಂದ ಮನೆಯ ಒಂದು ಕಲ್ಲಿನಲ್ಲಿ ಕೂಡ ಆತನಿಗೆ ಹಕ್ಕಿಲ್ಲ. ನನ್ನ ನಗದು ಹಣವು ಸ್ವಾರ್ಜಿತವಾದುದರಿಂದ ಅದನ್ನು ನನ್ನ ಇಚ್ಛಾನುಸಾರವಾಗಿ ನಾನು ವಿನಿಯೋಗಿಸಬಹುದು, ಕಂಡೆಯಾ?'

ಹೀಗೆಂದು ಹೇಳಿ ಚಿಕ್ಕತಂದೆಯವರು ಭಕ್ಷ್ಯವನ್ನು ಬಡಿಸಲು ಹೇಳಿದರು. ಅಡಿಗೆಯವನು ಭಕ್ಷ್ಯಗಳನ್ನು ಅವರ ಎಲೆಯ ಮೇಲೆ ಧಾರಾಳವಾಗಿ ವರ್ಷಿಸಿದನು. ಕಣ್ಣು ಕಾಣದ ನಷ್ಟವನ್ನು ನೋಡಿ ನಾನು ನನ್ನಲ್ಲಿಯೇ ಬೇಸರಗೊಂಡೆನು. ಆದರೂ ಮಾತುಗಳು ಕೊನೆಮುಟ್ಟಿದುವನ್ನು ನೋಡುವುದಕ್ಕೆ ಸಡಗರಿಸುತ್ತ ಅಲ್ಲಿಯೇ ನಿಂತೆನು.

ಚಿಕ್ಕಪ್ಪ—'ಮುದ್ದು! ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನು ಕೂಡ ನನ್ನನ್ನು ಇಷ್ಟು ಪ್ರೀತಿಯಿಂದಲೂ ವಾತ್ಸಲ್ಯದಿಂದಲೂ ನೋಡುತ್ತಿದ್ದಿಲ್ಲ. ನನ್ನ ಹಣವೆಲ್ಲಾ ನಿನಗೆಂದು ನಾನು 'ಉಯಿಲ್' ಬರೆದಿಟ್ಟಿರುವೆನು'.

ಮುದ್ದಣ್ಣ—'ಉಯಿಲ್ ಎಂದರೇನು?'

ಚಿಕ್ಕಪ್ಪ—'ಸ್ಥಿರಚರ ಸೊತ್ತನ್ನು ಒಬ್ಬನು ಮತ್ತೊಬ್ಬನಿಗೆ ತನ್ನ ಮರಣದ ಬಳಿಕ ದಾನವಾಗಿ ಬರೆದುಕೊಡುವ ನ್ಯಾಯಪತ್ರ'.

ಮುದ್ದಣ್ಣ—'ಹಾಗಾದರೆ ಬರೆದುಕೊಡುವವನು ಸತ್ತ ವಿನಾ ಆ ಸೊತ್ತು ಮತ್ತೊಬ್ಬನ ಪಾಲಿಗೆ ಬರುವುದಿಲ್ಲವೇ?'

ಚಿಕ್ಕತಂದೆಯವರು ಅಡಿಗೆಭಟ್ಟನ ಮಾತಿನ ಅರ್ಥವನ್ನು ಸರಿಯಾಗಿ ತಿಳಿದುಕೊಂಡರು. ಊರಲ್ಲೆಲ್ಲಾ ವಾಂತಿಭೇದಿಯು ಹಬ್ಬಿದುದರಿಂದ ಈ ಮಾತು ಅವರಿಗೆ ಅಪಶಕುನವಾಗಿ ತೋರಿದ್ದರೂ ಇರಬಹುದು. ಹೇಗೂ ಆ ಮೇಲೆ ಅವರು ಮಾತೆತ್ತದೆ, ಕೈತೊಳೆದು ಹೊರಕ್ಕೆ ಹೋದರು.

ಸ್ವಲ್ಪ ಹೊತ್ತಿನ ಮೇಲೆ ನನ್ನ ಹೆಂಡತಿಯು ಅಡಿಗೆ ಮನೆಗೆ ಬಂದು ನನ್ನನ್ನು ಕರೆಯುತ್ತಲೇ ನಾನು ಊಟಕ್ಕೆ ಕುಳಿತುಕೊಂಡೆನು. ಪಾತ್ರೆಗಳಲ್ಲಿ ಶಾಕಪಾಕಗಳು ವರ್ಜ್ಯವಾದುದನ್ನು ನೋಡಿ ಸಕಲಾವತಿಗೂ ಅಡಿಗೆಯವನಿಗೂ ನಿತ್ಯದಂತೆ ಬಾಯ್ಜಗಳವು ನಡೆಯಿತು. ನನಗೆ 'ಆಫೀಸಿಗೆ' ಹೋಗುವುದಕ್ಕೆ ವಿಳಂಬವಾದುದರಿಂದಲೂ, ನನ್ನ ಮನಸ್ಸಿಗೆ ಸಮಾಧಾನವಿಲ್ಲದುದರಿಂದಲೂ ನಾನು ಮನೆಯವಳ ಪಕ್ಷವಾಗಿ ಸಿಟ್ಟಿಗೆದ್ದು—"ಇವರ ಕರ್ಮದಿಂದ ಒಂದು ತುತ್ತು ಅನ್ನ ತಿನ್ನುವುದಕ್ಕೆ ಇಲ್ಲ! ಹಾಳಾಗಿ ಹೋಗಲಿ!" ಎಂದು ಶಪಿಸಿ, ನಾನು ಊಟ ಮುಗಿಸದೆ, ನೆಟ್ಟನೆ ಆಫೀಸಿಗೆ ಹೊರಟೆನು. ನಮ್ಮ ಚಿಕ್ಕಪ್ಪನವರು ಸುಖಾಸೀನರಾಗಿ ನಿದ್ರೆಗೆ ಪ್ರಸ್ತಾವನೆಯಾಗಿ ಆಕಳಿಸುವುದನ್ನು ನೋಡಿ, ಮನೆಯನ್ನು ಬಿಟ್ಟು, ಆಫೀಸಿಗೆ ನಡೆದೆನು.

ದಾರಿಯಲ್ಲಿ ಬರುತ್ತಿದ್ದಾಗ ನನ್ನ ಮನಸ್ಸಿನಲ್ಲಿದ್ದ ಪೂರ್ವ ಸಂಶಯಗಳೆಲ್ಲ ನಿಜವಾಗಿ ಕಂಡುಬಂದುವು. ಅಡಿಗೆಯವನು ಚಿಕ್ಕತಂದೆಯ ಗಂಟಿನ ಆಸೆಗೆ ಒಳಗಾಗಿ, ಊಟ ಉಪಚಾರಗಳಲ್ಲಿ ನಮ್ಮಿಬ್ಬರಿಗೆ ಬರಿದಾದ ಪಾತ್ರೆಗಳನ್ನು ಮಾತ್ರ ನಿಲ್ಲಿ

ಸುವನು ಎಂದು ನನ್ನ ಹೆಂಡತಿಗೂ ಅವನಿಗೂ ದಿನಂಪ್ರತಿ ಕಾಳಗವಾಗುತ್ತಿತ್ತು. ಇವೆಲ್ಲವು ಅಲ್ಪ ಸಂಗತಿಗಳಿಂದು ಬಗೆದು ಅಡಿಗೆಮನೆಯ ಕಲಹವನ್ನು ನನ್ನ ಆಫೀಸ್ ಚಾವಡಿಗೆ ತರಲು ಬಿಡುತ್ತಿರಲಿಲ್ಲ. ಈ ಹೊತ್ತು ನೋಡಿದ ನೋಟದಿಂದ ನನ್ನ ಮನಸ್ಸಿಗೆ ಅವೆಲ್ಲವೂ ಖಚಿತವಾದುವು. ನನ್ನ ಚಿಕ್ಕತಂದೆಯವರು ತನ್ನ ಹಣದ ವಾಸನೆಯನ್ನು ಇಟ್ಟು, ಮುದ್ದಣ್ಣನು ತನ್ನ ಹಿಂದುಗಡೆ ತನಗೆ ಬೇಕಾದ ಹಾಗೆ ಬರುವಂತೆ ಮಾಡಿ, 'ಮನ್ನಣೆಯ ಮನೆಯು ಅಳಿಯುನಂತೆ' ಸರ್ವ ಸುಖವನ್ನು ಅನುಭವಿಸುವುದಕ್ಕೆ ಅನುಕೂಲಪಡಿಸಿರುವರು! ಇವರ ಮನೆಯನ್ನೂ ಧನವನ್ನೂ ಆಶಿಸಿದ ನನಗೆ ಬೂರುಗದ ಮರ ಕಾದ ಗಿಣಿಯಂತೆ ಹತಾಶನಾಗುವ ಕಾಲ ಬಂದೊದಗುವುದು. ಮನೆಯ ಗೋಡೆಯನ್ನು ಅಂಟಿಕೊಂಡ ಈ ಉಡುವನ್ನು ಹೊರಕ್ಕಟ್ಟಿಬಿಟ್ಟ ಹೊರತು ಮನೆಗೆ ಶ್ರೇಯಸ್ಸು ಇಲ್ಲ. ಇನ್ನು ಈ ಹಳೆಯ ಮರವು ಬೇರೂರಿದರೆ ನೆಲವನ್ನು ಬಿಡದೆ ಎಲ್ಲವನ್ನು ಆವರಿಸಿಕೊಳ್ಳುವುದು. ಆದುದರಿಂದ ಈ ವೃದ್ಧ ಶಕುನಿಯಿಂದ ನಾವಿಬ್ಬರು ದೂರರಾಗಿರಬೇಕು ಎಂದು ದೃಢ ಮನಸ್ಕನಾದೆನು.

'ಆಫಿಸಿನಲ್ಲಿ' ಗುಮಾಸ್ತರು ಒಬ್ಬಿಬ್ಬರು ಅಲ್ಲದೆ ಮತ್ತಾರು ಬಂದಿರಲಿಲ್ಲ. ಊರಲ್ಲೆಲ್ಲ ಭಯಂಕರವಾಗಿ ವಾಂತಿಭೇದಿಯು ಪಸರಿಸಿದುದರಿಂದ, ಅವರು ಇದೇ ನೆವವನ್ನು ಮಾಡಿ ಮನೆಯಲ್ಲಿ ನಿಂತುಬಿಟ್ಟಿದ್ದರು. ರೋಗವು ತಲೆದೋರುವ ಮೊದಲೇ ಹುಡುಗರೆಲ್ಲಾ ಶಾಲೆಗೆ 'ರಜಾ' ಎಂದು ತಮ್ಮಷ್ಟಕ್ಕೆ ಖಚಿತಮಾಡಿಕೊಂಡು ಊರಿಗೆ ಹೋಗಿಬಿಟ್ಟರು. ಎಂದೂ ಬಂಡಿಯನ್ನು ಹತ್ತದ 'ಆಸ್ಪತ್ರೆಯ' ಬಡ ನೌಕರರೆಲ್ಲ ಕುದುರೆಗಾಡಿಯಲ್ಲಿ ಕುಳಿತುಕೊಳ್ಳುವುದಕ್ಕೆ ಮೊದಲು ಮಾಡಿದರು. "ಲೋಕಲ್ ಫಂಡ್ ಮೆಂಬರ್ಸ್" ಎಂದು ಕರೆಯಲ್ಪಡುವ ಲೋಕದ ಪಂಡರು* ಖಜಾನೆಯಲ್ಲಿ ಕಾದಿಟ್ಟ ಹಣವನ್ನು ವ್ರಯಮಾಡುವುದಕ್ಕೆ ತೊಡಗಿದರು. ಆದರೂ ಕೊಲೆರಾ(ಎಂದರೆ ಕೊಲೆರೋಗ) ಊರಲ್ಲಿ ಶಮನವಾಗಲಿಲ್ಲ. ಶಮನಾರ್ಥವಾಗಿ ಶಾಂತಿಗಳೂ ಪೂಜೆಗಳೂ ನಡೆದುವು. ದೇವಸ್ಥಾನಗಳಲ್ಲಿ ವಿಪ್ರಸಂತರ್ಪಣೆಗಳು ಮಹಾ ಸಂಭ್ರಮದಿಂದ ಜರಗಿದುವು. ಕೆಲವು ದಿನಗಳಲ್ಲಿ ಬ್ರಾಹ್ಮಣರ ಅಗ್ರಹಾರದಲ್ಲಿ ಮರಣಗಳು ಸಂಭವಿಸಿದುವು. ಉಪಾಯವಿಲ್ಲ; ಎಲ್ಲರೂ ನಾನಾ ತರದ ಔಷಧಗಳನ್ನುತರಿಸಿ ಇಟ್ಟುಕೊಂಡರು. ಬಹಿರಂಗವಾಗಿ ಬೀಡಿ ಸೇದುವುದಕ್ಕೆ ಹೆದರುತ್ತಿದ್ದ ಹುಡುಗರು ಹಣವನ್ನು ಹೊಗೆಯಾಗಿ ಮಾಡಿಬಿಟ್ಟರು. ಬ್ರಾಂಡಿ ವ್ಹಿಸ್ಕಿ ಸೀಸೆಗಳ ಕ್ರಯವು ಹೆಚ್ಚಿತು. ಆದರೂ ರೋಗವು ಶಾಂತವಾಗಲಿಲ್ಲ.

ಆಫೀಸಿನಲ್ಲಿ ನಾನು ಸ್ವಲ್ಪ ಕೆಲಸಮಾಡಿದ ಬಳಿಕ ಫಲಾಹಾರಕ್ಕೋಸ್ಕರ ಮುದ್ದಣ್ಣನ ಹಾದಿಯನ್ನು ಎದುರ್ನೋಡುತಿದ್ದೆನು. ಕೂಡಲೆ ಮುದ್ದಣ್ಣನು ಎಂದಿಗಿಂತ ಮುಂಚೆಯೇ ಬಂದನು; ನನ್ನ ಬೀರುವಿನ ಬೀಗದ ಕೈಯನ್ನು ಮನೆಯಲ್ಲಿ ತರಹೇಳಿದರೆಂದು ಹೇಳಿ, ಹೋಗುವಾಗ ಅದನ್ನು ಕೊಂಡುಹೋದನು. ಆ ದಿನ ಬೇಗನೆಹೋಗುವುದಕ್ಕೆ ಅವಕಾಶವಿದ್ದುದರಿಂದ, ನಾನು ೭ಗಂಟೆಗೆ 'ಆಫೀಸ್' ಬಿಟ್ಟು ಮನೆಯ ಹಾದಿಯನ್ನು ಹಿಡಿದೆನು. ದಾರಿಯಲ್ಲಿ ನೂತನವಾದ ವರ್ತಮಾನವನ್ನು ಕೇಳಿ ನನ್ನ ತಲೆ ಕೆಳಗಾಯಿತು. ನನ್ನ ಚಿಕ್ಕತಂದೆಯವರು ಅಕಸ್ಮಾತ್ತಾಗಿ ಪ್ರಾಣಾಂತಸ್ಥಿತಿಯಲ್ಲಿರುವರೆಂದೂ, ಅವರ ಜೀವಂತ ಶವವನ್ನು 'ಪೊಲೀಸಿ'ನವರು 'ಆಸ್ಪತ್ರೆಗೆ' ಒಯ್ದಿರುವರೆಂದೂ ಕೇಳಿ ನನ್ನ ಹೃದಯವು ತಳಮಳಗೊಂಡಿತು. ನಾನು ನಿಂತಲ್ಲಿ ನಿಲ್ಲದೆ ಓಡತೊಡಗಿದೆನು.

ನಾನು 'ಆಸ್ಪತ್ರೆಯನ್ನು' ಸೇರುವುದಕ್ಕೆ ವಿಳಂಬವಾಗಲಿಲ್ಲ. ನಮ್ಮ ಚಿಕ್ಕತಂದೆಯವರು ಮಂಚದ ಮೇಲೆ ಮಲಗಿದ್ದರು ಅಥವಾ ಮಲಗಿಸಲ್ಪಟ್ಟಿದ್ದರು. 'ಡಾಕ್ಟರರು' ಬಳಿಯಲ್ಲಿ ನಿಂತು, ಔಷಧದ ದರ್ವಿಯನ್ನು ಅವರ ಹಲ್ಲುಗಳ ನಡುವೆ ತುರುಕುತಿದ್ದರು. ಚಿಕ್ಕತಂದೆಯವರು ಅವರ ಮೇಲೆ ಕೋಪದಿಂದಲೊ ಎಂಬಂತೆ ಕಣ್ಣುಮುಚ್ಚಿ ಹಲ್ಲು ಮಸೆಯುತಿದ್ದರು. ಚಿಕ್ಕತಂದೆಯವರಿಗೆ ಪ್ರಜ್ಞೆ ತಪ್ಪಿ ಹೋಗಿದ್ದಿತು; ನಾಲಗೆ ಬಿದ್ದುಹೋಗಿದ್ದಿತು; ಶ್ವಾಸ ಮಾತ್ರ ಮೆಲ್ಲಮೆಲ್ಲನೆ ಹೊರ ಬರುತ್ತ ಒಳಹೋಗುತ್ತ ಆಡುತಿದ್ದಿತು. ಅವರ ಅಂತ್ಯಸ್ಥಿತಿಯನ್ನು ನೋಡುವುದಕ್ಕೆ ಹಲವು ಜನರು ಅಲ್ಲಿ ನೆರೆದಿದ್ದರು. ಪುರೋಹಿತನೂ ಪೊಲೀಸಿನವನೂ ಎಲ್ಲರಿಗಿಂತಲೂ ಮುಂದೆ ನಿಂತಿದ್ದರು. ಎಲ್ಲಾದರೂ ಅಕಸ್ಮಾತ್ ಮರಣ ಉಂಟಾದರೆ, ಉಳಿದವರಿಗೆ ಮರಣದೋಷವು ತಗಲದಂತೆ ಮಾಡುವ ಸದುದ್ದೇಶವಿದ್ದ ಈ ಇಬ್ಬರು ಪುಣ್ಯಾತ್ಮರು ನಮ್ಮ ಚಿಕ್ಕತಂದೆಯವರ ಅವಸ್ಥೆಯನ್ನು ಕುರಿತು ಕ್ಷಣೇಕ್ಷಣೇ ವಿಚಾರಿಸುತಿದ್ದರು.

ಸ್ವಲ್ಪ ಹೊತ್ತಿನ ಮೇಲೆ ಪ್ರಾಣವಾಯುವು ಸುಳಿವುದೋ ಎಂದು ಪರೀಕ್ಷಿಸುವುದಕ್ಕೆ ಕನ್ನಡಿಯನ್ನು ಅವರ ಮುಖದ ಇದಿರಿಗೆ ಹಿಡಿದರು. ಅದರ ಬದಲಾಗಿ ರೂಪಾಯಿಯ ಗೊಂಬೆಯನ್ನು ಮೂಗಿನ ಸೊಳ್ಳೆಗೆ ಒರಸಿದರೆ ಸರಿಯಾಗಬಹುದೆಂದು ಅಲ್ಲಿದ್ದವರಲ್ಲಿ ಯಾರೊ ಒಬ್ಬರು ಸೂಚಿಸಿದರು. 'ಡಾಕ್ಟರರು' ಮತ್ತೊಮ್ಮೆ ರೋಗಿಯ ನಾಡಿಯನ್ನು ಹಿಡಿದು, ಔಷಧವನ್ನು ಕೊಡಲು ಮನಸ್ಸುಮಾಡಿ 'ಆಸ್ಪತ್ರೆಯ' ಆಳಿನೊಡನೆ 'ಪೆಟ್ಟಿಗೆಯನ್ನು ಕೊಂಡು ಬಾ!' ಎಂದು ಆಜ್ಞೆ ಮಾಡಿದರು. 'ಕ್ರಿಶ್ಚನ್ ಡಾಕ್ಟರನು' ಈ ಮಾತು ಹೇಳುತ್ತಲೇ ಪುರೋಹಿತನು ತವಕಗೊಂಡನು; ಮತ್ತು ನನ್ನೆಡೆಗೆ ಬಂದು

* ಪಂಡ — An important man.

"ಡಾಕ್ಟರನು ಕಟ್ಟಿಗೆ ಎನ್ನುವ ಬದಲಾಗಿ ಪೆಟ್ಟಿಗೆ ಎಂದು ಹೇಳಿದನೊ ನೋಡಿಕೊಳ್ಳು" ಎಂದು ನನ್ನನ್ನು ಎಚ್ಚರಗೊಳಿಸಿದನು. ಆದರೆ ಅಷ್ಟರಲ್ಲಿ 'ಪೊಲೀಸ್ ಜಮಾದಾರನು' ಬಂದು ನನ್ನೊಡನೆ ಮಾತನಾಡುತಿದ್ದುದರಿಂದ ಪುರೋಹಿತನ ಹಿತೋಕ್ತಿಯನ್ನು ನಾನು ಕಿವಿಗೆ ಹಾಕಿಕೊಳ್ಳಲಿಲ್ಲ.

ಜಮಾದಾರನು ನನ್ನೊಡನೆ "ನಿಮ್ಮ ಚಿಕ್ಕಪ್ಪನವರು ಬದುಕುವ ಸಂಭವ ತೋರುವುದಿಲ್ಲ. ಅಕಸ್ಮಾತ್ತಾಗಿ ನಡೆದಿರುವ ಈ ಸಂಗತಿಯನ್ನು ಕುರಿತು ನಿಮ್ಮೊಡನೆ ವಿಚಾರಿಸಬೇಕೆಂದಿರುವೆವು" ಎಂದನು. ನಾನು ಅದಕ್ಕೆ ಒಪ್ಪಿಕೊಂಡು ವಿಚಾರಣೆಗೆ ಸಿದ್ಧನಾಗಿ ನಿಂತೆನು. ಜಮಾದಾರನು ಚಿಕ್ಕತಂದೆಯವರ ಹೆಸರು, ಪ್ರಾಯ, ವೃತ್ತಿ ಮೊದಲಾದುವನ್ನು ಕೇಳಿಕೊಂಡು, ಕಾಗದದಲ್ಲಿ ಅದನ್ನು ಬರೆದುಕೊಂಡನು.

ಜಮಾದಾರ— ನಿಮ್ಮ ಚಿಕ್ಕತಂದೆಯವರನ್ನು ನೀವು ಈ ದಿನ ಎಷ್ಟು ಹೊತ್ತಿಗೆ ನೋಡಿದಿರಿ?

ನಾನು— ಅವರು ಈ ದಿನ ೧೨ ಘಂಟೆಗೆ ಆರೋಗ್ಯವಂತರಾಗಿದ್ದರು.

ಜಮಾದಾರ— ಅಕಸ್ಮಾತ್ತಾಗಿ ಹೀಗಾಗಲು ನಿಮಗೆ ಏನಾದರೂ ಕಾರಣ ತೋರುವುದೇ?

ನಾನು— ಇಲ್ಲ.

ಜಮಾದಾರ— ಅವರಿಗೂ ನಿಮಗೂ ಪರಸ್ಪರ ವಿರೋಧಭಾವವಿದ್ದಿತೆ?

ನಾನು— ಇಲ್ಲ.

ಜಮಾದಾರ— ಈ ದಿನ ಉಣ್ಣದೆ ನೀವು ಆಫೀಸಿಗೆ ಹೋಗಲು ಕಾರಣವೇನು?

ಈ ಸಂಗತಿಯು ಜಮಾದಾರನಿಗೆ ಹೇಗೆ ತಿಳಿಯಿತೆಂದು ನಾನು ಆಶ್ಚರ್ಯಪಟ್ಟು ಒಂದು ನಿಮಿಷ ಮಾತಿಲ್ಲದವನಾದೆನು. ಆಫೀಸಿಗೆ ಹೋಗುವುದಕ್ಕೆ ವಿಳಂಬವಾದುದರಿಂದ ನಾನು ಉಂಡಂತೆ ಮಾಡಿ ಹೊರಟುಹೋದೆನೆಂದು ಹೇಳಿದೆನು.

ಜಮಾದಾರ— ನಿಮ್ಮ ಮನೆಯ ವಿಷಯದಲ್ಲಿ ನಿಮಗೂ ಅವರಿಗೂ ಮಾತು ನಡೆಯುತಿದ್ದಿತೇ?

ನಾನು— ಹೌದು. ಆ ಮಾತುಗಳು ವಿನೋದದಿಂದ ಅಲ್ಲದೆ ವಿರೋಧದಿಂದ ನಡೆಯುತ್ತಿರಲಿಲ್ಲ.

ಜಮಾದಾರ— ಅವರೊಡನೆ ಸ್ವಲ್ಪ ಹಣವುಂಟೆಂದು ಸುದ್ದಿ ಇದೆ. ಇದು ನಿಜವೇ?

ನಾನು— ಅದನ್ನು ನಾನರಿಯೆ. ಅವರು ಬಂದಂದಿನಿಂದ ಮನೆಯ ವೆಚ್ಚದ ವಿಷಯದಲ್ಲಿ ಒಂದು ಚಿಕ್ಕಾಸು ಕೂಡ ಕೊಡದಿದ್ದುದರಿಂದ, ಅವರೊಡನೆ ಹಣವುಂಟು ಎಂದು ಹೇಳಲು ನನಗೆ ಸಂಶಯವಿದೆ.

ಜಮಾದಾರ— ನಿಮ್ಮ ಚಿಕ್ಕತಂದೆಯವರಿಗೂ ಹಳೆಯ ಪೇಟೆ ಶ್ಯಾಮರಾಯರಿಗೂ ದ್ವೇಷವಿದ್ದಿತೇ?

ನಾನು— ಶ್ಯಾಮರಾಯರನ್ನು ಕುರಿತು ಅವರಿಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ.

ಜಮಾದಾರ— ಯಾವ ಕಾರಣದಿಂದ?

ನಾನು— ಚಿಕ್ಕತಂದೆಯವರು ಚಿಕ್ಕದೊಂದು ಹುಡಿಗಿಯನ್ನು ಅಂತರಂಗದಿಂದ ಮದುವೆಮಾಡಿಕೊಳ್ಳಲಿಕ್ಕೆ ಎಲ್ಲವನ್ನು ಒದಗಿಸಿದ್ದರು. ಆಗ ಸಮಾಜ ಸುಧಾರಕರಾದ ಶ್ಯಾಮರಾಯರು ಈ ವಿವಾಹ ವಿಷಯವಾಗಿ 'ಎಪ್ಪತ್ತು ವರ್ಷದ ಮುದುಕ ಇಪ್ಪತ್ತು ದಿವಸ ಬದುಕ'; 'ಹೆಣ್ಣಿಗೆ ಮನೆಯಾಯಿತು; ಗಂಡಗೆ ಮಸಣವಾಯಿತು'; 'ಮುಪ್ಪಯ್ಯನ ಮದುವೆಯಲ್ಲಿ ಕಪ್ಪಯ್ಯನ ಮರಣ'; ಮೊದಲಾದ ಮಾತುಗಳನ್ನು ಕಂಡವರೊಡನೆ ಹೇಳಿ, ಆ ಮದುವೆ ನಡೆಯಕೂಡದೆಂದು ಮಾಡಿದರಂತೆ.

ಜಮಾದಾರ— ನಿಮ್ಮ ಚಿಕ್ಕತಂದೆಯವರಿಗೆ 'ಅಫೀಮು' ತಿನ್ನುವ ಅಭ್ಯಾಸವಿದ್ದಿತೇ?

ನಾನು— ನಾನರಿಯೆ; ಬಹುಶಃ ಇಲ್ಲವೆಂದು ಹೇಳಬಹುದು. ಕ್ರಯಕ್ಕೆ ಕೊಂಡು ಅದನ್ನು ಸೇವಿಸುವ ದುರಭ್ಯಾಸವಿರಲಿಲ್ಲ.

ಜಮಾದಾರ— ನೀವು ಅದನ್ನು ಸೇವಿಸುವಿರೇ?

ನಾನು— ಇಲ್ಲ.

ಜಮಾದಾರ— ಹಾಗಾದರೆ ಈ ಅಫೀಮಿನ ಸೀಸೆ ನಿಮ್ಮದೇ? ಹೀಗೆಂದು ಜಮಾದಾರನು ಒಂದು ಸೀಸೆಯನ್ನು ಎತ್ತಿ ತೆಗೆದು ನನ್ನ ಕೈಗೆ ಕೊಟ್ಟನು. ನಾನು ತಲೆ ಅಪ್ಪಳಿಸಿದಂತಾಗಿ, ಸೀಸೆಯನ್ನು ಹಿಡಿದು ನೋಡುವಂತೆ ಸ್ವಲ್ಪ ಹೊತ್ತು ನಿರುತ್ತರನಾದೆನು. ಉಪಾಯವಿಲ್ಲದವನಾಗಿ ಅದು ನನ್ನದೆಂದು ನಾನು ಒಪ್ಪಿದೆನು.

ಜಮಾದಾರ— ಅಫೀಮನ್ನು ನೀವು ಇಟ್ಟುಕೊಂಡುದೇಕೆ?

ನಾನು— ಊರಲ್ಲಿ ವಾಂತಿಭೇದಿ ಇದ್ದುದರಿಂದ ತತ್‌ಕ್ಷಣದ ಪರಿಹಾರಾರ್ಥವಾಗಿ ಅದನ್ನು ಮೊದಲೇ ತಂದು ಇಟ್ಟುಕೊಂಡಿದ್ದೆನು.

ಜಮಾದಾರನ ಮತುಗಳು ಇನ್ನೂ ಬಲವಾಗುತ್ತ ಬಂದುವು. ಇವರ ಪರಿಣಾಮವು ಏನಾಗುವುದೆಂದು ತಿಳಿಯುವುದಕೆ ನನ್ನ ಮನಸ್ಸಿನಲ್ಲಿ ಕಳವಳವೂ ಭ್ರಾಂತಿಯೂ ಉಂಟಾದುವು.

ಜಮಾದಾರ— ನೀವು ನಿಮ್ಮ ಅಡಿಗೆಭಟ್ಟನನ್ನು ಎಲ್ಲಿಗೆ ಕಳುಹಿಸಿರುವಿರಿ?

ನಾನು— ಮುದ್ದಣ್ಣನು ಫಲಾಹಾರ ಕೊಂಡುಬಂದು,

ಹಿಂತಿರುಗಿದಮೇಲೆ ನಾನು ಅವನನ್ನು ನೋಡಲಿಲ್ಲ.

ಜಮಾದಾರ—ಆಫೀಸಿಗೆ ಬಂದವನು ನಿಮ್ಮೊಡನೆ ಏನನ್ನಾದರೂ ಹೇಳಲಿಲ್ಲವೇ?

ನಾನು—ಈ ವಿಷಯವನ್ನು ಕುರಿತು ಅವನು ಹೇಳಲಿಲ್ಲ. ಬೀರುವಿನ ಬೀಗದ ಕೈ ತರಹೇಳಿದರೆಂದು, ನನ್ನಿಂದ ಅದನ್ನು ಕೊಂಡುಹೋದನು.

ಜಮಾದಾರ--ಅಫೀಮಿನ ಸೀಸೆಯು ಬೀರುವಿನೊಳಗೆ ಇದ್ದಿತೇ?

ನಾನು—ಹೌದು.

ಜಮಾಧಾರ—ಮುದ್ದಣ್ಣನು ಈಗ ಎಲ್ಲಿಗೆ ಹೋಗಿರುವನು.

ನಾನು—ಅವನು ಎಂದಿನಂತೆ ಮನೆಯಲ್ಲಿ ರಾತ್ರಿ ಮಲಗುವ ಪದ್ಧತಿ ಇಲ್ಲ.

ವಿಚಾರಣೆ ಆದ ಬಳಿಕ ಜಮಾದಾರನು ಪುನಃ ಚಿಕ್ಕತಂದೆಯವರನ್ನು ನೋಡುವುದಕ್ಕೆ ಹೋದನು. ಚಿಕ್ಕತಂದೆಯವರು ಕಣ್ಣುಬಿಟ್ಟಿದ್ದರು; ಮಾತನಾಡುವುದಕ್ಕೆ ಪ್ರಯತ್ನಿಸುವಂತೆ ತುಟಿ ಅಲ್ಲಾಡಿಸುತಿದ್ದರು; ಏನನ್ನೋ ಹುಡುಕುವಂತೆ ತಲೆ ದಿಂಬಿನ ಬಳಿಯಲ್ಲಿ ಕೈಬೆರಳನ್ನು ಸವರುತಿದ್ದರು. ದೂರಲೋಕಕ್ಕೆ ಪ್ರಯಾಣ ಮಾಡುವಷ್ಟು ಶಕ್ತಿಯಿಲ್ಲದುದರಿಂದ ಇಲ್ಲಿಯೇ ಉಳಿಯುವ ಸ್ಥಿತಿಯನ್ನು ತೋರಿಸಿದರು.

ಮೆಲ್ಲಮೆಲ್ಲನೆ ಒಂದೊಂದೇ ಮಾತು ಬಾಯಿಂದ ಹರಿಯುತ್ತ ಬಂತು.. ಮೊದಲು ಮೊದಲು ಉಚ್ಚರಿಸಿದ ಅಕ್ಷರಗಳು ಸ್ಪಷ್ಟವಾಗಿ ಕೇಳಿಸಲಿಲ್ಲ. ಬ–ದು–ಕ–ಎಂಬೀ ಅಕ್ಷರಗಳು ಹೊರಟುವು. ಬದುಕಲಾರನೆಂದು ಹೇಳುವರೊ ಬದುಕುತ್ತಾರೆ ಎಂದು ಹೇಳುವರೊ ಎಂದು ತಿಳಿಯಲಿಕ್ಕೆ ಕಷ್ಟವಾಯಿತು. ಪುನಃ ಕಣ್ಮುಚ್ಚಿದರು; ಸ್ತಬ್ಧರಾದರು. ಜಮಾದಾರನು ಪಕ್ಕದಲ್ಲಿಯೇ ನಿಂತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಮು–ಧ–ಣ ಎಂದು ಬಾಯಿಂದ ಉಸುರು ಹೊರಟಿತು.

ಜಮಾದಾರನು ಮುದ್ದಣ್ಣನ ಹೆಸರನ್ನು ಕಾಗದದಲ್ಲಿ ಬರೆದುಕೊಂಡನು. ಮುದ್ದು ಹಣ ಎಂದು ಬರೆಯಬೇಕಾಗಿ ಮತ್ತೊಬ್ಬ ಪೊಲೀಸಿನವನು ಆಗ ತಾನೇ ಸೂಚಿಸಿದನು. ಅಷ್ಟರಲ್ಲಿ 'ಡಾಕ್ಟರರು' ಸಮೀಪಕ್ಕೆ ಬಂದು ರೋಗಿಯನ್ನು ಆಗತಾನೆ ಮಾತನಾಡಿಸಿದರೆ, ಸ್ಥಿತಿಯು ಕೆಟ್ಟುಹೋಗುವುದೆಂದು ಹೇಳಿ, ಚಿಕ್ಕತಂದೆಯವರ ಅಂತ್ಯೋಕ್ತಿಗಳನ್ನು ನಾವು ಕೇಳದಂತೆ ಮಾಡಿಬಿಟ್ಟರು. ಕೂಡಲೇ ಜಮಾದಾರನು ನನ್ನ ಬಳಿಗೆ ಬಂದು "ಈ ಅಕಸ್ಮಾತ್ತಾದ ವಿಷಯದಲ್ಲಿ ನಿಮ್ಮ ಮೇಲೆ ಸಂಶಯ ವಿರುವುದರಿಂದ ನಿಮ್ಮನ್ನು 'ಕೈದು' ಮಾಡಿರುವೆನು" ಎಂದು ನಿರ್ದಯೆಯಿಂದ ಹೇಳಿದನು.

ನನ್ನ ತಲೆಯ ಮೇಲೆ ಸಿಡಿಲು ಬಿದ್ದಂತಾಯಿತು. ನಾಲಗೆಯು ಬಾಯಲ್ಲಿ ಬಿಗಿದುಕಟ್ಟಿದಂತಾಯಿತು. ಹಕ್ಕಿಗಳು ಬಾರದಂತೆ ಗದ್ದೆಯಲ್ಲಿಡುವ ಬೆರ್ಚಪ್ಪನಹಾಗೆ ನಾನು ಮಾತಿಲ್ಲದವನಾಗಿ ನಿಂತುಬಿಟ್ಟೆನು. ಚಿಕ್ಕತಂದೆಯವರ ಅಂದಿನ ಅವಸ್ಥೆಯೇ ಲೇಸೆಂದು ನನಗೆ ಆಗ ತೋರಿಬಂದಿತು. ನನ್ನನ್ನು 'ಸ್ಟೇಶನಿಗೆ' ಕೊಂಡುಹೋಗುವುದಕ್ಕೆ ಜಮಾದಾರನು ಅಪ್ಪಣೆ ಕೊಟ್ಟನು. ನನ್ನನ್ನು ಅಲ್ಲಿಗೆ ಕೊಂಡೊಯ್ದರು.

ಮರುದಿನ ಬೆಳಗ್ಗೆ 'ಸ್ಟೇಶನಿನಲ್ಲಿ' ಅನೇಕರು ಬಂದು ನೆರೆದರು. 'ಪೊಲೀಸಿನವರು' ಮುದ್ದಣ್ಣನನ್ನು ಹಿಡಿದು ತಂದು ವಿಚಾರಿಸಿದರು. ಚಿಕ್ಕತಂದೆಯವರಿಗೆ 'ಅಫೀಮು' ತಿನ್ನುವ ಅಭ್ಯಾಸವಿದ್ದಿತೆಂದು ಅವನು ಒಪ್ಪಿದನು. ಹಾಗೂ ದಿನಂಪ್ರತಿ ಅದನ್ನು ಎಲ್ಲಿಂದಲಾದರೂ ಸಂಪಾದಿಸಿಕೊಂಡು ತಾನು ಚಿಕ್ಕತಂದೆಯವರಿಗೆ ಕೊಡುತಿದ್ದೆನು ಎಂದು ಮುದ್ದಣ್ಣನು ಹೇಳಿದನು. ಅದೂ ಅಲ್ಲದೆ 'ಕೊಲೆರಾ' ರೋಗದ ಶಮನಾರ್ಥವಾಗಿ ನಾನು ತಂದಿಟ್ಟ ಸೀಸೆಯ ಸಂಗತಿಯು ಚಿಕ್ಕತಂದೆಯವರಿಗೆ ಗೊತ್ತಿದ್ದಿತೆಂದೂ, ಅವರ ಮಾತಿನಂತೆ ಬೀಗದಕೈಯನ್ನು ನನ್ನಿಂದ ಕೊಂಡುಹೋಗಿ, ಸೀಸೆಯನ್ನು ಅವರ ಕೈಗೆ ಕೊಟ್ಟಿದ್ದೆನೆಂದೂ ಮುದ್ದಣ್ಣನು ಹೇಳಿಕೆ ಕೊಟ್ಟನು.

ಸ್ವಲ್ಪ ಹೊತ್ತಿನ ಮೇಲೆ ಚಿಕ್ಕತಂದೆಯವರು ಮರಣಾವಸ್ಥೆಯನ್ನು ಬಿಟ್ಟು ನಿದ್ರಾವಸ್ಥೆಗೂ ಜಾಗ್ರತಾವಸ್ಥೆಗೂ ಬಂದು ಎಚ್ಚರವಾಗಿ ಅವರ ಹೇಳಿಕೆಯ ಪ್ರಕಾರ 'ಅಫೀಮನ್ನು' ದೇಹದ ಅಂದಿನ ಅಜೀರ್ಣ ಪರಿಹಾರಾರ್ಥವಾಗಿ ತಾನೇ ತಿಳಿಯದೆ ಸ್ವಲ್ಪ ಹೆಚ್ಚು ತಿಂದುಬಿಟ್ಟಿದ್ದರಿಂದು ಚಿಕ್ಕತಂದೆಯವರು ಕೊಟ್ಟ ವಾಜ್ಮೂಲದ ಮೇಲೆ ನನಗೆ ಬಿಡುಗಡೆಯಾಯಿತು.

# ನನ್ನ ಚಿಕ್ಕತಂದೆಯವರ 'ಉಯಿಲ್'

ನನ್ನ ಚಿಕ್ಕತಂದೆಯವರಿಗೆ ನನ್ನೊಡನೆ ಉಳುಕೊಳ್ಳುವುದು ಸಮಾಧಾನವಾಗುತ್ತಿರಲಿಲ್ಲ. ನನ್ನ ಅಡಿಗೆಯವನಾದ ಮುದ್ದಣ್ಣನ ಬಲಾತ್ಕಾರಕ್ಕೆ ಅವರು ಒಂದು ತಿಂಗಳು ವರೆಗೆ ನಮ್ಮೊಟ್ಟಿಗೆ ಇದ್ದರು. ಮುದ್ದಣ್ಣನು ಎಂದಿನಂತೆ ಅವರ ಪರಿಚಾರಕನಾಗಿದ್ದನು. ಕೊನೆಗೆ ಚಿಕ್ಕತಂದೆಯವರು ಊರು ಬಿಟ್ಟು ಹೋಗುವ ಆಲೋಚನೆ ಮಾಡಿದರು. ಇದಕ್ಕೆ ಬಲವಾದ ಕಾರಣವಿತ್ತು. ಊರೊಳಗೆ ಪ್ಲೇಗ್ ರೋಗವು ಅಕಸ್ಮಾತ್ತಾಗಿ ಕಾಲುಹಾಕಿ, ಯುವಕರನ್ನೂ ಬಲಿಷ್ಠರನ್ನೂ ಕೊಂಡುಹೋಗುತ್ತಿತ್ತು. ಮನೆ ಮನೆಯಲ್ಲಿ ಇಲಿಗಳು ಸತ್ತು ಬಿದ್ದವು. ಇಲಿಬಿದ್ದ ಮನೆಗಳನ್ನು ಜನರು ಬಿಟ್ಟುಓಡಿದರು. ಬಾಡಿಗೆ ಇಲ್ಲದೆ ದೊಡ್ಡ ದೊಡ್ಡ ಮನೆಗಳಲ್ಲಿ ಉಳುಕೊಳ್ಳುವುದಕ್ಕೆ ಬಡವರು ನೊಪಲುಮಾಡಿದರು. ಈ ಸಮಯ ನನ್ನೇ ನೋಡಿಕೊಂಡು ಮನೆಯ 'ಮ್ಹಾಲಿಕರು' ತಮ್ಮ ಮನೆಯ ಬಾಡಿಗೆಯನ್ನೂ ಕೊಡದೆ ಹಟಹಿಡಿದು ಉಳುಕೊಂಡಿದ್ದ ಜನಗಳನ್ನು ತಮ್ಮ ಮನೆಯಿಂದ ಓಡಿಸಿಬಿಡಲಿಕ್ಕೆ ಸತ್ತ ಇಲಿಗಳನ್ನು ಮನೆಯೊಳಗೆ ಹಾಕಿಬಿಟ್ಟರು. ದಿನಕ್ಕೆ ಹತ್ತರ ಪ್ರಕಾರ ಜನರು ಸಾಯತೊಡಗಿದರು. ಒಂದೆರಡು ದಿನಗಳಲ್ಲಿಯೇ ಈ ಸಂಖ್ಯೆ ೫೦ಕ್ಕೆ ಮೀರಿತು. ಎಲ್ಲರೂ ಒಕ್ಕಲು ತೆಗೆದರು. ಹಳ್ಳಿಪಳ್ಳಿಗೆ ಪಲಾಯನ ಮಾಡಿದರು. ಅಂಗಡಿಗಳನ್ನು ಮುಚ್ಚಿಬಿಟ್ಟರು. ಒಕ್ಕಲು ಹೋಗುವ ಅಂಗಡಿಕಾರರು ಉಳಿದವರು ಧೈರ್ಯದಿಂದ ವ್ಯಾಪಾರ ಮಾಡುವುದನ್ನುನೋಡಿ ಸಹಿಸಲಾರದೆ ಕಂಡಕಂಡವರೊಡನೆ "ಅಂಗಡಿ ಬೀದಿಯಲ್ಲಿ ಎಲ್ಲಾ ಕಡೆಗಳಲ್ಲಿ ಇಲಿ ಬಿದ್ದಿವೆ" ಎಂದು ಸಾರುತ್ತ ಹೋದರು. ಶಾಲೆಯ ಉಪಾಧ್ಯಾಯರು ಒಂದೆರಡು ದಿನ 'ಡೆಸ್ಕುಗಳಿಗೂ' 'ಬೆಂಚುಗಳಿಗೂ' ಪಾಠ ಹೇಳಿ, ಉಪಾಯವಿಲ್ಲದೆ ಹುಡುಗರಿಗೆ ಕೆಲಕಾಲ ರಜೆ ಕೊಟ್ಟರು. ಹೆಂಡತಿಯನ್ನು ತವರು ಮನೆಗೆ ಕಳುಹಿಸಿ ವಿರಹಪಡುತ್ತಿದ್ದ 'ಹಜೂರ್ ಗುಮಾಸ್ತನು' ತನ್ನ ಮನೆಯಲ್ಲಿ ಯಾರಿಗೋ ಜ್ವರವೆಂದು ಚೀಟನ್ನು ಕಳುಹಿಸಿ ನಿರಾಯಾಸವಾಗಿ ಹತ್ತು ದಿನಗಳ ರಜಾ ಪಡೆದು ಮಾವನ ಮನೆಗೆ ನಡೆದುಬಿಟ್ಟನು. ದಿನ ಕಳೆದಂತೆ ಬ್ರಾಹ್ಮಣರಿಗೂ ರೋಗ ಸೋಂಕಿತು. ಔಷಧವಿಲ್ಲದ ರೋಗಕ್ಕೆ ಯಾರು ತಾನೇ ಹೆದರದೆ ಇರುವರು? ಕವಿರಾಜ ಗೋವರ್ಧನರು ಈ ರೋಗಕ್ಕೆ ಔಷಧವನ್ನು ಕಂಡುಕೊಂಡಿರುವೆನೆಂದು ಹೇಳಿ, ಕಲ್ಲು ಸಕ್ಕರೆ ಬೆರೆಯಿಸಿದ ಹರಳೆಣ್ಣೆಯ ಸೀಸೆಗೆ 'ಛಾಪೆಯ ಟಿಕೆಟ್' ಒಂದನ್ನು ಹಚ್ಚಿ, ಮಾರಾಟದಿಂದ ೩೦೦ ರೂಪಾಯಿ ಕೂಡಿಸಿಬಿಟ್ಟರು. ಜನರೆಲ್ಲರೂ ಭೀತರಾದರು. ದೇವಾಲಯಗಳಲ್ಲಿ ಪೂಜೆಪ್ರಸಾದಗಳು ನಡೆದುವು. ದೇವರೊಡನೆ ಮೀಸಲಿಟ್ಟು ಪರಿಹಾರವನ್ನು ಕೇಳಿದರು. "ಸತ್ತುಹೋದವರೆಲ್ಲಾ ನನ್ನ ಬಳಿಗೆ ಸೇರಿದರು. ಅತ್ತು ಪ್ರಯೋಜನವಿಲ್ಲ" ಎಂದು ದರ್ಶನಕಾಲದಲ್ಲಿ ದೇವರ ಉತ್ತರವು ಸಿಕ್ಕಿತು. ಇಂಗ್ಲೀಷ ಕಲಿತ ಹಲವು ಮಹನೀಯರು "ದಾಕು ಹಾಕಿಸಿ" ಕೊಂಡರು. ಆದರೂ ರೋಗದ ಹಾವಳಿ ಒಂದಿಷ್ಟಾದರೂ ಕಡಮೆಯಾಗಲಿಲ್ಲ. ಅಲ್ಲಲ್ಲಿ 'ಪಾಸ್ ಪೋರ್ಟುಗಳನ್ನು' ದಾರಿಗರಿಗೆ ಕೊಡುವುದಕ್ಕೆ ಶಿಬಂದಿಯನ್ನು ಒದಗಿಸಿದರು. ಆದರೂ ರೋಗವು ವೃದ್ಧಿಯಾಗುತ್ತ ಹೋಯಿತು.

ಈ ಆಪತ್ಕಾಲದಲ್ಲಿ ನನ್ನ ಚಿಕ್ಕತಂದೆಯವರು ಏನು ಮಾಡಬೇಕೆಂದು ತಿಳಿಯಲಾರದೆ ಹೋದರು. "ಮುದುಕರಿಗೆ ಈ ರೋಗವು ಸೋಂಕಲಾರದು." ಎಂದು ಒಬ್ಬಿಬ್ಬರು ಅವರನ್ನು ಸಮಾಧಾನಪಡಿಸಿದ್ದರು. ಆದರೆ ತಾನು ಮುದುಕನಲ್ಲವೆಂದು ತಾನು ಅಂತರ್ಯದಲ್ಲಿ ತಿಳಿದುದರಿಂದ, ಅನ್ಯರ ಮಾತುಗಳಿಂದ ಅವರ ಮನಸ್ಸಿಗೆ ಶಾಂತಿ ಉಂಟಾಗುತ್ತಿರಲಿಲ್ಲ. ಕೆಲವರು ಇವರನ್ನು ಸಾಯಂಕಾಲದಲ್ಲಿ ನೋಡಿ, "ಅಯ್ಯಾ! ಮುಖವು ಇಳಿದು ಹೋಗಿದೇನು?" ಎಂದು ಕೇಳುತ್ತಿದ್ದರು. ಪ್ರತ್ಯುತ್ತರವಾಗಿ ಮತ್ತೊಬ್ಬರು "ನನ್ನ ಚಿಕ್ಕಪ್ಪಯ್ಯನವರಿಗೆ ಬೇಸರ. ಹೋದವಾರ ಅವರು ಕಳೆದುಕೊಂಡ ಒಂದು ಆಣೆ ಇನ್ನೂ ಸಿಕ್ಕಲಿಲ್ಲವಂತೆ" ಎಂದು ಹೇಳುತ್ತಿದ್ದರು. ಅವರ ಹಿತಚಿಂತಕರಲ್ಲಿ ಯಾರೊಬ್ಬರು ದೂರದಲ್ಲಿದ್ದು ಇವರೊಡನೆ "ಮೈಯಲ್ಲಿ ಆಲಸ್ಯವೇ? ಜ್ವರವುಂಟೇ?" ಎಂದು ಕೇಳುತ್ತಲೇ ನನ್ನ ಚಿಕ್ಕತಂದೆಯವರು ಸಿಟ್ಟಿಗೆದ್ದು ಬಾಯೊಳಗೆ ಅವರನ್ನು ಶಪಿಸುತ್ತಿದ್ದರು. ನಮ್ಮ ಮನೆಗೆ ತಿಂಗಳಿಗೊಮ್ಮೆ ಬರುತ್ತಿದ್ದ ಕಟ್ಟಿಗೆ ಸಾವಕಾರ ಅಣ್ಣಪ್ಪ ಗೌಡರು ನಾನು ಇಲ್ಲದ ವೇಳೆಯಲ್ಲಿ ಮನೆಗೆ ಬಂದು ನನ್ನ ಚಿಕ್ಕತಂದೆಯವರೊಡನೆ, "ಕಟ್ಟಿಗೆ ಬೇಕಿತ್ತೇ?" ಎಂದು ಕೇಳಿ, ಇವರ ಬೈಗಳನ್ನು ತಲೆಯಮೇಲೆ ಹೊತ್ತುಕೊಂಡು ಹೋದರಂತೆ. ಆದರೂ ಚಿಕ್ಕತಂದೆಯವರು ಎದೆಗುಂದದೆ ಕೆಲವು ದಿವಸಗಳವರೆಗೆ ಊರಲ್ಲೇ ಇದ್ದರು. ಕೊನೆಗೆ ನಮ್ಮ ಅಗ್ರಹಾರದ ಬಳಿಯಲ್ಲಿ ಗೋಪಿವಲ್ಲಭಾಚಾರ್ಯರು ಎಂಬತ್ತು ವರ್ಷ ಪ್ರಾಯದಲ್ಲಿ ಪ್ಲೇಗ್ ತಗಲಿ ಸತ್ತರೆಂಬ ವರ್ತಮಾನವನ್ನು ಕೇಳುತ್ತಲೇ ನನ್ನ ಚಿಕ್ಕತಂದೆಯವರ ಮರಣ ಭೀತಿಗೆ ಪಾರವಿಲ್ಲದೆ ಹೋಯಿತು. ಈ ಮರಣದ ಮರುದಿನವೇ ನನ್ನ ಚಿಕ್ಕತಂದೆಯವರು ಎಲ್ಲಿಯೋ ಅದೃಶ್ಯರಾದರು.

ಭಾನುವಾರ ಮಧ್ಯಾಹ್ನ ನಾನು ಸಕಲಾವತಿಯೊಡನೆ ಚಿಕ್ಕತಂದೆಯವರ ಪ್ರಸ್ಥಾನವನ್ನು ಕುರಿತು ವಿಚಾರಿಸುತ್ತ ಕುಳಿತಿದ್ದೆನು. ಅಷ್ಟರಲ್ಲಿ ಮುದ್ದಣ್ಣನು ಒಂದು ಸರಕಾರಿ ಕಾಗದವನ್ನು ನನ್ನ ಕೈಯಲ್ಲಿ ಇಟ್ಟನು. ಕಾಗದವು ಈಪರಿ ಯಾಗಿತ್ತು:

ಶನಿವಾರದಿನ ನಿಮ್ಮ ಮನೆಯಿಂದ ಹೊರಟು ಬಂದಿದ್ದ ಚಿಕ್ಕಪ್ಪಯ್ಯ ಯಾನೆ ಜೋಗಪ್ಪಯ್ಯನು ಈ 'ಸ್ಟೇಶನಿಗೆ' 'ಪಾಸಪೋರ್ಟು' ತೆಗೆದುಕೊಳ್ಳಲಿಕ್ಕೆ ಬಂದ ಕಾಲದಲ್ಲಿ ಪ್ಲೇಗ್ ಸೋಂಕಿದ ಚಿಹ್ನೆಗಳನ್ನು ತೋರಿಸಿದುದರಿಂದಲೂ, ಸೊಂಟವನ್ನು ಮುಟ್ಟಿ ನೋಡುವುದಕ್ಕೆ ಬಿಡದಿದ್ದ ಕಾರಣ ದಿಂದಲೂ ಅವರನ್ನು ಇಲ್ಲಿ ತಡೆಸಿರುತ್ತೇವೆ. ಅವರ ಸ್ಥಿತಿಯು ಬಹಳ ಭಯಂಕರವಾಗಿದೆ. ಪ್ಲೇಗಿನ ಗುಡಿಸಲುಗಳಲ್ಲಿ ಯಾರೊಬ್ಬ ಪ್ರಯಾಣಿಕನು ಸತ್ತ ಪಕ್ಷಕ್ಕೆ ಸತ್ತವನ ವಾರಿಸ್ದಾರರಿಗೆ ಕೂಡಲೇ ವರ್ತಮಾನ ತಿಳಿಸಬೇಕೆಂದು ಸರಕಾರಿ ಹುಕುಂ ಇರುವುದರಿಂದ, ಅವರ ಅವಸ್ಥೆಯನ್ನು ಅವರ ಮರಣದ ಮುಂಚೆಯೇ ನಿಮಗೆ ತಿಳಿಸಿರುತ್ತೇವೆ.

(ಸಹಿ) ಎಸ್. ಪಿ. ಬಂಗರ್‌ಸನ್
ಡಿಸ್ಟ್ರಿಕ್ಟ್ ಕಲ್ಲೆಕ್ಟರ್
ಒಫ್ ಪಾಸ್‌ಪೋರ್ಟ್ಸ

ಈ ಕಾಗದವನ್ನು ಓದುತ್ತಲೇ ನಾನು 'ಸ್ಟೇಶನಿಗೆ' ಹೊರಟೆನು. ಸಕಲಾವತಿಯು ನಾನು ಹೋಗುವುದನ್ನು ಅಡ್ಡೈಸುತ್ತ, ಮನಸ್ಸಿನಲ್ಲಿಯೇ ಏನನ್ನೊ ಗುಣುಗುಟ್ಟುತ್ತಿದ್ದಳು. ಮುದ್ದಣ್ಣನು ತಾನೂ ಬರುತ್ತೇನೆಂದು ಹೇಳಿ ಹೊರಟನು.

ನಾನು 'ಪ್ಲೇಗ್ ಸ್ಟೇಶನನ್ನು' ಮುಟ್ಟುವಾಗ ಸಾಯಂಕಾಲ ಆರುಗಂಟೆ ಹೊಡೆದಿತ್ತು. ಚಿಕ್ಕತಂದೆಯವರು ತೆಂಗಿನ ಎಲೆಯ ಗುಡಿಸಲಿನಲ್ಲಿ ಮಲಗಿದ್ದರು. ಅವರನ್ನು ದೂರ ದಿಂದಲೇ ನಾವು ನಿಂತು ನೋಡಿದೆವು. ಚಿಕ್ಕತಂದೆಯವರು ನಮ್ಮನ್ನು ನೋಡಿ ನಗಾಡಿದರು. "ಈ ಪಾಪಿಗಳು ನನಗೆ ಪ್ಲೇಗ್ ಸೋಂಕಿದೆ ಎಂದು ಸುಳ್ಳುಮಾಡಿ, ನನ್ನನ್ನು ನಾನಾ ರೀತಿಯಲ್ಲಿ ಉಪದ್ರಪಡಿಸುವರು." ಎಂದು ನನ್ನೊಡನೆ ಮೊರೆಯಿಟ್ಟರು. ಅವರ ಮಾತುಗಳ ಸ್ವರವೇ ಬೇರೆಯಾಗಿತ್ತು. ನನಗೆ ಹತ್ತಿರ ಹೋಗಲು ಧೈರ್ಯಸಾಲಲಿಲ್ಲ.

"ಜ್ವರವುಂಟೇ" ಎಂದು ನಾನು ಕೇಳಿದೆನು.

ಚಿಕ್ಕತಂದೆ:—ಜ್ವರ? ಯಾರಿಗೆ ಜ್ವರ? ನನಗೆ ಸ್ವಲ್ಪ ಚೈತನ್ಯ ಕಡಿಮೆಯಾಗಿದೆ. ಈ ಬಡ್ಡಿಮಕ್ಕಳು ನನ್ನಿಂದ ಇಪ್ಪತ್ತು ರೂಪಾಯಿ ಹಾರಿಸಬೇಕೆಂದು ಇದ್ದರು. ಅದನ್ನು ನಾನು ಕೊಡದೆ ಹೋದ್ದರಿಂದ, ಇಷ್ಟು ಸಂಕಷ್ಟಕ್ಕೆ ನನ್ನನ್ನು ಗುರಿಮಾಡಿದರು."

ಅಷ್ಟರಲ್ಲಿ ಕಾವಲಿದ್ದ ಪೊಲೀಸಿನವನು ನನ್ನ ಹತ್ತಿರ ಬಂದು, "ಅಯ್ಯಾ! ಪ್ಲೇಗ್‌ರೋಗದಲ್ಲಿ ಮರಣಕ್ಕೆ ಮೊದಲು ರೋಗಿಯು ಸರಿಯಾಗಿ ಮಾತನಾಡುವನು. ಬುದ್ಧಿಭ್ರಂಶತೆ ಏನೇನೂ ಇರುವುದಿಲ್ಲ" ಎಂದನು.

ಈ ಮಾತುಗಳನ್ನು ಕೇಳಿ ಚಿಕ್ಕತಂದೆಯವರು "ಓಹೋ! ನಾನು ಸಾಯಲಾರೆನು. ನಾನು—ಓ! ಕೆಂಪುಮುಂಡಾಸ್! ನಾನು ನಿಮ್ಮ ಸಾವನ್ನು ನೋಡಿದ ಹೊರತು ಸಾಯಲಾರೆನು" ಎಂದು ಹೇಳಿ ಗುಡಿಸಲಿನ ಹೊರಬರುವುದಕ್ಕೆ ಪ್ರಯತ್ನಿಸುತ್ತಿದ್ದರು.

"ರೋಗಿಗೆ ವಾಂತಿಯಾಗಿದೆ" ಎಂದು ಹೇಳಿ ಜಮೇದಾರನು ಒಂದು ಬಟ್ಟಲನ್ನು ರೋಗಿಯ ಇದಿರಿಗೆ ತಂದಿಟ್ಟನು. ರೋಗಿಯು ಅದನ್ನು ಬಿಸಾಡಿಬಿಟ್ಟನು; ಬಟ್ಟಲು ಚೂರು ಚೂರಾಯಿತು. "ಜ್ವರವು ರೋಗಿಯ ತಲೆಗೆ ಏರುತ್ತ ಬಂದಿದೆ. ಈಗ ರೋಗಿಯೊಡನೆ ನೀವು ಮಾತನಾಡುವುದು ಸರಿಯಲ್ಲ" ಎಂದು ಪೊಲೀಸಿನವನು ನನಗೆ ಚಿಕ್ಕತಂದೆಯವರೊಡನೆ ಮಾತನಾಡಗೊಡಿಸದೆ ಹೋದನು.

ನಾನು ಬಂಡಿಯನ್ನು ಹತ್ತಿ ಡಾಕ್ಟರನು ಇದ್ದೆಡೆಗೆ ಹೋಗಿ ವಿಚಾರಿಸಿದೆನು. ಡಾಕ್ಟರನು ಹಿಂದಿನ ರಿಪೋರ್ಟನ್ನು ನೋಡಿ, ಚಿಕ್ಕತಂದೆಯವರಿಗೆ "ಪ್ಲೇಗ್" ಸೋಂಕಿದೆ ಎಂದು ದೃಢಪಡಿಸಿದನು. ಈ ಮಾತಿನಿಂದ ನನಗೆ ಸಂತೋಷವಾಯಿತೋ ಸಂತಾಪವಾಯಿತೋ ಈಗ ಹೇಳಲು ಬರುವುದಿಲ್ಲ. ನಾನು ಓಡತೊಡಗಿದೆನು. ಮನೆಗೆ ಹೋಗಿ ಸಕಲಾವತಿಗೆ ಇದನ್ನೆಲ್ಲಾ ನಾನು ತಿಳಿಸುತ್ತಲೇ, ಅವಳು ಬೆಚ್ಚಿಬಿದ್ದಳು. ನಾನು ಮರಳಿ ಅಲ್ಲಿಗೆ ಹೋಗಬಾರದೆಂದು ತನ್ನ ಮೇಲೆ ಆಣೆ ಇಟ್ಟು ನನ್ನನ್ನು ಬೇಡಿದಳು.

"ಚಿಕ್ಕತಂದೆ ಬದುಕುವುದೂ ಸಾಯುವುದೂ ದೇವರ ಇಚ್ಛೆ. ಅವರ ಕಡೆಗಾಲದಲ್ಲಿ ನಾನು ಅವರ ಹಾಸಿಗೆಯ ಹತ್ತಿರವಿಲ್ಲದಿದ್ದರೆ, ಜನಗಳು ಏನೆನ್ನುವರು?"

"ಹಾಸಿಗೆಯ ಹತ್ತಿರ ಹೋಗುವುದುಂಟೇ? ಅಯ್ಯೋ! ಜನಗಳು ಬಾಯಿಗೆ ಬಂದಂತೆ ಹರಟುವರು. ಅದು ಹೋಗಲಿ! ಪರರ ಮರಣವನ್ನು ನೋಡಿದರೆ, ಉಳಿದವರು ವೈರಾಗ್ಯ ಮನಸ್ಕರಾಗುವರಂತೆ. ಇದು ನಿಜವೇ?" ಎಂದು ಸಕಲಾವತಿಯು ಭೀತಿಯಿಂದ ಕೇಳಿದಳು.

"ವೈರಾಗ್ಯವು ಬರಬೇಕಾದರೆ ಮೊದಲು ಸಂಸಾರ ಜ್ಞಾನವು ಪೂರ್ಣವಾಗಬೇಕು. ಪ್ರಕೃತದಲ್ಲಿ ವೈರಾಗ್ಯವನ್ನು ಹೊದ್ದುಕೊಂಡ ಸಂತಪುರುಷರೆಲ್ಲರು ಸಂಸಾರ ಸಾಗರವನ್ನು ಈಸಿಕೊಂಡು, ಸೋತುಹೋಗಿ ವೈರಾಗ್ಯ ತೀರವನ್ನು ಸೇರಿದರು. ಮರಣವನ್ನು ನೋಡಿದರೆ ಶ್ಮಶಾನ ವೈರಾಗ್ಯವು ಕೆಲವರಿಗೆ ಉಂಟಾಗುವುದು. ಅಂಥ ಮರಣದಿಂದ ಧನ ಪ್ರಾಪ್ತಿ

ಯಾಗುವುದೂ ಉಂಟು. ಅನೇಕರು ಈ ವೈರಾಗ್ಯವನ್ನು ಆಶಿಸುವರು."

ಇಂತಹ ಸಂಭಾಷಣೆಯಿಂದಲೂ ಸುಖಸಲ್ಲಾಪದಿಂದಲೂ ನಾನು ಸಕಲಾವತಿಯ ಮನಸ್ಸನ್ನು ರಂಜಿಸುತ್ತ, ಅವಳ ಅಪ್ಪಣೆಯನ್ನು ಹೊಂದಿ, ರಾತ್ರಿಯೇ ಚಿಕ್ಕತಂದೆಯವರಿದ್ದ "ಪಾಸ್‌ಪೋರ್ಟ್ ಸ್ಟೇಶನಿಗೆ" ನಡೆದೆನು.

ನನ್ನ ಚಿಕ್ಕತಂದೆಯವರಿಗೆ ಸೋಂಕಿದ ರೋಗವು ಪ್ಲೇಗ್ ಎಂದು ನಿಷ್ಕರ್ಷೆಯಾಯಿತು. ನಾನು 'ಪ್ಲೇಗ್ ಸ್ಟೇಶನಿಗೆ' ಮುಟ್ಟಿದಾಗ ರಾತ್ರಿ ೮ ಘಂಟೆ ಹೊಡೆದಿತ್ತು. ಚಿಕ್ಕತಂದೆಯವರು ನಿದ್ದೆ ಹೋಗಿದ್ದರು. ಅದು ಅಲ್ಪ ನಿದ್ರೆಯೊ ದೀರ್ಘ ನಿದ್ರೆಯೊ ಎಂದು ಪರೀಕ್ಷಿಸಲು ಹತ್ತಿರ ಹೋಗುವಷ್ಟು ನಾನು ಧೈರ್ಯಗೊಳ್ಳಲಿಲ್ಲ. ನಾನು ರೋಗಿಯನ್ನು ಮುಟ್ಟಬಾರದೆಂದು ಸಕಲಾವತಿಯು ತನ್ನ ಮೇಲೆ ಆಣೆಯಿಟ್ಟು ನನಗೆ ಅಪ್ಪಣೆ ಮಾಡಿದ್ದಳು. ಮುದ್ದಣ್ಣನು 'ಸ್ಟೇಶನಿನ' ಹೊರಕ್ಕೆ ಚಿಂತೆಯಿಂದ ತಲೆಬಗ್ಗಿಸಿಕೊಂಡು ಕುಳಿತಿದ್ದನು. ಮುಪ್ಪಿನಲ್ಲಿ ದತ್ತಕ್ಕೆ ಪಡೆದುಕೊಂಡ, ಗಡ್ಡ ಮೀಸೆ ಬಂದ ಚಿಕ್ಕಮಗುವು ಸಾಕುತಂದೆಯ ಅನಿವಾರ್ಯವಾದ ಮರಣವನ್ನು ನೋಡಿ ಕಣ್ಣೀರು ಬಿಡುವಂತೆ, ಮುದ್ದಣ್ಣನು ತನ್ನೊಳಗೆನೇ ಮರುಗುತ್ತಿದ್ದನು. 'ಪೋಲೀಸ್ ಜಮೇದಾರನು' ಸಂಸಾರದ ನಶ್ವರತೆಯನ್ನು ಕುರಿತು ಮುದ್ದಣ್ಣನಿಗೆ ಉಪದೇಶ ಮಾಡುತ್ತಿದ್ದನು. "ಚಿಕ್ಕತಂದೆಯವರಿಗೆ ಹೇಗುಂಟು?" ಎಂದು ನಾನು ಜಮೇದಾರನೊಡನೆ ವಿಚಾರಿಸಿದೆನು. "ಸಾಯಂಕಾಲದ ವರೆಗೆ ಸರಿಯಾಗಿ ಮಾತನಾಡುತ್ತಿದ್ದರು. ಈಗ ಕೊಂಚ ಪ್ರಜ್ಞೆ ತಪ್ಪಿದೆ" ಎಂದು ಜಮೇದಾರನು ಹೇಳಿ ಸುಮ್ಮನಾದನು. "ಎಲ್ಲವೂ ದೈವೇಚ್ಛೆ" ಎಂದು ಹೇಳಿ ನಾನು ಅಲ್ಲಿಯೇ ಕುಳಿತುಬಿಟ್ಟೆನು. ಚಿಕ್ಕತಂದೆಯವರು ನಮ್ಮನ್ನೆಲ್ಲಾ ಬಿಟ್ಟುಹೋಗವರು ಎಂಬ ಚಿಂತೆಯು ನನ್ನ ಮನಸ್ಸನ್ನು ತೊಂದರೆಗೊಳಿಸಲಿಲ್ಲ. ಅವರು ಒಂದು ವೇಳೆ ಜಗಲಿ ಬಿಟ್ಟು ಗಗನಕ್ಕೆ ಹಾರಿದರೂ ಅವರ ಶ್ಮಶಾನ ಕ್ರಿಯೆಗಳು ದಯಾಳುವಾದ ಸರಕಾರದವರಿಂದ ಸಾಗಿಸಲ್ಪಡುವುವು ಎಂಬ ನಿಶ್ಚಯವಿತ್ತು. ಅವರ ಉತ್ತರಕ್ರಿಯೆಗಳಿಗೋಸ್ಕರ ನನ್ನನ್ನು ಭಟ್ಟರು —ಮಾದಿಗರು ಚರ್ಮ ಸುಲಿದಂತೆ — ಸುಲಿದುಬಿಡುವರೊ ಎಂಬ ದುಃಖವು ವಿಪರೀತವಾಗಿತ್ತು. "ಗಂಡನ ಸಾವು ಒಂದು, ಮುಂಡೆಯ ಗಾಯ ಒಂದು." ಅನ್ಯರ ಮರಣದಿಂದ ಮಹತ್ವವುಂಟಾಗುವುದಾದರೆ ಇಂತಹ ಸಂಸ್ಕಾರಗಳಲ್ಲಿ ಹಣವನ್ನು ವೆಚ್ಚಮಾಡಲು ಬೇಸರು ಬರುವುದಿಲ್ಲ. ನಾನು ಹತಭಾಗ್ಯನು, ಮರಣದಿಂದ ಮಹತ್ವ ಎಂಬ ಮಾತು ನನ್ನಲ್ಲಿ ಸರಿಹೋಗುವುದೊ ಇಲ್ಲವೊ ಹೇಳ ಬರುವುದಿಲ್ಲ. ಇತ್ತಲಾಗಿ ಪರರ ಮರಣದಿಂದ ನಮ್ಮ ಊರಲ್ಲಿ ಅನೇಕರು ಪ್ರಯೋಜನ ಹೊಂದಿದರೆಂಬುದು ನಿಜ. ಮಧ್ವರಾಯರ ಮರಣದಿಂದ ರಾಮಸೆಟ್ಟರಿಗೆ ನಿರಾಯಾಸವಾಗಿ ಸಿಕ್ಕಿತು—ಅವರ 'ವಿಮೆಯ' ಹೊನ್ನು. ಗಿರಿಧರಾಚಾರ್ಯರ ಮರಣದಿಂದ ಶ್ಯಾಮರಾಯರಿಗೆ ತೊಂದರೆ ಇಲ್ಲದೆ ಸಿಕ್ಕಿತು — ವಿಧವೆಯಾದ ಹೆಣ್ಣು. ಹೊನ್ನಾಗಲಿ ಹೆಣ್ಣಾಗಲಿ— ನನ್ನಪಾಲಿಗೆ ಸಿಕ್ಕುವ ಹಾಗೆ ಇರಲಿಲ್ಲ. ಹೊನ್ನು ಹೆಣ್ಣು ಸಿಕ್ಕದವರಿಗೆ ಮಣ್ಣಾದರೂ ಸಿಕ್ಕುವುದಂತೆ. ಚಿಕ್ಕತಂದೆಯವರು ಸತ್ತರೆ ಮಣ್ಣಿನಮನೆ ಯಾರ ಪಾಲಿಗೆ ಹೋಗುವುದು ಎಂಬ ಯೋಚನೆಯಿಂದ ಇರುಳೆಲ್ಲ ನನ್ನ ಕಣ್ಣಿಗೆ ನಿದ್ದೆ ಹತ್ತಲಿಲ್ಲ.

ಹೆಣದ ಎಂಜಲನ್ನು ಬಯಸುವವನು ಪಾಪಿ ಎಂದು ಪಾತಕಮಹಾಶಯರಲ್ಲಿ ಅನೇಕರು ಮೇಲೆ ಹೇಳಿದ ನನ್ನ ಅವಸ್ಥೆಯನ್ನು ನೋಡಿ ಬಾಯೊಳಗೆನೇ ನಗಾಡ ಬಹುದು. ಅಂತಹರಿಗೆ ನಾನು ಒಂದು ಮಾತನ್ನು ಹೇಳಬೇಕೆಂದಿರುವೆನು. ಮನುಷ್ಯನ ಮರಣಕ್ಕೋಸ್ಕರವೇ ಮನಮರುಗುವವರು ಈ ಕಾಲದಲ್ಲಿ ಕಡಮೆ. ಸತ್ತವನು ನಮಗೇನೂ ಬಿಟ್ಟಿಲ್ಲ, ಕೊಟ್ಟಿಲ್ಲ, ಮುಂದೆ ನಮಗೇನು ಗತಿ?" ಎಂದು ಅಳುವರಲ್ಲವೆ, ಸತ್ತವನ ಗತಿಯನ್ನು ಕುರಿತು ಒಬ್ಬರೂ ಲೆಕ್ಕಿಸುವುದಿಲ್ಲ. ಈ ಮಾತನ್ನು ಬಲಗೊಳಿಸುವುಕ್ಕೆ ಕಾರಣಗಳಿವೆ. ಮನುಷ್ಯನು ಸಾಯುತ್ತಲೇ ಅವನ ನೆಂಟರಿಷ್ಟರು ಅವನನ್ನು ಕುರಿತು 'ಸತ್ತದ್ದು ಹೇಗೆ? ಹೊತ್ತದ್ದುಯಾರು?' ಎಂದು ಕೇಳುವ ಬದಲಾಗಿ ಅವನ ಹೆಂಡತಿಮಕ್ಕಳಿಗೆ ''ಸೊತ್ತುಂಟೇ? ವಿತ್ತವುಂಟೇ?" ಎಂದು ಮೊದಲು ಪ್ರಶ್ನೆಮಾಡಿ, 'ಬದುಕುಂಟು, ಭೂಮಿಯುಂಟು' ಎಂಬ ಉತ್ತರದಿಂದ ಸ್ವಲ್ಪ ಸಮಾಧಾನಚಿತ್ತರಾಗುವರು. ಹೀಗಿದ್ದುದರಿಂದ ನನ್ನ ಚಿಕ್ಕತಂದೆಯವರ ಮರಣ ವಿಷಯದಲ್ಲಿ ನಾನು ಸ್ವಾರ್ಥಬುದ್ಧಿಯನ್ನು ತೋರಿಸಿದುದು ವಿಚಿತ್ರವೇನೂ ಅಲ್ಲ. ಆದುದರಿಂದ ಅವರನ್ನು ಆಗಾಗ ಮುಟ್ಟಿ ನೋಡಿ, ರೋಗಕ್ಕೆ ನಾನು ಬಲಿಬಿದ್ದು, ಮಕ್ಕಳುಮರಿ ಹುಟ್ಟುವ ಮೊದಲೇ ನನ್ನ ಹೆಂಡತಿಯನ್ನು ಶಾರದಾಸದನದ ಸುಂದರ ಯುವತಿಯನ್ನಾಗಿ ಮಾಡಲು ನನಗೆ ಮನಸ್ಸು ಬರಲಿಲ್ಲ. ನಗಾಡುವವರು ನಗಾಡಲಿ; ಅವರು ಹೊತ್ತು ಗೊತ್ತು ಅರಿಯದೆ ನಗಾಡುವರು. ತಾಯಿ ಮಗುವಿಗೆ ಸ್ತನ್ಯಪಾನ ಮಾಡುವುದನ್ನು ನೋಡಿ ಅವರು ನಗಾಡುವರು. ತಂದೆ ಹೊಟ್ಟೆ ತುಂಬಾ ಉಂಡು ತೇಗುವುದನ್ನು ಕೇಳಿ ಅವರು ನಗಾಡುವರು. ಅಣ್ಣನು ಏಕಾಂತದಲ್ಲಿ ಹೆಂಡತಿಯೊಡನೆ ಮುದ್ದು ಮಾತುಗಳನ್ನು ಆಡುವುದನ್ನು ನೋಡಿ ಅವರು ನಗಾಡುವರು. ಬಡವನು ಭಾಗ್ಯ ತೋರಿಸಿದರೆ, ಕುರೂಪಿಯು ಕಾಂಚನ ತೊಟ್ಟುಕೊಂಡರೆ, ಭಟ್ಟರು ಬೂದಿ ಬಳಿದುಕೊಂಡರೆ ಅವರು ನಗಾಡುವರು. ಇದು ನಗಾಡುವುದೊ ಹಲ್ಲು ಕಿರಿಯುವುದೊ ನಾನು ಹೇಳಲಾರೆನು.

ಮಧ್ಯರಾತ್ರಿ ಕಳೆದುಹೋದ ಬಳಿಕ 'ಪೊಲೀಸ್ ಜಮೇದಾರನು' ನನ್ನ ಬಳಿಗೆ ಬಂದು "ಅಯ್ಯಾ! ನಿಮ್ಮ ಚಿಕ್ಕತಂದೆಯವರು ಇನ್ನು ಉಳಿಯುವ ಹಾಗಿಲ್ಲ. ಮುಂದೆ ಏನು ಮಾಡಬೇಕೆಂದಿರುವಿರಿ?" ಎಂದು ಕೇಳಿದನು.

ಇದಕ್ಕೆ ಉತ್ತರವಾಗಿ "ಏನು ಮಾಡಬೇಕೆಂದು ನಾನರಿಯೆ. ನನಗೆ ಎಲ್ಲವು ವಿಪರೀತವಾಗಿ ಪರಿಣಮಿಸುತ್ತಿದೆ. ಮೊದಲೇ ಸಾಲವು ನನ್ನ ತಲೆಯೇರಿ ಹೋಗಿದೆ" ಎಂದು ನಾನು ಹೇಳಿದೆನು.

ಜಮೇದಾರ:—"ನಿಮ್ಮ ಚಿಕ್ಕತಂದೆಯವರ ಕೈಯಲ್ಲಿ ಸ್ವಲ್ಪ ಹಣವಿರುವುದಲ್ಲವೆ? ನಿಮ್ಮ ಅಡಿಗೆಯವನು ಇದನ್ನೆಲ್ಲಾ ಬಲ್ಲನು. 'ಉಯಿಲನ್ನು' ಕುರಿತು ಮುದ್ದಣ್ಣನು ನಿಮ್ಮ ಚಿಕ್ಕತಂದೆಯವರೊಡನೆ ಆಗಾಗ ವಿಚಾರಿಸುತ್ತಿದ್ದನು."

ನಾನು ಮಾತನಾಡದೆ ಜಮೇದಾರನು ಮುಂದರಿಸುವಂತೆ ಸುಮ್ಮನಾದೆನು.

ಜಮೇದಾರ:—"ಮುದ್ದಣ್ಣನು ಹುಚ್ಚನಂತೆ ತೋರುವನು ನಿಜ. ಆದರೆ ನಿಮಗೆ ಓನಾಮಾ ಹಾಕುವಷ್ಟು ಹುಚ್ಚು ಬುದ್ಧಿಯು ಅವನಲ್ಲಿ ಉಂಟು. ಇಷ್ಟರ ಒಳಗೆ ಅವನು ಉಯಿಲನ್ನು ಜಾರಿಸದೆ ಇರಲಾರನು. ತಾವು ಎಚ್ಚರವಿಲ್ಲದಿದ್ದರೆ ಕೆಲಸವು ಕೆಟ್ಟುಹೋಗುವುದು."

ಈತನ ಮಾತುಗಳಿಂದ ನಾನು ಮೋಸಹೋಗಬಹುದೊ ಇಲ್ಲವೊ ಎಂದು ನನ್ನಲ್ಲಿಯೇ ವಿಚಾರಿಸುತ್ತಿದ್ದೆನು. ಅಷ್ಟರಲ್ಲಿ ಜಮೇದಾರನು ಮುದ್ದಣ್ಣನಿದ್ದ ಎಡೆಗೆ ಹೋಗಿ ಬರುವೆನೆಂದು ಹೇಳಿ, ಕೆಲವು ನಿಮಿಷಗಳ ಬಳಿಕ ನನ್ನ ಹತ್ತಿರಕ್ಕೆ ಬಂದನು.

ಜಮೇದಾರ:—"ನಾನು ಮುದ್ದಣ್ಣನ ಮೈಯನ್ನು ಹುಡುಕಿ ನೋಡಿದೆನು. ಉಯಿಲನ್ನು ಅವನು ಎಲ್ಲಿಯೊ ಅಡಗಿಸಿರಬಹುದು. ತಮಗೆ ಸಿಕ್ಕುವ ಹಣ ಅನ್ಯರ ಪಾಲಿಗೆ ಹೋಗುವುದೆಂದು ನನಗೆ ಚಿಂತೆ."

ನಾನು ಏನು ಹೇಳಬೇಕೆಂದು ತಿಳಿಯದೆ ಸುಮ್ಮನಾದೆನು. ಮುದ್ದಣ್ಣನು ಮೊದಲಿಂದಲೂ ಚಿಕ್ಕತಂದೆಯವರ ಹಣವನ್ನು ಆಶಿಸಿ ಉಪಾಯ ಮಾಡುತ್ತಿದ್ದನು. ಜಮೇದಾರನ ಮಾತುಗಳು ನಿಜವಾದರೆ ಹಣವು ಮುದ್ದಣ್ಣಗೆ; ಹೆಣವು ನನ್ನ ಪಾಲಿಗೆ. ಇದನ್ನು ಕುರಿತು ಮುದ್ದಣ್ಣನೊಡನೆ ವಿಚಾರಿಸಬೇಕೆಂದು ನಾನು ಆಲೋಚಿಸುವಷ್ಟರಲ್ಲಿ, ಮುದ್ದಣ್ಣನು ನಿದ್ದೆಯಿಂದ ಎಚ್ಚರವಾದಂತೆ, ತಲೆಯನ್ನು ತುರಿಸುತ್ತ ನನ್ನ ಬಳಿಗೆ ಬಂದು "ಅಯ್ಯಾ! ನನ್ನ ಮೈಯಲ್ಲಿ ಹಳುಹರಿದಂತಾಗುವುದು. ಯಾರೋ ನನ್ನ ಮೈ ಮೇಲೆ, ಬಂದು ಚಕ್ಕಲಗಲ ಮಾಡಿದಂತೆ ತೋರುವುದು" ಎಂದನು.

ಜಮೇದಾರನು ಈ ಮಾತನ್ನು ಕೇಳುತ್ತಲೇ "ನಿನಗೆ ಮೈಮೇಲೆ ಬಂತೇ? ಸರಿ! ಸರಿ! ಸತ್ತವರು ನಿಮ್ಮನ್ನು ಹಿಡಿದಿರುವರು. ಅವರು ಉಯಿಲನ್ನು ಕೇಳುವುದಕ್ಕೆ ಬಂದರೊ ಏನೊ?" ಎಂದು ಹೇಳಿದನು. ಮುದ್ದಣ್ಣನು ಅಲ್ಲಿ ನಿಲ್ಲದೆ ಹಿಂದೆಗೆದನು.

ಮರುದಿನ ಬೆಳಗ್ಗೆ ಡಾಕ್ಟರರು ಚಿಕ್ಕತಂದೆಯವರನ್ನು ದೂರದಿಂದ ನೋಡಿ, 'ಪ್ಲೇಗ್ ಸ್ಟೇಶನ್ ಆಫಿಸರನೊಡನೆ' ಮಾತನಾಡಿ, "ಚಿಕ್ಕಪ್ಪನವರು ಕಾಲಾಧೀನರಾದರು" ಎಂದು ಹೇಳಿ ಹೋದರು. ಹೆಣವನ್ನು ಎತ್ತುವುದಕ್ಕೆ ಜಾತಿ ಗೃಹಸ್ಥರಾಗಲಿ ಕುಲಪುರೋಹಿತರಾಗಲಿ ಬರುವ ಸಂಭವ ತೋರಲಿಲ್ಲ. ನಾನು ಮತ್ತು ಮುದ್ದಣ್ಣ—ಇಬ್ಬರಿಂದ ಕೆಲಸವು ಸಾಗುವ ಹಾಗೆ ಇರಲಿಲ್ಲ. ಜಮೇದಾರನು ಮುಂದೆ ಬಂದು "ಇನ್ನು ಏನು ಮಾಡಬೇಕು?" ಎಂದು ಮೆಲ್ಲನು ಕೇಳಿದನು. ನಾನು ಯೋಚನೆಯಲ್ಲಿ ಬಿದ್ದೆನು. ಅನಾಥ ಪ್ರೇತ ಸಂಸ್ಕಾರದಿಂದ ಕೋಟಿ ಯಜ್ಞ ಫಲವು ಸಿಕ್ಕುವಂತೆ ಸರಕಾರದವರು ತಮ್ಮ ಕಡೆಯಿಂದ ದೀಕ್ಷಿತರಾಗಿ ನಿಯಮಿಸಿದ ಕೃಷ್ಣಕಾಯರಾದ ಪುರೋಹಿತರ ಹಸ್ತದಿಂದ ನಮ್ಮ ಚಿಕ್ಕತಂದೆಯವರಿಗೆ ಪವಿತ್ರವಾದ ಸಮಾಧಿಯು ದೊರೆಯುವುದೊ ಎಂದು ನಾನು ಸಂಶಯ ಪಡುವಷ್ಟರಲ್ಲಿ ನಮ್ಮ ಊರಿನ ಮಾದಣ್ಣನವರು ಅಲ್ಲಿಗೆ ಅಕಸ್ಮಾತ್ತಾಗಿ ಬಂದರು. ಮಾದಣ್ಣನವರು ಏಕೆ ಬಂದರೆಂದು ನನಗೆ ಮೊದಲು ತಿಳಿಯಲಿಲ್ಲ. ಮಾದಣ್ಣನವರು ನಮ್ಮ ಊರಿನ ಬಲಾಢ್ಯರಾದ ಮನುಷ್ಯರು. ಇವರಿಗೂ ನಮ್ಮ ಚಿಕ್ಕತಂದೆಯವರಿಗೂ ಆಂತರಿಕವಾದ ಸ್ನೇಹವಿತ್ತು. ಅದಕ್ಕೋಸ್ಕರ ಅವರು ಚಿಕ್ಕತಂದೆಯವರ ಕಡೆಗಾಲದಲ್ಲಿ ಅವರನ್ನು ದೃಷ್ಟಿಸಬೇಕೆಂದು ಬಂದಿರುವರೆಂದು ನಾನು ತಿಳಿದೆನು. ಮಾದಣ್ಣನವರಿಗೆ ಈಗ ಮೂರು ಜನ ಹೆಣ್ಣುಮಕ್ಕಳು. ಹಿರಿಯವಳು ಬಾಲವಿಧವೆಯಾಗಿದ್ದಳು. ನಡುವಿನವಳು ಅತಿ ಸುಂದರಿ. ಗಂಡನು ಅವಳನ್ನು ಬಿಟ್ಟಿದ್ದನೊ ಅವಳು ಗಂಡನನ್ನು ಬಿಟ್ಟಿದ್ದಳೊ ಇದುವರೆಗೆ ತಿಳಿದು ಬರಲಿಲ್ಲ. ಹೇಗೂ ಹೆಣ್ಣು ತೌರಮನೆಯಲ್ಲಿಯೇ ಇದ್ದಳು. ಕಿರಿಯವಳು ಮನೆಯಲ್ಲೇ ಇದ್ದರೂ, ಎರಡು ವರ್ಷಗಳಿಗೊಮ್ಮೆ ಗಂಡನ ಮನೆಗೆ ಹೋಗಿ, ಮೂರು ತಿಂಗಳು ಉಳುಕೊಂಡು, ತೊಟ್ಟಿಲ ಮಗುವಿನೊಡನೆ ತೌರುಮನೆಗೆ ಬರುತ್ತಲಿದ್ದಳು. ಇನ್ನೊಬ್ಬಳು ತೀರಿ ಹೋಗಿದ್ದಳು. ಅದು ಕಾರಣದಿಂದ ಮಾದಣ್ಣನವರಿಗೆ ಉಳಿದ ಹೆಣ್ಣುಮಕ್ಕಳ ಮೇಲೆ ಬಹಳ ಪ್ರೇಮ. "ಗೋವಿಂದಾ! ನಿನ್ನ ದಯೆಯಿಂದ ನನಗೇನೂ ಕಡಮೆ ಇಲ್ಲ. ನನಗೆ ಭೂಮಿ ಬೇಡ, ಆಸ್ತಿ ಬೇಡ, ಈ ಹೆಣ್ಣುಮಕ್ಕಳಿಗೆ ದೀರ್ಘಾಯುವನ್ನು ಕೊಡು!" ಎಂದು ವರ್ಷ ವರ್ಷ ರಥೋತ್ಸವಕಾಲದಲ್ಲ ಅವರು ದೇವರೊಡನೆ ಬೇಡುತ್ತಿದ್ದರು. ಈ ಹೆಣ್ಣುಮಕ್ಕಳು ಹುಟ್ಟಿದಂದಿನಿಂದ ಮಾದಣ್ಣನವರ ಕೀರ್ತಿಯು ದಿಗಂತವಾಗಿ ಪಸರಿಸುತ್ತಲಿತ್ತು. ಸರ

ಕಾರದ ದೊಡ್ಡದೊಡ್ಡ ಹುದ್ದೆದಾರರು ಈತನ ಆಜ್ಞೆಗಳನ್ನು ಶಿರಸಾವಹಿಸುತ್ತಿದ್ದರು. ಜಮೀನಿನ ಜವಾಬ್ದಾರಿಯ ಮೇಲೆ ಹಣವನ್ನು ಬಡ್ಡಿಗೆ ಕೊಡದ ಪರಮಲೋಭಿಗಳು ಸಹಾ ಇವನ ಒಂದು ಮಾತಿನ ಮೇಲೆ ಒತ್ತೆ ಕೇಳದೆ, ಇವನಿಗೆ ಧಾರಾಳವಾಗಿ ಸಾಲ ಕೊಡುತ್ತಿದ್ದರು. ಬಿಳೀ ಜನರ ಸಹಾಯವು ಯಾವ ಕಾರ್ಯದಲ್ಲಾದರೂ ದೇಶೀಯರಿಗೆ ಅವಶ್ಯವಿದ್ದರೆ, ಅದನ್ನು ಮಾಡಿಸುವ ಭಾರವು ಇವರ ಹೆಗಲ ಮೇಲೆ ಇತ್ತು.

ಮಾದಣ್ಣನವರನ್ನು ನಾನು ತಲೆಯೆತ್ತಿ ನೋಡಿ,"ರಾಯರೇ! ನೀವು ಬಂದುದು ಚೆನ್ನಾಯಿತು" ಎಂದೆನು.

ಮಾದಣ್ಣನವರು ಸಮೀಪಕ್ಕೆ ಬಂದು "ನಿಮ್ಮ ಚಿಕ್ಕತಂದೆಯವರಿಗೆ ಹೇಗಿದೆ?" ಎಂದು ಕೇಳಿದನು.

ಜಮೇದಾರನು "ಚಿಕ್ಕತಂದೆಯವರೊ? ನೆಟ್ಟಗಿದ್ದಾರೆ" ಎಂದು ಹೇಳಿ ಘೊಗಾಡಿದನು.

ನಾನು ತಲೆಯಲ್ಲಾಡಿಸಿ ಒಳಗಿನ ಅವಸ್ಥೆಯನ್ನು ಹೊರಪಡಿಸಿದೆನು.

ಮಾದಣ್ಣನವರು ತಲೆಯ ಮೇಲೆ ಕಲ್ಲು ಬಿದ್ದಂತಾಗಿ ಸುಮ್ಮನೆ ನಿಂತರು. "ಗೋವಿಂದಾ! ನಮ್ಮ ಹಾಳು ದೆಶೆ. ಏನು ಸ್ವಾಮಿ ಮನುಷ್ಯನ ಅವಸ್ಥೆ? ಎರಡು ದಿನದ ಹಿಂದೆ ನಮ್ಮ ಮನೆಗೆ ಬಂದು ಮಾತನಾಡಿ ಹೋದ ಪುಣ್ಯಾತ್ಮರು ಈ ಹೊತ್ತು ಎಲ್ಲಿಯೊ? ನಿಮ್ಮ ಚಿಕ್ಕತಂದೆಯವರು ಬದುಕಿರಬಹುದೆಂದು ನಾನು ಒಮ್ಮೆ ತಿಳಿದೆನು. ನೀವು ಯಾರೂ ಗೋಳಿಡುವುದನ್ನು ಕೇಳಲಿಲ್ಲ. ಅವರೊಡನೆ ಎರಡು ಮಾತು ಆಡುವುದಕ್ಕೂ ಆಗದೆ ಹೋಯಿತು" ಎಂದು ದುಃಖಿಸಿದರು.

ಮುದ್ದಣ್ಣನು "ಮನಸ್ಸಿದ್ದರೆ ಅವರು ಇದ್ದಲ್ಲಿ ಹೋಗಿ ತಾವು ಮಾತನಾಡ ಬಹುದಲ್ಲವೆ" ಎಂದನು.

ಮಾದಣ್ಣನವರು ವ್ಯಸನಪಟ್ಟರು; ಅಲ್ಲಿ ನಿಲ್ಲಲಾರದಷ್ಟು ವ್ಯಸನ ಪಟ್ಟರು. ಅವರು ದುಃಖದಿಂದ ಮನೆಯ ಕಡೆಗೆ ಹೆಜ್ಜೆಯಿಡುವುದನ್ನು ನೋಡಿ "ರಾಯರೇ! ಶವ ಎತ್ತುವುದಕ್ಕೆ ಜನಗಳಿಲ್ಲ. ತಾವೂ ಹೋಗುವಿರೇ?" ಎಂದೆನು.

ಮಾದಣ್ಣ:—"ನಾನು ಈಗ ಹೋಗದೆ ಉಪಾಯವಿಲ್ಲ; ಅಗತ್ಯವಾದ ಕೆಲಸವಿದೆ. ಇನ್ನೊಂದು ಸಂದರ್ಭದಲ್ಲಿ ನಾನು ಬರುತ್ತೇನೆ. ನನ್ನನ್ನು ಕ್ಷಮಿಸಬೇಕು—ಇನ್ನೊಂದು ಸಲ ನಿಜವಾಗಿ—"

ನಾನು ಅವರ ಕೈ ಹಿಡಿದು "ರಾಯರೇ! ನಿಮ್ಮ ಮನೆಗೆ ನಾವು ಆಗಾಗ ಬರುತ್ತಾ ಇರಬೇಕು ಎಂದು ಮನಸ್ಸಿದ್ದರೆ ತಾವು ಈಗ—" ವಂದು ಅಲ್ಲಿಯೇ ತಡೆದೆನು.

ಈ ಮಾತಿನಿಂದ ಮಾದಣ್ಣನವರು ಸ್ವಲ್ಪ ಬೇನೆಗೊಂಡಂತಾಗಿ ಮರಳಿ ಬಂದರು. ಶವಸಂಸ್ಕಾರಕ್ಕೆ ವಿಳಂಬ ಮಾಡುವುದು ನ್ಯಾಯವಾಗಿರಲಿಲ್ಲ. ಪ್ಲೇಗ್ ಗುಡಿಸಲಿಗೆ ಆಧಾರವಾಗಿದ್ದ ಎರಡು ಬಿದಿರುಗಳನ್ನು ಈಚೆಗೆ ಸೆಳೆದು, ಅವನ್ನು ನಿಚ್ಚಣಿಗೆಯಂತೆ ಕಟ್ಟಿ, ಕದಳೀ ಪತ್ರದ ಬದಲಾಗಿ ಪಾಸ್ ಪೊರ್ಟ್ ಬೂಕುಗಳ ಪತ್ರಗಳನ್ನು ಹಾಸಿ, ಚಿತಿಯನ್ನು ಒದಗಿಸಿದೆವು. ಆ ಮೇಲೆ ನಾವು ಮೂವರು ಇಹಲೋಕದ ಚಿಂತನೆಯನ್ನು ಬಿಟ್ಟು, ನಾರಾಯಣ ಸ್ಮರಣೆಯಿಂದ ಶವವನ್ನು ಹೇಗೊ ಎತ್ತಿಕೊಂಡು, ಹತ್ತಿರದ ಸುಡುಗಾಡಿಗೆ ಹೋದೆವು. ಪುರೋಹಿತರು ಆ ಸ್ಥಾನವನ್ನು ಮೊದಲೇ ಅಲಂಕರಿಸಿದ್ದರು. ಚಿಕ್ಕತಂದೆಯವರ ಅವಶೇಷವನ್ನು ಪುರೋಹಿತರ ಹಸ್ತಕ್ಕೂ ಅಗ್ನಿಯ ಮುಖಕ್ಕೂ ಕೊಟ್ಟು ನಾವು ಈಚೆಗೆ ಸರಿದೆವು.

ನನ್ನ ಚಿಕ್ಕತಂದೆಯವರ ಅಕಾಲಿಕ ಮರಣದ ೩ ತಿಂಗಳ ವರೆಗೆ ನಾನು ಏನೊಂದೂ ತೊಂದರೆಗೊಳ್ಳದೆ ಇದ್ದೆನು. ಮುದ್ದಣ್ಣನು ನಮ್ಮನ್ನು ಬಿಟ್ಟುಹೋಗದೆ ನಮ್ಮೊಡನೆ ಉಳುಕೊಂಡಿದ್ದನು. ಸಕಲಾವತಿಯು ಅಕಸ್ಮಾತ್ತಾಗಿ ಅಸ್ವಸ್ಥದಲ್ಲಿ ಬಿದ್ದಳು. ಅವಳ ಕಾಹಿಲೆಯು ನೂತನ ತರದ್ದಾಗಿತ್ತು. ಅನೇಕರು ಅನೇಕ ಕಾರಣಗಳನ್ನು ಕೊಟ್ಟರು. ಒಬ್ಬರು "ಇದು ಇಷ್ಟರೋಗ(Hysteria); ಮಕ್ಕಳು ಹುಟ್ಟದಿದ್ದರೆ ಇದು ವಿಪರೀತವಾಗಿ ಪರಿಣಮಿಸುತ್ತಿದೆ" ಎಂದರು. ನಾನು ಅವರ ಮಾತನ್ನು ಕೇಳಿ ಹೆದರಿಕೆಯಿಂದ ಒಂದು ವಾರದವರೆಗೆ ಅವಳನ್ನು ಮನೆಯಲ್ಲಿಯೇ ಮುಚ್ಚಿಟ್ಟೆನು; ಪುರುಷರ ಮುಖವನ್ನು ನೋಡಬಿಡಲಿಲ್ಲ. ಕಾಹಿಲೆ ಏನೂ ಕಡಮೆಯಾಗಲಿಲ್ಲ. ಒಬ್ಬಿಬ್ಬರು "ಇದೆಲ್ಲಾ ನಿಮ್ಮ ಚಿಕ್ಕತಂದೆಯವರ ಉಪದ್ರ. ಅವರ ಉತ್ತರಕ್ರಿಯೆಗಳು ಸರಿಯಾಗಿ ನಡೆಯದೆ ಇದ್ದರೆ ಹೀಗಾಗಬಹುದು" ಎಂದು ಹೇಳಿದರು. ಅವರ ಮರಣದ ೪ ನೆಯ ತಿಂಗಳಲ್ಲಿ ಚಿಕ್ಕತಂದೆಯವರ ಉತ್ತರಕ್ರಿಯೆಗಳನ್ನು ನಾನು ಮಾಡತೊಡಗಿದೆನು. ನಾನು ಉತ್ತರಕ್ರಿಯೆಗಳನ್ನು ಪ್ರಾರಂಭಿಸಿರುವೆನೆಂದು ಕೇಳಿ ನನ್ನ ಸ್ನೇಹಿತರಲ್ಲಿ ಕೆಲವರು "ರಾಯರೇ! ನಿಮ್ಮ ಚಿಕ್ಕತಂದೆ ಯಾರ ಮೈಮೇಲೆ ಬರುವರಂತೆ?" ಎಂದು ನನ್ನೊಡನೆ ಕೇಳುತ್ತ ನಗುಮೊಗವನ್ನು ತೋರಿಸುತ್ತಿದ್ದರು. ಮನೆಯಲ್ಲಿ ಕಾಹಿಲೆಯಿಂದ ನಾನು 'ಆಫಿಸಿಗೆ' ಕ್ರಮವಾಗಿ ಹೋಗುವುದು ತಪ್ಪಿತು. ಸಕಲಾವತಿಯ ದೇಹವು ಕ್ಷೀಣವಾಗುತ್ತ ಬಂತು; 'ಆಪಿಸ್' ಕೆಲಸವು ಉಳಿದುಳಿದು ವೃದ್ಧಿಯಾಗುತ್ತ ಹೋಯಿತು. ನಡುವಿನಲ್ಲಿ ಇನ್ನೊಂದು ಉಪದ್ರವವು ಮೊಳೆಯಿತು. ನಾನು ಚಿಕ್ಕತಂದೆಯವರಿಂದ ೫೦೦ ರೂಪಾಯಿ ಸಾಲ ಹೊಂದಿದ್ದೆನೆಂದು ಅವರ ಉಯಿಲಿಂದ ತೋರುವುದೆಂಬದಾಗಿ, ಉಯಿಲಿನ ಹಕ್ಕುದಾರರಾದ ಮಾದಣ್ಣನವರು ನನ್ನ ಮೇಲೆ ದಾವಾ ತಂದರು. ನನಗೆ ಉಗುರುಹುಣ್ಣಾದ ಕಾಲಮೇಲೆ, ಒನಕೆಯ ಪೆಟ್ಟು ಬಿದ್ದಂತಾಯಿತು.

ನಾನು ಯಥಾರ್ಥವಾಗಿ ಚಿಕ್ಕತಂದೆಯವರಿಂದ ಸಾಲ ಎತ್ತಿರಲಿಲ್ಲ. ಅವರು ಉಯಿಲಿನಲ್ಲಿ ಏನೇನು ಗೀಚಿಟ್ಟಿದ್ದರೊ ನನಗೆ ತಿಳಿದಿರಲಿಲ್ಲ. ಬಲಾಢ್ಯರಾದ ಮಾದಣ್ಣನವರು ನನ್ನ ಮೇಲೆ ಏಕೆ ಮುನಿದರೊ ನಾನು ಅರಿಯೆನು. ದಶಂಬರ ೧೧ನೆಯ ತಾರೀಖಿಗೆ ದಾವೆಯು ವಿಚಾರಣೆಗೆ ಇಟ್ಟಿತ್ತು. ಮೊದಲಿನ ಮುನಿಸಿಪರು ಹಳೆಯ ಅಂಗಿ, ಹರಕು ಮುಂಡಾಸು ಇಟ್ಟುಕೊಂಡರೂ, ನ್ಯಾಯಶೀಲರಾಗಿದ್ದರು; ತಾನೇ ಮೂರು ನಾಮಾ ಹಾಕಿದರೂ, ನಮ್ಮಂತಹ ಬಡವರಿಗೆ ನಾಮಾ ಹಾಕುತ್ತಿರಲಿಲ್ಲ. ಹೊಸ ಮುನಿಸಿಪರ ಮರ್ಜಿ ನನಗೆ ಗೊತ್ತಿರಲಿಲ್ಲ. ಅವರು ಇಲ್ಲಿ ಬಂದಕೂಡಲೇ ಮಾದಣ್ಣನವರ ಕ್ಷೇಮಸಮಾಚಾರಗಳನ್ನು ಕೇಳಿದ್ದರಂತೆ; ಮಾದಣ್ಣನವರ ಮನೆಯ ವರೆಗೆ ಯಾತ್ರೆಮಾಡಿ ಬಂದಿದ್ದರೆಂದೂ ಬಾಜಾರಿನಲ್ಲಿ ವರ್ತಮಾನವಿತ್ತು. ಅವರು ಮುಂಡಾಸು ಇಟ್ಟುಕೊಳ್ಳುತ್ತಿರಲಿಲ್ಲ; ಟೊಪ್ಪಿ ಹಾಕುತ್ತಿದ್ದರು. ಇದೆಲ್ಲಾ ನನಗೆ ಸ್ವಲ್ಪ ಅಪಶಕುನವಾಗಿ ಕಂಡು ಬಂತು. ನನಗೆ ಹಾಜರಾಗಲಿಕ್ಕೆ ಕೋರ್ಟಿನ ಕಡೆಯಿಂದ ಅಪ್ಪಣೆ ಬಂದಂತೆ "ಪೂರ್ವಾಹ್ಣ ೧೧ ಘಂಟೆಗೆ ಕಮಲಪುರದ ಮುನಿಸಿಪ್‌ಕೋರ್ಟಿಗೆ" ವಕೀಲರೊಡನೆ ಹೋದೆನು. ಮುನಿಸಿಪರು ಅವರ ಕ್ರಮಕ್ಕೆ ಅನುಸಾರವಾಗಿ ೧೨ಗಂಟೆಗೆ ಬಂದರು. ಬಂದವರು ಒಳಕ್ಕೆ ಹೋಗುತ್ತಲೇ, ಅಲ್ಲಿ ಮೊದಲೇ ಬಂದಿದ್ದ ಮಾದಣ್ಣನವರು ಎದ್ದುನಿಂತು, ಸ್ವಲ್ಪ ನಗುಮೋರೆಯಿಂದ ಸಲಾಂಮಾಡಿದರು. ಮುನಿಸಿಪರು ತಮ್ಮ ಟೊಪ್ಪಿಯನ್ನು ಎತ್ತಿ ತೋರಿಸಿದರು. ನನ್ನ ಎದೆಯಲ್ಲಿ ಚೂರಿ ಹಾಕಿದಂತಾಯಿತು. ಕೊಂಚ ಹೊತ್ತಿನ ಬಳಿಕ ನನ್ನ ಕಡೆಯ ವಕೀಲರು ನನ್ನ ಬಳಿಗೆ ಬಂದು, ಸ್ವಲ್ಪ ನಶ್ಯವನ್ನು ಕೇಳಿ, ಮುನಿಸಿಪರು ಮೂರು ಗಂಟೆಯವರೆಗೆ ನನ್ನನ್ನು ಕರೆಯಿಸಲಾರರು-ಎಂದರು. ನಾನು ಅಲ್ಲಿಯೇ ಕಾದು ಕುಳಿತುಕೊಂಡೆನು. ಪ್ಲೇಗ್ ಹೆಣವನ್ನು ಹೊರುವುದಕ್ಕೆ ಒಬ್ಬನು ಮಾತ್ರವಿದ್ದರೆ, ಆ ಪಾಪಿಯು ಮಿಕ್ಕವರನ್ನು ಕಾದು ನಿಲ್ಲುವಂತೆ, ನಾನು ಕೋರ್ಟಿನ ಹೊರಜಗಲಿಯಲ್ಲಿ ಕಾದುಕುಳಿತೆನು. ಒಡನೆ ನನ್ನ ಕಣ್ಣಿಗೆ ಅಲ್ಲಿಯೇ ಸ್ವಲ್ಪ ಜಂಪು ಹಿಡಿಯಿತು.

ನಾನು ಎಚ್ಚರವಾದಾಗ ಮುನಿಸಿಪರ ಗುಲ್ಲು ಕೇಳಿಸುತ್ತಿತ್ತು. ವಕೀಲರೆಲ್ಲರು ಅಲ್ಲಲ್ಲಿ 'ಕಮಿಟಿಯಾಗಿ' ನಿಂತುಕೊಂಡು ಅಂತರಂಗದಲ್ಲಿ ಮಾತನಾಡುತ್ತಿದ್ದರು. ಕಕ್ಷಿಗಾರರು ಕಿಟಿಕಿಯ ಹಿಂದುಗಡೆಯಿಂದ ಇಣಿಕಿ ನೋಡುತ್ತಿದ್ದರು. ಗುಮಾಸ್ತರೆಲ್ಲರು ಬೆಪ್ಪರಂತೆ ಸುಮ್ಮನಾಗಿದ್ದರು. "ಈ ರಿಕಾರ್ಡನ್ನು ಯಾರು ತೆಗೆದರು?" "ಉಯಿಲ್ ಏನಾಯಿತು?" "ಕೋರ್ಟಿನಲ್ಲಿ ಕಳವು" "ಉಯಿಲ್ ಎಲ್ಲಿ ಹೋಯಿತು?" ಎಂದು ಮೊದಲಾಗಿ ಹೇಳುತ್ತ ಮುನಿಸಿಪರು ಗುಮಾಸ್ತರನ್ನೆಲ್ಲಾ ಗಜರಿ ಗರ್ಜಿಸಿ ವಿಚಾರಿಸುತ್ತಿದ್ದರು. ನನ್ನ ಕಡೆಯ ವಕೀಲರು ನನ್ನ ಬಳಿಗೆ ಬಂದು, ಪುನಃ ನಶ್ಯವನ್ನು ಕೇಳಿ "ರಿಕಾರ್ಡಿನಿಂದ ಉಯಿಲ್ ಮಾಯವಾಗಿದೆ; ನಿಮಗೆ ನಂಬ್ರ ಗುಣವಾಯಿತೆಂದು ತಿಳಿಯಿರಿ" ಎಂದು ಹೇಳಿದರು. 'ಸುಳ್ಳು ಉಯಿಲ್ ಕಳ್ಳರ ಕೈಲಿ.' ನಾನು ಸಂತೋಷದಿಂದ ಸಕಲಾವತಿಗೆ ತಿಳಿಸುವುದಕ್ಕೆ ಮನೆಗೆ ಓಡಿದೆನು. ದೊಡ್ಡಿಯಲ್ಲಿ ಹುಲ್ಲುಕಡ್ಡಿ ಕೊಡದೆ ಕಟ್ಟಿದ್ದ ಕೋಣವು ಬಿಡುಗಡೆ ಹೊಂದುತ್ತಲೇ ಬಾಲಯೆತ್ತಿ ಮನೆಯ ಕಡೆಗೆ ಓಡುವಂತೆ ನಾನು ಓಡಿಹೋದೆನು.

ಮನುಷ್ಯನು ಅಲ್ಪಜ್ಞಾನಿ; ಮುಂದೇನು ಸಂಭವಿಸುವುದು ಎಂಬುದನ್ನು ಅವನ ಸಣ್ಣ ಮನಸ್ಸು ಊಹಿಸಲಾರದು. ನಾಳೆ ಆಗುವುದನ್ನು ಈ ಹೊತ್ತು ಅರಿಯದೆ ಸುಖಾಂತವಿಕ್ಷದಲ್ಲಿ ಹಾರುತ್ತಿರುವನು. ಈಸುವವನು ಮುಳುಗಿ ಸಾಯುವನೆಂದು ಅರಿಯದೆ ನೀರ ಮೇಲೆ ನಲಿಯುವನು; ಹೆಚ್ಚೇಕೆ? ಸಾಕ್ಷಾತ್ ಶ್ರೀರಾಮದೇವರು ಪ್ರಾತಃಕಾಲದಲ್ಲಿ ಯುವರಾಜರಾದರು. ಸಾಯಂಕಾಲದಲ್ಲಿ ವನಚರಿಯಾದರು. ನಾನು ಮಹಾಸಂತೋಷದಿಂದ ದಾವೆಯವರ್ತಮಾನವನ್ನು ಸಕಲಾವತಿಗೂ ಮುದ್ದಣ್ಣಗೂ ಹೇಳುತ್ತಿದ್ದಾಗ 'ಪೊಲೀಸ್ ಇನ್ಸ್‌ಪೆಕ್ಟರನೊಬ್ಬನು' ಮನೆಯ ಜಗಲಿಯ ಮೇಲೆ ಕಾಲಿಟ್ಟನು. 'ಪೊಲೀಸ್ ಇನ್ಸ್‌ಪೆಕ್ಟರನು' ನನ್ನ ನಮಸ್ಕಾರವನ್ನು ಸ್ವೀಕರಿಸಿ "ಅಯ್ಯಾ! ನಿಮ್ಮ ಮನೆಯನ್ನು ಜಪ್ತಿಮಾಡಬೇಕೆಂದು ಈಗ ತಾನೇ ಹುಕುಂ ಆಗಿದೆ. ರಿಕಾರ್ಡಿನಲ್ಲಿದ್ದ ಉಯಿಲನ್ನು ನೀವೇ ತಪ್ಪಿಸಿರಬಹುದೆಂದು ಸಾಕಷ್ಟು ರುಜುವಾತು ಸಿಕ್ಕಿದೆಯಾದ್ದರಿಂದ ನಿಮ್ಮ ಮನೆಯನ್ನು ಜಪ್ತಿಮಾಡುವುದಕ್ಕೆ ಅಪೇಕ್ಷಿಸುವೆನು" ಎಂದನು. ನಾನು ಅವಾಕ್ಕಾಗಿ ಅಲ್ಲಿಯೇ ನಿಂತುಬಿಟ್ಟೆನು. 'ಪೊಲೀಸಿನವರು' ಯಮದೂತರಂತೆ ಮನೆಯನ್ನು ಮುತ್ತಿದ್ದರು. ನಮ್ಮ ಊರಿನ ನಾಲ್ಕು ದೊಡ್ಡ ಮನುಷ್ಯರು ಅಂಗಳದಲ್ಲಿ ಆಸೀನರಾಗಿದ್ದರು. ಇವರ ಇದಿರಿಗೆ ಹೋಗಲು ನನಗೆ ಮೋರೆ ಇರಲಿಲ್ಲ. ಒಂದು ಗಂಟೆಯ ತರುವಾಯ 'ಇನ್ಸ್‌ಪೆಕ್ಟರನು' ಮುದ್ದಣ್ಣನೊಡನೆ ಹೊರಕ್ಕೆ ಬಂದನು. ನನ್ನ ಪ್ರಾಣವು ಕುತ್ತಿಗೆಗೆ ಓಡಿತು. 'ಇನ್ಸ್‌ಪೆಕ್ಟರನು' ಕೈಯಲ್ಲಿದ್ದ ಕಾಗದವನ್ನು ನಾಲ್ಕು ಜನರಿಗೆ ತೋರಿಸಿ "ಈ ಕಾಗದವನ್ನು ಮುದ್ದಣ್ಣನು ಎಲ್ಲಿಯೋ ಅಡಗಿಸಿಡುವ ಹಾಗಿದ್ದನು" ಎಂದನು. ಮುದ್ದಣ್ಣನು ಹೆದರಿಹೆದರಿ "ಇಲ್ಲ ಸ್ವಾಮಿ! ಆ ಕಾಗದವು ಚಿಕ್ಕತಂದೆಯವರು ಮಾಡಿದ ಉಯಿಲು. ಅದನ್ನು ಇದ್ದಲ್ಲಿಯೇ ಇಡಬೇಕೆಂದಿದ್ದೆನು" ಎಂದು ಅಂಗಲಾಚಿ ಹೇಳಿದನು. 'ಇನ್ಸ್‌ಪೆಕ್ಟರನು' ನನ್ನ ಕೈಹಿಡಿದು "ನಿಮ್ಮ ಮನೆಯಲ್ಲಿ ಉಯಿಲು ಸಿಕ್ಕಿತು. ನಿಮ್ಮ ಮೇಲೆ ರುಜುವಾತು ಬಲವಾದುದರಿಂದ ನಿಮ್ಮನ್ನು ಕೈದು ಮಾಡಿರುವೆನು" ಎಂದು ಹೇಳಿದರು. ನನ್ನ ಎದೆಗೆ ಗುಂಡು ಹೊಡೆದಂತಾಯಿತು. ನಡುಕು ನನ್ನ ಮೈಮೀರಿ ಹೋಯಿತು. ನಾನು ನಿರುಪಾಯನಾಗಿ "ಪೊಲೀಸ್

**ಲೊಕಪ್ಪಿನಲ್ಲಿ" ಬೀಳಬೇಕಾಯಿತು.** ನಿರಪರಾಧಿಯಾದ ನಾನು ನಾಲ್ಕನೆಯ ಸಲ 'ಜೈಲಿಗೆ' ಹೋಗಬೇಕಾಯಿತು. ನಾಲ್ಕನೆಯ ಸಲವೂ ನನಗೆ ತಾನಾಗಿ ಬಿಡುಗಡೆಯಾಯಿತು.

ಮರುದಿನ ೧೦ ಗಟಿಯ ಹೊತ್ತಿಗೆ ಪೊಲೀಸ್ ಜಮೇದಾರನು ಬಂದು "ವರ್ಗವಾಗಿ ಹೋದ ಹಳೆಯ ಮುನಿಸಿಪರು ಈ ಉಯಿಲ್ ಪತ್ರವನ್ನು ಕಾರಣಾಂತರದಿಂದ ಭದ್ರವಾದ ಪೆಟ್ಟಿಗೆಯಲ್ಲಿ ಇಟ್ಟಿರುವರೆಂದು ಈ ಹೊತ್ತು ತಾನೆ ತಂತೀಮೂಲಕ ವರ್ತಮಾನ ಬಂದಿರುವುದರಿಂದ, ನಿಮ್ಮನ್ನು ಬಿಡುಗಡೆ ಮಾಡಬೇಕು ಎಂದು ಹುಕುಂ ಬಂದಿದೆ" ಎಂದು ಹೇಳಿ ನನ್ನನ್ನು ಬೆನ್ನು ತಟ್ಟಿ ನಗಾಡುತ್ತ ಮನೆಗೆ ಕಳುಹಿಸಿದನು. ೧೫ ದಿನಗಳನಂತರ ನಂಬ್ರವು ಪುನಃ ವಿಚಾರಣೆಯಾಯಿತು. ಎರಡು ಉಯಿಲಿನ ಕಾಗದಗಳೂ ಮುನಿಸಿಪರ ಕೈಯಲ್ಲಿದ್ದುವು. ಒಂದು ಮತ್ತೊಂದರ ಪ್ರತಿಯಾಗಿತ್ತು. ಎರಡರಲ್ಲಿಯೂ ತನ್ನ "ಸ್ಥಿರಚರ ಸೊತ್ತು ಸರ್ವಾಧಿಯನ್ನು **ಬಸವನ ಗುಡಿ ಮುದ್ದಣಗೆ** ಎಂದು ಚಿಕ್ಕತಂದೆಯವರು ಬರೆದಿದ್ದರು. ನಮ್ಮ ಚಿಕ್ಕತಂದೆಯವರ ಹಸ್ತಾಕ್ಷರವು ಗ್ರಂಥಲಿಪಿಯಾದುದರಿಂದ, ಮಾದಣ್ಣಗೊ ಮುದ್ದಣ್ಣಗೊ ಎಂಬ ವಿವಾದಕ್ಕೆ ಆಸ್ಪದವಾಯಿತು. ಇಬ್ಬರ ತಂದೆಯ ಹೆಸರನ್ನೂ ಉಯಿಲಿನಲ್ಲಿ ಹೇಳಿರಲಿಲ್ಲ. ಇಬ್ಬರಿಗೂ ಬಸವನಗುಡಿ ಎಂಬ ಕುಲ ನಾಮವಿತ್ತು. ಇದೂ ಅಲ್ಲದೆ ಅದರಲ್ಲಿ ಅಕ್ಷರಪರಿಶೋಧನೆಯ ಒಗಟುಗಳು ಹಲವಿದ್ದುವು. ಕೆಲವರು ಒಂದು ಎಡೆಯಲ್ಲಿ **ಚಿನ್ನಮಾರಿದ್ದು** ಎಂದು ಓದಿದರು; ಕೆಲವರು ಅದನ್ನೇ **ಜನ್ನ ಮಾಡಿದ್ದು** ಎಂದು ಅರ್ಥಿಸಿದರು. ದ್ವಯಾರ್ಥವ ಪದಗಳೂ ಕೆಲವಿದ್ದುವು. **ಮನೆಕೊಟ್ಟದ್ದು** ಎಂದೂ **ಮನೆಕೊಟ್ಟಿದ್ದು** (ಕೊಟ್ಟ ರೋಗ) ಎಂದೂ ಬೇಕುಬೇಕಾದ ಹಾಗೆ ವ್ಯಾಖ್ಯಾನವನ್ನು ಮಾಡಿದರು. ಇದನ್ನೆಲ್ಲಾ ಪರಿಶೋಧಿಸುವುದಕ್ಕೆ ಮದ್ರಾಸಿನ 'ಸ್ಲೊಲ್ಲೊ ಪೇ' ಎಂಬ ಸಾಹೇಬರ ಬಳಿಗೆ ಕಳುಹಿಸಿದರು. ಇವರು ಈ ಶಬ್ದಗಳಿಗೆ ಅರ್ಥವ್ಯಕ್ತಿವನ್ನು ಕೊಟ್ಟು ಕಳುಹಿಸಿದರು. ಇವರ ಹೇಳಿಕೆಯ ಪ್ರಕಾರ ಉಯಿಲಿನಲ್ಲಿ **ಮುದ್ದಣ್ಣ, ಜನ್ನ ಮದ್ದಿದ್ದು, ಮನೆ ಕಾಟಿದ್ದು** ಎಂದು ನಿಷ್ಕರ್ಷೆಯಾಯಿತು. ಈ ವ್ಯಾಖ್ಯಾನದ ಪ್ರಕಾರ ಹಣವೆಲ್ಲಾ ಸರಕಾರಕ್ಕೆ ಹೋಯಿತು. 'ಸ್ಲೊಲ್ಲೊ ಪೇ' ಸಾಹೇಬರು ಈ ಉಯಿಲಿನ ಲಿಪಿಯ ಆಧಾರದಿಂದ "ಡ್ರೆವಿಡಿಯನ್ ಪೆಲಿಯೊಗ್ರೆಫಿ" ಎಂಬ ಪುಸ್ತಕವನ್ನು ಬರೆದು ಮಹಾವಿದ್ವಾಂಸರೆನ್ನಿಸಿಕೊಂಡರು. ಚಿಕ್ಕತಂದೆಯವರ ಉಯಿಲಿಂದ ಕೋರ್ಟ್ ಗುಮಾಸ್ತನಿಗೆ ಒಂದು ದಿನದ ಮಟ್ಟಿಗಾದರೂ 'ಸಸ್ಪೆಂಡ್' ಆಯಿತು; ಮಾದಣ್ಣನವರಿಗೆ ಒಂದು ಹೊತ್ತಿನ ಮಟ್ಟಿಗಾದರೂ ಸಂಕಷ್ಟವಾಯಿತು; ನನಗೆ ಒಂದು ರಾತ್ರಿ ಮಟ್ಟಿಗಾದರೂ ಸೆರೆಯು ಪ್ರಾಪ್ತವಾಯಿತು.

---

# ನನ್ನ ಹೆಂಡತಿ

ನನ್ನ ಚಿಕ್ಕತಾಯಿ ಜೈಲಿನ ಬಾಯಿಗೆ ಬೀಳಲಿಕ್ಕಾದ ನನ್ನನ್ನು ಹೇಗೂ ಬಿಡುಗಡೆ ಮಾಡಿದಳು. ನಾನು ಮಾಡಿದ ತಪ್ಪಿಗೆ ನಾನೇ ಬಹಳ ನಾಚಿಕೆಪಟ್ಟು, ಅವಳ ಮೋರೆ ನೋಡುತ್ತಿರಲಿಲ್ಲ. ಅವಳೂ ನನ್ನ ಮೋರೆಯನ್ನು ಚಿರಕಾಲ ನೋಡಲಿಲ್ಲ. ಒಂದು ವರ್ಷದ ಮೇಲೆ ಅವಳು ತನ್ನ ಮುತ್ತೈದೆತನದ ಮೋರೆಯನ್ನು ಈ ಲೋಕದಿಂದ ತಿರುಗಿಸಿಬಿಟ್ಟಳು. ಹೋಗುವಾಗ ತನ್ನ ಒಡವೆಗಂಟನ್ನೂ ಮನೆಯನ್ನೂ ತನ್ನೊಡನೆ ಕೊಂಡುಹೋಗಲಿಕ್ಕೆ ಮರೆತುಬಿಟ್ಟಳೆಂದು ತೋರುತ್ತಿದೆ. ಮದುವೆ ಯಾಗಲು ಸಂಭವವಿಲ್ಲದ ನನಗೆ ಅಂದಿನಿಂದ ಹೆಣ್ಣು ಕೊಡಲು ಕೆಲವರು ಮೊಪಲುಮಾಡಿದರು. ಒಬ್ಬಿಬ್ಬರು ನನ್ನನ್ನೇ ಅಳಿಯನಾಗಿ ಮಾಡಿಕೊಳ್ಳಬೇಕೆಂದಿದ್ದರು; ಹಲವರು ನನ್ನ ಪಾಲಿಗೆ ಬಂದ ಚಿನ್ನದ ಗಂಟನ್ನು ಅಳಿಯನಾಗಿ ಮಾಡಿಕೊಳ್ಳಬೇಕೆಂದಿದ್ದರು. ಇದನ್ನೆಲ್ಲಾ ಯೋಚಿಸಿ, ಹೊಸಪೇಟೆ ರಾಜಣ್ಣನವರು ಸ . . . . ತಿ, (ಮದುವೆಯಾದುದರಿಂದ ಹೆಂಡತಿಯ ಹೆಸರನ್ನು ಬಹಿರಂಗವಾಗಿ ಹೇಳಲಿಕ್ಕೆ ಸ್ವಲ್ಪ ಶಂಕೆ.) ಎಂಬ ತನ್ನ ಮಗಳನ್ನು ನನಗೆ ಕೊಟ್ಟು ಮದುವೆ ಮಾಡಿದರು. ಮದುವೆಯಾದ ಎರಡು ವರ್ಷಗಳ ವರೆಗೆ, ನನ್ನ ಹೆಂಡತಿಯನ್ನು ನಾನು ಪ್ರೀತಿಸುತ್ತಿರಲಿಲ್ಲ. ಈ ರೀತಿಯ ವೈಮನಸ್ಸಾಗಲಿಕ್ಕೆ ಅನೇಕ ಕಾರಣಗಳಿದ್ದುವು. ಪತ್ನೀಪರಿತ್ಯಾಗವು ನಮಗೆ ಕುಲಪರಂಪರೆಯಾದ ಧರ್ಮವು. ನಮ್ಮ ತಂದೆಯು ನಾನು ಹುಟ್ಟಿದ ಬಳಿಕ ಸಂಸಾರಜ್ಞಾನೋದಯವುಳ್ಳವರಾಗಿ, ನನ್ನ ತಾಯಿಯನ್ನು ಬಿಟ್ಟುಬಿಟ್ಟು, ಸಂತಧರ್ಮವನ್ನು ಅವಲಂಬಿಸಿದರು. ನಮ್ಮ ಚಿಕ್ಕತಂದೆಯು ಪ್ರಾಯಭರಿತರಾದುದರಿಂದ, ಪರದೇಶಗಳಲ್ಲಿ ಸುಖವೇ ಹೆಚ್ಚೆಂದು ತಿಳಿದುಕೊಂಡು, ನನ್ನ ಚಿಕ್ಕತಾಯಿಯನ್ನು ಬಿಟ್ಟು ಓಡಿಹೋದರು. ನನಗಾದರೊ, ನನ್ನ ಮಾವನು ಚಿನ್ನದ ಉಡಿದಾರವನ್ನೂ ವಜ್ರದ ಉಂಗುರವನ್ನೂ ಕೊಟ್ಟಿರಲಿಲ್ಲ. ಇಂತಹ ಪ್ರೀತಿಬಂಧಕಗಳು ಇಲ್ಲದೆ, ಹೆಂಡತಿಯನ್ನು ಪ್ರೀತಿಸುವ ಬಗೆ ಹೇಗೆ? ವಾಚಕರೇ ಹೇಳಿರಿ! ನಿಮ್ಮ ಪತ್ನಿಯರ ತವರುಮನೆಯಿಂದ್ಲ ನಿಮಗೆ ಉಂಗುರ ಉಡಿದಾರ ಬರುವ ಸಂಭವವಿದ್ದರೆ, ನಿಮ್ಮ ಪ್ರೀತಿ ಇನ್ನೂ ಅಧಿಕವಾಗಲಾರದೆ? ನಾನು ನನ್ನ ಹೆಂಡತಿಯನ್ನು ಅಲಕ್ಷಿಸಲಿಕ್ಕೆ ಮೂರನೆಯ ಕಾರಣವು ಅವಳ ರೂಪಲಾವಣ್ಯವಾಗಿತ್ತು. ಹುಡುಗಿಯು ಎರಡು ವರ್ಷಗಳ ವರೆಗೆ ನೋಡಲಿಕ್ಕೆ ಅಷ್ಟೊಂದು ರುಚಿಯಾಗಿರಲಿಲ್ಲ. ಅವಳ ಕಣ್ಣು, ಮೂಗು, ಹಣೆ ಆಕರ್ಷಿಸುವಷ್ಟು ಸುಂದರವಾಗದೆ ಇದ್ದರೂ, ಹುಬ್ಬುಗಳು ಮಾತ್ರ ಎಲ್ಲರ ಕಣ್ಣುಗಳನ್ನೂ ಎಳೆಯುತ್ತಿದ್ದುವು. ಈ ಹುಬ್ಬುಗಳು ಕಣ್ಣಿನ ಮೇಲ್ಗಡೆಯಲ್ಲಿಟ್ಟ ಸಣ್ಣ ಮೀಸೆಗಳಂತಿದ್ದುವು. ಇದರಿಂದ ಸಂಪೂರ್ಣ ರೂಪಕ್ಕೆ ಒಂದು ಬಗೆಯ ಆಕಾರವೋ ವಿಕಾರವೋ ಉಂಟಾಗುತ್ತಿತ್ತು. ಈ ವಿಚಿತ್ರ ಭ್ರೂಯುಗ್ಮವು ಅವಳನ್ನು ಮತ್ತೊಂದು ಅಪಾಯಕ್ಕೆ ಗುರಿಮಾಡಿತು. ಕೆಲವು ಗೃಹಸ್ಥರು ಅವಳನ್ನು ಹುಬ್ಬಿನ ಹುಡುಗಿ ಎಂದೂ, ಅಯ್ಯಗಳರ ಮಗಳೆಂದೂ, ನಾನು ಕೇಳುವ ಹಾಗೆ ಕರೆಯುತ್ತಿದ್ದರು. ಒಬ್ಬಿಬ್ಬರು ಇದಕ್ಕೆ ಬದಲಾಗಿ ಇತಿಹಾಸದ ಹೆಸರಿನಿಂದ ಅವಳನ್ನು ಸಂಬೋಧಿಸುತ್ತಿದ್ದರು. 'ಆಟದ ಸೀತೆ' 'ಆಟದ ಸೀತೆ' ಎಂದು ಪುನಃ ಪುನಃ ಈ ಪುಣ್ಯಾತ್ಮರು ಹೇಳಿರುವುದು ನನ್ನ ಕಿವಿಗೆ ಬಿದ್ದಿದೆ. ಇದರ ಕಾರಣವನ್ನು ತಿಳಿದುಕೊಳ್ಳುವಷ್ಟು ಶ್ರಮವನ್ನು ನಾನು ತೆಗೆದುಕೊಳ್ಳಬೇಕಾಗಲಿಲ್ಲ.

ಮೇಲೆ ಹೇಳಿದ ಕಾರಣಗಳಿಂದ ಅವಳನ್ನು ಎಲ್ಲಿ ನೋಡಿದರೂ ನಾನು ಅಲಕ್ಷಿಸುತ್ತಿದ್ದೆನು. ಅವಳು ಮಾತ್ರ ನನ್ನನ್ನು ನೋಡಿ ಹುಬ್ಬುಗಂಟುಕೂಡ ಹಾಕುತ್ತಿರಲಿಲ್ಲ; ಅಥವಾ ಹಾಕಿಕೊಂಡರೂ ಆ ಹುಬ್ಬುಗಂಟು ನನಗೆ ಚೆನ್ನಾಗಿ ತೋರುತ್ತಿರಲಿಲ್ಲ. ಈ ರೀತಿಯಲ್ಲಿ ಎರಡು ವರ್ಷಗಳು—ಪ್ರಣಯರಹಿತವಾದ 720 ದಿವಸಗಳು—ಕಳೆದುವು. ಆದರೂ ನಾನು ಸ್ಥಿರಚಿತ್ತನಾಗಿಯೇ ಇದ್ದು, ಬಂದ ಸಂಕಷ್ಟಗಳನ್ನೆಲ್ಲಾ ತಾಳಿಕೊಂಡೆನು. ಕಾಲವು ಇದ್ದಂತೆ ಇರುವುದಿಲ್ಲ. ಕಾಲಚಕ್ರವು ತಿರುಗುತ್ತಿರುವಾಗ ಅದರೊಂದಿಗೆ ಮನುಷ್ಯನ ಚರ್ಯೆಚೇಷ್ಟೆಗಳೂ, ಬುದ್ಧಿಜ್ಞಾನವೂ, ರೂಪಲಾವಣ್ಯವೂ ಬದಲಾಗುತ್ತ ಬರುವುವು. ಬಾಲ್ಯದಲ್ಲಿ ಕಳವುಮಾಡಿ ದಿವಸ ಕಳೆಯುವ ಹುಡುಗನು ಯೌವನದಲ್ಲಿ ಪೋಲಿಸ್ ಇಲಾಖೆಯ ಇನ್ಸ್ಪೆಕ್ಟರ್‌ನಾಗುತ್ತಾನೆ; ಆನೆಯ ಮರಿಯೆಂದು ಲಾಯದಲ್ಲಿ ಸಾಕಿದ ಮೃಗವು ಕಾಲಾನುಕಾಲದಲ್ಲಿ ಕತ್ತೆಯ ಮರಿಯಾಗಿ ಹೋಗುವುದುಂಟು; ಕಾಗೆಯ ಗೂಡಿನಲ್ಲಿ ಬೆಳೆದ ಹಕ್ಕಿಯು ಗರಿಗಳು ಬರುತ್ತಲೆ, ಕೋಗಿಲೆಯಾಗಿ ಹಾರಿಹೋಗುವುದು. ಹೀಗಿರುವಾಗ ನನ್ನ ಹೆಂಡತಿ, ಸ್ವಲ್ಪ ಕಾಲದ ಮೇಲೆ ನನಗೆ ಅತ್ಯಂತ ರೂಪವತಿಯೆಂದು ತೋರಿದುದರಲ್ಲಾಗಲಿ ನಾನು ಅವಳನ್ನು ಪ್ರೀತಿಸಿದುದರಲ್ಲಾಗಲಿ ನನ್ನ ದೋಷವೇನೂ ಇಲ್ಲ. ಮುಖವು ದಿನೇದಿನೇ ಪ್ರಫುಲ್ಲವಾಗುತ್ತ ಯೌವನಸಂಚಾರ ಸೂಚಕವಾಗುತ್ತಲೇ, ನನ್ನ ಹೃದಯದಲ್ಲಿ ಇಲ್ಲದ ಪ್ರೀತಿಯು ನನಗೆ ತಿಳಿಯದಂತೆ ಅಂಕುರಿಸಿತು. ಚಕ್ಷುಗಳನ್ನು ಕತ್ತಲಿಸುತ್ತಿದ್ದ ಭ್ರೂಯುಗ್ಮವು ಲಲಾಟಪ್ರದೇಶವು ಅಗಲವಾಗಿ ತೋರಿದುದರಿಂದ, ಚಿತ್ರದ ಕಡ್ಡಿಯಿಂದ ತಿದ್ದಿದಂತಾಯಿತು. ಮಾರ್ದ

ವವೂ ಕೋಮಲತೆಯೂ ದೇಹದಲ್ಲಿ ಹಿಡಿಯಲಾರದಷ್ಟು ಉಕ್ಕಿ ಉಕ್ಕಿ ಬರುತ್ತಿರಲು, ನನ್ನ ಮನಸ್ಸಿನ ಲವಲವಿಕೆಯು ಉನ್ನತವಾಗುತ್ತ ಬಂದು, ನನ್ನನ್ನು ಒಂದು ಪ್ರಕಾರವಾಗಿ ಹುಚ್ಚುಗೊಳಿಸಿತು. ಅವಳನ್ನುನೋಡಿದರೆ, ಹುಬ್ಬಿನ ಹುಡುಗಿ ಎಂದಾಗಲೀ ಗಂಡುಹುಡುಗಿ ಎಂದಾಗಲೀ ಯಾರೂ ಸದ್ವಿಚಾರಮಾಡುವಷ್ಟು ಅವಕಾಶವಿರಲಿಲ್ಲ.

ಪತ್ನಿಯು ಪಾರಮಾರ್ಥಿಕ ವಸ್ತುವೆಂದು ಕೆಲವು ಗ್ರಂಥಕಾರರು ಹೇಳುವರು. ನನ್ನ ಹೆಂಡತಿಯು ಈ ತರಗತಿಗೆ ಬರುವಳೊ ಇಲ್ಲವೊ ನನಗೆ ಹೇಳಲು ಸಾಮರ್ಥ್ಯವಿಲ್ಲ. "ಅಪುತ್ರಸ್ಯ ಲೋಕೋ ನಾಸ್ತಿ" ಎಂಬ ಮಾತು ಸುಳ್ಳಾದರೆ, ನನ್ನ ಹೆಂಡತಿಯು ಪಾರಮಾರ್ಥಿಕ ಸಂಬಂಧದವಳೆಂದು ಹೇಳಬಲ್ಲೆನು. ನನ್ನ ಹೆಂಡತಿಯು ಹೇಗಿದ್ದರೂ, ನನ್ನ ಪ್ರೀತಿಯು (ನಾವು ಈ ಲೋಕದಲ್ಲಿಯೇ ಇದ್ದುದರಿಂದ) ಇಹ ಲೋಕಸಂಬಂಧವಾದುದಾಗಿತ್ತು. ಆದರೆ ಆ ಪ್ರಣಯವೇ ನನ್ನನ್ನು ಈ ಅನರ್ಥಕ್ಕೆ ತಂದಿಳಿಸಿತು; ಆ ಪ್ರೀತಿಯೇ ನನ್ನನ್ನು ಪುನಃ ಜೈಲಿನಲ್ಲಿ ಮಲಗಿಸಿತು; ಆ ಸುಖಸಂಭಾಷಣೆಯೇ ನನ್ನ ಸರ್ವ ಸುಖಕ್ಕೂ ನಾಶಕಾರಕವಾಯಿತು.

ಯಥಾರ್ಥ ಪ್ರಣಯವು ಮನುಷ್ಯನನ್ನು ದುಃಖಕ್ಕೆ ಹೇಗೆ ಗುರಿಮಾಡಬಹುದು ಎಂದು ಪಾಠಕಮಹಾಶಯರಲ್ಲಿ ಕೆಲವರು ಆಕ್ಷೇಪಿಸುವರು. ನಮ್ಮ ಪ್ರಣಯವು ಪ್ರಾಚೀನ ಮಾರ್ಗವನ್ನಾಗಲೀ ನವೀನಮಾರ್ಗವನ್ನಾಗಲೀ ಅನುಸರಿಸಿಕೊಂಡು ಹೋಗಿರಲಿಲ್ಲ. ಅದು ಇವೆರಡರ ಮಧ್ಯಸ್ಥವಾಗಿ ಹರಿದು ಹೋಗುತ್ತಿತ್ತು. ನಾನು ಎಲ್ಲರ ಇದಿರಿನಲ್ಲಿ ಅವಳ ಹೆಸರನ್ನೆತ್ತಿ ಸಕಲಾವತಿ! ಸಕಲಾವತಿ! ಎಂದು ಕರೆಯುತ್ತಿರಲಿಲ್ಲ. ಆದರೆ ನಾವಿಬ್ಬರೂ ಏಕಾಂತದಲ್ಲಿದ್ದಾಗ, "ನನ್ನ ಜೀವನ ಸರ್ವಸ್ವವೇ . . . . . ." ಎಂದು ಏನೋ ಏನೋ ಭ್ರಮೆಯಿಂದ ಹೇಳುತ್ತಿದ್ದೆನು. ಇದರಂತೆಯೇ ನಮ್ಮ ಕಾರ್ಯಕೆಲಸಗಳು ಅಷ್ಟೊಂದು ವಿಪರೀತಕ್ಕೆ ಹೋಗಿರಲಿಲ್ಲ. ನಾನು 'ಚಾ' ಕುಡಿಯುವಾಗ, ನನ್ನ 'ಕಪ್'ನ್ನು ತುಟಿಯ ಬಳಿಗೆ ಅವಳು ಹಿಡಿಯಲೇ ಬೇಕೆಂಬ ನಿರ್ಬಂಧವಿರಲಿಲ್ಲ. ನಾನು 'ಚುಟ್ಟಾ' ಸೇದುವಾಗ, ಅವಳೇ ಅದಕ್ಕೆ ಬೆಂಕಿ ಹಚ್ಚಬೇಕೆಂಬ ಬಲಾತ್ಕಾರವಿರಲಿಲ್ಲ. ನಾನು 'ಆಫೀಸಿಗೆ' ಹೊರಡುವಾಗ, ಅವಳು ಇದಿರಾಗಿ ಬಂದು, ನನ್ನ ತಲೆಯನ್ನು ಹಿಡಿದುಕೊಂಡು ಬೊಟ್ಟನ್ನಿಡಬೇಕೆಂಬ ನನ್ನ ಕಾನೂನು ಇರಲಿಲ್ಲ. ಇವೆಲ್ಲವನ್ನುಆಚರಣೆಗೆ ತರುವಷ್ಟು ಧೈರ್ಯ ನನಗೆ ಇರಲಿಲ್ಲ. ಆದರೂ ದಾಂಪತ್ಯಸುಖವು ಎಷ್ಟು ಮಧುರವಾಗಿರಬಹುದೋ ಅಷ್ಟು ಸುಖವು ನಮ್ಮಿಬ್ಬರ ಸಂಸಾರದಲ್ಲಿತ್ತು. ಅಷ್ಟೇಕೆ? ನನಗೆ ಬೇರೆ ಕೆಲಸವಿಲ್ಲದಿದ್ದರೆ ಹೆಂಡತಿಯೊಡನೆ ಸರಸ ಸಂಭಾಷಣೆಯನ್ನಾಡುತ್ತ ಕಾಲಕಳೆಯುವುದೇ ಪುಣ್ಯಸಾಧನೆಯೆಂದು ಭಾವಿಸುತ್ತಿದ್ದೆನು.

ಎರಡು ತಿಂಗಳುಗಳಿಂದೀಚೆಗೆ ಕಳ್ಳರ ಕಾಟವು ನಮ್ಮ ಕೇರಿಯಲ್ಲಿ ಕೇಳಿಸುತ್ತಿತ್ತು. ಕಳವು ಗೊತ್ತುಹಚ್ಚದಿದ್ದರೂ ಒಬ್ಬಿಬ್ಬರು ಪೋಲೀಸಿನವರು ಜೈಲಿಗೆ ಹೋದರು. ನನ್ನ ಹೆಂಡತಿಯು ನನ್ನ ಚಿಕ್ಕತಾಯಿಯ ಒಡವೆಗಂಟಿನ ವಿಷಯವಾಗಿ ಬಹಳ ಎಚ್ಚರಿಕೆಯುಳ್ಳವಳಾಗಿದ್ದಳು. ಮನೆಯನ್ನು ಬಿಟ್ಟು ಎಲ್ಲಿಯೂ ಹೋಗುತ್ತಿದ್ದಿಲ್ಲ. ಮನೆಯ ಸುತ್ತಲು ಸದ್ದಾದರೆ, ತನ್ನ ಎಚ್ಚರಿಕೆಯನ್ನು ನನಗೆ ತೋರಿಸುವಂತೆ ಅತ್ತಿತ್ತ ನೋಡುತ್ತಿದ್ದಳು. ಅವಳಿಗೆ ನಿದ್ದೆ ಹತ್ತಿದಾಗ ಅವಳು ಎಷ್ಟು ಜಾಗರೂಕಳಾಗಿರುವಳೋ ಎಂಬುದು ನನಗೆ ಚೆನ್ನಾಗಿ ಗೊತ್ತಿತ್ತು. ಆದರೂ ಹೆಂಗಸರಲ್ಲಿ ತಾನೇ ಜಾಗರೂಕಳೆಂದೂ, ಗಂಡಸರಲ್ಲಿ ನಾನೇ ಕುಂಭಕರ್ಣನೆಂದೂ, ನನ್ನೊಡನೆ ಒಂದು ಪ್ರಕಾರವಾದ ಅಹಂಕಾರದಿಂದ ಮಾತನಾಡುವಳು. ಕೆಲವು ಸಂಗತಿಗಳಲ್ಲಿಹೆಂಗಸರು ನುಡಿಯುವ ಮಾತು ನಮಗೆ ವಿರುದ್ಧವಾದರೂ, ಅದನ್ನು ನಾವು ನಗಾಡುತ್ತಲೇ ಒಪ್ಪಬೇಕಾಗುತ್ತಿದೆ; ಅಥವಾ ಅವರ ತಪ್ಪುಗ್ರಹಿಕೆಯನ್ನು ನಮ್ಮ ಕೃತ್ಯಗಳಿಂದ ತೋರಿಸಬೇಕಲ್ಲದೆ ಬೇರೆ ಉಪಾಯವಿಲ್ಲ. ಅವರೊಡನೆ ಪ್ರತ್ಯುತ್ತರ ಕೊಡುವುದು ತರ್ಕವಿತರ್ಕಗಳಿಗೆ ಮಾರ್ಗವಾಗುವುದು; ಅವರನ್ನು ಸಮಾಧಾನಗೊಳಿಸುವುದು ಒರಟುತನವಾಗುವುದು. ಒಂದು ದಿನ ರಾತ್ರಿ ಊಟವಾದನಂತರ ನಾನು "ನಮ್ಮ ಒಡವೆಗಂಟನ್ನು ಕೋಣೆಯ ಪೆಟ್ಟಿಗೆಯಲ್ಲಿಡುವುದಕ್ಕೆ ಬದಲಾಗಿ, ನಾವು ಮಲಗುವ ಚಿಕ್ಕಮನೆಗೆ ತಂದಿಟ್ಟುಕೊಂಡರೆ ಒಳ್ಳೆಯದಲ್ಲವೆ? ಈ ಕಳ್ಳರು ಮನೆಯ ಹತ್ತಿರ ಹತ್ತಿರವಾಗಿ ಬರುತ್ತಾರೆ" ಎಂದು ಹೇಳಿದೆನು.

"ಇದ್ದ ಕಡೆಯಿಂದ ಅದನ್ನು ತೆಗೆಯುವುದು ಬೇಡ; ನನ್ನನ್ನು ಎಚ್ಚರಿಸದೆ ಕಳ್ಳರು ಹೇಗೆ ನುಗ್ಗಬಹುದು" ಎಂದು ಅವಳು ಉತ್ತರ ಕೊಟ್ಟಳು.

"ಕಳ್ಳರು ಎಷ್ಟು ಬುದ್ಧಿವಂತರೆಂದು ನೀನರಿಯೆ. ಅತ್ತೆಗೆ ತಿಳಿಯದೆ ಕಳ್ಳತನ ಮಾಡುವ ಸೊಸೆಯರಿಗಿಂತ ಜಾಣರು. ನಿನಗೆ ಸಲಭ ನಿದ್ರೆಯಾದರೂ ಹೆಣ್ಣು ಹೆಂಗಸರನ್ನು ಮೋಸಗೊಳಿಸುವುದು ಒಂದು ವಿಷಯವಲ್ಲ."

"ನನ್ನನ್ನು ಮೋಸಗೊಳಿಸುವರೇ? ನಿನ್ನೆ ನೆರೆಯ ಮನೆಯಲ್ಲಿ ಕಳ್ಳರು ನುಗ್ಗಿದ್ದಾಗ, ಅದನ್ನು ಮೊದಲು ತಿಳಿದು ಎಚ್ಚರಿಸಿದುದು ನಾನಲ್ಲವೇ? ನನ್ನ ಮನೆಯಲ್ಲಿ ಕನ್ನವಿಕ್ಕಿದರೆ, ನಾನು ಗಾಢನಿದ್ರೆಯಲ್ಲಿಯೂ ತಿಳಿಯದೆ ಇರುವೆನೇ?"

"ಅದಕ್ಕೆ ಕಾರಣವಿತ್ತು. ನಿನ್ನೆ ನಿನಗೆ ಹೊಟ್ಟೆನೋವು ಬಲವಾದುದರಿಂದ ನೀನು ನಿದ್ದೆಹೋಗದೆ ಎಚ್ಚರವಾಗಿದ್ದೆ. ಆದರೂ ನೀನು ಎಷ್ಟೋಸಲ ನಿದ್ದೆಹೋದುದು ನನ್ನ ಅನುಭವದಲ್ಲಿ ಇದೆ."

"ನನ್ನ ಎಚ್ಚರವನ್ನು ಕುರಿತು ಮಾತೇ? ಮನೆಯಲ್ಲಿ ಒಂದು ಇಲಿಯು ಬಟ್ಟೆಯನ್ನು ಕಡಿಯುತ್ತಿದ್ದರೂ ನಾನು ಎಚ್ಚರವಾಗುವೆನು. ಅಷ್ಟೇಕೆ ಇರುವೆ ಹರಿದುಹೋದರೆ ಆ ಶಬ್ದವು ನನಗೆ ಗುಡುಗಿನಂತೆ ಕೇಳಿಸುವುದು."

"ಇರುವೆ ಮುಂದೆ ಹೋಗದವರಿಗೆ ಆನೆ ಹಿಂದುಗಡೆ ಯಿಂದ ಹೋಗಬಹುದು. ನಿನ್ನೊಡನೆ ಮುದ್ದು ತರ್ಕಗಳನ್ನು ಮಾತನಾಡಲಿಕ್ಕೆ ನನಗೆ ಸಮಯವಿಲ್ಲ. ಎಂಟು ಗಂಟೆಯಾಗಿ ಹೋಯಿತು: ನನ್ನ ಮಿತ್ರರೆಲ್ಲರು ನನ್ನನ್ನು ಒಂದು "ಪಾರ್ಟಿ" ಗೋಸ್ಕರ ಕಾದಿರುವರು. ನಾಲ್ಕು ಗಂಟೆಯೊಳಗೆ ಹಿಂತಿರುಗಿ ಬರುವೆನು, ಮನೆಯ ಹತ್ತಿರ ಜೋಕೆಯಿಂದ ಇರು."

ಈ ಮಾತಿಗೆ ಉತ್ತರವಾಗಿ ನನ್ನ ಹೆಂಡತಿಯು ಏನೋ ಕೋಪದಿಂದ ಮಾತನಾಡಿದಳು. ಅದು ನನ್ನ ಮಾತುಗಳ ಮೇಲೆ ಕೋಪವಾಗಿರಲಿಲ್ಲ. ಕೋಪವು ನನ್ನ ಗಮನದ ವಿಷಯವಾಗಿತ್ತು. ನನ್ನ "ಪಾರ್ಟಿಯ" ಉತ್ಸಾಹದ ಪ್ರವಾಹದಲ್ಲಿ ಅವಳ ಕೋಪದ ಮಾತುಗಳು ನನ್ನ ಮೇಲೆ ತೇಲಿಹೋದುವು.

ಆ ರಾತ್ರಿ ವಿಶೇಷ ತೆರದ "ಪಾರ್ಟಿ" ಇತ್ತು. ಸಂಗೀತದಲ್ಲಿಯೂ ಗಾಯನದಲ್ಲಿಯೂ ಸಮಯ ಹೋದುದು ತಿಳಿಯಲೇ ಇಲ್ಲ. ನಾನು ಮನೆಗೆ ಹಿಂತಿರುಗಿ ಬಂದಾಗ ಮಧ್ಯ ರಾತ್ರಿ ಕಳೆದಿತ್ತು. ಈ "ಪಾರ್ಟಿ"ಗಳ ದೆಸೆಯಿಂದ ನಾನು ಮಧ್ಯ ರಾತ್ರಿ ಮನೆಯನ್ನು ಸೇರುವುದು ಅಪರೂಪವಾದ ವಿಷಯವಾಗಿರಲಿಲ್ಲ. ಆದರೆ ನನ್ನ ಹೆಂಡತಿಯು ನನ್ನ ಜಾಗ್ರತೆಯನ್ನು ತೆಗೆದುಕೊಳ್ಳುವುದಕ್ಕೋಸ್ಕರ ನನಗೆ ದುಃಖಕರವಾಗುವ ರೀತಿಯಲ್ಲಿ ಎಚ್ಚರವಿರುತ್ತಿರಲಿಲ್ಲ. ನಾನು ದಾರಿಯಲ್ಲಿ ಬರುತ್ತಿದ್ದಾಗ ನವಮಿಯ ಚಂದ್ರನು ನಗಾಡುತ್ತ ಅಸ್ತಮಿಸುತ್ತಲಿದ್ದನು. "ಮುನ್ಸಿಪಾಲಿಟಿಯವರು" ಬೀದಿಯ ಬೆಳಕಿನ ವಿಷಯ ಅಥವಾ ಅದರ ವೆಚ್ಚದ ವಿಷಯದಲ್ಲಿ ಹೆಚ್ಚಾದ ಜಾಗರೂಕತೆ ತೆಗೆದುಕೊಳ್ಳುವುದರಿಂದ ಎಲ್ಲಾ ಕಡೆಯಲ್ಲಿಯೂ ಕತ್ತಲಾಗಿತ್ತು. ದೂರವಿರುವ ಮನೆಗಳು ಆ ಅಂಧಕಾರದಲ್ಲಿ ಭಯಂಕರವಾಗಿ ಎದ್ದು ನಿಂತಿದ್ದುವು. ನಾನು ಯಾವುದನ್ನೂ ಲಕ್ಷಿಸದೆ ಬೇಗಬೇಗನೆ ಕಾಲುಹಾಕುತ್ತಿದ್ದೆನು. ಅಂಧಕಾರದಲ್ಲಿ ಮನಸ್ಸಿಗೆ ಸ್ವಾಭಾವಿಕವಾದ ಭೂತ ಪಿಶಾಚಿಗಳ ಭಯವೂ ಕಳ್ಳರ ಅಂಜಿಕೆಯೂ ನನ್ನ ಮನಸ್ಸಿಗೆ ಹೊಳೆದುವು. "ಕಳ್ಳನಿಗೆ ಒಳ್ಳೆಯರಾತ್ರಿ" ಎಂದು ಎಣಿಸುತ್ತ ನಾನು ಮುಂದರಿಸುತ್ತಿದ್ದೆನು. ಆಗ ಹಠಾತ್ತಾಗಿ ನಾನು ಹೆಂಡತಿಯೊಡನೆ ಕಳ್ಳರ ಕಾಟವನ್ನು ಕುರಿತು ಮಾತನಾಡಿದುದು ಮನಸ್ಸಿಗೆ ಒತ್ತೊತ್ತಿ ಬಂತು. ನನ್ನ ಹೆಂಡತಿಯನ್ನು ಮೋಸಗೊಳಿಸುವ ಸರಸ ಚೇಷ್ಟೆಯನ್ನುನಾನು ಮಾಡಬೇಕೆಂದು ಯೋಚಿಸಿದೆನು.ಇದೇ ರೀತಿಯಲ್ಲಿ ಪತಂಗವು ದೀಪದ ಸುತ್ತಲೂ ಮಂಡಳಿಸುತ್ತ, ಅದರ ಜ್ವಾಲೆಯಲ್ಲಿಬಿದ್ದು ಹತವಾಗುವುದು.

ಮನೆಯನ್ನು ಸಮೀಪಿಸುತ್ತಲೇ ನಾನು ಮಾಡಿದ ಆಲೋಚನೆಗಳೆಲ್ಲವು ಸರಿಯಾದುವೆಂದು ತೋರಿದುವು. ನನ್ನ ಹೆಂಡತಿಯು ತನ್ನ ಸುಲಭನಿದ್ರೆಯನ್ನು ಬಡಾಯಿ ಹೇಳಿಕೊಳ್ಳುವುದನ್ನು ನಾನು ಕೇಳಿಕೇಳಿ, ಅವಳ ಎಚ್ಚರಿಕೆಯನ್ನು ಪರೀಕ್ಷಿಸಿ, ಅವಳನ್ನು ಅಪಹಾಸ್ಯಕ್ಕೆ ಗುರಿಮಾಡುವುದು ಯೋಗ್ಯವೆಂದು ತಿಳಿದುಕೊಂಡೆನು. ಮನೆಯ ಬಾಗಿಲಿಗೆ ಅಗುಣಿ ಹಾಕಿದರೂ, ಕಿಟಿಕಿಯ ಕಡೆಯಿಂದ ಒಳನುಗ್ಗಬಹುದೆಂದು ನನಗೆ ಚೆನ್ನಾಗಿ ಗೊತ್ತಿತ್ತು. ಚಿಕ್ಕ ಮನೆಗೆ ಬಂದು, ಅಲ್ಲಿಂದ ಬೀಗದ ಕೈಗಳನ್ನು ಕಳವು ಮಾಡಿ, ಪೆಟ್ಟಿಗೆಯಲ್ಲಿರುವ ಒಡವೆ ಗಂಟನ್ನು ಮೆಲ್ಲಗೆ ಎತ್ತಿಕೊಂಡು ಅಡಗಿಸಿಟ್ಟು, ಬಳಿಕ ಹೆಂಡತಿಯನ್ನು ಎಚ್ಚರಿಸಿದರೆ, ಈ ಚೇಷ್ಟೆಯು ಬಹಳ ಸಂತೋಷಕರವಾಗುವುದೆಂದು ನಿಶ್ಚಯಿಸಿದೆನು. ಅವಳು ತನ್ನ ಬಾಯಿಯಿಂದಲೇ ತಾನು ನಿದ್ದೆಹೋಗಿ ಮೋಸಹೋದೆನೆಂದು ಹೇಳಿದ ಮೇಲೆ, ಇದ್ದ ಸಂಗತಿಯನ್ನು ಬಿಚ್ಚಿಹೇಳಿ, ಎಲ್ಲವನ್ನು ಸರಿಗೊಳಿಸಬೇಕು. ಇಷ್ಟೆಲ್ಲಾ ಮಾಡುವಾಗ ಅವಳ ನಿದ್ರಾಭಂಗವಾಗುವುದೆಂಬ ಸಂಶಯವಿಲ್ಲದಿದ್ದರೂ ಸಂಶಯದ ಛಾಯೆಯಿತ್ತು. ಪೂರ್ವಾಪರವನ್ನು ಯೋಚಿಸುತ್ತ ಬರುವಷ್ಟಕ್ಕೆ ಈ ಚೇಷ್ಟೆಯಲ್ಲಿ ಹೆಂಡತಿಗಿಂತ ಗಂಡನೇ ಗೆಲ್ಲುವುದು ಸಾಧ್ಯವೆಂದು ನನಗೆ ಕಂಡುಬಂತು.

ನಾನು ಮನೆಯನ್ನು ಸೇರಿದಾಗ, ಎಲ್ಲವೂ ಶಾಂತವಾಗಿತ್ತು. ಕಿಟಿಕಿಗಳಿಂದ ಒಳಗಿನ ದೀಪದ ಬೆಳಕು ತೋರುತ್ತಿರಲಿಲ್ಲ. ನನ್ನ ದುಶ್ಚೇಷ್ಟೆಗೆ ದೈವವೇ ಸಹಾಯಕವಾಗಿದೆ ಎಂದು ತಿಳಿದು, ನಡುಮನೆಯ ಕಿಟಿಕಿಯ ಬಳಿಯಲ್ಲಿ ಬಂದೆನು. ಕಿಟಿಕಿಯ ಬಾಗಿಲುಗಳು ತೆರೆದಿದ್ದುವು. ಕಿಟಿಕಿಯನ್ನು ಹತ್ತುವಾಗ ನನ್ನ ಮೈಯಲ್ಲೆಲ್ಲಾ ಒಂದು ಬಗೆಯ ಭೀತಿಯು ನಡುಗುತ್ತಿತ್ತು. ಬಾಲ್ಯದಲ್ಲಿ ಗೇರುಹಣ್ಣುಗಳಿಗೋಸ್ಕರ ಮರವನ್ನು ಹತ್ತಿದಾಗ, ದೂರದಿಂದ ಕೋಲುಹಿಡಿದುಕೊಂಡು ಬರುವ ಮುದುಕನನ್ನು ನೋಡಿದಾಗ, ಯಾವ ಪ್ರಕಾರವಾಗಿ ಎದೆಯು ದಡದಡಿಸುತ್ತಲಿತ್ತೋ, ಅದಕ್ಕಿಂತಲೂ ನೂರುಪಾಲು ಈಗ ಅದು ಬಡಿಯುತ್ತಲಿತ್ತು—ಎಂದು ಹೇಳಿದರೆ ಒಂದು ದೊಡ್ಡ ಮಾತು ಆಗಲಾರದು. ನಡುಮನೆಗೆ ದುಮುಕಿ ಬರುತ್ತಲೇ ಒಳಗಿನಿಂದ ಯಾರೋ ಒಬ್ಬ ಕಾಳಪುರುಷನು ನನಗೆ ಇದಿರಾಗಿ ಸಮೀಪಿಸಿದುದನ್ನು ನೋಡಿ, ನನ್ನ ಮೈಯೆಲ್ಲಾ ತಣ್ಣಗಾಗಿ ನಾನು ಸ್ತಬ್ಧನಾದೆನು. ವ್ಯಕ್ತಿಯ ರೂಪವು ಕತ್ತಲಲ್ಲಿ ಚೆನ್ನಾಗಿ ಕಾಣಿಸದಿದ್ದರೂ, ಕಣ್ಣುಗಳ ಗೊಂಬೆಗಳು ಗೂಗೆಯ ಕಣ್ಣುಗಳಂತೆ ಮಿನುಗುತ್ತಿದ್ದುವು. ಅವನನ್ನು ನೋಡುತ್ತ ಬರುವಷ್ಟಕ್ಕೆ ನನ್ನ ಭೀತಿಯು ಹೆಚ್ಚುಹೆಚ್ಚಾಗುತ್ತ ಬಂತು. ಅಷ್ಟರೊಳಗೆ ಆ ಕಾಳಪುರುಷನು ಏನು ಮಾಡಿದನೋ ನನಗೆ ತಿಳಿಯದು. ಫಕ್ಕನೆ ನನ್ನ ಎರಡು ಕೈಗಳನ್ನು ತನ್ನ ಕಠಿನಹಸ್ತದಲ್ಲಿ

ಬಿಗಿದು ಹಿಡಿದುಕೊಂಡು, ಇನ್ನೊಂದು ಕೈಯಲ್ಲಿದ್ದ ಕತ್ತಿಯನ್ನು ನನ್ನಕೊರಳಿಗೆ ತೋರಿಸಿದನು.

ವ್ಯಕ್ತಿ:—"ನೀನು ಬೇರೆ ಮನೆಯನ್ನು ನೋಡ ಬಾರದಾಗಿತ್ತೇ? ಇದು ನನ್ನ ಊಟ. ಇಲ್ಲಿ ತಿನ್ನಲಿಕ್ಕೆ ಬಂದೆಯಾ? ನಡೆ! ಬೇರೆ ಕಡೆಗೆ ನಡೆ! ಇಲ್ಲವಾದರೆ—"

ಮಾತನ್ನು ಪೂರೈಸದೆ ಅದರ ಅರ್ಥವನ್ನು ಕತ್ತಿಯಿಂದ ಸೂಚಿಸಿದನು. ವ್ಯಕ್ತಿಯು ಕಳ್ಳನೆಂದು ತಿಳಿದುಕೊಳ್ಳಲಿಕ್ಕೆ ಇನ್ನು ನನಗೆ ಕಷ್ಟವಿರಲಿಲ್ಲ. ಆದರೆ ನಾನೂ ಇವನ ಸಹ ಪಂಕ್ತಿಯವನೇ ಎಂದು ಅವನು ತಿಳದುದನ್ನು ನಂಬಲಿಕ್ಕೆ ನನಗೆ ಸ್ವಲ್ಪ ಕಷ್ಟವಿತ್ತು. ಈ ಸಂದರ್ಭದಲ್ಲಿ ನನ್ನ ಯಥಾರ್ಥ ಸ್ಥಿತಿಯು ತಿಳಿದುಬಂದರೆ, ನನ್ನ ಹೆಂಡತಿಯ ಕುಂಕುಮ ಉಳಿಯುವುದು ಕಷ್ಟ. ಓಡಿ ಹೋಗಿ "ಪೋಲಿಸ್ ಸ್ಟೇಶನಿಗೆ" ತಿಳಿಸುವಷ್ಟರಲ್ಲಿ ಕಳ್ಳನು ಇದ್ದುದನ್ನೆಲ್ಲಾ ದೋಚಿಕೊಂಡು ಹೋದರೆ, ಲೋಕದಲ್ಲಿ ನನಗೆ ಹೆಂಡತಿಯಲ್ಲದೆ ಮತ್ತೇನೂ ಉಳಿಯದು. ಉಪಾಯಾಂತರದಿಂದ ಕಳ್ಳನನ್ನು ಬಂಧಿಸಿಕೊಂಡು, ಆ ಮೇಲೆ ಸಕಲಾವತಿಯನ್ನು ಎಚ್ಚರಿಸಿದರೆ, ಒಂದೇ ಕಲ್ಲಿನಿಂದ ಎರಡು ಹಣ್ಣುಗಳನ್ನು ಉದುರಿಸಬಹುದು. ಹೀಗೆ ಮಾಡುವುದಕ್ಕೆ ನಾನು ಕಳ್ಳನ ಹಾಗೆಯೇ ನಟಿಸುವುದೂ, ಬಂದ ಸಂಗತಿಗಳನ್ನೆಲ್ಲಾ ನನಗೆ ಸಹಾಯಕವಾಗುವ ಹಾಗೆ ಪ್ರಯತ್ನಿಸುವುದೂ, ಅವಶ್ಯವೆಂದು ನನ್ನ ಮನಸ್ಸಿಗೆ ಹತ್ತಿತು. ಆಪತ್ಕಾಲದಲ್ಲಿ ನನ್ನ ಮನಸ್ಸು ಈ ಪ್ರಕಾರವಾದ ಆಲೋಚನೆಗಳನ್ನು ಯಾವಾಗಲೂ ಮಾಡಿಲ್ಲ. ಹೀಗೆಯೇ ಕಳ್ಳನು ಕನ್ನವನ್ನು ಕೊರೆಯುವಾಗ, ತನ್ನಷ್ಟು ಭಾಗ್ಯಶಾಲಿ ಯಾರೂ ಆಗಲಾರನು ಎಂದು ತಿಳಿಯುವನು.

"ಇಗೋ! ಚಿನ್ನದ ಪೆಟ್ಟಿಗೆಯನ್ನು ನಾನು ತೋರಿಸಿಕೊಟ್ಟರೆ, ನನಗೂ ನಿನಗೂ ಪಾಲಾಗಬಹುದೇ?" ಎಂದು ಕೇಳಿದೆನು.

ಕಳ್ಳನ ಮನಸ್ಸಿಗೆ ಏನು ಹೊಳೆಯಿತೋ ನನಗೆ ತಿಳಿಯದು. ಅವನು ಅಸ್ಫುಟಸ್ವರದಿಂದ "ಎಲಾ! ಗುಲ್ಲು ಮಾಡಬೇಡ! ಮೆಲ್ಲಗೆ. ಇಬ್ಬರಿಗೆ. . . .ಒಳ್ಳೆಯದು" ಎಂದು ಹೇಳಿದನು.

ನನ್ನ ಜೀವವು ಖಡ್ಗಧಾರೆಯ ಮೇಲೆ ಇತ್ತು. ನಾನು ಕಳ್ಳನೆಂದು ತೋರಿಸಿದುದರಲ್ಲಿ ತುಸ ತಪ್ಪಿ ಬಿದ್ದು, ಅವನಿಗೆ ಶಂಕೆಹುಟ್ಟಿದರೆ, ನನ್ನನ್ನು ಪರಲೋಕಕ್ಕೆ ಕಳುಹಿಸಿದ ಪುಣ್ಯವು ಕಳ್ಳನಿಗೆ ಬರುವುದೆಂದು ನನಗೆ ಚೆನ್ನಾಗಿ ಗೊತ್ತಿತ್ತು. ಆದುದರಿಂದ ನಾನು ಆದಷ್ಟು ಪ್ರಯತ್ನದಿಂದ ಅತ್ತಿತ್ತ ಹುಡುಕಿದವನಂತೆ ತೋರಿಸಿದೆನು.

"ಎಷ್ಟು ಹುಡುಕಿದರೂ ಸಿಕ್ಕಲಾರದು. ಇವರು ಬಡವರು. ನಾವು ಬೇರೆ ಮನೆಗೆ ನಡೆಯುವ!" ಎಂದು ಅವನೊಡನೆ ಆಲೋಚನೆ ಮಾಡಿದೆನು.

ಕಳ್ಳನು ತನ್ನಮುಖದ ಬಳಿಯಲ್ಲಿ ಕೈ ಹಿಡಿದುಕೊಂಡು, "ಛೀ! ಛೀ! ಈ ಮನೆಯಲ್ಲಿ ಹಣವಿದೆ ಎಂಬುದನ್ನು ನೀನರಿಯೆ. ಸತ್ತುಹೋದ ಮುದುಕಿಯ ಹಣವು ಈ ಪಾಪಿಗಳ ಪಾಲಿಗೆ ಬಂದಿದೆ" ಎಂದು ಹೇಳಿದನು.

ಒದೆರಡು ನಿಮಿಷದ ವರೆಗೆ ಮಾತನಾಡಲಿಕ್ಕೆ ನನಗೆ ಬಾಯಿ ಬರಲಿಲ್ಲ. ಆದರೂ ಬಲಾತ್ಕಾರದಿಂದ, "ಹಣವನ್ನು ಎಲ್ಲಿ ಹೂಳಿಟ್ಟಿರುವರೋ ನಮಗೆ ತಿಳಿಯದು. ಮಾಳಿಗೆಯಲ್ಲಿ ಇರಬಹುದೇ" ಎಂದು ಕೇಳಿದೆನು.

ನಾನು ಮುಳ್ಳಿನ ಮರವನ್ನು ಏರಿದ್ದೆನು. ಆದರೂ ನನ್ನ ಮಾತು ಸಾರ್ಥಕವಾಯಿತು. ಗೃಹಸ್ಥನು ಒಪ್ಪಿಕೊಂಡು, ಮಾಳಿಗೆಯನ್ನು ಹತ್ತಲಿಕ್ಕೆ ಸಮ್ಮತಿಸಿದನು. ಮಾಳಿಗೆಯ ಹೊರಗೆ ತಾನು ಕಾದುಕೊಡಿದ್ದು, ನಾನು ಒಳಕ್ಕೆ ಹೋಗಿ ಹುಡುಕಬೇಕೆಂದು ಅಪ್ಪಣೆ ಮಾಡಿದನು. ನನಗೆ ಈ ಮಾತು ಯೋಗ್ಯವಾಗಿ ತೋರದಿದ್ದರೂ, ನಾನು ಒಳಗೆ ಪ್ರವೇಶಿಸಲೇ ಬೇಕಾಯಿತು. ಅಷ್ಟರಲ್ಲಿ ಕಳ್ಳನು ಪುನಃ ಬಂದು, ಈ ಕಾರ್ಯವು ನಿನ್ನಿಂದ ಸಾಗದು. ನನ್ನ ಕೆಲಸವನ್ನು ನೀನು ಮಾಡು. ನಾನು ಒಂದು ನಿಮಿಷದಲ್ಲಿ ಹುಡುಕಿಬಿಡುತ್ತೇನೆ" ಎಂದು ಹೇಳಿದನು.

ಕಳ್ಳನು ನನಗಿಂತಲೂ ಜಾಣನಾಗಿದ್ದನು. ಒಳಕ್ಕೆ ಹೋಗಿ ಒಂದೆರಡು ನಿಮಿಷಗಳಲ್ಲಿಯೇ ಹೊರಗೆ ಬಂದು ನಾನು ಕಾದುಕೊಂಡಿರುವೆನೋ ಇಲ್ಲವೋ ಎಂದು ನಿಶ್ಚಯ ಮಾಡಿಕೊಂಡನು. ನಾನು ಬಾಗಿಲು ಬಿಡದೆ ಇದ್ದುದರಿಂದ, ನನ್ನಲ್ಲಿ ಪೂರ್ಣ ನಂಬುಗೆಯಿಟ್ಟು, ತನ್ನ ಕೆಲಸಕ್ಕೆ ಹೋದನು.

ನಾನು ಇನ್ನು ಅಲ್ಲಿ ತಡೆಯಲಿಲ್ಲ. ಪೋಲಿಸಿನವರನ್ನು ನಿದ್ದೆಯಿಂದ ಎಚ್ಚರಿಸುವುದಕ್ಕೆ ನನಗೆ ವಿಳಂಬವಾದರೂ, ಅವರನ್ನು ಕರೆತರುವುದಕ್ಕೆ ನನಗೆ ವಿಳಂಬವಾಗಲಿಲ್ಲ. ಕತ್ತಲು ಬಲವಾದುದರಿಂದಲೋ ಮಾಳಿಗೆಯ ಬಾಗಿಲನ್ನು ನಾನು ಎಳೆಯದೆ ಬಿಟ್ಟುದರಿಂದಲೋ ಪೋಲಿಸಿನವರು ಒಳಕ್ಕೆ ಹೋಗಲು ಸಮ್ಮತಿಸಲಿಲ್ಲ. ಪೋಲಿಸಿನವರನ್ನು ಮಾಳಿಗೆಯ ಹೊಸಲಿನ ಬಳಿಯಲ್ಲಿರಿಸಿ, ನಾನು ಪುನಃ ಒಳಕ್ಕೆ ಹೋದೆನು. ಹೊರಗೆ ನಡೆದ ಸಂಗತಿ ಕಳ್ಳನಿಗೆ ಬೋಧೆಯಾಗಿತ್ತೋ ಇಲ್ಲವೋ ನನಗೆ ತಿಳಿಯದು. ಅವನು ಹಣದ ಗಂಟು ಸಿಕ್ಕಲಿಲ್ಲವೆಂದು ವ್ಯಸನಪಟ್ಟು, ಚಿಕ್ಕ ಮನೆಯನ್ನು ಹುಡುಕಲು ಕೆಳಗೆ ಇಳಿಯಲಿಕ್ಕೆ ಸಿದ್ಧನಾಗಿದ್ದನು. ನಾನು ಹಿಂದೆಯೇ ಬರುವೆನೆಂದು ಹೇಳಿ, ಅವನನ್ನು ಕೆಳಗೆ ಕಳುಹಿಸಿದೆನು. ಅವನು ಕೆಳಗೆ ಇಳಿಯುತ್ತಲೇ ಅಲ್ಲಿದ್ದವರು "ಏನು ಕಳ್ಳನು ಓಡಿಹೋದನೇ" ಎಂದು ಅವನೊಡನೆ ಕೇಳಿದರು.

"ಅವನು ಮೇಲಿರುವನು. ನೀವು ಬೇಗನೇ ಹೋಗಿ

ಹಿಡಿದರೆ ಈಗ ತಾನೇ ಸಿಕ್ಕುವನು. ಇಲ್ಲವಾದರೆ ಮೇಲಿನಿಂದಲೇ ಹಾರಿಹೋಗುವನು" ಎಂದು ಹೇಳಿ ಕಳ್ಳನು ಕತ್ತಲಲ್ಲಿ ಅದೃಶ್ಯನಾದನು.

"ಪೋಲಿಸಿನವರು" ಬಿಗಿಲ್ ಮಾಡಿದರು. ಕೂಡಲೇ ಮೂರು ನಾಲ್ಕು ಮಂದಿ ಬಂದು, ಮೇಲಕ್ಕೆ ನುಗ್ಗಿ, ನಿರಾಪರಾಧಿಯಾದ ನನ್ನನ್ನು ಬಂಧಿಸಿದರು.

"ಇದೇನು ಹುಚ್ಚುತನ! ನಾನು ಕಳ್ಳನಲ್ಲ! ನಾನು ಮನೆಯ ಯಜಮಾನ! ಕಳ್ಳನನ್ನು ಹಿಡಿಯದೆ ನನ್ನನ್ನು ಏತಕ್ಕೆ ಬಂಧಿಸುವಿರಿ" ಎಂದು ನಾನು ಆಶ್ಚರ್ಯದಿಂದಲೂ ಭಯದಿಂದಲೂ ಕೇಳಿದೆನು.

ಕೆಂಪು ಮುಂಡಾಸಿನವರು ಅವರ ಸ್ವಭಾವಕ್ಕನುಸಾರವಾಗಿ ನನ್ನ ಮಾತು ಪೂರೈಸಗೊಡಿಸದೆ, "ಹೆಚ್ಚು ಮಾತು ಬೇಡ! ನಿನ್ನ ಸಂಗಡವಿದ್ದವನನ್ನೂ ಬಂಧಿಸದೆ ಇರಲಾರೆವು; ಅವನು ಎಲ್ಲಿ ಹೋಗುವನು, ಅವನ ಅಪ್ಪನ ಮನೆಗೆ?" ಎಂದು ಹೇಳಿ, ನನ್ನನ್ನು ಕೋಳ ಹಾಕಿ, ಅಂಗಳಕ್ಕೆ ಬಲಾತ್ಕಾರದಿಂದ ತಂದರು.

ಈ ಸಮಯಕ್ಕೆ ಸರಿಯಾಗಿ ಸಕಲಾವತಿ ಎಚ್ಚತ್ತು, ಚಿಕ್ಕ ಮನೆಯ ಬಾಗಿಲು ತೆರೆದು, ಮೆಲ್ಲಗೆ ಚಾವಡಿಗೆ ಬಂದಳು. ನಾನು ಉಪಾಯವಿಲ್ಲದವನಾಗಿ ಹೆಂಡತಿಯನ್ನು ಕರೆದು, "ಬಂದ ಕಳ್ಳನನ್ನು ಈ ಹಾಳು ಮಕ್ಕಳು ಸಡಿಲು ಬಿಟ್ಟು, ನನ್ನನ್ನು ಕಟ್ಟಿ ತೆಗೆದುಕೊಂಡು ಹೋಗುವರು. ನೀನಾದರೂ ನನ್ನನ್ನು ಗುರುತಿಸಿ, ಬಿಡುಗಡೆಮಾಡು" ಎಂದು ಮೊರೆಯಿಟ್ಟೆನು.

"ಅಮ್ಮ! ಒಬ್ಬ ಕಳ್ಳನು ನಮ್ಮನ್ನು ಮೋಸಪಡಿಸಿ ತಪ್ಪಿಸಿಕೊಂಡನು. ಈ ಕಳ್ಳರ ಜಾಣತನ ನೀನರಿಯೆ. ನೀನು ಇವನನ್ನು ಗುರುತಿಸಿದರೂ ಗುರುತಿಸದಿದ್ದರೂ, ನಾವು ಇವನನ್ನು ಕೊಂಡುಹೋಗದೆ ಇರಲಾರೆವು" ಎಂದು ಪೋಲಿಸಿನವನು ಹೇಳಿ, ನನ್ನನ್ನು, ನಿರಾಪರಾಧಿಯಾದ ಪ್ರಾಣಿಯನ್ನು—ಒಯ್ದು ಕೊಂಡು ಹೋದರು. ಆಗ ನನ್ನ ಹೆಂಡತಿ ಬಿಕ್ಕಿಬಿಕ್ಕಿ ಅಳುತ್ತಿರುವುದು ದೂರದಿಂದ ನನಗೆ ಕೇಳಿಸುತ್ತಿತ್ತು.

ನನ್ನನ್ನು "ಸ್ಟೇಶನಿಗೆ" ತಂದಕೂಡಲೇ ಇದ್ದ ಸಂಗತಿಯನ್ನೆಲ್ಲಾ ನಾನು ಯಥಾರ್ಥವಾಗಿ ಹೇಳಿದೆನು. ನನ್ನ ಹೆಂಡತಿಯನ್ನು ನಾನು ಹೇಗೆ ಪ್ರೀತಿಸುತ್ತಿದ್ದೆನೆಂದೂ, ನನ್ನ ಹೆಂಡತಿಯ ಮೇಲಿನ ಪ್ರೀತಿಗೋಸ್ಕರವಾಗಿ ನಾನು ಮಾಡಿದ ದುಶ್ಚೇಷ್ಟೆಯು ನನ್ನನ್ನು ಹೇಗೆ ಆಪತ್ತಿಗೆ ತಗುಲಿಸಿತೆಂದೂ, ನನ್ನ ಹೆಂಡತಿಯು ನನ್ನನ್ನು ಬಿಡುಗಡೆಮಾಡದೆ ಇರಲಾರಳೆಂದೂ ನಾನು ಪೋಲಿಸಿನವರಿಗೆ ತಿಳಿಸಿದೆನು. ಅವರು ನನ್ನ ಮಾತುಗಳಿಗೆ ಕಿವಿಗೊಟ್ಟರೋ ಇಲ್ಲವೋ ನನಗೆ ತಿಳಿಯದು. ನನ್ನನ್ನು ಆಗ ತಾನೇ ಬಿಡುಗಡೆ ಮಾಡಲಿಕ್ಕೆ ಬಲವಾದ ಕಾರಣವಿರಲಿಲ್ಲ. ಏಕೆಂದರೆ ನನ್ನ ಕೈಯ್ಯಲ್ಲಿ ಹಣವಿರಲಿಲ್ಲ. ನಾನು ಒಂದು ರಾತ್ರಿ ಜೈಲಿನಲ್ಲಿ ಮಲಗಬೇಕಾಯಿತು ಎಂದು ಹೇಳಲಿಕ್ಕೆ ನಾಚಿಕೆಯಿಲ್ಲ. ನನ್ನ ಹೆಂಡತಿ ಸಕಲಾವತಿ ಮರುದಿನ ಬೆಳಗ್ಗೆ ನನ್ನನ್ನು ಬಿಡುಗಡೆ ಮಾಡಿದಳೆಂದೂ, ಅಂದಿನಿಂದ ನನ್ನ ಹೆಂಡತಿಯೊಡನೆ ನಾನು ದುಶ್ಚೇಷ್ಟೆ ಮಾಡುವುದು ನಿಂತು ಹೋಯಿತೆಂದೂ, ಹೇಳಲಿಕ್ಕೆ ನನಗೆ ನಾಚಿಕೆಯಿಲ್ಲ.

---

# ಹರಟೆಮಲ್ಲ

(ಸತ್ಯದೀಪಿಕೆಯೆಂಬ ಮಂಗಳೂರಿನ ಪತ್ರಿಕೆಯೊಂದರಲ್ಲಿ ಶ್ರೀಯುತರು ಬರೆದ ಕೆಲವೊಂದು ಲಘುಬಾತಮಿಗಳು. ಇವು ೧೯೦೫-೬ರ ಕಾಲದಲ್ಲಿ ಪ್ರಕಟವಾದುವು.)

## ೧.

ಸ್ವಾಮಿ, ಸತ್ಯದೀಪಿಕಾಗ್ನಿಹೋತ್ರಿಗಳೇ!

ಉದ್ಯೋಗವಿಲ್ಲದಕ್ಕೆ ಏನೋ ಏನೋ ಹರಟಿದೆನು. ಒಂದು ಕೊಟ್ಟು, ಎರಡು ಕೊಳ್ಳುವ ಉದ್ಯೋಗವು ಒಳ್ಳೆದೇ ಸರಿ. ಆದರೆ ದುಡ್ಡಿನ ವ್ಯಾಪಾರದಲ್ಲಿ ಇದು ಲೇಸಲ್ಲದೆ ಗುದ್ದಿನ ವ್ಯಾಪಾರದಲ್ಲಿ ಇದು ಸೊಗಸಾಗಿಲ್ಲ. ನನ್ನ ಉದ್ಯೋಗವು ಈಗ ಗುದ್ದುವ ವೃತ್ತಿಯಾಗಿದೆ. ಒಂದು ಬೈಮಾತು ಕೊಟ್ಟರೆ ಮೂರು ಬೈಮಾತು ಯಾಕೆ ಕೊಳ್ಳಬೇಕು? ಸ್ವಾಮಿ! ಊರಸುದ್ದಿಯನ್ನು ತಮ್ಮ ಕಿವಿಗೆ ತಂದರೆ, ಊರವರ ಶಾಪ ನನ್ನ ಒಣ ತಲೆ ಮೇಲೆ. 'ಉದ್ಯೋಗಂ ಪುರುಷ ಲಕ್ಷಣಂ'. ಎಡಿಟರರೇ, ನನಗೆ ಒಂದು ಸರ್ಟಿಫಿಕೇಟು ದಯಪಾಲಿಸುವಿರಾ? ನಮ್ಮ ಜಿಲ್ಲೆಯಲ್ಲಿ ಪೊಲೀಸ್ ಏರ್ಪಾಡಿನ ಸಂಬಂಧವಾಗಿ ೩೨ ಮಂದಿ ಹೊಸ ಇನ್‌ಸ್ಪೆಕ್ಟರರಾಗಿ ನೇಮಕವಾಗಲು ಧೊರೆಯ ಮುಂದೆ ಹೋದರಂತೆ. ಹೋದವರಲ್ಲಿ ೧೩ಮಂದಿ ಚುನಾಯಿಸಲ್ಪಟ್ಟರು. ಉಳಿದ ಉಮೇದ್ವಾರರು ದ್ವಾರ ಕಾದು ಮನೆಯ ದಾರಿ ಹಿಡಿದರು. ಇಲ್ಲಿಯ ಪೋಲಿಸ್ ಸಂಬಂಧವಾಗಿ ಹರಟೆಮಲ್ಲನು ಕೆಲಸ ಮಾಡಿದ್ದಾನೆಂದು ಒಂದು ಮಾತಿನ ಸರ್ಟಿಫಿಕೇಟು ನನಗೆ ತಮ್ಮಿಂದ ಸಿಕ್ಕಿತೋ, ನನಗೆ ಹುದ್ದೆ ದೊರೆಯುವದು ಸಿದ್ಧ. ಚುನಾಯಿಸಲ್ಪಟ್ಟವರನ್ನು ಕೂಡಲೇ ವೆಲ್ಲೂರಿಗೆ ಕಳುಹಿಸುವರಂತೆ. ಇದು ನಿಜವೇ? ಹಾಗಿದ್ದರೆ ಅವರು ಮಾಡಿದ ತಪ್ಪೇನು? ನಾನು ಶಾಲೆಯ ಉಪಾಧ್ಯಾಯನಾಗಲು ಇದ್ದೆ. ತಮ್ಮ ಪತ್ರಿಕೆಯಲ್ಲಿ ಉಪಾಧ್ಯಾಯರ ಸಲ್ಲಾಪ ಓದಿ ನೋಡಿ ನನಗೆ ಪ್ರಲಾಪ ಹಿಡಿದಿದೆ. ಮಾಸ್ತರ್ ಮತ್ತು ಕನ್ಸ್ಟೇಬಲ್ ಈ ಮಾತುಗಳಲ್ಲಿ ಎರಡನೆಯದರಲ್ಲೇ ಅಕ್ಷರ ಗೌರವವು ಅಧಿಕವಾಗಿದೆ. ಮಾಸ್ತರನೂ ಪಾಸ್ ಮಾಡಬೇಕು. ಕನ್ಸೆಸ್ಟೇಬಲನೂ ತಪಾಸು ಮಾಡಬೇಕು. ಹೀಗಿದ್ದರೂ ಪೋಲಿಸಿನವನಿಗೆ ಕೈ ತುಂಬಾ ಗಂಟಾದರೂ ಉಂಟು; ಉಪಾಧ್ಯಾಯನಿಗೆ ಬೆರಳು ಗಂಟುಗಳಲ್ಲದೆ ಮತ್ತೇನೂ ಇಲ್ಲ.

ನಮ್ಮ ಊರಲ್ಲಿ ಕಳವು ಇನ್ನೂ ಜಾಸ್ತಿಯಾಗಲಿಲ್ಲ. ಹೀಗಿದ್ದರೂ ಪೋಲಿಸ್ ಫೌಜನ್ನು ಯಾಕೆ ಹೆಚ್ಚಿಸುತ್ತಾರೊ, ಹೇಳಬರುವುದಿಲ್ಲ. ಒಂದು ವೇಳೆ ಫೌಜನ್ನು ಹೆಚ್ಚಿಸಿದರೆ ಫಲಿತಾಂಶ ಏನಾಗುವದೊ, ನೋಡಬೇಕು. ಪ್ಲೇಗು ಸೋಂಕನ್ನಾದರೂ ತಡಿಸಲಿಕ್ಕೆ ಪೋಲಿಸಿನವರು ಅವಶ್ಯ. ಪ್ಲೇಗು ಕಾಲೂರಿಸಿಂತಿದೆ. ಎರಡು ತಿಂಗಳಿಗೊಮ್ಮೆ ಕಣ್ಣುಮುಚ್ಚಾಲೆ ಆಟ ಆಡುತ್ತದೆ.

ರಾಗ—ಮುಖಾರಿ; ಝಂಪೆ

ಏನು ಬೇಡಲಿ ನಿನ್ನ ಬಳಿಗೆ ಬಂದು?।
ನೀನಿತ್ತ ಸೌಭಾಗ್ಯ ನಿಖಿಲವಾಯ್ತ್ತನಗೆ ॥
ಅಕ್ಕಿಯನು ಕೊಡು ಎಂದು ಅಕ್ಕರೆಯೊಳ್ ಬೇಡುವೆನೆ?।
ಅಕ್ಕಿಯಾ ಮುಡಿಗಿಂದು ರೊಕ್ಕ ರೂಪಾಯಿ ನಾಲ್ಕು॥
ಸಕ್ಕರೆಯು ಕೊಡು ಎಂದು ಸೌಖ್ಯದಲಿ ಬೇಡುವೆನೆ?।
ಸಕ್ಕರೆಯು ಸೇರಿಗಂ ಚಿಕ್ಕಾಸು ಕಮ್ಮಿಲ್ಲ.॥
ಬಟ್ಟೆಯನು ಕೊಡು ಎಂದು ಬಟ್ಟೆಯೊಳು ಬೇಡುವೆನೆ?।
ಬಟ್ಟೆ ದೇಶಿಯು ಗಲಭೆ ಮುಟ್ಟೆ ಪ್ರಿಯವಾದುದ್ದೈ
ಕಟ್ಟಿಗೆಯ ಕೊಡು ಎಂದು ಕಟ್ಟಕ್ಕೈ ಬೇಡುವೆನೆ?।
ಕಟ್ಟಿಗೆಯುನೇರೆಭವ ನೆಟ್ಟಗಾಗುವದಯ್ಯ॥

ಇದು ನನ್ನ ಹಾಡೇ? ಜನಗಳ ಹಾಡು! ಖಂಡಿತವಾದಿ ಲೋಕ ವಿರೋಧಿ—ಇದು ರಾ. ರಾ. ಕರೋಡಿ ಸುಬ್ಬರಾಯರ ಮಾತು. ರಾ. ಸುಬ್ಬರಾಯರ ಮಾಸ ಪತ್ರಿಕೆಗೆ ಎರಡು ತಿಂಗಳು ತುಂಬಿತು. ಪತ್ರಿಕೆಯು ಸೊಗಸಾಗಿದೆ. ಆದರೆ ಪತ್ರಿಕೆಗೆ ಎರಡು ಸಂಗತಿಗಳು ಅವಶ್ಯವಾಗಿ ಬೇಕಾಗಿವೆ. ಯಾವದೆಂದು ಗೊತ್ತುಂಟೇ? ದೈವಾನುಕೂಲತೆ, ದ್ರವ್ಯಾನುಕೂಲತೆ. ಎಲ್ಲರೂ ಅದನ್ನು ಕೈ ಹಿಡಿದು ನಡೆಸುವರೆಂದು ಮಲ್ಲನ ಪ್ರಾರ್ಥನೆ. ರಾ. ಸುಬ್ಬರಾಯರ ಪತ್ರಿಕೆಯು ಇಂಗ್ಲಿಷ್ ಜನಗಳ ಮಕ್ಕಳಂತೆ ಮೊದಲೆ ಬೈಗಳನ್ನು ಕಲಿತಿರುವುದು—"ಮಂದಮತಿಗಳಾದ ಅತ್ಯಲ್ಪರು ಒಂದನೆ ಸಂಚಿಕೆಯನ್ನೆ ಹಿಂದಿರುಗಿಸಿರುವರು. ಚಿಂತೆಯಿಲ್ಲ; ಇವರ ಗಂಧಗಾಳಿಯೆ ನಮಗೆ ಬೇಡ". ಇವು ಯಥಾರ್ಥವಾಗಿದ್ದರೂ ಶ್ರೀಕೃಷ್ಣ ಸೂಕ್ತಿಯಾಗಲಾರವು. ಹಾಗೆಯೇ ಎಂಟು ಮಠಗಳಿಗೂ ತುಂಟ ಮುಸಲ್ಮಾನರಿಗೂ ಗಂಟುಬಿದ್ದ ನಂಬ್ರದ ತೀರ್ಪನ್ನು ಕುರಿತು 'ಇವರು ವಿವೇಚಿಸಿ ಜೋಡಿಸಿದ ನಾಡವರ ಪಂಚಾಯಿತಿಯ ನುಡಿಯು ಹರಟೆಮಲ್ಲನ ತುಂಡುಮಾತಿನಂತೆ ತುಸಾ ಬಂಡು. ಎಡಿಟರರೇ! ಹೊತ್ತು ಮೀರಿತು; ಕೊಟ್ಟ ಮಾತನ್ನು ಮರೆತನೆಂದು ಕೋಪಿಸಬೇಡಿರಿ. ಆಗಾಗ ಬರೆಯುವೆನು.

---

## ೨.

ಅಯ್ಯಾ ಸಮಾಚಾರ ಬೋಧಕರೇ, ಪತ್ರ ಸಂಪಾದಕರೇ!

ನನ್ನ ಮೈಯಲ್ಲಿ ಶಕ್ತಿಗುಂದಿದೆ; ಏನೂ ಬರೆಯಲಾರೆ. ಹೋದ ವಾರದಲ್ಲಿ ಎರಡು ದಿನ ಉಪವಾಸ ಬಿದ್ದು ಮೈ ಬತ್ತಿ ಹೋಗಿದೆ. ಇತ್ತಂಡದವರನ್ನು ಮೆಚ್ಚಿಸಲು ನೋಡುವವರಿಗೆ ಉಪವಾಸವಲ್ಲದೇ ಮತ್ತೇನೂ ಇಲ್ಲ. ಈ ವಿಶ್ವಾಸವಸು ಸಂವತ್ಸರದಲ್ಲಿ ಕೃಷ್ಣಜಯಂತಿಯು ಅಗೋಸ್ತು 22ಕ್ಕೆಂದು ಕೆಲವರು, ಹೀಗೆಯೇ ಹೆಣಗಾಡತೊಡಗಿದರು. ಜಮಿೂನ್ ಶೀರ್ವೆ ಏರಿದಂದಿನಿಂದ ನನಗೆ ನಿತ್ಯ ಉಪವಾಸ. ಎರಡು ಪಕ್ಷದವರೂ ತಾವು ಹಿಡಿದ ಕೋಳಿಗಳಿಗೆ ಮೂರೇ ಕಾಲೆಂದು ಪುಸ್ತಕಗಳನ್ನು ಎಸೆದು ಹೋರಾಡಿದರು. ಅಂತೂ ಇಂತೂ ನಾನು ಉಪವಾಸ ಬಿದ್ದೆ; ಬೊಟ್ಟು ಮಾತ್ರ ಹಣೆಗೆ ಇಟ್ಟುಕೊಳ್ಳಲಿಲ್ಲ. ಹಿಂದೂ ಜನರಲ್ಲಿ ಜಾತಿಭೇದ ಮಾತ್ರವಲ್ಲ ತಿಥಿಭೇದವೂ ಉಂಟೆಂದು ಸಿದ್ಧವಾಯಿತು. ಭಟ್ಕಳ ಅಪ್ಪಯ್ಯನವರು ಹೇಳುವಂತೆ

ಹೆಚ್ಚು ಕಡಿಮೆ ಎಂದು ಹೆಣಗಾಡಬೇಡಿ
ಸಚ್ಚಿದಾನಂದ ಬ್ರಹ್ಮನ ಗುಟ್ಟು ನೋಡಿ.

ಅಪ್ಪಯ್ಯನವರು ಜೀವಂತರಾಗಿದ್ದರೆ ಈ ಸೊಲ್ಲನ್ನು ಹೀಗೆ ಹೇಳುತ್ತಿದ್ದರೊ ಏನೋ—

ಅಚ್ಚುತಾಷ್ಟಮಿ ದಿನ ಎರಡೆನ್ನಬೇಡಿ
ಅಚ್ಚುಬೆಲ್ಲದ ಲಡ್ಡುಗಳ ರುಚಿಯ ನೋಡಿ.

ಅಷ್ಟಮಿಕಾಲದಲ್ಲಿ ಹಣ ತುಂಬಾ ಜೂಜಾಡುವುದು, ಶಿವರಾತ್ರಿಯಲ್ಲಿ ಕೈತುಂಬಾ ಕಲ್ಲೆಸೆಯುವುದು—ಇವೇ ಪುಣ್ಯಕಾರ್ಯಗಳಂತೆ. ಇಂಥಾ ಅಜ್ಞಿ ಭಕ್ತಿಯನ್ನು ಹೊದ್ದುಕೊಂಡು ಭಾರತ ಭೂಮಿಗೆ ಈ ದುರ್ದಶೆ. ಹುಟ್ಟುಮನೆ ಶಿವರಾತ್ರಿ; ಕೊಟ್ಟ ಮನೆ ಗೋಕುಲಾಷ್ಟಮಿ. ಈ ವರ್ಷದ ಅಷ್ಟಮಿಯಲ್ಲಿ ಇನ್ನೊಂದು ವಿಶೇಷವಿದೆ. ವೈಸರಾಯಿ ಕರ್ಜನ ಪ್ರಭುಗಳೂ, ದಳವಾಯಿ ಕಿಚ್ಚನರ ಪ್ರಭುಗಳೂ ಜೂಜಾಡಿದರು. ಇಬ್ಬರೂ ಸೇನಾ ಸಂಬಂಧವಾದ ತೆಂಗಿನಕಾಯಿಗಳನ್ನು ಕೈಕೊಂಡು ಒಡ್ಡಿದರು. ಹಿಂದುಸ್ಥಾನದ ದೊರೆಗಳು ಕರ್ಜನರ ಪಕ್ಷ ಹಿಡಿದವರು. ವಿಲಾಯತಿಯವರು ಕಿಚ್ಚನರ ಪ್ರಭುಗಳ ಕಡೆಗೆ ಇದ್ದರು. ಕಾಯಿ ಜೂಜಿನ ಕಟ್ ಕಟ್ ಶಬ್ದವು ಹಲವು ದಿನಗಳ ವರೆಗೆ ಪತ್ರಿಕೆಗಳಲ್ಲಿ ಕೇಳಿಸಿತು. ಕೊನೆಗೆ ಕರ್ಜನರ ಕಾಯಿಯು ಒಡೆದು ಹಿಂದುಸ್ಥಾನದಿಂದ ತೆರಳುವ ಹಾಗಿದ್ದಾರೆ. ಹೋಗುವಾಗ 'ನನ್ನ ಸ್ಮರಣೆ ಇರಲಿ' ಎಂದು ಬೇಡಿಕೊಳ್ಳುತ್ತೇನೆ. ಇವರಾದರೋ

ಐದುವರ್ಷಗಳವಧಿ ಮೀರಿ ಆಳಿದರು;
ಬೈದು ಪ್ರಜೆಗಳ ಸುಳ್ಳರೆಂದು ಹೇಳಿದರು;
ಮೈದಡವಿ ಹುಡ್ಡೆ ಬಿಳಿ ಜನರೆ ತಾಳಿದರು;
ಕೈದು ಬಿಚ್ಚಿಯ ಕಾಯಿದೆ ಬಿಗಿದು ತೂಳಿದರು; ॥

ಇದು ದೇಶೀಯ ಪಾಟ, ಮಲ್ಲನ ಕೊಂಡಾಟ ಬೇರೆ!

ಭರತ ವರ್ಷದ ಕಟ್ಟಳೆಯ ತಪ್ಪು ತಿದ್ದಿ,
ಮೆರೆವ ನೀತಿಯ ಸಂಪದಾಹಾರ ವೃದ್ಧಿ.
ದೊರೆವಂತೆ, ನೀ ಕಾಯಿದೆ ಗೈದೆ ಸಮೃದ್ಧಿ
ಪರಿಪಾಲಿಸುವುದು ನಿನ್ನ ಹೆಸರಿನಾ ಲದ್ದಿ ॥

ಇವರ ಸಾಹಸವನ್ನು ಬಣ್ಣಿಸಲಿಲ್ಲ. ಇವರ ವಿಕ್ರಮವನ್ನು ಇಂಗ್ಲಿಷ್ ಜನ ಹೀಗೆ ಓದುವರು:—

ಗುರು ಬೌದ್ಧ ಸನ್ಯಾಸಿಗಳ ಗುದ್ದಿ ಗುದ್ದಿ
ಭರದಿ ಸಾಕೇತ ದೇಶವನು ಗೆದ್ದಿ ಗೆದ್ದಿ,
ಕರವಿತ್ತ ಮೀರಗುಸಿರಿದೆ ಬುದ್ಧಿ ಬುದ್ಧಿ.
ಹರಿಪಂಚಿ ಹೋಯ್ತು ಬಂಗಾಳ ಪ್ರಸಿದ್ಧಿ ॥

ಸಂಸ್ಕೃತ ಸರಿಯಾಗಿ ಒರೆಯಲಾರೆ. ನಾನು ಗೀರ್ವಾಣ ಭಾಷೆ ಬರೆಯಹೋದರೆ, ಕೋಳಿಯು ಕಾಲಿನಿಂದ ತಿಪ್ಪೆ ಕೆದರಿದ ಹಾಗಾಗುತ್ತದೆ. ಆದ್ದರಿಂದ ಕನ್ನಡದಲ್ಲೆ ಬರೆಯುತ್ತೇನೆ.

ಕರ್ಜನೊ ನಿಷ್ಕ್ರಾಂತೊ ಮಿಂತೋ ಪ್ರವಿಶ್ಯತಿ.

ಇದು ನಿಜವಾದ ವರ್ತಮಾನ. ಹಳೆಯ ತಂತಿ ವರ್ತಮಾನವಲ್ಲ. ರಂಗಸ್ಥಳಕ್ಕೆ ಯಾರು ಬಂದರೇನು? ದ್ರೋಣ ಬಂದರೇನು? ಭೀಷ್ಮ ಬಂದರೇನು? ನಾವು ದೀವಟಿ ಹಿಡಿಯೋದು ತಪ್ಪುವುದಿಲ್ಲ. ನಮ್ಮ ಹೊಸ ವೈಸರಾಯರಿಗೆ ಕರ್ಜನರಷ್ಟು ವಯಸ್ಸಾಗಿಲ್ಲ. ಮಿಂತೋ ಪ್ರಭುಗಳ ಪ್ರಾಯ ಬರಿಯ ಮೂವತ್ತುವರೆ ಮತ್ತು ಮೂವತ್ತುವರೆ ವರ್ಷ. ಆದ್ದರಿಂದಲೇ ಈಗಿನ ವೈಸರಾಯರಾಗಿ ಬಂದರು. ಹೊಸ ಏರ್ಪಾಡುಗಳನ್ನು ನೋಡಿದರೆ ಆ ಪದವಿಯು ಈ ೬೧ ವರ್ಷದ ಮುದುಕರಿಗೆ ಹೇಳಿದ್ದು. ಕಿಚ್ಚನರು ಇರುವಷ್ಟು ಕಾಲ ವೈಸರಾಯರನ್ನು ನಾವು ಪೂಜೆ ಮಾಡುವ ಮಂತ್ರ ಯಾವುದೆಂದು ಹೇಳಬೇಕೇ?

ಮಂತ್ರತಂತ್ರ ನನ್ನ ಕೈಲಿ ಇಲ್ಲ । ಸತ್ಯ ಸುಕೃತ ನಿನ್ನ ಕೈಲಿ ಇಲ್ಲ ॥
ಕಳ್ಳ ಮಾಣಿ ಎಂದು ನೀನು ಹೇಳಬೇಡ । ಕಲ್ಲು ದೇವರೆಂದು ನಾ ಹೇಳುವುದಿಲ್ಲ ॥

ನಾನು ಇದನ್ನು ಆಡಬಾರದು. ಯಾರೂ ಬರಲಿ, ನನಗೇನು? ಯಾವರಾಯ ಬಂದರೂ, ರಾಗಿ ಬೀಸೋದು ತಪ್ಪೀತೇ? ಕರ್ಜನ್ ದೊರೆಯು ಹಿಂದುಗಳನ್ನು ಅಸತ್ಯವಾದಿಗಳೆಂದು ಜರೆದದ್ದರಿಂದ, ಅವರನ್ನು ತಳ್ಳಿ, ದೂಡಿ, ದೊಬ್ಬಿಬಿಟ್ಟರೆಂದು ಹೊಸ ತಂತಿ ನನಗೆ ಬಂದಿದೆ. ನಮ್ಮ ಊರಿನ ಹಳೆಯ ತಂತಿ ಆಫೀಸನ್ನು ಈಗ ಇದ್ದಲ್ಲಿಂದ ತೆಗೆದು ಕೊನವೆಂಟ್ ಶಾಲೆಯ ಬಳಿಯ ಕಟ್ಟಡದಲ್ಲಿ ಇದೇ ಸಪ್ತಂಬರ ಒಂದರಿಂದ ಇಡುವರಂತೆ. ಅದಕ್ಕೋಸ್ಕರ ಕೆಲವು ಹೊಸ ಕಂಬಗಳನ್ನು ನೆಟ್ಟು ಮೂಗಿಗೆ ತಂತಿ ಬಿಗಿಯುತ್ತಿದ್ದಾರೆ.

* * * *

ನಮ್ಮರಾ. ಕರೋಡಿಸುಬ್ಬರಾವ್.ಬಿ. ಎ.ಇವರು"ಶ್ರೀ ಕೃಷ್ಣಸೂಕ್ತಿ" ಎಂಬ ಮಾಸ ಪತ್ರಿಕೆಯನ್ನು ಸದ್ಯದಲ್ಲಿ ಉಡಿಪಿ ಯಿಂದ ಹೊರಡಿಸುತ್ತಾರಂತೆ. ನಮ್ಮಲ್ಲಿ ಮಾಸ ಪತ್ರಗಳಿಗೆ ಹುಟ್ಟುವಾಗಲೇ ಹೊಟ್ಟೆಯಲ್ಲಿ ಕೂರ್ಮವುಂಟು. ತೆಳು ಕಾಲಿನ, ಡುಬ್ಬ ಹೊಟ್ಟೆಯ ಕೂಸನ್ನು ಯಾರೂ ಎತ್ತಿ ಕೊಳ್ಳೋದಿಲ್ಲ. ನಮ್ಮ ಸುಬ್ಬರಾಯರ ಮಾಸಿಕ ಪತ್ರವು ಹೊಟ್ಟೆಯುಬ್ಬಿ ಅಲ್ಲಾಬಿವೇಷದ ಹಾಗಾಗದಂತೆಯೂ ಬಾಲ್ಯ ದಲ್ಲಿಯೇ ಮುಪ್ಪಾಗದಂತೆಯೂ ಆಶೀರ್ವಾದ.

* * * *

ಅಯ್ಯೋ, ಅಲ್ಲಾಬಿವೇಷಗಳಲ್ಲಿ ಹಿಂದೆ ನಾನಾ ತಮಾಷೆ ಮಾಡುತ್ತಿದ್ದರು; ಈಗ ಎಲ್ಲಾ ನಿಂತುಹೋಯಿತು. ಹಾ! ಹಾ! ಹಾ! ಅಲ್ಲಾಬಿಯ ಆಗಬೋಟೆಂದು ಮುಂಚೆ ಕೆಲವರು ಮಾಡುತ್ತಿದ್ದ ನೆಲ ಹಡಗನ್ನು ಈಗಿನ ಮುನಿಸಿಪಾಲ್ ರಸ್ತೆ ಗಳಲ್ಲಿ ನಡೆಯಿಸಿದರೆ, ಎಷ್ಟು ಚಂದವಾಗುತ್ತಿತ್ತು! ಮುನಿಸಿ ಪಾಲ್ ಖಜಾನೆಯಲ್ಲಿ ತೂತು ಬಿದ್ದುದರಿಂದ ರಸ್ತೆಯಲ್ಲಿ ನೀರು ಹರಿಯುವುದು ಆಶ್ಚರ್ಯವೇ? ನಮ್ಮ ಮುನಿಸಿಪಾಲಿಟಿಯ ವರು ಸರಕಾರದಿಂದ ಸಾಲಕೇಳಿದರಂತೆ. ಕೊಟ್ಟರೋ ಬಿಟ್ಟ ರೋ–ನನಗೇನು ಗೊತ್ತು? ನನಗೆ ಸಭೆಯಲ್ಲಿ ಕಣ್ಣು ತೆರೆಯದೆ ಬಾಯಿಮುಚ್ಚಿ ಕೂತುಕೊಳ್ಳಲು ಸ್ಥಾನ ಸಿಕ್ಕಿದರೆ, ಆ ಮೇಲೆ ಮತ್ತೊಬ್ಬರಿಂದ ಕೇಳಿ ನಿಮಗೆ ತಿಳಿಸುತ್ತೇನೆ. ನಮ್ಮ ಮುನಿಸಿ ಪಾಲ್ ಸಭೆಯವರು, ರಾ. ಕೃಷ್ಣನಾಯರನ್ನು ಮದ್ರಾಸ್ ನ್ಯಾಯವಿಧಾಯಕ ಸಂಘದ ಮೆಂಬರನ್ನಾಗಿ ಚುನಾಯಿಸಿ ದ್ದಾರಂತೆ. ಇವರು ಬುದ್ಧಿವಂತರು; ಸಮರ್ಥರು. ಇವರು ಮೂರು ವರ್ಷ ಆ ಸಭೆಯಲ್ಲಿ ಮಾತಾಡಿ ಕಂಠಶೋಷಣೆ ಮಾಡಿ ನಮ್ಮಸೆಟ್ಲಮೆಂಟನ್ನುತಪ್ಪಿಸಿಬಿಟ್ಟರು.ಇವರ ಪ್ರಯತ್ನ ದಿಂದ ಇಡೀ ಸೆಟ್ಲಮೆಂಟ್ ಆಫೀಸಿಗೆ ಮಂಗಳೂರಿಂದ ಇದೇ ೨೦ಕ್ಕೆ ಕರ್ನೂಲಿಗೆ ವರ್ಗವಾಯಿತು. ಆದರೆ ಇವರಿಗೆ ಮಾತ್ರ ಸಭೆಯಲ್ಲಿ ಸ್ಥಾನ ತಪ್ಪಿತು;ಮುಂದೆ ಹ್ಯಾಗೆ ಆಗುತ್ತದೋ ನೋಡೋಣ.

---

೩.

ರಾಜಪೂರಿತ ರಾಜಮಾನ್ಯ ರಾಜೇಶ್ರೀ ಸತ್ಯದೀಪಿಕಾ ಪ್ರಕಾಶಕರಿಗೆ–

ಸದಾ ಚರಣಸೇವಕ ಹರಟೆಮಲ್ಲನ ಸಾಷ್ಟಾಂಗ. ವಿಶ್ವಾ ವಸು ಸಂವತ್ಸರದ ಕಾರ್ತಿಕ ಶುದ್ಧ ಹುಣ್ಣಿಮೆಯ ವರೆಗೆ (ಮಂಗಳೂರಿನಲ್ಲಿ ಪ್ಲೇಗು ತುಸು ಕಡಿಮೆಯಾದ್ದರಿಂದ) ನಾವು ಕ್ಷೇಮ. ತಮ್ಮ ಕ್ಷೇಮಕ್ಕೆ ಪತ್ರ ಬರೆಯಬೇಕಾಗಿ ಕೇಳಿಕೊಳ್ಳುತ್ತೇನೆ. ಉಭಯ ಕ್ಷೇಮ, ಪರಿ ತರುವಾಯ ನಮಗೆ ಹಿಡಿದ ನಿದ್ರಾರೋಗಕ್ಕೆ ತಾವು ಬರಿಸಿ ಕಳುಹಿಸಿದ ಗುಳಿಗೆಯು ಬಂದು ತಲುಪಿತು. ಪತ್ರಿಕೆಯಲ್ಲಿ ತುಂಬಿಸಲು ಸುದ್ದಿ ಸಮಾಚಾರ ದೊರೆಯದೆ ತಮಗೂ ಮೈಯಲ್ಲಿ ಜಾಡ್ಯ ವಾಗಿದೆ ಎಂದು ಕೇಳಿ ವ್ಯಸನ ಪಡುತ್ತೇನೆ. ನಮ್ಮಂಥಾ ಪಂಡಿತರ ಮಾತ್ರೆಯಿಂದ ತಮಗೂ ತಮ್ಮ ವಾಚಕರಿಗೂ ಗುಣಾಂಶವಾದೀತೋ ಎಂದು ಸಂಶಯವಾಗುತ್ತದೆ.

ಇತಿ ತಮ್ಮ ಕ್ಷೇಮಾಭಿಲಾಷಿ
ಹರಟೆಮಲ್ಲ.

* * * *

ಪುನಶ್ಚ ಒಂದು ಮಾತುಂಟು. ತಮ್ಮ ಪತ್ರಿಕೆಯ ಬಿದ್ದ ಬಾತಮಿದಾರ್ ಮಹನೀಯರು ತಲೆ, ಬಾಲ ನೋಡದೆ ನನ್ನ ಹೆಸರನ್ನು ಬೋಳು ಬಿಟ್ಟಿದ್ದಾರೆ. ಮಹಾರಾಜೇಶ್ರೀ ಮೆಹ ಬರ್ನ್ ಮೊದಲಾದ ಬಿರುದಾವಳಿಯನ್ನು ಜೋಡಿಸದೆ ನಮ್ಮ ಮುನಿಸಿಪಾಲಿಟಿಯು ಅರ್ಜಿದಾರರ ಹೆಸರಗಳನ್ನು ಗಜೇಟಿ ನಲ್ಲಿ ಪ್ರಕಟಮಾಡುವಂತೆ ಬರೆದು ಬಿಟ್ಟಿದ್ದಾರೆ. ಮುನಿಸಿಪಾ ಲಿಟಿಯವರಾದರೂ ತಾರತಮ್ಯ ನೋಡಿದ್ದಾರೆ. ಅರ್ಜಿದಾರರ ತಲೆಗೆ ಮುಂಡಾಸು ಇದ್ದರೆ, ಮುನಿಸಿಪಾಲಿಟಿಯವರು ಆ ಅರ್ಜಿದಾರರಿಗೆ ಮಿಸ್ಟರ್. ಮ. ರಾ. ರಾ. ಮೊದಲಾದ ಅಕ್ಷರ ಗಳಲ್ಲಿ ಅವರ ಹೆಸರುಗಳನ್ನು ಕೆತ್ತಿದ್ದಾರೆ. ಮುಂಡಾಸು ಇಲ್ಲದೆ ಟೊಪ್ಪಿ ಇಡುವಂಥವರ ಹೆಸರುಗಳಿಗೆ–ಚಿನ್ನ ತೊಡಿಸದೆಯೆ ಅವನ್ನು ಬತ್ತಲೆ ಬಿಟ್ಟಿದ್ದಾರೆ. ಇದು ಹೌದೋ ಅಲ್ಲವೋ ಎಂದು ಜಿಲ್ಲಾ ಗಜೇಟನ್ನು ಓದಿ ನೋಡಬಹುದು. ನನ್ನನ್ನು ಬರಿ ಹರಟೆಮಲ್ಲನೆಂದು ಬೋಳಾಗಿ ಬರೆದ, ನಿಮ್ಮ ಬಾತಮಿ ದಾರರು 'ಪೀ.ಎಸ'ರುಎಂಬುದು ನಿಶ್ಚಯವೆಂದು ತಿಳಿದಿದ್ದೇನೆ. ಈ ವಿಷಯವನ್ನು ನಮ್ಮದೇಶಕ್ಕೆ ಚಿತ್ತಯಿಸಿದ ಯುವರಾಜರ ಕಿವಿಗೆ ಹಾಕಬೇಕೆಂದು ಒಂದೆರಡು ದಿವಸ ನೆನಸಿದೆನು. ಆಗ ನಿದ್ದೆಯೇ ಹತ್ತಲಿಲ್ಲ. ಆದರೆ ಯುವರಾಜರು ಈ ದೇಶದವರ ಸತ್ಕಾರವನ್ನು ಪಡೆಯಲು ಬಂದಿರುವರಲ್ಲದೆ ಪ್ರಜೆಗಳ ಚೀತ್ಕಾ ರವನ್ನು ಕೇಳುವುದಕ್ಕಲ್ಲವೆಂದು ಈ ಕಡೆಗೆ ತಿಳಿದುಬಂದಿದೆ. ಮುಂಬಯಿಯಲ್ಲಿ ವ್ಯಾಜ್ಯ ಮಾಡಿ ಮಾಡಿ, ತಲೆ ಒಣಗಿದ ಪುಣ್ಯಾತ್ಮನೊಬ್ಬನು ಯುವರಾಜರೊಡನೆ ಮೊರೆ ಇಡುವುದಕ್ಕೆ ಉಪಾಯ ಕಾಣದೆ, ತನ್ನನಂಬ್ರದ ಕಾಗದಗಳ ಕಟ್ಟನ್ನು ಅವರ ಗಾಡಿಯೊಳಗೆ ಎಸೆದು ಬಿಟ್ಟು, ಬಂಡಿಯ ಮುಂದೆ ಸಾಷ್ಟಾಂಗ ಮಾಡಿದನಂತೆ. ಹೀಗೆ ಮಾಡಿದ್ದೇ ತಕ್ಷೀರೆಂಬುದಾಗಿ, ಇವನು ಸದ್ಯ ನಮ್ಮ ಚಕ್ರವರ್ತಿಯವರ ಆತಿಥ್ಯವನ್ನು ಕಾರಾಗೃಹದಲ್ಲಿ ಪಡೆಯುವ ಸಂಭವವಿದೆ. ಹೀಗಿರಲು ನಮ್ಮಂಥವರು ಅರಸ ರೊಡನೆ ಹಾಲಹವಾಲೆ ಹೇಳಿಕೊಳ್ಳುವ ಬಗೆ ಹ್ಯಾಗೆ? ಅರ ಮನೆಯ ತನಕ ದೂರು–ಎಂಬ ಗಾದೆ ಇದೆ. ಅರಸರು ಏನೂ ಮಾಡ ಬಲ್ಲರೆಂಬುದು ಹಿಂದುಗಳ ಭಾವನೆ. ಆದರೆ ಇಂದಿನ

ರಾಜರುಗಳು ಬಣ್ಣದ ಬೀಸಣಿಗೆ—ಎಂಬುದು ನಮ್ಮ ಮನಸ್ಸಿಗೆ ಹತ್ತುವುದಿಲ್ಲ.

**ಪಾಲಿಸೈಯ್ಯ ಯುವರಾಜ । ಲಾಲಿಸೈಯ್ಯ ದೇವತೇಜ ॥**
**ಆಲಿಸೈಯ್ಯ ಕಲ್ಪಭೂಜ । ಕೇಳು ನಮ್ಮ ಸ್ತೋತ್ರದೋಜ ॥**

ಇದು ಅರಸರನ್ನು ಕುರಿತು ನಾವು ಹಾಡುವ ಹಾಡು. ಪರಂತು ಹೊಸ ರಾಜರು ವಜ್ರಾಯುಧವಿಲ್ಲದ ಇಂದ್ರರಲ್ಲವೇ? ಸ್ವರ್ಗದ ರಾಜರೇ ಹೌದು; ಮಂತ್ರಶಕ್ತಿ ಮಾತ್ರ ಬೃಹಸ್ಪತಿಯ ತಲೆಯಲ್ಲಿ. ತಂತ್ರಶಕ್ತಿ ದಿಕ್ಪಾಲಕರ ಕೈಯಲ್ಲಿ. ನಮ್ಮ ಯುವ ರಾಜರು ಯಾಕೆ ಬಂದಿದ್ದಾರೆಂದು ಗೊತ್ತುಂಟೇ? ನಮ್ಮ ಆಸ್ತಿಯ ಗಡಿಕಲ್ಲು ಸರಿಯುಂಟೋ, ಬತ್ತ ಬೆಳೆ ಚೆನ್ನಾಗಿ ದೆಯೇ, ಒಕ್ಕಲು ಸಕ್ಕಲು ನೆಟ್ಟಗಿದ್ದಾರೊ, ಮುಖ್ಯವಾಗಿ ನೇಗಿಲನ್ನು ಕೋಣಗಳು ಸರಿಯಾಗಿ ಹೊರುತ್ತವೋ, ನೋಡಿ ಕೊಂಡು ಬರಬೇಕೆಂದು ನಮ್ಮ ಎಡ್ವರ್ಡ ಚಕ್ರವರ್ತಿಯವರು ಚೊಚ್ಚಲು ಮಗನನ್ನು ಇಲ್ಲಿಗೆ ಕಳುಹಿಸಿದ್ದಾರೆ. ನಾವು ನಜರು ಕಾಣಿಕೆ ಕೊಡುವ ದಿನ ಹೋಯಿತು; ನಾವು ಬರೀ ಹೆಸರು ವಾಣಿ ಅರ್ಪಿಸುತ್ತೇವೆ. ನಮ್ಮ ಧನಿಯ ಮಗನು ಇದರಿಂದ ತೃಪ್ತರಾಗಲಿ ಎಂದು ನನ್ನ ಆಸೆ. ಆದರೂ ಹರಟೆಮಲ್ಲನ ಈ ಪ್ರಾರ್ಥನೆ ಇರಲಿ!

**ನಿನ್ನೊಕ್ಕಲಿಗನಾಗಿ ಬಾಳ್ವೆ ಚಿರಕಾಲಂ ।**
**ಎನ್ನ ಬದುಕಿಸು, ಪಿಡಿವೆ ನಾನಿನ್ನ ಕಾಲಂ ।**
**ಮನ್ನಿಸುತ ಬೆಳೆಯೊಳಗೆ ಕೊಡು, ಎನ್ನ ಪಾಲಂ ।**
**ಮುನ್ನ ಧನಿ ನಿನ್ನಾಗಿಸಲಿ ಲೋಕಪಾಲಂ ॥**

ಅರಸರು ಬರುವರೆಂದೇ ಬಂಗಾಳದಲ್ಲಿ ಗಲಾಟೆ ಆಗಿದೆ ಎಂದು ಕೇಳುತ್ತೇನೆ. ಅಲ್ಲಿ ಹುಡುಗರೆಲ್ಲಾ ಸ್ವದೇಶಿ ಬಾವಟೆ ಯನ್ನು ಏರಿಸಿ, ವಂದೇ ಮಾತರಂ ಎಂದು ಘೋಷಿಸುತ್ತಾ ರಂತೆ. ಇದನ್ನು ಕೇಳಿ ನನಗೆ ಚಿಂತೆ ಹತ್ತಿದೆ. ನಾನು ಈಗ ಹುಡುಗನಾಗಬಾರದಿತ್ತೆ? ಬಂಗಾಳದವರು, ಸ್ವದೇಶಿಯರು ಪರದೇಶಿಗಳಾಗಿದ್ದಾರೆಂದು ಎಲ್ಲರೂ ಒಪ್ಪುತ್ತಾರೆ. ಇಸ್ಲಾಂ ಸಂದೇಶಿಯರು, ಕ್ರಿಶ್ಚಿಯನ್ ಉಪದೇಶಿಯರು ಸ್ವದೇಶೀ ಯರೊ ಅಲ್ಲವೋ? ನಮ್ಮ ಕನ್ನಡ ಜಿಲ್ಲೆಯಲ್ಲಿ ಹಿಂದುಗಳು ಸ್ವದೇಶಿ ಏರ್ಪಾಡನ್ನು ಬಂಗಾಲದವರಿಗಿಂತಲೂ ಮೊದಲೇ ಕೈಕೊಂಡು ಪೂರಯಿಸಿದರು. ಈ ಜಿಲ್ಲೆಯಲ್ಲಿಯೂ ಮುಸ ಲ್ಮಾನರೂ ಕ್ರೈಸ್ತರೂ ಈ ವಿಷಯದಲ್ಲಿ ದಡದ ಮೇಲಿನ ಮರ ಗಳಂತೆ ತಟಸ್ಥರಾದರು. ನಮ್ಮ ಜಿಲ್ಲೆಯ ಹಿಂದುಗಳು ವಿಲಾ ಯಿತಿಯಿಂದ ಬಂದವರನ್ನು ತೆಗೆದುಕೊಳ್ಳಬಾರದೆಂದು ಬಹಿ ಷ್ಕಾರ ಹಾಕಿ ಎಷ್ಟೋ ವರ್ಷಗಳಾದುವು. ಆದ್ದರಿಂದ ಇಲ್ಲಿ ಸ್ವದೇಶಿ ಏರ್ಪಾಡಿನ ಗುಲ್ಲು ಗಲಭೆ ಈಗ ಕೇಳುವುದಿಲ್ಲ. ಹೀಗೆಲ್ಲಾ ಬೊಬ್ಬಿಟ್ಟು, ಮುಂದೆ ಬರಿ ಗುಲ್ಲು ನಿದ್ದೆಗೇಡು ಎಂದಾದರೆ ಎಲ್ಲವೂ ವ್ಯರ್ಥವಾಯಿತು. ಹಿಂದುವಿಗೆ ಇಂಗ್ಲಿಷ್ ಕುದುರೆಗೆ ಕೊಂಬು ಕೊಡುವುದೂ ಸರಿಯೆಂದು ಕೆಲವರ ಅಭಿಪ್ರಾಯ. ಮುಂದೆ ಸರಕಾರದವರು ಈ ವಿಷಯದಲ್ಲಿ ಎಚ್ಚರವಾಗಿಯೆ ಇದ್ದಾರು. ಅವರ ಹಾಡೇ ಬೇರೆಯಾಗಿದೆ.

**ರಾಗ—ನಾದನಾಮಕ್ರಿಯೆ—ಆದಿತಾಳ**

**ಅರಸನ ಗುಲಾಮನಾಗುವ ತನಕಾ । ದೊರೆಯದಣ್ಣ ಶಕುತಿ ॥**
**ಪರಿ ಪರಿ ಅನೇಕ ಶಾಸ್ತ್ರವನೋದಿ । ಬರಿದೆ ರಾಜ ಭಕುತಿ ॥**

ಸರಕಾರದವರು ಸಾಲೆಯ ಕೊರಳನ್ನು ಹಿಸುಕಿ ಬಿಟ್ಟರೆ ಮಕ್ಕಳಿಗೆ ಏನು ಗತಿ? ಲೇಖನಿ ಬಿಟ್ಟು ದರ್ಭೆ ಹಿಡಿಯ ಬೇಕು. ಪುಸ್ತಕ ಬಿಟ್ಟು ನೇಗಿಲು ಕೊಳ್ಳಬೇಕು. ಆಗ ತಾನೇ ನಾವು ಆರ್ಯರ ಸಂತತಿಯವರು ಎಂಬದು ಸಿದ್ಧವಾಯಿತು. ಈಗ ಕೃಷಿ ಮಾಡಲಿಕ್ಕೆ ಅನುಕೂಲವಿದೆ. ಜಿಲ್ಲೆ ಜಿಲ್ಲೆಗಳಲ್ಲಿ ಕೃಷಿ ಸಂಘಗಳು ಎದ್ದಿವೆ. ನಮ್ಮ ಊರಿನ ಸಂಘದ ಮನೆಯ ಹೆಸರಿನಲ್ಲಿ ಸ್ವಲ್ಪ ಅಪಶಕುನವಿದೆ "ವ್ಯವಸಾಯ ಸಂಘಾ ಲಯ". ಇಂಗ್ಲೀಷು ಬಿಟ್ಟು ಗದ್ದೆ ಹೂಡಲುಕಲಿತರೆ, ನಮ್ಮ ಮಕ್ಕಳು ಮುಂದೆ ಹಾಡುವ ಗೀತವು ಕೆಳಗಿದೆ.

**ರಾಗ—ಕಲ್ಯಾಣಿ—ಅಷ್ಟತಾಳ**

**ಏನನುಸುರುವೆನು—ಆಂಗ್ಲೇಯರಿಗೆ ಅ—**
**ಧೀನವಾದುದನು ॥**
**ನಾನು ತಾನೆಂದೆಂಬ ಮನದಭಿ । ಮಾನವೆಲ್ಲವು ಕಳೆದು ಹೃದಯದ**
**ಜ್ಞಾನವಿತ್ತ ಮಹಾನುಭಾವನ । ಭೂನಿವಾಸ ಕರುಣದೊಲವನು**
**॥ ಪಲ್ಲವಿ ॥**
**ವ್ಯಾಕುಲಂಗಳನು—ಗೆಲಿದು ಸುವಿ—**
**ವೇಕದಿಂದನು ॥**
**ಲೋಕವೆರಡರ ಸುಖವನೊಲ್ಲದೆ । ಕಾಕು ಮನುಜರ ಗೊಡವೆ ಇಲ್ಲದೆ**
**ಮೂಕ ಸಕ್ಕರೆ ತಿಂದ ಪೋಲ್ ಏ । ಕಾಕಿಯಾಗಿ ಚರಿಪ ಸುಖ ವನು ॥**

ಸ್ವಾಮಿ, ನಮ್ಮ ಪತ್ರದ ಮೋರೆ ಸಣ್ಣದು; ಬಾಲ ದೊಡ್ಡದು. ಕ್ಷಮೆ ಇರಲಿ.

---

೪.

ಸ್ವಾಮಿಾ, ಸತ್ಯವಾದಿಗಳೇ!

ನನ್ನ ಮಾತಿಗೆ ತಲೆ ಬಾಲವಿಲ್ಲ. ಮಾತಿಗೆ ತಲೆ ಇದ್ದರೂ ಅದನ್ನು ನೀವು ತಿಂದು ಬಾಲ ಮಾತ್ರ ಹಾಕುತ್ತೀರಿ. ಹಿಂದಿನ ಸಂಚಿಕೆಯಲ್ಲಿ ನನ್ನ ಮಾತಿನ ತಲೆ ಬೋಳಿಸಿ ಮುಂಡವನ್ನು ತೋರಿಸಿ ಬಿಟ್ಟಿದ್ದೀರಿ. ಈ ಅನ್ಯಾಯದಿಂದ ನನಗೆ ಇದ್ದ ಮರ್ಯಾದೆ ಕೂಡಾ ಬಿದ್ದುಹೋಗಿದೆ. ಹೀಗಾಗುವುದರಿಂ ದಲೇ ರಾ. ಪಿ ಎಸರು ನನಗೆ ಪಿತ್ತೋದ್ರೇಕವೆಂದು ಹೇಳಲು ಕಾರಣವಾಯಿತು. ಈ ಪಿತ್ತೋದ್ರೇಕಕ್ಕೆ ಮದ್ದು ಯಾವ ದೆಂದು ವಿಚಾರಿಸಿದೆನು. ಕಸಬರಿಗೆಯನ್ನು ಹಿಡಿದುಕೊಳ್ಳ

ಬೇಕೆಂದು ಡಾಕ್ತರರ ಅಭಿಪ್ರಾಯ. ಆಲಸ್ಯರೋಗಕ್ಕೆ ಚೆಂಡಾಟವೇ ಮದ್ದೆಂದು. ಹಿಂದೆ ಯಾರೋ ಚಿಕಿತ್ಸೆ ಮಾಡಿದರೂ ನನ್ನ ಪಿತ್ತೋದ್ರೇಕಕ್ಕೆ ಗೃಹಚಾಮರ ಧಾರಣವೇ ಔಷಧವೆಂದು ಹೇಳಿದ ಮಾತು ಸತ್ಯವಾಗಬಹುದೇ? ಕಸಬರಿಗೆಯ ಅವಸ್ಥೆಯನ್ನು ನೋಡಲಿಕ್ಕೆ ಬೇಸರವಾಗಿದೆ. ಅಯ್ಯೊ! ಕಸಬರಿಗೆಯೆ! ನಿನ್ನ ಅವಸ್ಥೆಯನ್ನು ಏನು ವರ್ಣಿಸಲಿ. ಹೇಸಮ್ಮಾರ್ಜನಿ! ಪೂರ್ವದಲ್ಲಿ ನೀನು ಕಲ್ಪವೃಕ್ಷದ ಶಿರಸ್ಸಿನ ಮೇಲೆ ಕೂತುಕೊಂಡಿದ್ದೆ. ಈಗ ನನ್ನ ಸ್ವಜಾತಿ ಬಾಂಧವರಂತೆ ಮೂಲೆಯ ಪಾಲಾದೆಯಲ್ಲ.! ನಿನ್ನ ಅಭಿವೃದ್ಧಿಗೆ ಇದ್ದ ರಸ, ನಿನ್ನ ಆಧಾರಕ್ಕೆ ಇದ್ದ ಗೆಲ್ಲು, ನಿನ್ನ ಅಲಂಕಾರಕ್ಕೆ ಇದ್ದ ಎಲೆ-ಇವೆಲ್ಲಾ ನಿನ್ನಿಂದ ದೂರವಾದವಲ್ಲಾ! ಅಯ್ಯೋ, ನಿನ್ನ ಹಣೆ ಬರಹವೇ;ಹಾಳು ಮೂಳಿಯ ಕೈಗೆ ಬಿದ್ದು ಇದ್ದವರ ಎಂಜಲು ಗುಡಿಸುವ ಗತಿಯಾಯಿತೇ? ಬೇರೆಯವರ ಮುಸುರೆಯನ್ನು ಗುಡಿಸಿ, ನಿನ್ನ ಮೋರೆ ಮುಸುರೆಯಾಗುವದಲ್ಲೇ? ಹೆಂಗಸಿನ ಅಡಿಗೆ ಮನೆಯಲ್ಲಿ ಬೆಂಕಿ ಹೊತ್ತಿಸಲಿಕ್ಕೆ ನೀನಾದೆ. ಸಾಕಷ್ಟು ಉದ್ದವಿದ್ದರೆ ಕಸ ಗುಡಿಸುವೆ. ಸವೆದು ಹೋದರೆ ಕಸಕೊಳ್ಳುವಷ್ಟು ಶಕ್ತಿ ಸಹ ನಿನ್ನಲ್ಲಿಲ್ಲ. ಕಡ್ಡಿಗಳೇ! ಒಟ್ಟಿಗೆ ಇರಿ. ಬಿಡಿಯಾಗ ಬೇಡಿರಿ. ಕಟ್ಟು ಬಿಚ್ಚಿದರೆ ಯಾರಿಗೆ ಯಾರಿಲ್ಲ: ಕಟ್ಟಿನಲ್ಲೇ ನಿಲ್ಲಿರಿ! ಹಾಗಿದ್ದರೆ ಯಾರಾದರೂ ನಿಮ್ಮನ್ನು ಕೈಕೊಂಡು ಹಗೆಯ ಮೇಲೆ ಆಯುಧವನ್ನಾಗಿ ಹಿಡಿಯಬಹುದು. ಕಟ್ಟು ಕಡಿದರೆ, ಬಿಟ್ಟುಬಿಡಿರಿ-ಎಂಬ ಮಾತಲ್ಲದೆ ಮತ್ತೇನೂ ಉಳಿಯದು. ಕಲ್ಪವೃಕ್ಷದಲ್ಲಿ ಹುಟ್ಟಿದ ನೀನು, ಈಗ ಮರದ ಹಾಗೆ ನಿಲ್ಲಲಾರದೆ ತಲೆ ಕೆಳಗೆ ಮಾಡಿ ನಿಂತು ಬಿಟ್ಟಿದ್ದೀಯೆ? ಮನೆ ಚೌರಿಯೇ, ನೀನು ಯಾವ ಜಾತಿಯಲ್ಲಿ ಹುಟ್ಟಿದೆ? ಕುಜಾತಿವೃಂದದಲ್ಲಿಯೇ? ನಿನ್ನಂತೆಯೇ ನಮ್ಮ ಜಾತಿ ಸುಧಾರಕರು.

ಕಸಬರಿಗೆಯಂತೆ ತಲೆ ಕೆಳಗೆ ಮಾಡಿ ನಿಂದು ।
ಹುಸಿ ಹಸಿವುಗಳ ಜಾತಿಯಿಂ ತೆಗೆವೆವೆಂದು ।
ಉಸುರಿ ಕೆಲವರು ಮೂಲೆಯನು ಗುಡಿಸಲೆಂದು ।
ಕಸ ಎದ್ದು ಕೋಣೆ ತುಂಬಿತು ಧೂಳು ಬಂದು ॥

ಇಂಥಾ ಅವಸ್ಥೆ ನಮ್ಮ ಬ್ರಾಹ್ಮಣರಿಗೆ ಬಂದಿದೆ.ಸ್ವಾಮಿ, ಇತ್ತಲಾಗಿ ನನ್ನ ಸ್ನೇಹಿತನೊಬ್ಬನನ್ನು ಕಂಡೆ. ಅವನು ಕನ್ನಡಿಗನಲ್ಲ. ಅವನ ಮಾತಿನಲ್ಲಿ ಕೊಂಕಣಿಯೆ ಜಾಸ್ತಿ; ಕನ್ನಡ ನಾಸ್ತಿ. ಆದರೂ ಕನ್ನಡ ಬಲ್ಲನು. ಜಾತಿ ಏನೆಂದು ಕೇಳಿದೆ-ವಿಜಾತಿ. ಮತ ಯಾವುದು? ಹಿಕ್ಕುಮತ, ಕರಾಮತ, ಮಲಾಮತ. ಉತ್ತರಗಳನ್ನು ಇದ್ದ ಹಾಗೆಯೆ ತಮಗೆ ಹೇಳಿಬಿಟ್ಟಿದ್ದೇನೆ. ತಪ್ಪಿದರೆ ನಮ್ಮ ಪ್ರೇಮಾನುಬಂಧಿ ರಾ. ಎಸ್. ಇ. ಅಯ್ಯರು ಕ್ಷಮಿಸಬೇಕು. ರಾ. ಪಿ. ಎಸ್‌ರಿಗೆ ಪಿತ್ತೋದ್ರೇಕವೆಂದು ಬರೆಯಲಿಕ್ಕೆಹ್ಯಾಗೆ ತಿಳಿಯಿತು? ನಿಜವಾಗಿ ಪಿತ್ತೋದ್ರೇಕ. ನನ್ನ ಮಿದುಳಿನ ಎಳೆಗಳು ನೆಟ್ಟಗಾಗಿಲ್ಲ; ಮನಸ್ಸಿನಲ್ಲಿ ಹಾಸುಹೊಕ್ಕು ಸರಿಯಾಗಿ ಇರಬೇಕು. ಒಂದು ನೂಲು ಮುರಿಯಿತೆಂದರೆ ವ್ಯಾಪಾರವೆಲ್ಲಾ ಕೆಟ್ಟುಹೋಗುತ್ತದೆ. ಮೂಢ ಪ್ರೌಢ ಎಂಬ ಭೇದಕ್ಕೆ ಇದೇ ಕಾರಣ. ನನಗೂ ರಾ. ಪಿ. ಎಸ್‌ರಿಗೂ ಇದೇ ತಾರತಮ್ಯ. ಇಬ್ಬರಿಗೂ ಮಾತು ಹೆಚ್ಚು. ಯಾಕೆಂದರೆ ಮನಸ್ಸು ಟೊಳ್ಳು. ತಲೆ ತುಂಬಾ ಅರಿವು ಇದ್ದರೆ ಬಾಯಿಂದ ಮಾತುಗಳ ಸಾಲುಗಳು ಹೊರಡಲಾರವು. ಆಳವಿಲ್ಲದ ಹೊಳೆಯಿಂದ ನೀರು ಇಳಿಯುವುದು ಬೇಗ.

* * * *

“ಅಪ್ಪಣೆ ಇಲ್ಲದೆ ಯಾರೂ ಒಳಗೆ ಬರಕೂಡದು” ಎಂದು ಬರೆದು ಹಲಗೆಯನ್ನು ಮುಂಗಡೆಯಲ್ಲಿ ತೂಗಹಾಕಿದರೆ, ಯಾರಾದರೂ ಒಳಗೆ ಬರಬಹುದೇ? ತೇರು ಬೀದಿಯಲ್ಲಿ ಒಂದು ಮನೆಯ ಮುಂಗಡೆ ಹೀಗೆಯೇ ಬರೆದಿದ್ದರು. ಆದರೂ ಪ್ಲೇಗ್ ಜ್ವರವು ಒಳಗೆ ಬಂದಿತು. ಜನಗಳು ಮಾತ್ರ ಬರಲಿಲ್ಲ. ಇದರ ದೆಸೆಯಿಂದ ಅಲ್ಲಿರುವ ಜನಗಳೆಲ್ಲಾ ಆ ಬೀದಿ ಬಿಟ್ಟು, ಮತ್ತೊಂದು ಹಾದಿ ಹಿಡಿಯಬೇಕೆಂದು ಹುಕುಂ ಆಗಿದೆ. ಮನೆಬಿಟ್ಟು ಹೋಗುವವರ ಗೋಳು ಏನೆಂಬೋದು?

ರಾಗ - ಪಂತುವರಾಳಿ— ಏಕತಾಳ

ಮಾಡು ಸಿಕ್ಕದಲ್ಲಾ — ಮಾಡಿನ
ಗೂಡು ಸಿಕ್ಕದಲ್ಲಾ ॥
ಜೋಡು ಗುಳ್ಳೆ ಎದ್ದು ಓಡಿ ಹೋಗುವಾಗ
ಗೋಡೆ ಕನ್ನ ಬೀಳೆ ಹೋಯಿತಲ್ಲಾ ॥
ಎಚ್ಚರುಗೊಳ್ಳಲಿಲ್ಲಾ — ಮನವೇ
ಹುಚ್ಚನಾದೆನಲ್ಲಾ ॥
ಮುಚ್ಚು ಮರೆಯು ಅಚ್ಚು ಮೆಚ್ಚಿನ ಮನೆ
ಕಿಚ್ಚಿದ್ದು ಹೋಯಿತಲ್ಲಾ ॥
ರೋಗವು ಬಂತಲ್ಲಾ — ಬದುಕು ವಿ
ಭಾಗವಾಯಿತಲ್ಲಾ ॥
ಭೋಗಶಯನ ಶ್ರಿ ಸಂಪತ್ ಸುಖವೀ
ರೋಗಕ್ಕೆ ಮದ್ದಿಲ್ಲಾ ॥

* * * *

ಹೊಸ ಗವರ್ನರರಾದ ಲೋಲಿ ಪ್ರಭುಗಳು ಮದ್ರಾಸಿಗೆ ಚಿತ್ತಯಿಸಿ ತಮ್ಮ ಸ್ಥಾನದಲ್ಲಿ ಆಸೀನರಾದರೆಂದು ಕೇಳುತ್ತೇನೆ. ಪತ್ರಿಕೆಯ ಪಕ್ಷವಾಗಿ ನಾನು ಅವರಿಗೆ ದೂರದಿಂದಲೆ ಸಲಾಂ ಅನ್ನುತ್ತೇನೆ. ಲೋಲಿ ಪ್ರಭುಗಳು ನನ್ನ ಒಂದು ಮಾತನ್ನು ಮರೆಯಬಾರದು. ಆಫ್ರಿಕದ ಸಿಂಹಗಳನ್ನು ಶಿಕಾರಿ ಮಾಡಿ ಅಭ್ಯಾಸವಿದ್ದವರಿಗೆ ಹಿಂದುಸ್ತಾನದ ಜನಗಳ ಸ್ಥಿತಿ ತಿಳಿಯಲಾರದು; ಅದೇ ಬೇರೆ — ಹೀಗಿದ್ದರೂ ಸ್ವತಂತ್ರ ಬೇಕೆಂದು ಸಾಧನೆಮಾಡುವರು. ತಂತ್ರ ನಡಿಸುವದು ಸ್ವತಂತ್ರ

ವಲ್ಲ. ಸ್ವಾತಂತ್ರ್ಯವನ್ನು ಪಡೆಯಬೇಕೆಂದಿರುವವರಿಗೆ—

ಲಕ್ಷ್ಯಾರ್ಥದಲಿ ಮನ ಹೊಂದಿರ ಬೇಕು ।
ಅಕ್ಷಿ ಎರಡು ಸಮ ನಿಂದಿರಬೇಕು;
ಸೂಕ್ಷ್ಮ ಗ್ರಹಣೆಗೆ ತಂದಿರ ಬೇಕು;
ಆ ಕ್ಷೋಣಿಪತಿ ಗತಿಯೆಂದಿರಬೇಕು.

ಇಂಥವರು ಎಷ್ಟೋ ಮಂದಿ ಇದ್ದಾರೆ. ಜಾತಿ ಜನರಿಗೆ ಸರಿ ಇಲ್ಲ ಬಗೆ. 'ಜಾತಿ ಜಾತಿಯೊಳಗೆ ಜನಕೆಲ್ಲಾ ಹಗೆ; ಹೆರರಿಗಿದು ನಗೆ; ನಮಗಿದು ದಗೆ.

---

೫.

ಪತ್ರರಂಜಿತ ಕುಂಜವಿಹಾರಿಗಳೇ, ಘನ ಲಾಥಿ ದೊರೆಗಳೇ!

ತಮ್ಮ ಪತ್ರಿಕೆಯ ಕಳೆದ ಸಂಚಿಕೆಯು ನನಗೆ ಈ ವರೆಗೆ ಮುಟ್ಟಿಲ್ಲ! ತಾವುಗಳು ಇಲ್ಲಿನ ಸೆಕೆ ತಾಳಲಾರದೆ ಕುದುರೆಮುಖಕ್ಕೆ ನಡೆದಿದ್ದೀರೆಂದು ಕೇಳುತ್ತೇನೆ. ನನ್ನಲ್ಲಿ ಬರುವ ಸಂಚಿಕೆಯೂ ತಮ್ಮ ಬೆನ್ನ ಹಿಂದೆಯೇ ಗುಡ್ಡ ಹತ್ತಿತೋ ಎಂದು ಸಂಶಯಪಡುತ್ತೇನೆ. ಸಂಚಿಕೆಯು ತಲಪದಿದ್ದರೆ ನಿಮ್ಮ ಹಾಗೆಯೇ ನಾನೂ ನನ್ನ ಮುಖವನ್ನು ಕುದುರೆಮುಖಕ್ಕೆ ತಿರುಗಿಸುತ್ತೇನೆಂದು ಆಲೋಚನೆ ಮಾಡಿದ್ದೇನೆ. ಹಾಗೆ ಮಾಡುವುದಕ್ಕೆ ಈಗ ಖರ್ಚು ಜಾಸ್ತಿ ಇಲ್ಲ. ಮೂರು ರೂಪಾಯಿಗೆ ಬಂಡಿ ಸಿಕ್ಕುತ್ತದೆ. ರಾ. ಫಾಲಂಜಿಯವರು ಮಂಗಳೂರಿನಿಂದ ಮೂಡುಗೆರೆಯ ತನಕ ಟಪ್ಪಾಲ ಬಂಡಿ ಓಡಿಸಲು ಕಂಟ್ರಾಕ್ಟು ತೆಗೆದುಕೊಂಡಿದ್ದಾರೆ. ಇನ್ನೂ ಕೈಯಲ್ಲಿ ಆರು ರೂಪಾಯಿ ಇದ್ದರೆ, ನಮ್ಮ ಮಂಗಳೂರಿನಿಂದ ಚಿಕ್ಕಮಂಗಳೂರ ತನಕ ಕುದುರೆಬಂಡಿ ಓಡಿಸಬಹುದು. ನಮ್ಮ ದೊಡ್ಡಮನೆ ಸ್ಥೂಲಾಂಗರಾಯರ ಮೈಯು ವೈಶಾಖದ ಬಿಸಿಲನ್ನು ತಾಳಲಾರದೆ, ಪದೇಪದೇ ಕಂಡಾಬಟ್ಟೆ ಕಣ್ಣೀರು ಸುರಿಸುತ್ತಿತ್ತು. ಅವರನ್ನು ಕಂಡಾಗ ಎದೆ ಕರಗುತ್ತಿತ್ತು. ಈ ಹೃದಯಾರ್ದ್ರವಾದ ಅವಸ್ಥೆಯನ್ನು ನೋಡಿ "ರಾಯ್ರೆ, ತಾವು ಕುದುರೆಮುಖಕ್ಕೆ ನಡೆಯಬಾರದೇ" ಎಂದು ಸೂಚಿಸಿದೆನು. ಸ್ಥೂಲಾಂಗರಾಯರು ಸಾಂಗವಾಗಿ ಸಮ್ಮತಿಸದೆ— "ಅಯ್ಯಾ, ಹುಟ್ಟಿದ ಊರಲ್ಲೇ ಸಾಯಬೇಕೆಂದು ನನ್ನ ಆಸೆ." ಅಂದರೆ ಪ್ರತ್ಯುತ್ತರವಾಗಿ, ಕೆಳಗೆ ಬರೆದ ಸರಕಾರಿ ನೋಟೀಸನ್ನು ಓದಿ ಹೇಳಿದೆನು.

"ಎರಡನೇ ನೋಟೀಸು ಕೊಡುವ ಪರಿಯಂತ್ರ ಮಂಗಳೂರು ಡಿಪೋವಿನಲ್ಲಿ ಆಗುವ ಕಟ್ಟಿಗೆಯ ಮಾರಾಟವು ಒಂದು ದಿವಸಕ್ಕೆ ೩ಟನ್ನಿಗೆ ಮೀರಕೂಡದೆಂತ ನಿಶ್ಚಯಿಸಿರುತ್ತದೆ, ಮತ್ತು ಒಬ್ಬನಿಗೆ ಒಂದು ಸರ್ತಿ ೧ ತಲೆಹೊರೆಯಾನೆ ೨ ಮಣಕ್ಕಿಂತ ಹೆಚ್ಚಿಗೆ ಕಟ್ಟಿಗೆ ಕೊಡೋಣಾಗಲಿಕ್ಕಿಲ್ಲ. ಕ್ರಯವು ೧ ತಲೆಹೊರೆಗೆ ೩ಆಣೆಯಾಗಿರುವುದು.

ನಾನು ನೋಟೀಸನ್ನು ಓದಿ ಹೇಳಿದ್ದು ರಾಯರ ಮನಸ್ಸಿಗೆ ಸೇರಲಿಲ್ಲ. ಕಟ್ಟಿಗೆ ಅಗ್ಗವಾದ್ದರಿಂದ ಸಾಯಬೇಕೆಂದಿರುವವರು ಈಗಲೆ ಗಂಟುಕಟ್ಟುವುದು ಲೇಸು ಎಂದು ನಾನು ಹೇಳದಿದ್ದರೂ, ಅದನ್ನು ತಿಳಿಯದಷ್ಟು ಅವರ ಬುದ್ಧಿಯು ಸ್ಥೂಲವಾಗಿರಲಿ.

* * * *

ಸ್ವಾಮಿ! ಎಡಿಟರರೇ! ನಮ್ಮ ಊರಲ್ಲಿ 'ಸರಕಸ್' ಬಂದಿದೆ; ಇದರ ನಿಷ್ಪತ್ತಿಯನ್ನು ಹೇಳಬಹುದೇ? ಅದು ಮುಂದರಿಸು ಎಂಬ ಅರ್ಥವಿರುವ ಸರಕಿಸು ಎಂಬ ಕನ್ನಡ ಶಬ್ದದಿಂದ ಹುಟ್ಟಿರಬಹುದೇ? ಇದು ಗಜರಗಳೆಯೋ ನಾಯಿರಗಳೆಯೋ. ಗಜರಗಳೆ ಶುದ್ಧವೋ, ಗಜರಗಳು ಶುದ್ಧವೋ ಎಂಬುದನ್ನು ತೀರ್ಮಾನಿಸಬೇಕು. 'ಸರಕಸ್' ಆಟದವರು ಒಂದೆಡೆಯಿಂದ ಮತ್ತೊಂದೆಡೆಗೆ ಸರಕಿಸುತ್ತಲೇ ಇರುವದರಿಂದ ಈ ಹೆಸರು ಅನ್ವರ್ಥವಾಗಿರಬಹುದು. ಆಟದ ಮೃಗಗಳನ್ನು ಕಂಡಾಗ ನನಗೆ ನನ್ನ ಪೂರ್ವಜರನ್ನು ಕಂಡಂತಾಯಿತು. ಕರಡಿ ಹುಲಿಗಳು ಬಾಯಿ ತೆರೆದಾಗ, ಅಫೀಮು ತಿಂದು ಯೋಗಾರೂಢರಾದ ನಮ್ಮ ಪುರಾತನ ಬೈರಾಗಿಗಳಂತೆ ತೋರುತ್ತಿದ್ದುವು. ನಾಯಿ ಕುದುರೆಗಳು ನಮ್ಮ ಹಾಗೆಯೇ ಸ್ವತಂತ್ರ ತಪ್ಪಿ ಅತಂತ್ರವಾಗಿದ್ದವು. ಇವುಗಳಿಗೆ ಹೊಟ್ಟೆಗೆ ಸರಿಯಾಗಿ ಬೀಳದಿದ್ದರೂ ಬೆನ್ನಿಗೆ ಸರಿಯಾಗಿ ಬೀಳುತ್ತಿತ್ತು. ಈ ಆಟ ನೋಡಲಿಕ್ಕೆ ನಮ್ಮ ಹೊಳೆಹಳ್ಳಿ ಸಂತಾನ ಗೋಪಾಲ ಶೆಟ್ಟರು ಎರಡು ಚಕ್ರ ಹಿಡಿದುಕೊಂಡು, ಎರಡು ಡಜನ್ ಮಕ್ಕಳೊಡನೆ ಬಂದಿದ್ದರು. ಟಿಕೇಟಿನವನು ಎರಡು ಚಕ್ರಕ್ಕೆ ಶೆಟ್ಟರನ್ನು ಒಳಗೆ ಬಿಟ್ಟನು. ಅವನ ದುಡ್ಡಿನ ಮೋರೆ ನೋಡದೆ ಹೊರಗಿದ್ದ ಮಕ್ಕಳ ಮೋರೆಯನ್ನೇ ನೋಡುತ್ತಿದ್ದರು. ಆಟ ಪ್ರಾರಂಭವಾಗುವಾಗ ಶೆಟ್ಟರು—"ಹುಲಿ ಬಂತೋ! ಹುಲಿ ಬಂತೋ! ಅಯ್ಯಯ್ಯೋ . . ."ಎಂದು ಬೊಬ್ಬಿಟ್ಟರು. ಹೊರಗಿದ್ದ ಮಕ್ಕಳು ದಿಗಿಲುಬಿದ್ದಂತಾಗಿ ಪಿತೃವ್ಯಾಮೋಹದಿಂದ ಯಾರನ್ನೂ ಗಣಿಸದೆಯೆ ಒಳಗೆ ನುಗ್ಗಿ ಕಾಸು ಕೊಡದೆ ಆಟ ನೋಡಿದರು. ಹುಲಿ ಬಂತು ಎಂದು ಚೇಷ್ಟೆಗೆ ಆಡಿದ ಸತ್ಯವು ಮಕ್ಕಳ ಪ್ರಯೋಜನಕ್ಕೆ ಬಿತ್ತು. ಧರ್ಮಕ್ಕೆ ನೋಡಿದ ಆಟ ಒಳ್ಳೇದೇ ಸರಿ. ಆದರೆ ಗುಡಾರದ ಅರಿವೆಗೆ ತುಂಬಾ ತೂತುಗಳು. 'ಥೋಬಾ ಥೋಬಾ!' ಪರರ ಗೃಹಛಿದ್ರವನ್ನು ನಾವು ಯಾಕೆ ಆಡಬೇಕು? ಆಟ ಆಡಿದ ಪ್ರಾಣಿಗಳಿಗೆ ಆಯಾಸ, ಆಟ ನೋಡಿದ ಪ್ರಾಣಿಗಳಿಗೆ ವಿಲಾಸ, ಆಟ ಮಾಡಿದ ಪ್ರಾಣಿಗಳಿಗೆ ಸಲೀಸ. ಈ ಸರಕಸಿನಲ್ಲಿ ಇಲಿಯಾಟ ಮಾತ್ರ ಇಲ್ಲ. ಈ ಆಟವನ್ನು ನಮ್ಮ ಮುನಿಸಿಪಾಲಿಟಿಯವರು ಆಡಿಸುತ್ತಿದ್ದಾರೆ. ನಮ್ಮ ಪ್ಲೇಗ್ ಇನ್ಸ್ಪೆಕ್ಟರರು ರೊಟ್ಟಿಯ

ತುಂಡುಗಳನ್ನು ಮನೆ ಮನೆಯಲ್ಲಿಟ್ಟು ಇಲಿಗಳಿಂದ ಲಾಗಾ ಹಾಕಿಸುತ್ತಿದ್ದಾರೆ.

ರಾಗ—ಶಂಕರಾಭರಣ ॥ ಅಟ್ಟತಾಳ.

ಕೊಲ್ಲಿರೋ—ಹಾವಳಿಗೊಂಬ ಇಲಿಗಳು
ಕೊಲ್ಲಿರೋ ॥ ಪಲ್ಲ ॥
ಕೊಲ್ಲಿರೋ ಇಲಿಗಳನೀಗ—ಮನೆ
ಯಲ್ಲಿ ರೊಟ್ಟಿಯನಿಟ್ಟು ಬೇಗ—ಇಲ್ಲಿ
ಚೆಲ್ಲಿ ಬಿತ್ತುವದಿಲ್ಲಿ ರೋಗ ॥ ಅಹಾ ॥
ಕಲೆಕ್ಟರನ ಮಾತಲ್ಲಗಳೆಯದೆ, ನೀಂ
ನಿಲ್ಲದೋಡುತ ನಮ್ಮ ತಲ್ಲಣಿಪಿಲಿಗಳ ॥
ಬಡ ಇಲಿ ತಲೆಗೆ ಪಾವಾಣೆ—ನೀನು
ದುಡಿಯದೆ; ಇಲಿಗಳ ಕಾಣೆ—ಎಂದು
ನುಡಿಯಲು ಬೇಡ ನನ್ನಾಣೆ ॥ ಅಹಾ ॥
ಸುಡುಮನೆ ಬಿದಿರನು ಪಡೆವಂತೆ, ಮುನಿಸಿಪಾಲ್,
ಕಡೆಯಿಂದ ಸಿಗುವಂಥ ದುಡ್ಡು ದುಗ್ಗಾಣಿ ಬಿಡದಿರು ॥
[ಸಂಧಿ ದೋಷವಿದೆ; ಸೂಜ್ಞರು ಮನ್ನಿಸಬೇಕು.]

ಇಲಿಗಳ ಬಾಲಗಳನ್ನು ನಮ್ಮ ಅಸಿಸ್ಟಾಂತ ಸರ್ಜನರ ಸಮಕ್ಷಮ ಕತ್ತರಿಸಬೇಕಂತೆ. ಇಲಿಗಳ ಬಾಲವನ್ನು ಕತ್ತರಿಸುವದರಲ್ಲಿ ವಿಶೇಷ ಶಸ್ತ್ರಪ್ರಯೋಗವೇನಿದೆ? ಬಹುಶಃ ನಮ್ಮ ಅಸಿಸ್ಟಾಂತರು ಈ ಪರೀಕ್ಷೆಯನ್ನು ತೇರಿದ್ದಾರೆಂದು ನಂಬುತ್ತೇನೆ.

---

೬.

ಅಯ್ಯಾ, ಸಮಾಚಾರ ಸಾಮ್ರಾಜ್ಯ ಭೂಪತಿಗಳೇ!

ನನಗೆ ಬುದ್ಧಿ ಸ್ತಿಮಿತವಾಗಿದೆ. ತಮ್ಮ ನಸು ದರ್ಶನ ವಾಗದೆ ಬುದ್ಧಿ ವೈಕಲ್ಯವಾಗಿದೆ. ಸಂಸಾರದಲ್ಲಿ ಸಾರವುಂಟೇ ಇಲ್ಲವೇ. ಇದಕ್ಕೆ ಉತ್ತರವನ್ನು ಸರಿಯಾಗಿ ಕೊಡಲಾರಿರಿ. ಸಂಸಾರದಲ್ಲಿ ಸಾರವುಂಟೆಂದರೂ ತಪ್ಪು. ಸಾರವಿಲ್ಲವೆಂದರೂ ತಪ್ಪು.

ನರರ ಲೋಕದೊಳಗೆ ಪುಟ್ಟಿ।
ನರಕ ಪಾತ್ರನಾಗಿ ಬದುಕಿ।
ದುರಿತ ಪಂಜರದೊಳಗೆ ಸಿಲುಕಿ।

ಮುಂದಿನ ಸೊಲ್ಲು ಬರೋದಿಲ್ಲ. ಹುಚ್ಚು ಹಾಡು! ನರಕ ಪಾತ್ರನಾದರೂ ಸಾಯಲೇ ಬೇಕು. ಹಗಲಿದ್ದರೆ ಇರುಳುಂಟು. ಹುಟ್ಟು ಇದ್ದರೆ ಸಾವುಂಟು. ಮನುಷ್ಯನ ಬದುಕ ಬೇಕೆಂಬ ಆಸೆ. ಮನುಷ್ಯನ ಆಸೆ, ಕಾವಲಿಯ ಮೇಲಿನ ದೋಸೆ. ದೋಸೆಗಳಲ್ಲಿ ಕೆಲವು ಸೀದು ಬೂದಾಗುತ್ತದೆ. ಆಸೆಗಳಲ್ಲಿ ಕೆಲವು ಬಟ್ಟಬಯಲಾಗುತ್ತವೆ. ಎದೆಯಲ್ಲಿ ಆಸೆ, ಮೈಯಲ್ಲಿ ಆಲಸ್ಯ—ಹೀಗಾದರೆ ವ್ಯರ್ಥವೇ ಸರಿ. ಮೈಗಳ್ಳನಿಗೆ ಬುದ್ಧಿ ಹೇಳೋದು ಮಗುಚಿದ ಕೊಡದ ಮೇಲೆ ನೀರು ಸುರಿಯೋದು ಒಂದೇ. ಮೈಗಳ್ಳನನ್ನು ಸರಿಗೊಳಿಸುವುದು-ನೋಡುವುದಕ್ಕಿಂತಲೂ ಹಂದಿಯ ಮೈಯನ್ನು ತೊಳೆಯುವುದು ವಾಸಿ. ಮನೆಗೆ ಮಾರಿ ಯಾರೆಂದು ಹೇಳಬಹುದಾದರೆ ಮನೆಗೆ ಮಾರಿ ಸೋಮಾರಿ. ಆಲಸ್ಯವನ್ನು ಕುರಿತು ಒಂದು ಪ್ರಬಂಧವನ್ನು ಬರೆಯಬೇಕೆಂದಿದ್ದೇನೆ, ಇನ್ನೊಂದು ಬಾರಿ ನೋಡೋಣ-ಈಗ ಇತರ ಕೆಲಸಗಳಿವೆ. ನಮ್ಮ ಊರಿನ ಸೆಟ್ಲಮೆಂಟ್ ಆಫೀಸನ್ನು ಇದೇ ಅಗೋಸ್ತು ತಾರೀಕು ೩೧ರಿಂದ ಬಂದ್‌ಮಾಡುತ್ತಾರಂತೆ. ಪುಣ್ಯಾತ್ಮರಾದ ಕೌಚ್‌ಮೆನ್ ದೊರೆಗಳು ಜಿಲ್ಲೆಯ ಜಮೀನುಗಳಲ್ಲಿ ಶೀರ್ವೆಯನ್ನು

ಪದೆದಾರ್ಗಂ ತಿಳಿಯಲ್ಕೆ ಬಾರದ ಮಹಾ ಪಾಶಂಗಳಂ ಕಟ್ಟಿ,

ಆಫೀಸ್ ಗುಮಾಸ್ತರನ್ನೆಲ್ಲಾ

ಮೆಚ್ಚಿದ ಪೋಲಾಡಿಸಿ ನಾಟಕಾಂತ್ಯದೊಳದೃಶ್ಯಂ ಮಾಡುಗುಂ ಬೇಗದಿಂ ॥

ಕಬ್ಬನ್ನುಹಿಳಿದು ಸಿಪ್ಪೆಯನ್ನು ಬಿಡುವಂತೆ, ಈ ಗುಮಾಸ್ತರ ದಂಡನ್ನು ನಿರೋಕ್ಷ ಮಾಡಿಬಿಟ್ಟರು. ನಮ್ಮ ಜನರಲ್ಲಿ ಬೊಬ್ಬೆ ಹೆಚ್ಚು, ಹಬ್ಬ ನಾಸ್ತಿ. ಶೀರ್ವೆ ಜಾಸ್ತಿಯಾದ ಕೂಡಲೇ ಒಕ್ಕಲಿಗರ ಕೂಟವೊ, ರೈತರ ಸಭೆಯೋ, ವಕೀಲರ ಸಂಘವೊ ನೆರೆಯಿತು. ನೆರೆಯ ನೀರಿನಂತೆ ಒಂದು ಗಳಿಗೆ ಗದ್ದಲ ಮಾಡಿ, ಎಲ್ಲವೂ ಹರಿದುಹೋಯಿತು. ದಿವಾನ್ ಬಹದೂರ್ ಶಿವರಾಯರು ಕಾಲವಾದರು. ಸಭೆಗಳೆಲ್ಲಾ ಸಹಗಮನ ಮಾಡಿಬಿಟ್ಟವು. ನಮ್ಮಲ್ಲಿ ಐಕ್ಯತೆ ಇಲ್ಲ. ಸ್ವಾಮಿ, ಐಕ್ಯತೆ ಇಲ್ಲ.

ಹಿಂದು ಜನಗಳು ದೇಶ ಸ್ವಾತಂತ್ರ್ಯ ಕೆಟ್ಟು ॥
ಬಂದಿಯಾಳುಗಳಂತೆ ಬಡೆದಾಡಿ ಪೆಟ್ಟು।
ಹೊಂದುವದರೊಳಗಿರುವುದೈ ಒಂದು ಗುಟ್ಟು।
ಎಂದಿಗುಂ ತಮ್ಮೊಳಗೆ ಇರದು ಒಗ್ಗಟ್ಟು ॥

ಶೀರ್ವೆಹಣ ಜಾಸ್ತಿಯಾದರೂ ನಮ್ಮಹಳ್ಳಿಯ ಪಟೇಲರಿಗೂ ಉಗ್ರಾಣಿಗಳಿಗೂ ಒಂದೊಂದು ರೂಪಾಯಿ ಸಂಬಳ ಹೆಚ್ಚು ಮಾಡಿದರು. ಕೆಲವು ಕಡೆಗಳಲ್ಲಿ ಮಾಗಣೆ ಶ್ಯಾನುಭಾಗರ ಸಂಖ್ಯೆ ಏರಿಸಿದರು. ಮುಡಿ ಅಕ್ಕಿ ಕೊಂಡು ಹಿಡಿ ಅಕ್ಕಿ ಕೊಟ್ಟಂತಾಯಿತು.

*   *   *   *

ನಮ್ಮ ಮುನಿಸಿಪಾಲ್ ಚೆಯರ್‌ಮೆನರು ಹೊಸಬರು. ಹಳೆ ರೋಗಿಗಿಂತ ಹೊಸ ವೈದ್ಯ ವಾಸಿ ಎಂಬ ಮಾತನ್ನು ಸಾರ್ಥಕ ಮಾಡಬೇಕು. ಅವರಿಗೆ ಕೆಲವು ಸೂಚನೆಗಳನ್ನು ಕೊಡಬೇಕೆಂದಿದ್ದೇನೆ. ಆದರೆ ನನ್ನ ಹೆಸರು ಮನ್ನಣೆಗೆ ಸರಿಯಾದುದಲ್ಲ. ಕಿಚನರ್ ಎಂದು ನನಗೆ ನಾಮವಿದ್ದರೆ, ನನ್ನ ಸೂಚನೆಗಳು ಮಾನ್ಯವಾಗುತ್ತಿದ್ದುವು. ನಮ್ಮ ಚಕ್ರವರ್ತಿಯ ಶ್ರೀಮಂತ ಪುತ್ರರು ಈ ದೇಶಕ್ಕೆ ಸದ್ಯದಲ್ಲೆ ಚಿತ್ತೈಸುತ್ತಾ

ರಂತೆ. ಆದುದರಿಂದಲೇ ನನ್ನ ಮನಸ್ಸಿಗೆ ಬೇಸರ ಹಿಡಿದಿದೆ. ಯುವರಾಜರು ಎಲ್ಲಿಯಾದರು ಮಂಗಳೂರಿಗೆ ತಟ್ಟನೆ ಬಂದು ಮುನಿಸಿಪಾಲ್ ಶಾಲೆಗಳ ಕಟ್ಟಡಗಳನ್ನೂ ಮಾರ್ಕೆಟ್ ರಸ್ತೆಯನ್ನೂ, ಮಿಣ್ಣನೆ ಉರಿಯುವ ದೀಪಗಳನ್ನೂ ನೋಡಿದರೆ ಸಾವು ಇದ್ದೂ, ಇಲ್ಲದ ಹಾಗಾದೀತು. ಇದ್ದೂ ಇಲ್ಲದ ಹಾಗಾದದ್ದು ಮಿಶ್ಯನ ಶಾಲೆಯಲ್ಲಿ ಹುಡುಗರ ಚೆಂಡಾಟದ "ಬೇಟುಗಳು". ಪೋಲಿಸಿನವರು ತಪಾಸ್ ಮಾಡಿ ವಿಚಾರಿಸುತ್ತಲಿದ್ದಾರೆ. ನಮ್ಮ ಪೋಲಿಸ ಧೊರೆಗಳ ಕೀರ್ತಿಯನ್ನು ಎಷ್ಟು ಕೊಂಡಾಡಿದರೂ ಸ್ವಲ್ಪವೇ ಸರಿ. ಅವರಿಗೆ ಒಂದು ಮಾತನ್ನು ಹೇಳಬೇಕೆಂದಿದ್ದೇನೆ. ಅಹುದಾದರೆ ಅಹುದೆನ್ನಲಿ; ಅಲ್ಲವಾದರೆ ಅಲ್ಲವೆನ್ನಲಿ! ಪೋಲಿಸ ಜವಾನರನ್ನು ಕುರಿತು ಲೋಗರ ದೂಷಣೆಯೂ ಭೂಷಣೆಯೂ ಈ ಪತ್ರದ ಮೂಲಕ ಬರುತ್ತದಾದುದರಿಂದ, ಇದರ ಒಂದೊಂದು ಪ್ರತಿಯನ್ನು ಸರಕಾರದ ಲೆಕ್ಕದಲ್ಲಿ ಒಂದೊಂದು ಸ್ಟೇಶನಿಗೆ ದೊರೆಯುವಂತೆ ಹುಕುಂ ಮಾಡಬೇಕೆಂದು ಅರಿಕೆ. ನಾನು ಬೇಡಿದ ವರವು ದೊಡ್ಡದಾಯಿತು? ನೋಡೋದಕ್ಕೆ ಪೂಜ್ಯನೇ ಸರಿ! ಕೊಡುವುದು ಮಾತ್ರ ಪೂಜ್ಯವಾಗಬಾರದು.

---

೭.

ನಮ್ಮವರಲ್ಲಿ ಒಬ್ಬನು ಮತ್ತೊಬ್ಬನನ್ನು ತೆಗಳುವುದು ಬಾಯಿಂದ ಉಗುಳುವಷ್ಟು ವಾಡಿಕೆಯಾಗಿದೆ. ತಪ್ಪು ತೋರದ ಜನರಿಲ್ಲ, ಉಪ್ಪು ಸೇರದ ಪಲ್ಯವಿಲ್ಲ. ದೋಷವಿಲ್ಲದವನನ್ನು ನೋಡಬೇಕಾದರೆ ಚೌತಿಯು ಏಕಾದಶಿಯ ದಿನ ಬರಬೇಕು. ನಿರ್ದೋಷಿ ಎಂಬವನು ದೇವರೊಬ್ಬನೇ. ಚಂದ್ರನಾಗಲಿ ಇಂದ್ರನಾಗಲಿ ದೋಷರಹಿತನಲ್ಲ. ಚಂದ್ರನಲ್ಲಿ ಕಪ್ಪುಂಟು, ಇಂದ್ರನಲ್ಲಿ ಕಣ್ಣುಂಟು. ದೀಪದ ಸುತ್ತ ಬೆಳಕು. ಅಡಿಗೆ ಮಾತ್ರ ಕತ್ತಲು. ಆದ್ದರಿಂದ ಊರ ಗೌಡನಾದರೂ ಪೂರಾ ಗೌಡನಾಗಲಾರ. ಬ್ರಹ್ಮನು ಮಹಾ ಬುದ್ಧಿಶಾಲಿ, ಲೋಗರ ತಪ್ಪುಗಳನ್ನು ಹಣೆಯಲ್ಲೇ ಬರೆದಿದ್ದರೆ, ಮುಂಡಾಸು ದೊಡ್ಡದಾಗ ಬೇಕಿತ್ತು. ಆದರೂ ಜನಗಳ ತಪ್ಪು ಯಾವಾಗ ಬಯಲಿಗೆ ಬರುತ್ತದೆಂದು ಹೇಳಬರುವದಿಲ್ಲ. ಕುಂಟಾಕಳು ಹಾಲು ತುಂಬಿದಾಗ ಒದೆದು ಬಿಡುತ್ತದೆ. ಕುಂಟೆತ್ತು ಹರದಾರಿ ದೂರ ನಡೆದು ನೆಲಕ್ಕೆ ಒರಗೀತು. ಸನ್ಯಾಸಿ ಶ್ವಾಸ ಕಟ್ಟಿಬಿಟ್ಟು ಯೋಗಾರೂಢನಾಗಿ ಕುಳಿತುಕೊಳ್ಳುವನು. ಯಜಮಾನನು ಮಾರ್ಗಕ್ಕೆ ಇಳಿಯಲಿ, ಮನೆಯೊಳಗಣ ಸೀತೆಯನ್ನೇ ಎತ್ತಿಕೊಳ್ಳುವನು. ನೋಡಲಿಕ್ಕೆ ತಬ್ಬಲಿ, ಹಾರಿದರೆ ಹೆಬ್ಬುಲಿ.

'ಇಲ್ಲಂ ಲೋಕದೊಳೆಲ್ಲರಂ ಪೊಗಳುವಾ ಉಲ್ಲಾಸಕಂ ವಸ್ತು' ಎಂದು ಕವಿ ಹೇಳಿದ್ದಾನೆ, ಹಾಗಾದರೆ ಜನಗಳೊಡನೆ ಹ್ಯಾಗೆ ನಡೆಯಬೇಕು? ಹಿಂದಿನ ದನವು ಮುಂದಿನ ದನಕ್ಕೆ ಬತ್ತಲೆ ಎಂದಿತು. ದನಗಳೆಲ್ಲಾ ಬತ್ತಲೆಯೇ; ತನ್ನ ಬೆನ್ನು ಮಾತ್ರ ತನಗೆ ಕಾಣುವುದಿಲ್ಲ. ಅನ್ಯರ ಛಿದ್ರಗಳಲ್ಲಿ ಬೆರಳು ತುರುಕಿಸಬಾರದು. ಹರಕುಬಟ್ಟೆ ಹರಿದೀತು, ಬಿರುಕು ಮಡಿಕೆ ಬಿರಿದೀತು. ಪರರ ದೋಷಗಳನ್ನು ಹುಡುಕುವವರೇ ಪುರೋಭಾಗಿಗಳು. ಇವರು ತಮ್ಮ ಎಡೆಯಲ್ಲಿ ಕತ್ತೆ ಸತ್ತುಬಿದ್ದರೂ, ಪರರ ಎಡೆಯ ನೊಣಕ್ಕೆ ಕೈ ಚಾಚುವರು. ಇವರು ಸೂಜಿಯಂತೆ ಶಿಲೀಮುಖರು. ಗುಣವನ್ನು ಕೊಟ್ಟರೂ ಅದನ್ನು ಹಿಂದಿಟ್ಟು, ಮೊನೆಮೊಗದಿಂದ ಚುಚ್ಚುವರು. ಇಂಥವರ ಕೆಳೆ ವಿರೋಧಕ್ಕೆ ಬೆಳೆ. ಇವರೊಡನೆ ಆಟ, ಸನ್ಮಾನಕ್ಕೆ ಕಾಟ.

ಪಾಪಮಯವಾದ ಪ್ರಪಂಚದಲ್ಲಿ ಕವಲಿಲ್ಲದ ಕೊಂಬೆಯಿಲ್ಲ; ಕಳೆಯಿಲ್ಲದ ಗದ್ದೆಯಿಲ್ಲ. ಸಾವಿರ ಕುದುರೆ ಸವಾರನಾದರೂ ಒಂದು ದಿನ ಬಂಡಿಯನ್ನು ಉರುಳಿಸಿ ಬಿಟ್ಟಾನು. ನಳಪಾಕ ಮಾಡುವ ಅಡಿಗೆಯವನಾದರೂ ಒಂದು ವೇಳೆ ಅನ್ನ ಪಾತ್ರೆಯನ್ನು ಕೈತಪ್ಪಿ ಒಡೆದು ಹಾಕ್ಯಾನು. ಜನಗಳು ನಡೆಯುವಾಗ ಎಡವಿ ಬೀಳುವರು. ಆಚರಿಸುವಾಗ ಸ್ಖಲಿತಗಳನ್ನು ತೋರಿಸುವರು. ಅದಕ್ಕೆ ಸಿಡುಕಬಾರದು. ನಮಗೆ ಎರಡು ಹೊಟ್ಟೆಗಳಿವೆ-ಅನ್ನ, ಉಪ್ಪನ್ನು ಹಾಕಿಕೊಳ್ಳಲಿಕ್ಕೆ ಒಂದು. ಅನ್ಯರ ತಪ್ಪನ್ನು ಹಾಕಿಕೊಳ್ಳಲಿಕ್ಕೆ ಇನ್ನೊಂದು. ಹೊಟ್ಟೆಗೆ ಹಾಕಿಕೊಂಡುದನ್ನು ಮತ್ತೆ ಬಾಯಿಗೆ ತರ ಸಲ್ಲ. ಮೆಲುಕು ಹಾಕುವುದು ಜಾನುವಾರುಗಳು. ಒಳಗೆ ನೋಡಿದರೆ ನಾವಷ್ಟಾದರೂ ಅಪೂರ್ಣರು. ತಾನು ಮಾದಿಗ, ಉಳಿದವರು ಮೀನು ತಿನ್ನುವವರೆಂದು ಹುಲ್ಲು ಗುಡಿಸಲಿನವರು ನೆರೆಯವನ ಮನೆಗೆ ಬಾಣ, ಬಿರುಸು ಬಿಡುವುದು ಸರಿಯೆ? ಪರರ ದೋಷಗಳನ್ನು ಹೆಕ್ಕಿ ತೆಗೆಯುವ ಮೊದಲು ನಮ್ಮ ದೋಷಗಳನ್ನು ನೋಡಿಕೊಳ್ಳಬೇಕು. ಮಾಪಿಳ್ಳೆಯ ತಲೆಗೆ ಕೂದಲಿಲ್ಲವೆನ್ನುವ ಮುಂಚೆ, ವಿಧವೆ ತನ್ನ ಮಂಡೆ ಸವರಿಕೊಳ್ಳಲಿ! ಅನ್ಯರ ಕೊಂಕು ತನ್ನ ಕೊರತೆಯನ್ನು ತೋರಿಸುತ್ತದೆ; ಯಾಕಂದರೆ ಎಲ್ಲಾ ಕತ್ತೆಗಳಿಗೂ ಕಿವಿ ನಿಡಿದಾಗಿದೆ. ತನ್ನ ಕಣ್ಣಿನಲ್ಲಿ ಕಿಸರು ಇದ್ದರೆ ಅನ್ಯರ ಮೈ ಕೆಸರು ತೋರುವುದು. ನಮ್ಮ ನೆರೆಯವನು ನಮ್ಮ ಕೈಕನ್ನಡಿಯಂತಿದ್ದಾನೆ; ಈ ಕನ್ನಡಿಯಲ್ಲಿ ತೋರುವ ತಪ್ಪುಗಳು ನಮ್ಮವೇ – ಎಂದು ತಿದ್ದಿಕೊಳ್ಳೋಣ!

ತಪ್ಪು ತಿದ್ದುವಾಗ ಎಚ್ಚರವಿರಬೇಕು. ಬಿರುಸಾಗಿ ಊದಿದರೆ ಬೆಂಕಿ ಆರೀತು, ಮೆಲ್ಲನೆ ಊದಿದರೆ ಹೊಗೆ ತುಂಬೀತು. "ಸ್ಮಾರಯೇ ನತು ಶಿಕ್ಷಯೇ" (ರಾಮಾಯಣ-ಜ್ಞಾಪಿಸುತ್ತೇನೆ ಶಿಕ್ಷಿಸುವುದಿಲ್ಲ) ಕೆಲವರು ಕಂಡವರ ಮನೆಯಲ್ಲಿ ತಲೆಹಾಕಿ, ತೂತುಗಳನ್ನು ನೋಡಿಕೊಂಡು, ತಮಗೆ ಬೇಕುಬೇಕಾದಂತೆ ಆ ಛಿದ್ರಗಳನ್ನು ಇನ್ನೂ ಬಿರಿಯಿಸುತ್ತಾರೆ. ಕಂಡದ್ದನ್ನು ಹೇಳಿ

ದರೆ ಕೆಂಡದಷ್ಟು ಕೋಪ ಎಂದರೆ, ಕಾಣದ್ದನ್ನು ಹೇಳಿದರೆ ಇನ್ನೆಷ್ಟು ಕೋಪ ಬಂದೀತು! ಇವರು ನೆರೆಯವರನ್ನು ತಿದ್ದುವವರಲ್ಲ; ಗುದ್ದುವವರು. ಆದ್ದರಿಂದಲೇ ಸಿದ್ಧನೀತಿಯಲ್ಲಿ—

ನುಡಿಯದಿರನ್ಯರ ಗುಣಮುಮಂ । ಪಿಡಿಯದಿರ್ಕೆ ಲೋಗರೊಡವೆ
ಎಣಿಸುವ ಪಾಪಂ ॥
ಬಿಡು ಮೂಡಲಿವ ನಂಟನ । ನಡೆಯದಿರು ಪಿಲಗವರೊಂದು
ಪೊರ್ದುವ ಕಡೆಯೊಳ್ ॥

ಆದ್ದರಿಂದಲೇ ದಾಸರು ಹೀಗೆ ಸಂಬೋಧಿಸುತ್ತಾರೆ—

ಪರರನಿಂದೆಯನ್ನು ಮಾಡಿ । ನರಕಿಯಾಗ ಬೇಡ ಮನವೆ! ॥

ಪಾಪಿಗಳು ಪಾಪಕ್ಕೆ ಪಶ್ಚಾತ್ತಾಪ ಪಟ್ಟರೆ, ಮತ್ತೆ ಮತ್ತೆ ಆ ಪಾಪದ ಮಾತನ್ನು ಎತ್ತಬೇಡ. ಸತ್ತ ಹಾವನ್ನು ಬಡಿದೇನು ಫಲ? ನೊಂದವರ ನೋಯಿಸದಿರು.

"ತಪ್ಪು ಸಾಧಿಸುವನೊಳಗಿಪ್ಪವನು ಕಡು ಹೆಡ್ಡ" ಎಂದು ಸರ್ವಜ್ಞನು ಹೇಳುವನು. ತಪ್ಪು ಹೊರಿಸುವವನಿಗೆ ಒಪ್ಪುವವನು ಯಾರು? ಇಂಥಾ ನಿಂದಕರು ಬಾಯಿಗೆ ನಾಯಿಗಳನ್ನು ಕಟ್ಟಿಕೊಂಡು, ತಪ್ಪುಲ ಬೇಟೆಯಾಡುವುದಕ್ಕಿಂತಲೂ ಪರರ ಸುಗುಣಗಳನ್ನು ಹೊಂದಿಕೊಂಡಿರುವುದು ಮೇಲು. ತನ್ನ ಕಾಲಡಿಯಲ್ಲಿ ಕಳಿತ ಕುಂಬಳವನ್ನು ಬಿಟ್ಟು ಪರರ ಅಡಿಯಲ್ಲಿರುವ ಸಾಸಿವೆಯ ಕಾಳನ್ನು ಯಾಕೆ ಹೆಕ್ಕಿಕೊಳ್ಳಬೇಕು? ಹಲಸಿನ ಮುಳ್ಳುಗಳನ್ನು ಬಿಟ್ಟು ತೊಳೆಯನ್ನು ಮೆಲ್ಲುವುದೇ! ನೀನು ರಾಜಹಂಸನಾದರೆ, ನೀರನ್ನು ಬಿಟ್ಟು ಹಾಲನ್ನು ಹೀರು. ಕಣ್ಣಿಂದ ನೋಡಿದರೂ, ಕಿವಿಯಿಂದ ಕೇಳಿದರೂ ಬಾಯಿಂದ ಆಡಬೇಡ.

ಕೊಡಬೇಕೈ ಕಿವಿಯನ್ನು ಸರ್ವರ ನುಡಿಗೆ ।
ನುಡಿಬಾರದು ನೀನಡಿಗಡಿಗೆ ॥

ನಿಂದೆಯೂ ಹುಸಿಯೂ ಅವಳಿಜವಳಿ ಕೂಸುಗಳು. ನಿಂದೆಯಿದ್ದಲ್ಲಿ ಹುಸಿ ತಾನು ನಿಂದೆಯೆನ್ನುವುದು. ನಿಂದೆಯ ಎದೆ ಕೆಡುಕು; ಹುಸಿಯ ನಾಲಗೆ ಕೆಡುಕು; ನಿಂದಾ ಬಾಯಿಗೆ ಪ್ರೇಮಾದೇವಿ ಅತ್ತಿಗೆ. ಪ್ರೇಮಳೆಯು ಮನೆಯಲ್ಲಿಲ್ಲದಿದ್ದರೆ ಬಾಲವಿತಂತುವಾದ ನಿಂದಾದೇವಿಯ ಆರ್ಭಟೆ ಹೆಚ್ಚು.

ಒಟ್ಟು ಏನೆಂದರೆ—ಪರಸ್ಪರ ಪ್ರೀತಿವಾತ್ಸಲ್ಯಗಳಿದ್ದರೆ ಒಬ್ಬರ ತಪ್ಪು ಮತ್ತೊಬ್ಬನಿಗೆ ತೋರುವುದಿಲ್ಲ. ಪ್ರೀತಿ ತಪ್ಪಿತೆಂದರೆ ಹುಲು ತಪ್ಪುಲು ಬೆಟ್ಟವಾಗುವುದು. ಒಂದು ಕಂದಿನಿಂದ ಸಾವಿರ ಬಾಳೆಗಳನ್ನು ಬೆಳೆಸುವರು. ಇಂಥಾ ನಿಂದಕನ ಕಣ್ಣಿಗೆ ಭೂತ ಕನ್ನಡಿ ಇದೆ. ಇವನನ್ನೇ ಲಾಭಕರೆನ್ನುವರು. "ಲಾಭನುಡಿಗಳಲ್ಲಿ ಕೆಡುವುದು ಕೋವಿದರ ಮನ". ಲಾಭಕನಂತೆ ಇವನು ತಿಪ್ಪೆಯನ್ನೇ ಬಾಯಿಂದ ಕೆಡಹುವನು. ಇಂತವನನ್ನು ಕುರಿತು ಸರ್ವಜ್ಞ ಹೀಗೆ ಹೇಳುತ್ತಾನೆ.

ನೆಗ್ಗಿಲಿಯು ಹೊಲ ಹೊಲ್ಲ । ಸಿಗ್ಗು ವೇಷಿಗೆ ಹೊಲ್ಲ ।
ಸುಗ್ಗಿಯಾ ದಿನಕೆ ಮಳೆ ಹೊಲ್ಲ ಕೊಂಡೆಯನ
ಸಿಗ್ಗಾಳೆ ಹೊಲ್ಲ ಸರ್ವಜ್ಞ ॥

ನಾವು ಪಾಪಿಷ್ಟರು; ಆದರೂ ದೇವರು ನಮ್ಮನ್ನು ಪ್ರೀತಿಸುತ್ತಾನೆ.

ತಂದೆ ಗುರುಗಳ ನಡುವೆ ಒಂದು ಅಂತರ ಉಂಟು.

ತಂದೆ ತೋರುವನು ಶ್ರೀ ಗುರುವ ಗುರುರಾಯ,
ಬಂಧನವ ಕಳೆಯು ಸರ್ವಜ್ಞ ॥

ಆದ್ದರಿಂದ ನಾವು ಬೇಸರಪಡಲು ಕಾರಣವಿಲ್ಲ. ಬದುಕಿ ಕಳಿತು ಸಾಯುವ ಮೊದಲು ಯಾವುದೊಂದು ಒಳ್ಳೆಯದನ್ನು ಮಾಡೋಣ! ಮಲ್ಲನ ಮಾತು ಹರಟೆಯಾದರೂ ಸಾರವಿದ್ದರೆ ಹಿಡಿಯಿರಿ; ಇಲ್ಲದಿದ್ದರೆ ಬಿಡಿರಿ! ಬಂಡಿ ಹೊರೆ ತುಂಬಿ ಮಾಲಿದೆಯಾದರೂ, ಎತ್ತು ಬೆನ್ನು ಇರುಕಿಸಿ ಬಳಲಿದೆಯಾದರೂ ಮೆಲ್ಲಮೆಲ್ಲನೆ ನಡಿಸು. ಮನೆಗೆ ಸೇರಲಿ! ಪಡಸಾಲೆಯಲ್ಲಿ ಬಿದ್ದುಕೊಂಡು ಗೊರಿಕೆ ಹೊಡೆಯುವುದರಿಂದ ಫಲವೇನು? ತಪ್ಪಿದ್ದರೂ ಇಲ್ಲದಿದ್ದರೂ ಗದ್ದೆಯನ್ನು ಉಳಲೇಬೇಕು. ಇಲ್ಲದಿದ್ದರೆ, ಮುಂದಿನ ಮಳೆಗಾಲದಲ್ಲಿ ಊಟವಿಲ್ಲ. ನೇಗಿಲನ್ನು ಹಿಡಿದುಕೋ; ದೇವರು ಕೈಕೊಡುವನು.

ತಾಪದಾ ಸಂಸಾರ । ಕೂಪದೊಳು ಬಿದ್ದವರು
ಆಪತ್ತು ಅಳಿದು ಪೊರಮಡಲು ಗುರುವಚನ
ಸೋಪಾನ ಕಾಣೋ ಸರ್ವಜ್ಞ ॥

---

## ೮.

ಅಯ್ಯಾ! ಪತ್ರಿಕಾ ಮುಖತಿಲಕರೇ,

ನಿಮ್ಮ ಪತ್ರಿಕೆಯಲ್ಲಿ ಅನಾಮಿಕ ಪತ್ರಗಳೆಂಬ ಲೇಖನವನ್ನು ಬರೆದವರು ಯಾರು? ಸಶೇಷ ಎಂಬವರೇ. ಇವರು ಮಹಾ ಸೂಜ್ಞರು, ಸರ್ವಜ್ಞರು. "ಕೆಲವು ಸಾರಿ ತಂದೆ ಯಾರೆಂತ ಗೊತ್ತಾಗದ.....ಹುಟ್ಟಿದ ಹಸುಗೂಸುಗಳು ದಾರಿಯ ಬದಿಯಲ್ಲಿ ಕಾಡಿನಲ್ಲಿ ಪೊದೆಯ ಮರೆಯಲ್ಲಿ ಬಿದ್ದಿರುವ ರೀತಿಯಲ್ಲಿ" ಈ ಮಾತುಗಳು ಸಿದ್ಧ. ಕಳೆದ ತಿಂಗಳಿನ ೨೩ನೆಯ ತಾರೀಕಿನಲ್ಲಿ ಇಂಥಾ ಒಂದು ಗಂಡು ಕೂಸು ದಾರಿಯಲ್ಲಿ ಕದ್ರಿಯ ದಾರಿಯಲ್ಲಿ ಬಿದ್ದಿತ್ತು. ಇಂಥಾ ಮೂಕ ಪತ್ರವನ್ನು (ಪುತ್ರ) ಪ್ರಕಟಿಸುವ ಕೃತ್ಯವು ಅಂಧಕಾರದ ಕೃತ್ಯವಲ್ಲದೇ ಮತ್ತೇನು? ಈ ಅನಾಮಿಕ ಪುತ್ರ ಹ್ಯಾಗೆ ಪ್ರಾಪ್ತವಾಯಿತೋ ಎಂದು ಪತ್ತೆಮಾಡುವುದಕ್ಕೆ ಮಗುವಿನ ಎಳೆ ತಾಯಿಯನ್ನು ಹಳೆ ಅಜ್ಜಿಯನ್ನೂ ಪೋಲಿಸಿನವರು ಬಂಧಿಸಿದ್ದಾರಂತೆ. ನಂಬ್ರವು ಹ್ಯಾಗಾದೀತೆಂದು ಈಗ ಹೇಳಲಾಗದು. ಬಾಯಿಬಾರದ ಕೂಸು ಸತ್ತುಹೋದ್ದುದರಿಂದ ಮೃತನನ್ನು ವಿಚಾರಿಸು

ವುದಕ್ಕಾಗಲಿಲ್ಲ. ಈ ಬಡ ಮಗುವಿಗೋಸ್ಕರ ನನ್ನ ಕಲ್ಲೆದೆಯು ಕೂಡಾ ಕರಗುತ್ತದೆ. ಮಗು! ನೀನು ಹುಲಿಯ ಹೊಟ್ಟೆಯಲ್ಲಿ ಹುಟ್ಟಬಾರದಿತ್ತೆ? ಕಂದಾ! ತಾಯಿಯು ನಿನ್ನನ್ನು ದಾರಿಗನ ಪಾಲು ಮಾಡುವಾಗ ಯಾರಾದರೂ ನೋಡಲಿಕ್ಕೆ ಇರಲಿಲ್ಲವೇ? ಶಿಶುವೆ! ಹಂದಿಯು ಕೂಡಾ ಹೊರಳಾಡದ ಮುನಿಸಿಪಾಲ್ ರಸ್ತೆಯ ಮಳೆಕೆಸರಿನಲ್ಲಿ ನೀನು ಹ್ಯಾಗೆ ಮಲಗಿಬಿಟ್ಟೆಯೊ? ಉರುಳುವ ಗಾಡಿಗಳಿಗೆ ಜಖಂ ಆಗುವ ಮುನಿಸಿಪಲ್ ರಸ್ತೆಯು ನಿನ್ನ ಮರಣಶಯ್ಯೆಯಾಯಿತೇ? ನಮ್ಮ ಮುನಿಸಿಪಾಲ್ ಮಾರ್ಗಗಳ ಹಾಗೆ ನಿನ್ನನ್ನು ಯಾರೂ ಕೇಳದೆ ಹೋದರೇ? ನಿನ್ನನ್ನು ಬಟ್ಟೆಯ ಪಾಲು ಮಾಡಿದ ನಿನ್ನವರ

ಕುಲವೆ ಸಂಹಾರವಾಗುವ ಕಾಲ ಬಂತು—(ನಿನಗೆ)
ಇಳೆಯೊಳ್ ಬಾಳಿರುವಂಥ ಋಣವೆಲ್ಲಾ ಸಂತು ॥

ನನ್ನ ಹಾಡು ಇದಲ್ಲ.

ಮಳೆ ಸುರಿದಿಳೆಯಲ್ಲಿ ನೀರೆಲ್ಲಾ ನಿಂತು
ಮುಳುಗುವದ್ಯೆ ನಡೆವರ ಕಾಲ್ಗಳೆಂತು

ಹಂಪನಕಟ್ಟೆಯಿಂದ ಮಡಿಕೇರಿ ಗುಡ್ಡದ ವರೆಗೆ, ರಸ್ತೆ ಎಲ್ಲಾ ಹುಣ್ಣು ಹುಣ್ಣಾಗಿ ಕೀವು ನಿಂತಿದೆ. ಸರದಾರರ ಗಾಡಿ ಹೋಗುವ ಈ ರಸ್ತೆಗೆ ಈ ಅವಸ್ಥೆ; ಮಿಕ್ಕ ಹಾದಿಗಳ ಗತಿ ಕೇಳುವದೇನು? ಗಣಪತಿ ದೇವಸ್ಥಾನದ ರಸ್ತೆಯು ಗಣಪತಿ ದೇವಸ್ಥಾನದಂತೆ ಅಲ್ಲಲ್ಲಿ ದುರಸ್ತಾಗುತ್ತಿದೆ. ಮಾರ್ಕೆಟ್ ಬೀದಿಯು ಮಾರ್ಕೆಟಿನಂತೆ ಕೆಸರು ಕೊಳೆಯಾಗಿದೆ. ಮಳೆಕಾಲ ಮುಗಿಯುತ್ತಾ ಬಂತು; ಕೊಳೆಕಾಲ ಮಾತ್ರ ತಪ್ಪಲಿಲ್ಲ. ಈ ಬಿರುಮಳೆಗೆ ಉಳ್ಳಾಲ ಸೇತುವೆಗೆ ರೈಲ್ವೆಯವರು ಕಟ್ಟಿದ ಅಣೆಕಟ್ಟು ನಿಂತದ್ದು ಆಶ್ಚರ್ಯ. ಮಂಗಳೂರಿನಿಂದ ಉಡುಪಿಗೆ ರೈಲುಮಾರ್ಗವಾಗಲು ಸರ್ವೇ ಮಾಡುತ್ತಾರಂತೆ. ಇದು ನಿಜವೇ? ಸ್ವಾಮಿ, ಈ ಕಾಲದಲ್ಲಿ ಸತ್ಯ ವರ್ತಮಾನ ಯಾವದು; ಸುಳ್ಳು ಯಾವದೆಂದು ಹೇಳಲು ಬರುವುದಿಲ್ಲ. ಬಾಜಾರಿನಲ್ಲಿ ಬಣ್ಣಕಟ್ಟುವ ಬಣ್ಣಗಾರರು ಬೇಕುಬೇಕಾದ ಸುಳ್ಳು ವರ್ತಮಾನವನ್ನು ಹುಟ್ಟಿಸುತ್ತಾರೆ. ಇವರು ಶುದ್ಧ ಬ್ರಹ್ಮರು. ಇಲ್ಲದ್ದನ್ನು ಹುಟ್ಟಿಸುವರು. ಹುಟ್ಟಿದುದನ್ನು ಇಲ್ಲಸುವರು. ಇಲ್ಲಸುವೆಂಬ ಪದವು ಶುದ್ಧ ಕನ್ನಡವೇ? ಈಗ ಕನ್ನಡ ಮಾತಾಡುವವರ ಕನ್ನಡ ಅಚ್ಚಕನ್ನಡವೊ ತುಚ್ಛಗನ್ನಡವೊ? "ನಷ್ಟಸ್ತಂಭಕ" ಜನರೆಂದರೇನು? 'ಬಾಲಕರ ಗೀತಗಳಿಂದ ಜನರು ಅನುಮೋದಿಸಿದರು'—'ಅನುಮೋದಿಸು' ಎಂದರೆ ಸಂತೋಷಿಸು ಎಂದು ಯಾವ ಕೋಶದಲ್ಲಿದೆ? ಕನ್ನಡದಲ್ಲಿ ಪೂರ್ವದ ಹಳೆಗನ್ನಡ, ಹಳೆಗನ್ನಡ, ಹೊಸಗನ್ನಡ ಎಂಬ ಮೂರು ಬೇಧಗಳುಂಟೆಂದು ಮೆ. ಕ್ರೈಸ್ ದೊರೆಗಳು ಹೇಳುತ್ತಾರೆ. ಕನ್ನಡದಲ್ಲಿ ಅಚ್ಚಗನ್ನಡ, ಉಚ್ಚಗನ್ನಡ, ತುಚ್ಛಗನ್ನಡ ಎಂಬ ಮೂರು ಬಗೆ ಎಂದು ಹರಟೆಮಲ್ಲ ಸಾಹೇಬರವರು ಹೇಳುತ್ತಾರೆ. "ಬ್ವೊಯಸುಗಳು ಮೆಟ್ರಿಕ್ಯುಲೇಶನ ಎಕ್ಸಾಮಿನಲ್ಲಿ ಫೈಲಾಗುವ ರೀಜನ್ ಏನೆಂದು ಎಷ್ಟೊ ಎಜ್ಯುಕೇಶನಿಸ್ಟರ ಒಪಿನಿಯನ್ನುಗಳನ್ನು ನಾನು ಎಟ್ಟೆಂಟಿವ್ಲಿ ಓದಿದರೂ, ಐ ಎಮ್ ಅನೇಬಲ್ ಟು ಫ್ಯಾಂಟ್ ದಿ ಟ್ರುತ್" ಇದು ಉಚ್ಚಕನ್ನಡ. "ಶತಮಾನ ಕೋಶದಲ್ಲಿ ಪ್ರತ್ಯರ್ಥಗಳು ನಿದರ್ಶನಗಳಿಂದ ತತ್ವರತೆಯಿಂದಲೂ ಸ್ಫುಟತೆಯಿಂದಲೂ ಪ್ರತಿರೂಪಿಸಲ್ಪಟ್ಟಿದೆ". ಇದು ತುಚ್ಛಕನ್ನಡ! ಕಚೇರಿ ಕನ್ನಡವೆಂದು ಮತ್ತೊಂದು ಜಾತಿಯುಂಟು; ಅದನ್ನು ಬರೆಯುವುದಕ್ಕೆ ಹಲವು ವರ್ಷ ಸಾಧನೆ ಮಾಡಬೇಕು. ಕೆಳಗಿನ ದೃಷ್ಟಾಂತವನ್ನು ನೋಡಿರಿ:- ಮಂಗ್ಳೂರ ಶ್ಯಾರಿನಲ್ಲಿದ್ದ ಅ್ಯಸಾವ್ಕಾರ ನರ್ಸಯ ಕಮ್ತಿ ಯಾನೆ ನಾರಾಯಣ ರಾಯ್ರಿಗೆ ಚಾಲ್ಗೇಣಿ ವೊಕ್ಲು ಕೆಲ್ಸಿ ಜಾತಿ ಸುಬ್ರಾ ಬಂಡಾರಿ ಬರ್ಸಿ ಕೊಟ್ಟ ಗೇಣ್ಚೀಟಿ ಕ್ರಮವೆಂತೆಂದ್ರೆ. ಹರಟೆಮಲ್ಲನ ಕನ್ನಡದಲ್ಲಿ ಇವು ಮೂರೂ ಸೇರಿವೆ.

ಅಪಾರ್ಥಮಕ್ರಮಂ ವ್ಯರ್ಥಂ ಪುನರುಕ್ತಂ ಹತೋಪಮಂ
ಲೋಕನ್ಯಾಯ ವಿರುದ್ಧಂತ ಮಲ್ಲನಾ ವಚನಂ ಇದು.

ಮಾತಿನಲ್ಲಿ ಏನಿದೆ? ಪ್ರೀತಿ ಇದ್ದರೆ ಸಾಕು. ನಾನು ಎಷ್ಟೊ ಮಾತು ಬೇಡಿದರೂ, ನಮ್ಮ ಪೋಲಿಸ ಸುಪರಿಂಟೆಂಡೆಂಟ್ ಮೆ. ಸಲಿವನ್ ದೊರೆಗಳು ನನ್ನ ಬಿನ್ನಹವನ್ನು ಮನ್ನಿಸಲಿಲ್ಲ. ಸತ್ಯದೀಪಿಕೆಯ ಒಂದೊಂದು ಪ್ರತಿಯನ್ನು ಸ್ಟೇಶನ್ ಹೌಸ ಆಫೀಸರರಿಗೆ ಸರಕಾರದ ಕಡೆಯಿಂದ ತರಿಸಿಕೊಟ್ಟರೆ ತುಂಬಾ ಕೃತಜ್ಞನಾಗುತ್ತಿದ್ದೆ. ಅವರು ವರ್ಗವಾಗಿ ಹೋಗಲಿಕ್ಕೆ ಇದ್ದಾರೆ. ನನ್ನ ಆ ಪತ್ರ ಅಲ್ಲೆ ಉಳಿಯಿತು. ಹೊಸ ದೊರೆಗಳಿಗೆ ನನ್ನ ಸಲಾಂ ಹೇಳುತ್ತೇನೆ. ಇವರು ಅವರ ಹಾಗೆಯೇ ಕೈಕೊಟ್ಟರೆ ಕೊಡಲಿ, ನೋಡಬೇಕೆಂದಿದ್ದೇನೆ—

ಅಧಿಕಾರ ಕಾಲದಲಿ । ಪದೆದು ದಾನವ ಮಾಡು
ಪದವಕ್ಕು ಪರಿಣಾಮವಕ್ಕು ಸ್ವರ್ಗದಾ
ಮುದವೆ ತಾ ಬಕ್ಕು ಮಾನವಾ

—

## ೯.

ಸ್ವಾಮಿ, ದೀಪಿಕಾ ಪತ್ರಕರ್ತರೇ!

ಇತ್ತಲಾಗಿ ನಾನು ದೇಶಸಂಚಾರಕ್ಕೆ ಹೊರಟದ್ದರಿಂದ ತಮಗೆ ಮೋರೆ ತೋರಿಸಲು ಆಗಲೇ ಇಲ್ಲ. ದೇಶಯಾತ್ರೆ ಮಾಡಿ ಕಳೆದ ಗುರುವಾರ ಸಾಯಂಕಾಲ ಮನೆಗೆ ಹಿಂತಿರಳಿದೆನು. ಬರುವಾಗ ಪೇಟೆಯಲ್ಲಿ ಜನಗಳು ಪತ್ರಿಕೆ ಪ್ರತಿಯನ್ನು ಕೈಕೊಂಡು ಅಧ್ಯಯನಮಾಡುವುದನ್ನು ನೋಡಿದೆನು. ಒಬ್ಬಿಬ್ಬರು "ಮಲ್ಲ ಇಲ್ಲ" ಎಂದು ತಲೆಯ ಮೇಲೆ ಕೈಮಾಡಿದರು. ಕ್ಷೌರಕ ಬಿರ್ಮ ಪೂಜಾರಿಯು ಮಲ್ಲನು ತಲೆತೋರಿಸಿ

ದ್ದಾನೋ ಎಂದು ನೋಡಿದನು. ನಾನು ಇಲ್ಲದ್ದನ್ನು ನೋಡಿ ತಲೆ ಬೋಳಿಸದೆ ಸುಮ್ಮಗಾದನು. ಸೋಡಾ ಮಾರುವ ದಾಸಣ್ಣನು ಹರಟೆ ಓದುವ ತವಕದಿಂದ ಸೀಸೆಯಲ್ಲಿ ಲಿಂಬೆ ನೀರು ಹಾಕುವುದಕ್ಕೆ ಮರಿತು, ಚಂಬು ನೀರನ್ನು ತುಂಬಿಸಿ ಬಿಟ್ಟ. ರೊಟ್ಟಿಗಾರ ಪೇದ್ರು ಮಿಂಗೇಲನು ಗೋಧಿಯಿಲ್ಲದೆ ಆಗ ಬೋಟು ನಿರೀಕ್ಷಣೆಯಲ್ಲಿದ್ದನು. ,ಈಗಿನ ಗೋಧಿ ಹುಡಿಗೂ ಹಾದಿ ಹುಡಿಗೂ ಹೆಚ್ಚು ಕಡಿಮೆ ಉಂಟೇ–ಎಂದು ಮನಸ್ಸಿನಲ್ಲಿ ಮಥಿಸುತ್ತಿದ್ದಾಗ, ಸತ್ಯದೀಪಿಕೆಯಲ್ಲಿ ಆಗಬೋಟು ಬಂದ ವರ್ತಮಾನವನ್ನು ನೋಡಿ ದುಃಖಗೊಂಡನು. ಹೊಸ ಗೋಧಿ ಬರುವ ವರೆಗೆ ಪೇದ್ರು ಮಿಂಗೇಲನ ರೊಟ್ಟಿಯನ್ನು ಮೂಗು ಹಿಡಿದು ತಿನ್ನಬೇಕಾಗಿತ್ತು. ಆದ್ದರಿಂದ ದೇಶ ಯಾತ್ರೆಗೆ ಹೊರಟೆನು. ಸ್ವಾಮಿ! ಮಲ್ಲನು ವಾರವಾರಕ್ಕೆ ತಲೆ ತೋರಿಸಬೇಕೆಂದು ಕೆಲವರ ಆಶೆ, ಮಲ್ಲನು ಕಲ್ಪಾಂತದ ವರೆಗೆ ಕಣ್ಣು ಮುಚ್ಚಿರಬೇಕೆಂದು ಕೆಲವರ ಭಾಷೆ. ಹಲವರು –ಮಲ್ಲನು ಕೆಲಸಕ್ಕೆ ಬಾರದ ಹಾಳು ಹರಟೆಗಳ ಗಾಳಿ ಊದಿ, ದೀಪಿಕೆಯ ಬೆಳಕನ್ನು ತೀರಾ ಆರಿಸಿಬಿಟ್ಟನೆಂದು ದೂಷಿಸುತ್ತಾರೆ. ಹಲವರು-ಮಲ್ಲನು ನಾಲಗೆಯಿಂದ ತಿರುಗಣೆ ತಿರುಗಿಸಿ ದೀಪಿಕೆಯ ಪ್ರಕಾಶವನ್ನು ವಿಸ್ತರಿಸಿದನೆಂದು ಭೂಷಿಸುತ್ತಾರೆ.

ಇದ್ದ ಕಥೆಯ ತಾನೆದ್ದು ಹೇಳಿದರೆ
ಬದ್ಧ ಜಾಲ ನೀನೆನ್ನುವರು ॥
ಸದ್ದು ಮಾಡದೆಯೆ ಬಿದ್ದುಕೊಂಡರೂ
ಮೊದ್ದು ಮೂಕ ಜಂತುವೆನ್ನುವರು ॥

ಹರಟೆಮಲ್ಲನ ಚಾಕರಿ, ಮುನಿಸಿಪಾಲ ನೌಕರಿ, ಇವೆರಡು ಒಂದೇ ತರ. ಐದು ಬಾಯಿಗಳು ಹೊಗಳುತ್ತವೆ. ಹತ್ತು ಬಾಯಿಗಳು ಬೊಗಳುತ್ತವೆ. ರಾ. ರಾ. ನ. ಸುಬ್ಬರಾಯರು ಚೆಯರ್ಮೇನರಾದಂದಿನಿಂದ ಮುನಿಸಿಪಾಲ್ ಆಫೀಸು ಗಡಗಡನೆ ನಡುಗುತ್ತಿದೆ ಎಂದು ಹೇಳುವರು. ಬಡತನದಿಂದಲೇ ಎಂದು ತಿಳಿದುಕೊಳ್ಳುವಾ. ರಾ. ರಾ. ಸುಬ್ಬರಾಯರ ಕಾಲ ಹಿಂದೆ ಬಡತನ ಬಂತೊ? ಅವರ ಕಾಲದ ಹಿಂದೆ ಬಡತನವಿರಲಿಲ್ಲವೇ? ಮಾವಿನ ಮರಕ್ಕೆ ಬಂದಣಿಗೆ ಹಿಡಿದಂತೆ, ನಮ್ಮ ಮುನಿಸಿಪಾಲಿಟಿಗೆ ಕೆಲವು ವರ್ಷಗಳಿಂದ ಬಡತನ ಬಂದಿದೆ. ರಾ. ರಾ. ಸಾಲದಣ್ಣರು ಅಧ್ಯಕ್ಷರಾದರು. ಅವರ ಹೆಸರಿಗೆ ಸರಿಯಾಗಿ ಚೆಯರ್ಮೇನರು ಸಾಲದಣ್ಣರಾದರು. ಬಳಿಕ ಬಂದದ್ದು ರಾ. ರಾ. ಲಾಬರು; ಖಜಾನೆಯಲ್ಲಿ ನಿಂತದ್ದು ನಷ್ಟರು. ಈಗ ಸುಬ್ಬರಾಯರು ಏರಿದ್ದಾರೆ. ಶುಭವೊ, ಅಶುಭವೋ, ಇನ್ನು ನೋಡಬೇಕು. ಮುಖ್ಯವಾಗಿ ರಾ. ರಾ. ಸುಬ್ಬರಾಯರು ಬೇಡುವ ರಾಜ್ಯಕ್ಕೆ ಬೇತಾಳ ರಾಜನಾದಂತೆ ಆಗಿದ್ದಾರೆ. ಚಿದಾನಂದರು ಹೇಳಿದಂತೆ—

ಹತ್ತಿ ಬಿತ್ತಿ ಬತ್ತಿ ಕಾಣೆ ।
ಬತ್ತಿ ಬಿತ್ತಿ ಬೋನ ಕಾಣೆ ।
ಮನೆ ತುಂಬ ಮಕ್ಕಳ ಪಡೆದು
ಗಂಡನ ಸುಖ ಕಾಣಲಿಲ್ಲ

ಎಂಬ ಹಾಗೆ ಆಗಬಾರದು. ರಸ್ತೆ ಸರಿಮಾಡುವುದಕ್ಕೆಂದು ಮಾರ್ಗದ ಬದಿಯಲ್ಲಿ ಜನರ ಕಣ್ಣಿಗೆ ಮಣ್ಣುಹಾಕಿದ್ದಾರೆ. ಬಾವಟೆ ಕಟ್ಟೆಯಲ್ಲಿ ಸರದಾರರ ಬಂಡಿ ಹರಿಯುವ ಮಾರ್ಗಗಳನ್ನು ನೆಲಸಮ ಮಾಡುವುದಕ್ಕೆಗುಡ್ಡಕ್ಕೆ ಮಣ್ಣು ಹೊತ್ತದ್ದು ತೋರುತ್ತದೆ. ಮಳೆ ಕೈಬಿಟ್ಟದ್ದರಿಂದ ಮಣ್ಣಿನ ಬಾಯಿಗೆ ನೀರು ಎರೆಯುವವರನ್ನು ಕಾಣೆ. ಮಳೆ ಬೇಗನೆ ಜಾರಿತು. ಸುಗ್ಗಿ ಬೆಳೆಗಾಗಿ ಒಕ್ಕಲ ಬಾಯಿ ಆರಿತು. ಎಡಿಟರರೇ ನಮ್ಮ ಜಿಲ್ಲೆಯ ಮಣ್ಣು ಒಳ್ಳೆದಲ್ಲವೆಂದು ಪರೀಕ್ಷೆ ಮಾಡಿದ್ದಾರೆ. ಎಷ್ಟು ನೀರು ಹೊಯಿದರೂ ನೀರು ಇಂಗುವುದಿಲ್ಲ. ಆದ್ದರಿಂದಲೇ ನಮ್ಮಲ್ಲಿ ಯಾವ ಸಂಘವಾದರೂ ಸಭೆಯಾದರೂ ಸರಿಯಾಗಿ ಬೆಳೆದು ಬಲಿಯುವುದಿಲ್ಲ. ಹಿಂದೆ ಕಲೆಕ್ಟರರಾದ ಮೆ. ರೈಸ ಸಾಹೇಬರು ಪ್ಲೇಗು ಸಭೆಗಳನ್ನು ಏರ್ಪಡಿಸಿದರು. ಒಂದೆರಡು ತಿಂಗಳುಗಳ ವರೆಗೆ ಎಲ್ಲಿ ನೋಡಿದರೂ ಸಾಹೇಬರ ಸುತ್ತುಮುತ್ತಲೂ ಸಭಿಕರ ಮುಂಡಾಸುಗಳು. ಸಾಹೇಬರು ಊರಿಂದ ಹೋದದ್ದೇ, ಮುಂಡಾಸುಗಳು ಅಗಸನ ಗುಡಾಣವನ್ನು ಸೇರಿದವು. ಚಿರಕಾಲದಿಂದ ಈ ಜಿಲ್ಲೆಯಲ್ಲಿ ಒಂದು ರೈತರ ಸಂಘವಿತ್ತಂತೆ; ರಾ. ರಾ. ದಿವಾನ್ ಬಹದ್ದೂರ್ ಶಿವರಾಯರು ಅದರ ಅಧ್ಯಕ್ಷರಾಗಿದ್ದರಂತೆ. ಇದೆಲ್ಲಾ ಪೂರ್ವಕಥೆ ಎಂದು ಅಂತೆ, ಅಂತೆ ಎನ್ನುತ್ತೇನೆ. ಈ ಸಂಘಕ್ಕೆ ಹುಣ್ಣುರೋಗವಿದ್ದುದರಿಂದ, ಸಭಿಕರು ಯಾರೂ ದುರ್ವಾಸನೆಯ ಭೀತಿಯಿಂದ ಅದರ ಹತ್ತಿರ ಹೋಗುತ್ತಿರಲಿಲ್ಲ. ಮೆ. ಕಾಟ್ಮಾನ್ ಧೊರೆಗಳು ಹುಣ್ಣು ತೆರೆಯುವುದಕ್ಕೆ ತೀರ್ವೆ ಹಿಡಿದು ಶಸ್ತ್ರಪ್ರಯೋಗ ಮಾಡುತ್ತಲೇ, ಸಂಘವು ರಾ. ರಾ. ಶಿವರಾಯರನ್ನು ನೋಡಿ ಬಿಕ್ಕಿ ಬಿಕ್ಕಿ ಅಳತೊಡಗಿತು. ಎರಡು ಮೂರು ಸಲ ಮಿಲಾಗ್ರಿ ದೇವಾಲಯದ ಮುಂದೆ ಹೊರಳಿ ಬಂದು, ಕೈಕಾಲು ಜಾಡಿಸಿತು. ರಾ. ರಾ. ಶಿವರಾಯರು ಸ್ವರ್ಗಸ್ಥರಾಗುತ್ತಲೇ ಅವರ ಬೆನ್ನ ಹಿಂದೆಯೇ ಸಂಘವು ಸಹಗಮನ ಮಾಡಿಬಿಟ್ಟಿತು. ಪ್ರಜಾಹಿತೇಚ್ಛುಗಳಾದ ಇಂದಿನ ಕಲೆಕ್ಟರ ದೊರೆಗಳು ಕೃಷಿ ಸಂಘವನ್ನು ಏರ್ಪಡಿಸಿದ್ದಾರೆ. ಈ ಸಂಘವಾದರೂ ಚಿಗುರಿ, ಬೆಳೆದು, ಬಲಿತು, ಮರವಾಗಿ ಎಲ್ಲರಿಗೂ ಸೊಂಪಾದ ತಂಪಾದ ನೆರಳನ್ನು ಕೊಡಲಿ ಎಂದು ಬಡವನ ಪ್ರಾರ್ಥನೆ. ಒಟ್ಟು ಏನೆಂದರೆ—ಸಂಘ ಶಿಶು ಎತ್ತಿದವರ ಕೂಸಾಗಬಾರದು; ಹಾಗೆ ಆದದ್ದೇ ಆದರೆ, ಯಾರೂ ಅದನ್ನು ಎತ್ತಿಕೊಳ್ಳಲು ಬಾರರು. ಸರಕಾರದ ಮಗುವಿನ ಹಾಗಿರಲು ಬಾರದು. ಯಾಕೆಂದರೆ ಅದು ಕೈಕಾಲು ಬಂದು

ಮುಂದೆ ನಡೆಯಲಿಕ್ಕೆ ಇಲ್ಲ. ಸಾಯಲಾರದ ಬಡತನಕ್ಕೆ ಬೇಸಾಯವೇ ನಿಕ್ಷೇಪ. ದೇಶದ ದಾರಿದ್ರ್ಯ ಸಂಕೋಲೆಯನ್ನು ಕಳಚಿ ಬಿಡುವುದಕ್ಕೆ ಇದೊಂದು ಉಪಾಯವಾಗಬಹುದು. ಬಂಗಾಳದ ಗೌಡರು ಈ ವಿಷಯದಲ್ಲಿ ಗೌಡ ಬಂಗಾಳಿಯನ್ನು ಈಚೆಗೆ ಮಾಡತೊಡಗಿದ್ದಾರೆ. ಈ ಪುಣ್ಯಾತ್ಮರು ವಿಲಾಯತಿ ಬತ್ತಿ ಸೇದುವದನ್ನು ಬಿಟ್ಟು ಹಿಂದು ಭಂಗಿಯನ್ನು ಸೇವಿಸುತ್ತಾರಂತೆ. ಇಂಗ್ಲಿಷ್ ಬ್ರಾಂಡಿಯನ್ನು ವಿಸರ್ಜಿಸಿ ದೇಶೀಯ ಹೆಂಡ ಕುಡಿಯುತ್ತಾರಂತೆ. ಸರಕಾರದವರು ಬಂಗಾಲವನ್ನು ಎರಡು ತುಂಡುಗಳಾಗಿ ಕತ್ತರಿಸುತ್ತಾರೆಂದು ಇವರು ಸಿಟ್ಟಿಗೆದ್ದರು. ಇವರ ಕೋಪಾಗ್ನಿಗೆ ವಿಲಾಯತೀ ಬಟ್ಟೆಬರೆ ಸರಕು ಆಹುತಿಯಾಗಿದೆ. ನಾನು ಶುದ್ಧ ಮೂರ್ಖ! ಮನುಷ್ಯರು ಇಲ್ಲಿ ಯಾಕೆ ಬರುತ್ತಾರೆಂದು ತಿಳಿಯುವಷ್ಟು ಜ್ಞಾನವಿಲ್ಲ. ರಾ. ರಾ. ಹೇಮಚಂದ್ರ ಸರಕಾರ ಎಮ್. ಎ. ಎಂಬವರು ವಿಲಾಯತೀ ಸರಕಿನ ಬಹಿಷ್ಕಾರ ಉಪದೇಶಿಸಲು ಕಳೆದ ೨೧ನೆಯ ತಾರೀಕಿಗೆ ಬಂದರೊ ಎಂದು ಮೊದಲು ತಿಳಿದು ಮೋಸಹೋದೆನು. ಕೊನೆಗೆ ಬ್ರಹ್ಮಧರ್ಮದ ಉದ್ಧಾರಮಾಡಲು ಬಂದರಲ್ಲದೆ ಸರಕನ್ನು ಬಹಿಷ್ಕಾರಮಾಡಲು ಬರಲಿಲ್ಲವೆಂದು ಮಂದಟ್ಟಾಯಿತು. ನಾನು ನಾಚಿಕೊಂಡೆನು. ಅವರ ಎದುರಿಗೆ ಹೋಗಲು ನನಗೆ ಮೋರೆಯಿಲ್ಲ. ಪುರಂದರದಾಸರು ಹಾಡಿದಂತೆ ಇವರು ಉಪದೇಶಮಾಡುತ್ತಿದ್ದಾರೆ.

**ಕಾಡು ದೈವಗಳನ್ನು ಚಿನ್ನಬೆಳ್ಳಿಗಳಿಂದ**
**ಮಾಡಿಕೊಂಡದರ ಪೂಜೆಯನು ಮಾಡಿ ॥**
**ಕಾಡು ಕಳ್ಳರು ಬಂದು ಅವುಗಳನು ಕೊಂಡೊಯ್ಯೆ**
**ಮಾಡಿಕೊಂಡಿರ್ದುದಕ್ಕೆ ಬಾಯಿ ಬಡಕೊಳ್ಳೇ ॥**

* * * *

ಮಾಜಿ ಧರ್ಮಸ್ಥಳದ ಪೆರ್ಗಡೆಯರಾದ ನಮ್ಮ ಮಂಜಪ್ಪ ಹೆಗ್ಗಡೆಯರು ನಮ್ಮ ಮಂಗಳೂರು ಮುನಿಸಿಪಾಲಿಟಿಯಲ್ಲಿರುವ ಗೋವುಗಳಿಗೆ ಅಲ್ಲಲ್ಲಿ ನೀರು ಸಿಕ್ಕುವ ಹಾಗೆ, ಸ್ವಲ್ಪ ಹಣವನ್ನು ಶೇಖರಿಸಿ ಅವರ ವಶಕ್ಕೆ ಕೊಟ್ಟಿದ್ದರಂತೆ. ಹಾಗೆಯೆ ರಾ. ರಾ. ಮಂಜೇಶ್ವರ ರಾಮಕೃಷ್ಣರಾಯರು ಬಾಲಕಿಯರ ಪಾಠ ಶಾಲೆಯ ಬಗ್ಗೆ ಸ್ವಲ್ಪ ಧನವನ್ನು ಮುನಿಸಿಪಾಲಿಟಿಯವರಿಗೆ ಕೃಷ್ಣಾರ್ಪಣೆ ಮಾಡಿದ್ದಾರಂತೆ. ಇವುಗಳ ಇತ್ಯರ್ಥವು ಇನ್ನೂ ಆಗಲಿಲ್ಲ. ಅದರಂತೆ ಹುಲಿಗಳ ಬಿನ್ನಹವನ್ನು ನೀವು ಮೂಲೆಗೆ ತಳ್ಳಬಾರದು. ಡೊಂಗರಕೇರಿಯಲ್ಲಿ ಗೋಕಲ್ಲು ಇಡುವದಕ್ಕೆ ಸಾಕಷ್ಟು ಹಣವನ್ನು ಕೌನ್ಸಿಲಿಗೆ ಕೊಟ್ಟ ಯಾರೋ ಪುಣ್ಯಾತ್ಮರು ಇನ್ನೂ ಕೃತಾರ್ಥರಾಗಲಿಲ್ಲ. ಇಂಥವರಿಗೆ ಏನು ಸಮಾಧಾನ ಹೇಳಬೇಕು? ಕೆಳಗಿನ ಶ್ಲೋಕವನ್ನು ಜಪಿಸಿ ಶೋಕವನ್ನು ಮರೆಯಲಿ.

**ಮೂಳ ಮುನ್ಸಿಪಾಲಿಟಿಗೆ ನೂರ್ಕಾಸು ಕೊಟ್ಟರು**
**ಗೋಕಲ್ಲು ಕಟ್ಟೆಂದು ಬೇಡಿದರು, — ಅದು ತಾನು**
**ನೀಕೊಂಬುದೇ ಸರ್ವಜ್ಞ ॥**

* * * *

ಸ್ವಾಮಿ! ಇವರೊಡನೆ ಕಾಡಿ ಬೇಡಿ ಬರೆಯುವುದಕ್ಕಿಂತಲೂ ತಮ್ಮ ಪ್ರತಿಕಾರಕ ಭಟರು ನನ್ನ ವಿಷಯವಾಗಿ ಬೇಕೆಂತಲೇ ಬರೆದಿದ್ದಾರೆ. ನನ್ನ ತಲೆಗೆ ಬಡಿದಂತೆ ಮಾಡಿ ನನ್ನ ಅಳು ಕೇಳುವುದಕ್ಕೆ ಈ ಮಹಾಶಯರಿಗೆ ಆನಂದ. ನನ್ನ ಹುಚ್ಚು ಭಾಷೆ ಇವರಿಗೆ ಹೆಚ್ಚು ಆಶೆ. ಇನ್ನಾದರೂ ನನ್ನ ಬೊಗಳನ್ನು ಕೇಳಿ ಇವರು ನಿದ್ದೆಹೋಗಲಿ. ತಲೆ ಇಲ್ಲದಿದ್ದರೆ, ತಲೆಗೆ ಏಟು ಬೀಳುತ್ತದೆ. ಇದು ನಿಜ. ಇವರಿಗೂ ಹಾಗೆಯೆ. ನನ್ನ ಮಾತನ್ನು ಕೇಳಿ ಕೇಳಿ ಇವರು ಸಕ್ಕರೆ ಹಾಲು ಕುಡಿಯಲಿ! ಇವರು ಹಿಂದೆ ಮಾತಾಡಿದ ವಿಷಯವನ್ನು ಬೇಕೆಂತ ತಿಳಿಯದ ಹಾಗೆ ನಟಿಸಿ, ನನ್ನ ವಿಷಯವಾಗಿ ಬಂಗಾಳಿಯವರಿಗೆ ದೂರು ಹಚ್ಚುತ್ತಾರಂತೆ. ನಾನು ಅಡಿಯಿಂದ ಮುಡಿವರೆಗೆ ಸ್ವದೇಶಿ. ಆದ್ದರಿಂದ ಮದ್ರಾಸ್ ಸರಕಾರಕ್ಕೆ ಬರೆದು ಸ್ವದೇಶಿ ಕಲ್ಲೆಕ್ಟರರನ್ನು ಇಲ್ಲಿಗೆ ಬರಮಾಡಿಸಿದ್ದೇನೆ. ಸರಕಾರವು ನಮ್ಮ ಜಿಲ್ಲೆಗೆ ಸ್ವದೇಶಿ ಸರ್ಜನರನ್ನು ಸ್ವದೇಶಿ ರಿಜಿಸ್ಟ್ರಾರರನ್ನು ಕೊಟ್ಟಿದ್ದಾರೆ. ಹೀಗೆಂದ ಮೇಲೆ ಸರಕಾರವು ಸ್ವದೇಶಿಯಲ್ಲವೆಂದು ಹ್ಯಾಗೆ ಹೇಳ ಬಹುದು? ನಮ್ಮ ದೊಡ್ಡ ಹುದ್ದೆದಾರರು ಎಲ್ಲಾ ಕೆಲಸಗಳನ್ನು ತಾವೇ ನೋಡಿಕೊಳ್ಳುತ್ತಾರಂತೆ.— ಕಲೆಕ್ಟರರು ಪ್ಲೇಗು ಸೋಂಕು ತಟ್ಟದಂತೆ ಉಡಿಪಿಯ ಪರಿಯಾಯಕ್ಕೆ ಯಾತ್ರಿಕರು ಬಾರದ ಹಾಗೆ ಮಾಡಿದ್ದು ಲೇಸು. ಆದರೆ ಮಠದ ಭೋಜನ ಶಾಲೆಯ ಗಾಳಿಯು ಹೊರಗೆ ಬೀಸದ ಹಾಗೆ ಮಾಡಲೆಂದು ಬಡವನ ಅರಿಕೆ. ಭೋಜನಶಾಲೆಯ ಪಂಕಜ ರಜಃಪೂರಿತ ಗಾಳಿಯಲ್ಲಿದ್ದು ಪ್ರಸಾದವನ್ನು ಭುಂಜಿಸಿದವರಿಗೆ ಸಾಯುಜ್ಯವೊ? ಸಾಮಿಪ್ಯವೊ? ಹೇಳಬರುವುದಿಲ್ಲ. ಪರ್ಯಾಯಕ್ಕೆ ಬಂದಿದ್ದ ಬಡ ಮುದುಕಿಯು ಜನಸ್ತೋಮದ ಚರಣಹತಳಾಗಿ ವೈಕುಂಠವನ್ನು ಸೇರಿದಳಂತೆ. ಒಂದು ಸಾಯುವಾಗ ಮತ್ತೊಂದು ಹುಟ್ಟುತ್ತದೆ. ಇದು ಲೋಕಧರ್ಮ. ಪರ್ಯಾಯದಲ್ಲಿ ಮುದುಕಿ ಸತ್ತಿತು. ಶ್ರೀಕೃಷ್ಣಸೂಕ್ತಿ ಹುಟ್ಟಿತು. ರಾ. ರಾ. ಕರೋಡಿ ಸುಬ್ಬರಾಯರ ಮಗುವಿನ ಜನನಕಾಲವೂ ಸುಕಾಲವೇ ಸರಿ! ನಾನು ಮಗುವನ್ನು ಎತ್ತಿ ನೋಡಲಿಲ್ಲ. ಹುಟ್ಟಿದ ಕೂಸನ್ನು ಕೆಲವು ತಿಂಗಳುಗಳ ವರೆಗೆ ಮುಟ್ಟುವುದಕ್ಕೆ ನನಗೆ ಹೊಟ್ಟೆ ತೊಳಸುತ್ತದೆ. ರೂಪಲಾವಣ್ಯ ಸಾಕಷ್ಟು ಇದೆ. ಮಾತು ಚಲೋದಿದೆ! ಹುಟ್ಟಿದಾಗಲೆ ಶ್ಲೋಕರೂಪವಾಗಿ ಮಾತಾಡುತ್ತಿದೆ. ಮಗು! ನಿನಗೆ ಚಿರಾಯುಷ್ಯವಿರಲಿ! ಶಿಶು! ನಿನಗೆ ಮಾರ್ಕಾಂಡೇಯ ಆಯುಷ್ಯವಾಗಲಿ! ಕೂಸು! ನೀನು ಹಿಮಾಚಲವಿರುವಷ್ಟು ಕಾಲ ಬದುಕಿ ಬಾಳು!

---

## ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ?

ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ?
ಸಾಕು, ಸುತ್ತಲು ನೋಡು ಕಣ್ದೆರೆದು ನಿಂದು;
ಲೋಕದಲಿ ವಂದೆ ಮಾತರವೆಂಬುದೊಂದೆ ಮಾ
ತೀ ಕಿವಿಯನೊಡೆಯುತಿರೆ ಉಚ್ಚಳಿಸಿ ಬಂದು.

ಮತಜಾಲದಲಿ ಸಿಲುಕಿ, ಅತಿ ಜಾತಿಯಲಿ ಕುಲುಕಿ,
ಗತಿಗೆಟ್ಟು ಸರ್ವರಲಿ ನೀನಾದೆ ಹಿಂದು;
ಪತಿತರಿಗೆ ಕೈಗೊಟ್ಟು ಭಾರತ ಧ್ವಜ ನೆಟ್ಟು,
ಪಥದೋರಿ ಬಂಗಾಲಿ ಹಾಯುತಿರೆ ಮುಂದು.

ನುಗ್ಗು ನುಗ್ಗುತ ಪರರು ನುಗ್ಗುತ್ತೆ ಬರುತಿಹರು;
ಬಗ್ಗಿರದೆ ಬಾಗುವುದೆ ನಿನಗಾದುದಿಂದು?
ಹಗ್ಗವಿಲ್ಲದ ಕಟ್ಟು, ಬೆತ್ತವಿಲ್ಲದ ಪೆಟ್ಟು,
ಒಗ್ಗಿತೇ ಈ ಗತಿಯು ಸವಿವಿಷವ ತಿಂದು?

ಕಿತ್ತು ಬಿಡು ಸಂದೇಹ, ಇತ್ತುಬಿಡು ಧನ ದೇಹ,
ಮಾತೃಭೂಮಿಯ ಪದಾರ್ಚನೆಗೆ ಬಲವಂದು.
ಹೊತ್ತ ಕಳೆಯಲು ಬೇಡ, ಭ್ರಾಂತಿಗೊಳದಿರು ಮೂಢ!
ಸತ್ತಿರುವೆ ಏತಕೀ ಜೀವನದೊಳಿಂದು?

ಚಿತ್ತವ್ಯಸನಾಕುಲೆಯು ಕುತ್ತಿಗೆಯ ಸಂಕಲೆಯ
ಕತ್ತರಿಸಿ ತನ್ನ ಸೆರೆ ಬಿಡಿಸಬೇಕೆಂದು,
ನೆತ್ತಿಯಲಿ ಬೊಟ್ಟಿಡದೆ, ಬಿರುದುಬಾವಲಿ ತೊಡದೆ,
ಅತ್ತತ್ತು ಹಲುಬುತಿರೆ ಭೂಮಾತೆ ನೊಂದು.

ಸತ್ತಿತೇ ಸಾಹಸವು? ಬತ್ತಿತೇ ಧೃತಿರಸವು?
ಮತ್ತೆ ಮಡಿದಾ ಕರ್ಣನಾ ಬೆನ್ನ ಹಿಂದು
ಎತ್ತ ಪೋದುದು ಪರಶುರಾಮನಾ ತೋಳ್ವಿರಿಸು?
ನೆತ್ತರೊಳಗಿಲ್ಲವೇ ವಿಕ್ರಮದ ಬಿಂದು?

ಕಳವಾದ ಮೇಲ್ನೀನು ಕಳವಳಿಸಿ ಫಲವೇನು?
ಕಳೆದವುದು ನಿನ್ನ ಸ್ವಾತಂತ್ರ್ಯಮಣಿಯೊಂದು.
ಕೆಳಕೋಟಿ ಕೈಸೋಕೆ ಕಹಳೆ ಕೂಗುವುದೇಕೆ?
ಕಳಚಿಬಿಡು ಅಧ್ಯಾತ್ಮ ನಿದ್ರೆ ಮಮ ಬಂಧು.

ಎದ್ದೇಳು, ಎದ್ದೇಳು! ನಿದ್ದೆಗಣ್ಣನು ಕೀಳು;
ಹೊದ್ದಿರ್ದ ವೇದಗಂಬಳಿ ಮೂಲೆಗ್ಹೊಂದು.
ಎದ್ದು ಬರುತಿಹ ಭಾನು, ಎದ್ದಿತೈ ಜಾಪಾನು?
ಬಿದ್ದುಕೊಂಡಿರುವೇಕೆ ಕತ್ತಲೆಯೊಳಿಂದು?

ತಳರು ಭರತ ಕುಮಾರ, ಕೊಳುಗುಳದಲತಿವೀರ,
ಸೆಳೆ ಮಿಂಚಿನಸಿಯ ತೆಗೆ, ರಣಕೆ ಬಳಿಸಂದು!
ಮಳೆ ರಕುತದಲಿ ಬೀಳೆ, ಬೆಳೆ ಕಲಿಗಳಿಂದೇಳೆ,
ಭಳಿರೇ ಭಾರತವರ್ಷ ಸೌಭಾಗ್ಯಮಂದು.

## ಸತ್ಯ ಸೀಮೆಗೆ ತಾಯೆ ನಡಸೆನ್ನ

ಮಳೆ ಹನಿಯ ಬಿಡು ಹೂಗಳಲಿ, ಮರ
ಗಳ ಹಸುರು ಹಚ್ಚೆಯಲಿ, ಕಡಲಿನ
ಬಿಳಿ ನೊರೆಗಳಂಚಿನಲಿ ಮಿರುಗುವ ಸೀರೆಯನು ತಳೆದ,
ಹೊಳೆವ ಹೊಳೆಗಳ ಗಳದ ಸರದಲಿ
ಝಳದ ಹಿಮಗಿರಿಮುಕುಟದಲಿ ಥಳ
ಥಳಿವ ರಮಣಿಯೆ! ಜನ್ಮಧರಣಿಯೆ! ಭರತಭೂಮಣಿಯೇ!

ಹೊತ್ತಿಸಿದೆನೌ ಮುಂಚಿನಾಳಿಕೆ
ವೆತ್ತ ಬೀರರ ಪೂರ್ವದರಸರ
ಹೊತ್ತ ನಿನ್ನುದರವನು; ಧರ್ಮಾಮೃತದ ಬೋಧಕರ
ಹೆತ್ತ ನಿನ್ನೀಬಸುರು, ನನ್ನನು
ಹೆತ್ತು ಹಡೆಯಿತು ವಿಷವ; ಸೀಗೆಯ
ಬಿತ್ತು ಮೊಳೆತಂತಾಯ್ತು ಬಾಳೆಯ ಬುಡದಿ ನನ್ನಿಂದ!

ಕತ್ತಿವೀರರು ನಿನ್ನ ಹಗೆತಲೆ
ಯೊತ್ತಿ, ರಣದಲಿ ಜಯಿಸಿ, ಕುಂಕುಮ
ನೆತ್ತರಿನ ಬೊಟ್ಟಿಟ್ಟು ಶೌರ್ಯದ ಹಣೆಯ ನಡುವಿನಲಿ,
ಮತ್ತೆ ಕೀರ್ತಿಯ ಕಾಲ್ಗೆ ಗೆಜ್ಜೆಯ
ಸುತ್ತಿ ಬೆಳಗಿದ ನಿನ್ನ ಮುಖದಲಿ
ಬಿತ್ತು ನನ್ನೆದೆಯೊಳಗೆ ತುಂಬಿದ ಕತ್ತಲೆಯ ನೆರಳು.

ಮರೆದೆನೌ ಹೊಂಗೋಳ ಕೈಯಲಿ
ಮರಿದೆನೌ ಮಾಯೆಯಲಿ ಹೊಟ್ಟೆಯು
ಹೊರಿದೆನೌ, ನನ್ನೆಲುಬು ಮಾಂಸವ ನಾನೆ ಉಂಡುಂಡು!
ತೊರೆದೆನೌ ನನ್ನವರ ಮುಟ್ಟದೆ
ಒರೆದೆನೌ ಪರತಂತ್ರ ಪಾಠವ
ಬರೆದೆನೌ ನಿನ್ನಯ ಲಲಾಟದಿ ದಾಸ್ಯಮುದ್ರೆಯನು!

ಕದ್ದ ಕಳ್ಳನು ಕೆಡುಕನಾದರು
ಮುದ್ದು ಮಗನಲೆ ತಾಯಿಗಾತನ
ನೊದ್ದು ಬಿಡುವಳೆ? ತಾಯೆ! ನೋಡೌ ಕರುಣದಿಂದೀಗ!
ನಿದ್ದೆಯಿಂದೆಚ್ಚೆತ್ತೆ, ಹೋ! ಹೋ!
ತಿದ್ದಿಕೊಳ್ಳಲು ಹೊತ್ತಿದೇ! ನೀ
ನಿದ್ದು ಕೈಗೊಟ್ಟೆನಗೆ ಕಲಿಸೌ ನಿನ್ನ ಸೇವೆಯನು!

ನನ್ನ ಹಸಿ ಮೈದೊಗಲ ಜೋಡನು
ನಿನ್ನಡಿಗೆ ಜೋಡಿಸುವೆ; ಗುಡಿಸುವೆ
ನನ್ನ ಕೂದಲ ಚೌರಿಯಲಿ ನಿನ್ನಡಿಯ ಧೂಳಿಯನು;

ನನ್ನ ಮನದಲಿ ಹಿಡಿವೆ ನಿನ್ನನು!
ಇನ್ನು ಕುಳ್ಳಿರ್ದೀ ಮನೋರಥ
ವನ್ನು ಬೇಗನೆ ನೂಕಿ ನಡೆವೆನು ಸುಖದ ಮೇರುವಿಗೆ!

ಎಲ್ಲಿ ಸಾಹಸ ಸತ್ವದಳತೆಗೆ
ಬಳ್ಳವಾಗದೊ ನ್ಯೈಯ ಬಣ್ಣವು,
ಎಲ್ಲಿ ಅನ್ಯಾಯಕ್ಕೆ ಕತ್ತಿಯು ಕೊಡದೊ ಬೆಂಬಲವ,
ಎಲ್ಲಿ ಆತ್ಮೋನ್ನತಿಯ ಹಾದಿಗೆ
ಕಲ್ಲು ಮುಳ್ಳನ್ನಿಡರೊ, ಆ ಸುಖ
ಸಲ್ಲಲಿತ ಸಮ ಸತ್ಯ ಸೀಮೆಗೆ ತಾಯೆ ನಡಿಸೆನ್ನಾ!

## ಹಾವಿನ ಹಾಡು

[ರಗಳೆಯ ಪ್ರಭೇದ]

ನಾಗರ ಹಾವೆ! ಹಾವೊಳು ಹೂವೆ! ।
ಬಾಗಿಲ ಬಿಲದಲಿ ನಿನ್ನಯ ಠಾವೆ! ॥
ಕೈಗಳ ಮುಗಿವೆ, ಹಾಲನ್ನೀವೆ ।
ಬಾ ಬಾ ಬಾ ಬಾ ಬಾ ಬಾ ಬಾ ಬಾ ॥ ೧ ॥

ಹಳದಿಯ ಹೆಡೆಯನು ಬಿಚ್ಚೋ ಬೇಗಾ! ।
ಹೊಳಹಿನ ಹೊಂದಲೆ ತೂಗೋ, ನಾಗಾ! ॥
ಕೊಳಲನ್ನೂದುವೆ ಲಾಲಿಸು ರಾಗಾ ।
ನೀ ನೀ ನೀ ನೀ ನೀ ನೀ ನೀ ನೀ ॥ ೨ ॥

ಎಲೆ ನಾಗಣ್ಣ, ಹೇಳೆಲೊ ನಿನ್ನಾ ।
ತಲೆಯಲಿ ರನ್ನವಿಹ. ನಿಜವನ್ನಾ! ॥
ಬಲು ಬಡವಗೆ ಕೊಪ್ಪರಿಗೆಯ ಚಿನ್ನಾ ।
ತಾ ತಾ ತಾ ತಾ ತಾ ತಾ ತಾ ತಾ ॥ ೩ ॥

ಬರಿಮೈ ತಣ್ಣಗೆ, ಮನದಲಿ ಬಿಸಿ ಹಗೆ ।
ಎರಡೆಳೆ ನಾಲಗೆ ಇದ್ದರು ಸುಮ್ಮಗೆ ॥
ಎರಗುವೆ ನಿನಗೆ, ಈಗಲೆ ಹೊರಗೆ ।
ಪೋ ಪೋ ಪೋ ಪೋ ಪೋ ಪೋ ಪೋ ಪೋ ॥ ೪ ॥

(ಪದ್ಯ ಪುಸ್ತಕ)

## ತೆಂಕಣ ಗಾಳಿಯಾಟ

(ರಗಳೆಯ ಪ್ರಭೇದ.)

ಬರಲಿದೆ! ಅಹಹಾ! ದೂರದಿ ಬರಲಿದೆ–

ಬುಸುಗುಟ್ಟುವ ಪಾತಾಳದ ಹಾವೊ? ।
ಹಸಿವಿನ ಭೂತವು ಕೂಯುವ ಕೂವೊ? ॥
ಹೊಸತಿದು ಕಾಲನ ಕೋಣನ—ಓವೊ! ।
ಉಸಿರಿನ ಸುಯ್ಯೋ?—ಸೂಸೂಕರಿಸುತ, ॥ ೧ ॥

ಬರುವುದು! ಬರಬರ ಭರದಲಿ ಬರುವುದು—

ಬೊಬ್ಬೆಯ ಹಬ್ಬಿಸಿ, ಒಂದೇ ಬಾರಿಗೆ ।
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ, ॥
ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ, ।
ಅಬ್ಬರದಲಿ ಭೋರ್ ಭೋರೆನೆ ಗುಮ್ಮಿಸಿ, ॥ ೨ ॥

ಬರುತದೆ! ಮೈತೋರದೆ ಬರುತದೆ! ಅದೆ—

ನಡುಮುರಿಯುತ ನಗನಾವೆಗೆ, ಕೂವೆಗೆ ।
ಉಡಿಸಿದ ಹಾಯಿಯ ಹರಿಯುತ ಬಿರಿಯುತ, ॥
ಹಡಗನು ಕೀಲಿಸಿ, ತುಮುರನು ತೇಲಿಸಿ, ।
ದಡದಲಿ ಝಾಡಿಸಿ, ದೋಣಿಯನಾಡಿಸಿ, ॥ ೩ ॥

ಇದೆ! ಇದೆ! ಬರುತಿದೆ! ಇದೆ! ಇದೆ! ಬರುತಿದೆ—

ಹಕ್ಕಿಯ ಕಣ್ಣಿಗೆ ಧೂಳಿನ ಕಾಡಿಗೆ ।
ಇಕ್ಕುತ, ಹೊಲದೆತ್ತಿಗೆ ದನಕಾಡಿಗೆ ॥
ಫಕ್ಕನೆ ಹಟ್ಟಿಗೆ ಅಟ್ಟಿಸಿ, ಕಾಡಿಗೆ ।
ಸಿಕ್ಕಿದ ಕಿಚ್ಚನು ಊದಲು ಹಾರುತ, ॥ ೪ ॥

ಬರುತಿದೆ! ಇದೆ! ಇದೆ! ಇದೆ! ಇದೆ! ಬರುತಿದೆ—

ಸಡಲಿಸಿ ಮಡದಿಯರುಡಿಯನು ಮುಡಿಯನು,
ಬಡಮುದುಕರ ಕೊಡೆಗರಿ ಹರಿದಾಡಿಸಿ,
ಹುಡುಗರ ತಲೆ ತಲೆ ಟೊಪ್ಪಿಯ ಆಟವ
ದಡಬಡನಾಡಿಸಿ, ಮನೆಮನೆತೋಟವ
ಅಡಿಮೇಲಾಗಿಸಿ, ತೆಂಗನು ಲಾಗಿಸಿ,
ಅಡಿಕೆಯ ಬಾಗಿಸಿ, ಪನೆ ಇಬ್ಭಾಗಿಸಿ,
ಬುಡದೂಟಾಡಿಸಿ, ತಲೆ ತಾಟಾಡಿಸಿ,
ಗುಡಿಸಲ ಮಾಡನು ಹುಲುಹುಲುಮಾಡಿಸಿ, ॥ ೫ ॥

ಬಂತೈ! ಬಂತೈ! ಇದೆ! ಇದೆ! ಬಂತೈ!—

ಗಿಡಗಿಡದಿಂ—ಚೆಲು ಗೊಂಚಲು ಮಿಂಚಲು—
ಮಿಡಿಯನು ಹಣ್ಣನು, ಉದುರಿಸಿ ಕೆದರಿಸಿ
ಎಡದಲಿ ಬಲದಲಿ ಕೆಲದಲಿ ನೆಲದಲಿ,
ಪಡುವಣ ಮೋಡವ ಬೆಟ್ಟಕೆ ಗಟ್ಟಕೆ
ಹೊಡೆದಟ್ಟುತ, ಕೋಲ್ ಮಿಂಚನು ಮಿರುಗಿಸಿ,
ಗುಡುಗನು ಗುಡುಗಿಸಿ, ನೆಲವನು ನಡುಗಿಸಿ,
ಸಿಡಿಲನು ತಾಳಿಗೆ ಬಾಳಿಗೆ ಎರಗಿಸಿ,
ಜಡಿಮಳೆ ಸುರಿವೋಲ್, ಬಿರುಮಳೆ ಬರುವೋಲ್,
ಕುಡಿ ನೀರನು ಒಣಗಿದ ನೆಲಕೆರೆವೋಲ್.
ಬಂತೈ ಬೀಸುತ! ಬೀಸುತ ಬಂತೈ!
ತೆಂಕಣ ಗಾಳಿಯು ಕೊಂಕಣ ಸೀಮೆಗೆ
ಬಂತೈ! ಬಂತೈ! ಬಂತೈ! ಬಂತೈ! ॥ ೬ ॥

(ಪದ್ಯ ಪುಸ್ತಕ.)

## ಹುತ್ತರಿ ಹಾಡು

ಎಲ್ಲಿ ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೋ?
ಎಲ್ಲಿ ಮೋಹನ ಗಿರಿಯ ಬೆರಗಿನ ರೂಪಿನಿಂದಲಿ ನಿಂದಳೋ?
ಎಲ್ಲಿ ಮುಗಿಲಲಿ ಮಿಂಚಿನೋಲ್ ಕಾವೇರಿ ಹೊಳೆ ಹೊಳೆ ಹೊಳೆವಳೋ?
ಎಲ್ಲಿ ನೆಲವನು ತಣಿಸಿ ಜನಮನ ಹೊಲದ ಕಳೆ ಕಳೆ ಕಳೆವಳೋ?
ಅಲ್ಲೆ ಆ ಕಡೆ ನೋಡಲಾ!
ಅಲ್ಲೆ ಕೊಡಗರ ನಾಡಲಾ!
ಅಲ್ಲೆ ಕೊಡಗರ ಬೀಡಲಾ!

ಸವಿದು ಮೆದ್ದರೊ ಯಾರು ಪೂರ್ವದಿ ಹುಲಿಯ ಹಾಲಿನ ಮೇವನು?
ಕವಣೆ ತಿರಿ ಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು?
ಸವರಿ ಆನೆಯ ಸೊಂಡಿಲಲಿ ರಣಕೊಂಬನಾರ್ ಭೋರ್ಗರೆದರೋ?
ಸವೆದು ಸವೆಯದ ಸಾಹಸತ್ವದ ಕ್ಷಾತ್ರ ಬೇಟೆಯ ಮೆರೆದರೋ?
ಅವರೆ ಸೋಲ್ ಸಾವರಿಯದರು!
ಅವರೆ ಕಡುಗಲಿ ಗರಿಯರು!
ಅವರೆ ಕೊಡಗಿನ ಹಿರಿಯರು!

ತಮ್ಮ ನಾಡಿನ ಕೊರಳು ದಾಸ್ಯದ ನೊಗದ ಭಾರಕೆ ಬಗ್ಗದೊಲ್,
ಹೆಮ್ಮೆಹಗೆಗಳ ಹೊಡೆದು ಹಿರಿಯರು ಹಸಿದು ಹಾರುವ ಬಗ್ಗದೊಲ್,
ಬೊಮ್ಮಗಿರಿಯಿಂ ಪುಷ್ಪಗಿರಿಪರ್ಯಂತ ಬೆಳೆದೀ ದೇಶವು
ಧರ್ಮದಾನದ ಕಟ್ಟುಕಟ್ಟಳೆ ರೀತಿನೀತಿಯ ಕೋಶವು!
ನಮ್ಮ ಕೊಡಗಿದು ಜಮ್ಮದು;
ಜಮ್ಮ ಕೊಡಗಿದು ನಮ್ಮದು;
ನಮ್ಮೊಡಲ್ ಬಿಡಲಮ್ಮದು!

ಇದು ಅಗಸ್ತ್ಯನ ತಪದ ಮನೆ, ಕಾವೇರಿ ತಾಯ ತವರ್ಮನೆ,
ಕದನಸಿರಿಗುಯ್ಯಾಲೆ ತೂಗಿದನಿಲ್ಲಿ ಚಂದಿರವರ್ಮನೆ!
ಇದಕೊ! ಚೆಂಗಾಳ್ವರಸರಾಡಂಬರವು ಕುಣಿದ ಶ್ರೀರಂಗವು!
ಇವೊ! ಇದೊ! ಇಲ್ಲುರುಳ್ದ ಹಾಲೇರಿಯರ ಬಲಗಿರಿಶೃಂಗವು!
ವಿಧಿಯ ಮಾಟದ ಕೊಡಗಿದು!
ಮೊದಲೆ ನಮ್ಮದು, ಕಡೆಗಿದು
ಕದಲದೆಮ್ಮನು; ಬೆಡಗಿದು!

ಒಮ್ಮತವು ಒಗ್ಗಟ್ಟು ಒಂದೇ ಮನವು ಎಲ್ಲಿದೆ ಹೇಳಿರಿ?
ಸುಮ್ಮನಿತ್ತರೊ ದಟ್ಟಿಕುಪ್ಪಸ! ಹಾಡು ಹುತ್ತರಿಗೇಳಿರಿ?
ಚಿಮ್ಮಿ ಪಾತುರಿಕೋಲ ಹೊಯ್ಲಿಗೆ ಕುಣಿವ ಪದ ಹೊರ ಹೊಮ್ಮಲಿ!
ಅಮ್ಮೆ ಹರಸಿದ ಸೀಮೆ ನಮಗಿದು ಇರಲಿ ನಮ್ಮದೆ ನಮ್ಮಲಿ!
ನೆಮ್ಮದಿಯನಿದು ತಾಳಲಿ!
ಅಮ್ಮೆಯಾ ಬಲ ತೋಳಲಿ
ನಮ್ಮ ಕೊಡಗಿದು ಬಾಳಲಿ!

(ಪದ್ಯ ಪುಸ್ತಕ)

# ಭೀಷ್ಮ ನಿರ್ಯಾಣ

(ಮತ್ತೇಭವಿಕ್ರೀಡಿತ)

ಇಳಿದಂ ಪರ್ವತದಗ್ರದಿಂದೆ ದಿನಪಂ. ಕೆಂಪೇರ್ದುದಾಕಾಶಮಂ-
ಡಳಮುಂ ಶೋಭಿಸಿದತ್ತು. ಪೂರ್ವದಿಶೆಯೊಳ್ ಕಾಲಿಟ್ಟುದೈ ಕತ್ತಲುಂ.
ಇಳಿದಸ್ತಂಗತನಾಗುತಿರ್ದನಧಿಕ ಶ್ರೀಯಃಪ್ರತಾಪಂಗಳಿಂ
ವಿಳಸದ್ಭಾರತದದ್ವಿತೀಯ ರವಿಯುಂ ಭೀಷ್ಮಂ ಕುರುಕ್ಷೇತ್ರದೊಳ್.

ಶಿರಮಂ ಬಾಗಿಸೆ ಚಿಂತೆಯಿಂ, ಗಳದ ಸಂದೊಳ್ ಸಿಲ್ಕಲಾ ನಿಟ್ಟುಸಿರ್,
ಸುರಿದುಂ ಕಂಬನಿ ಜಾರೆ ಗಲ್ಲತಟದೊಳ್, ಕುಂತೀಕುಮಾರರ್ ವಲಂ
ಮರಣಾಸನ್ನನ ತಲ್ಪಮಂ ಬಳಸಿ ನಿಂದರ್; ಭೀಷ್ಮನುಂ ಕಂಗಳಂ
ತೆರೆದುಂ ನೋಡಿದನೊಮ್ಮೆ ಕೃಷ್ಣಮುಖಮಂ ಮಂದಸ್ಮಿತಾಹ್ಲಾದದಿಂ

"ಅರಿರೇ! ಧರ್ಮಜ! ಮಾತೃಭೂಮಿಯ ಪರಾಧೀನತ್ವದಾಪಾಶಮಂ
ತರಿದುಂ, ಧರ್ಮಪತಾಕೆಯಂ ಭರತಕ್ಷೋಣೀ ವಕ್ಷದೊಳ್ ನೆಟ್ಟಿಹೈ!
ಶಿರದೊಳ್ ಪಾತಕಮಿಲ್ಲಮಿಲ್ಲಮಿನಿಸುಂ ದುರ್ಯೋಧನ ಧ್ವಂಸದಿಂ.
ಧರೆಯಂ ಪಾಲಿಸು ಮೆಚ್ಚುವೊಲ್ ಪ್ರಜೆಗಳುಂ! ಕರ್ತವ್ಯದೊಳ್ ಕಣ್ಣಿಡೈ!"

ನುಡಿಯಿಂದುಜ್ವಲಕಾಂತಿ ಭೀಷ್ಮಮುಖದೊಳ್ ವಿಭ್ರಾಜಿಸಲ್, ಹಸ್ತದಿಂ-
ದೊಡನಾಶೀರ್ವದಿಸುತ್ತ ಧರ್ಮಸುತನಂ, ಶ್ರೀಕೃಷ್ಣನುತ್ಸಂಗದೊಳ್
ಮುಡಿಯಂ ನೀಡಿ, ಮಲಂಗಿದಂ ಸುಭಟಭೀಷ್ಮಂ ಯೋಧಶಾರ್ದೂಲಮಂ
ದೊಡಲಿಂ ನಂದುದು ಲೇಶಜೀವಕಳೆಯುಂ–ನಿರ್ಯಾಣದಾ ದೀಪದೋಲ್

(ಸುವಾಸಿನಿಯಿಂದ ೧೯೦೩)

## ಅಣ್ಣನ ವಿಲಾಪ.

(ಚೌಪದಿ.)

"ಎಲ್ಲಿ ಹೋದನು ಅಮ್ಮ ಪುಟ್ಟಣ್ಣ ನಮ್ಮಾ? ।
ನಿಲ್ಲದವನನು ತರುವೆ ಹುಡುಕಿ ನಾನಮ್ಮಾ! ॥
ಅಲ್ಲಿಲ್ಲ, ಇಲ್ಲಿಲ್ಲ, ಎಲ್ಲಿಹನು ತಮ್ಮಾ? ।
ತಲ್ಲಣಿಸುತಿದೆ ಮನವು; ಹೇಳು ಸೀತಮ್ಮಾ! ॥ ೧ ॥

"ಹಸೆಯ ಮಗುವನು ಮೊನ್ನೆ ಬಂದವರು ನೋಡಿ, ।
ಮುಸುಕು ಬಿಳಿ ಕಣ್ಣುಗಳ ಕದಗಳನು ಹೂಡಿ, ॥
ಹಸಿ ತುಳಸಿದಳ ನೀರ ಒಣ ಬಾಯೊಳೂಡಿ, ।
ಬಿಸಿಲುಕನ್ನಡಿಯನ್ನು ಮಾಡಿನಲಿ ಮಾಡಿ," ॥ ೨ ॥

"ಸುದ್ದ ನೀರನು ಮಿಾಸಿ, ಅರಸಿನವ ಪೂಸಿ, ।
ಗದ್ದೆ ಗೋರುವ ಹಲಗೆಯಲ್ಲಿ ಎಲೆ ಹಾಸಿ, ॥
ಮುದ್ದು ಪುಟ್ಟನನುಡಿಗೆಯಿಂದ ಸಿಂಗರಿಸಿ, ।
ಸದ್ದಿಲ್ಲದೆಲ್ಲಿಗೊಯ್ದರು ಹೆಗಲೊಳಿರಿಸಿ?" ॥ ೩ ॥

"ಚೆನ್ನಾಗಿ ಸೇಸೆಮಳೆ ಸೂಸುತಿರೆ ಕನ್ನೆ, ।
ನಿನ್ನೊಡನಿರುಳ್ ನಿದ್ದೆಯಲಿ ಕಂಡೆ ನಿನ್ನೆ— ॥
'ಬನ್ನಿ ಬಾ ಬಾ' ಎಂದು ಮಾಡಿ ಕೈಸನ್ನೆ ।
ನನ್ನೆದುರು ಬಂದು ಹೋದಾ ಪುಟ್ಟನನ್ನೆ." ॥ ೪ ॥

"ಮಬ್ಬು ತೆರೆ ಹಿಂದುಗಡೆ ಜಾರಿದುದು ತಾರೆ..।
ಹೆಬ್ಬಿಸಿಲ ಉಗುಳುವಂತಿಹುದು ಹೊತ್ತಾರೆ. ॥
ಉಬ್ಬಸದಿ ಮೊದಲೆ ಬಾಲನ ಮೈಯು ತಾರೆ, ।
ಅಬ್ಬೆ! ನಡೆಯುವನೆಂತು? ಬೇಗ ಕರತಾರೆ." ॥ ೫ ॥

"ಬಳ್ಳಿ ಉಯ್ಯಾಲೆಯಲಿ ಗಿಳಿಯು ಮರಿ ತೂಗಿ, ।
ಉಳ್ಳಲರ ಜೇನ್‌ಗುಡಿದು ಮರಿದುಂಬಿ ಕೂಗಿ, ॥
ಬೆಳ್ಳಿ ನೀರ್ ಬಿಸಿಲಲ್ಲಿ ಮುಳುಗಿದಂತಾಗಿ ।
ಹಳ್ಳಿ ಹಗಲಿರೆ—ಪುಟ್ಟನಾಡುವನೆ ಹೋಗಿ?" ॥ ೬ ॥

"ತಾಯ್ದನದ ಬಳಿ ಹೋಗದೀ ಕರುವು ನಿಂದು, ।
ಕಾಯ್ದನಂ ಕರೆಯುತಿದೆ ನೆನಸಿ 'ಮ್ಬೇ' ಎಂದು. ॥
ನಾಯ್ದುಗುಡದಲಿ ಬಿಡದೆ ಮಗುವಿದ್ದ ಸ್ಥಲವಾ, ।
ಬಾಯ್ದೆರೆಯದಾಗಾಗ ಮೂಸುತಿದೆ ನೆಲವಾ. ॥ ೭ ॥

"ಇವನ ಚೆಲುವಿನ ಪುಂಜ ಹೋಯ್ತೆ ಮರಿಯಲ್ಲೆ! ।
ಸವೆಯಿತೇ ಕಾಲವಂಕುರದ ಪರಿಯಲ್ಲೆ! ॥
ಕುವರನಾ ಬಾಳೆ ಕಂದಿತೆ ಕಂದಿನಲ್ಲೆ! ।
ಸವಿ ಬಂದುಗೇನಾಯ್ತೆ ನನೆಸಂದಿನಲ್ಲೆ! ॥ ೮ ॥

"ದೀಪಾವಳಿಯ ದಿನ ಬಲೀಂದ್ರ ಮರ ನೆಡಿಸಿ, ।
ಕೇಪಳಂಬಳ ಕಾಯಿ ಗುಂಡುಸರ ತೊಡಿಸಿ, ॥
ಆ ಪೂಜೆಯಾಗುತಿರೆ ತಮ್ಮನನು ಬಿಟ್ಟು, ।
ಕೈಪರೆ ಹೊಡೆವುದೆಂತು? ಬರುವುದೇ ಪುಟ್ಟು?" ॥ ೯ ॥

"ನರಿಮೊಗರು ಜಾತ್ರೆಯಲಿ ನನ್ನನ್ನು ಕಂಡು, ।
ಅರರೆ! ತಮ್ಮನನೇಕೆ ನಾನು ಕರಕೊಂಡು ॥
ಬರಲಿಲ್ಲ? ಎಂದಾ ಗೆಳೆಯರೆನ್ನ ಕೇಳೆ, ।
ಮರುಮಾತು ನಾನೇನು ಕೊಡಲಮ್ಮ ನಾಳೆ?" ॥ ೧೦ ॥

"ಒಬ್ಬನೇ ತಿನಿಸುಣಿಸು ನಾ ಬೇಡಲಾರೆ. ।
ಇಬ್ಬರಿಲ್ಲದೆ ಈಗ ನಾನಾಡಲಾರೆ. ॥
ತಬ್ಬಿಕೊಂಡೆನ್ನ ನೀಂ ಅಳುವುದೇನಿಂತು? ।
ಅಬ್ಬೆ, ಅಳದಿರು ಪುಟ್ಟ ಎಲ್ಲಿಹನು ಸಿಂತು? ॥ ೧೧ ॥

**ತಾಯಿ**-"ಮುತ್ತಿನಾ ಸರಪಳಿಯೆ! ಮಾತಿನರಗಿಳಿಯೆ! ।
ಎತ್ತ ಹೋದನು ತಮ್ಮ ಎಂಬುದನು ತಿಳಿಯೆ. ॥
ಇತ್ತವನೆ ಎತ್ತಿದನು! ಕೇಳು, ಪುತ್ಥಳಿಯೇ! ।
ಬಿತ್ತಿದವ ಒತ್ತರಿಸಿದನು ತನ್ನ ಬಳಿಯೆ! ॥ ೧೨ ॥

"ಮಗುವು, ಮುದ್ದಿನ ಮೊಗವು, ಅವನಿಲ್ಲಿ ಬಾರಂ. ।
ಅಗಲಿ ನಮ್ಮನು ಹೋದ ಹೋದ ಬಹುದೂರಂ. ॥
ಜಗದಂಬೆ ತೊಡೆಯಲ್ಲಿ ಲಾಲಿ ಕೇಳುತ್ತ ।
ಸೊಗನಿದ್ದೆಗೊಂಡವನು ಬರುವನೇ ಇತ್ತ?" ॥ ೧೩ ॥

**ಮಗು**-"ಈಗಲೇ ಹೊರಡುವೆನು, ಕೈ ಬಿಡೌ, ಅಮ್ಮಾ! ।
ಬೇಗ ಅಪ್ಪನು ಬರುವ ಮುಂಚೆಯೇ, ಅಮ್ಮಾ! ॥
ಹೋಗುವೆನು, ಹೋಗುವೆನು; ಹೊರ ಹೊರಡು; ಅಮ್ಮಾ! ।
ಕೂಗಿ ಅಳದಿರು; ದಾರಿ ತೋರಿಸೌ! ಅಮ್ಮಾ!" ॥ ೧೪ ॥

**ತಾಯಿ**-"ಚಂದು ಕೇಳ್! ದಾರಿಯಲಿ ನಾ ಪೋಪೆ ಮುಂದೆ. ।
ಬಂದಪನು ಬಳಿಕ ನಿನ್ನಯ ಮುದ್ದು ತಂದೆ. ॥
ಮಂದಿ ಮಕ್ಕಳು ಪಡೆದು ಬಾ ನೀನು ಹಿಂದೆ." ।
ಎಂದವನ ಬಾಯಿ ಬಿಗಿದಳು ಮುದ್ದಿನಿಂದೆ. ॥ ೧೫ ॥

ಆರಲಿಲ್ಲವು! ತಾಯ ಮನದ ಪರಿತಾಪಂ. ।
ಆರಿದುದು ಮಾತೆಯಾ ಮನೆಯ ಮಣಿದೀಪಂ. ॥
ಆರಲಿಲ್ಲವು ತಾಯ ಕಂಬನಿಯ ಕೂಪಂ. ।
ಆರಿದುದು ಭಾಗ್ಯಾಬ್ಧಿ. ಅಯ್ಯಯ್ಯೊ ಪಾಪಂ! ॥ ೧೬ ॥

(ಪದ್ಯ ಪುಸ್ತಕ)

# ಡೊಂಬರ ಚೆನ್ನಿ

**(ಗೋವಿನ ಕಥೆಯ ಮಟ್ಟು)**

ಬೆರಗು ಕಣ್ಣಿನ, ಬೆರಳ ವಿಾಸೆಯ, ಬೆರಸಿದಾ ನಗುಮೋರೆಯಾ, ।
ಅರಸನಿದ್ದನು ಡೊಂಬರಾಟಕೆ ಸೆರೆಯ ಸಿಕ್ಕಿದ ಮನದಲಿ. ॥ ೧ ॥

ದಾಟಿ ಪಡು ಹೊಳೆ, ಜನರ ಸಂದಣಿ ಆಟ ನೋಡಲು ಕೂಡಿತು; ।
ಕೋಟೆಕೊತ್ತಳ ಮಾಡುಮನೆ ಮರಕೊಂಬೆಗಳ ಮೇಲಿದ್ದರು. ॥ ೨ ॥

ಗುಲ್ಲು ಮಾಡರು; ಸೊಲ್ಲನಾಡರು; ಎಳ್ಳು ಬಿದ್ದರೆ ಬೊಬ್ಬೆಯು. ।
ಅಲ್ಲಿ ಜನಗಳ ನುಗ್ಗುನುಗ್ಗಿಗೆ ಇಲ್ಲ ಸಾಸಿವೆ ಹಾಕಲು. ॥ ೩ ॥

ಅತ್ತಲಿದ್ದರು ಸೆಟ್ಟಿಮುದ್ದರು, ಗುತ್ತಿನಯ್ಯಂತಾಯರು, ।
ಇತ್ತ ಪೊಕ್ಕುಳ ಅರಸುಮಕ್ಕಳ ಒತ್ತಿನಲಿ ಕಳದೆಡದಲಿ. ॥ ೪ ॥

ಗುರು, ಸುಮಂಗಳ, ಬುಧ, ಗ್ರಹಂಗಳ ನಡುವೆ ತಿಂಗಳ ಚೆಲುವಿನಾ ।
ಅರಸು ಅಂಗಳದಲಿ ಜನಂಗಳ ನಡುವೆ ಸಂಗಳಿಸಿದ್ದನು. ॥ ೫ ॥

ಆಗ ಬಡಿಯಿತು ಡೋಲು ಬಡಬಡ, ಬಾಗಿ ಅರಸಿಗೆ ತಲೆಯನು, ।
ಬೇಗ ತಿರ್‍ರನೆ ತಿರುಗಿ, ಸರ್‍ರನೆ ಲಾಗ ಹಾಕಿದ ಡೊಂಬನು. ॥ ೬ ॥

ನೀರಿನೊಂದಿಗೆ ಆರು ಬಿಂದಿಗೆ ಹೇರಿ ನೆತ್ತಿಯ ಮೇಲಕೆ, ।
ಹಾರಿ ಧಿಕ್ಕಿಟ, ಕುಣಿದನಕ್ಕಟ ನೀರು ಹೊರಗಡೆ ಚೆಲ್ಲದೆ! ॥ ೭ ॥

ತೆಗೆದು ಡೊಂಬನು ಹುರಿಯ ಸುಂಬನು, ಬಿಗಿದು ಬಟ್ಟಲನೇರಿಸಿ, ।
ಬೊಗರಿಯಂತೆಯೆ ತಿಗರಿಯಂತೆಯೆ ನೆಗೆದು ಕುಣಿದನು ಧಿಮಿಧಿಮಿ. ॥ ೮ ॥

ಮಾವಿನಾಟದ ಹಾವಿನಾಟದ ಸೋವುಸೋಜಿಗ ತಿಳಿಯದು; ।
ಯಾವ ತಂತ್ರವೊ? ಮೋಡಿಮಂತ್ರವೊ? ನಾವು ಅರಿಯೆವು ಎಂದರು. ॥ ೯ ॥

ಬಿದಿರು ಒಂದನು ಹೊತ್ತು ತಂದನು ಮುದುಕ ಡೊಂಬನು ಹೆಗಲಲಿ. ।
ಅದನು ಬಲದಲಿ ಹೂಡಿ ನೆಲದಲಿ, ಚದುರೆ ಮಗಳನು ಕರೆದನು. ॥ ೧೦ ॥

ಹೆಣ್ಣು ಬಂದಳು ಹಣ್ಣು ಬಿಡದಾ ಸಣ್ಣ ಬಳ್ಳಿಯ ಬೆಡಗಿನಾ, ।
ಮಣ್ಣೊಳಾಡುವ ಬೆಣ್ಣೆಯಂತಿಹ, ಕಣ್ಣುಕಟ್ಟಿನ ಸೊಬಗಿನಾ. ॥ ೧೧ ॥

ಮಣಿದು, ಹಗ್ಗಕೆ ಹಾರಿ ಸಿಡಿದಳು ಕುಣಿವ ಮರಿಸಿಡಿಲಂತೆಯೇ. ।
ಹೆಣೆದು ಮೈಯನು, ಹಾವಿನಂತೆಯೆ ಗಣೆಗೆ ಸರಿದಳು ಸರ್‍ರನೆ. ॥ ೧೨ ॥

ಬಳಿಕ ಬೆನ್ನನು ಕೋದು, ಕೈಕಾಲ್ಗಳನು ತೇಲಿಸಿ, ಹೊಳೆದಳು— ।
ಮಳೆಯ ಬಿಲ್ಲಿನ ಹಾಗೆ, ಸ್ಥಾಣುವಿನೆಳೆಯ ಚಂದ್ರನ ಚಂದದಿ. ॥ ೧೩ ॥

ಕೊರಳು ಮಾಲಿತು, ಹೆರಳು ಜೋಲಿತು, ಕುರುಳು ತೇಲಿತು ತರಳೆಯಾ. ।
ಉರುಳುತಲೆ ಕಾಲ್‌ಬೆರಳ ಕೊನೆಯಲಿ ಮರಳಿ ಹೊಲಿದಳು ಜಡೆಯನು. ॥ ೧೪ ॥

ಗಳೆಯ ಡೊಂಬತಿಯಾಟದಾ ಪರಿ, ಗಾಳಿ ಕೈಗಿರಿಗಿಟಗಿರಿ, ।
ಸುಳಿಯ ನೀರಿನ ತಲೆಯ ಹೂಗರಿ, ಸೆಳೆಯ ಮಿಂಚಿನ ತೋಳ್ ಸರಿ ॥ ೧೫ ॥

ಅರರೆ! ಡೊಂಬರ ಹೆಣ್ಣು ಮರಿ ಗರಗರನೆ ಎತ್ತರ ಭರದಲಿ ।
ತಿರುಗುವಾ ತೆರ ಹುಡಿಯು ಅರಸಿನ ಎರಚಿತೆರಚಿತು ಕಣ್ಣಿಗೆ. ॥ ೧೬ ॥

ಇದ್ದು ನೋಡಿದ, ಎದ್ದು ನೋಡಿದ, ಕದ್ದು ನೋಡಿದ ಹುಡುಗಿಯಾ; ।
ಮುದ್ದು ಗಿಳಿಯಲಿ ಅರಸಿನಾ ಮನ ಹದ್ದು ಹಾರಿತು ಬೇಗನೆ. ॥ ೧೭ ॥

ಬಿಗಿದು ಬಿಚ್ಚುವ ಬಿಚ್ಚಿ ಬಿಗಿಯುವ ಮುಗಿಲಕೂದಲ ಬಲೆಯಲಿ ।
ಇಗೊ! ಇಗೋ! ಸಿಲುಕಿದುದು ಅರಸನ ಮಿಗದ ಕಣ್ಗಳ ಜೋಡಿಯು. ॥ ೧೮ ॥

"ಏಕೆ? ಡೊಂಬನೆ! ನಿಲ್ಲಿಸಾಟವ! ಈಕೆಯಲಿ ಮನ ಸೋತುದು. ।
ಸಾಕು! ಬಂಗರು ನಾನೆ! ಕೈಸರ ಹಾಕುವೀಕೆಯ ಕೊರಳಲಿ." ॥ ೧೯ ॥

ಎಂದು ನಂದಾವರದ ಬಂಗರು ನೊಂದು ನಂದದ ತಾಪದಿ ।
ಮುಂದೆ ನಿಂದಾ ಡೊಂಬನೊಂದಿಗೆ 'ಸಂದಿಸಿವಳನು' ಎಂದನು. ॥ ೨೦ ॥

ನುಡಿದ ಮಾತಿನ ಮಾನಭಂಗದ ಹೊಡೆತ ನುಂಗಿದ, ಸಿಡುಕಿನಾ ।
ಕಿಡಿಯ ಕಣ್ಣೀರಿಂದ ನಂದಿಸಿ, "ಒಡೆಯ! ಬಿನ್ನಹ ಲಾಲಿಸು!" ॥ ೨೧ ॥

"ಮಗಳ ಹೆಸರಿನ ಮೈಗೆ ಸೂಳೆಯ ಬೆಡಗ ಸೀರೆಯ ಉಡಿಸೆನು. ।
ನಗರಿ? ಹೆಸರಿನ ತಲೆಗೆ **ಪಾದರಿ** ಮುಗುಳು ಹೂವನು ಮುಡಿಸೆನು." ॥ ೨೨ ॥

ಉಲಿಯೆ ಡೊಂಬನು, ಕೆಲರ ಪಿಸಿಪಿಸಿ, ಕೆಲರ ಗುಜುಗುಜು, ಕೆಲವರಾ ।
ಗಲಭೆ ಕಳಕಳ ಆಟದಾ ಕಳದಲಿ ವಿಶಾಲಕೆ ತುಂಬಿತು. ॥ ೨೩ ॥

ಒಡನೆ ಡೊಂಬನು ಡೋಲು ಬಡಿದನು, ಬಡಿದು ಗುಡುಗುಡು ಗುಡುಗಿದಾ ।
ಗುಡುಗಿ ಓಡಿದ, ಓಡಿ ತೋರಿದ ಗಿಡುಗನನು ಗಳೆ ಗುಬ್ಬಿಗೆ. ॥ ೨೪ ॥

ಹೀಗೆ ತೋರಿಸಿ, ಮಾಯವಾದನು ಲಾಗದಲಿ ಕಳದಾಚೆಗೆ. ।
ಹೋಗಿ ಹೋದನು ಸನ್ನೆ ಮಾಡುತ ಕೈಗಳಿಂದಾ ಹುಡುಗಿಗೆ. ॥ ೨೫ ॥

ಕಣ್ಣುಕತ್ತಲೆಗೊಳಿಪ ಗಣೆಯಿಂ ಹೆಣ್ಣು ದುಮುಕಿತು ಹೊಳೆಯಲಿ– ।
ಬಣ್ಣ ಕಿಡಿಯಲಿ ಬಿದ್ದು ಬಾನಿಂ, ತಣ್ಣಗಾಗುವ ಬಿರುಸಿನೋಲ್. ॥ ೨೬ ॥

ಎಲ್ಲಿ? ಹೋ! ಹೋ! ಹೋಯ್ತು! ಹೋಗಿರಿ! ಎಲ್ಲಿ? ಎಲ್ಲೆಂಬರಸನಾ ।
ತಲ್ಲಣದ ಕಟ್ಟಾಜ್ಞೆಗಾಗಲೆ ಎಲ್ಲರೋಡಿದರ್ ಅರಸುತಾ. ॥ ೨೭ ॥

ಆಳು ನಾಲ್ವರು ದಡಕೆ ಹಾಯ್ದರು. ಆಳವಿಹ ಹೊಳೆನೀರಲಿ ।
ಆಳುವೇಳುವ ಇಬ್ಬರನು ತಮ್ಮಾಳುವವನೆಡೆಗೊಯ್ದರು. ॥ ೨೮ ॥

ಗದ್ದಿಗೆಯ ಬಳಿ ಕೆಡವಿದರು–ನೀರ್ ಮೆದ್ದ ಉದ್ದಿನ ತೊಗಲಿನಾ, ।
ಬಿದ್ದ ಮೋರೆಯ, ನಿದ್ದೆಗಣ್ಣಿನ, ಒದ್ದೆ ಕೂದಲ ಡೊಂಬನಾ. ॥ ೨೯ ॥

"ದೇವ ಬಂಗರೆ! ಕರೆವುದೆನ್ನನು ಸಾವು; ಬಾಗಿಲು ತೆರೆದಿದೆ. ।
ಜೀವ ನಿಲ್ಲದು. ಅರಿಕೆ ಮಾಡುವೆ ಕಾವುದೆನ್ನಪರಾಧವ." ॥ ೩೦ ॥

"ಹಿಂದೆ ನಾಲ್ಕೈ ವರ್ಷಗಳ ಕೆಳಗೊಂದು ಸಲ ನಾನಿಲ್ಲಿಗೆ ।
ಬಂದು, ಗೈದಾಟಕ್ಕೆ ಪಾದದ ತಂದೆ ತಂಗಿ ಸುನಂದೆಯು–" ॥ ೩೧ ॥

ಎಂದು ನಿಲ್ಲಲು ಡೊಂಬನರೆನುಡಿ, "ಮುಂದೆ ಮುಂದೆ"ನೆ ಬಂಗರು; ।
"ಮುಂದೆ ತಮ್ಮ ಸುನಂದೆ ಕಿರುಮಗಳೊಂದಿಗರಮನೆ ಬಿಟ್ಟಳು." ॥ ೩೨ ॥

"ಅಂದು ರತ್ನಾವತಿಗೆ ತುಂಬದು ಒಂದು ವರ್ಷವು. ಕೂಸಿನಾ ।
ಮುಂದು ಎಣಿಸದೆ, ನಿಂದೆ ಗಣಿಸದೆ, ಹಿಂದೆ ಬಂದಳು ಪಾಪಿಯಾ." ॥ ೩೩ ॥

"ಸಂದವಿಂದಿಗೆ ವರ್ಷಗಳು ಹನ್ನೊಂದು–ಸತ್ತು ಸುನಂದೆಯು. ।
ಅಂದಿನಿಂದಿದು ಕೋಗಿಲೆಯ ಮರಿ **ಕಾಗೆ** ನಾನೆನೆ ಆಯಿತು." ॥ ೩೪ ॥

"ಇವರೆ ರತ್ನಾವತಿಯು; ಮುಂಚಿನ ಇವರ ಹೆಸರದು ರನ್ನೆಯು. ।
ಇವಳೆ ಕೊಳೆ ಸೋಕದ ಸುಕನ್ಯೆಯು, ಇವಳೆ ಡೊಂಬರ ಚೆನ್ನೆಯು." ॥ ೩೫ ॥

"ಆರೆ ದೂರಕೆ ಅಲೆದ ಕಡಲಿನ ನೀರೆ ಕಡಲನೆ ಕೂಡಿತು, ।
ಬೇರೆ! ಹಾ! ಹಾ!" ಎಂದು ಡೊಂಬನು ತೀರಿಸದೆ ಕಣ್ಮುಚ್ಚಿದ. ॥ ೩೬ ॥

ಅಳಿದ ಡೊಂಬಗೆ ಉತ್ತರಕ್ರಿಯೆಗಳನು ಬಂಗರು ಮಾಡಿಸಿ, ।
ಗಳೆಯ ಡೊಂಬರ ಚೆನ್ನೆಯನು ಮದವಳಿಗ ಕೈಯಲಿ ಹಿಡಿದನು. ॥ ೩೭ ॥

ತನ್ನ ರಾಜ್ಯದ ಪಾಲು ಬಳುವಳಿಯನ್ನು ಕೊಟ್ಟನು ರನ್ನೆಗೆ, ।
ಚೆನ್ನೆ ಸಂತತಿಗಾಯ್ತು ಅಪರಿಂ ಹೆಸರು ಡೊಂಬಾ ಹೆಗ್ಗಡೆ. ॥ ೩೮ ॥

(ಪದ್ಯ ಪುಸ್ತಕ)

---

## ಕಡೆಕಂಜಿ

ತುಳುವ ನಾಡೊಳು ಹೊಳಲು ಮೆರೆವುದು । ಹಳೆಯ ಕಾರ್ಕಳ ಎಂಬುದು; ॥
ಕೊಳವು ಕುಂಟೆಯು ಪೈರುಪಚ್ಚೆಯು । ತಳೆದ ಮನೆ ಅಲ್ಲಿದ್ದವು. ॥ ೧ ॥

ಅರಸು ಒಂದಿನ ತಿರುಗುತಿರೆ, ಅ । ಚ್ಚರಿಯ ಒಂದನು ಕಂಡನು— ॥
ಮರುಕ ತೋರುವ, ಕರೆದು ಚೀರುವ ! ಬಿರುಮ ಸೆಟ್ಟಿಯ ಕಂಡನು– ॥ ೨ ॥

ಕಂದು ಮೋರೆಯ, ನಾಂದ ಕಣ್ಣಿನ, । ಮಿಂದ ಕೆನ್ನೆಯ ಮುಸುಕಿನಾ, ॥
ಬೆಂದು ಹೊರಡುವ ಮೂಗುಸುಯ್ಲಿನ, । ನೊಂದು ನೋಯುವ ಸೆಟ್ಟಿಯಾ. ॥ ೩ ॥

ಬಿಟ್ಟ ಕೈಯಲಿ ಪುಟ್ಟಕರುವನು । ಕಟ್ಟಿಕೊಂಡಿಹ ಸೆಟ್ಟಿಯು ॥
"ಕೆಟ್ಟೆನಯ್ಯೋ! ಕೆಟ್ಟೆನಯ್ಯೋ! । ಕೆಟ್ಟೆ!" ಎಂದಳುತಿದ್ದನು. ॥ ೪ ॥

ದೊರೆಯ ಕಂಡನು, ನಾಚಿಕೊಂಡನು; । ಬಿರುಮ ಅರಿಯನು ದೊರೆಯನು; ॥
ಇರದೆ ನಡೆದನು, ಮೆಲ್ಲ ನುಡಿದನು; । ಒರಸಿಕೊಂಡನು ಕಣ್ಣನು. ॥ ೫ ॥

"ಏನು ಸೆಟ್ಟಿಯೆ? ಹೇಗೆ ಕೆಟ್ಟೆಯೆ? । ಏನು ನೀರಿದು ಕಣ್ಣಲಿ? ॥
ಏನು ಬೇಸರು? ಏತಕೀ ಕರು? । ಏನು? ಹೇಳ್! ಹೇಳ್!" ಎಂದನು. ॥ ೬ ॥

"ನನ್ನ ಬಾಳುವೆ ಏನು ಹೇಳುವೆ । ನನ್ನ ಹಣೆಯಲಿ ಬರೆದುದಾ? ॥
ಚೆನ್ನ ಕರುವಿಗೆ ಬನ್ನಬಡುವೆನು, । ಕಣ್ಣನೀರನು ಮಿಡಿವೆನು." ॥ ೭ ॥

"ಹಿಂಡಿ ಹುಲ್ಲನು ತಿಂಡಿ ಕಾಳನು । ಉಂಡು ಬೆಳೆದೀ ಕರುವಿದು ॥
ಗಂಡು ಅಲ್ಲವು ಕೊಂಡು ಬಂದೆನು. । ಹಿಂಡಿನಲಿ ಕಡೆಕಂಜಿಯು." ॥ ೮ ॥

"ಮಕ್ಕಳಿಲ್ಲದ ಮಡದಿ ಇಲ್ಲದ । ಚಿಕ್ಕತನದಲಿ, ಹಿಂದಕೆ ॥
ರೊಕ್ಕ ಎರಡು ವರಹ ಕೊಟ್ಟು, । ಅಕ್ಕರೆಯ ಕರು ಸಾಕಿದೆ." ॥ ೯ ॥

"ಗಬ್ಬವಾಯಿತು, ಅಬ್ಬೆಯಾಯಿತು, । ಹಬ್ಬವಾಯಿತು ಹಾಲಿನಾ. ॥
ಒಬ್ಬಳನು ನಾ ಮದುವೆಯಾದೆನು, । ಇಬ್ಬರಿದ್ದೆವು ಸುಖದಲಿ." ॥ ೧೦ ॥

"ಒಡಕು ಕೊಟ್ಟಿಗೆ ಹಿಡಿಯಲಾರದು, । ನಡೆಗಳಿಪ್ಪತ್ತಾದವು. ॥
ಮಡದಿಮಕ್ಕಳ ಹಡೆದು, ಸೌಖ್ಯವು । ಬಿಡದೆ ಬಳೆಯಿತು ಮನೆಯಲಿ." ॥ ೧೧ ॥

"ಮೂಡು ಬೈಲನು ಮಾಡಿಕೊಂಡೆನು; । ಜೋಡು ಎತ್ತನು ಕಟ್ಟಿದೆ; ॥
ಓಡು ಹೊಚ್ಚಿದೆ ಮಾಡು ಹುಲ್ಲಿಗೆ; । ಜೋಡು ಹಾಕಿದೆ ಕಾಲಿಗೆ." ॥ ೧೨ ॥

"ಏನು ಹೇಳಲಿ? ಬಾನಿನಾ ಹಸು । ತಾನೆ ಬಂದಂತಾಯಿತು.॥
ಸ್ಥಾನ ಸ್ಥಾನದಿ ನಮಗೆ ಮದಿಪು । ಮಾನ ಕೊಟ್ಟರು ಚೌಟರು." ॥ ೧೩ ॥

"ಒಡಕು ಹಣೆಯಿದು; ಕೆಡುಕು ಗ್ರಹವಿದು; । ಕುಡಿಕತನದಾ ಫಲವಿದು."
ಒಡನೆ ಸುಯ್ಯುತ ಹಣೆಯ ಬಡೆಯುತ । ನುಡಿದ ಮುಂದಕೆ ಸೆಟ್ಟಿಯು— ॥ ೧೪ ॥

"ಸಾಲವಾಯಿತು, ಸೋಲವಾಯಿತು. । ಶಾಲು ಸೀರೆಯ ಮಾರಿದೆ. ॥
ಬೈಲು ಬಿಟ್ಟೆನು, ತೋಟ ಕೊಟ್ಟೆನು. । ಮೂಲೆಕಸದಂತಾದೆನು." ॥ ೧೫ ॥

"ಮನೆಯು ಮಾನ್ಯವು, ಧನವು ಧಾನ್ಯವು । ಕನಸು ಕಂಡಂತಾಯಿತು. ॥
ಇನಿಸು ಭಾಗ್ಯವು ಮಳೆಯ ನೀರಿನ । ಹೊನಲ ನೆರೆಯಂತಾಯಿತು." ॥ ೧೬ ॥

"ಹಾಳು ಕಾಲವು! ಕೂಳು ದೊರೆಯದು. । ಏಳು ಮಕ್ಕಳು ಸೆರಗಿಗೆ! ॥
ಕಾಳುಕಡ್ಡಿಯ ತಿಂದ ದನಗಳ । ಕೂಳಿಗೋಸುಗ ಮಾರಲೇನ್?" ॥ ೧೭ ॥

"ನಾಡು ಸೇರಿದೆ ಬೇಡಲೋಸುಗ. । ನೋಡಿ ನನ್ನನು ಹಳಿದರು— ॥
'ಮೂಡು ಬೈಲಿನ ಬಿರುಮ ಸೆಟ್ಟಿಯು । ಬೇಡುವನು ಬಲು ನಾಚಿಕೆ'." ॥ ೧೮ ॥

"'ಕೆಲಸ ಮಾಡಲು ಮಾರಿ ಇವನಿಗೆ! । ಬಲುಹು ಮೈಯಲಿ ತುಂಬಿದೆ! ॥
ಹಲವು ಕಾಲ್ನಡೆ ಇವನಿಗುಂಟೆಲೊ । ಸುಲಿದು ತಿನ್ನಲು ಬಂದಿಹ'." ॥ ೧೯ ॥

"ಎಂದು ಮೊನೆನಗೆಯಿಂದ ಆಡಿದ । ಮಂದಿ ಮಾತನು ಮನ್ನಿಸಿ, ॥
ಕಂದರಂತಿಹ ಚೆಂದ ದನಗಳ । ಲೊಂದುಮಾರಲು ಬಗೆದೆನು." ॥ ೨೦ ॥

"ಅಕ್ಕಿ ತಂದೆನು ರೊಕ್ಕದಿಂದಲಿ, । ಮಕ್ಕಳನು ಅರೆ ಸಾಕಿದೆ. ॥
ಒಕ್ಕಲೊಂದು ಮನೆಯೊಳಿಲ್ಲವು, । ದುಕ್ಕ ಗಂಜಿಯ ಉಂಡೆನು." ॥ ೨೧ ॥

"ದುಡಿತ ಹೋಯಿತು ಮಗೆಯ ಮಳೆವೋಲ್, । ಬಿಡದೆ ಸಲಹಿದ ಸಾಕಿದಾ ॥
ನಡೆಗಳೊಂದೊಂದಾಗಿ ಹೋದವು । ಕಡೆಯ ಸಂಜೆಯ ಬಿಸಿಲವೋಲ್." ॥ ೨೨ ॥

"ಮುದ್ದು ದನ ಇನ್ನೊಂದು, ಎಳೆ ಕರು । ಇದ್ದ ಹಸು ಮತ್ತೊಂದು, ಹಾ!
ಮುದ್ದೆ ನೆತ್ತರ ನನ್ನ ಮೈಯನು । ಗುದ್ದಿ ತೆಗೆದಂತಾಯಿತು." ॥ ೨೩ ॥

"ಬೇರೆ ಒಂದೊಂದಾಗಿ ದನಗಳ । ಮಾರಿ ತಿಂಬುದಕಿಂತಲೂ, ॥
ಮಾರಿ ತಿಂಬುದೆ ಹಿಂಡೆ ಅಳಿವುದೆ । ಭಾರಿ ಲೇಸೆನೆ ತೋರಿತು." ॥ ೨೪ ॥

"ಹೆಂಡತಿಯು ಬಳಿಕೆನ್ನ ಕೊರಳಿಗೆ । ಗುಂಡು ಕಲ್ಲಂತಾದಳು. ॥
ಚೆಂಡಿನಂತಹ ಮಕ್ಕಳನ್ನು । ಕಂಡು ಕಲ್ಲೆದೆ ಹಾರದು." ॥ ೨೫ ॥

"ಹಾರುವೆನೊ ನೀರ್ಬಾವಿಯೊಳಗೆ? । ಹೀರುವೆನೊ ಕಹಿ ವಿಷವನು? ॥
ಸೇರುವೆನೊ ಹುಲಿಗವಿಯ? ಚಟ್ಟವ । ಏರುವೆನೊ? ಎನೆ ಬಗೆದೆನು." ॥ ೨೬ ॥

"ಕಾಸು ಕೈಯಿಂ ಲೇಸು ಮೈಯಿಂ । ಮಾಸಿ ಎಲ್ಲವು ಹೋಯಿತು. ॥
ಮೋಸ ಮಾಡಲು, ಫಾಸಿ ಮಾಡಲು । ಆಸೆಯಾಯಿತು ಮನದಲಿ." ॥ ೨೭ ॥

"ಕದ್ದ ಕಳ್ಳನ ಹಾಗೆ ಕಾಂಬರೊ । ಇದ್ದವರು ಎಂದಿರುಳಲಿ ॥
ನಿದ್ದೆ ಬಾರದು; ಬುದ್ಧಿ ತೋರದು । ಹೊದ್ದ ದುಗುಡದ ಹೊರೆಯಲಿ." ॥ ೨೮ ॥

"ಹುಚ್ಚನೆಂದರು, ಲುಚ್ಚನೆಂದರು, । ಮುಚ್ಚುಮರೆಯವನೆಂದರು. ॥
ಕಚ್ಚಿ ನುಡಿದರು, ಚುಚ್ಚಿ ನುಡಿದರು. । ಪಚ್ಚೆ ದೇವರೆ ಬಲ್ಲನು!" ॥ ೨೯ ॥

"ಒಡವೆಸಾದರೂ ಬೇಡಲೊಲ್ಲೆನು. । ಹಡೆದ ಮಕ್ಕಳ ಮಾರೆನು. ॥
ಕಡವ ಪರರಿಂ, ಒಡವೆ ಹೆರರಿಂ । ಪಡೆಯೆ ಪಡೆಯನದೆಂದಿಗೂ." ॥ ೩೦ ॥

"ಈವರಿಲ್ಲವು, ಕಾವರಿಲ್ಲವು. । ಗೋವು ಕಣ್ಮರೆಯಾದವು. ॥
ನೋವು ತೀರದು; ಸಾವು ಬಾರದು. । ದೈವ ಮುನಿದಂತಾಯಿತು." ॥ ೩೧ ॥

"ನಿನ್ನೆಯೋ ಎಂಬಂತೆ ಕಾಣುವ । ನನ್ನದಾಗಿಹ ಹಿಂಡೊಳು ॥
ಇನ್ನು ಎಳೆ ಕರು ಒಂದೆ ಬದುಕಿದೆ; । ನನ್ನ ಹೆಗಲಲಿ ಮಲಗಿದೆ." ॥ ೩೨ ॥

"ಕರುವು ಚೊಚ್ಚಲು; ತೊರೆದ ಕೆಚ್ಚಲು । ಸುರಿದು ಕುಡಿಯುವ ಮುಂಚೆಯೇ ॥
ತುರುವ ಮಾರಿದ ಬರಿದೆ ಚೀರಿದ । ಬಿರುಮ ಕಟುಕನು ನಾನಲೇ!" ॥ ೩೩ ॥

"ಎರಡು ತಿಂಗಳ ಹರೆಯ—ಮಂಗಳ । ಬರಲು—ತುಂಬಿತು ವತ್ಸಗೇ. ॥
ಬಿರುಮನಂಗಳ ಸಿರಿಯು; ಕಂಗಳ । ಪುರಲಿದೇ ಕಡೆಕಂಜಿಯು!" ॥ ೩೪ ॥

ಎಂದು ಸೆಟ್ಟಿಯು ಮುಗಿಸಿ ಕಥೆಯನು, । ಮುಂದು ನಡೆದನು ದಾರಿಯಾ. ॥
ಬಂದುದಾಗಲೆ ಚಂದ್ರನಾಥಗೆ । ಬಿಂದು ನೀರ್ಗಳು ಕಣ್ಣಿಲಿ. ॥ ೩೫ ॥

"ಅಲ್ಲೆ ಸೆಟ್ಟಿಯೆ! ನಿಲ್ಲು! ತಡೆ! ತಡೆ! । ಸೊಲ್ಲನೊಂದನು ಹೇಳುವೆ! ॥
ಕಲ್ಲು ನಿನ್ನಯ ಕಥೆಗೆ ಕರಗದೆ । ಮೆಲ್ಲನಿರುವುದೆ? ಬಿರುಮನೆ!" ॥ ೩೬ ॥

"ಬಿದ್ದುದಿಲ್ಲವು ಗದ್ದಿಗೆಯ ಮೇ । ಲಿದ್ದ ನಮ್ಮಾ ಕಿವಿಯಲಿ ॥
ಗದ್ದೆ ಉಳುವರ ಉದ್ದ ಗೋಳಿನ । ಸದ್ದು ಸುದ್ದೀತನಕವಾ." ॥ ೩೭ ॥

"ಬೇಡ! ಬೇಗನೆ ಮೂಡು ಬೈಲನು । ಮಾಡಿಕೊಡುವೆನು, ಕೊಡುವೆನು. ॥
ನಾಡಿಗೊಡೆಯನು ಚಂದ್ರನಾಥನು । ಬೀಡುಮುದಿಪನು ಇಡುವನು." ॥ ೩೮ ॥

ಒಡನೆ ಸೆಟ್ಟಿಯು ಕೆಡವಿ ಮೈಯನು. । ಅಡಿಗೆ ಚಾಚಿದ ರಾಯನಾ. ॥
"ಒಡೆಯ! ಕಾರ್ಕಳದೊಡೆಯ! ಚೌಟರೆ! । ನುಡಿದ ತಪ್ಪನು ಕಾವುದು." ॥ ೩೯ ॥

ಹೊಗಳುತಿರುವನ ನೆಗಹಿ ಅರಸನು । ನೆಗೆವ ಕರುವನು ಹಿಡಿದನು, ॥
"ತೆಗೆದುಕೊಳ್ಳೈ ಮಗುವ" ಎನ್ನುತ । ಸೊಗದಲಿತ್ತನು ಕೈಯಲಿ. ॥ ೪೦ ॥

"ಅರರೆ! ಬಿರುಮನೆ! ಮರೆಯದಿರು ಮನೆ । ಮರಿಯ ಮಕ್ಕಳ, ಮಡದಿಯಾ. ॥
ಬರಿದೆ ಕೊಡುವೆನು ಬರೆದು ಕೊಡುವೆನು । ಸ್ಥಿರ ಚರಾಸ್ತಿಯ ಉಂಬಳಿ." ॥ ೪೧ ॥

ಎಂದುಸುರಿ ಮನೆತಂದು ಬಿರುಮನ । ಕಂದನಹ ಕಡೆಕಂಜಿಯಾ ॥
ಒಂದನುಳುಹಿದ ಹಿಂದೆ ಕಳುಹಿದ ॥ ಇಂದುನಾಥಾದೀಶನೂ. ॥ ೪೨ ॥

(ಪದ್ಯ ಪುಸ್ತಕ)

# ಪರೀಕ್ಷೆಯಲ್ಲಿ ಪರಾಜಿತನಾದ ವಿದ್ಯಾರ್ಥಿಯ ಪ್ರಲಾಪ

**ಚತುಷ್ಪದಿ.**

ಸಾಧ್ಯವಿಲ್ಲವು ಪರೀಕ್ಷೆಯೊಳೆನಗೆ ಜಯವು; ।
ವಿದ್ಯಾಪರೀಕ್ಷಕರಿಗಿಲ್ಲವೈ ದಯವು ॥

ಆರು ವರ್ಷಗಳಿಂದ ಪೋಗುವೆನು ನಾನು; ।
ದೂರ ಗುಡ್ಡಕೆ ಬರಿದೆ ಮಣ್ಣ ತುಂಬಿದೆನು. ॥
ತೋರಲಿಲ್ಲವು ಪರೀಕ್ಷೆಯೊಳು ಜಯವಿನ್ನು ।
ನೀರೊಳಗೆ ಹೋಮ ಗೈದಂತಾದುದೇನು? ॥ ೧ ॥

ನೊಸಲ ಪೊರೆಯಾಯ್ತು ಪಾಠದ ಭಾರ ಚಿಂತೆ, ।
ಹಸಿವು ನೀರಡಿಕೆಯಿರದಾ ಪೊಂಟಿಯಂತೆ, ॥
ಉಸುಬೆಂಬ ಜೀವಕಾಲದಿ ನಡೆದು ಮುಂತೆ, ।
ಬಸವಳಿದು ಬರಿದೆ ಸೇರ್ದೆನು ಪರಿಕೆ[1]ಸಂತೆ. ॥ ೨ ॥

ಆಟಗಳ ಬರಿದೆ ನಾನಾಡದೇ ಬಿಟ್ಟು, ।
ಪಾಟದಲಿ ಬಯಲಾಗಿ ಪೂರ್ಣ ಮನವಿಟ್ಟು, ॥
ಮೂಟೆ ಹೊರುವಾ ಎತ್ತಿನೊಲ್ ನಿದ್ದೆಗೆಟ್ಟು, ।
ಓಟವೋಡಿದೆ. ನೋಡಲಿದು ಕಣ್ಣುಕಟ್ಟು! ॥ ೩ ॥

ಹಲವು ಪುಸ್ತಕಗಳನು ಪರರೊಡನೆ ಬೇಡಿ, ।
ಕೆಲವನ್ನು ಕೊಂಡೆನೈ ಹಣವನು ಬಿಸಾಡಿ, ॥
ಕಲಿತೆನಾನೆಲ್ಲವನು ಪೂರ್ಣಮನಮಾಡಿ, ।
ಗೆಲಲಿಲ್ಲವಿದು ಪರೀಕ್ಷೆಯ ಮಂತ್ರವೋಡಿ! ॥ ೪ ॥

ತಂದೆ ಮನೆಯನು ಬಿಟ್ಟು, ಪರರ ಕೂಳುಂಡು, ।
ಚೆಂದದಾ ಸತಿಯ ನೋಡದೆ ಸಾಸಗೊಂಡು, ॥
ಬಂದು ಕಲಿತುದುದೆಲ್ಲ ಇಂಗ್ಲೀಷು ಬಂಡು ।
ಸಂದ ಸಂಬಳವು ಸರಕಾರಕ್ಕೆ ದಂಡು![2] ॥ ೫ ॥

ನೆನೆಯದಿರ್ದೆನು ಸ್ನಾನಜಪಯೋಗವೆಲ್ಲ; ।
ಮನೆಯ ಹಬ್ಬವ ಬಿಟ್ಟರೂ ಸಾಗಲಿಲ್ಲ; ॥
ಅನುಜನಿಗೆ ಮದುವೆಯಾಗಲು ಪೋಗಲಿಲ್ಲ; ।
ವನಿತೆ ಬಳೆದಾಗ ಸುಖದನುರಾಗವಿಲ್ಲ. ॥ ೬ ॥

ಮರುಗುವನು ಗುರು ನಾನು ಬಹುಮೂರ್ಖನೆಂದು. ।
ಹುರುಳಿಲ್ಲ[3]ವೆನುತ ಹೀನಿಪರು ಜನರಿಂದು. ॥
ಬರಿದೆ ಹಣ ತಿಂದೆನೆಂದಾ ತಂದೆ ನೊಂದು, ।
ಜರಿಯುವನು. ಜಾರುವುದು ಸ್ತ್ರೀಪ್ರೇಮಬಿಂದು. ॥ ೭ ॥

---

1 ಪರೀಕ್ಷೆ ಎಂಬ ಸಂತೆ. 2 ಜುರುಮಾನೆ 3 ಸತ್ವ.

## ಕಬ್ಬಿಣದ ಬುದ್ಧಿವಾದ

(ಕೆಳಗಿನ ಚರಣಗಳ ಅರ್ಥವು ಸ್ಪಷ್ಟವಾಗಿ ತಿಳಿವಂತೆಯೂ ಓದುವುದಕ್ಕೆ ತೊಡಕಾಗದಂತೆಯೂ ಪದಗಳನ್ನು ಸೇರಿಸಿಕೊಂಡು ಬರೆಯಲಿಲ್ಲ. ಸಂಧಿಯನು ಮಾಡದಿದ್ದರೂ, ಅಲ್ಲಲ್ಲಿ ತಿದ್ದಲು ಅನುಕೂಲವಿದೆ.)

"ಎಲೆಲೆ! ಕಬ್ಬುನ! ನೀನು ಮಲಿನ ಹಸ್ತದಿ ತುಡುಕಿ,
ಪೊಲೆಗೈದುದೇತಕೆನ್ನಯ ಮೈಯನಿಂದು? ।
ಕಲಿಯುಗದ ಪೊಲೆಯ ಸತ್ಕುಲದ್ವಿಜನ ಸೋಂಕುವೊಲ್,
ಖಲನೆ! ಮುಟ್ಟಿದುದೇತಕೆನ್ನೆಡೆಗೆ ಬಂದು?" ॥ ೧ ॥

ಈ ತೆರದಿ ಕಾಂಚನಂ[1] ಖಾತಿಯಿಂ ಘುಡುಘುಡಿಸಿ,
ಮಾತಿರದ ಬಡ ಕಬ್ಬುನವ ಜರೆದುಜರೆದು, ।
ಭೂತಳದಿ ತಾನೆ ವಿಖ್ಯಾತನೆಂದೆನುತ, ಮಹಿ
ಮಾತಿಶಯವನು ಜೃಂಭಿಸಿತು ಮೆರೆದುಮೆರೆದು. ॥ ೨ ॥

"ಕರೆವುದು ಸುವರ್ಣಮೆಂದಿರದೆ ಧರಣೀಮುಖಂ,
ಮಿರುಗುವುದು ನಾಮುದಂತೆನ್ನ ಮೈವಣ್ಣಂ. ।
ತರಣಿರಶ್ಮಿಯ ಕವಿವ ಕುರುಡುಕತ್ತಲಿನಂತೆ,
ಭರದಿ ಒದೆಯಲ್ಕೆ ನಿನಗೊಡೆದುದೇ ಕಣ್ಣುಂ? ॥ ೩ ॥

"ಲೋಹರಾಜನು ನಾನು, ಮೋಹಿಸುವೆ ಜನಮನವ,
†ಆಹವಂ ನಿರ್ವಹಿಸದೆನ್ನಾಜ್ಞೆ ಇರದೆ. ।
ಈ ಹಸ್ತಲಾಗಕ್ಕೆ[2] ದಾಹಗೊಳ್ಳುತ, ತಮ್ಮ
ದೇಹವಂ ದಂಡಿಪರ್ ಜನರು ತರತರದೆ. ॥ ೪ ॥

"'ಕನಕಮಣಿ ನಿಗಳೆಯರ್,'? 'ಕನಕಾಬ್ಜವದನೆ,' 'ಕಾಂ
ಚನಲತಾಕೋಮಲಾಂಗಿ,' 'ಸುವರ್ಣಕಾಯೆ,'
ವನಿತೆಯರನಿಂತು ಭೂವಿನುತೆ ಕವಿ ಕೀರ್ತಿಪರ್.
ಕನಕಭೂಷಣರಹಿತ ಸ್ತ್ರೀ ನೋಡೆ ಸ್ತ್ರೀಯೆ? ॥ ೫ ॥

"ಅಂಗನೆಯ ಕೇಶಾತರಂಗದೊಳ್ ಕ್ರೀಡಿಸುವೆ;
ತುಂಗವಕ್ಷದಿ ಬಿಗಿವೆ ಮುತ್ತುಗಳ ನಾನು, ।
[3]ಭೃಂಗಕುಂತಲಕೊಯ್ದು ಮಂಗಲವ ಸೈಯ್ದು, ವನಿ
ತಾಂಗಸೌಂದರ್ಯ ಕೆಡಿಸುವ, ಪಾಪಿ ನೀನು. ॥ ೬ ॥

"ದ್ವಿಜಹಸ್ತ ಸೇರಿ, ನೀರಜ ಮುಖಿಯ ಶಿರವೇರಿ,
ರಜನಿಯೊಳ್ ಭದ್ರವಾಗಿಹೆ ಪಿಟಕದೊಳಗೆ.[4] ।
ದ್ವಿಜನ ಕೆರ್ ಸೇರ್ವ ನೀರಜ ಮುಖಿಯ ತಲೆಗಳೆವ
ರಜನಿಸನ್ನಿಭನೆ![6] ನಿಲ್ಲದಿರೆನ್ನ ಬಳಿಗೆ! ॥ ೭ ॥

---

1 ಚಿನ್ನ. † ಈ ಪದದಲ್ಲಿ ಪೂರ್ವ ಸ್ವರವಿದೆ. ಛಂದೋದೋಷವಾಗದಂತೆ 'ನಾಹವಂ' ಎಂದು ತಿದ್ದಲುಬಹುದು. 2 ಹಸ್ತಸ್ಪರ್ಶ, 3 ತುಂಬಿಯಂತೆ ಕಪ್ಪಾದ ಕೂದಲು. 4 ಪೆಟ್ಟಿಗೆ. 5 ಮೆಟ್ಟು. 6 ರಾತ್ರಿಯಂತೆ ಕಪ್ಪಾದವನೆ.

"ಬಿಡದೆನ್ನನಾಶ್ರಯಿಸೆ ಕಡು ಮೂಢ ಪ್ರೌಢನಹ;
ಬಡವ ಬಲ್ಲಿದ, ದುಷ್ಟನರ ಶಿಷ್ಟನಹನು. ।
ಪಿಡಿದು ಸಿನ್ನಂ ಕರದಿ, ಕಡಿದು ನರತರುವ್ಯಗವ,
ಕೆಡಿಪ ಮಾನವಶ್ರೇಷ್ಠನತಿ ಭ್ರಷ್ಟನಹನು. ॥ ೮ ॥

"ಅಗ್ರಾಸನಕೆ ನಾಂ ಸಮಗ್ರ ವಸ್ತುಗಳೊಳಗ
ವ್ಯಗ್ರದಿಂದರ್ಹನೆಂಬುದು ಲೋಕಸಿದ್ಧಂ. ।
ಉಗ್ರತೆಯಿನೆನ್ನೊಡನೆ ವಿಗ್ರಹವ[7] ಬಯಸಿ, ಕೋ
ಪಗ್ರಾಸವಾಗಲ್ಕೆ ನೀನಪ್ರಬುದ್ಧಂ." ॥ ೯ ॥

ಉಬ್ಬಟೆಯೊಳುಬ್ಬಿ, ತನ್ನಬ್ಬರವ ಬೊಬ್ಬಿಡುತ,
ಕಬ್ಬುನವ ದೊಬ್ಬಿಬಿಡೆ ಕಾಲಿಂದ ಚಿನ್ನಂ; ।
ತಬ್ಬಿಕೊಳ್ವಬ್ಬೆಯಾ[8] ಕಿಬ್ಬದಿಗೆ ಮಗನೊದೆಯ
ಲುಬ್ಬೆಗಂಗೊಳ್ವಂದದಿತ್ತು ಕಾರ್ಬೊನ್ನುಂ. ॥ ೧೦ ॥

ಅರಿಗಳಿಗೆ ತಲೆವಾಗಿ, ಸುರಿವ ಕಂಬನಿಯೊರಸಿ,
ಮರುಗುವುದನುಳಿದು, ನುಡಿದುದು ದೀನಲೋಹಂ. ।
"ಅರರೆ! [9] ಧಾತುಪ್ರಕರದರಸನೆನಿಸುವ ಕನಕ!
ಅರಿಯೆಯಾ ನಿನಗೆಂತು ಬಂದುದೀ ದೇಹಂ? ॥ ೧೧ ॥

"ಬಡವನಾ ಬಿನ್ನಹದ ನುಡಿಗುತ್ತರವ ನೀಡು!
ಪೊಡವಿಯಂ ನಡೆಯಿಸುವರಾರೆಂದು ಪೇಳು? ।
ಘುಡುಘುಡಿಸಿ ನುಡಿಯದಿರ್! ಹುಡುಗ ನೀನೆಲೆ ಚಿನ್ನ!
ಬಿಡುಬಿಡೀ ಮೂರ್ಖತೆಯ! ಬುದ್ಧಿಯನೆ ತಾಳು!" ॥ ೧೨ ॥

ಇಂತು ಕಬ್ಬುನ ನುಡಿದ ಪಂತದಾ ನುಡಿಗೇಳ್ದು,
ಸಂತಪ್ತಮಾಗಿ ನುಡಿದುದು ಕನತ್ಕನಕಂ[10] ।
"ನಾಂ ತಳೆದು ಗುಪ್ತವೇಷಂ, ತಿರೆಯೊಳಡಗುವೆಂ.
ಎಂತು ನಡೆವುದು ಜಗಂ ನಾನಿಲ್ಲದನಕಂ? ॥ ೧೩ ॥

"ಲೋಕದೊಳ್ ನಾನೋರ್ವನೇಕಾಧಿಪತಿಯಾಗಿ,
ಲೋಕಮಂ ನಡೆಯಿಪೆಂ ಚಿರಕಾಲದಿಂದಂ. ।
ಲೋಕದೊಳಗರಿವರಾರ್ [11]ಕಾಕವರ್ಣನನಿಂದು?
ಲೋಕಮಂ ನಡೆಯಿಪೆಯೆ ಎನ್ನಂದದಿಂದಂ?" ॥ ೧೪ ॥

ಈ ಪ್ರಕಾರದೊಳು ಧಾತುಪ್ರಕರದರಸ ತ
ನ್ನ ಪ್ರತಾಪವ ಕೊಚ್ಚಿ, ಭೂಲೋಕದಿಂದ ।
ಕ್ಷಿಪ್ರದಿಂ ಮೈಗರೆದುದು[12] ಪ್ರಲಾಪಿಸಿತು ಜನ
ಮಪ್ರತಿಮ ಕನಕನಾಶದ ಶೋಕದಿಂದ. ॥ ೧೫ ॥

---

7 ಯುದ್ಧ. 8 ತಾಯಿ. 9 ಖನಿಜ. 10 ಬೆಳಗುವ ಚಿನ್ನ. 11 ಕಾಗೆಯಂತೆ ಕಪ್ಪಾದವ. 12 ಮಾಯವಾಯಿತು.

ಹೇಮರಹಿತಮದಾಯ್ತು ಶ್ರೀಮಂತಮಂದಿರಂ;
ಭೂಮೀಶ ಕರದಂಡ ಗುರುದಂಡಮಾಯ್ತು; ।
ಕಾಮಿನೀಜನರ ಕೈ ಮಾಮರದ ಕೈಯಾಯ್ತು,
[13] ಚಾಮೀಕರವನೆಲ್ಲರರಸಿದರ್ ಸೋತು. ॥ ೧೬ ॥

ಟಂಕಸಾಲೆಯೊಳು ಕನಕಂ ಕಾಣದಿರಲು, ಮು
ದ್ರಾಂಕಿತದ ಪತ್ರ ಚಲಿಸಿತು ನಾಣ್ಯಮಾಗಿ. ।
ಅಂಕೆಯಿಲ್ಲದ ರತ್ನಸಂಕುಲವ ತೊಟ್ಟು, ದಿವ
ಸಂ ಕಳೆದರಾ ಧನಾಢ್ಯರ್ ದುಃಖ ನೀಗಿ. ॥ ೧೭ ॥

ತಾಳಿ ಕಿವಿಯೋಲೆ ಹಿತ್ತಾಳಿಯಿಂ ವಿರಚಿಸುತ
ತಾಳಿದರ್ ವನಿತೆಯರ್. ಕನಕದಾ ಮಾತು ।
ಕೇಳಿಸದು. ಪರಿಣಯದ ಕೇಳಿಗಳ್ ನಡೆದು, ಸುಖ
[14] ಕೇಳಿಗೆ ಜನಕ್ಕೆ ಮುದಮೆಂದಿನಂತಾಯ್ತು. ॥ ೧೮ ॥

ತಾನಿಲ್ಲದಿರ್ದೊಡಂ ಮಾನವರ್ ಚಿರಕಾಲ
ಹಾನಿಗೊಳ್ಳದೆ. ಸುಖಿಪ ಬಗೆನೋಡಿನೋಡಿ, ।
ಮಾನಗಳೆದುಂ ಕನಕ ಮಿನೆಲಕೆ ಮಗುಳೆ ಬಂ
ದಾನಮ್ರ ಭಾವ ತಳೆದುದು ಚಿಂತೆಗೂಡಿ. ॥ ೧೯ ॥

ಮೈಗರೆದು ಕಬ್ಬುನಂ ಕೈಗಾಣದಂತಾದು
ದೈಗಳಿಗೆಯೊಳ್ ಜಗಂ ದುಃಖಸಾಗರದಿ ।
ಮೈಗೊಟ್ಟು ಮುಳುಗಿದುದು—ತ್ರೈಗುಣಾತ್ಮಕನೆ! ಸಲ
ಹೈ! ಗತಿಯ ದೋರೆಂದು ಬಹು ದೀನಸ್ವರದಿ. ॥ ೨೦ ॥

ತೆರಳದೈ ಹಡಗಕಟ! ಪೊರಳದೈ ಶಿಖಿಶಕಟ[15]
ಉರುಳದೈ ಯಂತ್ರದೊಳ್ ಚಕ್ರಗಳ್ ಭರದಿ! ।
ಪರಿದು ವಿದ್ಯುತ್‌ತಂತಿ,* ಮುರಿದು ಕಂಬದ ಹಂತಿ,
ಕೊರಲು ಕಟ್ಟಿದೊಲಾಯ್ತು ವ್ಯಾಪಾರ ಪುರದಿ. ॥ ೨೧ ॥

ಹೊರಬರವು ವಸ್ತ್ರಗಳ್! ತರಿಯುವಾ ಶಸ್ತ್ರಗಳ್!
ಪರಿಯುವಾ ಪತ್ರಗಳ್ ಮುದ್ರಣಾಲಯದಿ! ॥
ಗೊರಸೆ ಸಮೆದುಂ ಕುದುರಿ ಪೊರೆಯೆತ್ತು ನೆಲಕುದುರಿ,
ಧರೆಯ ಕೈ ಬಿಗಿದುದೈ ಕಬ್ಬುನದ ಲಯದಿ! ॥ ೨೨ ॥

ಅರಿವೆ ನೇಯಂ ಜೇಡ! ಕರಿಯ ಕೊಲ್ಲನು ಬೇಡ!
ಮರವ ಸಿಗಿಯಂ ಬಡಗಿಯುಳನೊಕ್ಕಲಿಗನು! ।
ಧುರವ ಸೇರಂ ವೀರ! ನರಳುವಂ ಕಮ್ಮಾರ
ಬರಿಯ ನೂಲ್ ಪಿಡಿದು ಚಿಂತಿಪನು ಚಿಪ್ಪಿಗನೂ! ॥ ೨೩ ॥

---

13 ಚಿನ್ನ. 14 ಸುಖದ ವೃದ್ಧಿ. 15 ಹೊಗೆಯ ಬಂಡಿ. * ತಂತ್ರಿ ಎಂದಾಗಬೇಕಿತ್ತು.

ಸುರಿಗೆಯದು ತರಿಯದಿರೆ, ತುರಿಪ ಮಣೆ ತುರಿಯದಿರೆ,
ವರಶಾಕಪಾಕಗಳುಮಿಲ್ಲ ಭೋಜನಕೆ!
ಧರಣಿಯೊಳ್ ಕಬ್ಬುನಂ ಮರೆವಾಗೆ, ದಿನದಿನಂ
ಮರಣ ಜೀವಿತವಾಯ್ತು ಸಕಲ ಭೂಜನಕೆ. ॥ ೨೪ ॥

"ದೇವದೇವನೆ! ಸತ್ಯಪಾವಲೋಕನದಿಂದ
ಕಾವುದೆಮ್ಮಯ ಪಾಪಗಳನೆಲ್ಲ ಹರಿಸಿ,
ಈ ವೇಳೆಯೊಳ್ ಲೋಹದಾ ವರವನಿತ್ತು ನ
ಮ್ಮೀ ವಿಪತ್ತಂ ಬೇಗ ನೀನೆ ಪರಿಹರಿಸಿ." ॥ ೨೫ ॥

ಶೋಕದಿಂದಿಂತುಲಿವ ಲೋಕಮಂ ಕಂಡು, ತಾ
ನೀ ಕಬ್ಬುನಂ ದಯದಿ ಮೈದೋರಿ ಬಂದು,
ವ್ಯಾಕುಲಿತ ಹೃದಯಕೆ ವಿವೇಕದಿಂದುಪಚರಿಸು
ತಾಕನಕದೊಡನೆ ನುಡಿದುದು ನುಡಿಯನೊಂದು. ॥ ೨೬ ॥

"ಎಲೆ! ಅಣ್ಣ! ಬೇಸರದಿ ತಲೆವಾಗಿಸಲು ಬೇಡ!
ಒಲಿದೆನ್ನ ನುಡಿಗೆ ಕಿವಿಗುಡು ಮನವನಿಟ್ಟು!
ತಲೆದೋರಿಪಂತೆ ನೀಂ, ಬಲಿದ ಭೂಗರ್ಭದಿಂ
ಸೆಳೆದು ನಾಂ ತಂದೆ ನಿನಗೆನ್ನ ಕೈಗೊಟ್ಟು. ॥ ೨೭ ॥

"ಬಳಿಕ ದುಸ್ಸಂಗದಿಂ ಬಳೆವ ಮಲಿನತೆಯ ನಾಂ
ಕಳೆಯಲ್ಕೆ ನಿನ್ನ ಪುಡಿಗೈದೊಡಂ, ಬಿಡದೆ ।
ತಳೆದಿರಲದಂ ನೀನು, ಮುಳಿದು ನಿನ್ನಂ ಕಿಚ್ಚಿ
ನೊಳು ಕೆಡವಿದೆನು ನಿನ್ನಸುವಿನಾಸೆಯಿಡದೆ. ॥ ೨೮ ॥

"ಇಕ್ಕುಳದಿ ಪಿಡಿದು ನಾಂ, ಚೊಕ್ಕಟಮದಾಗೆ ನೀಂ
ತಕ್ಕನಿತು ಬಡಿದು ನಿನ್ನಯ ಮೈಯನೆಲ್ಲಂ, ।
16 ಅಕ್ಕರವ ಕಲಿಸಲ್ಕೆ ತಿಕ್ಕಿದೆಂ ಮಳಲೊಳಗೆ.
ಮಕ್ಕಳಂ ಕಲಿಸದಿಹ ಪಿತನು ಪಿತನಲ್ಲಂ. ॥ ೨೯ ॥

"ಪೆಟ್ಟಿಗೆಯೊಳಿರುಳು ನಾನಿಟ್ಟು ನಿನ್ನಂ, ಕಾವು
ಕೊಟ್ಟು ಕೈದುಗಳಿಂದ ಸಲಹುವೆಂ ಬಿಡದೆ. ।
ಸಿಟ್ಟುಗೊಳಬೇಡ ಮೈಮುಟ್ಟಿದೆಂ ನಾನೆಂದು!
ನಿಟ್ಟುರವ ನುಡಿಯದಿರ್ ಕೋಪಕೆಡೆಗೊಡದೆ! ॥ ೩೦ ॥

"ನಗರದರಸಾದೊಡಂ ಮುಗನಲವೆ ತಾಯ್ಗೆ? ನಿ
ನ್ನುಗುವ ಕಾಂತಿಯ ದೇಹಮೆನಗೆ ಪಿರಿದೇನು?
ಜಗದೊಳ್ ಕೃತಘ್ನತೆಯನುಗಿವೌಷಧಂ ಕಣ್ಣು
ಬಿಗಿವ ಮದರೋಗಾಂಜನಂ ಕಾಣೆ ನಾನು. ॥ ೩೧ ॥

16 ಪೂರ್ವದಲ್ಲಿ ಮಕ್ಕಳಿಗೆ ಪ್ರಥಮದಲ್ಲಿ ಮಳಲಿನ ಮೇಲೆ ಅಕ್ಷರಾಭ್ಯಾಸವನ್ನು ಮಾಡಿಸುತ್ತಿದ್ದರು.

"ಈ ಜಗದಿ ನಮಗಾ ನಿಯೋಜಿಸಿದ ಕಾರ್ಯಂಗ
ಳೋಜೆ ತಪ್ಪದೆ ನಿರ್ವಹಿಪುದೇ ಮಹತ್ವಂ. ।
ರಾಜ ನಾಡನು ಜನಂ ರಾಜನಂ ಸೇವಿಸುತ,
ನೈಜದಿಂ ಸುಖಿಸುವುದೆ ನರ ಲೋಕತತ್ವಂ." ॥ ೩೨ ॥

ಉದ್ಧತೆಯ ತರಿದಪ್ರಬುದ್ಧತೆಯ ಪೋಗೊಳಿಸಿ,
ರುದ್ಧಕಂಠದಿ ಬರ್ಪ ಶೋಕಾರ್ತಸ್ವರಮಂ ।
ವೃದ್ಧ ಲೋಹಂ ನಿಲಿಸಿ, ಬುದ್ಧಿವಾದವ ಕಲಿಸಿ,
ಶುದ್ಧವರ್ತನಕೆ ತಂದುದು [17]ಕಾರ್ತಸ್ವರಮಂ ॥ ೩೩ ॥

---

17 ಚಿನ್ನ

# ಕಮಲ

(ಮತ್ತೇಭವಿಕ್ರೀಡಿತ)

ನಳಿನೀ! ನೀಂ ನಲಿವೈ ವಿಲೋಲಜಲದಾಕಲ್ಲೋಲದುಯ್ಯಾಲೆಗೊಂ
ಡೆಳಗೆಂಪಾಂತ ಬಿಸಿಲ್ಗೆ ಮೆಲ್ಲನುಳಿವೈ ಬಲ್ನಿದ್ದೆಯಂ ಕಂಗಳಿಂ!
ಅಳಿಯುಂ ಮೆಲ್ಲುಲಿ, ತಂಬೆಲರ್ ಸೊಗವ, ತೀಡಲ್ ಮೋದಮಂ ಪೊಂದುವೈ!
ದಳಮಂ ತೂಗುತೆ ನಿದ್ದೆಗೊಳ್ವೆ, ಗೆಳೆಯಂ ಬಾನಿಂ ಮುಳುಂಗಲ್ಕೆ ನೀಂ! ॥ ೧ ॥

ಸಲಿಲೋತ್ಸಂಗ ವಿನೋದಿನೀ! ಕಮಲಿನೀ! ಮನ್ಮಾನಸೋಲ್ಲಾಸಿನೀ!
ಕಲಿಸೈ ನಿನ್ನವೊಲಾಂ ಮುದಂ ತಳೆವವೊಲ್, ಸಂತಾಪಮಂ ನೀಗುವೋಲ್!
ವಿಲಸದ್ರಮ್ಯತೆಯಿಂ ಸುವಾಸನೆಯಿನಾನಾನಂದಿಪಂತಾವಗಂ,
ಜಲದಾಂದೋಲನದಿಂದೆ ನೀಂ ಸೊಗಸು ತೋರ್ಪೈ! ಪುಷ್ಪಕಾಂತಾಮಣೀ! ॥ ೨ ॥

ಸರಮಂ ಸಿಂಗರಿಪೈ ವಿಶಾಲದಳದಾ ಸೌಂದರ್ಯದಿಂ ವರ್ಣದಿಂ.
ನರರಂ ರಂಜಿಸುವೈ ನಿರಂತರ ಲಸನ್ಮಾಧುರ್ಯದಿಂ ಲೀಲೆಯಿಂ.
ಧರೆಯೊಳ್ ವರ್ಧಿಸುವೈ ಮಹಾದ್ಭುತಕರ ಶ್ರೀಸೃಷ್ಟಿವೈಚಿತ್ರ್ಯಮಂ.
ಧರಣೀಕರ್ಣದಿನೀಂ ಜಿನುಂಗಿಪೆ ಹರೀಲೀಲಾ ಮಹತ್ವಂಗಳಂ! ॥ ೩ ॥

ಎಲೆಲೇ! ಮಾನವ ಮೂಢ! ನೋಡು! ಕೆಸರೊಳ್ ನಾಳಂ ಮುಳುಂಗಿರ್ದೊಡಂ,
ಜಲಮಂ ಸೋಂಕಿದೊಡಂ ದಳಂ, ಕಮಲಮುಂ ನಿರ್ಲಿಪ್ತಮಾಗುತ್ತೆ ಬಾಂ
ದಳಕಂ ಕಣ್ಣಿಡುವೋಲ್—ಮಹಾ ಭವದಿ ನೀನುಂ ಮಗ್ನನಾಗಿರ್ದೊಡಂ,
ಮಲಿನಂಗೊಳ್ಳದಿರೆಂದು ವಿಾಶನ ಪದಾಂಭೋಜಾತಮಂ ದೃಷ್ಟಿಸೈ! ॥ ೪ ॥

# ಪಾಣಿಪತ

## (ಒಂದು ಯಕ್ಷಗಾನ ದೃಶ್ಯ)

[ವಾರ್ಧಿಕ ಷಟ್ಪದಿ]

ಜಂಬುದ್ವೀಪದ ಹೊರಗೆ ನೆಲಸಿದ್ದ ಅಫ್ಘಾನ
ರಂ ಬಹಳ ಕಾಲದಿಂದಾಳ್ವಹಮ್ಮದ ಶಹನ್
ಎಂಬಾ ದುರಾಣಿ ಕುಲದಗ್ರಣಿ ಮುಸಲ್ಮಾನರೊಡನೆ ಪಾಣೀಪತಕ್ಕೆ ॥
ಜಂಭದಿಂದೆಯ್ತಂದು ಪಾಳೆಯರ ಬಿಟ್ಟಿರಲು
ಕುಂಭಜನ ಚಕ್ರಕೋಟಿಗೆ ನಡೆವ ಅಭಿಮನ್ಯು
ವೆಂಬವೋಲ್ ಮಾರಾಟದಳವೆರಸಿ ಪೊರಮಟ್ಟನಾ ಸದಾಶಿವ ಭಾವುವೂ

[ಸೌರಾಷ್ಟ್ರ ತ್ರಿವಿಡೆ]

ಆ ಸಮರದಲಿ ಭಾವು ಓಲಗ
ದಾ ಸಭೆಯ ರಚಿಸಿದನು ಸಿಂಧ್ಯ ವಿ
ಲಾಸಿ ಗಾರ್ಡಿಯ ಹೋಳಕರ ವಿಶ್ವಾಸರಾವೊಡನೆ ॥

ಭಾವು:- ಹೊಳೆಯ ಕಳೆದೆವು; ಹೊಳಲು ಹಿಡಿದೆವು;
ತುಳಿದೆವಫ್ಘಾನ್ ಸರ್ಪವನು ಇ
ನ್ನುಳಿದು ಹೋದರೆ ಕಚ್ಚದಂದದಿ ತಿಳಿವುದಿಂದೆನಗೆ ॥

[ಭಾಮಿನಿ ಷಟ್ಪದಿ]

ಭಾವುವಿನ ನುಡಿಕೇಳಿ ಮಂತ್ರಿ ಸ
ಭಾವಲಯ ಭಟರಂತರಂಗದ
ಭಾವ ತೋರದೆ, ಓರ್ವರೋರ್ವರ ಮೊಗವ ನೋಡುತಿರೆ; ।
ನಾವು ತಳುವುದೊ? ತಳರುವುದೊ? ಮೇಣ್
ಸಾವಿಗಂಜುತ ಹಿಂದುಳಿವುದೋ?
ನೀವು ಯೋಚಿಸಿ ಹೇಳ್ವುದೆಂದನು ಕೈಯಮೀಸೆಯಲಿ ।

[ಕಾಂಬೋಧಿ-ಝಂಪೆತಾಳ]

ಹೋಳಕರ:- ದಳವಾಯಿ ಲಾಲಿಪುದು ಹಳಬರ ನುಡಿಯೆಂದು
ಹುಲುಗೆಡಹಿ ಹೊಳೆಯ ದಾಟಿರುವೆ!
ತಲೆಗಟ್ಟಿ ಎಂದು ಕಲ್ಲನು ಹಾಯ್ದೆ ಭಾವುವೇ
ತಿಳಿಗೇಡಿ, ಹೊರ ಕುರುಬನಿಗೆ ಕುರಿಯ ಕೊಟ್ಟೆ ।
ಘೋರ ಸೈನ್ಯಗಳಿಂದ ಹೋರದೆ, ಕೆಲಮಂದಿ
ವೀರರಿಂ ಕಾದಾಡಿ ಹಗೆಯಾ
ಮಾರಾಯ ಮೇಲ್ಬಿದ್ದು ಹಾರಿಸುವುದನು ತೊರೆದೆ.
ದೂರ ಸೀಮೆಯು! ದವಸ ಪೂರೈಕೆ ಅಹುದೆ ॥

[ಸಾರಂಗ—ಅಷ್ಟತಾಳ]

ಗಾರ್ಡಿ:- ವಂಚನೆಯಲಿ ವೈರಿಯನು ಕೊಲ್ಲಲಾಗದು-ಭಾವು ಕೇಳು-ಒಳ
ಸಂಚಿನ ರಣವಿದ್ಯೆಯನು ತೋರಲಾಗದು. ಭಾವು ಕೇಳು, ॥

ಫ್ರೆಂಚರು ಜಯಲಕ್ಷ್ಮಿ ಸೆಳೆಯುವ ಹಂಚಿಕೆ–ಭಾವು ಕೇಳು–ಸಿಡಿ
ಲ್ಮಿಂಚಿನೊಲ್ ಒಮ್ಮೆಯೇ ಬಾಳುತ, ಬಡಿವುದು;-ಭಾವುಕೇಳು, ॥

[ಮಾರವಿ-ಏಕತಾಳ]

ಹೋಳಕರ:- ಉದ್ಧತ ಗಾರ್ಡಿ, ಪ್ರಸಿದ್ಧನೆ ನಿನ್ನ ಪ್ರಬುದ್ಧಿಯ ಕಾರಣದಿ, ॥
ಯುದ್ಧದಿ ನುರಿತೀ ವೃದ್ಧರಿಗಪ್ಪುದೆ ಪದ್ಧತಿ ಇದು ರಣದಿ? ॥
ಹಿರಿಯರ ಕಲೆಯಿಂ ದೊರಕಿತು ಮಾರಾಟರ ರಾಜ್ಯೋದಯವು ॥
ಬರುವುದು ಗಾರ್ಡಿಯ ಪರದೇಶದ ಹೊಸ ಹರಿಬದಿ ಅಪಜಯವು ॥
ಹೊತ್ತಿತು ಕಲಹವು ಕತ್ತಿಯನಿಬ್ಬರು ಎತ್ತಲು ಸಭೆಯಲ್ಲಿ
ಮುತ್ತುಗ ಮುಳ್ಳನು ತೆತ್ತಿಸಿದಂತೆಯೆ ನಿತ್ತನು ದೊರೆ ಅಲ್ಲಿ ॥

[ವಾರ್ಧಿಕ ಷಟ್ಪದಿ]

ಕಾಳಗಕ್ಕನುವಾಗಿ ಬಂದಿದ್ದ ಭಾವುವಿನ
ಪಾಳೆಯದಿ ಕಚ್ಚಾಟವೆಂಬಂತೆ ಮಲ್ಹಾರಿ
ಹೋಳಕರ ಮಹದಾಜಿ ಸಿಂಧ್ಯ ದಾಮಾಜಿ ಗಾಯಕವಾಡ ವೀರಗಾರ್ಡಿ ॥
ಹಾಳುನೆವ ಹೂಡಿ ಜಗಳಾಡಿ ಕೆಲರೋಡಿದರು
ಮಾಳವಕೆ ಬಳಿಕಾ ಮರಾಟ ಸೈನ್ಯವನೊತ್ತಿ
ತೂಳಿದುದು ಶಹನಪಡೆ ಗೂಡಿನಲಿ ಸಿಲುಕಿದಿಲಿಯಂತಾದನಾ ಭಾವುವು ॥

ಎಳೆ ಅಡಕೆ ಕತ್ತರಿಯ ಬಾಯೊಳಗೆ ಬಿದ್ದಂತೆ
ಮಳೆ ಹೊಯ್ವ ಹೊಯ್ಲಿನಲಿ ಹಸಿ ಮಡಕೆ ಅದ್ದಂತೆ,
ಬೆಳೆಯು ತೆಂಗಿನ ಗಿಡಕೆ ಕಾಡ್ಗಿಚ್ಚು ಹೊದ್ದಂತೆ ರಣರಂಗದಬ್ದಾಲಿಯಾ ॥
ದಳದುಳಕ್ಕಿಂಬಾಗಿ ಬಾಗಿ ಬೇಸತ್ತು ಸ
ತ್ತುಳಿದು ತುಳಿದಳವಳಿದು ಕೊಳುಗುಳದೊಳಾ ಭಾವು
ದಳವಾಯಿ ಪಡೆಯೊಡನೆ ಪವಡಿಸಿದ ವೀರ ಶ್ರೀಹಾರವಂ ಜೋಗುಳಿಸಲು

[ಮೋಹನ – ಏಕತಾಳ]

ಮಂಗಲಂ ಜಯ ಮಂಗಲಂ ಶುಭ ಮಂಗಲಂ ಜಯ ಮಂಗಲಂ,
ನೆತ್ತರ ಮೂಲಕ ಧರ್ಮವನು – ಹಾ!
ಇಂಬು ಗೊಂಡುದ್ರೇಕದಿಂದ ನಿಂದಿರಲಿತ್ತ.
ಬಿತ್ತರಿಸುವ ದುಷ್ಕರ್ಮವನು ॥
ಎತ್ತಲು ಮುಂದಕೆ ಸಲ್ಲದು ಎಂಬೀ
ಉತ್ತಮ ಭೇಧವ ತಂದವಗೆ, ॥
ಬಲವಂತರು ತಮ್ಮಯ ಬಲದೆ—ದು
ರ್ಬಲರನು ಕಾಳಗದಲಿ ಕೊಲದೆ, ॥
ಒಲಿದವರವರಾತ್ಮೋನ್ನತಿಯನು ಗಳಿ
ಸಲು ಬೇಕೆನ್ನುತ ಸಾರುವಗೆ ॥
ಹಿಂದು ಮುಸಲ್ಮಾನ ಸುನ್ನಿ ಶೀಕ್–ಜೈ
ನಾಂಧ್ರ ಕಿರಿಸ್ತಾನ್ ಫಾರಸಿ ಶೀಕ್ ॥
ಇಂದಾ ಐದನೆ ಜೋರ್ಜರ ಕೊಡೆಯಲಿ
ಒಂದಾಗಿರಿಸಿದ ಮಹಿಮನಿಗೆ, ॥

ಸನ್ನುತ ಜನತೆ ಪ್ರಮುಖವೆಂದು–ರಾ
ಷ್ಟ್ರೋನ್ನತಿಯೇ ಇಹಸುಖವೆಂದು, ॥
ಇನ್ನೀ ಮಂತ್ರವನೆಲ್ಲರು ಪಠಿಸಲಿ
ಎನ್ನುತ ಉಪದೇಶಿಸಿದವಗೆ ॥

—ಭಕ್ತಿ ಸಂದೇಶ
(ರೌದ್ರಿ ಸಂವತ್ಸರ)

# ಚಂದ್ರೋದಯ

ಇದೊ! ಹಾ! ಬಾಂದಳದೊಳ್ ವಿರಾಜಿಸಿದುದ್ಯೆ ಚಂದ್ರೋದಯಂ. ವೋಡಮಿ-
ಲ್ಲದ ಬಾಂಬಟ್ಟೆಯೊಳೊಯ್ಯನೊಯ್ಯನೆ ಶಶಾಂಕಂ ಪಜ್ಜೆ ವೋದಂ. ಮುಳುಂ
ಗಿದುದೆಲ್ಲಂ ಕದಿರೊಳ್ ನೆಲಂ; ತೊರೆದುದ್ಯೆ ನಿಮ್ನೋನ್ನತಾವಸ್ಥೆಯಂ.
ಸುದೆಯಿಂಮಿಂದವೊಲೀಗಳೀ ಪ್ರಕೃತಿ ಮೌನಂಗೊಂಡು ಸಂಶೋಭಿಕುಂ ॥ ೧ ॥

ಒಲವಿಂ ಚುಂಬಿಸಿ ನಾಡೆ ಬೆಟ್ಟದುದಿಯಂ, ವಾರೀತರಂಗಂಗಳೊಳ್
ನಲವಿಂ ನರ್ತಿಸಿ, ಚಂದ್ರಕಾಂತಿ ದಡದೊಳ್ ಮೆಲ್ನಿದ್ದೆಯಂಗೊಂಡುದ್ಯೆ.
ಎಲೆಯೊಳ್ ನಿಟ್ಟುಸಿರಿಟ್ಟು ಸಂಚರಿಪುದ್ಯೆ ತಂಗಾಳಿಯುಂ; ಕೂಡೆ ಮೆ
ಲ್ಲುಲಿಯಂ ಗೈವ ತರಂಗದಿಂ ಪ್ರವಹಿಸುತ್ತಂ ಪಾರ್ವುದ್ಯೆ ನಿರ್ಝರಂ ॥ ೨ ॥

ಅಮೃತಂ ನಿನ್ನೊಳಗಿರ್ಪುದೆಂದು ನುಡಿವರ್, ನೋಡಲ್ಕಿದೇಂ ಸತ್ಯಮೇಂ!
ಅಮಮಾ! ಚಂದ್ರನೆ! ಶುಕ್ಲ ಚಂದ್ರ! ರಜನೀ ಕಂಠಾವಲಂಬೀಮಣೀ!
ಭ್ರಮೆಯಿಂ ಜೀವನಮಾರ್ಗದೊಳ್ ನಡೆದು ಗಾಯಂ ಪೊಂದಿದೆಂ ಕಂದಿದೆಂ
ತಮಮಂ ನೀಗುತೆ ತಣ್ಪನೊಂದಿಸು! ನಿಶಾಕಾಂತ ಪ್ರಶಾಂತಪ್ರಭಾ ॥ ೩ ॥

ಅಹಹಾ! ಸತ್ಯಮೆ ಸತ್ತವರ್ ಬಿಡದೆ ನಿನ್ನಂ ಸೇರ್ವರೆಂಬುಕ್ತಿಯುಂ?
ಗೃಹದಾಘಾತನುಜರ್ಕಳಂ ತೊರೆದು, ನಿನ್ನಾ ಲೋಕಮಂ ಸೇರಿ ಮೇ
ಣಿಹದೊಳ್ ದುಃಖಿಪ ಮರ್ತ್ಯರಂ ನಗುವಿನಿಂ ನೋಡುತ್ತೆ, ನಿನ್ನಂತೆವೊಲ್
ಮಹಿಯೊಳ್ ದೇವಮಹತ್ವಮಂ ತಿಳುಪಲೆಂತೋ ಪಾರ್ವುದೆನ್ನೀ ಮನಂ ॥ ೪ ॥

(ಸುವಾಸಿನಿ ೧೯೦೨.)

# ಲಕ್ಷ್ಮೀಶ ಕವಿ

ಎಲೆ ಕರ್ಣಾಟಕವೀಂದ್ರ ಚೂತವನ ಚೈತ್ರ! ಪ್ರೌಢ ಲಕ್ಷ್ಮೀಶ! ಗಾ ।
ವಿಲನಾದೆನ್ನ ಬಳಲ್ದ ಬಂಜೆ ನುಡಿಯಂ ನೀನಾಲಿಸೈ ಲಾಲಿಸೈ! ।
ಲಲಿತ ಸ್ಮಾರಕ ಕಂಭದೊಲ್ ಕೃತಿಯೆ ನಿನ್ನಾ ನಾಮಮಂ ಕೀರ್ತಿಸಲ್, ।
ಹುಲುಮಾತಿಂ ಪೊಗಳಿರ್ಪ ಮೂಢ ಕವಿಯುಂ ಪಕ್ಕಾಗನೇ ನಿಂದೆಗಂ? ॥ ೧ ॥

ಮುಗಿಲಂ ಮುಟ್ಟಿದ ಶೃಂಗಮಂ ಗಗನದೊಳ್ ಪ್ರಚ್ಛನ್ನ ಗೈದುಂ ವಲಂ, ।
ಜಗಕಂ ಕನ್ನಡಿಯಂತೆ ತೋರಿ ಬೆಳೆದುಂ, ಪ್ರೌನ್ನತ್ಯದಿಂ ನಿಂದು, ನು ।
ಣ್ಬುಗರಿಂ ಶೋಭಿಪ ಸತ್ಕವೀಂದ್ರ ಗಿರಿ! ನಿನ್ನಂ ನೋಡಲೇನೆಂದಪೆಂ? ।
ಮಿಗೆಯುತ್ಸಾಹದಿ ನೀರವಂ ನಿರಧಿಕಂ ನಿಷ್ಪಂದಮಾನಂದಿಪೆಂ ॥ ೨ ॥

ಅಳಿವರ್ ಕಬ್ಬಿಗರೆಂದು ಪೇಳ್ವ ನುಡಿಯುಂ ಚೆನ್ನಪ್ಪುದೇ ಲೋಕದೊಳ್ ।
ಅಳಿವಿಲ್ಲಂ ಕೃತಿಗಳ್ಗೆ, ನಿನ್ನಜಸಮುಂ ಕರ್ಣಾಟದೊಳ್ ಶಾಶ್ವತಂ ।
ತಿಳಿಯಲ್ ನಿನ್ನಯ ಷಟ್ಪದಂಗಳೊಲವಿಂ ಸಾಹಿತ್ಯ ವಿದ್ವಾಂಸಮುಂ ।
ದಳಕಾಸರದೊಳೀಗಳುಂ ಮೊರೆವುವೈ—ನಿನ್ನಿಚ್ಛೆಯಂ ಪಾಲಿಸಲ್ ॥ ೩ ॥

ಬೆಳದೆಂ ಬಾಲಕನಾಗಿ ನಿನ್ನವಿಲಸತ್ಷಟ್ಪಾದ ಝೇಂಕಾರದೊಳ್, ।
ಕಳೆದೆಂ ಜವ್ವನಮಂ ವಿಲಾಸ ಕವಿತಾ ಸಂಭೂತ ಶೃಂಗಾರದೊಳ್, ।
ತಳೆದುಂ ಮಾನಸತೃಪ್ತಿಯಂ ಕೃತಿಯ ಸದ್ಧರ್ಮೋಪದೇಶಂಗಳಿಂ, ।
ಕಳೆವೆಂ ಸಂಸ್ಕೃತಿ ದುಃಖದಿಂ ನುರಿದ ಮುಪ್ಪಂ ನಿನ್ನ ವಾರ್ಧಿಕ್ಯದೊಳ್ ॥ ೪ ॥

(ಸುವಾಸಿನಿ ೧೯೦೩.)

## ಶೋಕಗೀತೆ

ಹೋದುದಲ್ಲಾ ಎಲ್ಲಾ ಹೋದುದಲ್ಲಾ ।
ಹೋದುದೆಲ್ಲವು ಕಣ್ಣ ಹಿಂದೆ ॥
ಖೇದವಿನ್ನೆನಗುಳಿದುದೊಂದೆ ।
ಹೇ ದಯಾನಿಧೆ ಪ್ರೇಮದಿಂದೆ
ಹಾದಿ ತೋರಿಸಿ ನಡಿಸು ಮುಂದೆ
ಹೋದುದಲ್ಲಾ ॥ ೧ ॥

ತೊಡೆಯ ತೊಟ್ಟಿಲೊಳೆನ್ನನಿಟ್ಟು ।
ಕುಡಿಸಿ ಮಮತೆಯ ಗುಣವ ನೆಟ್ಟು ॥
ಬಿಡದೆ ವಿದ್ಯೆಯ ಬಾಯ್ಗೆ ಕೊಟ್ಟು ।
ನಡೆದನೆನ್ನನು ಮರುಗಬಿಟ್ಟು
ಹೋದನಲ್ಲಾ ಅಪ್ಪ ಹೋದನಲ್ಲಾ ॥ ೨ ॥

ಆಟದಿಂದೆನ್ನೊಡನೆ ಬೆಳೆದು ।
ಊಟಕೂಟದ ಪ್ರೇಮ ತಳೆದು ॥
ಕೋಟಲೆಯ ಸಂಸಾರ ಕಳೆದು ।
ದಾಟಿದನು ಮಮಹೃದಯ ಸೆಳೆದು
ಹೋದನಲ್ಲಾ ತಮ್ಮ ಹೋದನಲ್ಲಾ ॥ ೩ ॥

ಮನದಿ ಕೃಷ್ಣತೆಯನ್ನು ಮುಚ್ಚಿ ।
ಕನಕತನುಸೌಂದರ್ಯ ಬಿಚ್ಚಿ ॥
ಧನದ ಕಪಟಸ್ನೇಹ ಹಚ್ಚಿ ।
ಕೊನೆಗೆ ಮಿತ್ರಭುಜಂಗ ಕಚ್ಚಿ
ಹೋದನಲ್ಲಾ ಮಿತ್ರ ಹೋದನಲ್ಲಾ ॥ ೪ ॥

ಅಲೆಯ ಬಡಿತಕೆ ಜಾರ್ವ ಮಳಲೋಲ್ ।
ಕೆಳಗಿಳಿವ ಹೊತ್ತರಿಯ ನೆಳಲೋಲ್, ॥
ತಳದ ತೂತಿನ ಗಡಿಗೆ ಜಲದೋಲ್ ।
ತಿಳಿಮು ತಿಳಿಯದೆ ನೂರಬುದದೋಲ್
ಹೋದುದಲ್ಲಾ ಪ್ರಾಯ ಹೋದುದಲ್ಲಾ ॥ ೫ ॥

ತೋರದಂದದಿ ಸೇರಿ ತೋರುತ ।
ಭೂರಿ ಸುಖಸಂತಸವ ಕೋರುತ ॥
ನೀರಿನೋಲ್ ಕೈಯಿಂದ ಜಾರುತ ।
ಹಾರಿ ಹೋದುದು ದುಃಖಕಾರುತ
ಹೋದುದಲ್ಲ ದ್ರವ್ಯ ಹೋದುದಲ್ಲಾ ॥ ೬ ॥

ಅಕಟ ಈ ಸಂಸಾರದೊಳಗೆ ।
ಸಕಲ ನಾಶಕೆ ಮೂರುಗಳಿಗೆ ॥
ಶಕಟನಂದದಿ ತಿರುಗಿ ಕೆಳಗೆ ।
ವಿಕಟ ಭಾರತನಾದೆ ನಿಳೆಗೆ ॥ ೭ ॥

ಹೋದುದನು ನಾ ಮರುಗದಂದವ ।
ಗೈದು ಬಿಗಿ ವೈರಾಗ್ಯಬಂಧವ, ॥
ಓ ದಯಾನಿಧೆ ಭಕ್ತಬಾಂಧವ ।
ಮೋದದಿಂದವತರಿಸಿ ಬಂದವ ॥ ೮ ॥

(ಕಂಠೀರವ, ೧೯೩೫.)

# ಕುಳದ ಕಲಿಗೆ

೧

ಬರಿಯ ಉಳುವ ಕುಳದ ಗೆರೆಯೆ ?
ನಾಡ ಹಣೆಯ ಬರೆಹ ಬರೆವೆ !
ಹೊಲದ ಗಾಂಧಿ, ನೆಲದ ನಾಂದಿ,
ನೀನೆ ರಾಷ್ಟ್ರಶಕ್ತಿ:
ನೆಹರುಗೇನು ಕಡಮೆಯೇನು
ನಿನ್ನ ದೇಶಭಕ್ತಿ ?
ಅವರೊ ಹೆಸರು; ನೀನೊ ಉಸಿರು
ನಾಡ ದೇವಿಗೆ :
ನಂದದೆಂದೂ ಕುಂದದಿರುವ
ನಂದಾ ದೀವಿಗೆ !

೨

ಉಸಿರಿದ್ದರೆ ತಾನೆ ಹೆಸರು ;
ಒಡಲಿದ್ದರೆ ತಾನೆ ಉಸಿರು :
ನಿನ್ನ ದುಡಿಮೆ ನಮಗೆ ಭುಕ್ತಿ ;
ನಿನ್ನ ಬಲದೊಳೆಮ್ಮ ಮುಕ್ತಿ !–
ರಕ್ಷಿಗಿಹುದೆ ಹಿರಿಯ ಸೇನೆ ?
ಅದರ ಬೆನ್ನುಮೂಳೆ ನೀನೆ !
ನಿನ್ನ ಕೈಯೊಳಿಹುದು ಗೆಯ್ಮೆ;
ನಿನ್ನ ಕಾಲೊಳಿಹುದು ಮೆಯ್ಮೆ;
ಹೆಸರಿಲ್ಲದೆ ಹೆಸರರಿಯದೆ
ಹೆಸರೊಲ್ಲದ ನೀನೆ ಮಹಿಮೆ
ನಾಡ ದೇವಿಗೆ ;
ನಂದದೆಂದೂ ಕುಂದದಿರುವ
ನಂದಾ ದೀವಿಗೆ !

೩

ಅನ್ನರಣದ ಭಾರತದಲಿ
ಕುರುಕ್ಷೇತ್ರದಗ್ನಿಯಲಿ
ಹಲಾಯುಧದ ಭೀಷ್ಮ ಕಲಿ,
ಜಗದ ಸೊಗಕೆ ಬೇಳ್ದ ಬಲಿ,
ನಮೋ ನಿನಗೆ ಧನ್ಯ ಹಲಿ !

ಕುವೆಂಪು.

# ಕನ್ನಡ ಕವಿ ಲಕ್ಷ್ಮೀಶನ ಕಾಲದ ಮರುವಿಚಾರ

(ಶ್ರೀ ಗೋವಿಂದ ಪೈ.)

## ೧

ಈ ಮೊದಲು ನಾನು ಕನ್ನಡ ಕವಿ ಲಕ್ಷ್ಮೀಶನ ಕಾಲ-ದೇಶ-ಮತಗಳ ವಿಚಾರವನ್ನು ಕುರಿತು ಬರೆದ ಲೇಖವು ಪುತ್ತೂರಿನ 'ಕರ್ಣಾಟಕ ಕೇಸರಿ'ಯಲ್ಲಿ (1928 : ಸಂಪುಟ II) ಪ್ರಕಟವಾಯಿತು. ಆ ಮೇಲೆ ಚಿಕ್ಕಮಗಳೂರಿನ ಕರ್ಣಾಟಕ ಸಂಘದ 'ಕವಿ ಲಕ್ಷ್ಮೀಶ' (1933) ಎಂಬ ಗ್ರಂಥದಲ್ಲಿ (ಪುಟ ೫೬-೧೨೭) ಅದೇ ಪುನಃ ಪ್ರಕಟವಾಯಿತು. ಆ ಬಗ್ಗೆ 'ಕರ್ಣಾಟಕ ಕೇಸರಿ'ಯ ಸಂಪಾದಕರಿಗೂ ಚಿಕ್ಕಮಗಳೂರಿನ ಕರ್ಣಾಟಕ ಸಂಘದವರಿಗೂ ಅತ್ಯಂತ ಋಣಿಯಾಗಿರುತ್ತೇನೆ.

ಆ ಲೇಖದ ಕಾಲವಿಚಾರದಲ್ಲಿ ಈ ವರೆಗೆ ಪ್ರಕಟವಾಗಿಲ್ಲದ 'ಕನ್ನಡ ಕುವಲಯಾನಂದ'ದ ಕೊನೆಯ ಈ ವಾರ್ಧಕದಿಂದ-

> ಇರುವ ತೊರಗಲ್ ಸೀಮೆಗರಸಾದ ಲಿಂಗ ಭೂ
> ವರನ ಸತ್ಪುತ್ರ ಜಾಯೇಂದ್ರನಿಂ ನಿರ್ಮಿಸಿದ

ಅಂದರೆ ತೊರಗಲ್ ಸೀಮೆಯ ಒಡೆಯನೂ ಲಿಂಗ ಭೂವರನ ಮಗನೂ ಆದ ವೀರಶೈವ ಜಾಯೇಂದ್ರನೆಂಬ ಜಾಯಗೊಂಡ ದೇಸಾಯಿಯಿಂದ ವಿರಚಿತವಾದುದೆಂದು ತಿಳಿವ ಆ ಕಾವ್ಯದಲ್ಲಿ ಲಕ್ಷ್ಮೀಶನ ಜೈಮಿನಿಭಾರತದಿಂದ ೫೦ರ ಮೇಲೆ ಪದ್ಯಗಳು ಉದಾಹೃತವಾಗಿರುವುದರಿಂದ ಆ ಕುವಲಯಾನಂದದ ರಚನ ಕಾಲವನ್ನು ಲಕ್ಷ್ಮೀಶನ ಕಾಲವಿಚಾರದಲ್ಲಿ ಅಡಿಗಲ್ಲಾಗಿ ಇಟ್ಟುಕೊಂಡಿದ್ದೆನಷ್ಟೆ. ಕನ್ನಡ ಕುವಲಯಾನಂದದ ರಚನ ಕಾಲವನ್ನು ಕುರಿತು ಆ ಕಾವ್ಯದ ಕೊನೆಯ ಅದೇ ವಾರ್ಧಕದಲ್ಲಿ

> ವರುಷವಾನಂದ ಮಾಧವ ಮಾಸದಲ್ಲಿ ಭಾ
> ಸುರ ಶುಕ್ಲಪಕ್ಷ ಪ್ರತಿಪದಿಯ ರವಿವಾಸರದಿ

ಅಂದರೆ ಆ ಗ್ರಂಥವು ಆನಂದ ಸಂವತ್ಸರದ ಮಾಧವ (= ವೈಶಾಖ) ಮಾಸದ ಶುಕ್ಲ ಪಾಡ್ಯ ರವಿವಾರದಂದು ಬರೆದು ಮುಗಿಯಿತೆಂದಿದೆ. ಶಕವರ್ಷಗಳ ಸಂಖ್ಯೆ ಇಲ್ಲ. ಈ ಕನ್ನಡ ಕುವಲಯಾನಂದವು ಅಪ್ಪಯ್ಯ ದೀಕ್ಷಿತನ ಸಂಸ್ಕೃತ ಕುವಲಯಾನಂದದ ಕನ್ನಡ ಪರಿವರ್ತನೆ. ಸಂಸ್ಕೃತ ಕುವಲಯಾನಂದವನ್ನು ಅಪ್ಪಯ್ಯ ದೀಕ್ಷಿತನು ರಚಿಸಿದುದು ಅದರ ಕೊನೆಯಲ್ಲಿ ಹೇಳಿರುವಂತೆ

> ಅಮುಂ ಕುವಲಯಾನಂದಮಕರೋದಪ್ಪ ದೀಕ್ಷಿತಃ ।
> ನಿಯೋಗಾದ್ವೇಂಕಟಪತೇರ್ನಿರುಪಾಧಿ ಕೃಪಾನಿಧೇಃ
> ॥ ೧೭೦ ॥

ವಿಜಯನಗರದ ಅರವೀಡು ವಂಶದ I ವೆಂಕಟಪತಿ ರಾಯನ ಆಳಿಕೆತ್ತಿನಲ್ಲಿ (ಕ್ರಿ. ಶ. ೧೫೮೬-೧೬೧೪)[1] ಎಂಬ ಕಾರಣ ಆ ಕಾಲಕ್ಕೆ ಸರಿಯಾಗಿಯೂ, ಕ್ರಿ. ಶ. ೧೬೭೪ರಿಂದ ೧೮೫೪ರ ವರೆಗೆ ೪ ಸಲ ಬಂದು ಹೋದ ಆನಂದ ಸಂವತ್ಸರಗಳಲ್ಲಿ ಕ್ರಿ. ಶ. ೧೬೭೪ನೆಯ ಆನಂದ ಸಂ। ದಲ್ಲಿ ಮಾತ್ರ ವೈಶಾಖ ಶುದ್ಧ ಪಾಡ್ಯದ ತಿಥಿ ರವಿವಾರ ಬಂದಿದ್ದುದರಿಂದಲೂ, ಕನ್ನಡ ಕುವಲಯಾನಂದದ ರಚನೆ ಕ್ರಿ. ಶ. ೧೬೭೪ನೆಯ ಏಪ್ರಿಲ್ ೨೬ನೆಯ ತಾರೀಕು ಆದಿತ್ಯವಾರ ಮುಗಿಯಿತೆಂದು ಅಲ್ಲಿ ಹೇಳಿರುತ್ತೇನೆ.

ಆದರೆ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಪತ್ರಿಕೆಯಲ್ಲಿ[2] ಇತ್ತೀಚೆಗೆ ಪ್ರಕಟವಾದ 'ಕೊಕಟನೂರ ದೇಶಗತಿಯ ಬಾಡ'ದಿಂದ ಜಾಯಗವಡ ಬಿನ್ ಲಿಂಗಪ್ಪ ಸರದೇಸಾಯಿ ಮಾಮಲೆ ತೊರಗಲ್ಲ (ಪು. ೮), ಅಂದರೆ ತೊರಗಲ್ಲ ಸೀಮೆಯ ಒಡೆಯನಾದ ಲಿಂಗಪ್ಪ ಸರದೇಸಾಯಿಯ ಮಗ ಜಾಯಗೌಡ ಸರದೇಸಾಯಿ ಎಂಬ ಕನ್ನಡ ಕುವಲಯಾನಂದದ ರಚಕನಾದ ನಮ್ಮ ಜಾಯಗೊಂಡ ದೇಸಾಯಿ ಫಸಲಿ ಸನ್ ೧೧೨೨ರಲ್ಲಿ ಇನ್ನೂ ಚಿಕ್ಕವನಿದ್ದನು (ಪು. ೮), ಆತನು ಫಸಲಿ ಸನ್ ೧೧೪೨ರಲ್ಲಿ ದೊಡ್ಡವನಾಗಿ ವಹಿವಾಟ ಮಾಡತೊಡಗಿದನು (ಪು. ೮), ಫಸಲಿ ಸನ್ ೧೧೭೦ರಲ್ಲಿ ಮರಣ ಹೊಂದಿದನು (ಪು. ೧೧) ಎಂದು ತಿಳಿಯುತ್ತದೆ. ಈ ಫಸಲಿ ವರ್ಷಕ್ಕೂ ಕ್ರಿಸ್ತಶಕ (ಕ್ರಿ. ಶ.) ವರ್ಷಕ್ಕೂ ಹಿಂದುಸ್ಥಾನದ ಅನ್ಯಾನ್ಯ ದೇಶಗಳಲ್ಲಿ ಅನ್ಯಾನ್ಯ ಅಂತರವಿರು

---

1 ವೆಲ್ಲೂರಿನ ತುಂಡರಸನಾಗಿದ್ದ ಬೊಮ್ಮ ನಾಯಕನು ಅಪ್ಪಯ್ಯ ದೀಕ್ಷಿತನ ಪೋಷಕನಾಗಿದ್ದನೆಂದೂ, ಅವನ ಮಗನಾದ ಲಿಂಗಮ ನಾಯಕನು ವಿಜಯನಗರದ I ವೆಂಕಟಪತಿ ರಾಯನ ಕೆಯ್ಕೆಳಗೆ ಆಳುತ್ತಿದ್ದನೆಂದೂ ಶಾಸನಗಳಿಂದ ತಿಳಿಯುತ್ತದೆ. ಈ ಬೊಮ್ಮ ನಾಯಕನ ಹೆಸರು ಕ್ರಿ. ಶ. ೧೫೪೯ ಹಾಗೂ ೧೫೬೬ರ ಶಾಸನಗಳಲ್ಲಿಯೂ, ಲಿಂಗಮ ನಾಯಕನ ಹೆಸರು ಕ್ರಿ. ಶ. ೧೬೦೧ರ ಶಾಸನದಲ್ಲಿಯೂ ಇದೆ. (Historical Inscriptions of South India, ಪು ೪೪೯). ಆತಏವ ಅಪ್ಪಯ್ಯ ದೀಕ್ಷಿತನ ವೆಂಕಟಪತಿ ರಾಯನು ವಿಜಯನಗರದ I ವೆಂಕಟಪತಿ ರಾಯನೇ ಸರಿ.

2. II. ೪: ದೀಪಾವಳಿಯ ಸಂಚಿಕೆ (೧೯೪೨), ಪು. ೧-೨೮.

ವುದರಿಂದ, ಈ ಬಾಡದಲ್ಲಿ ಹೇಳಿರುವ ಫಸಲಿ ವರ್ಷಕ್ಕೂ ಕ್ರಿ. ಶ. ವರ್ಷಕ್ಕೂ ಅಂತರವೆಷ್ಟು ಎಂದು ನೋಡುವಲ್ಲಿ, ದಿಲ್ಲಿಯ ಔರಂಗಜೇಬ ಬಾದಶಹನು(ಕ್ರಿ.ಶ. ೧೬೫೮-೧೭೦೭) ಬಿಜಾಪುರದ ಸಿಕಂದರ ಸುಲ್ತಾನನನ್ನು (ಕ್ರಿ. ಶ. ೧೬೭೨—೧೬೮೬) ಫಸಲಿ ಸನ್ ೧೦೯೬ರಲ್ಲಿ ಸೋಲಿಸಿ 'ದಖಣೆ ಬಾದ ಶಾಹಿ ರಾಜ್ಯ'ವನ್ನು ಅಂದರೆ ಬಿಜಾಪುರ ರಾಜ್ಯವನ್ನು ನಾಶ ಗೊಳಿಸಿದನೆಂದು ಅದರಲ್ಲೇ (ಪು. ೫) ಹೇಳಿರುವುದರಿಂದ, ಕ್ರಿ. ಶ. ೧೬೮೬ರಲ್ಲಿ ಆದ ಆ ಘಟನೆಗೆ ಸರಿಯಾಗಿ, ಫಸಲಿ ಸನ್ ೧೦೯೬ = ಕ್ರಿ. ಶ. ೧೬೮೬ ಆಗುತ್ತದೆ, ಅಂದರೆ ಫಸಲಿ ವರ್ಷಕ್ಕೂ ಕ್ರಿ. ಶ. ವರ್ಷಕ್ಕೂ (೧೬೮೬—೧೦೯೬ = )೫೯೦ ವರ್ಷಗಳ ವ್ಯತ್ಯಾಸವೆಂದು ವ್ಯಕ್ತವಾಗುತ್ತದೆ. ಹಾಗಾದರೆ ಕನ್ನಡ ಕುವಲಯಾನಂದದ ರಚಕನಾದ ಜಾಯಗೊಂಡ ಅಥವಾ ಜಾಯಗೌಡ ದೇಸಾಯಿ ಕ್ರಿ. ಶ. ೧೭೧೨ರಲ್ಲಿ ಇನ್ನೂ ಚಿಕ್ಕವನಿದ್ದನು,[3] ಕ್ರಿ. ಶ. ೧೭೩೨ರಲ್ಲಿ ದೊಡ್ಡವನಾಗಿ ವಹಿವಾಟ ಮಾಡತೊಡಗಿದನು, ಕೊನೆಗೆ ಕ್ರಿ. ಶ. ೧೭೬೦ರಲ್ಲಿ ಮರಣ ಹೊಂದಿದನು ಎಂದು ನಿಷ್ಪನ್ನವಾಗುತ್ತದೆ. ಅತ ಏವ ಆತನ ಕನ್ನಡ ಕುವಲಯಾನಂದ ರಚಿತವಾದ ಆನಂದ ಸಂವತ್ಸರವು ನಾನು ಈ ಮೊದಲು ಭಾವಿಸಿದಂತೆ ಕ್ರಿ. ಶ. ೧೬೭೪ ಸರ್ವಥಾ ಅಲ್ಲ, ಪ್ರತ್ಯುತ ಕ್ರಿ. ಶ. ಸು. ೧೭೨೦ರಿಂದ ೧೭೬೦ ರೊಳಗಣ ಬೇರೆಯೇ ಒಂದು, ಒಂದೇ ಒಂದು, ಆನಂದ ಸಂ। ಆಗಿರಬೇಕೆಂದು ಕಂಡಿತವಾಗಿ ಸಿದ್ಧವಾಗುತ್ತದೆ.

ಆದರೆ ಆ ನಡುವಣ ಕ್ರಿ. ಶ. ೧೭೩೪ನೆಯ ಅದೊಂದೇ ಆನಂದ ಸಂ। ದಲ್ಲಿ ವೈಶಾಖ ಶು। ಪಾಡ್ಯದ ತಿಥಿ ಎಪ್ರಿಲ್ ೨೨ನೆಯ ತಾರೀಕು ಸೋಮವಾರ ಬಂದಿತ್ತು. ಆದರೂ ಆಯಾ ಪ್ರಾಂತಗಳ ಇತರೇತರ ಪಂಚಾಂಗಗಳಲ್ಲಿ ಕಾಣಬರುವ ತಿಥಿಗಳ ಭಿನ್ನವ್ಯಾಪಕತ್ವಕ್ಕೆಸರಿಯಾಗಿ ಅದು ಪ್ರಾಯಶಃ ಆ ದಿನದ ಹಿಂದಣ ಏಪ್ರಿಲ್ ೨೧ನೆಯ ತಾರೀಕು ರವಿವಾರದ ಅಪರಾಹ್ಣದಲ್ಲೇ ತೊಡಗಿರಬಹುದೇನೋ ಎಂದು ಊಹಿಸಬಹುದಾದರೆ, ಮತ್ತು ಹಾಗಾದರೆ ಮಾತ್ರ, ಕನ್ನಡ ಕುವಲಯಾನಂದದ ರಚನೆಯ ತೇದಿ ಕ್ರಿ. ಶ. ೧೭೩೪ ಏಪ್ರಿಲ್ ೨೧ನೆಯ ತಾರೀಕು ಆದಿತ್ಯವಾರವೆನ್ನಬಹುದು. ಅಥವಾ 'ಮಾಧವ' ಎಂದು ವೈಶಾಖ ಮಾಸಕ್ಕೆ ಮಾತ್ರವಲ್ಲ,[4] ವಸಂತ ಋತುವಿಗೂ ಹೆಸರಿದೆ;[4] ಕ್ರಿ. ಶ. ೧೭೩೪ರ ಅದೇ ಆನಂದ ಸಂ। ದ ಚೈತ್ರ ಶುದ್ಧ ಪಾಡ್ಯ ಮಾರ್ಚಿ ೨೪ನೆಯ ತಾರೀಕು ರವಿವಾರ ಬಂದಿತ್ತು; ಪ್ರಾಯಶಃ ವಸಂತ ಋತುವನ್ನೇ ಮನಸ್ಸಿನಲ್ಲಿ ಉದ್ದೇಶಿಸಿ, ಇಲ್ಲವೆ ಚೈತ್ರಮಾಸವನ್ನು ವಸಂತ ಋತುವೊಂದಿಗೆ ಸಮೀಕರಿಸಿ ತಪ್ಪಾಗಿಯೇ ಆದರೂ 'ಮಾಧವ ಮಾಸ' ಎಂದಿರಬಹುದಾದರೆ, ಮತ್ತು ಹಾಗಾದರೆ ಮಾತ್ರ, ಆ ಗ್ರಂಥದ ರಚನೆಯ ತೇದಿ ಕ್ರಿ. ಶ. ೧೭೩೪ ಮಾರ್ಚಿ ೨೪ನೆಯ ತಾರೀಕು ಆದಿತ್ಯವಾರ ಎಂದು ಹೇಳಬಹುದು. ಹೀಗೆ ಈ ತಿಥಿಗೆ ಸರಿಗೂಡುವ ಇಂಗ್ಲೀಷು ತಿಂಗಳು—ತಾರೀಕುಗಳನ್ನು ನಿರ್ಣಯಿಸಲಾಗದ ಇಷ್ಟು ವಿಷಮವಾದ ಬಿಕ್ಕಟ್ಟಿನಲ್ಲಿ, ಇವೆರಡೂ ಇಂಗ್ಲೀಷು ತೇದಿಗಳನ್ನು ವಿಸರ್ಜಿಸಿ ಆ ಗ್ರಂಥ ಕ್ರಿ. ಶ. ೧೭೩೪ ರಲ್ಲಿ ರಚಿತವಾಯಿತೆಂದು ಅಷ್ಟು ಮಾತ್ರ ಒಪ್ಪಿಕೊಳ್ಳುವುದು ವಾಸಿ. ಹೇಗೂ ಆ ರಚನೆ ಕ್ರಿ. ಶ. ೧೭೦೦ ರಿಂದ ಈಚೆಗೆ ಇಳಿತರುವುದರಿಂದ, ಲಕ್ಷ್ಮೀಶನ ಕಾಲವಿಚಾರದಲ್ಲಿ ಇಟ್ಟುಕೊಂಡಿದ್ದ ಆ ಅಡಿಗಲ್ಲು ಜಾರಿತು. ಇನ್ನು ಬೇರೆ ಸಾಧನಗಳು ಇವೆಯೋ ನೋಡಬೇಕು.

---

೨

ಸುಕವಿಕಂಠಾಭರಣ ಎಂದು ಬಿರುದಿದ್ದ ಹಾಗೂ ಗೋಪ ಕವಿಯೂ ಎಂದು ಬೇರೊಂದು ಹೆಸರಿದ್ದ ಗೋವಿಂದ ಕವಿಯ[5] 'ನಂದೀ ಮಾಹಾತ್ಮ್ಯ' ಎಂಬ ಕಾವ್ಯದಲ್ಲಿ ಪೀಠಿಕಾ ಸಂಧಿಯ ಕವಿಸ್ತುತಿಯಲ್ಲಿ ಲಕ್ಷ್ಮೀಶನ ಹೆಸರಿದೆ—

ಚತುರಾಸ್ಯ ರುದ್ರ **ಲಕ್ಷ್ಮೀಶಪತಿ**ಯನಂತರು
ನ್ನತ ಸತ್ಯಲೋಕ ಕುಕ್ಕಿಲ ಕೀಲಾಲನಿಧಿ
ವಿತಳಮಂ ಸಾರಲೆಮ್ಮಱಿವರಾರೆಂದು ಸುಕವೀಂದ್ರಾಭಿ
ಧಾನವಾಂತು ।
ಕೃತಿಕರ್ತರೆನಿಸಿ ವಿಶ್ರುತರಾಗೆ ಲೋಕದೊಳ್

---

3. ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆಯಿಂದ ಪ್ರಕಟವಾದ (೧೯೩೪) 'ಚೆನ್ನಬಸವ ಪುರಾಣ'ದ ಪ್ರಸ್ತಾವನೆಯಲ್ಲಿ (ಪು.೧೨, ಅಡಿ ಬರಿಹ ೧) ಜಾಯಗೊಂಡ ದೇಸಾಯಿಯ ಜನನವು ಕ್ರಿ.ಶ. ೧೭೧೨ರಲ್ಲಿ ಆಯಿತು ಎಂದಿರುವುದು ಸರಿಯಲ್ಲ, ಆ ಬಾಡದಲ್ಲಿ (ಪು.೮) ಫಸಲಿ ಸನ್ ೧೧೨೨ರಲ್ಲಿ, ಅಂದರೆ ಕ್ರಿ. ಶ. ೧೭೧೨ರಲ್ಲಿ ಅವನು ಇನ್ನೂ ಚಿಕ್ಕವನಿದ್ದನು ಎಂದು ಸ್ಪಷ್ಟವಾಗಿ ಹೇಳಿರುವುದರಿಂದ, ಅವನು ಅದಕ್ಕೆ ಹಿಂದೆಯೇ ಜನಿಸಿರಬೇಕು.

4. ವೈಶಾಖೇ ರಾಧಮಾಧವೌ' (ಹೇಮಚಂದ್ರನ ಅಭಿಧಾನ ಚಿಂತಾಮಣಿ' ಶ್ಲೋಕ ೧೫೩); 'ಮಾಧವೋ ವಿಷ್ಣೌ ವಸಂತೇ ವೈಶಾಖೇ'(ಹೇಮಚಂದ್ರನ 'ಅನೇಕಾರ್ಥಸಂಗ್ರಹ' —ಶ್ಲೋ. ೧೩೯)

5. 'ಈ ಕವಿಗೆ ಗೋಪನೆಂದು ಪ್ರಸಿದ್ಧವಾದ ಮತ್ತೊಂದು ಹೆಸರುಂಟು' (ಕಾವ್ಯಕಲಾನಿಧಿ, ಮೈಸೂರು, ೧೯೦೭)

ನುತಿಸದವರಾರ್ ಮನೋಮುದದಿಂದ ಕಾವ್ಯ ಪ
ದ್ಧತಿಯೊಳಾನಭಿವಂದನಂ ಗೆಯ್ದು ಮುಂದೆ ಪದ
ಸಂದರ್ಭಮಂ ಸಾಗಿಪೆಂ ॥ ೧೫ ॥

ಕವಿಚರಿತಕಾರರು ಈ ಗೋವಿಂದ ಕವಿಯ ಕಾಲ ಕ್ರಿ. ಶ. ಸುಮಾರು ೧೬೫೦ ಎಂದು ಊಹಿಸಿರುತ್ತಾರೆ[7]. ಅದು ಸರಿಯಲ್ಲ. ಏಕೆಂದರೆ ಈತನ ನಂದೀ ಮಾಹಾತ್ಮ್ಯದಲ್ಲಿ (ಸಂಧಿ ೨೫) ಆ ಕಾವ್ಯವನ್ನು ಆತನಿಂದ ಇಮ್ಮಡಿ ಹಾವಳೀ ಭೈರನು ಹೇಳಿಸಿದನೆಂದಿದೆ (ಕವಿ ಲಕ್ಷ್ಮೀಶ, ಪು. ೫೪)—

ಪೊಡವಿಯೊಳ್ ಸಕಲ ಜನ ಜಿಹ್ವೆಯುಳ್ಳನ್ನವರ
ಮೊಡನಿರ್ಪುದೆಂದು **ಇಮ್ಮಡಿ ಹಾವಳೀ ಭೈರ**
ಪೊಡವಿಪಂ ಪೇಳಿಸಿದ ನಂದಿಯ ಮಹಾತ್ಮೆಯಂ
ಲೋಕವಿಶ್ರುತಮಾಗಲು ॥ ೩ ॥

ಅದೇ ಸಂಧಿಯಲ್ಲಿ (ಪದ್ಯ ೨೬–೨೯) ಆತನನ್ನು 'ವರ ಹಾವಳೀಂದ್ರಸುಕುಮಾರ' 'ಇಮ್ಮಡಿ ಹಾವಳೀಂದ್ರ'ನೆಂದು ವಿಶೇಷವಾಗಿ ಸ್ತುತಿಸಿ, ಆತನು ಈ 'ಕೃತಿಯ ಕೇಳ್ದೊಲ್ದು' ಕವಿಗೆ 'ವಿರೂಪಾಕ್ಷ ಪುರವ ಧಾರಾದತ್ತಮಾಗಿತ್ತ'ನೆಂದೂ ಹೇಳಿದೆ. ಈ ಇಮ್ಮಡಿ ಹಾವಳಿ ಭೈರನು ಆವತಿ ನಾಡ ಪ್ರಭು. ಆತನ ೪ ಶಾಸನಗಳು ದೊರಕಿವೆ—

(೧) ದೊಡ್ಡ ಬಳ್ಳಾಪುರದಲ್ಲಿ ಹಾಳುಬಿದ್ದಿರುವ ಆದಿನಾರಾಯಣ ಸ್ವಾಮಿಯ ದೇವಾಲಯದ ಮಹಾದ್ವಾರದಲ್ಲಿಯ ಶಾಲಿವಾಹನ ಶಕ (ಶಾ. ಶ.) ೧೫೨೦ ವಿಳಂಬಿ ಸಂ। = ಕ್ರಿ. ಶ. ೧೫೯೮ರ ಕನ್ನಡ ಶಿಲಾಶಾಸನ;* (೨) ಅಲ್ಲಿಯದೇ ಆಂಜನೇಯ ದೇವಾಲಯದಲ್ಲಿಯ ಶಾ. ಶ. ೧೫೩೨ ಸಾಧಾರಣ ಸಂ। = ಕ್ರಿ. ಶ. ೧೬೧೦ರ ಕನ್ನಡ ಶಿಲಾಶಾಸನ;* (೩) ಶಾ. ಶ. ೧೫೩೯ ಪಿಂಗಳ ಸಂ। = ಕ್ರಿ. ಶ. ೧೬೧೭ರ ಬಾಗೆಪಳ್ಳಿ ನಂ. ೪೦ನೆಯ ತೆಲುಗು ಶಿಲಾಶಾಸನ;[8] ಮತ್ತು (೪) ಶಾ. ಶ. ೧೫೬೩ ....ಸಂ। = ಕ್ರಿ. ಶ. ೧೬೪೧ರ ಸಿದ್ಲಘಟ್ಟ ನಂ. ೩೧ನೆಯ ಕನ್ನಡ ಶಿಲಾಶಾಸನ.[8] ಇವುಗಳಲ್ಲಿ ಮೊದಲನೆಯದರಲ್ಲಿ ಅವನನ್ನು 'ಆವತಿಯ ನಾಡ ಪ್ರಭು ಯಿಂಮಡಿ ಹಾವಳಿ ಬಯಿರಪ್ಪ ಉಡಯ್ಯನವರು' ಎಂದದೆ, ಕೊನೆಯದರಲ್ಲಿ 'ಆವತಿ ನಾಡ ಪ್ರಭು ಭೈರೀ ಗೌಡರ ಪುತ್ರರು ಯಿಮ್ಮಡಿ ಬೈರೀ ಗೌಡರು' ಎಂದದೆ. ಅತಏವ ಇಮ್ಮಡಿ ಹಾವಳಿ ಭೈರನು ಕ್ರಿ. ಶ. ೧೫೯೮ಕ್ಕೆ ಹಿಂಧಿನಿಂದ ೧೬೪೧ರ ಮೇಲೂ ಆವತಿ ನಾಡ ಪ್ರಭುವಾಗಿದ್ದಿರಬೇಕು, ಅಂದರೆ ಗೋವಿಂದ ಕವಿಯ ನಂದೀ ಮಹಾತ್ಮ್ಯ ಕ್ರಿ. ಶ. ೧೬೦೦ರಿಂದ ಈಚೆ ರಚಿತವಾಗಿರಬೇಕು ಎಂದು ಈ ಶಾಸನಗಳಿಂದ ನಿಶ್ಚಯಿಸಲಾಗುತ್ತದೆ.

ಕನ್ನಡ ಕುವಲಯಾನಂದದಲ್ಲಿ ಉದಾಹರಿಸಿರುವ ಕಾವ್ಯಗಳಲ್ಲಿ 'ಚಿತ್ರ ಭಾರತ' ಎಂಬ ಕಾವ್ಯದಿಂದ ಆಯ್ದ ಸುಮಾರು ೧೬ ಪದ್ಯಗಳು ಇವೆ ಎಂದೂ, ಕರ್ಣಾಟಕ ಕವಿಚರಿತೆಯಲ್ಲಿ ಚಿತ್ರಭಾರತದ ಪ್ರಸ್ತಾವವಿಲ್ಲವೆಂದೂ ನನ್ನ ಮೂಲಲೇಖದಲ್ಲಿ ('ಕವಿ ಲಕ್ಷ್ಮೀಶ', ಪು ೬೧) ಹೇಳಿರುತ್ತೇನಷ್ಟೆ. ಆದರೆ ಇತ್ತೀಚೆ ಆ ಗ್ರಂಥದೊಂದು ಸಮಗ್ರ ಹಸ್ತಪ್ರತಿ ಶ್ರೀ ಬೇಂದ್ರೆಯವರಿಗೆ ದೊರಕಿರುತ್ತದಂತೆ. ಅದರ ರಚಕನೂ ಗೋಪ ಕವಿಯೂ ಎಂಬ ಗೋವಿಂದ, ಈ ಗೋವಿಂದ ಕವಿಗೂ ಸುಕವಿ ಕಂಠಾಭಣ ಎಂಬ ಬಿರುದಿದೆ, ಅತಏವ ಇದೂ ನಂದೀಮಾಹಾತ್ಮ್ಯದ ರಚಕನಾದ ಗೋವಿಂದ ಕವಿಯದೇ ಕಾವ್ಯವೆಂದು ಅವರು ಬರೆದಿರುತ್ತಾರೆ.[9] ಅದರ ರಚನಕಾಲದ ವಿವರ ಅದರಲ್ಲಿ (ಸಂಧಿ ೩೦) ಹೀಗದೆಯಂತೆ–[10]

ವಿನುತ ವಿಷು[11] ನಾಮ ಸಂತ್ಸರದ ದಕ್ಷಿಣಾ
ಯನದ ಹೇಮಂತ ಋತು ಮಾರ್ಗಸಿರ ಮಾಸದೊ
ಳ್ಮಿನುಗುತಿಹ ಶುಕ್ಲಪಕ್ಷದ ಪಂಚಮಿಯುಲು ವಿಧುವಾರದಾ
ವಿಷ್ಣುತಾರೆ
ಜನಿತ ಹರುಷಣ ನಾಮ ಯೋಗ ಬಾಲವ ಕರಣ ।
ಘನನಿಲಯ ದಿವದ ಭೂತ ತ್ರಿತಯದಲ್ಲಿ[12] ನೂ
ತನಮೆನಲ್ಕಾವ್ಯಮಂ ಪೇಳ್ದನಾ ಗೋಪಕವಿ ಸುಕವಿ
ಕಂಠಾಭರಣನು ॥ ೧೬ ॥

---

6. ಕವಿ ಲಕ್ಷ್ಮೀಶ (ಕರ್ಣಾಟಕ ಸಂಘ, ಚಿಕ್ಕಮಗಳೂರು, ೧೯೩೩; ಪು. ೫೨)

7. ಕರ್ಣಾಟಕ ಕವಿಚರಿತೆ II. ಪು. ೩೯೪. ನಂದೀಮಾಹಾತ್ಮ್ಯದಲ್ಲಿ ಲಕ್ಷ್ಮೀಶನನ್ನು ಹೆಸರಿಸಿರುವುದನ್ನು ಕವಿಚರಿತಕಾರರು ಹೇಳಿಲ್ಲ. ಪ್ರಾಯಶಃ ಅದನ್ನವರು ಗಮನಿಸಲಿಲ್ಲವೇನೋ. ಅಥವಾ ಲಕ್ಷ್ಮೀಶನನ್ನು ಕ್ರಿ. ಶ. ಸು. ೧೭೦೦ಕ್ಕೆ ಹೊಂದಿಸಿದ ಅವರು ಅವನನ್ನು ಹೆಸರಿಸಿದ ಗೋವಿಂದ ಕವಿಯ ಕಾಲವನ್ನು ಅವನಿಗಿಂತ ಹಿಂದೆ ಕ್ರಿ.ಶ. ೧೬೫೦ಕ್ಕೆ ತಳ್ಳುತ್ತಿರಲಿಲ್ಲ.

* ಇನ್ನೂ ಪ್ರಕಟವಾಗಿಲ್ಲದ ಈ ೨ ಶಾಸನಗಳನ್ನು ಉಪಯೋಗಿಸುವುದಕ್ಕೆ ನನಗೆ ಅನುಮತಿಯನ್ನು ಇತ್ತ ಬಗ್ಗೆ ಮೈಸೂರು ಆರ್ಕಿಯೊಲೊಜಿಕಲ್ ಇಲಾಖೆಯ ಡಿರೆಕ್ಟರ್ ಮೈ. ವಾ.ಡಾ. ಎಚ್. ಕೃಷ್ಣರವರಿಗೂ, ಇವನ್ನು ನನಗೆ ಒದಗಿಸಿಕೊಟ್ಟ ಬಗ್ಗೆ ಶ್ರೀ ಡಿ. ಎಲ್ ನರಸಿಂಹಾಚಾರ್ಯರಿಗೂ ಅತ್ಯಂತ ಕೃತಜ್ಞನಾಗಿರುತ್ತೇನೆ.

8 Epigraphia Carnatica (E, C) X.

9 'ಜೀವನ' (ಧಾರವಾಡ) II, ಸಂ. ೨ (ದಶಂಬರ ೧೯೪೦) ಪು. ೧೨೦–೧೨೪.

10 ಅದೇ, ಪು, ೧೨೨.

11 ಶ್ರೀ ಬೇಂದ್ರೆಯವರಿಗೆ ದೊರೆತ ಹಸ್ತಪ್ರತಿಯಲ್ಲಿ ಈ ಶಬ್ದವು 'ಜೀವನ'ದಲ್ಲಿ ಅಚ್ಚಾಗಿರುವಂತೆ 'ವಿಷ್ಣು'ಎಂದಿದ್ದರೆ, ಅದು ತಪ್ಪು. 'ವಿಷ್ಣು'ಎಂಬ ಸಂವತ್ಸರವೂ ಇಲ್ಲ, ಪ್ರಸ್ತಾರಕ್ಕೂ ತೊಡಕು. ಅದು 'ವಿಷು' ಎಂದಿರಬೇಕು.

12 'ಜೀವನ'ದಲ್ಲಿ ಅಚ್ಚಾಗಿರುವಂತೆ 'ಭೂಮತ್ರಿತೀಯ' ಅಲ್ಲ, 'ಭೂತ ತ್ರಿತಯ' ಎಂದಿರಬೇಕು.

ಇಲ್ಲಿ 'ಘನನಿಲಯ' ಎಂದರೆ ಮೋಡಗಳ ಮನೆಯಾದ ಸಮುದ್ರ, ಸಮುದ್ರಗಳು ನಾಲ್ಕು (ಚತುಃಸಮುದ್ರ) ಎಂಬುದರಿಂದ ಸಮುದ್ರ ಎಂಬ ಭೂತಸಂಜ್ಞೆಗೆ ೪ ಎಂದು ಅರ್ಥ; 'ದಿವ' ಅಂದರೆ ಆಕಾಶ =೦ (ಸೊನ್ನೆ) ; 'ಭೂತ' ಎಂದರೆ ಪಂಚ ಭೂತ=೫, 'ಭೂತ ತ್ರಿತಯ' ಅಂದರೆ ೫×೩ =೧೫. ಅತ ಏವ 'ಅಂಕನಾಂ ವಾಮತೋ ಗತಿಃ' ಎಂಬ ನಿಯಮಾನುಸಾರವಾಗಿ ಇವೆಲ್ಲವುಗಳ ಒಟ್ಟಾರೆ ಭೂತಸಂಜ್ಞೆ ೧೫೦೪ ಎಂದಾಗುತ್ತದೆ. ಅಂದರೆ ಆ ಕಾವ್ಯ ರಚಿತವಾದ ದಿನ ಶಾ. ಶ. ೧೫೦೪ ನೆಯ ವಿಷು ಸಂ। ದ ಮಾರ್ಗಶಿರ ಶುಕ್ಲ ೫ ಸೋಮವಾರ ಎಂದು ತಿಳಿಯುತ್ತದೆ. ಆದರೆ ವಿಷು ಸಂ। ದಲ್ಲಿ ಮಾರ್ಗಶಿರ ಶುದ್ಧ ೫ ಸೋಮವಾರ ಬಂದಿರಲಿಲ್ಲ, ಗುರುವಾರ ಬಂದಿತ್ತು ಮಾತ್ರವಲ್ಲ, ಶಾ. ಶ. ೧೫೦೪ ನೆಯ ವರ್ಷಕ್ಕೆ ಸರಿಹೋಗುವ ಸಂವತ್ಸರವೂ ವಿಷುವಲ್ಲ. (ವಿಷು =ಶಾ. ಶ. ೧೫೦೩), ಆಬಳಿಕಣ ಚಿತ್ರಭಾನು. ಆದಕಾರಣ ಈ ವಾರ್ಧಕದಲ್ಲಿ ಹೇಳಿರುವ ಶಕವರ್ಷಗಳ ಸಂಖ್ಯೆಯಲ್ಲಿಯೂ ವಾರದ ಹೆಸರಿನಲ್ಲಿಯೂ ತಪ್ಪಿಲ್ಲವಾದರೆ, ಚಿತ್ರಭಾರತವನ್ನು ರಚಿಸಿ ಮುಗಿಸಿದ ಶಾ. ಶ. ೧೫೦೪ ನೆಯ (ವಿಷು ಅಲ್ಲ) ಚಿತ್ರಭಾನು ಸಂ। ದ ಮಾರ್ಗಶಿರ ಶುಕ್ಲ ೫ ಸೋಮವಾರವು ಕ್ರಿ. ಶ. ೧೫೮೨ ನವಂಬರ ೧೮ನೆಯ ತಾರೀಕು ಸೋಮವಾರವಾಗುತ್ತದೆ.*

ಚಿತ್ರಭಾರತದ ಪೀಠಿಕಾಸಂಧಿಯಲ್ಲಿಯ

ಉತ್ತಮ ಕವೀಂದ್ರೋತ್ಸವಂ **ಚೈತ್ರ** ಶುಕನಲೀ
ವೃತ್ತಿರಲು ಸದ್ಗುರು ಕೃಪಾಮತದ ಪೆದ್ದೊರೆಯ
ನೊತ್ತಿಬಪ ಪರ್ವಿನಿಂ ತಳಿದು . . . . . . . . . ॥ ೨೩ ॥

ಎಂಬಲ್ಲಿಯ **ಚೈತ್ರ** ಪದದಲ್ಲಿ ಗೋವಿಂದ ಕವಿ ಜೈಮಿನಿ ಭಾರತದಲ್ಲಿ (I ೧೧) ತನ್ನನ್ನು 'ಕರ್ಣಾಟ ಕವಿ ಚೂತವನ **ಚೈತ್ರ**'ನೆಂದುಕೊಂಡಿರುವ ಲಕ್ಷ್ಮೀಶನನ್ನು ಸ್ಮರಿಸುತ್ತಾನೆಂದು ಸಾಕಷ್ಟು ಸ್ಪಷ್ಟವಿದೆ. ಆ ಕಾವ್ಯದ ಅದೇ ಸಂಧಿಯಲ್ಲಿಯ

ನೆರೆ ಛಿದ್ರಿಸಿದ ವೇಣುಕಾಂಡದೊಳ್ ಪವನ ಸಂ
ಚರಣದಿಂ ಮಧುರ ಸುಸ್ವರ ತೋರ್ಪ ತೆರದಿ ಹೃ
ದ್ಭರಿತಮಾಗಿರ್ದ ಶ್ರೀ ಮದನಗೋಪಾಲನಾತ್ಮಾನಿಲಂ
ತಾನಾಗಿರೆ ।
ಸಿರುತ ಮಂಜುಳ ಶಬ್ದವೆನ್ನ ಜಿಹ್ವೆಯೊಳಗಂ
ಕುರಿಸಿ ತೋರಿಸಿದನೆಂದರಿದು ಈ ಕಾವ್ಯವಿ
ಸ್ತರಕೊಂದು ಕಲುಷಮಾರೋಪಿಸದೆ ಮತ್ಸರವ ಮರೆದೆಲ್ಲ
ರಾಲಿಸುವುದು ॥ ೨೪॥

ಎಂಬ ಪದ್ಯದಲ್ಲಿ ಲಕ್ಷ್ಮೀಶನ ಜೈಮಿನಿ ಭಾರತದ ಪೀಠಿಕಾಸಂಧಿಯ

......................................ಮತ್ಸರವನುಳಿದಾಲಿಸುವುದು॥ ' ॥
ಜಾಣರಂ ತಲೆದೂಗಿಸದೆ ನುಡಿದೊಡಾ ಪದ
ಕ್ಕೂಣೆಯಂ ಬಹುದೆಂದು ಸರಸೋಕ್ತಿಯಿಂದ ಗೀ
ರ್ವಾಣ ಪುರನಿಲಯ ಲಕ್ಷ್ಮೀವರಂ ತಾನೆ ಸಂಗೀತ
ಸುಕಲಾ ನಿಪುಣನು ।
ವೀಣೆಯಿಂ ಗಾನವಂ ನುಡಿಸುವಂದದೊಳೆನ್ನ
ವಾಣಿಯಿಂ ಕವಿತೆಯಂ ಪೇಳಿಸಿದನೆಂದರಿದು
ಕೇಣಮಂ ತೊರೆದು ಪುರುಡಿಸುವರಂ ಜರೆದು ಕಿವಿದೆರೆದು
ಕೇಳ್ವುದು ಸುಜನರು ॥ ೮ ॥

ಎಂಬ ಪದ್ಯಗಳ ಧ್ವನಿ ಕೇಳಿಸುತ್ತದೆ. ಹೇಗೂ ಈ ಗೋವಿಂದ ಕವಿ ತನ್ನ ನಂದೀಮಾಹಾತ್ಮ್ಯದಲ್ಲಿ ಲಕ್ಷ್ಮೀಶನನ್ನು ಲಕ್ಷ್ಮೀಪತಿ ಎಂದು ನಾಮಗ್ರಾಹವಾಗಿ ಸ್ಮರಿಸಿರುವನಷ್ಟೆ. ಹಾಗಾದರೆ ಗೋವಿಂದ ಕವಿ ಹೊಗಳಿರುವ ಲಕ್ಷ್ಮೀಶನು ಅವನಿಗಿಂತ ಕನಿಷ್ಠಪಕ್ಷಕ್ಕೆ ೫೦-೬೦ ಆದರೂ ವರ್ಷಗಳ ಹಿಂದೆ ಆಗಿಹೋಗಿರಬೇಕು, ಅಂದರೆ ಕ್ರಿ.ಶ.ಸು. ೧೫೨೫ ಲಕ್ಷ್ಮೀಶನ ಕಾಲದ ಉತ್ತರಾವಧಿಯಾಗುತ್ತದೆ.

---

೩

ಕೋನಯ್ಯನೆಂಬ ಕನ್ನಡ ಕವಿ ಭಾಮಿನೀ ಷಟ್ಪದಿಯಲ್ಲಿ, ವಿರಚಿಸಿದ ಗಯಚರಿತ್ರೆ ಅಥವಾ ಕೃಷ್ಣಾರ್ಜುನರ ಸಂಗರ ಎಂಬ ಕಾವ್ಯವೊಂದಿದೆ. [13] ಅದರ ಪೀಠಿಕಾಸಂಧಿಯಲ್ಲಿ ಲಕ್ಷ್ಮೀಶನನ್ನು ಸ್ತುತಿಸಿದೆ—

ಕಾಳಿದಾಸ ಮಯೂರ ವರಕವಿ
ಮೌಳಿಮಣಿ ಬಾಣಾಂಕ ದಂಡಿ ವಿ
ಶಾಲಮತಿ ಮಲಹಣಿ ಕುಮಾರವ್ಯಾಸ ಶುಕರೂಪ।
ಲೋಲಗುಣ **ಲಕ್ಷ್ಮೀಶ** ಘನಕವಿ
ಜಾಲ ಮೃದುಪದ ಪಲ್ಲವಗಳಿಗೆ
ಘಾಲವಂ ಚಾಚುತ್ತ ಪೇಳುವೆನೀ ಮಹಾಕೃತಿಯ॥ ೧೨ ॥

ಮಾತ್ರವಲ್ಲ, ಅದರಲ್ಲಿ ಕೆಲವೆಡೆ ಲಕ್ಷ್ಮೀಶನ ಜೈಮಿನಿಭಾರತದ ಅನುಕರಣವೂ ಇದೆ; ಉದಾ: ಅದರ ೩ನೆಯ ಸಂಧಿಯಲ್ಲಿಯ

ಮರಕತಂಗಳ ಜಗಲಿ ನೀಲದಿ
ವಿರಚಿಸಿದ ಭಿತ್ತಿಗಳು ಪಳುಕಿನ
ತರತರದ ನೆಲಗಟ್ಟು ಬಜ್ಜರ ಮಯದ ಕಂಭಗಳು।
ಉರುತರದ ವೈಡೂರ್ಯ ನಿರ್ಮಿತ
ವರ ಮದನಕರ ರಾಜಿಯೆಸೆದಿಹ
ಪರಿಯನದನೇನೆಂಬೆನಾ ಚಾವಡಿಯ ಚಿತ್ರವನು ॥ ೪೦ ॥
ಜಗಜಗಿಪ ಗೋಮೇದಕದ ಬೋ
ದಿಗೆಗಳಗಣಿತ ಪುಷ್ಯರಾಗದ

---

*ಅನೇಕ ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಹೇಳಿರುವ ಕಾಲದ ವಿವರದಲ್ಲಿ ಅಚೀಚೆ ೧-೨ ವರ್ಷಗಳ ವ್ಯತ್ಯಾಸವಾಗುತ್ತದೆ.

13 ಕಾವ್ಯಕಲಾನಿಧಿ (ಮೈಸೂರು, ೧೯೧೫)

ಹೊಗರೊಗುವ ತೊಲೆ ಜಂತೆ ಮಾಣಿಕ್ಯದ ಸುಲೋವೆಗಳು।
ಬಗೆಬಗೆಯ ಮೌಕ್ತಿಕದ ಸೂಸಕ
ನಗುವ ಪವಳದ ಪ್ರತಿಮೆಗಳಲೊಗು
ಮಿಗೆಯ ಸ್ವರ್ಣಧ ಪದಕ ರಾಜಿಸುತಿಹವು ಕೇಳೆಂದ ॥ ೩೦ ॥

ಸಾರಣೆಯ ಕಸ್ತುರಿ ಜವಾಜಿಯ
ಕಾರಣೆಯ ಕುಂಕುಮದ ಪರವಿ
ಸ್ತಾರ ಚಂದನ ಧೂಪವಾಸಿತ ಕರ್ಪೂರಂಗಳಲಿ।
ತೋರುತಿಹ ಬೊಂಬಾಳ ದೀಪ್ತಿಯ
ಚಾರು ಶಸ್ತ್ರ ಪ್ರಭೆಯುಲಾ ಮುರ
ವೈರಿಯೋಲಗ ಸಾಲೆ ನೆರೆ ರಾಜಿಸಿತು ನೋಳ್ಪರಿಗೆ ॥ ೩೨ ॥

ಈ ಪದ್ಯಗಳನ್ನು ಜೈಮಿನಿ ಭಾರತದ ೧೭ನೆಯ ಸಂಧಿಯಲ್ಲಿಯ

ಪಳಕುಗಳ ನೆಲೆಗಟ್ಟು ಮರಕತಂಗಳ ಜಗಲಿ
ಪೊಳೆವ ನೀಲದ ಭಿತ್ತಿ ಬಜ್ಜರದ ಕಂಬಮುರಿ
ತೊಳಪ ವೈಡೂರಿಯದ ಮದನಕ್ಕೆ ಮಿರುಪ ಗೋಮೇದಿಕದ
ಬೋದಿಗೆಗಳು।
ಸಲೆ ಪುಷ್ಯರಾಗದ ತೊಲೆಗಳೆಸೆವ ಮಾಣಿಕಂ
ಗಳ ಲೋವೆ ಮುತ್ತುಗಳ ಸೂಸಕಂ ಮಿಸುಗುವ ಪ
ವಳದ ಪುತ್ತಳಿ ಪೊನ್ನ ಪೊದಕೆ ರಂಜಿಸಿತು ಚಾವಡಿಯ
ಚೌರಸದೆಡೆಯೊಳು ॥ ೨೩ ॥

ಕಸ್ತುರಿ ಜವಾಜಿಗಳ ಸಾರಣೆಯ ಕುಂಕುಮ ಪ
ರಿಸ್ತರಣದಗುರು ಚಂದನ ಧೂಪವಾಸಿತದ
ವಿಸ್ತರದ ಕರ್ಪೂರ ತೈಲದಿಂದಲ್ಲಲ್ಲಿಗುರಿವ ಬೊಂಬಾಳಂಗಳ।
ಶಸ್ತ್ರ ರತ್ನ ಪ್ರದೀಪ ಜ್ವಾಲೆಗಳ ಸಭೆ ಸ
ಮಸ್ತ ಸೌಭಾಗ್ಯದಿಂದೊಪ್ಪುತಿರಲಾಗ ಭೂ
ಪಸ್ತೋಮ ಸಹಿತ ಬಂದಾ ಬಭ್ರುವಾಹನಂ ಕುಳ್ಳಿರ್ದ
ನೋಲಗದೊಳು ॥ ೨೭ ॥

ಎಂಬ ಪದ್ಯಗಳೊಂದಿಗೂ, ಗಯಚರಿತ್ರೆಯ ೪ನೆಯ ಸಂಧಿಯ

ಅನಿತರೊಳ್ ಚರಣಾಯುಧಾವಳಿ
ಬಿನದದಿಂ ಸ್ವನಗೆಯ್ಕೆ ಜಾರಾಂ
ಗನೆಯರೆದೆ ಜಜ್ಜರಿತವಾಗಲು ಚೋರಸಂಕುಲಕೆ।
ಘನನಿಶಿತ ಹೃಚ್ಛೂಲವಾಗಲು
ಜನರು ನಿದ್ರೆಯನುಳಿದು ಹರಿಯನು
ವಿನುತಿಸುತಲುಪ್ಪವಡಿಸಿದರಾ ಗೃಹಗೃಹಂಗಳಲಿ ॥ ೨೪ ॥

ಹರಿದವುರೆ ತಾರೆಗಳು ತಂಬೆಲ
ರಿರದೆ ಬೀಸಿತು ಸರಸಿಜಾವಳಿ
ಬಿರಿದುವಾರಡಿ ನಿಚಯವಾಕ್ಷಣ ತೆರಳೆ ಧ್ವನಿಮಾಡಿ।
ಮೆರೆದವತಿ ವಿಭವದಲಿ ಚಕ್ರವು
ನೆರೆದುವಾಗಲೆ ಕೈರವದ ರುಚಿ
ಮುರಿಯೆ ಮುದದಿಂ ತರಣಿಯಡರಿದನುದಯ ಪರ್ವತವ
॥ ೨೫ ॥

ಒದರಿದುವು ದೇಗುಲದ ವಾದ್ಯಗ
ಳದುರೆ ನೆಲ ಘನಭೇರಿಗಳು ಮೊಟ
ಗಿದುವು ಲಕ್ಷ್ಮೀರಮಣನರಮನೆವಾಗಿಲಿದಿರಿನಲಿ ॥ ೨೭ ॥

ಎಂಬಿವನ್ನು ಜೈಮಿನಿ ಭಾರತದ ೧೭ನೆಯ ಸಂಧಿಯಲ್ಲಿಯ

ಸ್ವರಗೆಯ್ದುದನಿತರೊಳ್ ಚರಣಾಯುಧಂ ಜಾರೆ
ಯರ ಮನಂ ಬೆಚ್ಚಿದುದು ಮೂಡ ದೆಸೆ ಬೆಳಗಿತು ಪ
ಸರಿಸಿದುದು ತಂಗಾಳಿ ಖಗನಿಕರಮುಲಿದೆದ್ದವರಳಿದವು
ತಾವರೆಗಳು।
ಮೊರೆದುವಾರಡಿ ನೆರೆದುವೆಣೆವಕ್ಕಿ ತಾರೆಗಳ್
ಪರಿದುವಿಡಿದಿರ್ದ ಕತ್ತಲೆ ತೊಲಗಿತುತ್ಪಲಂ
ಕೊರಗಿದುದು ಜನದ ಕಣ್ಣೆವೆದೆರೆದುದೊದರಿದವು
ದೇಗುಲದ ವಾದ್ಯಂಗಳು ॥ ೪೦ ॥

ಎಂಬುದರೊಂದಿಗೂ ಹೋಲಿಸಿರಿ, ಮತ್ತು ಅವುಗಳಲ್ಲಿ ಎಷ್ಟರ ಮಟ್ಟಿನ ಸಾದೃಶ್ಯ ಉಂಟೆಂದೂ ನೋಡಿರಿ.

ಕವಿಚರಿತಕಾರರು ಲಕ್ಷ್ಮೀಶನ ಕಾಲ ಕ್ರಿ. ಶ. ಸು. ೧೭೦೦ ಎಂದೇ ಭಾವಿಸಿ[14] ಅವನನ್ನು ಹೊಗಳಿದ ಕೋನಯ್ಯನನ್ನು ಕ್ರಿ. ಶ. ಸು. ೧೭೫೦ಕ್ಕೆ ತಗಲಿಸಿರುತ್ತಾರೆ.[15] ಅದು ಸರಿಯಲ್ಲ.

ಮೈಸೂರು ಸೀಮೆಯ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ನಂ. ೫೭ನೆಯ ಆನೆಸಿದ್ರಿ ಗ್ರಾಮದಲ್ಲಿಯ ಶಾಸನದಲ್ಲಿ[16] ಕವಿ ಕೋನಪ್ಪನ ಹೆಸರಿದೆ–

ಶುಭಮಸ್ತು ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಸಿಖಾಬ್ದೆ ೧೬೪೩ ಪ್ಲವ ನಾಮ ಸಂವತ್ಸರದ ಆಶ್ವೀಜ ಶು ೧೦ ಲು ಶ್ರೀಮನ್ಮಹಾನಾಯಕಾಚಾರ್ಯ ಕಾಮಗೆತಿ ಕಸ್ತೂರಿ ಬರಮಣ ನಾಯಕರ ಮೆದಕೆರಿ ನಾಯಕರೆಯ್ಯನವರ ಅಪಣೆಯಲು ಕೊಮಾರ ಚಿಕಂಣನವರು ಬಂದು ಚೆವು ಗ್ರಾಮದ ಗೌಡ ಆಯಗಾರರ ಸಂನತದಿಂದ **ಕವಿ ಕೋನಪ್ಪನ ಅಗ್ರಹಾರ** ಆನೆಸಿದಾರಿ ಹೊಲ ಮೇರೆ ಶಾಸನಕೆ ಆಚಂದ್ರಾರ್ಕಮಸ್ತು **ಪೂರ್ವದತ್ತ ಅಗ್ರಹಾರ** ॥

ಇದರ ತೇದಿ ಶಾ. ಶ. ೧೬೪೩ ಪ್ಲವ ಸಂ। ಆಶ್ವೀಜ ಶುದ್ಧ ೧೦ = ಕ್ರಿ. ಶ. ೧೭೨೧ (ಸಪ್ತಂಬರ ೨೦ನೆಯ ತಾರೀಕು ಬುಧವಾರ). ಇದರಲ್ಲಿ ಕವಿ ಕೋನಪ್ಪನಿಗೆ ಎಂದೋ ಹಿಂದೊಮ್ಮೆ ಒಂದು ಅಗ್ರಹಾರ ಕೊಡಲ್ಪಟ್ಟಿತ್ತು, ಆ ಕಾರಣವೇ

14. ಕರ್ಣಾಟಕ ಕವಿಚರಿತೆ II. ಪು. ೫೨೩.
15. ಅದೇ III. ಪು. ೬೭.
16 EC, XI.

ಅಂದಿನಿಂದ ಅದಕ್ಕೆ ಕವಿ ಕೋನಪ್ಪನ ಅಗ್ರಹಾರ ಎಂದು ಹೆಸರಾಯಿತು, ಕ್ರಮೇಣ ಆ ಅಗ್ರಹಾರವು ಖಿಲವಾಗಿದ್ದುದರಿಂದ ಅದನ್ನು ವ್ಯವಸ್ಥೆಗೊಳಿಸಲಿಕ್ಕೆ ಚಿತ್ರದುರ್ಗದ ಮಹಾನಾಯಕನಾದ ಬರಮಣ ನಾಯಕನ ಮಗ ಮೆದಕೆರಿ ನಾಯಕನು ಕುಮಾರ ಚಿಕ್ಕಣ್ಣ ನಾಯಕನನ್ನು ಅಲ್ಲಿಗೆ ಕಳಿಸಿಕೊಟ್ಟನು, ಆತನು ಆ ಆನೆಸಿದ್ರಿಯ ಅಗ್ರಹಾರಕ್ಕೆ ಬಂದು ಚೆವುಗ್ರಾಮದ ( = ಚತುರ್ಗ್ರಾಮದ) ಅಂದರೆ ನಾಲ್ಕು ಗಡಿಯ ಗ್ರಾಮಗಳ ಗೌಡರ ಸನ್ಮತದಿಂದ ಆ ಅಗ್ರಹಾರದ ಹೊಲಗಳ ಮೇರೆಗಳನ್ನು ನಿರ್ಧರಿಸಿ ಈ ಶಿಲಾಲೇಖವನ್ನು ಅಲ್ಲಿ ಬರಸಿಟ್ಟನೆಂದು ಹೇಳಿವೆ. ಇದರ ಕೊನೆಯಲ್ಲಿ 'ಪೂರ್ವದತ್ತಅಗ್ರಹಾರ' ಎಂದಿರುವುದರಿಂದ, ಈ ಶಾಸನಕ್ಕೆ ಸಾಕಷ್ಟು ಹಿಂದೆಯೇ ಆ ಅಗ್ರಹಾರವನ್ನು ಕವಿ ಕೋನಪ್ಪನಿಗೆ ದತ್ತಿ ಬಿಟ್ಟಿರಬೇಕೆಂದು ವ್ಯಕ್ತವಾಗುತ್ತದೆ.

ಅದರ ಮುಂದಿನದೇ ಹಿರಿಯೂರು ನಂ· ೫೮ನೆಯ ಆನೆಸಿದ್ರಿ ಗ್ರಾಮದ ಮತ್ತೊಂದು ಶಾಸನದಲ್ಲಿ[16] ಹೀಗದೆ—

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಖ ವರುಷ ೧೬೦೯ ರ ಪ್ರಭವ ಸಂವತ್ಸರದ ಚೈತ್ರ ಶು ೧೦ರಲ್ಲು.... **ಮೊದಲು ಪೂರ್ವದಲಿ ಕೃಷ್ಣರಾಯರು ಪಾಲಿಸಿದಂಥ** ಆನೆಸಿದಾರಿ **ಅಗ್ರಹಾರದ ಗ್ರಾಮುಕ್ಕೆ** ನೆಡ್ಸಿದಂಥಾ ಶಿಲಾಶಾಶನ ಆನೆಸಿದಾರಿ ಮಾರ.... ನು ಯಿತಂ ವಕಾದಲಿ[17] ॥ ಶ್ರೀಮನ್ಮಹಾನಾಯಕಾಚಾರ್ಯ ಕಾಮಗೆತಿ ಕಸ್ತೂರಿ ಮೆದಕರಿ ನಯಕರ್ರೈಯ್ಯನವರು ಜೀರ್ನೋದ್ಧಾರಾ ಮಾಡಿ ಧಾರಾಪೂರ್ವಕವಾಗಿ ಸಿಲಾ ಸ್ಥಾಪನೆ ಮಾಡಿ ಕೊಟು ಪಾಲಿಸಿದಂಥಾ ಧರ್ಮ ಆನೆಸಿದಾರಿ ಅಗ್ರಹಾರ ಆಚಂದ್ರಾರ್ಕಸ್ಥಾಯಿಯಾಗಿ ಕೊಟಧರ್ಮ ।

ಇದರ ತೇದಿ ಶಾ. ಶ. ೧೬೦೯ ಪ್ರಭವ ಸಂ। ಚೈತ್ರ ಶುದ್ಧ ೧೦ =ಕ್ರಿ. ಶ. ೧೬೮೭ (ಮಾರ್ಚಿ ೧೩ನೆಯ ತಾರೀಕು ಆದಿತ್ಯವಾರ) ಇದರಲ್ಲಿ ಹೇಳಿರುವ ಚಿತ್ರದುರ್ಗದ ಮಹಾನಾಯಕನಾದ ಕಾಮಗೆತಿ ಕಸ್ತೂರಿ ಮೆದಕರಿ ನಾಯಕನು ಹಿಂದಿನ ಹಿರಿಯೂರು ನಂ. ೫೭ನೆಯ ಶಾಸನದ ಮೆದಕರಿ ನಾಯಕನ ಪಿತಾಮಹ. ಈ ಶಾಸನದಲ್ಲಿ ಹೇಳಿರುವಂತೆ, ಪೂರ್ವದಲ್ಲಿ ಕೃಷ್ಣರಾಯನು ಆನೆಸಿದ್ರಿ ಗ್ರಾಮವನ್ನು ಅಗ್ರಹಾರವಾಗಿ ದತ್ತಿ ಬಿಟ್ಟಿದ್ದನು, ಆ ದತ್ತಿಯನ್ನು ಒಕ್ಕಣಿಸಿದ್ದ ಶಾಸನದ ಕಲ್ಲು ಆನೆಸಿದ್ರಿಯ ಮಾರನು ಕಾದುವಾಗ ನಾಶವಾಗಿತ್ತು,[18] ಅದನ್ನು ಈ ಮೆದಕರಿ ನಾಯಕನು ಜೀರ್ಣೋದ್ಧಾರ ಮಾಡಿಸಿ ಧಾರಾಪೂರ್ವಕವಾಗಿ ಆ ಧರ್ಮವನ್ನು ಪಾಲಿಸಿ ಈ ಶಾಸನದ ಕಲ್ಲನ್ನು ಅಲ್ಲಿ ನೆಡಿಸಿದನು. ಈ ಕೃಷ್ಣರಾಯನೆಂದರೆ ವಿಜಯನಗರದ ಅರಸನಾದ ತುಳುವ ವಂಶದ ಕೃಷ್ಣರಾಯ (ಕ್ರಿ. ಶ. ೧೫೦೯-೧೫೨೯) ಈ ಶಾಸನದಲ್ಲಿ ಹೇಳಿರುವ ಅಗ್ರಹಾರವನ್ನು 'ಮೊದಲು ಪುರ್ವದಲ್ಲಿ' ಅಂದರೆ ಮೊತ್ತ ಮೊದಲಲ್ಲಿ ಹಾಗೂ ಈ ಶಾಸನಕ್ಕಿಂತ ಸಾಕಷ್ಟು ಪೂರ್ವದಲ್ಲಿ ದತ್ತಿ ಬಿಟ್ಟವನು ಆ ವಿಜಯನಗರದ ಕೃಷ್ಣರಾಯನೆಂದೂ ಇದರಿಂದ ವ್ಯಕ್ತವಾಗುತ್ತದೆ, ಹಾಗೂ ಒಮ್ಮೆ ಒಬ್ಬಾತನಿಗೆ ದತ್ತಿ ಬಿಟ್ಟ ಅಗ್ರಹಾರವನ್ನು ಮತ್ತೊಬ್ಬನಿಗೆ ಕೊಡುವ ಪದ್ಧತಿ ಆಗಣ ಕಾಲದಲ್ಲಿ ಸರ್ವಥಾ ಇದ್ದಿಲ್ಲದುದರಿಂದಲೂ, ಹಿಂದಣ ಹಿರಿಯೂರು ನಂ· ೫೭ ನೆಯ ಶಾಸನದಲ್ಲಿ ಅದೇ ಅಗ್ರಹಾರವನ್ನು 'ಕವಿ ಕೋನಪ್ಪನ ಅಗ್ರಹಾರ' ಎಂದಿರುವುವರಿಂದ ಅದರ ಮೊತ್ತ ಮೊದಲಿನ ಪ್ರತಿಗ್ರಾಹಿ ಕವಿ ಕೋನಪ್ಪನೆಂದು ನಿಶ್ಚಿತವಿರುವುದರಿಂದಲೂ ಆ ಕೃಷ್ಣರಾಯನೇ ಅದನ್ನು ಕವಿ ಕೋನಪ್ಪನಿಗೆ ದತ್ತಿ ಬಿಟ್ಟಿದ್ದನೆಂದೂ ಸಿದ್ಧವಾಗುತ್ತದೆ. ಆ ಕವಿ ಕೋನಪ್ಪನಾದರೊ ಗಯಚರಿತ್ರೆಯ ಕವಿ ಕೋನಯ್ಯನೇ ಹೊರತು ಬೇರೊಬ್ಬನಲ್ಲ. ಹಾಗಾದರೆ ಆ ಕೋನಯ್ಯನು = ಕೋನಪ್ಪನು ವಿಜಯನಗರದ ಕೃಷ್ಣರಾಯನ ಆಳೊತ್ತಿನಲ್ಲಿ (ಕ್ರಿ. ಶ. ೧೫೦೯ –೧೫೨೯) ಇದ್ದನೆಂದು ನಿಷ್ಪನ್ನವಾಗುತ್ತದೆ. ಇವೆರಡೂ ಶಾಸನಗಳನ್ನು ಮೊದಲು ಬೆಳಕಿಗೆ ತಂದವರು ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು.[19]

ಗಯಚರಿತ್ರೆಯ ೧೮ನೆಯ ಸಂಧಿಯಲ್ಲಿಯ:

ಈ ಸರೋಜಾಂಬಕನು **ಮಾನುಷ**
**ವೇಷದಲಿ ಕೃಷ್ಣಾಭಿಧಾನದಿ**
ವಿಾಸಲಳಿಯದ ಮಹಿಮೆಯನು ತೋರುತ್ತ
ದುರ್ಜನರ ।
ರೋಷದಲಿ ತರಿದುತ್ತಮರ ಸಂ
ತೋಷದಲಿ ಸಲಹುತ್ತ ನಮ್ಮುವ
ನೀಸು ಬಗೆಯಲಿ ರಕ್ಷಿಸುತಲಿರುತಿಹನು ತಾನೆಂದ ॥೫೯॥

ಎಂಬ ಪದ್ಯದಲ್ಲಿ ಕೋನಯ್ಯನು ತನ್ನ ದಾತೃವಾದ ವಿಜಯನಗರದ ಕೃಷ್ಣರಾಯನನ್ನು ನಾಮಸಾಮ್ಯದಿಂದ ಶ್ರೀ ಕೃಷ್ಣ

---

17 ಈ ಶಾಶನದ ಕನ್ನಡ ಲಿಪಿಯ ಪ್ರತಿಯಲ್ಲಿ 'ಮಾರ.... ನು. . . . ಯಿತಂವಕಾ. ದಲಿ॥' ಎಂದಿರುವ ಜಾಗದಲ್ಲಿ ಅದರ ರೋಮನ್ ಲಿಪಿಯಲ್ಲಿ 'ಮಾರ . . . .ದಲಿ'॥ ಎಂದಿದೆ.

18 ಈ ಶಾಸನದಲ್ಲಿಯ 'ಆನೆಸಿದಾರಿ ಮಾರ . . . . . . ನು ಯಿತಂವಕಾ. ದಲಿ' ಎಂಬ ಮಾತುಗಳನ್ನು ಇದರ ಇಂಗ್ಲೀಷು ಅನುವಾದದಲ್ಲಿ 'ಆನೆಸಿದಾರಿಯ ಮಾರನು ಕಾದುವಾಗ ನಾಶವಾಗಿತ್ತು' ಎಂದು ಭಾಷಾಂತರಿಸಿದೆ. ಆತಕ್ಕ ಆಧಾರ ಈ ಶಾಸನದ ಒಕ್ಕಣೆಯಲ್ಲಿ ತೋರುವುದಿಲ್ಲ.

19 ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, XXX, ಪು. ೧೮–೨೦: 'ಕವಿ ಕೋನಪ್ಪ'

ನೊಡನೆ ಸಮೀಕರಿಸಿ ನೆನವರಿಸಿರುವಂತೆ ಧ್ವನಿಸುತ್ತದೆ ಎಂಬು ದನ್ನು ಇಲ್ಲಿ ಮನವರಿಸಬಹುದು.

ಹಿರಿಯೂರಿನ ಮತ್ತೂ ಒಂದು ಶಾಸನದಲ್ಲಿ,[20] ಅಂದರೆ ಅಲ್ಲಿಯ ಕೋಳಾಳು ಗ್ರಾಮದ ಮಾರಿಮ್ಮನ ಗುಡಿಯ ಮುಂದೆ ನಟ್ಟ ಕಲ್ಲಿನಲ್ಲಿಯ ನಂ. ೭೮ ನೆಯ ತೇದಿಯಿಲ್ಲದ ಶಾಸನದಲ್ಲಿ ಕೋನಯ್ಯ ಎಂಬ ಹೆಸರಿದೆ—

ಕೋಳಹಾಳ ಮಾರಿವಗೆ ಯೆಲುಕಲೂರ ಹಳ್ಳಿ
ಗೌಡ ಕರೀವೊಬ್ಬೆಯನು ಕೊಟಂತ ಮಾನ್ಯ **ಕೋನಯ್ಯ**
**ಗಳಿಗೆ** ಕೊಟ ಗ್ರಾಮಾ

ಕೋನಯ್ಯನ ಹೆಸರಿಗೆ ಇಲ್ಲಿ 'ಕೋನಯ್ಯಗಳಿಗೆ' ಎಂದು ಬಹುವಚನವನ್ನು ಪ್ರಯೋಗಿಸಿರುವುದರಿಂದ, ಆ ಕೋನಯ್ಯನು ಪ್ರಸಿದ್ಧನಾದೊಬ್ಬ ವ್ಯಕ್ತಿಯಾಗಿರಬೇಕೆಂದು ಸ್ವಯಂಸಿದ್ಧವಿದೆ. ಹಾಗಾದರೆ ಆತನು ಗಯಚರಿತ್ರೆಯ ಕವಿ ಕೋನಯ್ಯನೇ ಸರಿ ಎಂದು ಅನುಮೋಯಿಸಲಿಕ್ಕೆ ಸಾಕಷ್ಟು ಎಡೆಯೂ ಇದೆ. ಆದರೆ ಈ ಶಾಸನಕ್ಕೆ ತೇದಿಯೂ ಇಲ್ಲ, ಇದನ್ನು ಇಂಗ್ಲೀಷಿನಲ್ಲಿ ಭಾಷಾಂತರಿಸಿಯೂ ಇಲ್ಲ, ಇದರ ಮೂಲ ಪ್ರತಿಯನ್ನು ನೋಡದೆ ಇದರ ಕನ್ನಡ ಬರೆಹ ಯಾವ ಶತಮಾನದ್ದು ಎಂದು ಊಹಿಸಲಿಕ್ಕೆ ಸಾಧ್ಯವೂ ಅಲ್ಲ. ಹೀಗಾಗಿ ಇದನ್ನು ಮನಸ್ಸಿಲ್ಲದ ಮನಸ್ಸಿನಿಂದ ವಿಸರ್ಜಿಸಿ ಬಿಡಬೇಕಾಗುತ್ತದೆ.

---

## ೪

ಗುಬ್ಬಿ ಮಲ್ಲಣಾರ್ಯನು ಸಾಮಾನ್ಯ ಕವಿ, ಲಕ್ಷ್ಮೀಶನಂತೆ ಸರ್ವಥಾ ಪ್ರೌಢ ಕವಿಯಲ್ಲ. ಆತನ 'ಭಾವಚಿಂತಾರತ್ನ' ಎಂಬ ಕಾವ್ಯ (IX. ೬೦) ರಚಿತವಾದುದು ಶಾ. ಶ. ೧೪೩೫ ಶ್ರೀಮುಖ ಸಂ। ಕಾರ್ತಿಕ ಶುದ್ಧ ೭ ಶುಕ್ರವಾರ= ಕ್ರಿ. ಶ. ೧೫೧೩ ನವಂಬರ ೪ನೆಯ ತಾರೀಕಿನಂದು. ಅದರ ೮ನೆಯ ಸಂಧಿಯಲ್ಲಿ ತಿರುಕೊಳವಿನಾಚಿಯ ಮಗನಾದ ಶಂಕರನು ಮಿತವಚನನ ಕುದುರೆಯ ಕೊಳಗದ ಏಟಿನಿಂದ ಮರಣಪಟ್ಟಾಗ ಆಕೆ ಶೋಕಿಸಿದ

ಎಲೆ ಮಗನೆ ನಿನ್ನಯ **ವಿಲೋಚನಂ** ಕಂದಿದುವೆ
ಸಲೆ **ಶಶಿ**ಯ ಪೋಲ್ವ ಮುಖಮೆಯ್ದೆ ಕೊರಗಿತ್ತೆ **ಮಂ**
**ಗಲ ಸೌಮ್ಯ**ವರತುದೇ **ಗುರು** ಕೃಪೆಯದೇನಾಯ್ತು
ಸಕಲ **ಕಾವ್ಯ**ಂಗಳೊಳಗೆ ।
ಸುಲಭ **ಸೌರಿ**ಗಳು ಪುತ್ರನೆ ಮೋಹ**ತಮ**ವೆಂಬ
ರೊಲವಿನಿಂದೀ ಭೂಮಿಯಿರಲು ಸಾ**ಕೇತು**ರಗ
ದಲ್ಪಘು ಚರಣಕ್ಕೆ ಬಲಿಯಾದೆಲಾ **ಗ್ರಹಬಲಂ**
ತಪ್ಪಿತಕಟಾ ಎಂದಳು ॥ ೨೮ ॥

ಎಂದು ನವಗ್ರಹಗಳನು ಉಲ್ಲೇಖಿಸಿರುವ ಈ ವಾರ್ಧಕವನ್ನು ಲಕ್ಷ್ಮೀಶನ ಜೈಮಿನಿಭಾರತದ ಚಂದ್ರಹಾಸೋಪಾಖ್ಯಾನದಲ್ಲಿ (ಸಂಧಿ ೩೧) ಕಾಳಿಕಾಲಯಕ್ಕೆ ಹೋದ ಮದನನು ಅಲ್ಲಿ ಕೊಲೆಗಡಿಗರಿಂದ ವಧಿಸಲ್ಪಟ್ಟಾಗ ಅವನ ತಂದೆ ದುಷ್ಟಬುದ್ಧಿ ಹಲುಬಿದ ಅಂತೆಯೇ ನವಗ್ರಹಗಳ ಹೆಸರುಳ್ಳ

**ಮಿತ್ರ**ಪ್ರಿಯಂ **ರಾಜ**ತೋಷಿತಂ **ಮಂಗಲ** ಚ
ರಿತ್ರಂ **ಬುಧಾ**ಶ್ರಯಂ **ಗುರು**ಭಾವಿ **ಕವಿ**ನುತ ವಿ
ಚಿತ್ರಗುಣಿ **ಮಂದರ**ನಿಭಂ **ಭೋಗಿ** ಸಂತತಂ **ಧ್ವಜ**
ವಜ್ರ ಶುಭಚರಣನು ।
ಪುತ್ರ ನಿನಗಪ್ಪುದು **ನವಗ್ರಹ** ಸ್ಥಿತಿಗಳ್ಪ
ರಿತ್ರಾಣಮಂ ಮಾಡಿದವರಿಲ್ಲ ನಿನಗಾನೆ
ಶತ್ರುವಾದಂ ಮಗನೆ ಹಾಯೆಂದು ಹಲುಬಿದಂ ಮಂತ್ರಿ
ಶೋಕಾರ್ತನಾಗಿ ॥ ೬೧ ॥

ಎಂಬ ಈ ವಾರ್ಧಕದೊಂದಿಗೆ ಹೋಲಿಸಿ,[21] ಅದರೊಂದಿಗೆ

---

20 ಸರ್ವಜಿತು ಸಂ।ದ ಅಂದರೆ ಕ್ರಿ. ಶ. ೧೫೮೭ರದೆಂದು ಇಂಗ್ಲೀಷು ಅನುವಾದದಲ್ಲಿ ಹೇಳಿರುವ (EC, XI) ಹಿರಿಯೂರು ನಂ. ೨೬ನೆಯ ಶಾಸನದಲ್ಲಿ 'ಹರತಿ ಗುರು ಚಿಕಪನ ಮಗ ಚಿಕ ಸಿದಪನು ಬೇಡರಹಳ್ಳಿ ಮರಿಯಂಣನು ಗಿರಿಯಣ . . . ರಾಜಯನ ಮಗ ಕೋನಪಗೆ ಕೊಟ್ಟ ಶಾಸನ ಬಿದರ ಕೆರೆ ಹನುಮಂತ ದೇವರನು ಪೂಜೆ ಮಾಡಿಕೊಂಡು ಯಿದಕೆ ಬಂದ ಸ್ವಾಸ್ತಿಯನು ಊಟಮಾಡಿ ಸುಕದಲಿ ಯಿಹದು' ಎಂದಿದೆ. ಗಯ ಚರಿತ್ರೆಯ ಕೋನಯ್ಯನು 'ಹೋತೂರು ಬೆಟ್ಟರಸನ ತನೂಭವ'ನೆಂದು ಆ ಕಾವ್ಯದಿಂದ (I. ೧೭) ತಿಳಿಯುವುದರಿಂದ, ಈ ಶಾಸನದ ಪ್ರತಿಗ್ರಾಹಿಯೂ ಬಿದರಕೆರೆ ಹನುಮಂತ ದೇವರ ಅರ್ಚಕನೂ ಆದ ಕೋನಪ್ಪನೂ ಕವಿ ಕೋನಯ್ಯನೂ ಒಬ್ಬನೇ ವ್ಯಕ್ತಿಯಲ್ಲ. ಈ ಕೋನಪ್ಪನು ಕವಿ ಕೋನಯ್ಯನ ವಂಶಜನಾಗಿರಲೂ ಬಹುದು, ಇಲ್ಲವೆ ಆ ಪ್ರಾಂತದಲ್ಲಿ ಕೋನ ಎಂಬ ಹೆಸರು ಆವಂದು ತಕ್ಕಷ್ಟು ಸಾಮಾನ್ಯವಾಗಿದ್ದಂತೆ ತೋರುವುದರಿಂದ (ಉದಾ: EC, XI ಶಾ. ಶ. ೧೪೭೧= ಕ್ರಿ. ಶ. ೧೫೪೯ರ ಮೊಳಕಾಲುಮುರು ನಂ. ೯ನೆಯ ಶಿಲಾಲೇಖದಲ್ಲೂ, ಶಾ. ಶ. ೧೪೭೭ = ಕ್ರಿ. ಶ. ೧೫೫೫ರ ಮೊಳಕಾಲುಮುರು ನಂ. ೬ನೆಯ ಶಿಲಾಲೇಖದಲ್ಲೂ, ಹಾಗೆಯೇ ಮೊಳಕಾಲುಮುರು ನಂ. ೭, ೮, ೪೩ನೆಯ ಶಿಲಾಲೇಖಗಳಲ್ಲೂ ಕೋನರಾಜಯ್ಯ, ಕೋನಯ್ಯದೇವ ಮಹಾ ಅರಸನ ಹೆಸರಿದೆ), ಯಾವನೊ ಬೇರೊಬ್ಬ ವ್ಯಕ್ತಿಯಾಗಿರಲೂಬಹುದು.

ಕೋನಯ್ಯನಿಗಿಂತ ಹಿಂದಣವನೆಂದು ಮೇಲೆ ಕಂಡಿರುವ

ಲಕ್ಷ್ಮೀಶನು ಕೋನಯ್ಯನ ಸಮಕಾಲೀನನಾದ ಮಲ್ಲಣಾರ್ಯನಿಗಿಂತಲೂ ಅಷ್ಟೇ ಹಿಂದಣವನೆಂಬುದನ್ನೂ ಮನವರಿಸಿದರೆ, ಕೋನಯ್ಯನ ಗಯಚರಿತ್ರೆಯಿಂದ ಈ ಮೇಲೆ ಉದ್ಧರಿಸಿರುವ ಆ ೬ ಭಾಮಿನಿ ಷಟ್ಪದಿಗಳು ಹೇಗೆ ಲಕ್ಷ್ಮೀಶನ ಜೈಮಿನಿ ಭಾರತದಿಂದ ಉದ್ಧರಿಸಿರುವ ಆ ೩ ವಾರ್ಧಕ ಷಟ್ಪದಿಗಳ ಪ್ರತಿಧ್ವನಿಗಳೊ ಹಾಗೆಯೇ ಭಾವಚಿಂತಾರತ್ನದ ವಾರ್ಧಕವೂ ಜೈಮಿನಿಭಾರತದ ವಾರ್ಧಕದ ಪ್ರತಿಧ್ವನಿ ತಾನೆ ಎಂದು ಸಹಸಾ ವ್ಯಕ್ತವಾಗದಿರದು.

ಹಾಗಾದರೆ ಕೋನಯ್ಯನು ಸ್ಮರಿಸಿಯೂ ಅನುಕರಿಸಿಯೂ ಇರುವ, ಹಾಗೂ ಮಲ್ಲಣಾರ್ಯನು ಅನುಕರಿಸಿರುವ ಲಕ್ಷ್ಮೀಶನ ಕಾಲದ ಉತ್ತರಾವಧಿ ಮಲ್ಲಣಾರ್ಯನಿಗಿಂತ ೫೦ — ೬೦ ವರ್ಷಗಳಿಗಾದರೂ ಹಿಂಜರಿಯುತ್ತದೆ, ಅಂದರೆ ಕ್ರಿ. ಶ. ಸು. ೧೪೫೦–೧೪೬೦ ಆಗುತ್ತದೆ.

---

### ೫

ಸೌಂದರಪುರಾಣದ ಬೊಮ್ಮರಸನೂ ಲಕ್ಷ್ಮೀಶನಂಥಾ ಪ್ರೌಢ ಕವಿಯಲ್ಲ. ಅವನ ವಾರ್ಧಕಷಟ್ಪದೀ ಬದ್ಧವಾದ 'ಸೌಂದರ ಪುರಾಣ' ಕ್ರಿ. ಶ. ಸು. ೧೪೫೦ರಲ್ಲಿ ರಚಿತವಾಯಿತೆಂದು ಕವಿಚರಿತಕಾರರು ನಿರ್ಣಯಿಸಿರುತ್ತಾರೆ.[22] ಅದರ ೬ನೆಯ ಸಂಧಿಯಲ್ಲಿ ಶಿವಸ್ತುತಿಪರವಾದ ಗ-ಕಾರದ ಕಾಗುಣಿತ ಉಳ್ಳ ಇದೊಂದು ಪದ್ಯವಿದೆ—

**ಗ**ರಳಗಳ **ಗಾ**ಯತ್ರಿಯಧಿನಾಥ **ಗಿ**ರಿಶ **ಗೀ**
ರ್ವರವಂದ್ಯ **ಗು**ರುರೂಪ **ಗೂ**ಢವಾಙ್ಮಯ **ಗೇ**ಯ
ಸುರರ ಸಂಪ್ರೀತ **ಗೈ**ರಿಕ ಭೂಧರಾವಾಸ **ಗೋ**ರಾಜ
ತನುಜವರದ ।
ಶರಣಾರ್ಥಿ **ಗೌ**ರೀಶ **ಗಂ**ಗಾಮನೋಜ್ಞ ಶೇ
ಖರ **ಗ**ರ್ಭಗತಭುವನ ಜಯ ಜಯ ಎನುತ್ತೆರಗಿ
ಹರಹಿದಂ ತನುವನವನಿಯೊಳು ಸೌಂದರನು ಸಾಕಲ್ಯ
ಮಾಂಗಲ್ಯಕರನು ॥ ೪೩ ॥

ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಕೃಷ್ಣಸ್ತುತಿಪರವಾದ ಕ-ಕಾರದ ಕಾಗುಣಿತ ಉಳ್ಳ (ಸಂಧಿ ೫)

**ಕ**ಮಲದಳನಯನ **ಕಾ**ಳಿಯಮಥನ **ಕಿ**ಸಲಯೋ
ಪಮಚರಣ **ಕೀ**ಶಪತಿಸೇವ್ಯ **ಕು**ಜಹರ **ಕೂ**ರ್ಮ
ಸಮಸತ್ಕಪೋಲ **ಕೇ**ಯೂರಧರ **ಕೈ**ರವಶ್ಯಾಮ **ಕೋ**ಕ
ನದಗೃಹೆಯ ।
ರಮಣ **ಕೌ**ಸ್ತುಭಶೋಭಿ **ಕಂ**ಬುಚಕ್ರಗದಾಬ್ಜ
ವಿಮಲತರ **ಕ**ಸ್ತೂರಿಕಾತಿಲಕ ಕಾವುದೆಂ
ದಮಿತ ಪ್ರಭಾಮೂರ್ತಿಯಂ ನುತಿಸಲಾತನಂ ಹರಿ
ನೆಗಪಿದಂ ಕೃಪೆಯೊಳು ॥ ೮ ॥

ಇದೊಂದು ವಾರ್ಧಕವೂ, ಚ-ಕಾರದ ಕಾಗುಣಿತ ಉಳ್ಳ (ಸಂಧಿ ೧೩)

ಜಯ **ಚ**ತುರ್ಮುಖಜನಕ ಜಯ **ಚಾ**ರುಚಾರಿತ್ರ
ಜಯ **ಚಿ**ದಾನಂದ ಜಯ **ಚೀ**ರಾಂಬರಜ್ಞೇಯ
ಜಯ ಜಯ **ಚ್ಯು**ತಿದೂರ ಜಯ **ಚೂ**ಡಬರ್ಹಶೋಭಿತ
**ಚೇ**ತನ ಸ್ವರೂಪ ।
ಜಯ **ಚೈ**ದ್ಯಮಥನ ಜಯ **ಚೋ**ದಿತಾಖಿಲಲೋಕ
ಜಯ **ಚೌ**ರ್ಯಕೃತಲೀಲ ಜಯ **ಚಂ**ಡಶತಕಿರಣ
ಜಯ **ಚ**ಕ್ರಧರ ಎಂದು ಕೃಷ್ಣನಂ ಕಲಿ ಸುಧನ್ವಂ
ಪೊಗಳ್ವಂ ಮನದೊಳು ॥ ೨೭ ॥

ಈ ಮತ್ತೊಂದು ವಾರ್ಧಕವೂ ಹೀಗೆ ೨ ಪದ್ಯಗಳಿವೆ. ಹೀಗೆ ಕಾಗುಣಿತವಿರುವ ಪದ್ಯಗಳನ್ನು ನಾನು ಬೇರೆಲ್ಲಿಯೂ ಕಂಡಿಲ್ಲ. ಈಗ ಲಕ್ಷ್ಮೀಶನ ಕಾಲದ ಉತ್ತರಾವಧಿ ಬೊಮ್ಮರಸನ ಕ್ರಿ. ಶ. ಸು. ೧೪೫೦ಕ್ಕೆ ಮುಟ್ಟುವಂತೆ ಮೇಲೆ ನಿರ್ಣಯಿಸಿರುವುದರಿಂದ ಈ ಪ್ರಯೋಗವನ್ನು ಇವರಿಬ್ಬರಲ್ಲಿ ಯಾವನೊಬ್ಬನಿಂದ ಮತ್ತೊಬ್ಬನು ಇಸಕೊಂಡಿರಬೇಕಲ್ಲದೆ ಅದು ಇಬ್ಬರದೂ ಸ್ವಂತವೂ ಸ್ವತಂತ್ರವೂ ಉಪಜ್ಞೆಯಾಗಿರಲಾರದು. ನನಗಾದರೊ ಬೊಮ್ಮರಸನು ಲಕ್ಷ್ಮೀಶನಿಂದ ಅದನ್ನು ಎತ್ತಿಕೊಂಡಿರಬೇಕೆಂದು ತೋರುತ್ತದೆ.[23] ಹಾಗಾದರೆ ಲಕ್ಷ್ಮೀಶನು ಬೊಮ್ಮರಸನಿಗಿಂತ ೫೦-೬೦ ವರ್ಷಗಳಷ್ಟಾದರೂ ಹಿಂದೆ ಆಗಿಹೋಗಿರಬೇಕು, ಅಂದರೆ ಲಕ್ಷ್ಮೀಶನ ಕಾಲದ ಉತ್ತರಾವಧಿ ಕ್ರಿ. ಶ. ಸು. ೧೪೦೦ ರಷ್ಟಕ್ಕೆ ಹಿಂದೆ ಹೋಗುತ್ತದೆ. ಇದೇ ಲಕ್ಷ್ಮೀಶನ ನೇರಾದ ಕಾಲವೊ ಅಥವಾ ಅದು ಮತ್ತೂ ಹಿಂದಕ್ಕಿದೆಯೊ ಎಂದು ತೀರ್ಮಾನಿಸಲಿಕ್ಕೆ ಇನ್ನೂ ತಾಳಬೇಕು.

---

21. ಕವಿ ಲಕ್ಷ್ಮೀಶ, ಪು. ೬೬. ಈ ಎರಡಲ್ಲದೆ ನಾನು ಬಲ್ಲಷ್ಟರ ಮಟ್ಟಿಗೆ ಬೊಮ್ಮರಸನ 'ಸೌಂದರ ಪುರಾಣ'ದಲ್ಲಿಯೂ (I. ೧೫) ಪದ್ಮಣಾಂಕನ 'ಪದ್ಮರಾಜ ಪುರಾಣ'ದಲ್ಲಿಯೂ (ಕರ್ಣಾಟಕ ಕವಿಚರಿತೆ, I. ಪು. ೪೩೩) ನವಗ್ರಹಗಳ ಹೆಸರುಳ್ಳ ಒಂದೊಂದು ವಾರ್ಧಕ ಷಟ್ಪದಿ ಇದೆ. ಆದರೆ ಅವುಗಳಲ್ಲಿ ಆಯಾ ಕವಿ ತಂತನ್ನ ಪೂರ್ವಕವಿಗಳನ್ನು ಸ್ಮರಿಸುವ ಅವಸರದಲ್ಲಿ ನವಗ್ರಹಗಳನ್ನು ಹೆಸರಿಸಿರುವುದರಿಂದ, ಆ ಸನ್ನಿವೇಶಗಳೂ ನಮ್ಮ ಇಲ್ಲಿಯ ವಿಚಾರದ ಸನ್ನಿವೇಶಗಳೂ ತೀರ ಬೇರೆ ಬೇರೆ. ಆ ಕಾರಣ ಅವುಗಳನ್ನು ಇಲ್ಲಿ ಗೊಡವೆ ಮಾಡಬೇಕಾಗಿಲ್ಲ. (ಕವಿ ಲಕ್ಷ್ಮೀಶ, ಪು. ೬೮–೭೦)

22. ಕರ್ಣಾಟಕ ಕವಿಚರಿತೆ II, ಪು. ೮೮–೯೨.

23. ಕವಿ ಲಕ್ಷ್ಮೀಶ, ಪು. ೬೭–೬೮.

# ‘ಧವಳ’ವೆಂಬ ಹಾಡಿನ ಸ್ವರೂಪ

(ಲೇಖಕ:- ಶ್ರೀ ಡಿ. ಎಲ್. ನರಸಿಂಹಾಚಾರ್.)

‘ಧವಲ’ಎಂಬ ಪದಕ್ಕೆ ಇರುವ ಹಲವು ಅರ್ಥಗಳನ್ನು ಆಶ್ರಯಿಸಿ ರನ್ನನಿಂದ ರಚಿತವಾಗಿರುವ ಈ ಕೆಳಗಿನ ಪದ್ಯ ಅವನ ‘ಗದಾಯುದ್ಧ’ ಕಾವ್ಯದಲ್ಲಿ ದೊರೆಯುತ್ತದೆ:

**ಧವಳಗಜೇಂದ್ರಮುಂ ಧವಳಚಾಮರಮುಂ ಧವಳಾತಪತ್ರಮುಂ**
**ಧವಳವಿಲೋಚನೋತ್ಪಲವಧೂಜನಮುಂ ಬೆರಸಪ್ಪುದಿಕ್ತಟಂ**
**ಧವಳಿಸೆ ಕೀರ್ತಿಯಿಂ ಧವಳಮಂಗಳಗೇಯದಿನೊಪ್ಪಿ ಬರ್ಪ ಕೌ**
**ರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ ॥**

**೫–೪೧**

ಈ ಪದ್ಯಕ್ಕೆ ಶ್ರೀ. ತೀ. ನಂ. ಶ್ರೀಕಂಠಯ್ಯನವರು ಬರೆದಿರುವ ಟಿಪ್ಪಣಿ: “ಧವಳಾತಪತ್ರ—ಶ್ವೇತಛತ್ರ, ಧವಳಮಂಗಳಗೇಯ — ಧವಳವೆಂಬ ಮಂಗಳಗೀತ, ಧವಳ ಎಂಬುದು ಒಂದು ಬಗೆಯಹಾಡು (ರಾಘವಾಂಕ: ಸಿದ್ಧರಾಮ ಚಾರಿತ್ರ ೮-೮೭, ೮೯ ನೋಡಿ); ಧವಳ ಎಂಬ ರಾಗವೂ ಉಂಟು. ಕೌರವಧವಳ–ಕೌರವಪುಂಗವ, ಕೌರವಶ್ರೇಷ್ಠ; ಇಲ್ಲಿ ಧವಳ ಎಂದರೆ ಉತ್ತಮವಾದ ವೃಷಭ. ಈ ಪದ್ಯದಲ್ಲಿ ಧವಳ ಶಬ್ದದ ನಾನಾರ್ಥಗಳನ್ನು ಕವಿ ಉಪಯೋಗಿಸಿಕೊಂಡಿದ್ದಾನೆ.”[1] ಧವಳ ಎಂದರೆ ಮಂಗಳ ಕಾಲದಲ್ಲಿ ಹೇಳುವ ಒಂದು ಬಗೆಯಾದ ಹಾಡು ಎಂದೂ ಅದು ಒಂದು ರಾಗದ ಹೆಸರೆಂದೂ ಸ್ಪಷ್ಟವಾಗಿದೆ. ಸಂಗೀತ ಶಾಸ್ತ್ರದಲ್ಲಿ “ಧವಲಃ-ರಾಗವಿಶೇಷಃ. ಭರತಮತೇ ಹಿಂದೋಲರಾಗಸ್ಯಾಷ್ಟಮಪುತ್ರಃ” ಎಂಬ ವಿವರಣೆಯಿದೆಯೆಂದು ತಿಳಿಯುತ್ತದೆ.[2] ಹಿಂದೋಲರಾಗದಿಂದ ಜನ್ಯವಾದ ರಾಗಗಳಲ್ಲಿ ಇದು ಎಂಟನೆಯದೆಂದು ಕಾಣುತ್ತದೆ. ಛಂದಶ್ಶಾಸ್ತ್ರದಲ್ಲಿ ಧವಲ ಎಂಬ ಹೆಸರಿನ ಒಂದು ವೃತ್ತವಿದೆ; ಇದರಲ್ಲಿ ಪಾದವೊಂದಕ್ಕೆ ೧೯ ಅಕ್ಷರಗಳಿದ್ದು ಆರು ನಗಣಗಳು+ ಒಂದು ಗುರುವಿನ ವಿನ್ಯಾಸ ಕಂಡುಬರುತ್ತದೆ.[3] ಪ್ರಕೃತ ಇಲ್ಲಿ ಧವಳವು ರಾಗವಿಶೇಷವೆಂಬ ಅಂಶವನ್ನಾಗಲಿ ಅದು ಒಂದು ವೃತ್ತವೆಂಬ ಸಂಗತಿಯನ್ನಾಗಲಿ ಅಷ್ಟಾಗಿ ಗಮನಿಸದೆ ಅದು ಒಂದು ಜಾತಿಯ ಹಾಡೆಂಬುದನ್ನು ಮಾತ್ರ ಪರಿಶೀಲನೆಗೆ ಎತ್ತಿಕೊಂಡಿದೆ. ಸಿದ್ಧರಾಮನು ಮಾಡಿಸಿದ ಸಾವಿರಾರು ಮಂಗಳ ವಿವಾಹಗಳ ಸಂದರ್ಭದಲ್ಲಿ ಅಂಗನೆಯರು ‘ಆರತಿಗಳಂ ಬೆಳಗಿ’ ಅಲ್ಲಲ್ಲಿ ಧವಳವನ್ನು ಹಾಡುತ್ತಿದ್ದರಂತೆ. ಅದು ಮಂಗಳದ ಸಮಯದಲ್ಲಿ ಆರತಿ ಎತ್ತುವಾಗ ಹೆಣ್ಣುಮಕ್ಕಳು ಹೇಳುವ ಹಾಡೆಂಬುದರಲ್ಲಿ ಸಂದೇಹವಿಲ್ಲ. ಈ ಜಾತಿಯ ಹಾಡು ಹನ್ನೆರಡನೆಯ ಶತಮಾನದ ಕನ್ನಡ ಜನತೆಯಲ್ಲಿ ಪ್ರಚುರವಾಗಿದ್ದಿತೆಂಬುದಕ್ಕೆ ರನ್ನನು ಸಾಕ್ಷಿ; ಅಲ್ಲಿಂದ ಮುಂದಕ್ಕೆ ೧೩ನೆಯ ಶತಮಾನದಲ್ಲಿಯೂ ಅದು ಜನಬಳಕೆಯಲ್ಲಿದ್ದಿತೆಂಬುದನ್ನು ರಾಘವಾಂಕ ಹೇಳುತ್ತಾನೆ. ಈಗಲೂ ಹೆಣ್ಣುಮಕ್ಕಳು ಹೇಳುವ ಹಾಡುಗಳಲ್ಲಿ ‘ಧವಳ’ಗಳು ಅಲ್ಲಲ್ಲಿ ಹುದುಗಿಕೊಂಡಿರಬಹುದು. ಹೀಗೆ ಕನ್ನಡದಲ್ಲಿ ಹಿಂದಿನ ಕಾಲದಿಂದಲೂ ಜನಪ್ರಿಯವಾಗಿರುವ ಈ ಹಾಡಿನ ಸ್ವರೂಪವೇನೆಂಬುದನ್ನು ಆದಷ್ಟು ಮಟ್ಟಿಗೆ ವಿವರಿಸುವುದು ಈ ಲೇಖನದ ಉದ್ದೇಶ.

ತೆಲುಗು ಸಾಹಿತ್ಯದಲ್ಲೂ ತೆಲುಗು ಹೆಣ್ಣು ಮಕ್ಕಳ ಹಾಡುಗಳಲ್ಲೂ ‘ಧವಳ’ವೆಂಬ ಹಾಡಿನ ಉಲ್ಲೇಖ ಕಂಡುಬರುವುದಲ್ಲದೆ ಅದರ ಸ್ವರೂಪವನ್ನು ತಿಳಿಯಲನುಕೂಲಿಸುವಂತೆ ಕೆಲವು ಹಾಡುಗಳೂ ದೊರೆಯುತ್ತವೆ. ಶ್ರೀ ಚಿಂತಾ ದೀಕ್ಷಿತರು ತಾವು ಬರೆದಿರುವ “ಆಡವಾಳ್ಲ ಪಾಟಲು” (ಹೆಂಗಸರ ಹಾಡುಗಳು) ಎಂಬ ಲೇಖನದಲ್ಲಿ ಹಲವು ಬಗೆಯ ಹಾಡುಗಳನ್ನು ಹೆಸರಿಸಿ ಅವುಗಳ ಕೆಲವು ಪ್ರಯೋಗಗಳನ್ನು ತೋರಿಸಿದ್ದಾರೆ.[4] ಅಪ್ಪಕವೀಯ, ಆನಂದರಂಗರಾಟ್ ಛಂದಸ್ಸು, ಗುಡಾರು ವೆಂಕಟದಾಸ ಕವಿಯ ಬಲರಾಮ ಚರಿತ್ರೆ, ವೆಂಕಟೇಶ್ವರವಿಜಯವಿಲಾಸಮು, ಲಕ್ಷಣದೀಪಿಕೆ, ಚೇಮಕೂರು ವೇಂಕಟಕವಿಯ ವಿಜಯವಿಲಾಸಮು— ಈ ಆಂಧ್ರ ಗ್ರಂಥಗಳಲ್ಲಿ ‘ಧವಳ’ ಎಂಬ ಹಾಡಿನ ಹೆಸರನ್ನು ಮಾತ್ರ ಹೇಳಿದೆ.[5] ಚಿಕ್ಕಯ್ಯ ಚರಿತ್ರ, ಪ್ರಹ್ಲಾದ ವಿಜಯಮು ಮೊದಲಾದ ಯಕ್ಷಗಾನ ಕೃತಿಗಳಲ್ಲಿ ಕೆಲವು ಧವಳಗಳು ದೊರೆಯುತ್ತವೆ. ‘ಅಪ್ಪಕವೀಯ’ದಲ್ಲಿ ‘ಧವಳ’ಕ್ಕೆ ಒಂದು ಲಕ್ಷ್ಯವೂ ದೊರೆಯುತ್ತದೆ. ಶ್ರೀ ಚಿಂತಾದೀಕ್ಷಿತರು ಹಲವು ಗ್ರಂಥಗಳಿಂದ ಉದ್ಧರಿಸಿ ಕೊಟ್ಟಿರುವ ಕೆಲವು ಧವಳಗಳನ್ನು ಇಲ್ಲಿ ಕಾಣಿಸಿದೆ:

(೧) ರುದ್ರಕವಿ ಬರೆದಿರುವ ‘ಸುಗ್ರೀವ ವಿಜಯಮು’ ಎಂಬ ಗ್ರಂಥದಲ್ಲಿ ಸುಗ್ರೀವಪಟ್ಟಾಭಿಷೇಕವಾದ ಮೇಲೆ ಪುಣ್ಯಾಂಗನೆಯರು ಈ ಕೆಳಗಿನ ಧವಳಗಳನ್ನು ಹಾಡಿದರೆಂದು ಹೇಳಿದೆ-

**“ಶ್ರೀರಾಮುಡು ಗುಣಧಾಮುಡು ವಾಂಜಲೋಚನುಡು**
**ಶೂರತ ರಾವಣು ಗೂಲ್ಚೀ ನಾಂೀಮಣಿ ದೇವಲಯುರ್**
**ರಾಮುನಿ ಕೃಪ ಕಪಿರಾಜ್ಯಮು ಕ್ಷೇಮಂಬುನ ಪಾಲಿಂಚೇ**

---

1. ಗದಾಯುದ್ಧ ಸಂಗ್ರಹ, ಪು ೧೫೦. 2 ‘ಶಬ್ದಕಲ್ಪದ್ರುಮ’ದಲ್ಲಿ ನೋಡಿ. 3 ಪ್ರಾಕೃತ ಪೈಂಗಳ ೨—೧೯೨

4. ಭಾರತಿ (ರಜತೋತ್ಸವ ಸಂಚಿಕೆ, ಜನವರಿ 1949): ಸಂಪುಟ 26, ಸಂಚಿಕೆ 1, ಪು 186—192. 5. ಅದೇ. ಪು 187.

ಶ್ರೀವುಂತಡು ಸುಗ್ರೀವುಡು ಭೂಮಂಡಲಿ ಪೊಗಡೊಂದು
ಸಂಗರವಿಜಯಮುತೋನುಪ್ಪೊಂಗೆಡು ಸುಗ್ರೀವುನಕು
ಸಂಗತಿಗಾ ಯುವರಾಜ್ಯತನಂಗದುಡಿಲ ಪೆಂಪೊಂದು."

(೨) ವಿಜಯ ರಾಘವ ನೃಪತಿಗೂ ಕಾಂತಿಮತಿಗೂ ವಿವಾಹವಾದ ಸಂದರ್ಭದಲ್ಲಿ ಬ್ರಾಹ್ಮಣ ಸ್ತ್ರೀಯರು ಧವಳಗಳನ್ನು ಹಾಡಿದರೆಂದು 'ಮನ್ನಾರುದಾಸವಿಲಾಸನಾಟಕಮು" ಎಂಬ ಗ್ರಂಥದಲ್ಲಿ ಉಕ್ತವಾಗಿದೆ:

ಜಯಜಯ ತಂಜಪುರವಾಸಾ
ಜಯಜಯ ಮಂಜುಳಹಾಸ
ಜಯಜಯ ಮದನವಿಲಾಸ
ಜಯಜಯ ಮನ್ನಾರುದಾಸ ॥
ಜಯಜಯ ಸುಜನ ವಿಧೇಯ
ಜಯಜಯ ಸಮರಗಾಂಗೇಯ
ಜಯಜಯ ದಾನರಾಧೇಯ
ಜಯಜಯ ದಕ್ಷಿಣರಾಯ ॥

(೩) "ಭವಾನೀ ಶಂಕರವಿಲಾಸ"ವೆಂಬ ಯಕ್ಷಗಾನದಲ್ಲಿ ಉಮಾಮಹೇಶ್ವರರನ್ನು ಚಿನ್ನದ ಉಯ್ಯಾಲೆಯಲ್ಲಿ ಕುಳ್ಳಿರಿಸಿ ಸಖಿಯರು ಕೈವಾರಿಸುತ್ತ ಹಾಡಿದ ಧವಳ ಹೀಗಿದೆ:

ಜಯಜಯ ಜಗದಾಧಾರಾ ಜಯಜಯ ಜಲಧಿಗಭೀರಾ
ಜಯಜಯ ಶೈಲವಿಹಾರಾ ಜಯಜಯ ಮಂದರ ಧೀರಾ
ಜಯಜಯ ಪನ್ನಗಹಾರಾ ಜಯಜಯ ವೈರಿವಿದಾರಾ

(೪) ಕಾಕುನೂರಿ ಅಪ್ಪಕವಿ ಸ್ವನಾಮಖ್ಯಾತವಾದ ಲಕ್ಷಣ ಗ್ರಂಥದಲ್ಲಿ ಧವಳಕ್ಕೆ ಕೊಟ್ಟಿರುವ ಲಕ್ಷ್ಯ: (೪-೪೦೧.)

ಅಕ್ಷರ ಹರಿವಿಳ ಚಾಂಬುರು। ಹಾಕ್ಷಾ ಯಕ್ಷಪಸಖ
ರಕ್ಷಿತ ಸುರವಿದುರ ದ್ವಿಪ। ರಕ್ಷಾರಾಕ್ಷಾಸವಿದಳನ॥
ಪಕ್ಷಿಗಪತಿರಥ ಪೌಂಡ್ರವಿ। ಪಕ್ಷಾ ಭಕ್ಷಿತದವಶಿಖಿ
ವೃಕ್ಷಗ ಸಹಚರ ಋಕ್ಷಸ। ದೃಕ್ಷಾ ಋಕ್ಷಪದುಹಿತೃಪ॥

ಕನ್ನಡದಲ್ಲಿಯೂ 'ಧವಳದ ಹಾಡು' ಜನಪದಸಾಹಿತ್ಯದಲ್ಲೂ ಹೆಂಗಳೆಯರ ಹಾಡಿನಲ್ಲೂ ಬಳಕೆಯಲ್ಲಿದ್ದಂತೆ ಕಾಣುತ್ತದೆ. "ಧವಳದ ಹಾಡು ಮುಂತಾದುವು" ಎಂಬ ಹೆಸರಿನ ಒಂದು ಗ್ರಂಥ ಮದ್ರಾಸು ಓರಿಯಂಟಲ್ ಲೈಬ್ರೆರಿಯಲ್ಲಿರುವಂತೆ ಆ ಸಂಸ್ಥೆಯ ಕನ್ನಡ ಕೈಬರಹದ ಗ್ರಂಥಗಳ ಸೂಚಿಯಿಂದ ಗೊತ್ತಾಗುತ್ತದೆ[೬]. "ಇದರಲ್ಲಿ ಸೀಮಂತದ ಧವಲ, ಜಾತಕರ್ಮಧವಲ, ಉಪನಯನದ ಧವಲ, ಭರತೇಶ್ವರನ ಧವಲ" ಮುಂತಾದ ಹಾಡುಗಳಿವೆ[7]. ಈ ಹಾಡುಗಳು ಯಾರಿಂದ ರಚಿತವಾದುವೆಂಬುದನ್ನು ತಿಳಿಯುವುದಕ್ಕೆ ಯಾವ ಗ್ರಂಥಸ್ಥವಾದ ಆಧಾರವೂ ದೊರೆಯುವುದಿಲ್ಲ. ಇದರ ತಾಳೆಯೋಲೆಯ ಪ್ರತಿ ತುಂಬ ಜೀರ್ಣವಾಗಿರುವುದರಿಂದ ಅಲ್ಲಲ್ಲಿ ಹಾಡುಗಳ ಪಾದಗಳು ತ್ರುಟಿತವಾಗಿ ನಷ್ಟವಾಗಿವೆ. ಇದರಿಂದ ಉದ್ಧೃತವಾಗಿ ಮುದ್ರಿತವಾಗಿರುವ ಕೆಲವು ಹಾಡುಗಳನ್ನು ಇಲ್ಲಿ ನೋಡಬಹುದು:

(೧) ಮಂಗಳವಾಗಲಿ ಧರೆಗೆ । ಮಂಗಳವಾಗಲಿ ಜನಕೆ ॥
ಮಂಗಳವತಿಶಯವಾಗಲಿ । .................... ॥

(೨) ಸೊಗಸುವ ಸೊಬಗಿನೊಡನೆ । ಬೊಗದೋರುವ ಯೌವನದ ॥
ಮೃಗರಾಜೇಂದ್ರನ ಮದುವೆ । .................... ॥

(೩) ತನ್ನ ಕುಲದ ಹಿರಿಯರನು । ಮನ್ನಿಸಿ ಕರೆಯಿಸಿ ಮನೆಗೆ ॥
ಬಿನ್ನವಿಸಿದನವರಿಗೆ । ತನ್ನಂತಸ್ಥವನು ॥

(೪) ಮದಗಜಗಳ ನಲಿದೇಱು । ಮದವಕ್ಕಳು ಕುಳ್ಳಿರಲು ॥
ಚದುರೆಯರಂದ ಚಮರಗಳ ಡಾಳಿಸುತಿರಲು ॥

(೫) ಬೆಳಗಾಯಿತು ಬೆಳಗಿನೊಳು । ಗೆಲುವಿಂದರೆ ಕಣ್ದೆರೆದು ॥
ಝಳಕವ ಮಾಡಿ ಸಿಂಗರಿಸಿ । ........ಚಿತಾರ್ಥದೊಳು ॥

(೬) ತಾವರೆಯಲಿ ಕಳಹಂಸೆ । ಭಾವವೆರಸಿ [ಯಿ]ರ್ಪಂತೆ ॥
ದೇವಿಸಹಿತ ಸೆಜ್ಜೆಯಮನೆ । .................... ...ದಾರ್ ॥

ಮೇಲೆ ಕಾಣಿಸಿರುವ ಕನ್ನಡದ ಆರು ಧವಳಗಳಲ್ಲಿ ೩ನೆಯದು ಹೊರತಾಗಿ ಯಾವುದೂ ಪೂರ್ಣವಾಗಿಲ್ಲದಿರುವುದು ಶೋಚನೀಯ. ೪ನೆಯದು ಪೂರ್ಣವಾಗಿರುವಂತೆ ತೋರುವುದಾದರೂ 'ಡಾಳಿಸುತಿರಲು' ಎಂಬುದರ ಹಿಂದೆ ೪ನೆಯ ಪಾದದ ಭಾಗವಾಗಿ ಏನೋ ಇದ್ದಿರಬೇಕೆಂಬ ಸಂದೇಹವುಂಟಾಗುತ್ತದೆ; ಏಕೆಂದರೆ ಈಗ ಇರುವಂತೆ ಆ ಪಾದದಲ್ಲಿ ಪ್ರಾಸಾಕ್ಷರವಾದ 'ದ' ಅನ್ನು ಒಳಕೊಂಡ ಭಾಗವಿಲ್ಲ. ಧವಳಗಳ ರಚನೆಯಲ್ಲಿ ಏನಾದರೂ ಛಂದಸ್ಸಿನ ತತ್ತ್ವ ಅಡಗಿದೆಯೇ ಎಂಬುದನ್ನು ಪರೀಕ್ಷಿಸಿ ಅವುಗಳ ಲಕ್ಷಣವನ್ನು ಈಗ ಕಂಡುಹಿಡಿಯಬೇಕಾಗಿದೆ. ಹಿಂದೆ ಹೇಳಿರುವ ತೆಲುಗಿನ ಉದಾಹರಣೆಗಳನ್ನು ಮೊದಲು ತೆಗೆದುಕೊಳ್ಳಬಹುದು. ಇಲ್ಲಿ ಒಂದು ಧವಳದ ಪದ್ಯವನ್ನು ಎರಡು ಪಂಕ್ತಿಗಳಲ್ಲಿ ಅಚ್ಚು ಹಾಕಿದೆ. ಆದರೆ ಪ್ರಾಸಸ್ಥಾನವನ್ನು ಗಮನಿಸಿದರೆ ಅವು ನಾಲ್ಕು ಇವೆಯೆಂದೂ ಆದ್ದರಿಂದ ೪ಪಾದಗಳು ಪದ್ಯದಲ್ಲಿರಬೇಕೆಂದೂ ತಿಳಿಯುತ್ತದೆ. ಧವಳವು ಒಂದು ಬಗೆಯಾದ ಚತುಷ್ಪದಿ. ಸಾಮಾನ್ಯವಾಗಿ ಪ್ರತಿ ಪಾದದಲ್ಲಿಯೂ ೬ಮಾತ್ರೆಗಳ ಗಣ ಎರಡೆರಡು ಬರುತ್ತವೆ. ಕೆಲವು ವೇಳೆ ೨ನೆಯ ಪಾದದ ಕೊನೆಯ ಗಣ ೬ಮಾತ್ರೆಗಳಿಗಿಂತ ಕಡಮೆಯಾಗಿದ್ದರೂ ಆ ಊನಗಣಕ್ಕೆ ೬ಮಾತ್ರೆಗಳಷ್ಟೇ ಬೆಲೆ. ಉದಾ:-

1 1 1 2
ಶ್ರೀ ರಾಮುಡು । ಗುಣಧಾಮುಡು
1 3 1 4 1 3 1 4
ವಾಂಜಲೋ । ಚನುಡು ಅಥವಾ ವಾಂಜ । ಲೋಚನುಡು

೬. A Descriptive Catalogue of the Kannada Manuscripts Vol. III No 364. 7. ಅದೇ ಪು. 588.

ಇಲ್ಲಿ 4ನೆಯ ಗಣವನ್ನು ಎಳೆದು ಹೇಳಿ ೬ಮಾತ್ರೆಗಳಷ್ಟು ಕಾಲವನ್ನು ಅದಕ್ಕೆ ಕೊಡಬೇಕಾಗುತ್ತದೆ; ಕೆಲವು ವೇಳೆ ೬ಮಾತ್ರೆಗಳ ಗಣವನ್ನು 2+4 ಎಂದಾಗಲಿ 4+2 ಎಂದಾಗಲಿ 3+3 ಎಂದಾಗಲಿ ಒಡೆಯಬಹುದು; ಮತ್ತೆ ಕೆಲವು ವೇಳೆ ಪಾದದ ಎರಡು ಗಣಗಳನ್ನು ಒಟ್ಟಾಗಿ ಬೆಸೆದುಬರುವ ೧೨ಮಾತ್ರೆಗಳನ್ನು 4+4+4 ಎಂದು ಮೂರು ಚತುರ್ಮಾತ್ರಾಗಣವಾಗಿ ಮಾಡಿಕೊಳ್ಳಲೂಬಹುದು. ಉದಾ:

1 4 1 4 6 6
ಶೂರತ| ರಾವಣು| ಗೂಳ್ಪೀ ಅಥವಾ ಶೂರತರಾ| ವಣುಗೂಳ್ಪೀ
ನಾರೀಮಣಿ ದೇವಲಯುೞ

ಹೀಗೆ ಷಣ್ಮಾತ್ರಾಗಣವನ್ನುಬಳಸಿಕೊಳ್ಳುವಾಗ ಮೇಲೆ ಸೂಚಿಸಿದ ಸ್ವಾತಂತ್ರ್ಯಕ್ಕೆ ಅವಕಾಶವಿದ್ದರೂ ಒಟ್ಟಿನಲ್ಲಿ ರೂಪಕ ತಾಳಕ್ಕೆ ಅನುಸಾರಿಯಾಗಿ ಪದ್ಯದ ಲಯಕ್ರಮವಿರಬೇಕಾದದ್ದು ಮುಖ್ಯವಾದ ವಿಷಯ. 'ಅಪ್ಪಕವೀಯ'ದಲ್ಲಿ ಕೊಟ್ಟಿರುವ ಲಕ್ಷ್ಯಪದ್ಯದಲ್ಲಿ ಎರಡು ಧವಳಗಳು ಅಡಗಿವೆ; ಅವು ಹೀಗೆ:

(೧) ಅಕ್ಷರ ಹರಿ ವಿಕಚಾಂಬುರು ।
ಹಾಕ್ಷಾ ಯಕ್ಷಪಸಖ ॥
ರಕ್ಷಕ ಸುರವಿದುರ ದ್ವಿಪ ।
ರಕ್ಷಾ ರಾಕ್ಷಸವಿದಳನ ॥

(೨) ಪಕ್ಷಿಗ ಪತಿರಥ ಪೌಂಡ್ರವಿ ।
ಪಕ್ಷಾ ಭಕ್ಷಿತದವಶಿಖಿ ॥
ವೃಕ್ಷಗ ಸಹಚರ ಋಕ್ಷಸ ।
ದೃಕ್ಷಾ ಋಕ್ಷಪದುಹಿತೃಪ ॥

ಇಲ್ಲಿಯೂ ಪ್ರತಿ ಪಾದದಲ್ಲಿ ಸಾಮಾನ್ಯವಾಗಿ ಎರಡೆರಡು ಷಟ್ಕಲಗಳಿರುವುದು ಸ್ಪಷ್ಟವಾಗಿದೆ. ಮೊದಲನೆಯ ಪದದ ಎರಡನೆಯ ಪಾದದ ಅಂತ್ಯ 'ಕ್ಷಪಸಖ' ಎಂಬ ಊನಗಣದಿಂದ ಕೂಡಿರುವಂತೆ ಕಂಡರೂ ಅದಕ್ಕೂ ೬ಮಾತ್ರೆಗಳ ಬೆಲೆಯನ್ನು ಹಾಡುವಾಗ ಕಾಣಿಸಬೇಕು. ತಾಳದ ಆಘಾತ ಸಾಮಾನ್ಯವಾಗಿ ಗಣದ ಆದ್ಯಕ್ಷರದ ಮೇಲೆ ಬೀಳುತ್ತದೆ. ಒಟ್ಟಿನಲ್ಲಿ ತೆಲುಗು ಧವಳದ ಲಕ್ಷಣವನ್ನು ಹೀಗೆ ಹೇಳಬಹುದು: ನಾಲ್ಕು ಪಾದಗಳು; ಆದಿ ಪ್ರಾಸ; ಪ್ರತಿಪಾದದಲ್ಲಿಯೂ ಷಣ್ಮಾತ್ರೆಯ ಎರಡೆರಡು ಗಣಗಳು—ಇವು ಇರಬೇಕು.

ಈ ಲಕ್ಷಣ ಕನ್ನಡದ ಧವಳಗಳಿಗೂ ಅನ್ವಯಿಸುವುದೇ ಇಲ್ಲವೇ ಎಂಬುದನ್ನು ಇನ್ನು ನೋಡಬಹುದು. ಇಲ್ಲಿಯೂ 4ಪಾದಗಳೂ ಆದಿಪ್ರಾಸವೂ ಇವೆ; ಪಾದವೊಂದಕ್ಕೆ ಎರಡೆರಡರಂತೆ ೬ಮಾತ್ರೆಗಳ ಗಣದ ವಿನ್ಯಾಸವಿದೆ; ಊನಗಣ ಬಂದಾಗ ಅದನ್ನು ಷಣ್ಮಾತ್ರಾ ಕಾಲದಷ್ಟು ಎಳೆಯಬೇಕಾದ ಆವಶ್ಯಕತೆಯೂ ಇದೆ; 2ನೆಯ ಉದಾಹರಣೆಯ ಗಣವಿನ್ಯಾಸ ಹೀಗಿದೆ:

1 2
ತನ್ನ ಕುಲದ| ಹಿರಿಯರನು ।
3 4
ಮನ್ನಿಸಿ ಕರೆ| ಯಿಸಿ ಮನೆಗೆ ॥
1 2
ಬಿನ್ನವಿಸಿದ । ನವರಿಗೆ ।
3 4
ತನ್ನಂತ | ಸ್ಥವನು ॥

ಈ ಪದ್ಯದ ಉತ್ತರಾರ್ಧದ 2 ಮತ್ತು 4 ನೆಯ ಗಣಗಳನ್ನು ಹಾಡುವಾಗ ಹಿಗ್ಗಿಸಿಕೊಳ್ಳಬೇಕು. ಆದ್ದರಿಂದ ತೆಲುಗಿನ ಧವಳಕ್ಕೂ ಕನ್ನಡದ ಧವಳಕ್ಕೂ ಸಮಾನವಾದ ಲಕ್ಷಣವಿದೆಯೆಂದೂ ಅದರ ಪ್ರಯೋಗದಲ್ಲಿಯೂ ಸಮಾನತೆಯಿದೆಯೆಂದೂ ತೀರ್ಮಾನಿಸಬಹುದು. ಈ ಲಕ್ಷಣವನ್ನು ಇನ್ನೂ ಹೆಚ್ಚು ಪರಿಷ್ಕಾರವಾಗಿ ಹೇಳುವುದಕ್ಕೆ ಹಲವಾರು ಲಕ್ಷ್ಯಗಳು ದೊರೆತಾಗ ಸಾಧ್ಯವಾದೀತು. ಕನ್ನಡದ ಯಕ್ಷಗಾನಗಳನ್ನೂ ಹೆಣ್ಣುಮಕ್ಕಳ ಹಾಡುಗಳನ್ನೂ ಬೆದಕಿ ನೋಡಿದರೆ ಧವಳದ ಹಾಡುಗಳು ಇನ್ನೂ ಹೇರಳವಾಗಿ ಸಿಕ್ಕಬಹುದು. ಹಾಗೆ ದೊರೆತಾಗ ಆ ಹಾಡು ಮಾತ್ರಾಗಣ ಘಟಿತವಾದದ್ದೇ,ಅಂಶಗಣ ಘಟಿತವಾದದ್ದೇ ಎಂಬ ವಿಚಾರಕ್ಕೆ ಅವಕಾಶವಾಗುವುದಲ್ಲದೆ ಅದು ಆರಂಭದಲ್ಲಿ ಅಂಶಗಣಯುಕ್ತವಾಗಿದ್ದು ಕಾಲಕ್ರಮದಲ್ಲಿ ಮಾತ್ರಾಗಣಕ್ಕೆ ತಿರುಗಿದ್ದರೂ ಇರಬಹುದೆಂಬುದಕ್ಕೂ ಆಧಾರ ದೊರೆಯಬಹುದು.

ಛಂದಸ್ಸಿನಲ್ಲಿ ಷಣ್ಮಾತ್ರಾ ಗಣಗಳನ್ನು ಬಳಸುವುದು ಹೆಚ್ಚಾಗಿ ರೂಢಿಯಲ್ಲಿಲ್ಲ. ಕೆಲವು ಅಕ್ಷರವೃತ್ತಗಳಲ್ಲಿ ರೂಪಕ ತಾಳಕ್ಕೆ ಸರಿಹೊಂದುವಂತೆ ಆರಾರು ಮಾತ್ರೆಗಳಾಗಿ ಒಡೆಯುವ ವೃತ್ತಗಳಿವೆಯೆಂದೂ, ಆದರೆ ಅಂಥವು ಅನೇಕವಾಗಿಲ್ಲವೆಂದೂ, ಮದರೇಖಾವೃತ್ತವು ಇದಕ್ಕೆ ಉದಾಹರಣೆಯೆಂದೂ, ಇಂಥ ವೃತ್ತಗಳನ್ನು ಬೇಕಾದ ಹಾಗೆ ಸುಲಭವಾಗಿ ಕಲ್ಪಿಸಿಕೊಳ್ಳಬಹುದೆಂದೂ ಗಿಡುಗು ವೇಂಕಟ ಸೀತಾಪತಿ ಅವರು ಹೇಳುತ್ತಾರೆ.[8] ಅವರು ಕೊಟ್ಟಿರುವ 5ಪ್ರಕಾರಗಳಲ್ಲಿ ಇಲ್ಲಿ ಒಂದೆರಡನ್ನು ಬರೆಯಬಹುದು:

---

8. ಅನಂತುನಿಛಂದಮು, ಉಪೋದ್ಘಾತಮು ಪು 75. ಇವರು ಹೇಳುವ ಮದರೇಖಾವೃತ್ತವು ಎಲ್ಲಿದೆಯೆಂಬುದು ಗೊತ್ತಾಗುವುದಿಲ್ಲ. ಸಂಸ್ಕೃತದ ಅಕ್ಷರವೃತ್ತಗಳಲ್ಲಿ ಭಗಣ+ಸಗಣ+ಗುರುವನ್ನು ಒಳಕೊಂಡ ಮದಲೇಖಾ ಎಂಬೊಂದು ವೃತ್ತವಿದೆ. ಇದನ್ನೇ ಹೇಮಚಂದ್ರನು ವಿಧುವಕ್ತ್ರಾ ಎಂದು ಕರೆದಿದ್ದಾನೆ. ಅಲ್ಲದೆ ಮಗಣ+ಸಗಣ+ಗುರುವನ್ನು ಹೊಂದಿದ ಒಂದು ವೃತ್ತವನ್ನು ಹೇಮಚಂದ್ರನೂ ವಿರಹಾಂಕನೂ ಕೇದಾರಭಟ್ಟನೂ ಮದಲೇಖಾ ಎಂಬ ಹೆಸರಿನಿಂದ ಕರೆದಿದ್ದಾರೆ(ಜಯದಾಮನ್, ಪು 120)

**(೧) ಅನುಸಾರಿಣಿಯನು ವೃತ್ತಂ+ಬಗುನತಿಧೃತಿಯನು ಛಂದಂ
ಬುನರೂಪಕವುನು ತಾಳಂ+ ಬುನು ನಡಚುನು ಶ್ರುತಿಕಿಂಪೈ
ಚನುನಾಲುಗು ಚರಣಂಬುಲ್ + ಸನಯನನಸಗವುಲೊಪ್ಪ್ರ
ಸನಯಂಬುಲು ಚನುನಂತನ್ +ಜರಣವುಲವಡಿ ನಿಲ್ಚ್ರ ॥**

ಇದು ೧೯ನೆಯದಾದ ಅತಿಧೃತಿಯೆಂಬ ಛಂದಸ್ಸಿನಲ್ಲಿ ಒಂದು ವೃತ್ತವಾಗುತ್ತದೆಂದೂ ಸ + ನ + ಯ + ನ + ನ + ಸ ಎಂಬ ಗಣಗಳೂ ಒಂದು ಗುರುವೂ ಪ್ರತಿಪಾದದಲ್ಲಿಯೂ ಇರುತ್ತದೆಂದೂ ಈ ವೃತ್ತಕ್ಕೆ ಅನುಸಾರಿಣಿ ಎಂದು ಹೆಸರೆಂದೂ ಮೇಲಿನ ಪದ್ಯದ ಮುಖ್ಯ ಅಭಿಪ್ರಾಯ. ಹೀಗೆಯೇ ಇದೇ ಅತಿಧೃತಿ ಛಂದಸ್ಸಿನಲ್ಲಿ:

**(೨) ರೂಪಕನುನು ತಾಳಂಬುನ+ದ್ರುತಲಘುವುಲು ಚನು
ಚುಂದ್ರ್ರ**

ಎಂಬುದು ಯಾವುದೋ ಒಂದು ವೃತ್ತದ ಪಾದವಾಗಿಯೇ ಇರಬೇಕು. ಇವೆಲ್ಲ ಸಾಧ್ಯತೆಗಳನ್ನು ತೋರಿಸಲಿಕ್ಕಾಗಿ ಮಾತ್ರ ಈ ಉದಾಹರಣೆಗಳು ಕಲ್ಪಿತವಾಗಿವೆ. ಯಾವ ಕವಿ ಪ್ರಯೋಗವನ್ನೂ ಅವರು ತಿಳಿಸಿಲ್ಲ. ಸಂಸ್ಕೃತದ ಮಾತ್ರಾ ಛಂದಸ್ಸಿನಲ್ಲೂ ಷಣ್ಮಾತ್ರಾಲಯವು ಸಿಕ್ಕುವ ಪದ್ಯಜಾತಿ ಇರುವಂತೆ ತೋರುವುದಿಲ್ಲ. ಜಯದೇವನ ಗೀತಗೋವಿಂದದಲ್ಲಿ ೪, ೫ ಮತ್ತು ೭ ಮಾತ್ರೆಗಳ ಲಯಕ್ಕೆ ಒಳಪಡುವ ಹಾಡುಗಳಿವೆಯೇ ಹೊರತು ೬ ಮಾತ್ರೆಗಳ ಲಯದ ಹಾಡುಗಳಿಲ್ಲ. ಪ್ರಾಕೃತ ಛಂದಸ್ಸಿನಲ್ಲಿ ಮಾತ್ರ ೬ ಮಾತ್ರೆಗಳ ೧೩ ಗಣಗಳಿರುವುದೇ ಅಲ್ಲದೆ ದೋಹಾ, ದ್ವಿಪದೀ ಮುಂತಾದ ವೃತ್ತಗಳಲ್ಲಿ ಅದು ಬಳಕೆಯಲ್ಲಿರುವುದೂ ಕಂಡುಬರುತ್ತದೆ. ಅಂತು ಷಟ್ಕಲಲಯದ ಓಡಾಟ ಛಂದಶ್ಶಾಸ್ತ್ರದಲ್ಲಿ ಅಷ್ಟೇನೂ ಅತಿಶಯವಾಗಿಲ್ಲವೆಂಬುದು ಕಂಡ ವಿಷಯ.

ಇಷ್ಟು ಅಪೂರ್ವವಾಗಿರುವ ಲಯದ ರಹಸ್ಯವನ್ನೂ ಚೆಲುವನ್ನೂ ಆಧುನಿಕ ಕನ್ನಡ ಕವಿಗಳು ಮನಗಂಡು ಅತಿ ಸುಂದರವಾದ ಪದ್ಯಗಳನ್ನು ನಿರ್ಮಿಸಿದ್ದಾರೆ. 'ಶ್ರೀ' ಅವರು ತಮ್ಮ 'ಅಶ್ವತ್ಥಾಮನ್' ನಾಟಕದಲ್ಲಿ ತಂದಿರುವ ಆರು ಮಾತ್ರೆಗಳ ಲಯದ ಸೊಗಸು ಹೀಗೆ:

**ಚೆಲ್ವಿನ ನೆಲೆ, ಕಣ್ಗಳ ಬಲೆ, ಸುಖದೊಱತೆಯ ಬನವಾಸೀ
ಬಳಿದಲೆದಾ ಕಾನ್‌ಮಲೆಗಳನ್ ಅನ್ ಮಱೆವೆನೆ ಬನವಾಸೀ!
ಭಾರತದೀ ಸುೞಿಗಾಳಿಗೆ ಸಿಲ್ಕುತೆ ನಾನ್ ತಱಿಗಾದೆನ್
ಪೆಱೆ ತೆಂಬುತೆ ಪೆಱೆ ತೇಯುತೆ, ಮನೆಗಾಣದೆ ಬಡವಾದೆನ್,
ನಿನ್ನನೆ ನೆನೆನೆನೆದೋ ತಾಯ್, ಹಂಬಲಿಸುವ ನೋವೊಂದೇ!
ಇನ್ನೆನಗೇನಾಸೆಗಳೋ ಪಾರ್ವುದು ನಾನ್ ಸಾವೊಂದೇ!**

ಇಲ್ಲಿ ಪ್ರತಿ ಪಂಕ್ತಿಯಲ್ಲೂ ೬ ಮಾತ್ರೆಗಳ ನಾಲ್ಕು ಗಣಗಳಿದ್ದು ರೂಪಕ ತಾಳಕ್ಕೆ ಹೊಂದಿಕೊಳ್ಳುತ್ತವೆ; ಅಂತ್ಯಪ್ರಾಸವಿದೆ. ಕನ್ನಡದ ಹಳೆಯ ಕಾವ್ಯಗಳಲ್ಲಿ ಈ ಲಯವನ್ನು ಪ್ರತಿಬಿಂಬಿಸುವ ಪದ್ಯಜಾತಿ ಇಲ್ಲದಿರುವುದರಿಂದ 'ಶ್ರೀ' ಅವರ ಈ ರಚನೆಗೆ ಮೂಲ ಬಹುಶಃ ಹೆಂಗಸರ ಹಾಡುಗಳಲ್ಲಿರಬಹುದಾದ ಧವಳದ ರೀತಿಯ ಹಾಡುಗಳೋ ತಮಿಳಿನಲ್ಲಿರಬಹುದಾದ ಕೃತಿಗಳೋ ಆಗಿರಬೇಕೆಂದು ಊಹಿಸಬಹುದು. ಶ್ರೀ. ಕೆ. ವಿ. ಪುಟ್ಟಪ್ಪನವರು ೬ ಮಾತ್ರೆಗಳ ಲಯವನ್ನು ಸೊಗಸಾಗಿ ಬಳಸಿದ್ದಾರೆ. ಉದಾಹರಣೆಗೆ:

ಓರೋರ್ವರೆ ನಾವಿರ್ವರು
    ಸಿಂಗಾರದಿ ಕೂಡಿ
ನಲಿದಾಡುವ ಬಾ ನಲ್ಲಳೆ
    ರಸದೋಕುಳಿಯಾಡಿ, (ಪ್ರೇಮಕಾಶ್ಮೀರ ಪು ೫೦)

ಎಂಬ ಪದ್ಯವನ್ನು ನೋಡಬಹುದು. ಸುಂದರವಾದ ಭಾವಗಳಿಗೆ ಸುಂದರತರವಾದ ಆಕಾರವನ್ನು ಕೊಡುವಾಗ ೬ ಮಾತ್ರೆಗಳ ಲಯ ಹಲವು ವೇಳೆ ಹಿತವಾಗಿ ಕಾಣುತ್ತದೆ.

ಬಾನ್ ಸರಸಿಯೊಳುಡುಗೊಂಚಲ
    ಬಿಳಿ ನೈದಿಲ ಮಾಲೆ,
ಶಶಿಯಂಚೆಯು ಮುಲರಡವಿಯೊ-
    ಳೀಜಾಡುವ ಲೀಲೆ
ಕಲ್ತೊಟ್ಟಿಲ ತೊರೆ ಹಾಡುವ
    ಮೃದುಮಂಜುಳಗಾನ
ನೋಡಾಲಿಸು ಕೋಡಿ ಬೀಳಲು
    ಹೃದಯದ ಸುಮ್ಮಾನ

ಎಂಬ ಶ್ರೀ ಪು. ತಿ. ನರಸಿಂಹಾಚಾರ್ಯರ ಕಾವ್ಯಖಂಡವನ್ನಾಗಲಿ (ಹಣತೆ. ಪು. ೧೧) ಅವರದೇ ಆದ

ದಾನವಪ್ಪತ ಮೇದಿನಿಯಂ
    ದಂಷ್ಟ್ರಾಗ್ರದೊಳಿರಿಸಿ,
ಭೂದಾರಂ ಪಾತಾಳವ-
    ನುಳಿದೆದ್ದನೊ ಎನಿಸಿ
ದೂರದಿಗಂತದೊಳೊಪ್ಪಿದೆ
    ರವಿಮಂಡಿತಶೃಂಗಂ
ನೀಲಾಚಲಮುದ್ದೀಪಿತ
    ಪೂರ್ವೋದಧಿಸಂಗಂ

ಎಂದು ಆರಂಭವಾಗುವ 'ನವೋದಯಂ' ಎಂಬ ಕವಿತೆಯನ್ನಾಗಲಿ(ಮಾಂದಳಿರು. ಪು೩೪) ಓದುತ್ತಿರುವಾಗ ಆ ಲಯದ ಸೊಗಸು ಬಹು ಸುಖಕರವಾಗಿರುತ್ತದೆ.

'ಶ್ರೀ' ಅವರ ಪದ್ಯದ ಎರಡೆರಡು ಸಾಲುಗಳನ್ನು ಒಂದು ಸಲಕ್ಕೆ ತೆಗೆದುಕೊಂಡು ಒಂದೊಂದನ್ನು ಎರಡು ಷಟ್ಕಲಗಳ ಎರಡೆರಡು ಪಾದಗಳಾಗಿ ವಿಂಗಡಿಸಿ ಅಂತ್ಯ ಪ್ರಾಸಕ್ಕೆ ಬದಲಾಗಿ ಆದಿ ಪ್ರಾಸವನ್ನು ಇಟ್ಟರೆ ಅದು 'ಧವಳ'ದ ಹಾಡಾಗಿ ಬಿಡುತ್ತದೆ. ಹೀಗೆಯೇ ಶ್ರೀ ಪುಟ್ಟಪ್ಪನವರ ಮತ್ತು ಶ್ರೀ

ನರಸಿಂಹಾಚಾರ್ಯರ ಮೇಲ್ಕಂಡ ಪದ್ಯಗಳಲ್ಲಿ ಎರಡು ಮತ್ತು ನಾಲ್ಕನೆಯ ಪಾದಗಳಂತ್ಯದಲ್ಲಿ ಇರುವ ಊನಗಣಗಳನ್ನು ಷಣ್ಮಾತ್ರೆಗಳ ಬೆಲೆಯನ್ನುಳ್ಳ ಪೂರ್ಣಗಣಗಳನ್ನಾಗಿ ಮಾಡಿಯೋ, ಇಲ್ಲವೇ ಹಿಗ್ಗಲಿಸಿಯೋ ಅಂತ್ಯಪ್ರಾಸಕ್ಕೆ ಪ್ರತಿಯಾಗಿ ಆದಿಪ್ರಾಸವನ್ನು ಸೇರಿಸಿದರೆ 'ಧವಳ'ದ ಹಾಡು ಬರುತ್ತದೆ. ಹೊಸಗನ್ನಡದ ಈ ಮಟ್ಟುಗಳನ್ನು ಧವಳದ ಪ್ರಭೇದವೆಂದಾಗಲಿ ಅಂತ್ಯಪ್ರಾಸ ಸಹಿತ ಧವಳವೆಂದಾಗಲಿ ಕರೆಯಬಹುದು. ರನ್ನನ ಕಾಲದಿಂದಲೂ ರೂಢಿಯಲ್ಲಿದ್ದ ಧವಳವು ಕಾಲಸಾಗರದಲ್ಲಿ ಕಣ್ಮರೆಯಾಗಿದ್ದು ನಮ್ಮ ಕಾಲದ ಕವಿಸೃಷ್ಟಿಗೆ ಹೇಗೋ ಗೋಚರವಾಗಿ ಕೊಂಚ ರೂಪಾಂತರಗೊಂಡಿದ್ದರೂ ಮೂಲ ಸ್ವಭಾವವನ್ನು ನೀಗಿಕೊಳ್ಳದೆ ಪುನರುಜ್ಜೀವನಗೊಂಡು ಶ್ರವಣ ಸುಖದಾಯಿಯಾಗಿ ರಾಜಿಸುತ್ತಿದೆ.

## ಕೆಲವು ಗಾದೆಗಳು

ಸೃಷ್ಟಿ ಯಾವುದೂ ಸ್ಥಿರವಲ್ಲ, ಶಾಶ್ವತವಲ್ಲ. ಸೃಷ್ಟಿಯ ಕಲ್ಪನೆಯಲ್ಲಿಯೇ ಲಯದ ಭಾವ ಅಡಗಿದೆ. ಸೃಷ್ಟಿ ಲಯವಾಗುವುದೆಂದರೆ ಮಾರ್ಪಾಡಾಗುವುದು. ಈ ಮಾರ್ಪಾಡು ಎಲ್ಲ ವಸ್ತುಗಳ ಲಕ್ಷಣ; ಅದರಲ್ಲಿಯೂ ಚೇತನ ವಸ್ತುಗಳ ಮುಖ್ಯ ಲಕ್ಷಣವೇ ಮಾರ್ಪಾಡು ಎನ್ನಬಹುದು. ಸತ್ವದಲ್ಲಿಯೊ, ಸಾಮಗ್ರಿಯಲ್ಲಿಯೊ, ಸ್ವಭಾವದಲ್ಲಿಯೊ, ಸ್ವರೂಪದಲ್ಲಿಯೊ, ಆಕಾರದಲ್ಲಿಯೊ, ವ್ಯಾಪಾರದಲ್ಲಿಯೊ ಪ್ರತಿಕ್ಷಣವೂ ಮಾರ್ಪಡುತ್ತಿರುವುದೇ ಚೇತನ ಪದಾರ್ಥದ ಮುಖ್ಯಲಕ್ಷಣ. ಭಾಷೆ ಸಚೇತನ. ಪ್ರತಿಯೊಂದು ಜೀವಂತ ಭಾಷೆಯೂ ಕಾಲಕಾಲಕ್ಕೆ ಮಾರ್ಪಡುತ್ತ ಹೋಗುತ್ತದೆ. ಮಾತುಗಳ ರೂಪ, ಅರ್ಥ; ಮಾತುಗಳ ಜೋಡಣೆ, ಅನ್ವಯ— ಇವುಗಳಲ್ಲಿ ಮಾರ್ಪಾಡನ್ನು ಕಾಣುತ್ತೇವೆ. ಉದಾಹರಣೆಗೆ —'ನಾರು' ಎನ್ನುವ ಕನ್ನಡ ಮಾತನ್ನು ತೆಗೆದುಕೊಳ್ಳೋಣ. ನಾರು ಎನ್ನುವುದರ ಹಳಗನ್ನಡರೂಪ 'ನಾಱು' ಅಥವಾ 'ನಱು'; ಇದರ ಅರ್ಥ ವಾಸನೆ, ಗಂಧ. ಇದರಿಂದ ಬರುವ 'ನಾತ' ಎಂಬ ಮಾತಿಗೂ ವಾಸನೆ ಎಂದು ಅರ್ಥ. ಬರುಬರುತ್ತ ನಾರು, ನಾತ ಎನ್ನುವುದಕ್ಕೆ 'ದುರ್ಗಂಧ' ಎಂದು ಅರ್ಥ ಬಂದು ಬಿಟ್ಟಿತು. ಹೀಗೆಯೇ ಕಂಪು, ಗಬ್ಬು ಎನ್ನುವುದೂ. ನರು, ಕಂಪು ಈ ಮಾತುಗಳ ಮೂಲಾರ್ಥವನ್ನು ಒತ್ತಿಹೇಳುವುದಕ್ಕಾಗಿಯೊ ಎಂಬಂತೆ 'ನರುಗಂಪು' ಎಂಬ ಸಮಾಸ ಪದ ಏರ್ಪಟ್ಟು ಪ್ರಯೋಗಕ್ಕೆಬಂತು. ನರುಗಂಪು ಎಂದರೆ ಸುವಾಸನೆ. ಹೀಗೆ ಕನ್ನಡದಲ್ಲಿ ಎಷ್ಟೊ ಮಾತುಗಳು ರೂಪದಲ್ಲಿಯೂ ಅರ್ಥದಲ್ಲಿಯೂ ಕಾಲಕಾಲಕ್ಕೆ ಮಾರ್ಪಾಡು ಹೊಂದಿವೆ. ಇಲ್ಲಿ ವಿಚಾರಿಸ ತೊಡಗಿರುವುದು ಇಂಥ ಬಿಡಿಮಾತುಗಳನ್ನು ಕುರಿತಲ್ಲ. ಕೆಲವು ವಾಕ್ಯಗಳ ಸ್ವರೂಪ, ಅರ್ಥ ಹೇಗೆ ಕಾಲಕಾಲಕ್ಕೆ ಮಾರ್ಪಡುತ್ತವೆ ಎಂಬ ವಿಚಾರವನ್ನು ಕುರಿತು.

**ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆ:-** ಈ ನಿರ್ಧಾರ ವಾಕ್ಯವನ್ನು ಕೆಲವರು ಪ್ರಶ್ನರೂಪಕ್ಕೆ ತಿರುಗಿಸಿ "ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೇ?" ಎಂದು ಪ್ರಯೋಗಿಸುತ್ತಾರೆ. ಈ ಎರಡೂ ಪ್ರಯೋಗಗಳು ಅರ್ಥದಲ್ಲಿ ಬಹಳ ಭಿನ್ನವಾದುವು. "ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆ" ಎಂಬುದರಲ್ಲಿ ಒಂದು ದೃಢ ವಿಶ್ವಾಸ ಇದೆ. ಒಂದೊಂದು ಜೀವಕ್ಕೂ ಒಂದೊಂದು ಬಗೆಯ ಊಟವನ್ನು ದೇವರು ಕಲ್ಪಿಸಿದ್ದಾನೆ ಎಂಬ ಗಟ್ಟಿ ನಂಬಿಕೆ ಇದೆ. "ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೇ?" ಎಂಬ ಪ್ರಶ್ನ ವಾಕ್ಯದ ಅರ್ಥ ಆಶಯಗಳೇ ಬೇರೆಯಾಗಿ ಬಿಡುತ್ತವೆ. ಸಕಲ ಸೃಷ್ಟಿಗೆಲ್ಲ ಅನ್ವಯಿಸುವ ಮೊದಲ ವಾಕ್ಯಸ್ವರೂಪದ ವ್ಯಾಪ್ತಿ ಈ ಎರಡನೆಯ ವಾಕ್ಯಸ್ವರೂಪದಲ್ಲಿ ಸಂಕೋಚವಾಗಿ ಮಾನವ ಪ್ರಪಂಚಕ್ಕೆ ಮಾತ್ರ ಅಡಕವಾಗುತ್ತದೆ. ಈ ಎರಡನೆಯ ವಾಕ್ಯರೂಪದ ಅರ್ಥ ದೇವರು ಮನುಷ್ಯನಿಗೆ ಹುಲ್ಲು ತಿನ್ನಿಸುವುದಿಲ್ಲ; ಹಾಲು, ಹಣ್ಣು, ಹಲ್ವ ಕೊಡುತ್ತಾನೆ ಎಂದಾಗುತ್ತದೆ. ಮೊದಲ ವಾಕ್ಯರೂಪದಲ್ಲಿ ಬರುವ 'ಹುಲ್ಲು' ಎಂಬ ಮಾತಿಗೆ ಅರ್ಥ ಹಸು ತಿನ್ನುವ ಹುಲ್ಲು ಎಂದು ಮಾತ್ರವಲ್ಲ; ಎಲ್ಲ ಪ್ರಾಣಿಗಳ ಊಟ, ಆಹಾರ, ಗ್ರಾಸ ಎಂದು. ಹೀಗೆ ವಿಶಾಲಾರ್ಥದಲ್ಲಿ ಹೊರಟ ಒಂದು ವಾಕ್ಯಸ್ವರೂಪ ಹೇಗೆ ಮಾನವನ ಸ್ವಾರ್ಥ ದೃಷ್ಟಿಯಿಂದ ಸಂಕುಚಿತಾರ್ಥಕ್ಕೆ ಕುಗ್ಗಿತು ಎನ್ನುವುದನ್ನು ಇಲ್ಲಿ ನೋಡುತ್ತೇವೆ.

**ಶಿವಪೂಜೆಯಲ್ಲಿ ಕರಡಿಗೆ ಬಿಟ್ಟಂತೆ-** ಒಂದು ಸಂದರ್ಭಕ್ಕೆ ಹೊಂದದ, ಅನುಚಿತವಾದ ವಿಷಯದ ಪ್ರಸ್ತಾಪ ಯಾವುದಾದರೂ ಬಂದಾಗ ಈ ಗಾದೆ ಪ್ರಯೋಗವಾಗುತ್ತದೆ. ಶ್ರದ್ಧಾಪೂರಿತವಾದ, ಗಂಭೀರವಾದ ಶಿವಪೂಜಾಸಮಯದಲ್ಲಿ ಭಕ್ತರಿಗೆ, ಭಕ್ತಿಗೆ ಮಾತ್ರ ಎಡೆಯುಂಟು; ಚೆಲ್ಲಾಟದ ಕರಡಿಗೆ, ಅಧಿಕಪ್ರಸಂಗಿಗೆ ಎಡೆ ಇಲ್ಲ. ಈ ದೃಷ್ಟಿಯಲ್ಲೇನೊ ಈ ಗಾದೆ ಸರಿಹೋಯಿತು. ಆದರೆ ಕೆಲವರು ಈ ಗಾದೆಯ ಮೂಲ ಸ್ವರೂಪ ಬೇರೆಯೇ ಇದ್ದಿರಬಹುದೇ ಎಂದು ಎಣಿಸುತ್ತಾರೆ. **"ಶಿವಪೂಜೆಯಲ್ಲಿ ಕರಡಿಗೆಯನ್ನು ಬಿಟ್ಟಂತೆ":-** ಎಂಬುದು ಇದರ ಮೊದಲರೂಪ ಇರಬೇಕು ಎಂದು ಊಹಿಸುತ್ತಾರೆ. ಇದರ ಅರ್ಥವೇ ಬೇರೆಯಾಗುತ್ತದೆ. ಒಂದು ಸನ್ನಿವೇಶಕ್ಕೆ, ಕಾರ್ಯಕ್ಕೆ ಬೇಕಾದ ಮುಖ್ಯವಸ್ತು ಅಥವಾ ವಿಷಯವೇ ಲೋಪವಾದಾಗ ಇದನ್ನು ಪ್ರಯೋಗಿಸುತ್ತಿದ್ದರು ಎಂಬುದು ಇವರ ಊಹೆ. ಲಿಂಗಪೂಜೆಗೆ ಮುಖ್ಯವಾದದ್ದು ಕರಡಿಗೆ (ಕರಂಡಕಾ, ಭರಣಿ, ಡಬ್ಬಿ); ಅದೇ ಇಲ್ಲದಿದ್ದರೆ ಲಿಂಗವೆಲ್ಲಿ? ಪೂಜೆ ಎಲ್ಲಿ? ಈ ಗಾದೆಯ ಮೊದಲ ರೂಪ ಹೀಗಿತ್ತು ಎಂದು ಈಗ ನಾವು ಬುದ್ಧಿ ಚಾತುರ್ಯ ಬಲದಿಂದ ಮಾತ್ರ ಊಹಿಸಬೇಕಾಗಿದೆಯೇ ಹೊರತು ಯಾವ ಒಂದು ಸಂದರ್ಭದಲ್ಲಿಯೂ ಈ ಅರ್ಥದಲ್ಲಿ ಈ ರೂಪ ಪ್ರಯೋಗವಾಗಿರುವುದು ನಮಗೆ ಕಂಡುಬಂದಿಲ್ಲ.

**ಹಬ್ಬದ ದಿನವೂ ಹಳೆಯ ಗಂಡನೆ? :-** ಈ ಗಾದೆಯ ಮೂಲ ಸ್ವರೂಪ 'ಇದೇ ಆಗಿದ್ದ ಪಕ್ಷದಲ್ಲಿ ನಾವು ತಲೆತಗ್ಗಿಸಬೇಕಾದದ್ದೇ. ಒಟ್ಟು ಸ್ತ್ರೀಸಮೂಹಕ್ಕೇ ಕಳಂಕ ತರುವ ಈ ಗಾದೆಯ ಮೊದಲ ರೂಪ ಬೇರೆಯೇ ಆಗಿತ್ತು ಎನ್ನುವುದು ಕೆಲವರ ಎಣಿಕೆ. "ಹಬ್ಬದ ದಿನವೂ ಹಳೆಯ ಗಂಡನೆ?"

ಎನ್ನುವಾಗ ಆ ವಿಶೇಷ ದಿನದಲ್ಲಾದರೂ ಉತ್ಸವ ದಿನದಲ್ಲಾದರೂ ಹೆಂಗಸಿಗೆ ಹೊಸ ಗಂಡ ಬೇಡವೇ ಎಂಬ ಹಂಬಲ, ಬಯಕೆ ಅಡಗಿದೆ. ಹಳೆಯ ಗಂಡನ ಹಳಸಲೊಲುಮೆಯ ವೆಗಟಿನಿಂದ ಹೆಣ್ಣು ಹಬ್ಬದ ದಿನವಾದರೂ ಹೊಸಗಂಡನ ಹೊಸ ಒಲುಮೆಯನ್ನು ಬಯಸಿರಬೇಕು, ಬಯಸುತ್ತದೆ ಎನ್ನುವುದೇ ಈ ಗಾದೆಯ ಭಾವ. ಎಂದರೆ, ಯಾವ ಜೀವಕ್ಕೇ ಆಗಲಿ ಚಿರಪರಿಚಿತವಾದ ವಸ್ತುವಿನ ಬೇಸರ ಕಳೆಯಬೇಕಾದರೆ ಹೊಸದು ಏನಾದರೂ, ಅಪರಿಚಿತವಾದ್ದು ಏನಾದರೂ ಬೇಕು. ಇದೇನೋ ಸರಿ. ಆದರೆ ಸ್ತ್ರೀ ಸಮಾಜಕ್ಕೆ ಅಷ್ಟೇನೂ ಗೌರವಕರವಲ್ಲದ ಈ ಗಾದೆ ಜನರಲ್ಲಿ ಮೊದಲಿಂದ ಹೀಗೆಯೇ ಬಳಕೆಯಾಗುತ್ತಿತ್ತೆ? ಹಾಗಲ್ಲದಿದ್ದರೆ, ಇದರ ಮೂಲ ಸ್ವರೂಪ ಏನಿದ್ದಿರಬಹುದು? **ಹಬ್ಬದ ದಿನವೂ ಹಳೆಯ ಗಂಡೇ?** ಎನ್ನುವುದು ಮೂಲರೂಪ ಎಂಬುದು ಕೆಲವರ ಊಹೆ. ಇದರ ಅರ್ಥವೇ ಬೇರೆ. ಪ್ರತಿನಿತ್ಯದ ಕಷ್ಟಕಾರ್ಪಣ್ಯಗಳಿಂದ ಕೊರಗುವುದು ಸದಾ ಇದ್ದೇ ಇರುತ್ತದೆ. ಈ ಪೇಚಾಟ ಗೋಳಾಟಗಳಿಂದ ಬಿಡುಗಡೆ ಹೊಂದಿ, ಹಬ್ಬದ ದಿನವಾದರೂ ಸಂತೋಷಪಡಬಾರದೆ? ಅಳುಮೋರೆ ಹೋಗಿ ನಗುಮುಖವಾಗಬಾರದೆ? ಹಳೆಯ ಗಂಡು ಹಬ್ಬದ ಹುರುಪಿನಿಂದ ಹೊಸ ಗಂಡು ಆಗಿ ತೋರಬಾರದೆ? ಸುಖ ಸಂತೋಷದಿಂದ ನಲಿದಾಡಬೇಕಾದ ಸಂದರ್ಭಗಳಲ್ಲಿಯೂ ಜೋಲುಮೋರೆ ಹಾಕಿಕೊಂಡು ಗೋಳಾಡುವ ಮನುಷ್ಯನನ್ನು ಕಂಡು, "ಹಬ್ಬದ ದಿನವೂ ಹಳೆಯ ಗಂಡೇ?" ಎಂದು ಪ್ರಯೋಗವಾಗುತ್ತಿದ್ದ ಈ ಗಾದೆ, ಅರ್ಥ ಸಂದರ್ಭಗಳೇ ಮಾರ್ಪಟ್ಟು ಹೋಗಿ, ಸ್ತ್ರೀ ಸಮೂಹಕ್ಕೇ ಕಳಂಕ ತರುವ "ಹಬ್ಬದ ದಿನವೂ ಹಳೆಯ ಗಂಡನೆ?" ಎಂಬ ರೂಪವನ್ನು ತಾಳಿಬಿಟ್ಟಿದೆ. ಈ ಊಹೆ ಸರಿಯಾಗಿದ್ದರೆ, ಮೊದಲ ರೂಪಕ್ಕೆ ಹೆಮ್ಮೆಯನ್ನೂ ಎರಡನೆಯ ರೂಪವಿಕಾರಕ್ಕೆ ನಾಚಿಕೆಯನ್ನೂ ಪಡಬೇಕು. ಆದರೆ ಈ ಊಹೆಯನ್ನು ಒಪ್ಪುವುದಕ್ಕೆ ಒಂದು ಅಡಚಣೆ ಇದೆ. 'ಹಬ್ಬದ ದಿನವೂ ಹಳೆಯ ಗಂಡನೇ ಎಂಬ ರೂಪ, ಅರ್ಥಗಳ ಸರಣಿಯ ಗಾದೆಯೇ ತೆಲುಗು ತಮಿಳು ಮೊದಲಾದ ಭಾಷೆಗಳಲ್ಲಿಯೂ ಇದೆ. ಇದಕ್ಕೆ ಕೆಲವರು ಈ ರೀತಿಯ ಸಮಾಧಾನವನ್ನೂ ಹೇಳುತ್ತಾರೆ— ಮಿಕ್ಕ ಕೆಲವು ಮಾತುಗಳ ಬಗ್ಗೆ ನಮಗೆ ತೋರಿಬರುವಂತೆ ಈ ಗಾದೆಯ ವಿಷಯದಲ್ಲೂ ಉಳಿದ ಭಾಷೆಗಳು ಕನ್ನಡದಿಂದ ಈ ಗಾದೆಯನ್ನು ತೆಗೆದುಕೊಂಡಿರಬಹುದು; ಹಾಗೆ ಆ ಭಾಷೆಗಳು ತೆಗೆದುಕೊಳ್ಳುವ ಹೊತ್ತಿಗಾಗಲೇ ಕನ್ನಡ ಗಾದೆಯ ಮೂಲ ಸ್ವರೂಪ ವಿಕಾರವಾಗಿರಬಹುದು.

**ವ್ಯಾಪಾರೋ.ದ್ರೋಹ ಚಿಂತನಂ:-** ಕೆಲವು ಗಾದೆಗಳು, ಉಕ್ತಿಗಳು ಹೀಗೆ ರೂಪ ವ್ಯತ್ಯಾಸ, ಅರ್ಥ ವ್ಯತ್ಯಾಸವಾಗುವುದು ಕನ್ನಡದಲ್ಲಿ ಮಾತ್ರವಲ್ಲ; ಕೆಲವು ಸಂಸ್ಕೃತ ವಾಕ್ಯಗಳೂ ಹೀಗೆ ಅಪಪ್ರಯೋಗಗೊಂಡಿವೆ. ಈ ಅಪಪ್ರಯೋಗ ಸಂಸ್ಕೃತವರಿಯದ ಕನ್ನಡ ಗಾವಿಲನಿಂದ ಮಾತ್ರವಾಗುತ್ತಿಲ್ಲ; ಸಂಸ್ಕೃತ ಪಂಡಿತರೂ ಅನಭ್ಯಾಸ, ಅಜ್ಞಾನಗಳ ಕಾರಣದಿಂದ ವಾಕ್ಯಗಳನ್ನು ತಪ್ಪಾಗಿ ಪ್ರಯೋಗಿಸುತ್ತಾರೆ. ಸಲ್ಲದ ನಾಣ್ಯ ಸಲ್ಲುವ ನಾಣ್ಯವನ್ನು ಅಟ್ಟಿ ವ್ಯಾಪಾರದಲ್ಲಿ ತಾನೇ ಓಡಾಡುವಂತೆ ಇಂಥ ಅಪಪ್ರಯೋಗಗಳು ಮೂಲ ಪ್ರಯೋಗಗಳನ್ನು ಕಣ್ಮರೆಮಾಡಿವೆ. ಉದಾಹರಣೆಗೆ—ವ್ಯಾಪಾರೋ ದ್ರೋಹ ಚಿಂತನಂ ಎಂಬ ಉಕ್ತಿಯನ್ನು ನೋಡೋಣ. ಯುದ್ಧದಲ್ಲೂ ಪ್ರೇಮದಲ್ಲೂ ಜಯಗಳಿಸಲು ಯಾವಮಾರ್ಗವಾದರೂ ಸರಿ ಎನ್ನುವಂತೆ ವ್ಯಾಪಾರದಲ್ಲಿ ಲಾಭ ಸಂಪಾದನೆಗಾಗಿ ದ್ರೋಹಮಾಡುವುದು ತಪ್ಪಲ್ಲ ಎನ್ನುವುದು ಈ ಉಕ್ತಿಯ ಅರ್ಥ. ಅದರಲ್ಲೂ ಕಾಳಸಂತೆಯ ತಾಂಡವನೃತ್ಯದ ಈ ಕಾಲದಲ್ಲಂತೂ ವ್ಯಾಪಾರದ ಪರಮ ಧರ್ಮವೇ ದ್ರೋಹವೆಂಬಂತೆ ಇದೆ. ಹಬ್ಬದ ದಿನವೂ ಹಳೆಯ ಗಂಡನೇ ಎಂಬ ಗಾದೆ ನಮ್ಮ ಸ್ತ್ರೀಸಮೂಹಕ್ಕೆ ಕಳಂಕ ತರುವಂತೆ, ಈ ಸಂಸ್ಕೃತೋಕ್ತಿಯೂ ನಮ್ಮ ವ್ಯಾಪಾರಿ ವರ್ಗಕ್ಕೇ ಕಳಂಕ ತರುವಂಥದಾಗಿದೆ. ವ್ಯಾಪಾರದಲ್ಲಿ ದ್ರೋಹವಿರುವುದು ಅನಿವಾರ್ಯ; ಅಷ್ಟೇ ಅಲ್ಲ, ದ್ರೋಹವಿದ್ದರೇ ವ್ಯಾಪಾರ ಎಂಬುದನ್ನು ಎಲ್ಲರೂ ಒಪ್ಪಿಕೊಂಡುಬಿಟ್ಟಂತೆ ತೋರುತ್ತದೆ. ಆದರೆ ಈ ಉಕ್ತಿ ಎಲ್ಲಿ ಬಂದಿದೆ? ಯಾವಾಗ ಬಂದಿದೆ? ಈ ವಾಕ್ಯದ ಪ್ರಾಮಾಣಿಕ ರೂಪ: **'ವ್ಯಾಪಾದೋ ದ್ರೋಹಚಿಂತನಂ'** ಎಂದು. ಅಮರದಲ್ಲಿ "ಮಿಥ್ಯಾದೃಷ್ಟಿರ್ನಾಸ್ತಿಕತಾ ವ್ಯಾಪಾದೋ ದ್ರೋಹಚಿಂತನಂ" ಎಂಬ ಪಂಕ್ತಿ ಬರುತ್ತದೆ. ವ್ಯಾಪಾದ ಎಂದರೆ ದ್ರೋಹಚಿಂತನೆ; ವ್ಯಾಪಾದ ಎಂದರೆ ನಾಶನ; ಹಾಳುಮಾಡುವುದು; ಹಾನಿ ಮಾಡುವುದು ಎಂದು ಅರ್ಥ. ಇದು ಹೋಗಿ ವ್ಯಾಪಾರೋ ದ್ರೋಹಚಿಂತನಂ ಎಂದು ವಿಕಾರರೂಪ ನಿಂತುಬಿಟ್ಟಿದೆ.

ಹೀಗೆಯೇ ಹುಡುಕುತ್ತ ಹೋದರೆ, ವಿಚಾರ ಮಾಡತೊಡಗಿದರೆ ರೂಪಗೆಟ್ಟ, ಅರ್ಥಗೆಟ್ಟ ಗಾದೆಗಳು, ಉಕ್ತಿಗಳು ಎಷ್ಟೋ ಸಿಕ್ಕಬಹುದು. ಈ ದೃಷ್ಟಿಯಿಂದ ನಮ್ಮ ಗಾದೆಗಳನ್ನೂ ಪ್ರಸಿದ್ಧ ವಾಕ್ಯಗಳನ್ನೂ ಅಭ್ಯಾಸ ಮಾಡುವುದು ಆವಶ್ಯಕ.

**ಕೆ. ವೆಂ. ರಾ.**

---

# ರಾಜ್ಯಾಭಿಯೋಗಿ ಕಲ್ಯಾಣಸ್ವಾಮಿ ಅಥವಾ ಅಮರ ಸುಳ್ಯದ ಕಾಟಕಾಯಿ

(ಡಿ. ಯನ್. ಕೃಷ್ಣಯ್ಯ. M. A; B. Ed. ಟೀಚರ್, ಸೆಂಟ್ರಲ್ ಹೈಸ್ಕೂಲ್, ಮಡಿಕೇರಿ, ಕೊಡಗು.)

ಕ್ರಿ. ಶ. 1836–37ನೇ ಇಸವಿ. ಕೊಡಗು ಬ್ರಿಟಿಷರ ಕೈವಶವಾಗಿ ಎರಡು ವರ್ಷಗಳ ಹತ್ತಿರವಾಗಿದ್ದಿತು. ಈ ಮಧ್ಯೆ ಅಪರಂಪರ ಸ್ವಾಮಿಯೆಂಬ ರಾಜ್ಯಾಭಿಯೋಗಿಯು ತಾನು ಕೊಡಗಿನ ಕೊನೆಯ ಅರಸು ವೀರರಾಜನ ದೊಡ್ಡ ತಂದೆ ಅಪ್ಪಾಜಿ ಅರಸನ ಪ್ರಥಮ ಪುತ್ರ ವೀರಪ್ಪ ಅರಸನೆಂದು ಹೇಳಿಕೊಂಡು ಕೊಡಗಿನ ಸಿಂಹಾಸನಕ್ಕೆ ತನ್ನ ಹಕ್ಕನ್ನು ಸ್ಥಾಪಿಸುವುದಕ್ಕೆ ಪ್ರಯತ್ನಪಟ್ಟಿದ್ದನು. ಆದರೆ ಈತನಿಗೆ ಕೊಡಗಿನಲ್ಲಿ ಹೆಚ್ಚಾಗಿ ಯಾರೂ ಸಹಾಯಕರಿಲ್ಲದ್ದರಿಂದ ಈತನ ಪ್ರಯತ್ನವು ಜಯಪ್ರದವಾಗಲಿಲ್ಲ. ಕೊಡಗು ಸರಕಾರದವರು ಈತನನ್ನು ಸುಲಭವಾಗಿ ಸೆರೆಹಿಡಿದು ಕಾರಾಗೃಹದಲ್ಲಿಟ್ಟರು.

ಇದಾಗಿ ಕೆಲವು ತಿಂಗಳುಗಳ ನಂತರ ಇನ್ನೊಬ್ಬ ರಾಜ್ಯಾಭಿಯೋಗಿಯು ತಲೆಯೆತ್ತಿದನು. ಈತನ ಹೆಸರು ಕಲ್ಯಾಣಸ್ವಾಮಿ. ಕಲ್ಯಾಣ ಸ್ವಾಮಿಯು ತಾನು ಅಪ್ಪಾಜಿ ಅರಸನ ಎರಡನೆಯ ಮಗ ನಂಜುಂಡಪ್ಪನೆಂದೂ, ತಾನು ವೀರ ರಾಜನ ಕಾಲದಲ್ಲಿ ಸೆರೆಯಿಂದ ತಪ್ಪಿಸಿಕೊಂಡವನೆಂದೂ ಹೇಳಿಕೊಂಡನು. ಈತನು ಲಿಂಗಾಯತನಾಗಿದ್ದನು. ಈತನ ಅನುಯಾಯಿಗಳು ಕೊಡಗಿನಲ್ಲಿ ಯೆಡೆನಾಡಿನಲ್ಲಿಯೂ, ಗಡಿನಾಡಿನಲ್ಲಿಯೂ, ಏಳುಸಾವಿರ ಸೀಮೆಯಲ್ಲೂ ಹೆಚ್ಚಾಗಿದ್ದರು. ಈತನು ಕೊಡಗಿನಲ್ಲಿ ತನ್ನ ಆಳ್ವಿಕೆಯನ್ನು ಸ್ಥಾಪಿಸಲು ಒಳಸಂಚು ನಡೆಸುತ್ತಿದ್ದನು.

ಕಲ್ಯಾಣಸ್ವಾಮಿಯ ಒಳಸಂಚು ಯಶಸ್ವಿಯಾಗುವುದಕ್ಕೆ ಚೆಪ್ಪುಡಿರ ಪೊನ್ನಪ್ಪ ದಿವಾನನು ಅಡ್ಡಿಯಾಗಿದ್ದನು. ಆತನು ವೃದ್ಧನಾಗಿದ್ದನು. ಆತನ ಮಾತಿನಲ್ಲಿ ಜನರಿಗೆ ನಂಬಿಕೆ ಇತ್ತು. ಆತನು ಅಪ್ಪಾಜಿ ಅರಸನ ಮಕ್ಕಳು ಯಾರೂ ಜೀವಂತರಾಗಿಲ್ಲವೆಂದೂ ಇದ್ದಿದ್ದರೆ ವೀರರಾಜನ ಕಾಲದಲ್ಲಿಯೇ ಚೆನ್ನಬಸಪ್ಪನಂತೆ ಬ್ರಿಟಿಷರ ಮರೆಹೊಗುತ್ತಿದ್ದರೆಂತಲೂ ಕಲ್ಯಾಣಸ್ವಾಮಿಯ ಪಕ್ಷ ಸೇರಿದರೆ ಜನರಿಗೆ ಉಳಿಗಾಲವಿಲ್ಲವೆಂತಲೂ ಜನರಲ್ಲೆಲ್ಲಾ ಹೇಳಿದ್ದನು. ಈತನ ಮಾತಿನ ಮೇರೆಗೆ ಮಡಿಕೇರಿ ಮತ್ತು ಅದರ ದಕ್ಷಿಣದ ನಾಡಿನವರು ಯಾವ ಪಕ್ಷವನ್ನೂ ವಹಿಸದೆ ತಟಸ್ಥರಾಗಿದ್ದರು. ಈಗ ಯಾವುದಾದರೊಂದು ಕಾರಣದಿಂದ ಕೊಡಗಿನ ಕಮಿಷನರಿಗೂ, ಸೂಪರಿಂಟೆಂಡೆಂಟರಿಗೂ ಪೊನ್ನಪ್ಪನಲ್ಲಿ ಅವಿಶ್ವಾಸವುಂಟಾಗುವಂತೆ ಮಾಡಿದರೆ ಪೊನ್ನಪ್ಪನಿಗೆ ಜಿಗುಪ್ಸೆಯುಂಟಾಗಿ ಆತನು ರಾಜಿನಾಮೆ ಕೊಡುವನು. ಆಗ ಅವನ ಹೇಳಿಕೆಯಲ್ಲಿರುವಂಥ ಜನರೆಲ್ಲರೂ ಬ್ರಿಟಿಷರಿಗೆ ವಿರೋಧವಾಗಿ ನಿಲ್ಲುವರು ಎಂದು ಕಲ್ಯಾಣಸ್ವಾಮಿಯ ಕಡೆಯವರು ಯೋಚಿಸಿದರು. ಈ ಮೊದಲು ಸೂಪರಿಂಟೆಡೆಂಟನಾಗಿದ್ದ ಕ್ಯಾಪ್ಟನ್‌ಲೀಹಾರ್ಡಿ ಸಾಹೇಬನು ಪೊನ್ನಪ್ಪ ದಿವಾನನ ಹೇಳಿಕೆಯಂತೆ ಕೆಲವು ಮುತ್ಸದ್ದಿಗಳನ್ನು ಕೆಲಸದಿಂದ ತೆಗೆದು ಹಾಕಿದ್ದನು. ಈಗ ಇವರು ಪೊನ್ನಪ್ಪನು ತಮ್ಮಮೇಲೆ ಚಾಡಿ ಹೇಳಿ ತಮ್ಮನ್ನು ಕೆಲಸದಿಂದ ವಜಾಮಾಡಿಸಿದನೆಂದೂ, ತಮಗೆ ತಿರುಗಿ ಕೆಲಸ ಕೊಡಿಸಬೇಕೆಂದೂ ಕಮಿಷನರ್‌ಸಾಹೇಬರಿಗೆ ಅರ್ಜಿ ಬರೆದುಕೊಂಡರು. ಇವರಿಗೆ ಕೆಲಸವು ಸಿಕ್ಕಿದರೆ ಪೊನ್ನಪ್ಪನಿಗೆ ಅವಮಾನವಾದಂತಾಗುತ್ತಿತ್ತು. ಇದಲ್ಲದೆ ಉತ್ತರ ಕೊಡಗು ಮಡಿಕೇರಿ ನಾಡುಗಳಲ್ಲಿ ಕಲ್ಯಾಣಸ್ವಾಮಿಗೆ ಸಹಾಯ ಮಾಡಬೇಕೆಂದು ಜನರಿಗೆ ಗುಟ್ಟಾಗಿ ಹೇಳುತ್ತಾ ಏಳುಸಾವಿರ ಸೀಮೆಯ ಹುಲಿಕುಂದ ನಂಜೈಯ್ಯನೂ, ಕುಂಬಳೆ ಸುಬ್ಬಯ್ಯನೂ, ಬೀರಣ್ಣ ಬಂಟನೂ ಸುತ್ತಾಡುತ್ತಿದ್ದರು.

ಇದೇ ಸಮಯದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಅಮರ ಸುಳ್ಯ ಪುತ್ತೂರು ಮಾಗಣೆಗಳ ಜನರಲ್ಲಿ ಬಹಳ ಅಸಮಾಧಾನವು ತಲೆದೋರಿದ್ದಿತು. ಕಂಪೆನಿ ಸರ್ಕಾರದವರು 1834ರಲ್ಲಿ ಕೊಡಗನ್ನು ಹಿಡಿಯುವ ವರೆಗೆ ಆ ಮಾಗಣೆಗಳು ಕೊಡಗು ರಾಜರ ಆಳ್ವಿಕೆಗೊಳಪಟ್ಟಿದ್ದವು. 1834ರ ನಂತರ ಕಂಪೆನಿ ಸರ್ಕಾರದವರು ಘಟ್ಟದ ಕೆಳಗಿನ ಮಾಗಣೆಗಳನ್ನು ಮಂಗಳೂರಿಗೆ ಸೇರಿಸಿ ದಕ್ಷಿಣ ಕನ್ನಡ ಜಿಲ್ಲೆಯನ್ನು ದೊಡ್ಡದು ಮಾಡಿದರು. ಕೊಡಗು ರಾಜರ ಆಳ್ವಿಕೆಯಲ್ಲಿ ಅಲ್ಲಿನ ಜನರು ತಾವು ಸರಕಾರಕ್ಕೆ ಕೊಡಬೇಕಾಗಿದ್ದ ತೆರಿಗೆಯನ್ನು ಧಾನ ರೂಪದಲ್ಲಿ ಕೊಡುತ್ತಿದ್ದರು. ಕೊಡಗಿನ ರೈತರೂ ಹಾಗೆ ತಮ್ಮ ಕಂದಾಯವನ್ನು ಪಾವತಿಮಾಡುತ್ತಿದ್ದರು. ಆದರೆ ದಕ್ಷಿಣ ಕನ್ನಡ ಜಿಲ್ಲೆಗೆ ಆ ಮಾಗಣೆಗಳು ಸೇರಿದ ಮೇಲೆ, ಅಲ್ಲಿನ ರೈತರೆಲ್ಲರೂ ತಮ್ಮ ತೀರ್ವೆಯನ್ನು ಹಣದರೂಪದಲ್ಲಿಯೇ ಕೊಡಬೇಕೆಂದು ಆ ಜಿಲ್ಲೆಯ ಕಲೆಕ್ಟರನು ಅಪ್ಪಣೆಮಾಡಿದನು. ಆಗಿನ ಕಾಲದಲ್ಲಿ ಹಣವನ್ನು ಒದಗಿಸಿಕೊಡುವುದು ಬಹಳ ಕಷ್ಟವಾಗಿದ್ದಿತು. ಸ್ವಲ್ಪ ಹಣಕ್ಕೆ ತುಂಬಾ ಧಾನ್ಯವನ್ನು ಕೊಡಬೇಕಾಗಿದ್ದಿತು. ಅಷ್ಟು ಹಣ ಸಿಕ್ಕಬೇಕಾದರೂ ತಾವು ಬೆಳೆದದ್ದನ್ನು ಸಾಹುಕಾರರಿಗೆ ಕೊಟ್ಟು ಹಣ ಪಡೆಯ ಬೇಕಾಗಿದ್ದಿತು. ಆ ಸಾಹುಕಾರರು ಇದೇ ಸಮಯವೆಂದು, ರೈತರು ಬೆಳೆದದ್ದನ್ನು ಅತಿ ಕಡಿಮೆ ಬೆಲೆಗೆ ಕೊಂಡುಕೊಂಡು, ರೈತರಿಗೆ ತೀರ್ವೆ ಕೊಟ್ಟನಂತರ ಜೀವನಕ್ಕೆ ಕಷ್ಟವಾಗುವ ಹಾಗೆ ಮಾಡಿಬಿಡುತ್ತಿ

ದ್ದರು. ಆದುದರಿಂದ ಕಂಪೆನಿಯವರ ಆಳ್ವಿಕೆಯಿಂದ ತಮಗೆ ಕೆಡುಕಾಯಿತೆಂದು ಅಲ್ಲಿನ ರೈತರು ತಿಳಿದು ಕಂಪೆನಿಯ ಆಳ್ವಿಕೆಯನ್ನು ತೆಗೆದುಹಾಕಬೇಕೆಂದು ಯೋಚಿಸಿಕೊಂಡಿದ್ದರು.

ಇವರಿಗೂ ಕಲ್ಯಾಣಸ್ವಾಮಿಯ ಕಡೆಯವರಿಗೂ ರಹಸ್ಯವಾಗಿ ದಿವಾನ್ ಲಕ್ಷ್ಮೀನಾರ್ಣಯ್ಯನು ಸಹಾಯ ಮಾಡುತ್ತಿದ್ದನೆಂದು ವರ್ತಮಾನವಿತ್ತು. ಆದರೆ ದಿವಾನ್ ಲಕ್ಷ್ಮೀನಾರ್ಣಯ್ಯನು ತನ್ನ ಮೇಲೆ ತನ್ನ ಶತ್ರುಗಳು ಅನ್ಯಾಯವಾಗಿ ಈ ಅಪವಾದವನ್ನು ಹೊರಿಸಿದರೆಂದು ಹೇಳುತ್ತಿದ್ದನು. ಕ್ರಿ. ಶ. 1836 ನೇ ಇಸವಿ ಡಿಸೆಂಬರ್ 5 ರಲ್ಲಿ ಅಪ್ಪಾಜಿ ಅರಸನ ಮಕ್ಕಳ ಕಡೆಯ ಇಬ್ಬರು ಕುದುರೆ ಸವಾರರು ಬಿಸಲೆ ಘಾಟಿನ ಕಡೆಗೆ ಹೋದರೆಂದೂ ಕೊಡಗಿನವರೆಲ್ಲರೂ ಅಪ್ಪಾಜಿ ಅರಸನ ಮಕ್ಕಳಿಗೆ ಸಹಾಯಮಾಡುವುದಕ್ಕೆ ಮಾತುಕೊಟ್ಟಿರುವರೆಂದೂ ಕ್ಯಾಪ್ಟನ್ ಲೀಹಾರ್ಡಿ ಸಾಹೇಬನಿಗೆ ದಿವಾನ್ ಲಕ್ಷ್ಮೀನಾರ್ಣಯ್ಯನು ಹೇಳಿದ್ದನು. ಆದರೆ ಆ ವರ್ತಮಾನವನ್ನು ತಂದಂಥ ಮಲ್ಲ ಎಂಬ ಸೇವಕನನ್ನು ಕ್ಯಾಪ್ಟನ್ ಲೀಹಾರ್ಡಿ ಸಾಹೇಬನು ತನ್ನ ಬಳಿಗೆ ಕಳುಹಿಸಬೇಕೆಂದು ಹೇಳಿ ಕಳುಹಿಸಿದ್ದರೂ ಲಕ್ಷ್ಮೀನಾರ್ಣಯ್ಯನು ಆತನನ್ನು ಸೂಪರಿಂಟೆಂಡೆಂಟನ ಹತ್ತಿರಕ್ಕೆ ಕಳುಹಿಸಲಿಲ್ಲ. ಮಲ್ಲನು ತಂದ ವರ್ತಮಾನದ ನಿಜಾಂಶವನ್ನು ಲಕ್ಷ್ಮೀನಾರ್ಣಯ್ಯನು ತಿಳಿಯುವುದಕ್ಕೆ ಪ್ರಯತ್ನ ಪಡಲಿಲ್ಲ. ಹರಿಕಾರ ಯಂಕಪ್ಪನು ತಂದಂಥ ವರ್ತಮಾನವನ್ನು ಲೀಹಾರ್ಡಿ ಸಾಹೇಬನಿಗೆ ತಿಳಿಸಲಿಲ್ಲ. ಕೊನೆಗೆ ಲಕ್ಷ್ಮೀನಾರ್ಣಯ್ಯನು ಸೂಪರಿಂಟೆಂಡೆಂಟ್ ಸಾಹೇಬನಿಗೆ ತಿಳಿಸಿದ ಸಂಗತಿಯನ್ನು ವಿಚಾರಮಾಡಿ ನೋಡಲು, ಆ ಸಂಗತಿಯು ಶುದ್ಧ ಸುಳ್ಳೆಂದು ತಿಳಿಯಿತು. ಇದಲ್ಲದೆ ಲಕ್ಷ್ಮೀನಾರ್ಣಯ್ಯನಿಗೂ ಸುಳ್ಯದಲ್ಲಿದ್ದ ಅವನ ತಮ್ಮ ರಾಮಪ್ಪಯ್ಯನಿಗೂ ನಡೆಯುತ್ತಿದ್ದ ಪತ್ರಗಳಲ್ಲಿದ್ದ ವಿಷಯಗಳು ಲಕ್ಷ್ಮೀನಾರ್ಣಯ್ಯನಿಗೆ ಒಳಸಂಚಿನ ಸಂಬಂಧ ಎಲ್ಲಾ ವಿಷಯಗಳು ತಿಳಿದಿರಬೇಕು—ಎಂಬ ಸಂಶಯಕ್ಕೆ ಎಡೆಕೊಡುತ್ತಿದ್ದುವು. ಈ ಸಂದರ್ಭಗಳಿಂದ ಕ್ಯಾಪ್ಟನ್ ಲೀಹಾರ್ಡಿಯು ದಿವಾನ್ ಲಕ್ಷ್ಮೀನಾರ್ಣಯ್ಯನನ್ನು ಕೆಲಸದಿಂದ ತತ್ಕಾಲಕ್ಕೆ ವಜಾಮಾಡಿ ವಿಚಾರಣೆ ನಡೆಸುತಲಿದ್ದನು. ದಿವಾನ್ ಲಕ್ಷ್ಮೀನಾರ್ಣಯ್ಯನು 1836ನೇ ಇಸವಿ ಡಿಸೆಂಬರ್ 5ನೇ ತಾರೀಕಿನಲ್ಲಿ ಸೂಪರಿಂಟೆಂಡೆಂಟ್ ಸಾಹೇಬನಿಗೆ ಬೇಗನೆ ಕೊಡಗಿನಲ್ಲಿ ಬ್ರಿಟಿಷರಿಗೆ ವಿರೋಧವಾಗಿ ದಂಗೆಯುಂಟಾಗುವುದೆಂದು ಹೇಳಿದಂತೆ ದಂಗೆ ಏಳಲಿಲ್ಲ. ಬೇರೆ ದಿವಾನರು ಆ ವರ್ತಮಾನವನ್ನು ಪ್ರಕಟಮಾಡಿದ್ದರಿಂದ ದಂಗೆಯು ನಿಂತುಹೋಯಿತು. ಅದರಿಂದ ತನ್ನ ಮಾತಿನಮೇಲೆ ಲೀಹಾರ್ಡಿ ಸಾಹೇಬನಿಗೆ ಅವಿಶ್ವಾಸವುಂಟಾಯಿತು-ಎಂದು ಲಕ್ಷ್ಮೀನಾರ್ಣಯ್ಯನೂ ಅವನ ಕಡೆಯವರೂ ಹೇಳುತ್ತಾಬಂದರು.

ಕಲ್ಯಾಣಸ್ವಾಮಿಯು ಕೊಡಗಿನಲ್ಲಿ ಜನರ ಅಭಿಪ್ರಾಯವನ್ನು ತಿಳಿಯುವುದಕ್ಕೋಸ್ಕರ ಸ್ವಲ್ಪ ಸುತ್ತಾಡಿದನು. ಆದರೆ ಏಳುಸಾವಿರ ಸೀಮೆಯವರು ಗಡಿನಾಡಿನವರು ಕೆಲವರು ಮಾತ್ರವಲ್ಲದೆ ಬೇರೆ ಯಾರೂ ಆತನಿಗೆ ಸಹಾಯಮಾಡುವುದಕ್ಕೊಪ್ಪಲಿಲ್ಲ. ಉಮ್ಮತ್ತು ನಾಡಿನ ಕೊಡಗರು ಮಾತ್ರ ಆತನು ತಮ್ಮ ನಾಡಿಗೆ ಬಂದಾಗ ಅವನನ್ನು ಗುಟ್ಟಾಗಿ ಅಡಗಿಸಿಟ್ಟಿದ್ದರು. ಅವರು, ಕಲ್ಯಾಣಸ್ವಾಮಿಯು ತಮ್ಮ ರಾಜರ ವಂಶಸ್ಥನೆಂದು ನಂಬಿ, ಅವನಲ್ಲಿ ಬಹಳ ಭಕ್ತಿಯನ್ನಿಟ್ಟು ಉಪಚರಿಸಿದರು. ಆದರೆ ಕಲ್ಯಾಣಸ್ವಾಮಿಯು ಕಂಪೆನಿ ಸರ್ಕಾರದವರಿಗೆ ವಿರೋಧವಾಗಿ ತನಗೆ ಸಹಾಯ ಮಾಡಬೇಕೆಂದು ಅವರನ್ನು ಕೇಳಲು ಅವರು ಅದಕ್ಕೆ ಒಪ್ಪಲಿಲ್ಲ. ದೇಶವೆಲ್ಲ ಬ್ರಿಟಿಷರ ಆಳ್ವಿಕೆಯಲ್ಲಿ ಶಾಂತಿಯಿಂದ ತುಂಬಿದೆಯೆಂತಲೂ, ಕಲ್ಯಾಣಸ್ವಾಮಿಯ ಉದ್ದೇಶವು ಸಫಲವಾಗಲಾರದೆಂದೂ ಅವರು ಆತನೊಡನೆ ಹೇಳಿದರು. ಅನಂತರ ಕಲ್ಯಾಣಸ್ವಾಮಿಯು ಅಲ್ಲಿಂದ ಹೊರಡುವುದಕ್ಕೆ ಇಷ್ಟಪಡಲು, ಅಲ್ಲಿನ ಜನರು ಅವನನ್ನು ಗುಟ್ಟಾಗಿ ವೈನಾಡಿಗೆ ತಲಪಿಸಿದರು. ಆದರೆ ಅಷ್ಟರಲ್ಲಿ ಕ್ಯಾಪ್ಟನ್ ಲೀಹಾರ್ಡಿ ಸಾಹೇಬನಿಗೆ ಹೇಗೋ ಕಲ್ಯಾಣಪ್ಪನು ಕೊಡಗಿನಿಂದ ತಪ್ಪಿಸಿಕೊಂಡು ಹೋದದ್ದು ತಿಳಿದು, ಅವನನ್ನು ಸೆರೆಹಿಡಿಯಲು ಸಿಪಾಯಿಗಳನ್ನು ಕಳುಹಿಸಿದ್ದನು. ಇಷ್ಟರಲ್ಲಿ ಕಲ್ಯಾಣಸ್ವಾಮಿಯು ವೇಷಬದಲಾಯಿಸಿ ಬೈತೂರಿಗೆ ತಲಪಿದ್ದನು. ಆ ಸಿಪಾಯಿಗಳು ಮಲಬಾರಿನ ಸಿಪಾಯಿಗಳ ಸಹಾಯದಿಂದ ಜನವರಿ ತಿಂಗಳ ಆದಿಭಾಗದಲ್ಲಿ ಕಲ್ಯಾಣಸ್ವಾಮಿಯನ್ನು ಬೈತೂರಿನಲ್ಲಿ ಸೆರೆಹಿಡಿದರು. ಅಲ್ಲಿಂದ ಆತನನ್ನು ಕೊಡಗಿಗಾಗಿ ಮೈಸೂರಿಗೆ ಹಿಡಿದುಕೊಂಡುಹೋಗಿ ಸೆರೆಯಲ್ಲಿಟ್ಟರು. ಕೊಡಗಿಗಾಗಿ ಆತನನ್ನು ಹಿಡಿದುಕೊಂಡು ಹೋಗುವಾಗ ಕೊಡಗಿನ ಜನರಲ್ಲಿ ಯಾವತರದ ಭಾವೋದ್ರೇಕಗಳೂ ಉಂಟಾಗಲಿಲ್ಲ.

ಕಲ್ಯಾಣಸ್ವಾಮಿಯನ್ನು ಸೆರೆಹಿಡಿದದ್ದರಿಂದ ಕೊಡಗಿನಲ್ಲಿ ಮತ್ತು ಅಮರ ಸುಳ್ಯದಲ್ಲಿದ್ದ ಆತನ ಅನುಯಾಯಿಗಳ ಒಳಸಂಚಿಗೆ ಯಾವ ವಿಘ್ನವೂ ಉಂಟಾಗಲಿಲ್ಲ. ಅವರು ಕೊಡಗಿನ ಸಿಂಹಾಸನಕ್ಕೆ ಅಪ್ಪಾಜಿ ಅರಸನ ಮಗನ ಹಕ್ಕನ್ನು ಬಹಿರಂಗವಾಗಿ ಸ್ಥಾಪಿಸುವುದಕ್ಕೆ ಕೊಡಗಿನಲ್ಲಿ ಮಾರ್ಚಿ 5ನೇ ತಾರೀಕು ಶಿವರಾತ್ರಿಯ ದಿವಸವೂ ಅಮರಸುಳ್ಯದಲ್ಲಿ ಯುಗಾದಿಯ ದಿವಸವೂ ದಂಗೆಯೇಳುವುದೆಂದು ನಿಶ್ಚೈಸಿದ್ದರು. ಆದರೆ ಅದಕ್ಕೆ ಮೊದಲು ಸೆರೆಹಿಡಿಯಲ್ಪಟ್ಟ ಕಲ್ಯಾಣಸ್ವಾಮಿಯ ಬದಲು, ಇನ್ನೊಬ್ಬ ವ್ಯಕ್ತಿಯನ್ನು ಅಪ್ಪಾಜಿ ಅರಸನ ಮಗನೆಂದು ಜನರ ಮುಂದಿಡಬೇಕಾಗಿದ್ದಿತು—ಏಕೆಂದರೆ ಅಮರ ಸುಳ್ಯದ ಜನರಿಗೆ ಕಲ್ಯಾಣಸ್ವಾಮಿಯನ್ನು ಸೆರೆಹಿಡಿದ ವರ್ತಮಾನವು ಹಬ್ಬಿರಲಿಲ್ಲ. ಅಲ್ಲಿನವರು ಬೇಗನೆ ಕಲ್ಯಾಣಸ್ವಾಮಿ

ತಮ್ಮ ಊರಿಗೆ ಬಂದು ತಮ್ಮ ರಾಜನಾಗುವನೆಂದು ನಂಬಿದ್ದರು. ಅಲ್ಲಿ ಕೆಲವರಿಗೆ ಮಾತ್ರವೇ ನಿಜಸ್ಥಿತಿಯು ಗೊತ್ತಿದ್ದಿತು. ಆದರೆ ಕಲ್ಯಾಣಸ್ವಾಮಿಯ ಪಾತ್ರವನ್ನು ವಹಿಸುವಂಥವನು ಸಿಕ್ಕುವುದು ಕಷ್ಟವಾಗಿತ್ತು. ಆತನ ವಯಸ್ಸು ಅಪ್ಪಾಜಿ ಅರಸನ ಎರಡನೆಯ ಮಗನು ಜೀವಿಸಿದ್ದರೆ ಎಷ್ಟು ವಯಸ್ಸಾಗುತಿತ್ತೋ ಅಷ್ಟಾಗಬೇಕಿದ್ದಿತು. ಆತನಿಗೆ ಹಾಲೇರಿ ಅರಸರ ಚರಿತ್ರೆಯೂ, ಕೊಡಗಿನ ವಿಸ್ತೀರ್ಣ, ಸ್ಥಿತಿಗತಿಗಳೂ ಚೆನ್ನಾಗಿ ತಿಳಿದಿರಬೇಕಿದ್ದಿತು. ಇದಲ್ಲದೆಯೆ ಆತನು ಕೊಡಗಿನವರಿಗೂ ಅಮರಸುಳ್ಯದವರಿಗೂ ಪರಿಚಿತನಲ್ಲದಿರಬೇಕಾಗಿದ್ದಿತು. ಕಲ್ಯಾಣಸ್ವಾಮಿಯ ಸ್ಥಾನಕ್ಕೆ ಮೊದಲು ಹುಲಿಕುಂದ ನಂಜೈಯ್ಯನನ್ನೂ ಅನಂತರ ಇನ್ನೊಬ್ಬ ಮನುಷ್ಯನನ್ನೂ ಆರಿಸಿದರು. ಹುಲಿಕುಂದ ನಂಜೈಯ್ಯನ ವಯಸ್ಸು ಹೆಚ್ಚಾಗಿದ್ದಿತು. ಇನ್ನೊಬ್ಬನ ಆಕಾರವು ಒಪ್ಪುವಂತದ್ದಿರಲಿಲ್ಲ. ಕೊನೆಗೆ ಏಳುಸಾವಿರ ಸೀಮೆಯ ಪುಟ್ಟ ಬಸಪ್ಪನೆಂಬೊಬ್ಬ ಜಂಗಮನನ್ನು ಕರೆದುಕೊಂಡು ಬಂದರು. ಈತನನ್ನು ಅಮರಸುಳ್ಯದಲ್ಲಿ ಒಬ್ಬ ರಾಮ ಗೌಡನೆಂಬುವನ ಮನೆಗೆ ಕರೆದುಕೊಂಡು ಹೋದರು. ಅಷ್ಟರ ವರೆಗೆ ಪುಟ್ಟ ಬಸಪ್ಪನಿಗೆ ತಾನು ವಹಿಸಬೇಕಾದ ಪಾತ್ರವು ತಿಳಿದಿರಲಿಲ್ಲ. ಆದರೆ ಅಂದಿನಿಂದ ಪುಟ್ಟ ಬಸಪ್ಪನು ಕಲ್ಯಾಣ ಸ್ವಾಮಿ ಅಥವಾ ನಂಜುಂಡರಸು ಎಂಬ ಹೆಸರಿನಿಂದ ಕೊಡಗಿನ ಸಿಂಹಾಸನಕ್ಕೆ ಹಕ್ಕುದಾರನೆನಿಸಿದನು.

ಅಮರಸುಳ್ಯದಲ್ಲಿ ಎಪ್ರಿಲ್ ೩ನೆಯ ತಾರೀಕು ಯುಗಾದಿಯ ದಿವಸ ದಂಗೆಯೇಳುವುದೆಂದು ನಿಶ್ಚೈಸಿದ್ದರೂ ಅದಕ್ಕಿಂತ ಎಂಟು ದಿವಸಗಳ ಮೊದಲೇ ಜನರು ದಂಗೆಯೆದ್ದರು. ಇದಕ್ಕೆ ಮಡಿಕೇರಿಯ ದಿವಾನ ಲಕ್ಷ್ಮೀನಾರ್ಣಯ್ಯನ ತಮ್ಮ ರಾಮಪ್ಪಯ್ಯನು ಈ ಒಳಸಂಚಿನ ವರ್ತಮಾನವನ್ನು ಮಂಗಳೂರಿನ ಕಲೆಕ್ಟರನಿಗೆ ತಿಳುಹಿಸುವನೆಂಬ ಹೆದರಿಕೆಯೇ ಕಾರಣವಾಗಿದ್ದಿತು. ರಾಮಪ್ಪಯ್ಯನು ತಾನು ದಿವಾನನ ತಮ್ಮನೆಂದು ಗರ್ವಿತನಾಗಿದ್ದು, ಅಮರಸುಳ್ಯದಲ್ಲಿ ತಾನೊಬ್ಬ ಅರಸನಂತೆ ವರ್ತಿಸುತ್ತಿದ್ದನಂತೆ. ಆತನು ತನ್ನನ್ನು ಹತ್ತೂರು ದೊರೆ ಅಥವಾ ರಾಜನೆಂದು ಕರೆಸಿಕೊಳ್ಳುತ್ತಿದ್ದನಂತೆ. ಅಮರ ಸುಳ್ಯದ ಜನರೆಲ್ಲರೂ ಈತನ ಹೇಳಿಕೆಯಂತೆ ನಡೆಯಬೇಕಿತ್ತು. ಇಲ್ಲದಿದ್ದರೆ ಈತನು ಬಲಾತ್ಕಾರದಿಂದ ಅವರ ಆಸ್ತಿಪಾಸ್ತಿಗಳನ್ನು ಕಿತ್ತುಕೊಳ್ಳುತ್ತಿದ್ದನು. ಇವನ ಮನೆಯಲ್ಲಿ ಇವನ ಮೈಗಾವಲಿಗೆ ದೃಢಕಾಯರಾದ ಕೆಲವು ಜನರನ್ನು ಇವನು ನೇಮಿಸಿಕೊಂಡಿದ್ದನು. ಇದಲ್ಲದೆ ಇವನಿಗೆ ಆಗಾಗ ವೀಳ್ಯದೆಲೆ ತಿನ್ನುವುದಕ್ಕೆ ಎಲೆ ಅಡಿಕೆಗಳನ್ನು ಜೋಡಿಸಿ ಮಡಿಸಿ ಕೊಡುವುದಕ್ಕೆ ಸುಬ್ರಾಯನೆಂಬ ಒಬ್ಬ ಸೇವಕನು ಹತ್ತಿರವೇ ಇರಬೇಕಿತ್ತು. ಹೀಗೆ ಈತನು ತನ್ನ ಅಧಿಕಾರವನ್ನು ನಡೆಸುತ್ತ ಇರಲು ಪುಟ್ಟಬಸಪ್ಪನು ಕಲ್ಯಾಣ ಸ್ವಾಮಿ ಅಥವಾ ನಂಜುಂಡರಸು ಎಂಬ ಹೆಸರಿನಿಂದ ಕೊಡಗು ಅಮರಸುಳ್ಯಗಳ ರಾಜ್ಯಕ್ಕೆ ಹಕ್ಕುದಾರನೆಂದು ಅಮರಸುಳ್ಯದಲ್ಲಿ ಪ್ರಕಟಿಸಿದನು. ಇದು ರಾಮಪ್ಪಯ್ಯನಿಗೆ ಸಮ್ಮತವಾಗಲಿಲ್ಲವೆಂದು ತೋರುತ್ತದೆ. ಹೇಗೂ ರಾಮಪ್ಪಯ್ಯನಿಗೆ ಅವನ ಅರಸುತನದಿಂದ ಶತ್ರುಗಳು ಹೆಚ್ಚಾಗುತ್ತ ಬಂದರು. ಆ ಊರಿನಲ್ಲಿದ್ದ ಒಬ್ಬ ರಾಮ ಗೌಡನೆಂಬವನು ಇವನ ಅಧಿಕಾರವನ್ನು ಮನ್ನಿಸಲಿಲ್ಲ. ಕೆಲವರು ಇವನ ಹೆಸರು ಸುಬ್ರಾಯನೆಂದು ಹೇಳುತ್ತಾರೆ. ರಾಮ ಗೌಡನು ಅಥವಾ ಸುಬ್ರಾಯನು ತುಂಬಾ ಭೂಸ್ಥಿತಿಯುಳ್ಳವನಾಗಿದ್ದು, ತನ್ನ ಗ್ರಾಮದಲ್ಲಿ ಒಬ್ಬ ಮುಖ್ಯಸ್ಥನಾಗಿದ್ದನು. ಆದರೂ ರಾಮಪ್ಪಯ್ಯನು ತನ್ನ ಕಡೆಯ ಜನರನ್ನು ಕಳುಹಿಸಿ ರಾಮ ಗೌಡನ ಆಸ್ತಿಪಾಸ್ತಿಗಳನ್ನು ಬಲತ್ಕಾರದಿಂದ ವಶಪಡಿಸಿಕೊಂಡು, ಆತನಿಂದ ಕರಾರಿಗೆ ರುಜು ಹಾಕಿಸಿಕೊಂಡನು. ಅಂದಿನಿಂದ ರಾಮ ಗೌಡನು ರಾಮಪ್ಪಯ್ಯನನ್ನು ನಿರ್ನಾಮಗೊಳಿಸಬೇಕೆಂದು ಹಟತೊಟ್ಟನು. ರಾಮ ಗೌಡನು ಮುಂದಾಳಾಗಿ ನಿಲ್ಲಲು ಎಲ್ಲರೂ ಆತನಿಗೆ ಸಹಾಯಕರಾದರು. ರಾಮ ಗೌಡನು ಉಪಾಯದಿಂದ ರಾಮಪ್ಪಯ್ಯನ ಮೈಗಾವಲಿನವರನ್ನೂ ವೀಳ್ಯದೆಲೆ ಮಡಿಸಿ ಕೊಡುವವನನ್ನೂ ತಮ್ಮ ಪಕ್ಷಕ್ಕೆ ಸೇರಿಸಿಕೊಂಡನು. ಇಷ್ಟರಲ್ಲಿ ರಾಮಪ್ಪಯ್ಯನು ತನಗೆ ವಿರೋಧಿಗಳು ಹೆಚ್ಚಾದುದನ್ನು ನೋಡಿ, ಅವರಿಗೆ ಬೆದರಿಕೆಯನ್ನುಂಟು ಮಾಡಬೇಕೆಂದು, ತಾನು ಅವರ ಒಳಸಂಚಿನ ವಿಷಯ ಮಂಗಳೂರಿನ ಕಲೆಕ್ಟರನಿಗೆ ತಿಳಿಸುವೆನೆಂದು ಹೇಳಿದನು. ಇದರಿಂದ ಆ ಒಳಸಂಚಿಗೆ ಸೇರಿದವರು ಹೇಗಾದರೂ ಮಾಡಿ ರಾಮಪ್ಪಯ್ಯನನ್ನು ಬೇಗನೆ ಕೊಲ್ಲಬೇಕೆಂದು ನಿಶ್ಚೈಸಿದರು. ಅದಕ್ಕೋಸ್ಕರ ಇವರೆಲ್ಲರೂ ಸೇರಿ ರಾಮಪ್ಪಯ್ಯನನ್ನು ಒಂದು ವಿವಾದ ತೀರಿಸುವುದಕ್ಕೆ ತಮ್ಮಲ್ಲಿಗೆ ಬರಬೇಕೆಂದು ಹೇಳಿ ಕಳುಹಿಸಿದರು. ಆ ದಿವಸ ರಾಮಪ್ಪಯ್ಯನ ಮೈಗಾವಲಿನವರೂ ವೀಳ್ಯದೆಲೆ ಮಡಿಸಿಕೊಡುವವನೂ ಆತನ ಜತೆಯಲ್ಲಿರಲಿಲ್ಲ. ಅದರ ಹಿಂದಿನ ರಾತ್ರಿ ಆತನ ಪತ್ನಿಗೆ ಬಹಳ ದುಸ್ವಪ್ನಗಳು ಬಿದ್ದಿದ್ದುವು. ಆದುದರಿಂದ ಆಕೆಯು ತನ್ನ ಪತಿಯನ್ನು ಹೋಗಬಾರದೆಂದು ಬಹಳವಾಗಿ ತಡೆದಳು. ಆದರೆ ರಾಮಪ್ಪಯ್ಯನು ಅಹಂಕಾರಿಯಾಗಿದ್ದರೂ ಅಷ್ಟೇ ಶೂರನಾಗಿದ್ದನು. 'ಹುಟ್ಟಿದ ಮನುಷ್ಯನು ಒಮ್ಮೆಯೇ ಸಾಯುವನು. ಹೆಚ್ಚು ಬಾರಿ ಸಾಯುವುದಿಲ್ಲ'ಎಂದು ಹೇಳುತ್ತಾ ತನ್ನ ಹೆಂಡತಿಯ ಮಾತಿಗೆ ಗಮನ ಕೊಡದೆ, ಆತನು ಕುದುರೆಯನ್ನೇರಿ ತಾನು ಹೋಗಬೇಕಾಗಿದ್ದ ಸ್ಥಳಕ್ಕೆ ಹೊರಟನು. ಹಾಗೆ ಹೋಗುತ್ತಿರುವಾಗ ಕಾಂತಮಂಗಲವೆಂಬಲ್ಲಿ ಹಿಂದಿನಿಂದ ಯಾರೋ ಒಂದು ಕತ್ತಿಯಿಂದ ಅವನಿಗೆ ಒಂದು ಪೆಟ್ಟು ಹಾಕಿದರು. ರಾಮಪ್ಪಯ್ಯನು ಆ ಪೆಟ್ಟನ್ನು ಸಹಿಸಿಕೊಂಡು, ಮದುವೆಯ ಗದ್ದೆ

ಯೆಂಬಲ್ಲಿಗೆ ಕುದುರೆಯನ್ನು ಓಡಿಸಿಕೊಂಡು ಹೋದನು. ಆದರೆ ಅಲ್ಲಿ ಹೋದೊಡನೆ ಅವನ ಶತ್ರುಗಳು ಅವನನ್ನು ಸೆರೆ ಹಿಡಿದು ಕೊಂದುಬಿಟ್ಟರು. ಸಾಯುವುದಕ್ಕೆ ಸ್ವಲ್ಪ ಮೊದಲು ರಾಮಪ್ಪಯ್ಯನು "ತನ್ನನ್ನು ಹೀಗೆ ಮೋಸದಿಂದ ಕೊಲ್ಲಬಾರ ದಿತ್ತು. ತನಗೆ ನಿಜಸ್ಥಿತಿ ಹೇಳಿದ್ದರೆ ತಾನು ಧೈರ್ಯದಿಂದ ಯುದ್ಧಮಾಡಿ ಸಾಯುತ್ತಿದ್ದೆ"–ಎಂದನಂತೆ. ಅಮರಸುಳ್ಯದ ರೈತರು ರಾಮಪ್ಪಯ್ಯನನ್ನು ಕೊಂದ ಬಳಿಕ ತಾವು ಒಂದು ದೊಡ್ಡ ಹುಲಿಯನ್ನು ಕೊಂದುಬಿಟ್ಟೆವು, ಇನ್ನೇನು ಕಂಪೆನಿ ಸರ್ಕಾರದ ಆಳ್ವಿಕೆಯನ್ನು ಸುಲಭವಾಗಿ ಕೊನೆಗಾಣಿಸುವೆವು ಎಂದು ಅಹಂಕಾರದಿಂದ ತುಂಬಿದರು. ಅವರ ಜತೆಗೆ ಸುತ್ತು ಮುತ್ತಲಿನ ಗ್ರಾಮಗಳ ಜನರೂ ಸೇರಿದರು. ಪುಟ್ಟಬಸಪ್ಪನು ಅಥವಾ ಕಲ್ಯಾಣಸ್ವಾಮಿಯು ಕೊಡಗಿನ ರಾಜನೆಂದು ಈಗ ಬಹಿರಂಗವಾಗಿ ಕರೆಯಲ್ಪಟ್ಟನು. ಇವನ ಪಕ್ಷದ ಅನೇಕ ಜನರಿಗೆ ಸರಿಯಾದ ಆಯುಧಗಳೇ ಇರಲಿಲ್ಲ. ಕೈಗೆ ಸಿಕ್ಕಿ ದ್ದನ್ನು ಹಿಡಿದುಕೊಂಡಿದ್ದರು. ಇವರಲ್ಲಿ ಕೆಲವರನ್ನು ಕುರಿತು ಒಬ್ಬ ಕವಿಯು 'ಕೊತ್ತಳಿಗೆ ಪಿಡಿದ ಭಟರೊಂದು ಸಾಲಿನಲಿ' ಎಂದರೆ ತೆಂಗಿನಮರದ ಸೋಗೆಯ ಕಾಂಡಗಳನ್ನು ಹಿಡಿದ ಸೈನಿಕರು, ಒಂದು ಸಾಲಿನಲ್ಲಿ ನಿಂತಿದ್ದರು—ಎಂದು ವರ್ಣಿ ಸಿದ್ದನು. ಕೆಲವರು ಕೈಯಲ್ಲಿ ಕಲ್ಲುಗಳನ್ನು ಹಿಡಿದುಕೊಂಡಿ ದ್ದರಂತೆ. ಕಲ್ಯಾಣಸ್ವಾಮಿಯು ಬೆಳ್ಳಾರೆಗೆ ಹೋಗಿ ಅಲ್ಲಿ ಖಜಾನೆಯಲ್ಲಿದ್ದ ಹಣವನ್ನೆಲ್ಲಾ ಸ್ವಾಧೀನಪಡಿಸಿಕೊಂಡನು. ಅನಂತರ ಬೆಳ್ಳಾರೆಯಿಂದ "ರಾಜಭಕ್ತಿಯುಳ್ಳ ತನ್ನ ಪ್ರಜೆ ಗಳೆಲ್ಲರೂ ಆಯುಧ ಸಹಿತವಾಗಿ ಅಲ್ಲಿಗೆ ಬಂದು ತನ್ನನ್ನು ಸೇರಬೇಕೆ"ಂದು ಇಸ್ತಿಹಾರುಗಳನ್ನು ಹೊರಡಿಸಿದನು. ಈ ಇಸ್ತಿಹಾರುಗಳು ಘಟ್ಟದ ಬುಡದಲ್ಲಿದ್ದ, ಚೆಂಬು ಪೆರಾಜೆ ಗ್ರಾಮಗಳಿಗೆ ತಲಪಿದೊಡನೆ, ಅಲ್ಲಿನ ರೈತರೆಲ್ಲರೂ ತಮ್ಮ ಅಧಿಕಾರಿಗಳ ಸಮೇತವಾಗಿ ಹೊರಟು ಆಯುಧಪಾಣಿಗಳಾಗಿ ಬೆಳ್ಳಾರೆಗೆ ಹೋಗಿ, ದಂಗೆಗಾರರೊಡನೆ ಸೇರಿಕೊಂಡರು. ಇಸ್ತಿಹಾರಿನ ಪ್ರತಿಗಳು ತಾವುನಾಡು ಬೇಂಗುನಾಡುಗಳಿಗೆ ತಲಪಿದವು. ಅಲ್ಲಿನ ಜನರು ಕಲ್ಯಾಣಸ್ವಾಮಿಯ ಪಕ್ಷ ವಹಿಸ ಬೇಕೆಂಬುವಷ್ಟರಲ್ಲಿ ನಾಲ್ಕು ನಾಡಿನ ಸುಭೇದಾರ್ ಮಾದೈ ಯ್ಯನು ಅಲ್ಲಿಗೆ ಹೋಗಿ ಅವರನ್ನು ತಡೆದನು. ಇಷ್ಟರಲ್ಲಿ ಎಂದರೆ ಮಾರ್ಚಿ 31ರಲ್ಲಿ ಇಸ್ತಿಹಾರಿನ ಪ್ರತಿಯೊಂದು ಮಡಿಕೇರಿಯಲ್ಲಿದ್ದ ಸೂಪರಿಂಟೆಂಡೆಂಟನ ಕೈಗೂ ಸೇರಿತು. ಆ ವರ್ತಮಾನವು ಅಮರ ಸುಳ್ಯದ ದಂಗೆಯನ್ನು ಕುರಿತು ಅವ ನಿಗೆ ತನ್ನ ಕೈಸೇರಿದ ಮೊದಲನೆಯ ವರ್ತಮಾನವಾಗಿದ್ದಿತು.

ಆದರೆ ಅಮರ ಸುಳ್ಯದಲ್ಲಿ ಕಲ್ಯಾಣಸ್ವಾಮಿಯ ಹೆಸರಿ ನಲ್ಲಿ ರಾಜ್ಯಾಭಿಯೋಗಿಯು ತಲೆಯೆತ್ತಿರುವನೆಂಬ ವರ್ತ ಮಾನವನ್ನು ಮಡಿಕೇರಿಯ ಜನರು ಮೊದಲು ನಂಬಲಿಲ್ಲ. ಅದಕ್ಕೆ ಎರಡುಮೂರು ತಿಂಗಳುಗಳ ಮೊದಲು ನಿಜವಾದ ಕಲ್ಯಾಣಸ್ವಾಮಿಯು ಕೊಡಗಿನಲ್ಲಿ ಸುತ್ತಾಡಿದುದೂ, ಅವನು ಸೆರೆಹಿಡಿಯಲ್ಪಟ್ಟದ್ದೂ, ಮಡಿಕೇರಿಯ ಜನರಿಗೆ ಗೊತ್ತಿತ್ತು. ಆದುದರಿಂದ ಈಗ ಯಾರೂ ನಿಜವಾಗಿ ತಲೆಯೆತ್ತಿರಲಾರರು. ಈ ವರ್ತಮಾನವನ್ನು ದಿವಾನ್‌ಲಕ್ಷ್ಮೀನಾರಾಯಣನ ವಿರೋ ಧಿಗಳು ಅವನಿಗೆ ಇನ್ನಷ್ಟು ಕೆಡುಕುಂಟುಮಾಡಲು ಹರಡಿರ ಬೇಕೆಂದು ಅವರು ಯೋಚಿಸಿದರು. ಈ ಸಮಯದಲ್ಲಿ ದಿವಾನ್ ಲಕ್ಷ್ಮೀನಾರಾಯಣನು ಕಲ್ಯಾಣಸ್ವಾಮಿಗೆ ಒಳಗಿಂ ದೊಳಗೆ ಸಹಾಯಮಾಡುತ್ತಿದ್ದನೆಂಬ ಅಪಾದನೆಯ ಮೇರೆಗೆ ಮೈಸೂರಿನಲ್ಲಿದ್ದ ಕೊಡಗಿನ ಕಮಿಷನರು ಲಕ್ಷ್ಮೀನಾರಾಯಣ ನನ್ನು ಕೆಲಸದಿಂದ ವಜಾಮಾಡಿ ವಿಚಾರಣೆಗೆ ಒಳಪಡಿಸಿ ದ್ದನು. ಲಕ್ಷ್ಮೀನಾರಾಯಣನು ಮಾರ್ಚಿ ಎಪ್ರಿಲ್ ತಿಂಗಳು ಗಳಲ್ಲಿ ಪ್ರಾರಂಭವಾದ ಒಳಸಂಚಿನ ವಿಷಯ ತನಗೆ ಗೊತ್ತಿ ದ್ದರೂ, ಸುಪರಿಂಟೆಂಡೆಂಟನಿಗೆ ತಿಳುಹಿಸಲಿಲ್ಲವೆಂಬುದು ಆತನ ಮೇಲೆ ಹೊರಿಸಿದ ಒಂದು ಅಪರಾಧವಾಗಿದ್ದಿತು. ಆದರೆ ಅದಕ್ಕೆ ಲಕ್ಷ್ಮೀನಾರಾಯಣನು ತಾನು ಡಿಸೆಂಬರಿನಲ್ಲಿ ದಂಗೆಯುಂಟಾಗುತ್ತದೆಂದು ಹೇಳಿದ್ದನ್ನು, ಬೇರೆ ದಿವಾನರು ಪ್ರಕಟಮಾಡಿ, ದಂಗೆಯೇಳದಂತೆ ಮಾಡಿ, ತನ್ನ ಮೇಲೆ ಸುಪರಿಂಟೆಂಡಂಟನಿಗೆ ಅವಿಶ್ವಾಸವುಂಟಾಗುವಂತೆ ಮಾಡಿ ದರು. ಈಗಲೂ ತಾನು ಒಳಸಂಚಿನ ವಿಷಯ ಹೇಳಿದರೆ ಹಾಗೆಯೇ ಆಗಬಹುದೆಂದು ಯೋಚಿಸಿ ತಾನು ಹೇಳಲಿಲ್ಲ. ಆದರೆ ತನ್ನ ತಮ್ಮ ರಾಮಪ್ಪಯ್ಯನಿಗೆ ಮಂಗಳೂರಿನ ಅಧಿ ಕಾರಿಗಳಿಗೆ ಈ ವಿದ್ರೋಹದ ವಿಷಯ ತಿಳಿಸುವುದಕ್ಕೆ ಬರೆ ದಿದ್ದೆನು ಎಂದು ಉತ್ತರಕೊಟ್ಟನು. ಅಂತೂ ಲಕ್ಷ್ಮೀನಾರಾ ಯಣನ ವಿಚಾರಣೆಯು ನಡೆದು, ಪಂಚಾಯತದಾರರು ಆತನನ್ನು ನಿರ್ದೋಷಿಯೆಂದು ತೀರ್ಮಾನಿಸಿದರು. ಆದರೆ ಕಂಪೆನಿ ಸರ್ಕಾರದವರು ಮಾತ್ರ ಆತನನ್ನು ಸರಕಾರಿ ಉದ್ಯೋಗದಿಂದ ವಜಾಮಾಡಿದಂತೆ ತೋರುತ್ತದೆ.

ಮಡಿಕೇರಿಯ ಜನರು ಕಲ್ಯಾಣಸ್ವಾಮಿಯ ಇಸ್ತಿಹಾರ ನ್ನು ಮೊದಲು ನಂಬದಿದ್ದರೂ ಎಪ್ರಿಲ್ ಎರಡನೆಯ ತಾರೀಖಿ ನಲ್ಲಿ ಚೆಂಬು ಪೆರಾಜೆಯ ರೈತರು, ಪುಟ್ಟಬಸಪ್ಪನ ಜನರನ್ನು ಸೇರಿಕೊಂಡರೆಂದೂ ಪುಟ್ಟಬಸಪ್ಪನು ಬಿಸಿಲೇ ಘಾಟಿಗಾಗಿ ಕೊಡಗಿಗೆ ಬರುವನೆಂದೂ ಕೊಡಗಿನ ಉತ್ತರದ ಉಕ್ಕಡ ಗಳನ್ನು ಪುಟ್ಟಬಸಪ್ಪನ ಸೈನಿಕರು ವಶಪಡಿಸಿಕೊಂಡಿರುವ ರೆಂದೂ ವರ್ತಮಾನ ಕೇಳಿ ಸುಪರಿಂಟೆಂಡೆಂಟ್ ಸಾಹೇಬನು ಗಾಬರಿಯಾದನು. ಆತನು ತತ್‌ಕ್ಷಣವೇ ಕೋಟೆಯಲ್ಲಿದ್ದ ಸಿಪಾಯಿಗಳನ್ನೂ ಸೈನ್ಯಾಧಿಕಾರಿಗಳನ್ನೂ ಏಳುಸಾವಿರ ಸೀಮೆ ಯ ಕಡೆಗೆ ಕಳುಹಿಸಿದನು. ದಿವಾನ್ ಬೋಪುವನ್ನೂ ಕೆಲವು ಕೊಡಗರೊಡನೆ ಈ ಸೈನ್ಯದೊಡನೆ ಕಳುಹಿಸಿಕೊಟ್ಟನು.

ಇಷ್ಟರ ವರೆಗೆ ಕೊಡಗಿನ ಮುಖ್ಯ ಉದ್ಯೋಗಸ್ಥರಲ್ಲನೇಕರಿಗೆ ಕ್ಯಾಪ್ಟನ್ ಲೀಹಾರ್ಡಿ ಸಾಹೇಬನಿಗೆ ತಮ್ಮ ಪ್ರಾಮಾಣಿಕತೆಯ ಮೇಲೆ ವಿಶ್ವಾಸವಿಲ್ಲವೆಂದು ತಿಳಿದು, ಮನಸ್ಸು ನೊಂದುಕೊಂಡಿದ್ದಿತು. ಇದು ಲೀಹಾರ್ಡಿ ಸಾಹೇಬನಿಗೆ ತಿಳಿದು, ಕೊಡಗಿನವರೆಲ್ಲರೂ ಪುಟ್ಟಬಸಪ್ಪನ ಪಕ್ಷವಹಿಸಿದರೆ ದಂಗೆಯನ್ನು ಮುರಿಯುವುದಕ್ಕೆ ದೊಡ್ಡ ಸೈನ್ಯವು ಬೇಕಾಗಬಹುದೆಂದು ತಿಳಿದು, ಅವರೊಡನೆ ಬುದ್ಧಿವಂತಿಕೆಯಿಂದ ವರ್ತಿಸಿದನು. ಮಡಿಕೇರಿ ಕೋಟೆಯಲ್ಲಿದ್ದ 36ನೇ ರೆಜಿಮೆಂಟನ್ನು ಉತ್ತರ ಕೊಡಗಿಗೆ ಕಳುಹಿಸಿ, ಕೋಟೆಯ ಕಾವಲಿಗೆ ಕೊಡಗರನ್ನೇ ನೇಮಿಸಿದನು. ಹೀಗೆ ತಮ್ಮಲ್ಲಿ ವಿಶ್ವಾಸವಿಟ್ಟದ್ದರಿಂದ ಎಲ್ಲಾ ನಾಡುಗಳ ಮುಖ್ಯಸ್ಥರು ತಾವೂ ತಮ್ಮನಾಡಿನ ರೈತರೂ ಈ ಕಾಟಕಾಯಿಯಲ್ಲಿ ಬ್ರಿಟಿಷರ ಪಕ್ಷದಿಂದ ಕಾದುವುದಕ್ಕೆ ಸಿದ್ಧರಾಗಿರುವೆವೆಂದು ಒಂದು ಅರ್ಜಿಯನ್ನು ಸುಪರಿಂಟೆಂಡೆಂಟ್ ಸಾಹೇಬನಿಗೆ ಕೊಟ್ಟರು.

ಈ ಮಧ್ಯೆ ಪುಟ್ಟಬಸಪ್ಪನೂ, ಅವನ ಅನುಯಾಯಿಗಳೂ ಕೊಡಗಿನವರಿಗೆ ಹಿಂದಿನ ರಾಜಮನೆತನದಲ್ಲಿದ್ದ ಭಕ್ತಿಯನ್ನು ತೋರಿಸಬೇಕೆಂದೂ ಕೊಡಗನ್ನು ಸ್ವತಂತ್ರವಾಗಿ ಮಾಡುವುದಕ್ಕೆ ಸಿಕ್ಕುವ ಸಂದರ್ಭವನ್ನು ಕಳೆದುಕೊಳ್ಳಬಾರದೆಂದೂ ಇಸ್ತಿಹಾರುಗಳನ್ನು ಕಳುಹಿಸಿದರು. ಭೂಮಿ ಕಂದಾಯವನ್ನು ಮೂರು ವರ್ಷಗಳ ವರೆಗೆ ಎತ್ತುವುದಿಲ್ಲವಾಗಿಯೂ ದಕ್ಷಿಣಕನ್ನಡದಲ್ಲಿ ಉಪ್ಪು ಮತ್ತು ಹೊಗೆಸೊಪ್ಪು ಮಾರಾಟದ ಗುತ್ತಿಗೆಯನ್ನು ತೆಗೆದುಬಿಡುವುದಾಗಿಯೂ ಭರವಸೆಕೊಟ್ಟರು. ಬೇರೆ ದೇಶಗಳಲ್ಲಿ ಬ್ರಿಟಿಷರ ಅಧಿಕಾರವು ಅಡಗಿಹೋಗಿದೆಯೆಂದೂ, ಕಾಶಿಗೆ ಕಳುಹಿಸಲ್ಪಟ್ಟ ವೀರರಾಜನು ಅಲ್ಲಿಂದ ತಪ್ಪಿಸಿಕೊಂಡು ಬಂದು ತಮ್ಮ ಪಾಳೆಯದಲ್ಲಿರುವನೆಂದೂ, ವರ್ತಮಾನವನ್ನು ಹರಡಿದರು. ಆದರೆ ಕೊಡಗಿನಲ್ಲಿ ಈ ವರ್ತಮಾನಗಳಿಂದ ಯಾವ ಪರಿಣಾಮವೂ ಉಂಟಾಗಲಿಲ್ಲ.

ಕ್ಯಾಪ್ಟನ್ ಲೀಹಾರ್ಡಿ ಸಾಹೇಬನು 36ನೇ ರೆಜಿಮೆಂಟನ್ನು ಕೆಲವು ಕೊಡಗರ ಸಮೇತ ಉತ್ತರದ ಗಡಿಗೆ ಕಳುಹಿಸಿದನು. ಪುಟ್ಟಬಸಪ್ಪನು ಬಿಸಿಲೆ ಘಟ್ಟವನ್ನು ಹತ್ತಿ ಏಳುಸಾವಿರ ಸೀಮೆಗೆ ಬರುವನೆಂಬ ವರ್ತಮಾನವು ಹರಡಿತ್ತು. ಅದಕ್ಕೋಸ್ಕರ 36ನೇ ರಿಜಿಮೆಂಟು ಮತ್ತು ಬೋಪು ದಿವಾನನೂ ಆತನ ಕಡೆಯವರೂ ಸೋಮವಾರಪೇಟೆ ದಾಟಿ ಶಾಂತಳ್ಳಿ ಎಂಬಲ್ಲಿಗೆ ಹೋದರು. ಶತ್ರುಗಳು ಬಿಸಿಲೆ ಘಟ್ಟದ ಮೇಲೆ ಒಂದು ಗುಡ್ಡದಲ್ಲಿದ್ದರು. ಆದರೆ ಪುಟ್ಟಬಸಪ್ಪನೂ ಅಮರಸುಳ್ಯದ ಅವನ ಅನುಯಾಯಿಗಳೂ ಅಲ್ಲಿರಲಿಲ್ಲ. ಆ ಗುಡ್ಡದ ಮೇಲಿದ್ದ ಶತ್ರುಗಳು ಇಂಗ್ಲಿಷರ ಸೈನ್ಯವನ್ನು ನೋಡಿ ಬಿಸಿಲೆ ಘಟ್ಟವನ್ನು ಇಳಿದು ಸುಬ್ರಹ್ಮಣ್ಯಕ್ಕೆ ಹೋದರು.

ಈ ಮಧ್ಯೆ ಪುಟ್ಟಬಸಪ್ಪನು ಅಥವಾ ಕಪಟ ಕಲ್ಯಾಣಸ್ವಾಮಿಯು ತನ್ನ ಜನರನ್ನು ಕರೆದುಕೊಂಡು ಪುತ್ತೂರಿಗೆ ಹೊರಟನು. ಅಮರ ಸುಳ್ಯದಲ್ಲಿ ಜನರು ಸರಕಾರದವರಿಗೆ ತಿರುಗಿಬಿದ್ದಿರುವರೆಂಬ ವರ್ತಮಾನವನ್ನು ಮಂಗಳೂರಿನಲ್ಲಿದ್ದ ಕಲೆಕ್ಟರನು ಕೇಳಿ ತನ್ನ ಶಿರಸ್ತೇದಾರನಾದ ಕರಣಿಕ ದೇವಪ್ಪಯ್ಯನನ್ನು ಕರೆದುಕೊಂಡು ಸಿಪಾಯಿಗಳ ಒಂದು ಸಣ್ಣ ಸೈನ್ಯವನ್ನು ತೆಗೆದುಕೊಂಡು ಬಂದಿದ್ದನು. ಅಲ್ಲಿ ಬಂದು ಕಚೇರಿಮಾಡಿ ಕೂತುಕೊಳ್ಳುವಷ್ಟರಲ್ಲಿ, ಪುಟ್ಟಬಸಪ್ಪನೂ ದೊಡ್ಡ ಬಸಪ್ಪನೂ ದೊಡ್ಡ ಸೈನ್ಯದೊಡನೆ ಪುತ್ತೂರಿಗೆ ಬಂದರೆಂಬ ವರ್ತಮಾನವನ್ನು ಕೇಳಿ ಕಲೆಕ್ಟರನು ಕುದುರೆ ಹತ್ತಿ ಮಂಗಳೂರು ಬಂದೋಬಸ್ತಿಗೆ ಹೋದನು. ಪುತ್ತೂರಿನಲ್ಲಿ ಕರಣಿಕ ದೇವಪ್ಪಯ್ಯನೂ ಇನ್ನು ಕೆಲವು ಸಿಪಾಯಿಗಳೂ ಇದ್ದರು. ಪುಟ್ಟ ಬಸಪ್ಪನು ಕಚೇರಿಗೆ ಬಂದು ಕಲೆಕ್ಟರನು ಕೂತುಕೊಳ್ಳುವ ಆಸನದಲ್ಲಿ ತಾನು ಕುಳಿತುಕೊಂಡನು. ಆತನ ಸುತ್ತಲೂ ಕತ್ತಿಗಳನ್ನೂ, ಕೋವಿಗಳನ್ನೂ ಕೊರಡೆಗಳನ್ನೂ ಹಿಡಿದುಕೊಂಡು ಸೈನಿಕರು ನಿಂತಿದ್ದರು. ಆಗ ಪುಟ್ಟಬಸಪ್ಪನು ಕರಣಿಕ ದೇವಪ್ಪಯ್ಯನನ್ನು ತನ್ನ ಮುಂದೆ ಎಳೆದು ತರಿಸಿ ಆತನನ್ನು ತನ್ನ ಕರಣಿಕನಾಗಬೇಕೆಂದು ಹೇಳಿದನು. ಅದಕ್ಕೆ ದೇವಪ್ಪಯ್ಯನು ಒಪ್ಪದಿರಲು, ಕಲ್ಯಾಣಸ್ವಾಮಿಯು ಸಿಟ್ಟಿನಿಂದ 'ನೀನು ಯಾರ ಜೊತೆಯಲ್ಲಿ ಮಾತನಾಡುತ್ತೀ, ನಮ್ಮ ಆಜ್ಞೆಗೆ ವಿರೋಧವಾಗಿ ನಡೆದರೆ ನಿನ್ನ ತಲೆ ಕಡಿಸಿಬಿಟ್ಟೇನು. ಈಗ ರಾಜ್ಯವು ನಮಗಾಯಿತು' ಎಂದು ಹೇಳಿ ಅವನನ್ನು ಪಹರೆಯಲ್ಲಿರಿಸಿದನು. ಕಲ್ಯಾಣ ಸ್ವಾಮಿಯ ಪರಿಚಾರಕರಲ್ಲಿ ಅನಂತು ಎಂಬವನೊಬ್ಬನಿದ್ದನು. ಅವನನ್ನು ದೇವಪ್ಪಯ್ಯನಿಗೆ ಮೊದಲೇ ಗೊತ್ತಿದ್ದಿತು. ದೇವಪ್ಪನು ಅನಂತುವನ್ನು ಕಂಡು ಕೊಂಕಣಿ ಭಾಷೆಯಲ್ಲಿ 'ತು, ಹಮಗಲೆ ಅಂತೂ ಪೂತು ಅನಂತುರೆ' ಎಂದರೆ ನೀನು ನಮ್ಮ ಅಂತೂ ಮಗ ಅನಂತುವೋ, ಎಂದು ಕೇಳಿದನು. ಆಗ ಅನಂತುವು ತಾನು ಕೊಡಗಿನ ರಾಜನ ಊಳಿಗದವನೆಂಬ ಅಹಂಕಾರದಿಂದ ದೇವಪ್ಪಯ್ಯನಿಗೆ 'ಮಹಾ ಸ್ವಾಮಿಯವರ ಅಪ್ಪಣೆಯಾದರೆ ತಲೆಕಡಿಸಿಬಿಟ್ಟೇನು' ಎಂದು ಉತ್ತರಕೊಟ್ಟನು. ಆದರೂ ದೇವಪ್ಪನು ಅವನಲ್ಲಿ ವಿಶ್ವಾಸವನ್ನು ಬೆಳೆಸಿ ತಾನು ಸೆರೆಯಿಂದ ತಪ್ಪಿಸಿಕೊಂಡು ಹೋಗುವ ಉಪಾಯವನ್ನು ಹುಡುಕುತ್ತಿದ್ದನು. ಕೊನೆಗೆ ಅವನು ನಂದಾವರದಲ್ಲಿ ಇಂಗ್ಲಿಷರಿಂದ ಮಲ್ಲಿಖಾನೆಯನ್ನು ಪಡೆಯುತ್ತಿದ್ದ ಲಕ್ಷ್ಮಪ್ಪ ಬಂಗರಾಜನು ಕಲ್ಯಾಣ ಸ್ವಾಮಿಗೆ ಸಹಾಯಮಾಡುವಂತೆ ತಾನು ಮಾಡಿಸುವೆನೆಂದು ಅನಂತು ಮೂಲಕ ಕಲ್ಯಾಣ ಸ್ವಾಮಿಗೆ ಹೇಳಿಸಿ ತಾನು ಬಿಡುಗಡೆಯನ್ನು ಹೊಂದಿದನು.

ಕಲ್ಯಾಣ ಸ್ವಾಮಿಯು ಪುತ್ತೂರನ್ನು ಸುಲಿಗೆಮಾಡಿ ಪಾಣೆಮಂಗಳೂರಿಗೆ ಹೋದನು. ಅಲ್ಲಿ ಲಕ್ಷ್ಮಪ್ಪ ಬಂಗರಸನು

ಕಲ್ಯಾಣಸ್ವಾಮಿಯ ದೊಡ್ಡ ಸೈನ್ಯವನ್ನು ನೋಡಿ ಬ್ರಿಟಿಷರ ಆಳ್ವಿಕೆಯು ತೀರಿತೆಂದು ಯೋಚಿಸಿ ಅವನ ಕಡೆ ಸೇರಿಕೊಂಡನು. ಅವನ ಸೈನಿಕರಿಗೆ ಊಟ ಉಪಚಾರಕ್ಕೆ ಬೇಕಾದ ಸಾಹಿತ್ಯಗಳನ್ನು ಒದಗಿಸಿಕೊಟ್ಟನು. ಕಲ್ಯಾಣ ಸ್ವಾಮಿಯು ಅಲ್ಲಿಂದ ಹೊರಟು ಬಂಟವಾಳಕ್ಕೆ ಬಂದು ಆ ಊರನ್ನುಸುಲಿಗೆ ಮಾಡಿದನು. ಅನಂತರ ಕಲ್ಯಾಣ ಸ್ವಾಮಿಯು ಮಂಗಳೂರಿಗೆ ಹೊರಟನು. ಹೋಗುವಾಗ ದಾರಿಯಲ್ಲಿ ಇವನ ಕಡೆಯ ಜನರು ಹೆಚ್ಚೆಚ್ಚಾಗುತ್ತಾ ಬಂದರು. ಆತನು ಮಂಗಳೂರಿಗೆ ಹೋಗುವಷ್ಟರಲ್ಲಿ ಅಲ್ಲಿದ್ದ ಇಂಗ್ಲಿಷ್ ಅಧಿಕಾರಿಗಳು ಪಟ್ಟಣವನ್ನು ಬಿಟ್ಟು ನದಿಯನ್ನುದಾಟಿ ಕನ್ನನೂರಿಗೆ ಹೋಗುವುದಕ್ಕೆ ಹಡಗನ್ನು ಕಾಯುತ್ತಿದ್ದರು. ಪುಟ್ಟಬಸಪ್ಪನು ಅಥವಾ ಕಲ್ಯಾಣ ಸ್ವಾಮಿಯು ತನ್ನ ಜನರೊಡನೆ ಸೆರೆಮನೆಗೆ ಹೋಗಿ ಅಲ್ಲಿದ್ದ ಕೈದಿಗಳನ್ನು ಸೆರೆಯಿಂದ ಬಿಡಿಸಿ ಅವರನ್ನು ಸೇರಿಸಿಕೊಂಡು ತಾಲೂಕು ಕಚೇರಿಗೆ ಹೋಗಿ ಖಜಾನೆಯನ್ನು ಒಡೆದು ಹಣವನ್ನು ತೆಗೆದುಕೊಂಡನು. ಇದಾದ ಮೇಲೆ ಅಲ್ಲಿದ್ದ ಇಂಗ್ಲಿಷ್ ಉದ್ಯೋಗಸ್ತರ ಮನೆಗಳಿಗೆಲ್ಲಾ ಬೆಂಕಿ ಕೊಡಿಸಿದನು. ಇದೇ ಸಮಯದಲ್ಲಿ ತಾನೂ ಒಬ್ಬ ರಾಜನಾಗಬಹುದೆಂದು ತೆಂಕುಂಬಳೆ ಕೋಟೆಯ ಹತ್ತಿರ ವಾಸವಿದ್ದ ಸುಬ್ರಾಯಹೆಗ್ಡೆ ಎಂಬವನು ಜನರನ್ನು ಸೇರಿಸಿ ಕಲ್ಯಾಣಸ್ವಾಮಿಯ ಸಹಾಯಕ್ಕೆ ಹೊರಟುಬಂದನು. ಇವನು ದಾರಿಯಲ್ಲಿ ಮಂಜೇಶ್ವರ, ಉಳ್ಳಾಲಗಳ ಮೂಲಕ ದಾಟುವಾಗ ಈ ಊರುಗಳ ಜನರು ಸುಬ್ರಾಯ ಹೆಗ್ಡೆಯ ಜನರಿಗೆ ಊಟ ಉಪಚಾರ ಮಾಡಿಸಿ ಉಡುಗೆಗಳನ್ನು ಕೊಟ್ಟು ತಮ್ಮ ಊರುಗಳನ್ನು ಕೊಳ್ಳೆಹೊಡೆಯದಂತೆ ಮಾಡಿಕೊಂಡರು. ಸುಬ್ರಾಯಹೆಗ್ಡೆಯು ಮಂಗಳೂರಿಗೆ ಹೊರಟ ಕೂಡಲೇ ಕುಂಬಳೆಯ ಅರಸನು ತನ್ನ ರಾಜ್ಯದಲ್ಲಿ ದಂಗೆ ಎಬ್ಬಿಸಿದ್ದಾರೆಂದು ತಲಚೇರಿಯಲ್ಲಿದ್ದ ಇಂಗ್ಲಿಷ್ ಅಧಿಕಾರಿಗೆ ಹೇಳಿ ಕಳುಹಿಸಿದನು. ಸುಬ್ರಾಯಹೆಗ್ಡೆಯು ಉಳ್ಳಾಲದಿಂದ ಮಂಗಳೂರಿಗೆ ಬರಬೇಕಾದರೆ ನೇತ್ರಾವತಿ ನದಿಯನ್ನು ದಾಟಿ ಬರಬೇಕಾಗಿತ್ತು. ಹಾಗೆ ದೋಣಿಯಲ್ಲಿ ದಾಟುತ್ತಿರುವಾಗ ಬೋಳಾರದಲ್ಲಿ ಕೆಲವು ಕಂಪೆನಿ ಸರ್ಕಾರದ ಸಿಪಾಯಿಗಳು ಗುಂಡುಹೊಡೆದು ದೋಣಿ ಸಮೇತ ಸುಬ್ರಾಯ ಹೆಗ್ಡೆಯನ್ನೂ, ಅವನ ಜನರನ್ನೂ ಮುಳುಗಿಸಿದರು. ಇವರಲ್ಲಿ ಕೆಲವರು ಮಾತ್ರ ಈಜಿ ತಮ್ಮ ಪ್ರಾಣರಕ್ಷಿಸಿಕೊಂಡರು. ಇದಾದ ಒಂದೆರಡು ದಿವಸಗಳಲ್ಲಿ ತಲಚೇರಿಯಿಂದ ಹೊರಟ ಸೈನ್ಯವೂ, ಬೆಂಗಳೂರಿನಿಂದ ಹೊರಟ ದಂಡೂ ಮಂಗಳೂರನ್ನು ತಲಪಲು, ಕಲ್ಯಾಣಸ್ವಾಮಿಯ ಸೈನ್ಯವು ಚದರಿ ಹೋಯಿತು. ಕಲ್ಯಾಣಸ್ವಾಮಿಯು ಸುಳ್ಯಕ್ಕೆ ಓಡಿಬಂದನು.

ಇತ್ತಲಾಗಿ ತಾವುನಾಡು, ಬೇಂಗುನಾಡುಗಳ ಜನರು ಸ್ವಲ್ಪ ದಿವಸಗಳ ವರೆಗೆ ಕಲ್ಯಾಣಸ್ವಾಮಿಯ ಪಕ್ಷವನ್ನು ವಹಿಸಬೇಕೋ, ಬೇಡವೋ ಎಂದು ಚಂಚಲ ಮನಸ್ಸಿನಿಂದ ಇದ್ದರು. ಇಷ್ಟರಲ್ಲಿ ಅವರಿಗೆ ವೀರರಾಜನು ಕಾಶಿಯಿಂದ ತಪ್ಪಿಸಿಕೊಂಡು ಸುಳ್ಯಕ್ಕೆ ಬಂದಿರುವನೆಂದೂ, ಹಿಂದುಸ್ಥಾನದಲ್ಲೆಲ್ಲಾ ಬ್ರಿಟಿಷರ ಆಳ್ವಿಕೆಯು ನಿಂತು ಹೋಯಿತೆಂದೂ ವರ್ತಮಾನವು ತಲಪಿತು. ಅದೇ ಸಮಯದಲ್ಲಿ ಗುಡ್ಡೆಮನೆ ಅಪ್ಪಯ್ಯನೆಂಬವನು ತಾವುನಾಡಿಗೆ ಬಂದು ವೀರರಾಜನು ಸುಳ್ಯದಲ್ಲಿರುವನೆಂದೂ, ತಾನು ಅವನನ್ನು ನೋಡಿರುವೆನೆಂದೂ ಹೇಳಿದನು. ಇದನ್ನು ಕೇಳಿ ತಾವುನಾಡಿನಿಂದ ನಾಲ್ಕುನಾಡಿನ ವರೆಗಿನ ಅನೇಕ ಮುಖ್ಯ ಗೃಹಸ್ಥರೂ, ಮಾಜಿ ಉದ್ಯೋಗಸ್ಥರೂ ಸೇರಿ ತಾವು ರಾಜನ ಪಕ್ಷ ವಹಿಸುವೆವೆಂದು ಸುಳ್ಯಕ್ಕೆ ಕಾಗದ ಬರೆದು ಕಳುಹಿಸಿದರು. ಹಾಗೆಯೇ ತಮ್ಮ ನಿಶ್ಚಯದ ಮೊದಲನೇ ಗುರುತಾಗಿ ತಮ್ಮನ್ನು ಅದುವರೆಗೆ ತಡೆದಿದ್ದ ಸುಭೇದಾರ್ ಮಾದಯ್ಯನನ್ನು ಹಿಡಿದು ಸುಳ್ಯಕ್ಕೆ ಕಳುಹಿಸಿ ವಿದ್ರೋಹಿಗಳಿಗೆ ಒಪ್ಪಿಸಿಬಿಟ್ಟರು.

ತಾವುನಾಡು, ಬೇಂಗುನಾಡು ಮತ್ತು ನಾಲ್ಕುನಾಡುಗಳಲ್ಲಿ ಜನರು ಕಲ್ಯಾಣ ಸ್ವಾಮಿಯ ಪಕ್ಷವನ್ನು ಸೇರಿದುದನ್ನು ನೋಡಿ ಕೊಡಗಿನವರೆಲ್ಲರೂ ತಮಗೆ ವಿರೋಧವಾಗಿ ನಿಂತರೆ ದಂಗೆಯನ್ನು ಅಡಗಿಸುವುದಕ್ಕೆ ಒಂದು ಸೈನ್ಯವೇ ಬೇಕಾಗಬಹುದೆಂದು ಹೆದರಿ ಲೀಹಾರ್ಡಿ ಸಾಹೇಬನು ಬೋಪು ದಿವಾನನನ್ನು ಆತನ ಜನರೊಡನೆ ಭಾಗಮಂಡಲಕ್ಕೆ ಕಳುಹಿಸಿದನು. ದಿವಾನ್ ಬೋಪುವು ಭಾಗಮಂಡಲಕ್ಕೆ ಹೋಗಿ ಅಲ್ಲಿನ ಜನರಿಗೆ ಕಲ್ಯಾಣ ಸ್ವಾಮಿಯು ಅಪ್ಪಾಜಿ ರಾಜನ ಮಗನಲ್ಲವೆಂದು ಮುಂತಾಗಿ ಹೇಳಿ ವಿದ್ರೋಹಿಗಳೊಡನೆ ಸೇರುವುದನ್ನು ತಡೆದನು. ಇತ್ತಲಾಗಿ ಲೀ ಹಾರ್ಡಿಸಾಹೇಬನು ಮಡಿಕೇರಿಯನ್ನು ಶತ್ರುಗಳ ಕೈಗೆ ಬೀಳಗೊಡದಂತೆ ಅಲ್ಲಿ 36 ನೇ ರೆಜಿಮೆಂಟು ಸೈನಿಕರನ್ನು ಇರಿಸಿ ತುಂಬಾ ಆಹಾರ ಸಾಮಗ್ರಿಗಳನ್ನು ಶೇಖರಿಸುವುದಕ್ಕೆ ತೊಡಗಿದನು.

ತಾವುನಾಡಿನ ಜನರು ವಿದ್ರೋಹಿಗಳ ಪಕ್ಷ ಸೇರಿರುವರೆಂಬ ವರ್ತಮಾನವನ್ನು ತಿಳಿದು ಎಡೆನಾಡು ಗಡಿನಾಡುಗಳ ಜನರು ತಾವೂ ದಂಗೆಯೆದ್ದರು. ಇವರ ಮುಖಂಡನು ಗುಡ್ಡೆಮನೆ ಅಪ್ಪಯ್ಯನಾಗಿದ್ದನು. ಇವರ ಜತೆಗೆ ಬಿಸಿಲೆ ಘಟ್ಟದ ಕಡೆಯಿಂದ ಸುಮಾರು 150 ಕನ್ನಡಿಗ ವಿದ್ರೋಹಿಗಳು ಬಂದು ಸೇರಿಕೊಂಡರು. ಇವರು ಒಟ್ಟಾಗಿ ಸುಮಾರು 1000 ಅಥವಾ 1500 ಮಂದಿ ಜನರಿದ್ದರು. ಇವರು ಉತ್ತರದ ಗಡಿ ಪಹರೆಗೆ ನೇಮಿಸಿದ 60 ಜನ ಕೊಡಗರನ್ನು ಸೆರೆಹಿಡಿದು ಮಡಿಕೇರಿಯನ್ನು ತಾವುನಾಡಿನವರ ಸಹಾಯದಿಂದ ಹಿಡಿದುಕೊಳ್ಳಬೇಕೆಂದು ಹೊರಟು ಬಂದರು. ಇವರ ಮುಖಂಡನಾದ ಗುಡ್ಡೆಮನೆ ಅಪ್ಪಯ್ಯನು, ತಾವುನಾಡಿನವರು ಮಡಿಕೇರಿಯನ್ನು ದಕ್ಷಿಣದಿಂದಲೂ,ಅಮರ ಸುಳ್ಯದವರು ಪಶ್ಚಿಮ

ದಿಂದಲೂ,ಎಡೆನಾಡಿನವರು ಉತ್ತರದಿಂದಲೂ.ಮುತ್ತಿಗೆಹಾಕಬೇಕೆಂದು ಏರ್ಪಡಿಸಿದ್ದನು. ಉತ್ತರ ಕೊಡಗಿನವರು ಅದೇ ಪ್ರಕಾರ ಹೊರಟು ಎಪ್ರಿಲ್ 16ನೇ ತಾರೀಕಿನ ದಿವಸ ಮಡಿಕೇರಿ ಸೋಮವಾರ ಪೇಟೆ ದಾರಿಯಲ್ಲಿ ಮಡಿಕೇರಿಯಿಂದ ನಾಲ್ಕು ಮೈಲಿಗಳ ದೂರದಲ್ಲಿ ಬಂದು ತಾವುನಾಡಿನವರಲ್ಲಿಗೆ ಕಳುಹಿಸಿದ ಬೇಹುಗಾರರ ದಾರಿಯನ್ನು ಕಾಯುತ್ತಿದ್ದರು. ಇವರು ದಂಗೆಯೆದ್ದ ವಿಚಾರವನ್ನು ಲೀಹಾರ್ಡಿ ಸಾಹೇಬನು ತಿಳಿದು ಮಡಿಕೇರಿಯಲ್ಲಿ ಮತ್ತು ಅದರ ಸುತ್ತುಮುತ್ತಲೂ ಬೋಪು ದಿವಾನನ ಸಂಗಡ ಹೋಗದೆ ಉಳಿದಿದ್ದ ಜನರನ್ನು ಸೇರಿಸಿ ವಿದ್ರೋಹಿಗಳನ್ನು ಎದುರಿಸಲು ಕಳುಹಿಸಿದನು. ಅವರು ಸಂಖ್ಯೆಯಲ್ಲಿ ಕಡಿಮೆಯಾಗಿದ್ದುದರಿಂದ ವಿದ್ರೋಹಿಗಳನ್ನು ಎದುರಿಸಲಿಕ್ಕಾಗಲಿಲ್ಲ. ಆದರೆ ವಿದ್ರೋಹಿಗಳು ನಡೆದುಬಂದ ದಾರಿಗಳನ್ನು ಆಕ್ರಮಿಸಿ ಹಿಂದಿನಿಂದ ಅವರಿಗೆ ತೊಂದರೆಯನ್ನು ಕೊಡಲಾರಂಭಿಸಿದರು. ಇಷ್ಟರಲ್ಲಿ ಈ ವಿದ್ರೋಹಿಗಳಿಗೆ ತಾವುನಾಡಿನಲ್ಲಿ ದಂಗೆಯೇಳುವ ಪ್ರಯತ್ನವು ಅಡಗಿಸಲ್ಪಟ್ಟಿತೆಂದು ತಿಳಿಯಲು ಇವರು 17ನೇ ತಾರೀಕಿನ ರಾತ್ರಿ ಲೀಹಾರ್ಡಿ ಸಾಹೇಬನಿಗೆ ತಮಗೆ ಕರುಣೆಯನ್ನು ತೋರಿಸುವುದಾದರೆ ತಾವು ಶರಣಾಗತರಾಗುತ್ತೇವೆಂದು ಹೇಳಿ ಕಳುಹಿಸಿದರು. ಲೀಹಾರ್ಡಿ ಸಾಹೇಬನು ಅದಕ್ಕೆ ಸಮ್ಮತಿಸಿ ಅವರಿಂದ ಕತ್ತಿ ಕೋವಿಗಳನ್ನು ಕಿತ್ತಿಟ್ಟುಕೊಂಡು ಅವರನ್ನು ಬಿಟ್ಟುಬಿಟ್ಟನು. ಆದರೆ ಮುಖಂಡರನ್ನು ಮಾತ್ರ ಹಿಡಿದು ಸೆರೆಯಲ್ಲಿಟ್ಟನು.

ನಾಲ್ಕುನಾಡು ತಾವುನಾಡುಗಳಿಗೆ ಪುಟ್ಟಬಸಪ್ಪನ ಇಸ್ತಿಹಾರಿನ ಪ್ರತಿಗಳು ತಲುಪಿದ ಹಾಗೆಯೇ ಬೆಪ್ಪುನಾಡಿಗೂ ತಲಪಿದವು. ಅಲ್ಲಿನ ಜನರು ಏನು ಮಾಡುವುದೆಂದು ತಿಳಿಯದೆ ಮಡಿಕೇರಿಗೆ ದಿವಾನರನ್ನು ಕಾಣುವುದಕ್ಕೆ ತಮ್ಮ ಮುಖಂಡರನ್ನು ಕಳುಹಿಸಿದರು. ದಿವಾನರು ಬೆಪ್ಪುನಾಡಿನ ಜನರನ್ನು ಅಮರ ಸುಳ್ಯದಲ್ಲಿ ದಂಗೆಯನ್ನು ಅಡಗಿಸುವುದಕ್ಕೆ ಬರುವಂತೆ ಹೇಳಿದರು.

ಕೊಡಗಿನಲ್ಲಿ ದಂಗೆಯೇಳುವದನ್ನು ನಿಲ್ಲಿಸಿದ ನಂತರ ಅಮರ ಸುಳ್ಯದಲ್ಲಿದ್ದ ವಿದ್ರೋಹಿಗಳನ್ನು ಅಡಗಿಸುವ ಕೆಲಸವೊಂದು ಉಳಿದಿತ್ತು. ಅಮರ ಸುಳ್ಯದ ವಿದ್ರೋಹಿಗಳೊಡನೆ ಕೆಲವು ನಾಲ್ಕುನಾಡಿನ ಜನರು ಸೇರಿದ್ದರು. ಇವರಲ್ಲಿ ಅನೇಕರು ಮಾಜಿ ಉದ್ಯೋಗಸ್ತರೂ,ದಿವಾನ್ ಬೋಪುವಿನ ಹತ್ತಿರ ಸಂಬಂಧಿಕರೂ ಆಗಿದ್ದರು. ಕ್ಯಾಪ್ಟನ್ ಲೀಹಾರ್ಡಿ ಸಾಹೇಬನು ಬೋಪು ದಿವಾನನೊಡನೆ ಸಿಪಾಯಿಗಳನ್ನು ತೆಗೆದುಕೊಂಡು ಸುಳ್ಯದ ದಾರಿಯಲ್ಲಿ ಸಂಪಾಜೆವರೆಗೆ ಬಂದನು. ಆದರೆ ಅಲ್ಲಿ ಶತ್ರುಗಳ ಸುಳುವೇ ಇರಲಿಲ್ಲ. ಸಂಪಾಜೆಯಲ್ಲಿರುವಾಗ ಲೀಹಾರ್ಡಿ ಸಾಹೇಬನಿಗೆ ವಿದ್ರೋಹಿಗಳು ಬಿಸಿಲೆ ಘಟ್ಟದ ಕಡೆಗೆ ಹೋಗಿರುವರೆಂಬ ವರ್ತಮಾನವು ಸಿಕ್ಕಿತು. ಸಂಪಾಜೆಯಿಂದ ಬಿಸಿಲೆ ಘಟ್ಟಕ್ಕೆ ಹೋಗುವ ಕಾಡುದಾರಿಗಳು ಸಹ ಸರಿಯಾಗಿರಲಿಲ್ಲ. ಹಾಗಾಗಿ ಲೀಹಾರ್ಡಿ ಸಾಹೇಬನು ಮಡಿಕೇರಿಗೆ ಹಿಂದಿರುಗಿ ಅಲ್ಲಿಂದ ಉತ್ತರ ದಿಕ್ಕಿನ ನಾಡುಗಳಿಗಾಗಿ ಬಿಸಿಲೆ ಘಟ್ಟದ ಬುಡಕ್ಕೆ ಬೋಪು ದಿವಾನ ಮತ್ತು ಸಿಪಾಯಿಗಳೊಡನೆ ಹೋದನು. ಅಲ್ಲಿಯೂ ಕಲ್ಯಾಣಸ್ವಾಮಿಯ ಅಥವಾ ಆತನ ಜನರ ಸುಳುವೇ ಕಾಣಲಿಲ್ಲ. ಆಗ ಲೀಹಾರ್ಡಿ ಸಾಹೇಬನಿಗೆ ಬೋಪು ದಿವಾನನು ವಿದ್ರೋಹಿಗಳು ಸಂಪಾಜೆಯಲ್ಲಿರುವರೆಂದು ತನಗೆ ಸಿಕ್ಕಿದ ವರ್ತಮಾನವನ್ನು ಹೇಳಿದನು. ಲೀಹಾರ್ಡಿ ಸಾಹೇಬನು ಒಡನೆ ಹಿಂತಿರುಗಿ ಮಡಿಕೇರಿಗೆ ಬಂದು ಕಡಮಕಲ್ಲು ಮಾರ್ಗವಾಗಿ ಸಂಪಾಜೆಗೆ ಹೋದನು· ಆದರೆ ಆಗಲೂ ಅಲ್ಲಿ ವಿದ್ರೋಹಿಗಳು ಕಂಡುಬರಲಿಲ್ಲ. ಅಲ್ಲಿಂದ ಲೀಹಾರ್ಡಿ ಸಾಹೇಬನು ಮಡಿಕೇರಿಗೆ ಹಿಂತಿರುಗಿ ಬಂದನು. ಆಗ ಪೊನ್ನಪ್ಪ ದಿವಾನನು ಲೀಹಾರ್ಡಿ ಸಾಹೇಬನಿಗೆ ಬೋಪು ದಿವಾನನ ಹತ್ತಿರ ಸಂಬಂಧಿಕರು ಕೆಲವರು ವಿದ್ರೋಹಿಗಳೊಡನೆ ಸೇರಿರುವರೆಂದು ಹೇಳಿದನು. ಇದನ್ನು ಕೇಳಿದೊಡನೆ ದಿವಾನ್ ಬೋಪುವಿನಲ್ಲಿ ಮೊದಲೇ ಸಂಶಯಪಟ್ಟಿದ್ದ ಲೀಹಾರ್ಡಿ ಸಾಹೇಬನಿಗೆ ಬೋಪುವು ಒಳಗಿಂದೊಳಗೆ ವಿದ್ರೋಹಿಗಳ ಪಕ್ಷ ಸೇರಿರುವನೆಂಬ ನಂಬಿಗೆಯು ಬಲವಾಯಿತು. ಆಗ ಆತನು ಬೋಪುವನ್ನು ಕರೆದು 'ಘಟ್ಟದ ಕೆಳಗೆ ನೀನು ಹೋಗಿ ನಿನ್ನ ಸ್ನೇಹಿತರಾದ ವಿದ್ರೋಹಿಗಳೊಡನೆ ಸೇರು. ಹೀಗೆ ಎದುರಿಗೆ ನಮ್ಮ ಮಿತ್ರನಂತೆ ತೋರಿಸಿಕೊಂಡು ಒಳಗಿಂದೊಳಗೆ ಶತ್ರುಗಳ ಪಕ್ಷ ಸೇರುವ ಬದಲು ಸೀದಾ ಹೋಗಿ ಶತ್ರುಗಳೊಡನೆ ಸೇರಿಕೋ. ಆಗ ನಾನು ನಿನ್ನೊಡನೆ ಯುದ್ಧಕ್ಕೆ ಬರುವೆನು. ನಿನ್ನನ್ನು ಹಿಡಿದರೆ ನಿನ್ನನ್ನು ತೂಗಿಸಿಬಿಡುವೆನು' ಎಂದನು. ಈ ಮಾತುಗಳನ್ನು ಕೇಳಿ ಬೋಪುವಿಗೆ ಬಹಳ ಗಾಬರಿಯಾಯಿತು. ಆತನೂ ಪೊನ್ನಪ್ಪನ ಹಾಗೆ ಕಂಪೆನಿ ಸರಕಾರದ ಪ್ರಾಮಾಣಿಕನಾದ ಸೇವಕನಾಗಿದ್ದನು. ಆತನು ಕಂಪೆನಿ ಸರ್ಕಾರದ ಪಕ್ಷದಲ್ಲೇ ಇದ್ದನು. ಆದರೆ ಆತನ ಹತ್ತಿರದ ಸಂಬಂಧಿಕರೂ, ನಾಡಿನವರೂ ದಂಗೆಖೋರರೊಡನೆ ಸೇರಿದ್ದುದರಿಂದ ಆತನ ಮೇಲೆ ಸಂಶಯಕ್ಕೆ ಕಾರಣವಾಯಿತು. ಈಗ ಬೋಪುವಿಗೆ ತಾನು ಲೀಹಾರ್ಡಿ ಸಾಹೇಬನ ವಿಶ್ವಾಸವನ್ನು ತಿರುಗಿ ಹೇಗೆ ಸಂಪಾದಿಸಲಿ ಎಂಬ ಚಿಂತೆಯು ಬಾಧಿಸಹತ್ತಿತು. ಆತನ ಕಣ್ಣುಗಳಲ್ಲಿ ಬಳ ಬಳನೆ ನೀರು ಹರಿಯಿತು. ಆತನು ನಿರಾಶೆಯಿಂದ ಉತ್ತೇಜಿತನಾಗಿ ತನ್ನ ಪ್ರಾಮಾಣಿಕತನವನ್ನು ಕುರಿತು ಲೀಹಾರ್ಡಿ ಸಾಹೇಬನಿಗೆ ತನಗೆ ಸಾಧ್ಯವಿದ್ದಷ್ಟು ಮನದಟ್ಟು ಮಾಡಿದನು. 'ನೀವು ಇಲ್ಲಿಯೇ ಇರಿ, ನಾನೊಬ್ಬನೇ ನನ್ನ ಜನರೊಡನೆ ಹೋಗಿ ಈ ಹಾಳು ವಿದ್ರೋಹವನ್ನು ಅಡಗಿಸು

ವೆನು, ಸಂದರ್ಭಕ್ಕೆ ಅನುಸಾರವಾಗಿ ನಡೆದುಕೊಳ್ಳುವುದಕ್ಕೆ ನನಗೆ ಅನುಮತಿಯನ್ನು ಕೊಟ್ಟು ಈ ಕೆಲಸವನ್ನು ಪೂರ್ತಿ ನನ್ನ ಜವಾಬ್ದಾರಿಗೆ ಬಿಟ್ಟು ಬಿಟ್ಟರೆ ನಾನು ಈಗಲೇ ಹೊರಟು ವಿದ್ರೋಹಿಗಳ ಮುಖಂಡರನ್ನು ಜೀವಂತರಾಗಿ ಅಥವಾ ಕೊಂದು ಹಿಡಿದು ತರುವೆನು' ಎಂದು ಹೇಳಿದನು. ಕ್ಯಾಪ್ಟನ್ ಲೀಹಾರ್ಡಿ ಸಾಹೇಬನು ಬೋಪುವಿನ ಮಾತಿನಲ್ಲಿ ವಿಶ್ವಾಸ ವಿಟ್ಟು ಅವನ ಇಷ್ಟದಂತೆ ಮಾಡುವುದಕ್ಕೆ ಅನುಮತಿಯನ್ನು ಕೊಟ್ಟನು.

ಇಷ್ಟರಲ್ಲಿ ಬೆಪ್ಪುನಾಡು ಮತ್ತು ಇತರ ನಾಡುಗಳಿಂದ ಜನರು ಬಂದು ಮಡಿಕೇರಿಯಲ್ಲಿ ಸೇರಿದರು. ಇವರಲ್ಲಿ 60 ಜನರನ್ನು ಸುಭೇದಾರ ಅಪ್ಪಚ್ಚನ ಕೈಕೆಳಗೆ ಕೊಡಗಿನ ಉತ್ತರ ಗಡಿಗೆ ಬೋಪುವು ಕಳುಹಿಸಿ ತನ್ನ ಆಪ್ತರಿಂದ ಕೂಡಿದ ಒಂದು ಸೈನ್ಯದೊಡನೆ ಸಂಪಾಜೆಗೆ ಹೊರಟನು. ಆತನೊಡನೆ ಒಂದೊಂದು ಹೊರೆ ಬೆತ್ತದ ಕೋಲುಗಳನ್ನು ಹೊತ್ತ ಇಬ್ಬರು ಆಳುಗಳೂ ಇದ್ದರು. ಬೋಪುವು ತನ್ನ ಆಪ್ತಸ್ನೇಹಿತರಲ್ಲಿ ಮೂರು ಜನರನ್ನು ತನಗಿಂತ ಸ್ವಲ್ಪ ಮುಂದೆ ಹೋಗುತ್ತಿರು ವಂತೆ ಹೇಳಿ ಕಳುಹಿಸಿದನು. ಇವರು ತಾವು ಹೋಗುವದಾರಿ ಯಲ್ಲಿ ಶತ್ರುಗಳು ಹೊಂಚು ಹಾಕಿಕೊಂಡಿರುವರೋ ಎಂದು ನೋಡಿ ಬೋಪುವಿಗೆ ಎಚ್ಚರಿಕೆಯನ್ನು ಕೊಡಬೇಕಾಗಿದ್ದಿತು. ವಿದ್ರೋಹಿಗಳೊಡನೆ ಸೇರಿದ ನಾಲ್ಕುನಾಡಿನ ಜನರಲ್ಲಿ ಮಲೆ ಕುಡಿಯರೆಂಬ ನಿಮ್ನ ವರ್ಗಕ್ಕೆ ಸೇರಿದ ಚೆಟ್ಟಿ ಕುಡಿಯನೆಂ ಬವನು ಒಬ್ಬನಾಗಿದ್ದನು. ಇವನು ವೀರ ರಾಜನಿಗೆ ಗುರಿಹೊ ಡೆಯುವುದಕ್ಕೆ ಕಲಿಸಿದವನಾಗಿದ್ದನು. ಮತ್ತು ವೀರರಾಜನ ಅತ್ಯಂತ ಆಪ್ತನೂ ಆಗಿದ್ದನು. ಈತನು ಗುರಿಹೊಡೆಯುವುದ ರಲ್ಲಿ ಎಷ್ಟು ನಿಪುಣನಾಗಿದ್ದನೆಂದರೆ ಹಾರುವ ಹಕ್ಕಿಯ ಕಣ್ಣಿಗೆ ಗುಂಡು ತಗಲಿಸಬಲ್ಲನೆಂದು ಜನರು ಅನ್ನುತ್ತಿದ್ದರು. ಅಂಥಾ ಗುರಿಗಾರನಾದ ಚೆಟ್ಟಿ ಕುಡಿಯನು ಈಗ ಬೋಪು ದಿವಾನ ನನ್ನು ದೃಷ್ಟಿಗೆ ಬಿದ್ದ ಕೂಡಲೇ ಗುಂಡು ಹೊಡೆದು ಕೊಲ್ಲು ವೆನೆಂದು ಶಪಥ ತೊಟ್ಟಿದ್ದನು.

ನಾವು ವರ್ಣಿಸುವ ಸಂಗತಿಗಳು ನಡೆದ ಕಾಲದಲ್ಲಿ ಕೊಡಗಿನಲ್ಲಿ ರಸ್ತೆಗಳು ಇರಲಿಲ್ಲ. ಸಂಪಾಜೆಗೆ ಕಾಲುದಾರಿ ಗಾಗಿ ಹೋಗಬೇಕಾಗಿದ್ದಿತು. ಆ ಕಾಲುದಾರಿಯು ರಾಜಾ ಸೀಟಿನ ಬಲಪಾರ್ಶ್ವಕ್ಕಾಗಿ ಹೋಗುತ್ತಲಿತ್ತು. ಈಗ ರಾಜಾ ಸೀಟಿಗಾಗಿ ತಾಳತ್‌ಮಾನಿಗೆ ಹೋಗುವ ಕಾಲುದಾರಿಯು ರಾಜರ ಕಾಲದಲ್ಲಿದ್ದ ದಾರಿಗಳ ನೆನಪನ್ನು ನಮಗೆ ಈಗಲೂ ಮಾಡಿಕೊಡುತ್ತದೆ. ಇದೇ ದಾರಿಗಾಗಿ ಬೋಪುವು ಹೊರಟು ರಾಜಾ ಸೀಟನ್ನು ದಾಟಿ ಆ ಗುಡ್ಡೆಯನ್ನು ಇಳಿಯುತ್ತಿದ್ದನು. ಅಷ್ಟರಲ್ಲಿ ಅವನಿಗೆ ಎದುರಾಗಿ ಮಾಜಿ ಸುಭೆದಾರ್ ಮುದ್ದಯ್ಯ ನೂ, ಮಾಜಿ ಪಾರುಪತ್ಯಗಾರ್ ಅಪ್ಪಯ್ಯನೂ ಬರುತ್ತಿದ್ದರು. ಇವರಿಗೆ ವಿದ್ರೋಹದ ವಿಷಯ ಗೊತ್ತಿದ್ದಿತು. ಇವರು ಬೋಪುವಿಗೆ ಪರಿಚಿತರಾಗಿದ್ದರು. ಇವರು ಬೋಪುವಿಗೆ ವಿದ್ರೋಹದ ಸಂಬಂಧ ತಮಗೆ ತಿಳಿದಿರುವ ವಿಷಯಗಳನ್ನು ತಿಳುಹಿ ಸಿದರೆ ಬೋಪುವಿಗೆ ಉಂಟಾದ ಅವಮಾನವೂ ಕೆಟ್ಟ ಹೆಸರೂ ತಪ್ಪುತ್ತಿದ್ದವು. ಆದುದರಿಂದ ಇವರನ್ನು ಕಂಡೊಡನೆ ಬೋಪುವು ತನ್ನ ಜನರಿಂದ ಅವರನ್ನು ಹಿಡಿಸಿ ತರಿಸಿ, ಅವರ ಮೇಲಂಗಿಗಳನ್ನು ಬಿಚ್ಚಿಸಿ ಪ್ರತಿಯೊಬ್ಬರಿಗೂ ಬೆತ್ತಗಳಿಂದ ಹೊಡೆಸಿದನು. ಅವರು ತಮ್ಮನ್ನು ಯಾತಕ್ಕೆ ಹೊಡೆಯುವು ದೆಂದು ಕೇಳಿದ್ದಕ್ಕೆ ಅವರಿಗೆ ಇನ್ನಷ್ಟು ಪೆಟ್ಟುಗಳು ಬಲವಾಗಿ ಬಿದ್ದುವು. ಕೊನೆಗೆ ಅವರಿಬ್ಬರನ್ನು ಹೊಡೆದು ಅರೆಜೀವ ಮಾಡಿ ಬಿಟ್ಟು ಬೋಪುವು ತನ್ನ ದಾರಿಯಲ್ಲಿ ಮುಂದಕ್ಕೆ ಹೋದನು. ಸಂಪಾಜೆಗೆ ಅರ್ಧ ದಾರಿಯಲ್ಲಿ ಆಯುಧ ಸಮೇತರಾದ ಒಂದು ಗುಂಪು ನಾಲ್ಕು ನಾಡಿನ ಕೊಡಗರು ಬರುತ್ತಿದ್ದರು. ಇವರೆಲ್ಲರೂ ಬೋಪುವಿನ ಪರಿಚಯವಿದ್ದ ವರೇ ಆಗಿದ್ದರು. ಇವರ ಸಂಖ್ಯೆಯು ಬೋಪುವಿನ ಜನರ ಸಂಖ್ಯೆಗಿಂತ ಕಡಿಮೆ ಇದ್ದುದರಿಂದ ಇವರು ಬೋಪುವಿನ ಜನರ ಮೇಲೆ ಬೀಳಲು ಸಾಹಸವುಳ್ಳವರಾಗಿರಲಿಲ್ಲ. ಆಗ ಬೋಪುವು ಅವರನ್ನೆಲ್ಲಾ ಹಿಡಿಸಿ ಒಬ್ಬನನ್ನು ಬಿಟ್ಟು ಉಳಿದ ಎಲ್ಲರಿಗೂ ಬೆತ್ತದ ಪೆಟ್ಟುಗಳನ್ನು ಹೊಡೆಸಿದನು. ಆ ಒಬ್ಬನು ವಿದ್ರೋಹಿಗಳ ವಿಷಯ ತನಗೆ ತಿಳಿದದ್ದನ್ನು ಬೋಪು ದಿವಾನ ನಿಗೆ ಹೇಳಿ ಪೆಟ್ಟು ತಪ್ಪಿಸಿಕೊಂಡನು. ಇದರ ನಂತರ ಬೋಪು ದಿವಾನನು ಉತ್ಸಾಹದಿಂದ ಮುಂದೆ ಹೊರಟನು. ಸಂಪಾಜೆ ಯಲ್ಲಿ ವಿದ್ರೋಹಿಗಳೊಡನೆ ತಾವುನಾಡು, ಬೇಂಗುನಾಡಿನ ವರು ಹಿಡಿದೊಪ್ಪಿಸಿದ್ದ ನಾಲ್ಕುನಾಡು ಸುಭೆದಾರ್ ಮಾದೈಯ್ಯ ನಿದ್ದನು. ಈತನು ಮೊದಲು ವಿದ್ರೋಹಿಗಳಿಗೆ ವಿರೋಧವಾ ಗಿದ್ದರೂ 'ಅಮರ ಸುಳ್ಯದಲ್ಲಿ ಅವರ ಬಲವನ್ನು ನೋಡಿ ಅವರ ಪಕ್ಷವನ್ನು ಸೇರಿಕೊಂಡಿದ್ದನು. ಈಗ ಬೋಪು ದಿವಾನನು ಅವನನ್ನು ತನ್ನ ಬಳಿ ಬರಮಾಡಿ ಆತನಿಗೆ ಬುದ್ಧಿವಾದವನ್ನು ಹೇಳಿ ಆತನನ್ನು ತನ್ನ ಕಡೆಗೆ ಸೇರಿಸಿಕೊಂಡನು. ಸುಭೇದಾರ ನಂತಹ ದೊಡ್ಡ ಅಧಿಕಾರಿಯು ಬೋಪುವಿನ ಪಕ್ಷ ಸೇರಿ ದ್ದನ್ನು ನೋಡಿ ವಿದ್ರೋಹಿಗಳಿಗೆ ಧೈರ್ಯಗುಂದಿತು. ಅವರು ಬೋಪುವಿನ ಜನರನ್ನು ಕಂಡು ದಿಕ್ಕಾಪಾಲಾಗಿ ಓಡಿಹೋ ದರು. ಸಂಪಾಜೆಯಿಂದ ಹೊರಟು ದಿವಾನ್ ಬೋಪುವು ಸುಳ್ಯಕ್ಕೆ ಏಪ್ರಿಲ್ 24ನೇ ತಾರೀಖಿನಲ್ಲಿ ತಲಪಿ, ಆ ಪೇಟೆ ಯನ್ನು ವಿದ್ರೋಹಿಗಳ ಕೈಯಿಂದ ವಶಪಡಿಸಿಕೊಂಡನು. ಅಲ್ಲಿಂದ ಹೊರಟು ಬೆಳ್ಳಾರೆಗೆ ಹೋಗಿ ಅಲ್ಲಿ ಖಜಾನೆಯನ್ನು ಸ್ವಾಧೀನಪಡಿಸಿಕೊಂಡನು. ಇಷ್ಟರಲ್ಲಿ ಮಂಗಳೂರು ಕಡೆ ಯಿಂದ ಬಂದ ಸಿಪಾಯಿಗಳ ಸೈನ್ಯವೂ ಸುಳ್ಯವನ್ನು ತಲ ಪಿತು. ಇತ್ತಲಾಗಿ ಕಪಟ ಕಲ್ಯಾಣ ಸ್ವಾಮಿಯು ಅಥವಾ

ಪುಟ್ಟ ಬಸಪ್ಪನು ಬೈತೂರಿಗೆ ಓಡಿಹೋದನು. ಇತರ ಮುಖಂಡರು ಬೇರೆ ಬೇರೆ ದಿಕ್ಕುಗಳಿಗೆ ಹೋಗಿ ಅಡಗಿಕೊಂಡರು. ಸರಕಾರದವರು ಇವರನ್ನು ಹಿಡಿದುಕೊಟ್ಟವರಿಗೆ ಕೆಳಗೆ ಬರೆದಿರುವ ಹಣವನ್ನು ಬಹುಮಾನವಾಗಿ ಕೊಡುವೆವೆಂದು ಸಾರಿದರು.

ಪುಟ್ಟಬಸಪ್ಪನನ್ನು ಹಿಡಿದುಕೊಟ್ಟವರಿಗೆ 10,000 ರೂಪಾಯಿಗಳು, ಕುಕ್ಕನೂರು ಚೆನ್ನಯ್ಯನನ್ನು ಹಿಡಿದು ಕೊಟ್ಟವರಿಗೆ 5,000 ರೂಪಾಯಿಗಳು, ಕರಣಿಕ ಸುಬ್ರಾಯನನ್ನು ಹಿಡಿದುಕೊಟ್ಟವರಿಗೆ 5,000 ರೂಪಾಯಿಗಳು–ಹೀಗೆ ಬಹುಮಾನಗಳನ್ನು ಹಂಚುವುದಾಗಿ ಸಾರಿದರು. ಉಳಿದ ಮುಖಂಡರಾದ ಪಾಡಿ ನಾಲ್ಕುನಾಡಿನ ಉತ್ತು, ಶಾಂತಳ್ಳಿ ಮಲ್ಲಯ್ಯ, ಗುಡ್ಡೆಮನೆ ಅಪ್ಪಯ್ಯ, ಚೆಟ್ಟಿ ಕುಡಿಯ, ಕರ್ತು ಕುಡಿಯ ಮೊದಲಾದವರನ್ನುಮೊದಲೇ ಹಿಡಿದು ಸೆರೆಯಲ್ಲಿಟ್ಟಿದ್ದರು. ವಿದ್ರೋಹಿ ಮುಖಂಡರು ಹಿಡಿಯಲ್ಪಟ್ಟರು. ಇವರಲ್ಲಿ ಲಕ್ಷ್ಮಪ್ಪ ಬಂಗರಸನೂ ಒಬ್ಬನಾಗಿದ್ದನು. ಇವರನ್ನು ಸೈನ್ಯಾಧಿಕಾರಿಗಳೇ ವಿಚಾರಣೆ ನಡೆಸಿ, ಪುಟ್ಟ ಬಸಪ್ಪನಿಗೂ ಲಕ್ಷ್ಮಪ್ಪ ಬಂಗರಸನಿಗೂ ಇತರ ಮುಖಂಡರಿಗೂ ಮರಣ ದಂಡನೆಯನ್ನು ವಿಧಿಸಿದರು. ಇವರನ್ನು ಮಂಗಳೂರಿನ ಬಿಕ್ರನ ಕಟ್ಟೆ ಪದವಿನ ಹತ್ತಿರ ಗಲ್ಲಿಗೇರಿಸಿದರು. ಉಳಿದವರಿಗೆ ಏಳರಿಂದ ಹದಿನಾಲ್ಕು ವರ್ಷಗಳ ವರೆಗೆ ಕಾರಾಗೃಹದಲ್ಲಿ ಸಶ್ರಮ ಸೆರೆಯನ್ನು ವಿಧಿಸಿದರು. ಚೆಟ್ಟಿ ಕುಡಿಯ ಮತ್ತು ಕರ್ತು ಕುಡಿಯ ಇವರಿಗೆ ದ್ವೀಪಾಂತರ ಶಿಕ್ಷೆ ವಿಧಿಸಿ ಸಿಂಗಾಪುರಕ್ಕೆ ಕಳುಹಿಸಿದರು.

ಇತ್ತಲಾಗಿ ಬೋಪು ದಿವಾನನಿಗೂ ಆತನ ಜನರಿಗೂ ಕಂಪೆನಿ ಸರಕಾರದವರು ಅವರೇ ವಿದ್ರೋಹಿಗಳಿಂದ ಕಿತ್ತುಕೊಂಡ 20,000 ರೂಪಾಯಿಗಳನ್ನು ಇನಾಮಾಗಿ ಕೊಟ್ಟರು. ಆದರೆ ಇವರು ಈ ಇನಾಮಿನ ಹಣವನ್ನು ತಮ್ಮೊಳಗೆ ಹಂಚಿಕೊಳ್ಳುವುದಕ್ಕೆ ಇಷ್ಟಪಡದೆ ಅದಕ್ಕೆ ಬದಲಾಗಿ ತಮಗೆ ಶಾಶ್ವತವಾಗಿ ಉಳಿಯುವಂಥಾ ಬಹುಮಾನಗಳನ್ನು ಕೊಡಬೇಕೆಂದು ಕೇಳಿಕೊಂಡರು. ಅವರ ಕೋರಿಕೆ ಮೇರೆಗೆ ಸರಕಾರದವರು ಅವರಿಗೆ ಜಹಗೀರು ಭೂಮಿಗಳನ್ನೂ, ಯುದ್ಧದಲ್ಲಿ ಸತ್ತುಹೋದವರ ಕುಟುಂಬದವರಿಗೆ ಮೂರು ತಲೆಗಳ ವರೆಗೆ ಪೆನ್ಶನನ್ನೂ ಕಾಟಕಾಯಿಯಲ್ಲಿ ಭಾಗವಹಿಸಿದವರ ಯೋಗ್ಯತೆಗನುಸಾರವಾಗಿ ಚಿನ್ನ, ಬೆಳ್ಳಿ, ಪದಕಗಳನ್ನೂ ಕೊಟ್ಟರು. ಚಿನ್ನದ ಪದಕವು ಸರಪಣಿ ಸಮೇತ ಹನ್ನೊಂದುವರೆ ತೊಲೆ ತೂಕವುಳ್ಳದ್ದಾಗಿ ಎರಡು ಇಂಚುಗಳ ವ್ಯಾಸವುಳ್ಳದ್ದಾಗಿದ್ದಿತು. ಆ ಪದಕದ ಒಂದು ಬದಿಯಲ್ಲಿ ಒಬ್ಬ ಕೊಡಗು ವೀರನು ಯುದ್ಧ ಮಾಡುವ ಹಾಗೆ ಅಚ್ಚೊತ್ತಿದೆ. ಇನ್ನೊಂದು ಬದಿಯಲ್ಲಿ ಪೀಚೆ ಕತ್ತಿ ಮತ್ತು ಒಡಿಕತ್ತಿಗಳನ್ನು ಒಂದು ಹಾರದಲ್ಲಿ ಕಟ್ಟಿ ಸಿಕ್ಕಿಸಿದ ಹಾಗೆ ಬಿಡಿಸಿದೆ. ಇದಲ್ಲದೆ ಆ ಪದಕದ ಒಂದು ಬದಿಯಲ್ಲಿ ಇಂಗ್ಲಿಷಿನಲ್ಲಿ "For distinguished conduct and loyalty to the British Government, coorg, April.1837" ಎಂದು ಬರೆದಿದೆ. ಅದರ ತರ್ಜುಮೆಯು ಕನ್ನಡದಲ್ಲಿ ಇನ್ನೊಂದು ಬದಿಯಲ್ಲಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಪೆನಿ ಸಿಪಾಯಿಗಳು ಅಕಸ್ಮಾತಾಗಿ ಅನುಮಾನದಿಂದ ಗುಂಡುಹೊಡೆದು ಕೊಂದ ಒಬ್ಬ ಬ್ರಾಹ್ಮಣನ ಕುಟುಂಬದವರಿಗೆ ಮೂರು ತಲೆಗಳ ವರೆಗೆ ಅಶನಾರ್ಥವನ್ನು ಮಂಜೂರು ಮಾಡಿದರು. ಇದಲ್ಲದೆ ಬಂಟವಾಳದ ಜಮೀನ್ದಾರನಾದ ರಂಗ ಬಾಳಿಗನಿಗೆ ಆತನು ಕಾಟಕಾಯಿಯಲ್ಲಿ ಕಂಪೆನಿ ಸೈನ್ಯಕ್ಕೆ ಮಾಡಿದ ಸಹಾಯಕ್ಕಾಗಿ ಮೂರು ತಲೆಗಳ ವರೆಗೆ ಆತನ ಭೂಮಿ ಕಂದಾಯವನ್ನು ವಜಾ ಮಾಡಿಕೊಟ್ಟರು. ಈತನು ಪುತ್ತೂರಿನಿಂದ ಇಂಗ್ಲಿಷ್ ಸೈನ್ಯವು ಹಿಂದಕ್ಕೆ ಮಂಗಳೂರಿಗೆ ಸೋತು ಹಿಂದಿರುಗುವಾಗ ಆ ಸೈನ್ಯಕ್ಕೆ ಬಹಳ ಸಹಾಯವನ್ನು ಮಾಡಿದ್ದನು. ಆತನು ಆ ಸೈನ್ಯಕ್ಕೆ ತುಂಬಾ ಅಕ್ಕಿಯನ್ನೂ ಇತರ ಸಾಮಗ್ರಿಗಳನ್ನೂ ಕೊಟ್ಟು ಸಹಾಯ ಮಾಡಿದ್ದರಿಂದ ಆತನಿಗೆ 'ಚಾವಲ್ ಕೀ ರಾಜ' ಅಥವಾ ಅಕ್ಕಿಯ ಅರಸ ಎಂಬ ಹೆಸರಾಯಿತು. ಈತನು ಸೈನ್ಯಕ್ಕೆ ಬಂಟ್ವಾಳದಲ್ಲಿ ನದಿಯನ್ನು ದಾಟಲು ದೋಣಿಗಳನ್ನೂ ಒದಗಿಸಿ ಕೊಟ್ಟ ಹಾಗೆ ತೋರುತ್ತದೆ.

ಹೀಗೆ 1837ನೇ ಇಸವಿ ಮಾರ್ಚಿ ಅಂತ್ಯಭಾಗದಲ್ಲಿ ಅಮರಸುಳ್ಯದಲ್ಲಿ ಪ್ರಾರಂಭವಾದ ದಂಗೆ ಅಥವಾ ಕಾಟಕಾಯಿಯು ನಡುವೆ ಭೀಕರ ಸ್ವರೂಪವನ್ನು ತಾಳಿ ಅನಂತರ ಬೇಗನೆ ಒಂದು ತಿಂಗಳೊಳಗಾಗಿ ತಣ್ಣಗಾಯಿತು. ಅಂದಿನಿಂದ ಕೊಡಗಿನಲ್ಲಿ ಅಥವಾ ಅಮರಸುಳ್ಯದಲ್ಲಿ ಯಾವುದೊಂದೂ ಗಲಾಟೆಯುಂಟಾಗಲಿಲ್ಲ.

---

ಈ ಲೇಖನದಲ್ಲಿ ಬರೆದಿರುವ ವಿಷಯಗಳನ್ನು ಈ ಕೆಳಗಿನ ಪುಸ್ತಕ ಮತ್ತು ಲೇಖನಗಳಿಂದ ಸಂಗ್ರಹಿಸಿದ್ದೇನೆ. ಕೆಲವು ಸಂಗತಿಗಳನ್ನು ಸುಳ್ಯದಲ್ಲಿ ಕೆಲವು ಮಹನೀಯರಿಂದ ತಿಳಿದು ಬರೆದಿದ್ದೇನೆ.


1. ಕೆನರಾ ಸಾರಸ್ವತ್ ಮಾಸ ಪತ್ರಿಕೆಯ 'ಕರಣಿಕ ದೇವಪ್ಪಯ್ಯ' ಎಂಬ ಲೇಖನ.
2. ಶ್ರೀ ಗಣಪತಿ ಐಗಳ ದಕ್ಷಿಣ ಕನ್ನಡದ ಇತಿಹಾಸ.
3. ಲಂಡನ್ ಈಸ್ಟ್ ಇಂಡಿಯಾ ಕಂಪೆನಿಯ ಡೈರೆಕ್ಟರುಗಳ ವರದಿ.
4. ರಿಕ್ಟರ್ ಸಾಹೇಬನ ಕೊಡಗು ಚರಿತ್ರೆ.

# ಭಾಷೆಯ ಬೆಳವಣಿಗೆ

**ಲೇಖಕ:- ಶಿವರಾಮ ಕಾರಂತ.**

ಮನುಷ್ಯನ ನಾಗರಿಕತೆಯೇ ಅವನ ಭಾಷೆಯಿಂದ ಸಾಧ್ಯವಾಯಿತು–ಎನ್ನುತ್ತಾರೆ. ಇದು ಮೊದಲಿನ ನೋಟಕ್ಕೆ ಆಶ್ಚರ್ಯವೆನಿಸಿದರೂ, ಬಹುಮಟ್ಟಿಗೆ ಅರ್ಥಪೂರ್ಣವಾದ ವಿಚಾರ. ಎಂದು ಮಾನವ ಮಾತನ್ನು ಕಲಿತನೋ ಅಂದೇ ಅವನ ಮನಸ್ಸಿಗೆ— ಒಂದೊಂದು ಮಾನಸಿಕ ಸ್ಮರಣೆಯನ್ನೂ ಬೇರೆಬೇರೆ ಶಬ್ದಗಳಿಂದ ಗುರುತಿಸಿ, ನೆನಪಿನ ಭಂಡಾರದಲ್ಲಿ ಇರಿಸಿಕೊಳ್ಳುವುದು ಸಾಧ್ಯವಾಯಿತು. ಇದರಿಂದ ನಮ್ಮ ಇಂದ್ರಿಯಾನುಭವಗಳನ್ನೆಲ್ಲ— ಗುರುತಿಸುವುದು, ಶೇಖರಿಸುವುದು, ಕಾಲಾವಕಾಶದಲ್ಲಿ ನೆನಪಿಂದ ಹೊರಕ್ಕೆ ತೆಗೆದು ತಿರುಗಿ ನೆನೆಯುವುದು, ನೆನಪನ್ನು ನುಡಿಯ ಮೂಲಕ ತಿಳಿಸುವುದೂ ಸಾಧ್ಯವಾಯಿತು. ಇಂದು ನಮ್ಮ 'ವಿಚಾರ' ಎಂಬುದು ದೃಶ್ಯ ಮತ್ತು ಶಬ್ದ ಚಿತ್ರಗಳ ಕೂಟವಾಗಿದೆ. ಮನುಷ್ಯ ತಾನು ಕಂಡ, ಕೇಳಿದ, ಮುಟ್ಟಿದ, ಮೂಸಿದ, ಸವಿದ ಒಂದೊಂದು ವಸ್ತುವಿಗೂ, ಕ್ರಿಯೆಗೂ, ಅದರ ಗುಣಕ್ಕೂ, ಚಲನೆಗೂ ಒಂದೊಂದು ಬೇರೆಯೇ ಶಬ್ದವನ್ನು ನಿರ್ಮಿಸಿ ಬಳಸತೊಡಗಿದ್ದರಿಂದ-ಮಾನವ ಕುಲದ ಅನುಭವ ಬೆಳೆಯಿತು. ನಮ್ಮ ವಿಚಾರತರಂಗ ವಿಸ್ತರಿಸುವುದು ಸಾಧ್ಯವಾಯಿತು. ಅನುಭವದಿಂದ ಪ್ರೇರಿತವಾಗುವ ಭಾವನೆಯ ವಿಸ್ತೃತಿಯೂ ಸಾಧ್ಯವಾಯಿತು.

ಮೊದಲು ಒಂದೊಂದರ ನೆನಪಿಗಾಗಿ ಬಳಸಲ್ಪಟ್ಟ ಶಬ್ದಗಳ ಗುಂಪು ಸೇರಿ ಕ್ರಮೇಣ ವಾಕ್ಯವಾಯಿತು. ರೂಢಿಯಿಂದ ಶಬ್ದಗಳನ್ನು ಬಳಸುವುದರಲ್ಲಿ ಒಂದು ನಿಯಮಿತತೆ ಏರ್ಪಟ್ಟಿತು. ಇಷ್ಟನ್ನು ನಾವು ಪ್ರಪಂಚದ ಯಾವತ್ತು ಭಾಷೆಗಳ ವಿಷಯದಲ್ಲಿಯೂ ಪರಿಶೀಲಿಸಬಹುದಾದ ಸಂಗತಿ. ಅದರ ಜತೆಗೆ ಒಂದು ಭಾಷೆಯಲ್ಲಿನ ಬೆಳವಣಿಗೆಯು ಒಂದೊಂದು ಕಾಲದಲ್ಲಿ ಒಂದೊಂದು ತೆರನಾಗಿರುವುದನ್ನೂ ಕಾಣುತ್ತೇವೆ. ಒಂದು ಭಾಷೆ ತನ್ನ ಶಕ್ತಿಯಲ್ಲಿ ಇನ್ನೊಂದಕ್ಕಿಂತ ಹೆಚ್ಚಿನ ಸುಧಾರಣೆ, ಬೆಳವಣಿಗೆ ಹೊಂದಿರುವುದನ್ನೂ ಕಾಣಬಹುದು. ಈ ಬಗೆಯ ವ್ಯತ್ಯಾಸವನ್ನು ಕನ್ನಡಕ್ಕೂ ಸಂಸ್ಕೃತಕ್ಕೂ, ಕನ್ನಡಕ್ಕೂ ಇಂಗ್ಲಿಷಿಗೂ ಹೋಲಿಸಿ ನೋಡಬಹುದು. ಒಟ್ಟು ಸಿಗಬಹುದಾದ ಕನ್ನಡ ಶಬ್ದಗಳ ಸಂಖ್ಯೆಗೂ ಸಂಸ್ಕೃತ ಪದಗಳ ಮೊತ್ತಕ್ಕೂ ತಾರತಮ್ಯವಿದೆ. ಇಂಗ್ಲಿಷ್ ಭಾಷೆಯ ಶಬ್ದ ಸಂಪತ್ತು ದಿನದಿನ ಬೆಳೆಯುತ್ತಿರುವುದನ್ನು ಹೊಸ ಹೊಸ ನಿಘಂಟಿನ ಆವೃತ್ತಿಗಳಲ್ಲಿ ಕಾಣಬಹುದು. ಹೀಗೆ ಬೆಳೆಯುವ ಶಬ್ದಗಳನ್ನು ಪ್ರತಿಯೊಂದು ಭಾಷೆಯೂ ನಿರ್ಮಿಸಿಯೇ ಸೇರಿಸಿಕೊಳ್ಳಬೇಕಾಗಿಲ್ಲ. ಉಪಯೋಗವಿಲ್ಲದೆ ರೂಢಿಯಲ್ಲಿ ಒಮ್ಮೆ ಇದ್ದ ಪದಗಳು ಕಳಚಿಹೋಗುವಂತೆ, ಹೊಸ ಆವಶ್ಯಕತೆಗಳನ್ನು ಹೆಸರಿಸುವ ಪದಗಳೂ ನಿರ್ಮಾಣಗೊಳ್ಳುತ್ತವೆ; ಆಚೀಚಿನ ಭಾಷೆಗಳಿಂದ ಬಂದು ಸೇರಿಕೊಳ್ಳುವ ಪದಗಳ ಸಂಖ್ಯೆಯೂ ಅಸಂಖ್ಯಾತವಾಗಿವೆ. ಕನ್ನಡಕ್ಕೆ, ಅಥವ ನಮ್ಮ ಕನ್ನಡಕ್ಕೂ ಹಿರಿದಾದ ದ್ರಾವಿಡ ಭಾಷೆಗೆ ಸಂಸ್ಕೃತದಿಂದ ಶಬ್ದಗಳು ಬಂದಿವೆ; ಇಲ್ಲಿಂದ ಅಲ್ಲಿಗೆ ಹೋದುವುಗಳೂ ಬಹಳ ಇವೆ. ಇಂದಿಗೂ ಕನ್ನಡಕ್ಕೆ ಹೊರಗಿನ ಭಾಷೆಗಳಿಂದ ಪದಗಳು ಸೇರುತ್ತಲೇ ಇವೆ.

ಇವೇಕೆ ಬಂದು ಸೇರಬೇಕು? ಕೆಲವು ಬಾರಿ ಅವಶ್ಯವಾಗಿಯೂ ಬಂದು ಸೇರುತ್ತವೆ. ಕೆಲವು ಬಾರಿ ಅನವಶ್ಯಕವಾಗಿಯೂ ಸೇರುತ್ತವೆ. ನಮ್ಮಲ್ಲಿ ಇಲ್ಲದ ಶಬ್ದಗಳಿಂದ ಅವು ಸೇರುವುದು ಸಹಜ. ಮೋಟರು, ಟಾಯರು, ತಂತಿ, ಟಪ್ಪಾಲು, ರಿಜಿಸ್ತ್ರಿ, ಬೂಟ್ಸು .... ಇಂಥ ಅನೇಕ ವಸ್ತುಗಳು ಪರಕೀಯರಿಂದ ಬಂದುವು. ಹೆಚ್ಚಾಗಿ ಆ ವಸ್ತುಗಳನ್ನು ಹೊರಗಿನ ದೇಶದ ಜನಗಳು ನಿರ್ಮಿಸಿ, ಅವಕ್ಕೆ ಹೊಸ ಹೆಸರುಗಳನ್ನು ಕೊಟ್ಟು ಕಳುಹಿಸಿದರೆಂದೇ, ಆ ಹೆಸರುಗಳಿಗೆ ಸಮಾನ ಪದ ನಮ್ಮಲ್ಲಿಲ್ಲದೆಯೇ, ನಾವು ಅವನ್ನು ಬಳಸತೊಡಗಿದೆವು. ಹೆತ್ತವರಿಗೆ ತಮ್ಮ ಮಕ್ಕಳಿಗೆ ಹೆಸರು ಕೊಡುವ ಅಧಿಕಾರವಿದೆ. ಅಷ್ಟು ಅಧಿಕಾರ ನೆರೆಕರೆಯವರಿಗೆ ಬರಲಾರದಷ್ಟೆ.

ಆದರೆ ಜನಸಾಮಾನ್ಯರಲ್ಲಿ ಅನೇಕರಿಗೆ— ಹೊಸ ಶಬ್ದಗಳಲ್ಲೇ ಒಂದು ಬಗೆಯ ಮೋಹವಿದೆ. ನಾವೀನ್ಯಪರರು ಅವರು. ಅದರಿಂದ ಬೇಡವಾದಾಗಲೂ ಪರರ ನುಡಿಗಳನ್ನು, ನಾಡ ನುಡಿಗಳ ಬದಲು ಬಳಕೆಗೆತರುವವರುಂಟು. ಪೌಡರು ಎಂಬ ಇಂಗ್ಲಿಷ್ ಮಾತಿಗೆ ಕನ್ನಡದ 'ಪುಡಿ' ಸಾಕು. ಆದರೆ ಪೌಡರು ಬಳಕೆಗೆ ಬಂದಿದೆ. ಪುಡಿ ತನ್ನ ಅರ್ಥವನ್ನು ಉಳಿಸಿಕೊಂಡೂ ಬಳಕೆಯಲ್ಲಿದೆ. ಬೇರೆಬೇರೆ ಭಾಷೆಗಳನ್ನಾಡುವ ಜನಗಳ ಒಡನಾಟ, ಸಂಪರ್ಕಗಳಿಂದಾಗಿ ಒಂದು ಭಾಷೆಯಿಂದ ಇನ್ನೊಂದಕ್ಕೆ ಪ್ರವಹಿಸುವ ಶಬ್ದಗಳ ಸಂಖ್ಯೆ ಬಹಳ.

ಇಂಥ ಸಮಸ್ಯೆಗಳನ್ನು ಗಮನಿಸಿ, ಆ ಬಳಿಕ ನಾವು ಯಾವುದೇ ಒಂದು ಭಾಷೆ ಬೆಳೆದು ವಿಸ್ತರಿಸಲು ಅವಶ್ಯವಾದ ಕೆಲವೊಂದು ಮುಖ್ಯ ಸಂಗತಿಗಳನ್ನೆಲ್ಲ ಚರ್ಚಿಸುವ. ಭಾಷೆ ಮಾಡಬೇಕಾದ ಮುಖ್ಯ ಕೆಲಸವೆಂದರೆ— ಮಾನವನ ಅನುಭವ, ಭಾವನೆಗಳನ್ನೂ ವಿಚಾರಸರಣಿಯನ್ನೂ ಇನ್ನೊಬ್ಬನಿಗೆ ತಿಳಿಸುವುದಕ್ಕಾಗಿದೆಯಷ್ಟೆ. ಅದು ಇದಕ್ಕಿಂತ ಹೆಚ್ಚಿನ ಕೆಲಸವನ್ನು ಮಾಡಬೇಕಾಗಿಲ್ಲ. ಇವುಗಳಲ್ಲಿ ಒಂದೊಂದರ ಪ್ರಭಾವವೆಷ್ಟೆಂದು ನಾವು ಪರೀಕ್ಷಿಸುವ.

ಭಾವನೆಗಳ ಕೆಲಸ — ಇವು ನಮಗೆ ನಮ್ಮ ಸಮಾಜ, ಆವರಣಗಳಿಂದಾದ ಮಾನಸಿಕ ಪರಿಣಾಮವನ್ನು, ಮಾತಿನ ಮೂಲಕ ಹೊರಗೆಡಹುವಂಥದು. ನಮಗುಂಟಾದ ಸುಖ, ಸಂತೋಷ, ಉತ್ಸಾಹ, ಕೋಪ, ಅಸಹನೆ, ಬೇಸರ, ವ್ಯಥೆ, ಜಿಗುಪ್ಸೆ, ಬೆದರಿಕೆ, ಅನುತಾಪ, ಮೊದಲಾದವನ್ನೆಲ್ಲ ಮಾತಿನ ಮೂಲಕ ಮೂಡಿಸುವಂಥದು. ಸಾಹಿತ್ಯಕ್ಷೇತ್ರದಲ್ಲಿ ಇವು ಅತಿ ಪ್ರಧಾನವಾಗಿ ಪ್ರಕಟವಾಗತಕ್ಕಂಥವು. ಅವು ಗ್ರಂಥಗಳ ಮಟ್ಟಿಗಾಯಿತು. ಆದರೆ ದಿನಂದಿನದ ಮಾನವೀ ಸಂಭಾಷಣೆಗಳಲ್ಲಿ ಇವು ಆಗಾಗ ವ್ಯಕ್ತವಾಗುತ್ತಲೇ ಇವೆ. ಕೆಲವರು ತಮಗುಂಟಾದ ಸುಖ ಸಂತಸ, ದುಃಖ ಮೊದಲಾದುವನ್ನು ಆಗಾಗಲೇ ತಮ್ಮ ಗೆಳೆಯರಿಗೆ, ನೆರೆಕರೆಯವರಿಗೆ, ವೈರಿಗಳಿಗೆ ಮಾತಿನ ಮೂಲಕ ವ್ಯಕ್ತಪಡಿಸುತ್ತಾರೆ. ಕೆಲವರು ಅವನ್ನು ಮನಸ್ಸಿನಲ್ಲಿ ಇರಿಸಿಕೊಂಡು ತಕ್ಕ ಅವಕಾಶ, ಸನ್ನಿವೇಶಗಳೊದಗಿದಾಗ ಪ್ರಕಟಿಸುತ್ತಾರೆ. ಇವುಗಳ ತೀವ್ರತೆಗೆ ಸಮಾನಾಗಿ ಮಾತಿನ ಚಿತ್ರ ಉಂಟಾಗುತ್ತದೆ. ಒಬ್ಬನ ಮೇಲೆ ಸಿಟ್ಟು ಬಂದರೆ—ಬರಿಯ ಕಣ್ಣಷ್ಟೆ ಕೆಂಪಾಗಬಹುದು; ಓಡು ಬಿಗಿಯಬಹುದು. ಅದಕ್ಕೆ ಹೆಚ್ಚಿನ ಪುಷ್ಟಿ ಬಂದಾಗ ಬಾಯಿಂದಲೂ ಕೋಪ ವ್ಯಕ್ತವಾಗಬಹುದು—"ನಿನ್ನನ್ನು ಹರಿದುಹರಿದು ತಿನ್ನುತ್ತೇನೆ!" ಎನ್ನುವ ಮಾತಿನ ತೀವ್ರತೆ ಅದಕ್ಕೆ ಬರಬಹುದು. ಇಲ್ಲಿ ನಿಜವಾಗಿಯೂ ಅವನು ಮನುಷ್ಯನೊಬ್ಬನನ್ನು ತಿನ್ನಲಾರ. ಆದರೂ ಕುಪಿತಗೊಂಡ ಒಂದು ಪ್ರಾಣಿ ಇನ್ನೊಂದನ್ನು ಹರಿದು ತಿನ್ನುವ ಅನುಭವವುಳ್ಳ ಮನುಷ್ಯ, ಆ ಅನುಭವದ ಸ್ಮರಣೆಯಿಂದಾಗಿ— ತನ್ನ ಭಾವಾವೇಶಕ್ಕೆ ಈ ಮಾತಿನ ರೂಪ ಕೊಡುತ್ತಾನೆ. ಅನೇಕ ಅಲಂಕಾರಗಳು ಈ ರೀತಿಯಿಂದ, ಭಾವನೆಯ ಉತ್ಕಟತೆಯನ್ನು ಪ್ರಕಟಿಸುತ್ತವೆ. ನಮ್ಮಲ್ಲುಂಟಾದ ಭಾವನೆ ಪ್ರಕಟವಾಗಲು, ಹಿಂದಿನ ಅನುಭವಗಳು ನಮಗೆ ಸಹಾಯಮಾಡುತ್ತದೆ. ಅನುಭವ ಎಷ್ಟು ಹೆಚ್ಚುತ್ತದೋ, ಅಷ್ಟೇ ಶಬ್ದಸಂಪತ್ತು, ಅಲಂಕಾರ, ನುಡಿಕಟ್ಟುಗಳು ನಮ್ಮ ಭಾವನೆಗಳ ಪ್ರಕಟಣೆಗೆ ಬೆಂಬಲವಾಗಿ ಬರುತ್ತದೆ. ಭಾವನೆಗಳ ವಿಸ್ತಾರ, ಆಳ, ಸೊಗಸು ಮೊದಲಾದುವನ್ನು ಸಾಹಿತ್ಯ ಪ್ರಕಟಿಸುವ ದಾರಿ ಇಂಥದು. ಸಂಭಾಷಣೆಯೂ ಆ ರೀತಿಯಲ್ಲಿ ಭಾಷೆಯ ಬೆಳವಣಿಗೆಗೆ ವಿಶೇಷ ಸಾಧನವಾಗಬಲ್ಲುದು.

ಭಾವನೆಗಳುಂಟಾಗುವುದಕ್ಕೇನೇ,ಅಂದರೆ ಮನಸ್ಸನ್ನು ನಾನಾ ರಸಗಳು ಕಲಕಿಸುವುದಕ್ಕೇನೆ — ಮುಖ್ಯ ಕಾರಣ ನಮ್ಮ ಅನುಭವಗಳು. "ಅನುಭವ" ಎಂಬ ಮಾತಿಗೆ ವಿಶಾಲವಾದ ಅರ್ಥ ವ್ಯಾಪ್ತಿಯನ್ನು ನಾವು ಕೊಡಬೇಕಾಗುತ್ತದೆ. ಒಂದು ಇರುವೆ ಕಚ್ಚಿದರೂ ಅನುಭವ; ಹುಲಿಯ ಬಾಯಿಂದ ಪಾರಾದರೂ ಅನುಭವ; ಮಗುವನ್ನೆತ್ತಿ ಅದರ ತೊದಲು ನುಡಿಯಿಂದ ಪುಲಕಿತರಾದರೂ ಅನುಭವ; ಬಹುದೀರ್ಘ ಪ್ರಯತ್ನವೊಂದು ಸಫಲವಾಗಿ ಆನಂದವುಂಟಾದರೂ ಅನುಭವ. ಇವೆಲ್ಲವೂ ನಾನಾ ಬಗೆಯಿಂದ, ತೀಕ್ಷ್ಣತೆಯಿಂದ ಭಾವನೆಗಳನ್ನು ಕೆರಳಿಸಿ ಮಾತನ್ನು ಮೂಡಿಸಬಲ್ಲುವು. ಇವು ಕೆಲಸ ಮಾಡಲು—ಎರಡು ಮುಖ್ಯ ವಸ್ತುಗಳು ಬೇಕು. ಅನುಭವಿಸುವ ಕರ್ತೃ ತೀರ ಮುಖ್ಯನಷ್ಟೆ. ಅನುಭವ ತಂದು ಕೊಡುವ ಘಟನೆ, ವ್ಯಕ್ತಿ, ವಸ್ತು-ಇವೂ ಅಷ್ಟೇ ಮುಖ್ಯ. ಅನುಭವಿಸುವವನ ಪರಿಶೀಲನ ಗುಣ ಎಷ್ಟು ಹೆಚ್ಚಿಗೆ ಇರುವುದೋ ಅಷ್ಟೇ ವೈವಿಧ್ಯ ಅದಕ್ಕೆ. ಒಂದು ಹಾಸುಗೆಯಲ್ಲಿ ಮಲಗಿದೊಬ್ಬನಿಗೆ ಥಟ್ಟನೆ ನಿದ್ರೆ ಬರಬಹುದು; ಇನ್ನೊಬ್ಬನಿಗೆ ಅದೇ ಹಾಸುಗೆಯು ಕಲ್ಲಿನ ಮಣೆಯಂತೆ ಅಣೆಯಬಹುದು. ಇವನ ಆಯಾಸದ ಮಾನಸಿಕ, ಶಾರೀರಿಕ ಸ್ಥಿತಿಗಳಿಂದ ಆ ಅನುಭವಗಳಾಗಬಹುದು. ಅಲ್ಲದೆಯೇ-ಅವನ ಮೈದೊಗಲಿನ ವಿವಿಧ ರೀತಿಯ ಸ್ಪರ್ಶಗಳನ್ನು ಸವಿಯಬಲ್ಲ ಶಕ್ತಿಯಿಂದಲೂ ಅದು ಬಂದೀತು.

ಒಂದು ಉದಾಹರಣೆ: ಆಕಾಶದಲ್ಲಿನ, ನಿಸರ್ಗದಲ್ಲಿನ ಸಾವಿರಾರು ಬಣ್ಣಗಳು ನಮ್ಮ ಮಾನಸಿಕ ಸುಖಕ್ಕೆ, ಬೇಸರಕ್ಕೆ, ದಣಿವಿಗೆ ಅವಕಾಶ ಕೊಡಬಲ್ಲವು. ಆದರೆ— ಒಂದು ಪ್ರಕೃತಿ ಚಿತ್ರದ ಮುಂದೆ ನಿಂತ ಬೇರೆ ಬೇರೆ ಇಬ್ಬರಲ್ಲಿ ಅದು ಬೇರೆಬೇರೆ ಆನಂದ ಇಲ್ಲವೆ ಉತ್ಸಾಹವನ್ನುಹುಟ್ಟಿಸಬಹುದು. ಭಾವನೆಗಳಲ್ಲಿ ವ್ಯತ್ಯಾಸ ತರಬಹುದು. ಒಬ್ಬನಿಗೆ—ಎದುರಿನ ಬಾನು ಬರಿಯ ನೀಲವಾಗಿ ಕಾಣಬಹುದು. ಆದರೆ ತನ್ನ ಸೂಕ್ಷ್ಮ ಪರಿಶೀಲನೆಯಿಂದ ಗುರುತಿಸಬಲ್ಲ ಮತ್ತೊಬ್ಬಗೆ— ಆ ನೀಲ ಒಂದೇ ಮಾದರಿಯ ನೀಲವಾಗಿರದೆ-ಆಕಾಶನೀಲ, ನವಿಲುನೀಲ, ಕಡಲುನೀಲ, ಹಸುರುನೀಲ, ನೀಲಿ, ನೇರಳೆ ನೀಲ—ಇವೇ ಮೊದಲಾದಂಥ ನೀಲ, ನೀಲೋಪ ಬಣ್ಣಗಳ ಒಂದು ಚಿತ್ರಪಟವಾಗಿ ಕಾಣಿಸಬಹುದು. ಕಣ್ಣಿನ ಸೂಕ್ಷ್ಮತೆ ಹೆಚ್ಚಿದಂತೆ, ಅನುಭವ ಜನ್ಯವಾದ ಸುಖ, ಅನುಭವ ವೈಶಾಲ್ಯಗಳಿಗೆ ಕಾರಣವಾಗಬಹುದು. ನಮ್ಮ ಕನ್ನಡದಲ್ಲಿ ನೀಲ (Blue), ನೀಲಿ (Indigo) ಎಂಬೆರಡು ನೀಲ ಬಣ್ಣಗಳ ಹೆಸರಿದೆ. ಆದರೆ ಇಂಗ್ಲಿಷಿನಲ್ಲಿ-Blue, Pursssian Blue, cobalt blue, marine blue, ultramarine, chinese blue, azure blue- ಎಂದು ಮುಂತಾದ ಹಲವು ನೀಲ ಸಂಕೇತದ ಶಬ್ದಗಳಿವೆ. ಇವು ಹೇಗೆ ಉಂಟಾದುವು? ನೋಡುವ ವ್ಯಕ್ತಿಯಲ್ಲಿನ ಸೂಕ್ಷ್ಮ ಕಣ್ಣಿನಿಂದಾಗಿ. ಎದುರಿನ ಆಕಾಶವನ್ನು ಸೂಕ್ಷ್ಮವಾಗಿ ನೋಡಬಲ್ಲ ವ್ಯಕ್ತಿ, 'ನೀಲ'ದ ವಿವಿಧ ಪ್ರಮಾಣ, ತೂಕಗಳನ್ನು ಕಂಡು ಆನಂದಿತನಾಗಿ, ಅವನ್ನು ನೆನಪಿನಲ್ಲಿರಿಸಿಕೊಂಡು, ಅವನ್ನು ಗುರುತಿಸಲು ಅನುಕೂಲವಾದ ಸಮಾನ ವಸ್ತುಗಳ ನೆನಪಿಂದ ತನ್ನ ಅನುಭವಗಳನ್ನು ಇನ್ನೊಬ್ಬ

ನೀಗೆ ತಿಳಿಸಲು ಅನುಕೂಲಿಸುವಂತೆ ಹೊಸ ಶಬ್ದಗಳನ್ನು—ನಾಮಪದಗಳನ್ನು ನಿರ್ಮಿಸುತ್ತಾನೆ. ಕಣ್ಣು ಕಾಣಬಲ್ಲ ದರ್ಶನ ಕ್ಷೇತ್ರವೊಂದೇ—ಇಂದು ಸಾವಿರಾರು ಹೊಸ ಪದಗಳಿಗೆ ತಾಯಾಗಬಲ್ಲುದು. ಕನ್ನಡದಲ್ಲಿರುವ ವರ್ಣವಾಚಕ ಶಬ್ದಗಳಿಗೂ, ಇಂಗ್ಲಿಷಿನಲ್ಲಿರುವುವಕ್ಕೂ ಸಂಖ್ಯೆಯಲ್ಲಿ ಎಷ್ಟು ವ್ಯತ್ಯಾಸವಿಲ್ಲ! ಪಶು, ಪ್ರಾಣಿ, ಗಿಡಮರಗಳಲ್ಲಿ ಎಷ್ಟು ಕೋಟಿ ವಿವಿಧ ಜೀವಿಗಳಿಲ್ಲ. "ಕೀಟ"ಗಳಲ್ಲೇ ಕೋಟಿಗಟ್ಟಲೆ ಜೀವಿಗಳಿವೆ. ಕನ್ನಡದಲ್ಲಿ—ಅವನ್ನು ಪ್ರತ್ಯೇಕಿಸಬಲ್ಲ ಶಬ್ದ ಸಮುದಾಯವಿಲ್ಲದುದಕ್ಕೆ ಏನು ಕಾರಣ? ಅವು ಪ್ರತ್ಯೇಕವೆಂದು ಗುರುತಿಸಿ ಆನಂದಿಸಿದವರ ಸಂಖ್ಯೆ ಕಡಿಮೆ; ಅವನ್ನು ಶಾಸ್ತ್ರೀಯ ದೃಷ್ಟಿಯಿಂದ ಗುರುತಿಸಿ ವರ್ಗೀಕರಿಸಿದಂಥ ಪಂಡಿತರ ಸಂಖ್ಯೆಯೂ ಕಡಿಮೆ. ಹಕ್ಕಿಗಳ ಹೆಸರಾದರೂ ಹಾಗೆಯೇ. ಸಾವಿರಾರು ಪಕ್ಷಿಗಳು ನಮ್ಮಲ್ಲಿವೆ. ನಾವು ತೀರ ಪರಿಚಿತವಾದುವಕ್ಕೆ, ಉಪಯೋಗ ಇಲ್ಲವೆ ಉಪದ್ರಕಾರಿಯಾದುವಕ್ಕಷ್ಟೆ ಹೆಸರು ಕೊಟ್ಟಿದ್ದೇವೆ. ಹೆಸರಿಲ್ಲದುವುಗಳು ಸೇಕಡಾ ಲಂರಷ್ಟಾದರೂ ಇವೆ. ಆದುದರಿಂದ ಅಷ್ಟರಮಟ್ಟಿಗೆ ನಮ್ಮ ಜನಗಳ ಪರಿಶೀಲನೆ, ಅನುಭವ-ಬರಡು ಎನ್ನಲೇ ಬೇಕು.

ಇದರಂತೆ—ನಾವು ಅನುಭವಿಸಬಲ್ಲ, ಪರಿಶೀಲಸಬಲ್ಲ ಚಲನೆಗಳ ವಿಚಾರವಾಗಿಯೂ ಹೇಳಬಹುದು.

ನಡೆ, ಓಡು, ಹರಿ, ಹರೆ, ಜಿಗಿ, ನೆಗೆ, ಕುಪ್ಪಳಿಸು—ಇಂಥ ಗತಿ ಸೂಚಕ ಶಬ್ದಗಳು ಕನ್ನಡದಲ್ಲೆಷ್ಟಿವೆ! ಅವುಗಳ ವ್ಯತ್ಯಾಸವನ್ನರಿತು ಬಳಸುವವರು ಎಷ್ಟು ಮಂದಿ? ನಡೆಯಲ್ಲಿ ಎಷ್ಟು ರೀತಿಗಳಿರಬಹುದು? ಜಿಗಿಯುವುದರಲ್ಲೆಷ್ಟು ವಿಧಾನಗಳು? ಹಾರುವುದರಲ್ಲಿ ಯಾವಾವ ನಮೂನೆಗಳಿಲ್ಲ. ಅವನ್ನು ಪ್ರತ್ಯೇಕಿಸಿ ನೋಡಬಲ್ಲ ಕಣ್ಣು ಮೊದಲಿಗೆ ಇರಬೇಕು. ಆ ಅನುಭವವುಳ್ಳ ವ್ಯಕ್ತಿ, ಅವಕ್ಕೆ ತನ್ನ ಶಬ್ದ ಸಂಕೇತವನ್ನು ಬಳಸುವುದು ಸಾಧ್ಯವಾಗುತ್ತದೆ. ಅನುಭವಗಳು ಮಾತನ್ನು ಪ್ರೇರಿಸುವುವಾದರೂ, ಅನುಭವಿಸುವವನ ಅನುಭಾವಿಕ ಶಕ್ತಿಯ ಮೇಲೂ, ಸೂಕ್ಷ್ಮತೆಯ ಮೇಲೂ ಭಾಷೆ ಬೆಳೆಯಬೇಕಾಗುತ್ತದೆ.

ಇದರಂತೆ—ಉಷ್ಣತೆಯ ಮಾನಗಳ ವಿಚಾರ ನಮ್ಮ ಸ್ಪರ್ಷಶಕ್ತಿಯನ್ನು ನಮ್ಮ ಮಾತಿನ ಭಂಡಾರ ಬಹು ಸುಲಭದಲ್ಲಿ ಹೇಳುತ್ತದೆ. ಮಿದು, ನಯ, ಒರಟು, ದೊರಗು, ಕಠಿಣ, ಬಿರುಸು--ಇಂಥವು; ಬಿಸಿ, ಕುದಿ, ಚಪ್ಪೆ (ಸಪ್ಪೆ) ಉಗುರು ಬೆಚ್ಚಗೆ, ತಂಡಿ, ಚಳಿ, ಉರಿ, ಸೆಕೆ--ಇಂಥ ನಿತ್ಯಾನುಭವದ ನುಡಿಗಳೂ ಕನ್ನಡದಲ್ಲಿ ಸಾಲವೆನಿಸುತ್ತದೆ. ಸಾಮಾನ್ಯ ಹಳ್ಳಿಗಳಲ್ಲಿ ರೂಢಿಯಲ್ಲಿರುವ ಇಂಥ ಅನೇಕ ಜೀವಂತ ಪದಗಳನ್ನು ನಮ್ಮ ಸಾಹಿತಿಗಳು ಮರೆತು, ಪುಸ್ತಕದಿಂದ ಎರವಲಾಗಿ ಕೊಂಡ ಪದಗಳಿಂದಲೇ ಈ ಸ್ಪರ್ಷಸೂಚಕ ಅನುಭವಗಳನ್ನು ಚಿತ್ರಿಸಲು ಪ್ರಯತ್ನಿಸುತ್ತಿರುವುದು ಭಾಷೆಯ ಬೆಳವಣಿಗೆಗೆ ಸಹಾಯಕವಲ್ಲ.

ಯಾವೊಂದು ಅಲ್ಪಾನುಭವವಿರಲಿ, ಮಹದನುಭವವಿರಲಿ, ಅದು ತಕ್ಕ "ಬಣ್ಣ" (colour) ಇಲ್ಲದೆ ಚಿತ್ರಕಟ್ಟಲಾರದು. ಒಂದು ಇನ್ನೊಂದರಂತಿಲ್ಲ--ಎಂದು ತೋರಿಸಲು ನಮ್ಮ ಇಂದ್ರಿಯಾನುಭವಗಳ ವಿವಿಧ ಸ್ವರೂಪಗಳಿಗೆ ನಾವು ತಕ್ಕ ಮಾತುಗಳನ್ನು ಬಳಸಬೇಕು. ಅವು ಇಲ್ಲನಲ್ಲಿ ನಿರ್ಮಿಸಬೇಕು, ಎರವಲಾಗಿ ತರಬೇಕು. ಆ ಅವಶ್ಯಕತೆ ನಮಗೆ ಕಾಣಿಸಲು—ನಮ್ಮಲ್ಲಿ ಸೂಕ್ಷ್ಮವಾದ ಅನುಭವ ಶಕ್ತಿ ಮೊದಲಿಗೇ ಉಂಟಾಗಬೇಕು.

ಇಂದ್ರಿಯಾನುಭವಗಳ ವಿಸ್ತಾರ ರಾಜ್ಯವೇ, ಭಾವಾನುಭವಗಳನ್ನು ಪ್ರೇರಿಸುವ ಶಕ್ತಿ. ಹೀಗಿರುತ್ತ--ಇಲ್ಲಿ ಮಾತಿನ ಸಂಪತ್ತು ಸಾಕಷ್ಟಿದ್ದರೆ, ಆಗ ಭಾವನೆಗಳನ್ನು ವ್ಯಕ್ತಮಾಡುವವನಿಗೆ—ತಕ್ಕ ನುಡಿಕಟ್ಟು, ರೂಪಕ, ಅಲಂಕಾರ ದೊರತೇ ದೊರೆಯುತ್ತದೆ. ಅಂತು ಭಾಷೆಯೆಂಬುದು ಬೆಳೆಯಲು ಅತಿ ಅವಶ್ಯವಾದ ಮೂಲಸಾಧನ—ಮನುಷ್ಯ ಸ್ವಭಾವ ಎಂದ ಹಾಗಾಯಿತು. ಆತನ ಮನಸ್ಸು ಗ್ರಾಹ್ಯ ಶಕ್ತಿಯುಳ್ಳದಾಗಿದ್ದು, ಒಂದೊಂದು ಅನುಭವ ವಿಶೇಷವನ್ನೂ ಇನ್ನೊಂದರಿಂದ ಭಿನ್ನವಾಗಿರುವುದನ್ನು ಗುರುತಿಸಬಲ್ಲುದಾಗಿದ್ದರೆ ಮಾತ್ರ, ಅನುಭವಗಳ ಸಂಖ್ಯೆ, ತೂಕ, ಆಳ, ವಿಸ್ತಾರಗಳು ಹೆಚ್ಚಿ ಅವಕ್ಕೆ ತಕ್ಕ ಮಾತಿನ ಮುಖವುಂಟಾಗುತ್ತದೆ.

ಹಿಂದಿನ ಅನುಭವಗಳನ್ನು ಎಷ್ಟೆಷ್ಟು ಜ್ಞಾಪಕದಲ್ಲಿರಿಸಿಕೊಳ್ಳುತ್ತೇವೋ, ಆಗ ಮುಂದಿನದನ್ನು ಚಿತ್ರಿಸಲು ಹೆಚ್ಚಿಗೆ ಅನುಕೂಲವಾಗುತ್ತದೆ. ಚಂದ್ರಬಿಂಬದಿಂದ ಪುಲಕಿತವಾದ ಒಬ್ಬನ ಮನಸ್ಸು, ಎಂದಾದರೊಮ್ಮೆ ತನ್ನ ಪ್ರೇಯಸಿಯ ಸ್ಮರಣೆ ಮಾಡುವಾಗ "ಚಂದ್ರವದನೆ" ಎಂದು ಸ್ಮರಣ ಸಂಬಂಧವನ್ನು ಸ್ಥಾಪಿಸಲು ಶಕ್ತವಾಗುತ್ತದೆ. ಪ್ರತಿಭೆಗೆ ಇದು ಅತಿ ಅವಶ್ಯವಾದ ಪೂರ್ವಾನುಭವದ ಬೊಕ್ಕಸ.

ಭಾವನೆ, ಅನುಭವಗಳನ್ನು ಮಾತು ಒಬ್ಬರಿಂದೊಬ್ಬರಿಗೆ ಹಂಚುವಷ್ಟೆ ಮುಖ್ಯವಾದ ಕೆಲಸ—ಜ್ಞಾನವನ್ನು ಹಂಚುವ ಕೆಲಸ; ವಿಚಾರವನ್ನು ಹಂಚುವ ಕೆಲಸ. ಜ್ಞಾನ ಸಾಹಿತ್ಯಗಳಲ್ಲಿ, ವಿಚಾರ ಸಾಹಿತ್ಯಗಳಲ್ಲಿ ಭಾವಾವೇಶಗಳು ಮುಖ್ಯವಲ್ಲ. ಅವು ಇರಬಾರದೆಂದಲ್ಲ; ಅವಿಲ್ಲದೆಯೂ ಬೆಳೆಯಬಹುದಾದ ಕ್ಷೇತ್ರವಿದು. ತನ್ನ ಅನುಭವಗಳನ್ನೂ ತನ್ನ ಸಮಾಜದ ಅನುಭವಗಳನ್ನೂ, ತನ್ನ ಮಾನವ ಕುಲದ ಅನುಭವಗಳನ್ನೂ ತಿಳಿದು ಸಂಗ್ರಹಿಸಿ—ಚರಿತ್ರೆ, ಇತಿಹಾಸಗಳುಂಟಾಗುತ್ತವೆ. ನಮ್ಮ ಆವರಣ, ಕಾಲ, ದೇಶಗಳನ್ನು ಪರಿಶೀಲಿಸಿ ಭೂಗೋಲದ ಜ್ಞಾನ ಬರುತ್ತದೆ. ಇವುಗಳಿಂದ ಕಾರ್ಯ, ಕಾರಣಗಳನ್ನು ಮನಸ್ಸು ತರ್ಕಿಸುತ್ತದೆ; ಸಿದ್ಧಾಂತಪಡಿಸುತ್ತದೆ.

ಸಾಮಾಜಿಕ ನೀತಿಯ ಪರಿಶೀಲನೆಯಿಂದ ಇತಿಹಾಸದೊಂದಿಗೆ ಅದನ್ನು ಹೋಲಿಸಿ ಅಭ್ಯಸಿಸುವುದರಿಂದ "ರಾಜನೀತಿ"ಯಂಥ ವಿಚಾರಪರ ಸಾಹಿತ್ಯವುಂಟಾಗುತ್ತದೆ. ಜ್ಞಾನ, ವಿಚಾರ, ಅನುಭವ, ಭಾವನೆಗಳ ವಿಚಿತ್ರ ಮೇಳದಿಂದ-ಇಂದು, ನಿನ್ನೆ, ನಾಳೆಗಳನ್ನು ಕುರಿತು ಯೋಚಿಸಿ, ತನ್ನನ್ನೂ ತಾನಿರುವ ವಿಶ್ವವನ್ನೂ ತುಲನೆಗೆ ಗುರಿಮಾಡಿ ನಾನಾಬಗೆಯ ತತ್ವಶಾಸ್ತ್ರಗಳುಂಟಾಗುತ್ತವೆ. ಹೀಗೆ-ಎಲ್ಲ ಭಾಷೆಗಳಲ್ಲಿಯೂ ನಮ್ಮ ಜ್ಞಾನವನ್ನು, ವಿಚಾರಪರತೆಯನ್ನು ನಾವು ಮಾತಿನ ಮೂಲಕ ಇನ್ನೊಬ್ಬರಿಗೆ ಕೊಡಲು ಭಾಷೆಯು ಸಹಾಯ ಮಾಡುತ್ತದೆ.

ಈ ದೃಷ್ಟಿಯಿಂದಲೂ ಕನ್ನಡ ಭಾಷೆಯ ಬೆಳವಣಿಗೆ ಸಾಲದೇ ಸಾಲದು. ಜ್ಞಾನಪರ ಸಾಹಿತ್ಯವು ಬೆಳೆಯುವುದಕ್ಕೆ ಒಳ್ಳೆಯ ಕ್ಷೇತ್ರ—ಆಯಾಯ ಜ್ಞಾನಪರ ಕ್ಷೇತ್ರಗಳಲ್ಲಿ ಶೋಧನೆ, ಪರಿಶೀಲನೆಗಳಾಗಬೇಕಾಗಿವೆ. ಆಗ—ಕಂಡು ಹಿಡಿದ ವಸ್ತು, ಅನುಭವ, ತರ್ಕಗಳಿಗೆಲ್ಲ ಒಂದೊಂದು ಮಾತು ನಿರ್ಮಾಣವಾಗಬೇಕಾಗುತ್ತದೆ. ಇಂದು ಸಂಸ್ಕೃತ ಭಾಷೆಯಲ್ಲಿ ಆಯುರ್ವೇದದಲ್ಲಿ ಕಾಣುವ ರೋಗ, ಚಿಕಿತ್ಸೆ, ನಿದಾನಗಳಿಗೆ ಸಂಬಂಧಿಸಿದ ಶಬ್ದ ಸಂಪತ್ತನ್ನು ನಾವು ಕನ್ನಡದಲ್ಲಿ ಕಾಣದಿರಲು ಕಾರಣ—ಅಂಥ ಜನಗಳು ನಮ್ಮಲ್ಲಿಲ್ಲವೆಂದೇ. ವಿಜ್ಞಾನ ಸಂಶೋಧಕರು, ಅಭ್ಯಾಸಿಗಳು ನಮ್ಮಲ್ಲಿ ಹೆಚ್ಚದೆಯೆ, ನಾವು ಭಾಷೆಯನ್ನು ಈ ದೃಷ್ಟಿಯಿಂದ ಬೆಳೆಸಲಾರೆವು. ಬೆಳೆಯಿಸದೆ ಹೋದಲ್ಲಿ, ಬೆಳೆಯಿಸಿದಂಥ ಜನಗಳ ನುಡಿಗಳು ನಮ್ಮಲ್ಲಿಗೆ ಬರತೊಡಗುತ್ತವೆ.ಇನ್‌ಫ್ಲೂಯೆಂಜಾ, ನಿಮೋನಿಯಾ, ಟ್ಯಾಫಾಯ್ಡ್, ಕೆನ್ಸರ್—ಇಂಥ ಶಬ್ದಗಳ ದಾಳಿ ಕನ್ನಡದಲ್ಲಾಗಲು, ಆ ಬೇನೆಗಳು ನಮ್ಮಲ್ಲಿಲ್ಲದುದರಿಂದಲ್ಲ. ಆ ಸಂಬಂಧದ ಜ್ಞಾನವಿಜ್ಞಾನಗಳು ಭರದಿಂದ ಇಂಗ್ಲಿಷಿಂದ ನಮ್ಮಲ್ಲಿಗೆ ಬರುತ್ತಿರುವುದೇ ಕಾರಣ.

ಇಂದು ಸಾಮಾಜಿಕ, ಭೌತ ವಿಜ್ಞಾನಗಳಲ್ಲಿ ನಮ್ಮ ಜನ ತೀರ ಹಿಂದುಳಿದುದರಿಂದ,ಕನ್ನಡ ನುಡಿ ಅಷ್ಟೇ ಹಿಂದುಳಿದಿದೆ. ಅದರಂತೆಯೇ—ವಿಚಾರ ಸಾಹಿತ್ಯದ ಗತಿಯಾಗಿದೆ. ತತ್ವಜ್ಞಾನದಲ್ಲಿ ಭರತಖಂಡವು ಬಹುವಾಗಿ ಮುಂದುವರಿದಿತ್ತು. ಇಂದು ಸಂಸ್ಕೃತದಲ್ಲಿ ಅದಕ್ಕೆ ಬೇಕಾದ ಶಬ್ದ ಸಂಪತ್ತು ಸಾಕಷ್ಟಿದೆ. ಆದರೆ ಕನ್ನಡದಲ್ಲಿ-ಅಲ್ಲಿನ ಹಲವಾರು ಮಾತುಗಳು ಬಳಕೆಗೆ ಬಂದಿವೆಯಾದರೂ, ವಿಚಾರಿಗಳ ಸಂಖ್ಯೆಯು ಕಡಿಮೆಯಾದುದರಿಂದ, ಸಂಸ್ಕೃತ ಭಾಷೆಯಲ್ಲಿ "ತತ್ವಜ್ಞಾನ"ಕ್ಕೆ ಸಂಬಂಧಿಸಿದಂಥ ಬೇರೆಬೇರೆ ಮಾತುಗಳಿಗೆ ಯಾವಯಾವ ನಿಶ್ಚಿತಾರ್ಥಗಳು ಇವೆಯೋ ಅವು ಕನ್ನಡ ನುಡಿಯಲ್ಲಿ ಕಾಣದೆ ಹೋಗಿವೆ. ಏಕೆಂದರೆ—ಕನ್ನಡದ ಮೂಲಕ ಅಂಥ ವಿಚಾರಗಳನ್ನು ಹೇಳಹೋದವರು, ವಿಚಾರ ಮಾಡುತ್ತಿರುವವರು ವಿರಳರಾಗಿದ್ದಾರೆ. ಇಂದಿನ ಜೀವನದಲ್ಲಿ ಪಾರಮಾರ್ಥಿಕಕ್ಕಿಂತ ಲೌಕಿಕವೇ ಪ್ರಧಾನಾಂಗವಾಗಿ ಬಂದಿರುವಾಗಲೂ—ಲೌಕಿಕ ಜೀವನಕ್ಕೆ ಅವಶ್ಯವಾದ ಶಬ್ದ ಸಂಪತ್ತೂ ನಮಲ್ಲಿಲ್ಲ. ಸರಕಾರಕ್ಕೆ, ಆಡಳಿತೆಗೆ, ಘಟನೆಗೆ, ರಾಜನೀತಿಗೆ, ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಮಾತುಗಳು ಕಡಿಮೆ. ಇರುವ ಮಾತುಗಳನ್ನು ಸ್ಪಷ್ಟವಾದ,ನಿಶ್ಚಿತವಾದ ಅರ್ಥಗಳಲ್ಲಿ ಬಳಸುವ ಜನ, ಬಳಸಬಲ್ಲ ಜನರು ಕಡಿಮೆ. ಅಂದರೆ ನಮ್ಮ ಮಾನಸಿಕ ಜೀವನವು ಈ ವಿಚಾರಗಳಲ್ಲಿ ಹಿಂದಕ್ಕೆ ಬಿದ್ದಿರುವುದರಿಂದಲೇ ಹೀಗಾಗುತ್ತಿದೆ.

ಒಂದು ಸಮಾಜದಲ್ಲಿನ ವ್ಯಕ್ತಿಗಳ ಹಿರಿಮೆ, ಸೂಕ್ಷ್ಮ ಜೀವನ, ಮಾನಸಿಕ ಜೀವನ, ಸಾಧನೆಗಳು ಬೆಳೆಯದೆಯೇ ಆ ಜನಸಮುದಾಯದ ಭಾಷೆಯು ಬೆಳೆಯಲಾರದು. ಅನುವಾದದಿಂದ ಆ ಕೆಲಸವಾಡುತ್ತೇವೆ-ಎನ್ನುವುದು ಸರಿಯಲ್ಲ. ಅನುವಾದ, ಇಲ್ಲದ ಜ್ಞಾನವನ್ನು ಜನಕ್ಕೆ ದೊರಕಿಸಲು ಅನಿವಾರ್ಯದ ಕೆಲಸ. ಅದು ಆಗಲೇ ಬೇಕು. ಆದರೆ-ಜನರು ತಾವಾಗಿ ತಮ್ಮ ತಾಯ್ನುಡಿಯಲ್ಲಿ ಅನುಭವಿಸಿದ್ದನ್ನು, ತಿಳಿದದ್ದನ್ನು, ತರ್ಕಿಸಿದ್ದನ್ನು, ಯೋಚಿಸಿದ್ದನ್ನು ಹೇಳಲು ಕಲಿತಲ್ಲದೆ ನುಡಿ ಬೆಳೆಯಲಾರದು.

ಬರಿಯ ಶಬ್ದಗಳ ಸಮುದಾಯವನ್ನು ಹೆಚ್ಚಿಸಿಕೊಂಡ ಮಾತ್ರದಿಂದ ಒಂದು ಭಾಷೆಯು ಅಭಿವೃದ್ಧಿಗೆ ಬಂದಿದೆ ಎಂದು ತರ್ಕಿಸಬೇಕಿಲ್ಲ. ಆ ಶಬ್ದಗಳನ್ನು ಬಳಸುವ ದಾರಿಯು—ಅಂದರೆ ಭಾಷಾಶೈಲಿಯೂ ಅಷ್ಟೇ ಮುಖ್ಯ ಸಂಗತಿಯಾಗಿದೆ. ಮನಸ್ಸಿನ ಭಾವನೆ, ವಿಚಾರಗಳನ್ನು ಹೊರಗೆಡಹಲು ಶೈಲಿ ಅವಶ್ಯವಾದ ಸಾಧನೆ.ಒಳಗಿನ ಭಾವನ,ವಿಚಾರಗಳು ಎಷ್ಟೆಷ್ಟು ತಿಳಿಯೂ, ಸ್ಪಷ್ಟವೂ ಆಗಿರುತ್ತವೋ ಅಷ್ಟಷ್ಟೆ ಶೈಲಿಯ ವರ್ಚಸ್ಸು ಅಧಿಕ. ಮಾತಾಡುವವನ ಮನಸ್ಸಿನಲ್ಲಿ ತಾನು ಹೇಳುತ್ತಿರುವ ಸಂಗತಿಗಳೇನೆಂಬುದು ಚೆನ್ನಾಗಿ ತಿಳಿದಿರಬೇಕು. ಜ್ಞಾನ ವೈಕಲ್ಯವಿರಬಾರದು. ರಾಜಕೀಯವಿರಲಿ, ವಿಜ್ಞಾನವಿರಲಿ, ತತ್ವಜ್ಞಾನವಿರಲಿ—ವಿಷಯ ತನಗೆ ಚೆನ್ನಾಗಿ ತಿಳಿದಿರಬೇಕು. ಅಂಥವನಿಂದ ಮಾತ್ರ ಸ್ಪಷ್ಟ, ಗ್ರಾಹ್ಯ ಶೈಲಿ ಹೊರಡುತ್ತದೆ. ಬರಿಯ ಶಬ್ದಾಡಂಬರಕ್ಕೆ ಮನಸೋತು ಆಡುವವರು, ಬರೆಯುವವರು, ಅಲಂಕಾರಗಳನ್ನು ಬಳಸುವವರು ಭಾಷೆಯ ಬೆಳವಣಿಗೆಗೆ ಎಂದೂ ಸಹಾಯಮಾಡಲಾರರು. ಅದರಂತೆ ಶುದ್ಧ ಸಾಹಿತ್ಯದಲ್ಲೂ—ಭಾವನೆ ತಿಳಿಯಾಗಿ,ಆಳವಾಗಿ ಇಲ್ಲದೆಹೋದರೆ ಭಾಷೆಯು ಶಿಥಿಲವಾಗುತ್ತದೆ; ಮಾತು, ವಾಕ್ಯ ಜೊಳ್ಳಾಗುತ್ತವೆ. ಆದುದರಿಂದಲೇ ಇಂಗ್ಲಿಷಿನಲ್ಲಿ Style is the man. ಶೈಲಿಯೇ ಮಾನವನ ಬಿಂಬ-ಎಂಬ ನಾಣ್ನುಡಿ ಹೊರಟದ್ದು. ಒಂದು ಜನವರ್ಗದ ಭಾಷೆ ಬೆಳೆಯುವುದಕ್ಕೆ—ಪ್ರಭಾವಶಾಲಿ ಮಾನವರ ಸಂಖೆಯು ಬೆಳೆಯಬೇಕಾಗುತ್ತದೆ.

---

# ಪ್ರಕೃತಿ ದರ್ಶನ: ಕವಿಯ ದೃಷ್ಟಿಯಲ್ಲಿ

ಕವಿಯ ದೃಷ್ಟಿಗೆ ಪ್ರಕೃತಿ ಹೇಗೆ ಕಾಣುತ್ತದೆ? ಎಂಬ ಪ್ರಶ್ನೆಗೆ ಅಂಗವಾಗಿ ಇನ್ನೆರಡು ಪ್ರಶ್ನೆಗಳು ಉದ್ಭವಿಸುತ್ತವೆ. ಅವುಗಳನ್ನು ಪರಿಶೀಲಿಸದೆ ಮುಂದುವರಿದರೆ ತಪ್ಪಾಗುತ್ತದೆ. ಏಕೆಂದರೆ ಕವಿ ಮತ್ತು ಪ್ರಕೃತಿ ಎಂಬ ಪದಗಳು ಒಂದು, ಎರಡು, ಮೂರು, ನಾಲ್ಕು ಎಂಬ ಅಂಕಿಗಳಂತೆ ನಿರ್ವಿಶಿಷ್ಟವೂ ನಿರ್ವಿವಿಧವೂ ನಿರ್ವಿವಾದವೂ ಆಗಿರುವ ಅರ್ಥವನ್ನು ಸೂಚಿಸುವುದಿಲ್ಲ. ಕವಿ ಮತ್ತು ಪ್ರಕೃತಿ ಎಂಬ ಸತ್ಯಗಳು ೪×೨ = ೮ ಎಂಬ ಗಣಿತ ಸತ್ಯದಂತಲ್ಲ. ಕವಿ ಎಂದೊಡನೆ ಯಾವ ಕವಿ ಎಂಬ ಪ್ರಶ್ನೆ ಏಳುತ್ತದೆ. ಗಣಿತದಲ್ಲಿ ೨ ಎಂದೊಡನೆ ಯಾವ ೨ಎಂಬ ಪ್ರಶ್ನೆ ಏಳುವುದಿಲ್ಲ. ಹಾಗೆಯೆ ಪ್ರಕೃತಿ ಎಂದೊಡನೆ ಎಂತಹ ಪ್ರಕೃತಿ? ದೃಕ್ ಪ್ರಕೃತಿಯೋ? ಅಪರಾ ಪ್ರಕೃತಿಯೋ? ಪರಾ ಪ್ರಕೃತಿಯೋ? ವೈಜ್ಞಾನಿಕನ ಪ್ರಕೃತಿಯೋ? ತತ್ವಶಾಸ್ತ್ರದ ಪ್ರಕೃತಿಯೋ? ಎಂದೆಲ್ಲ ಪ್ರಶ್ನೆಗಳು ಸುಳಿಯಬಹುದು.

ಕವಿಗಳೆಲ್ಲ ಒಂದೆ ತೆರನಲ್ಲ. ಒಬ್ಬೊಬ್ಬ ಕವಿಯೂ ವಿಶಿಷ್ಟ ವ್ಯಕ್ತಿ. ಒಬ್ಬೊಬ್ಬನದೂ ಸಂಸ್ಕಾರ ಬೇರೆ, ಬದುಕು ಬೇರೆ, ಜೀವಿತೋದ್ದೇಶ ಬೇರೆ, ಸ್ವಭಾವ ಸ್ವಧರ್ಮಗಳೂ ಬೇರೆ ಬೇರೆ. ಆಶೆ, ರುಚಿ, ಅಭಿರುಚಿ, ವಿದ್ಯೆ, ಸಂಸ್ಕೃತಿ ಎಲ್ಲ ಬೇರೆ ಬೇರೆ. ಊರಿಂದೂರಿಗೆ ನಾಡಿಂದ ನಾಡಿಗೆ ದೇಶದಿಂದ ದೇಶಕ್ಕೆ ಈ ವ್ಯಕ್ತಿತ್ವದ ವ್ಯತ್ಯಾಸಗಳು ಹೆಚ್ಚುತ್ತಾ ಹೋಗುತ್ತವೆ. ಅದರಂತೆ ಪ್ರಕೃತಿಯೂ ವ್ಯತ್ಯಸ್ತವಾಗುತ್ತದೆ. ಮರುಭೂಮಿಗೂ ಮಲೆನಾಡಿಗೂ ಎಷ್ಟು ವ್ಯತ್ಯಾಸ! ಮೈಸೂರಿನ ಚೆಲುವಿನ ಬೃಂದಾವನಕ್ಕೂ ಅಸ್ಸಾಮಿನ ಭೂಕಂಪದ ಪ್ರದೇಶಕ್ಕೂ ಎಷ್ಟು ವ್ಯತ್ಯಾಸ! ಉತ್ತರ ಧ್ರುವದ ಕಟುಶೈತ್ಯಕ್ಕೂ ಅರೇಬಿಯಾದ ಉಗ್ರೋಷ್ಣಕ್ಕೂ ಎಷ್ಟು ವೆತ್ಯಾಸ! ಪ್ರಕೃತಿ ಒಂದೆಡೆ ರಮಣೀಯವಾದರೆ ಮತ್ತೊಂದೆಡೆ ರುದ್ರ. ಒಮ್ಮೆ 'ಇಂದುವದನೆ ಕುಂದರದನೆ ಪ್ರಕೃತಿರೂಪಸಿ'; ಇನ್ನೊಮ್ಮೆ 'ರಕ್ತಮುಖಿ ರಕ್ತನಖಿ ಪ್ರಕೃತಿ ರಾಕ್ಷಸಿ.' ನೆಮ್ಮದಿಯಾಗಿರುವ ಸುಂದರ ಪ್ರದೇಶದಲ್ಲಿ ಹುಟ್ಟಿ ಬೆಳೆದು ಬಾಳು ಸಾಗಿಸುವ ಕವಿಗೆ ಪ್ರಕೃತಿ 'ರೂಪಸಿ'ಯಾಗುತ್ತಾಳೆ. ಸರ್ವದಾ ಕಷ್ಟಕ್ಲೇಶ ಕಂಟಕಮಯವಾದ ಕ್ರೂರ ಪ್ರದೇಶದಲ್ಲಿ ದುಡಿದು ಕಡಿದು ಬದುಕುವ ಕವಿಗೆ ಪ್ರಕೃತಿ 'ರಾಕ್ಷಸಿ'ಯಾಗುತ್ತಾಳೆ. ಹೀಗೆ ಕವಿ ಮತ್ತು ಪ್ರಕೃತಿ ಎಂಬ ಎರಡು ಪದಗಳಿಗೂ ಬಹುಮುಖಗಳಿರುವಾಗ 'ಕವಿಯ ದೃಷ್ಟಿಯಲ್ಲಿ ಪ್ರಕೃತಿ ಹೇಗೆ ಕಾಣುತ್ತದೆ?' ಎಂಬ ಪ್ರಶ್ನೆಗೆ ಕೊಡುವ ಉತ್ತರಕ್ಕೂ ಬಹುಮುಖಗಳಿರಬೇಕಾಗುತ್ತದೆ. ಆದರೆ ಎಲ್ಲ ಮುಖಗಳನ್ನೂ ಎಲ್ಲ ಮುಖಗಳಿಂದಲೂ ಪರಿಶೀಲಿಸುವುದು ಇಲ್ಲಿ ಸಾಧ್ಯವಿಲ್ಲ. ಆದ್ದರಿಂದ ಕವಿ ಮತ್ತು ಪ್ರಕೃತಿ ಎಂಬ ಪದಗಳಿಗಿರುವ ಒಂದು ಸರ್ವ ಸಾಧಾರಣವೂ ಸರ್ವ ಸಂಪೂರ್ಣವೂ ಆದ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ಉತ್ತರದ ವ್ಯಾಪ್ತಿಯನ್ನಾಗಲಿ, ಮಿತಿಯನ್ನಾಗಲಿ ಮರೆಯದೆ ಮುಂಬರಿಯುತ್ತೇವೆ.

ಕವಿ ಎಂದರೆ ಯಾರು? ಪ್ರಕೃತಿ ಎಂದರೆ ಏನು? ಎಂಬ ವಿಚಾರ ಇಲ್ಲಿಗೆ ಎಷ್ಟೇ ಪ್ರಕೃತವಾದರೂ ನಾವು ಅದರ ಜಿಜ್ಞಾಸೆಯ ಗೋಜಿಗೆ ಹೋಗುವುದಿಲ್ಲ. ಕವಿ ಎಂಬ ಪದಕ್ಕೆ ಪದ್ಯ ಹೆಣೆಯುವವನು ಎಂಬರ್ಥದಿಂದ ಹಿಡಿದು ದ್ರಷ್ಟಾರನಾದ ರಸ ಋಷಿ ಎಂಬರ್ಥದ ವರೆಗೆ ವ್ಯಾಪ್ತಿಯಿದೆ. ಪ್ರಕೃತಿ ಎಂಬ ಪದದಲ್ಲಿ ನಮ್ಮ ಸುತ್ತ ಮುತ್ತ ಇರುವ ಮತ್ತು ತನಗೆ ತಾನೆ ಆಗಿರುವ ಎಲ್ಲ ವಸ್ತು ಸಮೂಹಗಳೂ ಸೇರುತ್ತವೆ. ಆದರೆ ಬಳಕೆಯಲ್ಲಿ ಆ ಮಾತಿಗೆ ವಿಶೇಷವಾಗಿ ಇಂದ್ರಿಯ ಗೋಚರವಾದ ಸುಂದರ ನಿಸರ್ಗ ಎಂಬರ್ಥವಿರುತ್ತದೆ. ಎಂದರೆ ಕಾಡು ಬೆಟ್ಟ ಹೊಳೆ ಕೆರೆ ಗದ್ದೆ ಹೊಲ ಬಯಲು ಮಲೆ ಬಾನು ಬೆಳಗು ಬೈಗು ಇರುಳು ಚುಕ್ಕಿ ಹಕ್ಕಿ ಮಿಗ ಮುಗಿಲು ಕಡಲು ನೇಸರು ತಿಂಗಳು ಮಳೆ ಗುಡುಗು ಮಿಂಚು ಗಾಳಿ ಬಿಸಿಲು ತಳಿರು ಹೂವು ಇತ್ಯಾದಿ ಇತ್ಯಾದಿ.

ಇದನ್ನೆಲ್ಲ ಗಮನಿಸಿದ ಮೇಲೆ ನಮ್ಮ ಪ್ರಶ್ನೆ ಈ ರೂಪ ತಾಳುತ್ತದೆ: 'ರಸಋಷಿಯಾದ ಕವಿಯ ಪೂರ್ಣ ದೃಷ್ಟಿಗೆ ಗೋಚರವಾಗುವ ಪ್ರಕೃತಿ ದರ್ಶನದ ಸ್ವರೂಪವೇನು?'

ಪ್ರಕೃತಿ ವಿಷಯವಾದ ಕವಿಯ ದೃಷ್ಟಿ ಪೂರ್ಣದೃಷ್ಟಿಯಾಗಿ, ಅದು 'ದರ್ಶನ' ಎಂಬ ಹೆಸರಿಗೆ ಅರ್ಹವಾಗಬೇಕಾದರೆ ಕಾಲವೂ ಬೇಕು, ಸಾಧನೆಯೂ ಬೇಕು. ಅರಿತು ಮಾಡಲಿ, ಅರಿಯದೆ ಮಾಡಲಿ ಆ ಸಾಧನೆ ತಪಸ್ಯೆಯ ರೂಪವನ್ನು ತಾಳಿಯೆ ತಾಳುತ್ತದೆ. ಅಂತಹ ಸಹಜಯೋಗ ಸಾಧನೆಯಿಂದ ಕವಿ ದ್ರಷ್ಟಾರನಾದ ರಸಋಷಿಯಾಗಿ ಪೂರ್ಣ ದೃಷ್ಟಿಯ 'ದರ್ಶನ'ಕ್ಕೇರುತ್ತಾನೆ.

ಬಾಲ್ಯದ ಬಹಿರ್ಮುಖವಾದ ಪ್ರಜ್ಞೆಗೆ ಪ್ರಕೃತಿ ಒಮ್ಮೆ ಆಡುಂಬೊಲವಾಗಿಯೂ ಒಮ್ಮೆ ಆಟದ ವಸ್ತುವಿನಂತೆಯೂ ಒಮ್ಮೆ ಜೊತೆ ಆಡುವ ಆಟಗಾರನಂತೆಯೂ ಗೋಚರವಾಗುತ್ತದೆ. ಮಳೆ, ಗಾಳಿ, ಮಿಂಚು ಇಂತಹ ಪ್ರಕೃತಿ ವ್ಯಾಪಾರಗಳು ಬೆದರಿಕೆಗೂ ಬೆಕ್ಕಸಕ್ಕೂ ಕಾರಣವಾದರೆ, ಹಸುರು ಹಕ್ಕಿ ಹೂವು ಮೊದಲಾದುವು ಅದರ ಆನಂದಗಳಿಗೆ ಕಾರಣವಾಗುತ್ತವೆ. ಅಗ ಮರ ಹಣ್ಣು ಕೊಡುವ ಇಷ್ಟ ದೇವತೆಯಾದರೆ ಗಾಳಿ ಹಣ್ಣು ಉದುರಿಸುವ ಗಗನದ ಗೆಳೆಯನಾಗುತ್ತಾನೆ.

ಆಗ ಆಕಾಶ ಆಶ್ಚರ್ಯದ ವಿಷಯವಾಗಿ ಕಂಡರೂ ಅದು ಹುಡುಗನಿಗೆ ಬಹಳ ಸಮೀಪದ ವಸ್ತು: ಮನೆಯ ಮುಂದೆ ಗೋಡೆ ಕಟ್ಟಿ ಹಬ್ಬಿರುವ ಮಲೆಯ ತಲೆಯ ಮೇಲೆ ಒಂದು ಏಣಿ ಹಾಕಿದರೆ ಸರಿ ಆಕಾಶಕ್ಕೆ ತಲುಪುತ್ತೇವೆ! ಆಗ ಪ್ರಕೃತಿ ಸಮಸ್ತವೂ ಪ್ರಜ್ಞಾ ಪೂರ್ವಕವಾದಂತೆ ತೋರುತ್ತದೆ. ಮಗುವಿಗೆ ತನ್ನ ವ್ಯಾಪಾರಕ್ಕೂ ಪ್ರಕೃತಿವ್ಯಾಪಾರಕ್ಕೂ ಪ್ರಭೇದಕಾಣುವುದಿಲ್ಲ. ಸೃಷ್ಟಿಯ, ಎಂದರೆ ಜಡಜೀವ ಮನಸ್ಸು ಎಲ್ಲಸೇರಿ, ಸೃಷ್ಟಿಯ ಸರ್ವವ್ಯಾಪಾರಗಳೂ ಚಿಚ್ಛಕ್ತಿಯ ಪ್ರಕಾಶನದ ಭಿನ್ನ ಭಿನ್ನ ಪ್ರಕಾರಗಳು ಎಂಬ ತುತ್ತತುದಿಯ ಪೂರ್ಣದೃಷ್ಟಿಯ ಸಾಕ್ಷಾತ್ಕಾರ ಪ್ರಜ್ಞೆ, ಇನ್ನೂ ಜ್ಞಾನವಲ್ಲದ ಯಾವುದೋ ಒಂದು ರೀತಿಯಲ್ಲಿ, ಮಗುತನಕ್ಕೆ ಸಹಜವಾಗಿರುವಂತೆ ತೋರುತ್ತದೆ.

ಮಗುವಿನ ಚೇತನ ಅರ್ಧಚಂದ್ರನನ್ನು ಕಂಡು 'ದೇವರ ಪೆಪ್ಪರಮೆಂಟೀನಮ್ಮ ಗಗನದೊಳಲೆಯುವ ಚಂದಿರನು?' ಎನ್ನುತ್ತದೆ. ಬೈಗಿನ ನೇಸರನ್ನು ಕಂಡು 'ಸಂಜೆಯ ರಂಜಿಪ ಸೂರ್ಯನ ತರುವೆನು; ಕೈಬಿಡು ಹೋಗುವೆ ನಾನಮ್ಮ!' ಎಂದು ಸಾಹಸಿಯಾಗುತ್ತದೆ. 'ಕಾಮನ ಬಿಲ್ಲು ಕಮಾನು ಕಟ್ಟಿದೆ ಮೋಡದ ನಾಡಿನ ಬಾಗಿಲಿಗೆ!' ಎಂದು ಕುಣಿಯುತ್ತದೆ. ಆಗಸದಲ್ಲಿ ತೇಲಾಡುವ ಬೆಳ್ಮುಗಿಲು 'ಬಾನೊಳು ಹರಡಿಹ ಬೆಳ್ಳನೆ ಲಾಲಿಕುಲಾಲಿ ಮಿಠಾಯಿ'ಯೋ 'ನೀಲಿಯ ನೀರೊಳು ಬಾನಮ್ಮನಿಟ್ಟಿಹ ಬೆಣ್ಣೆಯ ಮುದ್ದೆಗಳೂ' ಆಗುತ್ತವೆ. ಚಂದ್ರೋದಯವಾದರೆ 'ತಿಂಗಳ್‌ಮಾವ ಬರುತಿದ್ದಾನೆ ನೋಡಮ್ಮ' ಎನ್ನುತ್ತದೆ. ಚಂದ್ರ ಸೂರ್ಯರು ಕೂಡ ಮೂಡಿ ಮುಳುಗುವುದು ಮಗುವಿಗಾಗಿ, ಮಗುವಿನ ಸಂತೋಷಕ್ಕಾಗಿ, ಅದರ ಜೊತೆಗಾರಿಕೆಗಾಗಿ. 'ಎಲ್ಲಿಗೆ ನಾ ಹೋದರಲ್ಲಿಗೆ ಬರುವನು, ಅಮ್ಮಾ, ಚಂದಿರ ನನ್ನವನು' ಎಂಬ ಸತ್ಯದಲ್ಲಿ ಮಗುವಿಗಿನಿತೂ ಅವಿಶ್ವಾಸವಿಲ್ಲ. ಬಾಲ್ಯದ ಅಂತಹ ಸ್ವರ್ಗೀಯವಾದ ಅನುಭವವನ್ನು ಸ್ಮರಿಸಿಕೊಂಡೆ ಪ್ರಕೃತಿ ಉಪಾಸಕನೆಂದು ಪ್ರಸಿದ್ಧನಾಗಿರುವ ಇಂಗ್ಲಿಷ್ ಕವಿ ಹೀಗೆ ಹಾಡಿದ್ದಾನೆ.

"There was a time when meadow, grove
and Stream
The earth and every common Sight,
To me did seem
Apparelled in celestrial light,
The glory and freshness of a dream"

ಬೆಳೆಯುವ ಹುಡುಗನ ಎಳೆಯ ಪ್ರಜ್ಞೆ ವಿಕಾಸವಾದ ಹಾಗೆಲ್ಲ, ಕ್ರಮೇಣ ಪ್ರಕೃತಿ ಅದರ ಮೊದಲಿನ ಅಪೃಥಗ್ ಭಾವದಿಂದ ದೂರ ದೂರವಾಗಿಬಾಲಕನ ಕ್ರೀಡಾದಿ ಕರ್ಮಗಳಿಗೆ ರಂಗ ಭೂಮಿಯಾಗಿ ಪರಿಣಮಿಸುತ್ತದೆ. ಪ್ರಪಂಚದ ಭೌತ ಸ್ವರೂಪವೂ ಮನಸ್ಸಿನ ಮೇಲೆ ತನ್ನ ಅಧಿಕಾರವನ್ನು ಹೆಚ್ಚು ಹೆಚ್ಚಾಗಿ ಸ್ಥಾಪಿಸುತ್ತ ಹೋಗುತ್ತದೆ. ಎಲ್ಲವೂ ತನಗಾಗಿ, ತನ್ನ ಸಂತೋಷಕ್ಕಾಗಿ, ತನ್ನ ಅನುಕೂಲಕ್ಕಾಗಿ ಎಂಬುವ ಭಾವಕ್ಕೆ ಧಕ್ಕೆ ತಗಲುತ್ತಾ ಹೋದಂತೆ ನಮ್ಮ ಪ್ರತ್ಯೇಕತೆಯೂ ವಿಶಿಷ್ಟತೆಯೂ ಅಹಂಕಾರವೂ ಬಲಿಯುತ್ತವೆ. 'ಅಮ್ಮಾ ಅಮ್ಮಾ ತಿಂಡಿ ಕೊಡು' ಎಂದು ಗೋಗರೆದಾಗ ತಾಯಿ ತಿಂಡಿಕೊಡುವಂತೆ 'ಮರವೇ ಮರವೇ ಹಣ್ಣು ಕೊಡು' ಎಂದಾಗ ಮರ ಹಣ್ಣು ಕೊಡುವುದಿಲ್ಲ ಎಂಬುದು ಗೊತ್ತಾಗುತ್ತದೆ. ಹಣ್ಣು ಬೇಕಾದರೆ ಮರ ಹತ್ತಿ ಕೀಳಬೇಕು, ಇಲ್ಲವೆ ಬಡಿಗೆ ಎಸೆದು ಉದುರಿಸಬೇಕು ಎಂಬ ಪೌರುಷ ಬುದ್ಧಿಯೂ ಉದ್ಯೋಗಶೀಲತೆಯೂ ಮೂಡುತ್ತವೆ. ಭೂಮಿಯ ಮೇಲೆ ನಡೆದಂತೆ ನಡೆಯುತ್ತೇವೆ ಎಂದು ನೀರಿಗೆ ಕಾಲಿಟ್ಟಾಗ ಹಳ್ಳಕ್ಕೆ ಬಿದ್ದು ಮೈ ಒದ್ದೆಮಾಡಿಕೊಂಡಮೇಲೇನೀರಿನ ನಿರ್ದಾಕ್ಷಿಣ್ಯಮನಸ್ಸಿಗೆಗೋಚರವಾಗಿ, ನೀರನ್ನು ಗೆಲ್ಲುವುದಕ್ಕಾಗಿ ಈಜು ಕಲಿಯುತ್ತಾನೆ. ಹೀಗೆ ಪ್ರಕೃತಿಯ ನಿರ್ದಾಕ್ಷಿಣ್ಯತೆಯೂ ನಿಷ್ಠುರತೆಯೂ ಮತ್ತೆ ಮತ್ತೆ ಮನಸ್ಸಿಗೆ ತಗುಲಿ ಹುಡುಗನ ಬುದ್ಧಿಯನ್ನು ಅದರ ನಿಯತಿ ಮತ್ತುನಿಯಮನಿಷ್ಠೆಯ ಕಡೆಗೆ ಕೊಂಡೊಯ್ಯುತ್ತವೆ. ಜೊತೆಗೆ ಹಿರಿಯರ ಮಾತುಕತೆ ನಡೆನುಡಿಗಳಿಂದಲೂ ವಿದ್ಯಾಭ್ಯಾಸಕ್ಕಾಗಿ ಓದುವ ಪಠ್ಯಪುಸ್ತಕಾದಿ ಪ್ರಥಮಪಾಠಗಳಿಂದಲೂ ಪೂರ್ವಕವಿಗಳ ಕವನಕೃತಿಗಳಿಂದಲೂ ಮತ್ತು ಇತರ ಕಲಾನುಭವಗಳಿಂದಲೂ ಪ್ರಕೃತಿವಿಷಯವಾದ ಸ್ಥೂಲಾಭಿಪ್ರಾಯಗಳು ರೂಪುಗೊಳ್ಳುತ್ತವೆ.

ಪ್ರಕೃತಿ ಕವಿಪ್ರಜ್ಞೆಯನ್ನು ಮೊತ್ತಮೊದಲು ಆಕರ್ಷಿಸುವುದು ತನ್ನ ವೈಭವಯುಕ್ತವೂ ವೈವಿಧ್ಯಪೂರ್ಣವೂ ಆಗಿರುವ ಸೌಂದರ್ಯದಿಂದ. ಆಕೆಯ ನಾನಾಭಂಗಿಯ ವರ್ಣಮಯ ನರ್ತನ ಅವನ ಚೇತನವನ್ನು ಸೆಳೆಯುತ್ತದೆ. ಆ ಭಾವೋಜ್ವಲ ಆಕರ್ಷಣೆಯ ಸ್ವರೂಪವಾಗಲಿ, ಉದ್ದೇಶವಾಗಲಿ, ಪ್ರಯೋಜನವಾಗಲಿ ಅವನ ಮತಿಗೆ ಆಗ ಗೋಚರಿಸದಿರಬಹುದು. ಆದರೂ ಆ ರಸಾಕರ್ಷಣೆಗೆ ಸಿಲುಕಿ ಅವಶವಾಗಿ ಎಂಬಂತೆ, ಅನಿವಾರ್ಯವಾಗಿ ಎಂಬಂತೆ, ಆಸ್ವಾದನಾ ಮಧುಸ್ರೋತದಲ್ಲಿ ತೇಲುತ್ತಾನೆ; ಆ ತಾವರೆಯ ತೇರನ್ನು ಏರುತ್ತಾನೆ; ಆ ಕಮಲ ಯಾನದ ಕಲಾವಿಮಾನದಲ್ಲಿ ಅನಂತಯಾತ್ರಿಯಾಗುತ್ತಾನೆ:

"ನೀನಂದು ಕನಕರಥವನು ತಂದು ಬಾ ಎಂದು
ಕರೆದಂದು ನಾನು ದೂಳಾಡುತಿದ್ದೆ;
ಹೊಂಬಿಸಿಲು ಹೊಮ್ಮಿತ್ತು, ಖಗಗಾನ ಚಿಮ್ಮಿತ್ತು,
ಕಣ್ದೆರೆದುಕೊಂಡಿತ್ತು ಜಗದ ನಿದ್ದೆ!
ತೇರಿನಾ ಬಣ್ಣವನು ಕಂಡೆ
ಮೊದಲು ಮರುಳಾದೆ;
ಹುಡುಗಾಟ ಎಂದಂದುಕೊಂಡೆ

ಅದನೇರಿ ಹೋದೆ!
ಎಲ್ಲಿಗೊಯ್ಯುವೆ ಎಂದು ನಾ ಕೇಳಲಿಲ್ಲಂದು
ಕೇಳಿದರೆ ನೀನು ನುಡಿಯದಿಹೆ ಇಂದು.
ಬರಿದೆ ಬೆರಳೆತ್ತಿ ತೋರುವೆ; ಮುಂದೆ ನೋಡಿದರೆ
ಹಬ್ಬಿಹುದು ನೀಲಿಮೆಯ ಶೂನ್ಯ ಸಿಂಧು!"

ಕ್ರಮೇಣ ಬಹಿರ್ಮುಖವಾದ ಬಹಿರಂಗ ಸೌಂದರ್ಯದ ಮೋಹಾಕರ್ಷಣೆ ಅಂತರ್ಮುಖವಾದ ಅಂತರಂಗ ಸೌಂದರ್ಯದ ಕಡೆಗೂ ತಿರುಗಿ ಉಪಾಸನಾರೂಪವನ್ನು ತಾಳುತ್ತದೆ. ಪ್ರಕೃತಿಯ ಅದ್ಭುತಶಕ್ತಿ, ಅತ್ಯದ್ಭುತ ರಚನಾಕೌಶಲ, ಅನಿರ್ವಚನೀಯವಾದ ಮಹೋದ್ದೇಶ, ಅಚಿಂತ್ಯವಾದ ಪರಮ ಪುರುಷಾರ್ಥ ಇತ್ಯಾದಿಗಳ ಮನನದಿಂದ ಧ್ಯಾನಗೋಚರವಾಗುವ ಆಕೆಯ ರೂಪ ಆಕೆಯ ಸ್ವರೂಪ ಸತ್ಯವನ್ನೆ ಪರಿವರ್ತನಗೊಳಿಸುತ್ತದೆ. ಹೊರಹೊರಗೆ ಮೃಣ್ಮಯಿಯಾಗಿ ತೋರುವವಳು, ವೈಜ್ಞಾನಿಕವಾದ ನೋಟಕ್ಕೆ ನಿಯಮಮಯಿಯಾಗಿ ತೋರುವವಳು,ವೇದಾಂತಿಯ ದೃಷ್ಟಿಗೆ ಚಿನ್ಮಯಿಶಕ್ತಿಯಾಗಿ ತೋರುವವಳು ಕವಿಪ್ರಜ್ಞೆಗೆ ಆ ಸತ್ಯಮುಖಗಳಲ್ಲಿ ಯಾವುದನ್ನೂ ಅಲ್ಲಗಳೆಯದ ಮತ್ತು ಆ ಎಲ್ಲ ಸತ್ಯಮುಖಗಳನ್ನೂ ಒಳಕೊಳ್ಳುವ ಬ್ರಹ್ಮಮಯಿಯಾಗಿ ಆನಂದಮಯಿಯಾಗಿ ಗೋಚರಿಸುತ್ತಾಳೆ. ಮೊದಮೊದಲು ಬಾಳುವೆಯ ಹಿನ್ನೆಲವಾಗಿ, ಬರಬರುತ್ತ ಕಾವ್ಯಕಲಾಕ್ಷೇತ್ರದ ಹಿನ್ನೆಲೆಯಾಗಿ, ಮತ್ತೆ ಮುಂಬರಿದು ಕಾವ್ಯ ರಮಣೀಯತೆಯನ್ನು ಹೆಚ್ಚಿಸುವ ಅಲಂಕಾರ ಸಾಧನಗಳನ್ನು ಸಮೃದ್ಧಿಯಾಗಿ ಒದಗಿಸುವ ಸೊಬಗಿನ ಗಣಿಯಾಗಿ, ಅದಕ್ಕೂ ಮುಂದೆ ಹೋಗಿ ಸೂಕ್ಷ್ಮತರವಾದ 'ಧ್ವನಿ'ಗೂ ಆಧ್ಯಾತ್ಮಿಕವಾದ 'ದರ್ಶನ'ಕ್ಕೂ ಪ್ರತಿಮಾರೂಪಿಣಿಯಾಗುತ್ತಾಳೆ. ಅಂತಹ ಕವಿಪ್ರಜ್ಞೆಗೆ 'ಪ್ರಕೃತಿಯಾರಾಧನೆಯೆ ಪರಮನಾರಾಧನೆ'ಯಾಗುತ್ತದೆ; 'ಪ್ರಕೃತಿಯೊಲ್ಮೆಯೆ ಮುಕ್ತಿಯಾನಂದ ಸಾಧನೆ'ಯಾಗುತ್ತದೆ.

"ಪ್ರಕೃತಿಯನು ಬ್ರಹ್ಮಮಯಿ ಎಂದರಿತು ಒಲಿದವಗೆ,
ಮೇಣು ಆನಂದಮಯಿ ಎಂದೊಲಿದು ಅರಿತವಗೆ
ದುಗುಡವೆತ್ತಣದು?" . . . . . . .

ಎಂಬ ಒಂದು ಶ್ರದ್ಧೆ, ಧೈರ್ಯ, ಶಾಂತಿ ಹೃದಯವನ್ನು ತುಂಬುತ್ತದೆ. ಅಂತಹ ರಸದೃಷ್ಟಿಗೆ ಸ್ಥೂಲವಾದುದೂ ಜಡವಾದುದೂ ಸಚ್ಚಿದಾನಂದವಾಗಿ ತೋರತೊಡಗುತ್ತದೆ.

"ಈ ಬಿಳಿ ಮಳಲ ರಾಶಿ, ವನಪರ್ಣವಾರಾಶಿ,
ನರ್ತಿಸುತ ಪ್ರವಹಿಸುವ ನೀಲಾಭಜಲ ರಾಶಿ,
ನೀಲ ನೀರವ ಶಕುನದಂತಿರುವ ಆಕಾಶ,
ಎಲ್ಲವೂ ನನ್ನ ದೃಷ್ಟಿಗೆ ಆತ್ಮದಾವೇಶ
ಭಾವಗಳು! ಜಡವಲ್ಲ; ಸ್ಥೂಲ ವಸ್ತುಗಳಲ್ಲ;
ಮೃತ ನಿಸರ್ಗದ ಚೇತನ ವಿಹೀನ ಶವವಲ್ಲ!
ಈಶ್ವರ ಶರೀರದಲಿ ಚಿನ್ಮಯ ಮಹಾಂಗಗಳು;
ಬ್ರಹ್ಮದ ಮಹಾಚಿತ್ತ ಶರಧಿಯ ತರಂಗಗಳು;
ಚಿಂತೆಗಳು ನನ್ನ ಮನದಲಿ, ನನ್ನ ನಾಡಿಯಲಿ
ರಕ್ತ ಬಿಂದುಗಳು! ನಾನುಸಿರೆಳೆಯೆ ಮೋಡದಲಿ
ಶ್ವಾಸವಾಡುವುದು! . . . . ."

ಎಂಬ ತಾದಾತ್ಮ್ಯಾನುಭವವುಂಟಾಗುತ್ತದೆ. ಅಂತಹ ರಸಸ್ಥಿತಿಗೆ ಎಲ್ಲೆಲ್ಲಿಯೂ ಚೈತನ್ಯವೆ ಗೋಚರವಾಗುತ್ತದೆ.

"ಹನಿಯನು ನಾನನುಭವಿಸುವ ಪ್ರೀತಿ
ಆ ಹನಿ ನನ್ನನು ರಮಿಸುವ ರೀತಿ!
ನನ್ನಡಿ ಸೋಂಕಿಹ ಈ ಹುಲ್ಲು
ಇನಿಯನ ತುಟಿ ಸೋಂಕನೆ ಸವಿಯುತ್ತಿದೆ!
ಪ್ರೀತಿಯ ಮುತ್ತಿಗೆ ಹಾತೊರೆಯುತ್ತಿದೆ
ಚೇತನ ಮೂರ್ತಿಯು ಆ ಕಲ್ಲು :–
ತೆಗೆ! ಜಡವೆಂಬುದೆ ಬರಿಸುಳ್ಳು!"

ರಸಋಷಿಯಾದ ಕವಿಯ ಪೂರ್ಣ ದೃಷ್ಟಿಗೆ ಪ್ರಕೃತಿ ಪರಮಾತ್ಮನ ಚಿನ್ಮಯ ದಿವ್ಯ ಶರೀರವಾಗಿ ತೋರುತ್ತದೆ. ಇಂದ್ರಿಯ ವ್ಯಾಪಾರಗಳೆಲ್ಲ ಪೂಜೆಯಾಗಿ ಪರಿಣಮಿಸುತ್ತವೆ.

"ಸುಂದರ ಮಹೇಶ್ವರನ ರಸಮಯ ಶರೀರವಿದು
ವಿಶ್ವರೂಪದಿ ನಮಗೆ ತೋರುತಿದೆ. ಜೀವನಂ
ಕ್ಷಣಕ್ಷಣಕೆ ಮುಟ್ಟುತಿಹುದಾತನಂ, ಘ್ರಾಣದಲಿ
ಸ್ಪರ್ಶದಲಿ ರುಚಿಯಲ್ಲಿ, ಶ್ರೋತ್ರ ದೃಷ್ಟಿಗಳಲ್ಲಿ.
ಎದೆ ತುಂಬಿ ಬಾಳುವುದೆ ಪ್ರಾಣಕರ್ಪೂರಮಂ
ಪೊತ್ತಿಸೆತ್ತುವ ಮಂಗಳಾರತಿ . . . . . ."

ದ್ರಷ್ಟಾರನಾದ ಕವಿಯ ಪೂರ್ಣದೃಷ್ಟಿಗೆ ಪ್ರಕೃತಿ ಮರ್ತ್ಯಗೋಚರವಾದ ಜಗತ್ತಷ್ಟರಿಂದಲೇ ಪೂರೈಸುವುದಿಲ್ಲ. ಅವಳು ಉರ್ವಶಿಯೂ ಹೌದು, ವಿಶ್ವಂಭರೆಯೂ ಹೌದು, ಅಂತರ್ಯಾಮಿಯೂ ಹೌದು ಅತೀತೆಯೂ ಹೌದು. ಅವಳು ಸೃಷ್ಟಿರತಿ, ಕಲಾಸುಂದರಿ, ಜಗದ್ಧಾತ್ರಿ, ಜಗಜ್ಜನನಿ, ಮಹಾಮಾಯೆ, ಆದಿಶಕ್ತಿ. ಸೃಷ್ಟಿಯೆಲ್ಲ ಅವಳ ಲೀಲಾ ವ್ಯಕ್ತಿ; ಜನನ ಮರಣ ಕಾಲ ದೇಶಗಳು ಅವಳ ನರ್ತನದ ಚರಣನ್ಯಾಸಗಳು.

"ಮೊದಲ ಬಯಕೆ ಸಿಡಿದ ಕಿಡಿ,
ಮೊದಲ ಗಾನವೊಗೆದ ನುಡಿ,
ನೀನೆ ಕಡಲು, ನೀನೆ ತಡಿ,
ಹೇ ವಿಶ್ವದೇಹಿನಿ!.."

"ಸೂರ್ಯ ಚಂದ್ರರುದಯದಲಿ
ಪೂರ್ವದಿಶಾ ಹೃದಯದಲಿ,

ಸ್ವರ್ಣ ಸ್ವಪ್ನರಂಗಿನಿ!

ವರ್ಣಜಲಧಿ ಮಥನದಿ
ಬಣ್ಣ ಬಳಿವೆ ಜತನದಿ
ಓ ಭಾವನಾಂಗಿನಿ!"

"ಚರಾಚರಗಳಂತರದಿ
ಉರಿಯುತಿಹೆ ನಿರಂತರದಿ,
ಹೇ ಪ್ರೇಮೋನ್ಮಾದಿನಿ!

ನಿನ್ನ ಮೋಹ ಶಕ್ತಿಯಿಂ
ಬದುಕಿದೆ ಸೆರೆ ಮುಕ್ತಿಯಿಂ
ಓ ಬಂಧನ ಮೋದಿನಿ!"

"ಶತ ಸಹಸ್ರ ನಿಯತಿ ಲೋಲೆ
ನೀನ್ ಅಕೂಲ ಮುಕ್ತಿಶೀಲೆ.
ನಿಯಮಗಳೆ ನಿನಗೆ ಬಳೆ,
ಅನವರತ ಅಶೃಂಖಲೆ!"

ಸಚ್ಚಿದಾನಂದಮಯಿಯಾದ ಆ ಪರಾಪ್ರಕೃತಿಯ ಒಂದು ಪಾದ, ಒಂದು ಅಂಶ ಮಾತ್ರ ಇಲ್ಲಿ 'ನಮ್ಮ ಪ್ರಕೃತಿ' ಆಗಿದೆ. ಉಳಿದ ಮೂರು ಪಾದ ಇನ್ನೂ ಅವ್ಯಕ್ತದಲ್ಲಿ ಅನಂತದಲ್ಲಿ ಅತೀತದಲ್ಲಿ ಅಮೃತವಾಗಿ ಇದೆ. ಋಗ್ವೇದದ ಕವಿಋಷಿ ಇಂತು ಮಂತ್ರಿಸುತ್ತಾನೆ:

ಏತಾವಾನಸ್ಯ ಮಹಿಮಾ ಅತೋ ಜ್ಯಾಯಾಂಶ್ಚ ಪೂರುಷಃ।
ಪಾದೋಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ॥

ಆ 'ದರ್ಶನ'ಕ್ಕೆ ಅಲ್ಪ ಎಂಬುದು ಯಾವುದೂ ಇರುವುದಿಲ್ಲ. ಎಲ್ಲವೂ 'ಭೂಮ' ವಾಗುತ್ತವೆ. ಅತ್ಯಂತ ಸಾಮಾನ್ಯವೂ ಅತ್ಯಂತ ವಿಶೇಷವಾಗಿ ತೋರುತ್ತದೆ. ಸಾಮಾನ್ಯವೆ ಸರ್ವಮಾನ್ಯವಾಗಿ ಸಮದರ್ಶನ ಸಿದ್ಧಿಸುತ್ತದೆ. ಅಂತಹ 'ದರ್ಶನ' ಆತ್ಯಂತಿಕವಾದ ಸುಖಕ್ಕೂ ಶಾಂತಿಗೂ ಕಾರಣವಾಗುತ್ತದೆ.

'ಯೋ ವೈ ಭೂಮಾ ತತ್ ಸುಖಮ್, ನಾಲ್ಪೇ ಸುಖಮಸ್ತಿ!'
'ಯತ್ರ ನಾನ್ಯತ್ ಪಶ್ಯತಿ ನಾನ್ಯತ್ ಶೃಣೋತಿ ನಾನ್ಯತ್ ವಿಜಾನಾತಿ ಸಭೂಮಾಃ'
'ಅಥ ಯತ್ರಾನ್ಯತ್ ಪಶ್ಯತಿ ಅನ್ಯತ್ ಶೃಣೋತಿ ಅನ್ಯದ್ ವಿಜಾನಾತಿ ತದಲ್ಪಮ್,'
'ಯೋ ವೈ ಭೂಮಾ ತದಮೃತಮ್'
'ಅಥ ಯದಲ್ಪಮ್ ತನ್ಮರ್ತ್ಯಮ್.'

ಈ 'ಅಲ್ಪ'ದಲ್ಲಿ ಪ್ರಾರಂಭವಾಗಿ ಬೇರೆ ಬೇರೆ ಭೂಮಿಕೆಗಳಲ್ಲಿ ರಸಗ್ರಾಹಿಯಾಗಿ ಚರಿಸಿ ಕೊನೆಗೆ ಆ 'ಭೂಮ'ದಲ್ಲಿ ಸಿದ್ಧಿ ಪಡೆಯುತ್ತದೆ ಪ್ರಕೃತಿ ದರ್ಶನ ಪರವಾದ ಕವಿಯ ಪೂರ್ಣ ದೃಷ್ಟಿ.

— **ಕುವೆಂಪು**

# ಕವಿಶಿಷ್ಯರ ಬಾಲಸಾಹಿತ್ಯ

ಶ್ರೀ ಬಿ. ಶಂಕರ ಭಟ್ಟ ಮತ್ತು ಶ್ರೀ ಬಿ. ಎವ್. ಶರ್ಮಾ, ಸಂಪಾದಕರು: 'ಮಕ್ಕಳ ಮಂಟಪ' ಮಂಗಳೂರು.

ಆಧುನಿಕ ಕನ್ನಡ ಸಾಹಿತ್ಯದ ಉಗಮವು ಈ ಶತಮಾನದ ಆದಿಯಲ್ಲಿ ಆಯಿತು. ಇಂದಿನ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಒಂದಾದ ಬಾಲಸಾಹಿತ್ಯವೂ ಆಗಲೇ ಹುಟ್ಟಿಕೊಂಡಿತು. ನಮ್ಮ ದೇಶದ ವಿವಿಧ ಭಾಷೆಗಳ ಆಧುನಿಕ ಸಾಹಿತ್ಯಗಳ ವಿವಿಧ ಪ್ರಕಾರಗಳು ಪಾಶ್ಚಿಮಾತ್ಯ ಸಾಹಿತ್ಯ ಪದ್ಧತಿಯ ಅನುಸರಣದಿಂದ ಪ್ರಾರಂಭವಾದಂತೆ ಕನ್ನಡದ ಬಾಲ ಸಾಹಿತ್ಯವೂ ಅದೇ ಪಾಶ್ಚಿಮಾತ್ಯ ಬಾಲಸಾಹಿತ್ಯ ಪದ್ಧತಿಯನ್ನು ಅನುಸರಿಸಿ ಪ್ರಾರಂಭವಾಯಿತು. ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಬಾಲಕ ಬಾಲಕಿಯರಿಗಾಗಿಯೇ ಪ್ರತ್ಯೇಕವಾಗಿ ಸೃಷ್ಟಿಯಾದ ಯಾವ ಸಾಹಿತ್ಯ ಪ್ರಕಾರವೂ ಕಂಡು ಬರುವುದಿಲ್ಲ. ಆದುದರಿಂದ ನಮ್ಮ ಹಳೆಯ ಸಾಹಿತ್ಯದಲ್ಲಿ ಮಕ್ಕಳಿಗಾಗಿಯೇ ಮೀಸಲಾದ ಪ್ರತ್ಯೇಕ ಸಾಹಿತ್ಯ ಪ್ರಕಾರದ ಸೃಷ್ಟಿಯಾಗಲಿಲ್ಲವೆಂದೇ ಹೇಳಬಹುದು.

ಕನ್ನಡ ಸಾಹಿತ್ಯದಲ್ಲಿ ಸಣ್ಣ ಕತೆಗಳ ಜನಕರೆಂದು ಪ್ರಸಿದ್ಧರಾದ ದಿವಂಗತ ಪಂಜೆ ಮಂಗೇಶರಾಯರೇ ಕನ್ನಡದ ಬಾಲ ಸಾಹಿತ್ಯಕ್ಕೂ ಜನಕರಾದರು. ಕನ್ನಡದ ಆಧುನಿಕ ಸಾಹಿತ್ಯ ಮಂದಿರದ ಅಸ್ತಿವಾರ ಹಾಕಿದವರಲ್ಲಿ ಒಬ್ಬರಾದ ದಿವಂಗತ ಕವಿಶಿಷ್ಯರು ಶಿಕ್ಷಣಕ್ಷೇತ್ರದಲ್ಲಿ ದುಡಿಯ ತೊಡಗಿದಾಗ ಅವರಿಗೆ ಚಿಕ್ಕ ಮಕ್ಕಳಿಗೆ ಅನುಕೂಲವಾದ ಭಾಷಾ ಶಿಕ್ಷಣ ನೀಯಲು ತಕ್ಕುದಾದ ಸಾಹಿತ್ಯದ ಕೊರತೆ ಕಂಡು ಬಂತು. ಆ ಕೊರತೆಯನ್ನು ನಿವಾರಿಸುವ ಉದ್ದೇಶದಿಂದಲೇ ಅವರು ಬಾಲ ಸಾಹಿತ್ಯದ ಸೃಷ್ಟಿಗೆ ತೊಡಗಿದರು. ಮುಂದೆ ಬಾಲಸಾಹಿತ್ಯದ ಪ್ರಕಟಣಾ ಕಾರ್ಯಕ್ಕಾಗಿ 'ಬಾಲಸಾಹಿತ್ಯ ಮಂಡಲ'ವೆಂಬ ಪ್ರಕಟಣಾ ಸಂಸ್ಥೆಯನ್ನೂ ಸ್ಥಾಪಿಸಿದರು. ಕವಿಶಿಷ್ಯರು ಕನ್ನಡದ ಮಕ್ಕಳಿಗಾಗಿ ಹಲವಾರು ಶಿಶುಗೀತಗಳನ್ನೋ ಕೆಲವೊಂದು ಚಿಕ್ಕ ಕತೆಗಳನ್ನೋ ಬರೆದು ಮಾತ್ರ ತೃಪ್ತರಾಗಲಿಲ್ಲ. ತಾವು ಹೋದಲ್ಲಿ ಬಂದಲ್ಲಿ, ನಿಂತಲ್ಲಿ ನೆರೆದಲ್ಲಿ ಚಿಕ್ಕಮಕ್ಕಳೊಡನೆ ಒಡನಾಡಿ ಹಾಡು ಹಾಡಿ, ಕತೆ ಹೇಳಿ ತಾವೂ ನಕ್ಕು ನಲಿದು ಮಕ್ಕಳನ್ನು ನಗಿಸಿ ನಲಿಸಿದರು; ನಾಡಿನ ಶಿಕ್ಷಣ ತಜ್ಞರಿಗೆ, ಅಧ್ಯಾಪಕರಿಗೆ ಮೇಲುಪಂಕ್ತಿ ಹಾಕಿಕೊಟ್ಟರು. ಇಂದಿಗೆ ಅರ್ಧ ಶತಮಾನಗಳ ಹಿಂದೆ ಕನ್ನಡದ ಮಕ್ಕಳ ಮನಸ್ಸು ತಿಳಿದು ಅವರಿಗೆ ಬೇಕಾದ ಸಾಹಿತ್ಯದ ರಚನೆಗೆ ತೊಡಗಿದವರು ಕವಿಶಿಷ್ಯರು ಒಬ್ಬರೇ ಎಂದರೂ ಹೆಚ್ಚಿನ ಮಾತಾಗಲಾರದು. ಮಕ್ಕಳ ಒಡನಾಟದಲ್ಲಿ ತಾನೂ ಮಗುವಾಗಿ ನಕ್ಕು ನಲಿಯುವ ಸ್ವಭಾವ ಎಲ್ಲರಿಗಿಲ್ಲ. ಅದು ಮನುಷ್ಯನ ಹುಟ್ಟಿನಿಂದ ಬರುವ ಗುಣ. ಅಂತಹ ಸ್ವಭಾವ ಗುಣವಿರುವ ವ್ಯಕ್ತಿಯನ್ನೇ ಮಕ್ಕಳು ಹೆಚ್ಚಾಗಿ ಮೆಚ್ಚುವರು. ಆ ಸ್ವಭಾವ ಗುಣವಿದ್ದುದರಿಂದಲೇ ದಿವಂಗತ ಕವಿಶಿಷ್ಯರು ಮಕ್ಕಳ ಮನಸ್ಸು ತಿಳಿದು ಅವರಿಗೆ ಬೇಕಾದಂತಹ ಸಾಹಿತ್ಯ ಸೃಷ್ಟಿಯೆಸಗಲು ಸಮರ್ಥರಾದರೆಂದು ಹೇಳಬಹುದು. ಅವರಿಂದ ಸೃಷ್ಟಿಯಾದ ಬಾಲ ಸಾಹಿತ್ಯದಲ್ಲಿ ಈ ಸ್ವಭಾವ ಗುಣ ಸ್ಪಷ್ಟವಾಗಿ ಕಂಡುಬರುತ್ತದೆ. ಮಕ್ಕಳಿಗಾಗಿ ರಚಿತವಾದ ಅವರ ಒಂದು ಕವನವೇ ಆಗಲಿ, ಕತೆಯೇ ಆಗಲಿ ಅದರಲ್ಲಿ ಮಕ್ಕಳ ಮನೋವಿಜ್ಞಾನ ಅಡಕವಾಗಿರುವುದೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಕಾಣಬಹುದು.

ಮಕ್ಕಳ ಮನೋರಂಜನೆಯೊಂದೇ ಬಾಲಸಾಹಿತ್ಯದ ಉದ್ದೇಶವಲ್ಲ. ಬಾಲಸಾಹಿತ್ಯದಲ್ಲಿ ಮನೋರಂಜನೆಯಂತೆಯೇ ನೀತಿ ಶಿಕ್ಷಣಕ್ಕೂ ಪ್ರಾಮುಖ್ಯತೆ ಇರಬೇಕು. ಬಾಲ್ಯದಲ್ಲಿ ಓದಿ ಕಲಿತ ವಿಷಯಗಳು ಮಕ್ಕಳ ಮನಸ್ಸಿನ ಮೇಲೆ ಪ್ರಭಾವ ಬೀರುವುದು ಬೇಗನೆ. ಆದುದರಿಂದ ಮಕ್ಕಳಿಗಾಗಿ ರಚನೆಯಾಗುವ ಸಾಹಿತ್ಯದಲ್ಲಿ ಮನೋರಂಜನೆಯೊಂದಿಗೆ ನೀತಿ ಶಿಕ್ಷಣಕ್ಕೂ ಸ್ಥಾನವಿರಬೇಕು. ಈ ತತ್ವವನ್ನು ಕವಿಶಿಷ್ಯರು ಚೆನ್ನಾಗಿ ಮನಗಂಡಿದ್ದರು. ನೀತಿ ಶಿಕ್ಷಣಕ್ಕೆ ಸ್ಥಾನವಿರಬೇಕೆಂದು ಸಂದರ್ಭಕ್ಕೆ ಗಂಟು ಬೀಳದ ಬುದ್ಧಿವಾದಗಳನ್ನೋ, ನೀತಿಬೋಧನೆಗಳನ್ನೋ ಎಳೆತಂದು ವಿಷಯದ ಉದ್ದೇಶಕ್ಕೆ ಭಂಗ ತಂದುದು ಎಲ್ಲಿಯೂ ಅವರ ಸಾಹಿತ್ಯದಲ್ಲಿ ಕಂಡು ಬರುವುದಿಲ್ಲ. ಮನೋರಂಜನೆಯೊಂದಿಗೆ ನೀತಿ ಶಿಕ್ಷಣವೂ ಅಲ್ಲಲ್ಲಿ ಹಾಸು ಹೊಕ್ಕಾಗಿದ್ದು ಮಗುವಿಗೆ ತಿಳಿಯದಂತೆಯೇ ಅದು ಮನಸ್ಸಿಗೆ ಅಂಟಿಕೊಳ್ಳುತ್ತದೆ. ಬಾಲಸಾಹಿತ್ಯದಲ್ಲಿರಬೇಕಾದ ಮುಖ್ಯ ಗುಣಗಳಲ್ಲಿ ಇದೂ ಒಂದು.

ಕವಿಶಿಷ್ಯರು ಮಕ್ಕಳಿಗಾಗಿ ಸಾಹಿತ್ಯ ಸೃಷ್ಟಿ ಮಾಡುವ ಕಾರ್ಯದೊಂದಿಗೆ ಇನ್ನೊಂದು ಮಹತ್ವದ ಕಾರ್ಯವನ್ನೂ ಸಾಧಿಸಿದರು. ಮಕ್ಕಳಿಗೆ ಕಲಿತು ಹಾಡಲು ತಕ್ಕುದಾದ ನೂರಾರು ಹಳೆಯ ಹಾಡುಗಳನ್ನು ಸಂಗ್ರಹಿಸಿದರು; ಅವುಗಳನ್ನು ಸಂಪಾದಿಸಿ ಪ್ರಕಟಿಸಿದರು. ಹಳಬರಿಂದ ಆ ಹಾಡುಗಳ ಹಾಡುವ ರೀತಿಯನ್ನು ತಾವೇ ಸ್ವತಃ ಕಲಿತು ನಾಡಿನ ಮಕ್ಕಳಿಗೆ ನಾಡಿನ ಉಪಾಧ್ಯಾಯರಿಗೆ ಕಲಿಸಿ ಪ್ರಚಾರಮಾಡಿದರು. ಶಿಕ್ಷಣಾಧಿಕಾರಿಗಳಾಗಿದ್ದ ಕವಿಶಿಷ್ಯರು ಇತರ ಶಿಕ್ಷಣಾಧಿಕಾರಿಗಳಂತೆ ನಾಡಿನ ಬಡ ಅಧ್ಯಾಪಕರ ಮೇಲೆ ಅಧಿಕಾರದಂಡವನ್ನಷ್ಟೇ ಉಪಯೋಗಿಸುತ್ತಾ, ಶುಷ್ಕವಾದ ರೀತಿಯಿಂದ—

ಅಧಿಕಾರ ದರ್ಪದಿಂದ-ಶಾಲಾ ನಿರೀಕ್ಷಣವೆಸಗುತ್ತಾ ಮೆರೆಯಲಿಲ್ಲ. ಪ್ರೀತಿ ವಿಶ್ವಾಸಗಳಿಂದ ನಾಡಿನ ಅಧ್ಯಾಪಕರೊಂದಿಗೆ ಕಲೆತು, ಮಕ್ಕಳೊಡನೆ ಒಡನಾಡಿ, ಮಕ್ಕಳಲ್ಲಿ ಸಾಹಿತ್ಯಾಭಿರುಚಿಯುಂಟುಮಾಡುವ ಬಗೆ ಹೇಗೆಂದು ಕೃತಿಯಿಂದ ತೋರಿಸಿಕೊಟ್ಟರು. ಆದುದರಿಂದಲೇ ಅವರು ನಾಡಿನ ಅಧ್ಯಾಪಕರಿಗೂ ಮಕ್ಕಳಿಗೂ ಕೇವಲ ಭಯದಾಯಕ ಅಧಿಕಾರಿಯಾಗಿರದೆ ಅವರ ನಿಜವಾದ ಹಿತೈಷಿ ಮಿತ್ರರಾದರು. ಈ ಕಾರಣದಿಂದ ಅವರ ಬಾಲಸಾಹಿತ್ಯ ನಾಡಿನ ಹಿರಿಕಿರಿಯರಿಬ್ಬರ ಮೇಲೂ ಸಾಕಷ್ಟು ಪ್ರಭಾವ ಬೀರಿತು; ನಾಡಿನ ಜನರ ಮೆಚ್ಚುಗೆ ಪಡೆಯಿತು.

ಕವಿಶಿಷ್ಯರ ಬಾಲಸಾಹಿತ್ಯದಲ್ಲಿ ಮುಖ್ಯವಾಗಿ ಕವಿತಾ ಸಾಹಿತ್ಯ ಕಥಾ ಸಾಹಿತ್ಯಗಳೆಂದು ಎರಡು ವಿಭಾಗಮಾಡಬಹುದು. ಅವೆರಡೂ ಸಾಹಿತ್ಯ ಪ್ರಕಾರಗಳು ಗಾರುಡಿಗ ಕವಿಶಿಷ್ಯರ ಲೇಖನಿಯಿಂದಿಳಿದು ತಮ್ಮದೇ ಆದ ಸ್ವತಂತ್ರ ಶೈಲಿಯಿಂದ ಸಾಗಿವೆ. ಕನ್ನಡದ ಸಾಹಿತ್ಯದಲ್ಲಿ ಹಿಂದೆಂದೂ ಇಲ್ಲದ ಸಂಪತ್ತುಗಳಾಗಿ ಆಧುನಿಕ ಸಾಹಿತ್ಯಕ್ಕೆ ಕಳೆಯೇರಿಸಿವೆ.

ಕವಿಶಿಷ್ಯರ ಬಾಲಸಾಹಿತ್ಯದಲ್ಲಿ ಕವಿತಾ ಸಾಹಿತ್ಯವನ್ನೂ ಎರಡು ವಿಭಾಗಮಾಡಬಹುದು. ಬಾಲಗೀತಗಳು ಹಾಗೂ ಬಾಲಕಥನ ಕವನಗಳು ಆ ವಿಭಾಗಗಳು. ಈ ಅವರ ಬಾಲಗೀತಗಳು ಅಥವಾ ಮಕ್ಕಳ ಹಾಡುಗಳಲ್ಲಿ ಕೆಲವನ್ನು ಪರಿಶೀಲಿಸುವ.

ಒಂದೆಡೆ ಕವಿಶಿಷ್ಯರು ಕನ್ನಡದ ಕಂದನನ್ನು ತೊಟ್ಟಿಲಲ್ಲಿ ಮಲಗಿಸಿ ಮಮತೆಯಿಂದ ಹೀಗೆಂದು ಜೋಗುಳ ಹಾಡುತ್ತಾರೆ—

ತೂಗುವೆ ತೊಟ್ಟಿಲ ಜೋಗುಳ ಹಾಡಿ,
ಕೂಗದೆ ಮಲಗೆನ್ನ ಮುದ್ದಿನ ಮೋಡಿ. ಜೋ ಜೋ!

ಕವಿಶಿಷ್ಯರು ತೊಟ್ಟಿಲಲ್ಲಿ ಮಲಗಿ ತೊದಲು ಮಾತನಾಡುತ್ತ ನಿದ್ದೆಮಾಡದಿರುವ ಕಂದನನ್ನು ನಿದ್ದೆ ಮಾಡಿಸುವುದಕ್ಕಾಗಿ ಮಂಕಾಡಿಸುತ್ತಾ ಕೊಡುವ ದೃಷ್ಟಾಂತಗಳಾದರೂ ಎಷ್ಟೊಂದು ಸೊಗಸು!

ತುಂಬಿ ಪವಡಿಸಿತು ಎಸಳ ಹೂಗಳಲಿ;
ಗೊಂಬೆ ನಿನ್ನಯ ಕಣ್ಣಿನವೆ ಸೆರೆಗೊಳಲಿ.
ರೆಂಬೆ ಚಿಗುರೊಳಡಗಿತು ಪಿಕದುಲಿಯು;
ಸೊಂಬನಾಗಲಿ ನಿನ್ನ ತುಟಿ ಚಿಲಿಪಿಲಿಯು.

ತೊಟ್ಟಿಲಲ್ಲಿ ಮಲಗಿದ ಕನ್ನಡದ ಕಂದನಿಗೆ ಅವರು ಕೊಡುವ ಹೋಲಿಕೆಯಾದರೂ ಏನೊಂದು ಚಂದ!

ಜಲದ ಮೇಲ್ ಮಲಗುವ ಮರಿಹಂಸದಂತೆ,
ಎಲೆಯೊಳಗಿನ ಮಲ್ಲಿಗೆಯ ಮೊಗ್ಗಿನಂತೆ,

ಕವಿಶಿಷ್ಯರ ಕನ್ನಡದ ಕಂದನೆಂದರೆ ಜಲದ ಮೇಲೆ ಮಲಗುವ ಮರಿಹಂಸ! ಎಲೆಯೊಳಗಿನ ಮಲ್ಲಿಗೆಯ ಮೊಗ್ಗು! ಎಂತಹ ಸೊಗಸಾದ ಹೋಲಿಕೆ!

ಕವಿಶಿಷ್ಯರು ಜೋಗುಳ ಹಾಡುವಾಗಲೂ ಮಗುವಿಗೆ ಹಿರಿಯ ತಾಯಂತೆ 'ತಲೆಗಿಂಬಿಗೀಶನ ಕೈ ನಿನ್ನ ಬಳಿಯೆ' ಎಂದು ದೈವ ಭಕ್ತಿ ಕಲಿಸುತ್ತಾರೆ. ಕವಿಶಿಷ್ಯರ ಈ ಜೋಗುಳ ಹಾಡು ಹಾಡುತ್ತಾ ಕನ್ನಡದ ಎಷ್ಟು ಮಂದಿ ತಾಯಂದಿರು ತಮ್ಮ ಮುದ್ದು ಮಕ್ಕಳನ್ನು ತೊಟ್ಟಿಲಲ್ಲಿ ಮಲಗಿಸಿ ನಿದ್ದೆ ಮಾಡಿಸಿಲ್ಲ! ಎಷ್ಟು ಮಂದಿ ಮಕ್ಕಳು ತೊದಲು ತೊದಲಾಗಿ ಹಾಡುತ್ತಾ ತಮ್ಮ ಪುಟ್ಟ ಪುಟ್ಟ ಕೈಗಳಿಂದ ತಂಗಿ ತಮ್ಮಂದಿರ ತೊಟ್ಟಿಲು ತೂಗಿಲ್ಲ!

ಇನ್ನೊಂದೆಡೆ ಕವಿ ಶಿಷ್ಯರು ಕನ್ನಡದ ಕಂದನಿಗೆ ನೀತಿ ಶಿಕ್ಷಣ ಕೊಡುವ ರೀತಿಯಾದರೂ ಎಷ್ಟೊಂದು ಸೊಗಸು! ಎಷ್ಟೊಂದು ಸರಳ! 'ಮಗುವೆ, ನಿನ್ನ ಮೈಗೆ ಗುರಿಯಿಟ್ಟು ಹೊಡೆವ ಎಂಟು ಬೇಡರಿಂದಲಿ ದೂರವಾಗು' ಎಂದು ಎಚ್ಚರಿಕೆ ಕೊಡುತ್ತಾರೆ. ಈ ಎಂಟು ಬೇಡರಾದರೂ ಯಾರು? ಎಂತಹರು? ನೋಡಿರಿ—

ಹೊತ್ತನ್ನು ತಿಂಬ ಸೋಮಾರಿತನ ಬೇಡ!
ಮತ್ತು ಹಿಡಿಸುವ ಮೈ ಕೊಲುವ ಕಳ್ಳು ಬೇಡ!
ಕತ್ತು ಕೊಯ್ಕರ ಕೂಡೆ ನಂಟುತನ ಬೇಡ!
ಉತ್ತರೋತ್ತರದಲ್ಲಿ ನಿನ್ನ ಹಗೆ ಬೇಡ!
ಎತ್ತಿದ್ದ ಸಾಲವನು ಕೊಡದ ಮನ ಬೇಡ!
ವಿತ್ತವನ್ನುವ ನುಂಗುವಾ ಮೋಸ ಬೇಡ,
ಚಿತ್ತವನು ಕೆಡಿಪ ಹೊಟ್ಟೆಯ ಕಿಚ್ಚು ಬೇಡ.
ಮತ್ತೆ ಪಾಪವ ತರುವ ಕೆಡು ಕೆಲಸ ಬೇಡ.

ಈ ಎಂಟು ಬೇಡರೆಂದರೆ ನೀತಿಶಾಸ್ತ್ರದ ಅಮೂಲ್ಯವಾದ ಎಂಟು ಸೂತ್ರಗಳೆ ಆಗಿವೆ. ಈ ಎಂಟು ಸೂತ್ರಗಳಲ್ಲಿ ನೀತಿ ಶಾಸ್ತ್ರದ ಸಾರವೆಲ್ಲಾ ಅಡಕವಾದುದನ್ನುನಾವು ಕಾಣಬಹುದು.

ಕವಿ ಶಿಷ್ಯರ ಹೆಸರಾದ ಮತ್ತೊಂದು ಹಾಡೆಂದರೆ 'ಹಾವಿನ ಹಾಡು'. ಈ 'ಹಾವಿನ ಹಾಡು' ಹಾಡುವಾಗ ನಮ್ಮ ಕವಿ ಶಿಷ್ಯ ಸ್ವತಃ ಗಾರುಡಿಗರಾಗಿದ್ದಾರೆ. ಕನ್ನಡದ ಕಿರಿಯರನ್ನೇ ಎಂದೇಕೆ ಹಿರಿಯರನ್ನೂ ಮರುಳುಗೊಳಿಸಿ ತಲೆದೂಗಿಸಿದ್ದಾರೆ. ಈ ನೂತನ ಗಾರುಡಿಗನ ಪುಂಗಿಯಿಂದ ಹೊರಹೊಮ್ಮಿದ ಈ 'ಹಾವಿನ ಹಾಡು' ಕನ್ನಡದ ಕಂದನ ಕಣ್ಣ ಮುಂದೆ ಪ್ರತ್ಯಕ್ಷ ನಾಗರ ಹಾವನ್ನೇ ಕುಣಿಸುತ್ತದೆ. ಕವಿ ಶಿಷ್ಯರ ಪ್ರತಿಭಾಶಕ್ತಿ ಈ ಹಾಡಿನಲ್ಲಿ ಹೇಗೆ ಸುಸ್ಪಷ್ಟವಾಗಿ ಹೊರ ಹೊಮ್ಮಿದೆ ನೋಡಿರಿ. ಗಾರುಡಿಗ ಕವಿಶಿಷ್ಯ ನಾಗರ ಹಾವನ್ನು ಸಂಬೋಧಿಸಿ ಹೀಗೆಂದು ಹಾಡುತ್ತಾರೆ—

ನಾಗರ ಹಾವೆ! ಹಾವೊಳು ಹೂವೆ!

ಬಾಗಿಲ ಬಿಲದಲಿ ನಿನ್ನಯ ಠಾವೆ?
ಕೈಗಳ ಮುಗಿವೆ ಹಾಲನ್ನೀವೆ.
ಬಾ ಬಾ ಬಾ ಬಾ ಬಾ ಬಾ ಬಾ ಬಾ!
ಹಳದಿಯ ಹೆಡೆಯನು ಬಿಚ್ಚೋ ಬೇಗ;
ಹೊಳಹಿನ ಹೊಂದಲೆ ತೂಗೋ ನಾಗ!
ಕೊಳಲನ್ನೂದುವೆ ಲಾಲಿಸು ರಾಗ!
ನೀ ನೀ ನೀ ನೀ ನೀ ನೀ ನೀ ನೀ.

ಅತ್ಯುತ್ತಮವಾದ ಈ ಬಾಲಗೀತದ ರಸಭಾವ ಅಳಿದು ನೋಡಲು ಈ ಎರಡು ಪದ್ಯಗಳೇ ಸಾಕು. ಕನ್ನಡದ ಬಾಲಗೀತಗಳು ಮೊಳಕೆ ಬರಲಷ್ಟೆ ತೊಡಗಿದ ಆ ಕಾಲದಲ್ಲಿ ಇಂತಹ ಅತ್ಯುತ್ತಮ ಮಕ್ಕಳ ಹಾಡು ರಚನೆಯಾದುದು ಕನ್ನಡದ ಕಂದಮ್ಮಗಳ-ಅವರ ಹಿರಿಯರ--ಭಾಗ್ಯವೆಂದೇ ಹೇಳಬೇಕು.

ಕವಿಶಿಷ್ಯರ ಬೇರೊಂದು ಸುಪ್ರಸಿದ್ಧವಾದ ಬಾಲಗೀತವೆಂದರೆ 'ತೆಂಕಣ ಗಾಳಿಯಾಟ.' ಅವರ ತೆಂಕಣಗಾಳಿ ಹಾಡುವವರನ್ನೂ ಕೇಳುವವರನ್ನೂ ತೂರಿಸಿ ಹಾರಿಸಿ ಬೀಸುತ್ತದೆ. ಚಿಕ್ಕ ಮಕ್ಕಳನ್ನಂತೂ ಆಕಾಶದಲ್ಲಿ ಮೇಲು ಮೇಲಕ್ಕೆ ಹಾರಾಡಿಸಿ ಬಿಡುತ್ತದೆ; ಭಾವನೆಯ ಬಾನಲ್ಲಿ ತೇಲಾಡಿಸಿ ತರುತ್ತದೆ. ಕವಿಶಿಷ್ಯರು ಬೀಸಿದ ತೆಂಕಣ ಗಾಳಿಯೆಂದರದು 'ಬುಸುಗುಟ್ಟುವ ಪಾತಾಳದ ಹಾವೋ' 'ಹಸಿವಿನ ಭೂತವು ಕುಯ್ಯುಕೂವೋ' 'ಕಾಲನ ಕೋಣನ ಓವೋ' ಅಥವಾ 'ಉಸಿರಿನ ಸುಯ್ಯೋ' ಏನೆಂದು ತಿಳಿಯುವುದಿಲ್ಲ! ಸೂಸೂಕರಿಸುತ ಬರುತ್ತದೆ! ಬರಬರಭರದಲಿ ಬರುತ್ತದೆ! ಈ ತೆಂಕಣ ಗಾಳಿ ಭಯಂಕರವಾದ ರಭಸದಿಂದ ಬೀಸಿ ಬರುತ್ತಾ ಮಕ್ಕಳ ಮನವನ್ನು ಸೋಜಿಗ ಬಾನಲ್ಲಿ ತೇಲಾಡಿಸುವುದು ಮಾತ್ರವಲ್ಲ; ನಗೆಗಡಲಲ್ಲಿ ತೇಲಾಡಿಸುತ್ತಲೂ ಸಾಗುತ್ತದೆ–

ಸಡಿಲಿಸಿ ಮಡದಿಯರುಡಿಯನು ಮುಡಿಯನು
ಬಡ ಮುದುಕರ ಕೊಡೆಗರಿ ಹರಿದಾಡಿಸಿ
ಹುಡುಗರ ತಲೆತಲೆ ಟೊಪ್ಪಿಯ ಆಟವ
ದಡಬಡನಾಡಿಸಿ ತಲೆ ತಾಟಾಡಿಸಿ

ಮೇಲಿನ ಸಾಲುಗಳನ್ನು ಓದುವಾಗ ಕೇಳುವಾಗ ಯಾವ ಕನ್ನಡದ ಕಂದನ ಮನಸ್ಸು ನಗೆಗಡಲಲ್ಲಿ ಓಲಾಡಲಾರದು! ಎಂತಹ ಸರಳವಾದ ಲಘು ಹಾಸ್ಯ ಅಡಕವಾಗಿದೆ ಈ ಹಾಡಿನಲ್ಲಿ!

ಕವಿಶಿಷ್ಯರು ಕನ್ನಡದ ಕಂದನಿಗೆ ನಲ್ಮೆಯತಾಯಾಗಿ ಜೋಗುಳ ಹಾಡಿ ತೊಟ್ಟಿಲು ತೂಗಿದರು; ಭಕ್ತಿಭಾವದ ಗುರುವಾಗಿ ನೀತಿಪಾಠ ಕಲಿಸಿದರು; ನಚ್ಚಿನ ಗೆಳೆಯರಾಗಿ ಹಾವಿನ ಹಾಡು ಹಾಡಿದರು; ತೆಂಕಣ ಗಾಳಿ ಬೀಸಿ ಸೋಜಿಗದ ಬಾನಲ್ಲಿ ಹಾರಾಡಿಸಿದರು. ಇಷ್ಟು ಮಾತ್ರವಲ್ಲ, ನಮ್ಮ ಸಮಾಜಕ್ಕೆ ಹಿಡಿದ ಅಸ್ಪೃಶ್ಯತೆಯ ಗೆದ್ದಲನ್ನು ಕನ್ನಡದ ಕಂದನಿಗೆ ತೋರಿಸಿಕೊಟ್ಟರು; ಅದರ ದುಷ್ಪರಿಣಾಮವನ್ನು ಸಾರಿ ಹೇಳಿದರು. ಕನ್ನಡದ ಕಂದನ ಮುಂದೆ ತಾವೇ ಸ್ವತಃ 'ಹೊಲೆಯ'ನಾಗಿ ಎದೆ ನೀರಾಗುವಂತೆ ಕರುಣಾಪೂರ್ಣವಾಗಿ ಕೂಗಿದರು. ಅವರ 'ಹೊಲೆಯನ ಹಾಡ'ನ್ನು ಆಲಿಸುವಾಗ ಯಾರ ಮನದಲ್ಲಿ ದಯೆಯ ಹೊನಲು ಹರಿಯಲಾರದು! ತನ್ನ ದುರ್ವರ್ತನೆಗಾಗಿ ಪಶ್ಚಾತ್ತಾಪದ ಪ್ರವಾಹ ಹೊರಹೊಮ್ಮಲಾರದು! ಕವಿಶಿಷ್ಯ ಹೊಲೆಯನ ಹೃದಯವನ್ನು ಹೊಕ್ಕು ಹೀಗೆಂದು ಹಾಡಿಸುತ್ತಾರೆ–

ಉಳ್ಳಯ್ಯಾ—ದಯೆಗೊಳ್ಳಯ್ಯಾ!
ದಟ್ಟಿದಿಕ್ಕಾ! ಮಾರಿಮುಂಡ ಮುಂಡಾಳಾ!
ಹುಟ್ಟು ಹೊಲೆಯಾ! ಪೋಲ! ಚಂಡಚಂಡಾಲಾ!
ಬೊಟ್ಟಿ ಬೊಗ್ಗರಿ ಎಂದು ಹೆಸರೆತ್ತಿ ಕೂಗಿ,
ಮುಟ್ಟಲಂಜುವೆ ನಿಲ್ವೆ ದೂರಕ್ಕೆ ಹೋಗಿ!

* * * *

ಹಾಸಿಗೆ ತಗಣೆಯ ಮುದ್ದಿಪ ನಿಮ್ಮ ಮೈಗೆ
ಹೇಸಿಗೆ ಅಹುದೆ ಮುಟ್ಟಲು ನಿಮ್ಮ ಕೈಗೆ?
ವಾಸಕ್ಕೆ ನಮಗೂರ ಹೊರಗೊಂದು ಎಡೆಯೆ?
ಆ ಸುದ್ದ ಹಂದಿ ನಾಯ್ಗಳಿಗಿಂತ ಕಡೆಯೆ?

ಹೊಲೆಯನ ಈ ಕರುಣಾಜನಕ ಪರಿಸ್ಥಿತಿಯನ್ನು ಕೇಳುವಾಗ ಯಾವ ಕಂದನ ಎದೆಯೊಸರಲಾರದು! ಕಂಬನಿ ತೊಟ್ಟಿಕ್ಕಲಾರದು! ಹೀಗೆ ಆಧುನಿಕ ಕನ್ನಡದ ಕವಿಗಳಲ್ಲಿ ಮೊತ್ತಮೊದಲು ಅಸ್ಪೃಶ್ಯತೆಯ ವಿರುದ್ಧವಾಗಿ–ಹೊಲೆಯನ ಕರುಣಾಪೂರ್ಣಸ್ಥಿತಿಯ ಕುರಿತಾಗಿ—ಹಾಡಿದವರೆಂದರೆ ಕವಿಶಿಷ್ಯರೊಬ್ಬರೇ. ಅಸ್ಪೃಶ್ಯರ ಕೀಳುಬಾಳುವೆ ಸುಸ್ಪಷ್ಟ ಚಿತ್ರಣ—ಕರುಣಾಜನಕ ಪರಿಸ್ಥಿತಿ—ಈ ಹಾಡಿನಲ್ಲಿ ಕನ್ನಡಿಗರ ಕಣ್ಣುಕಟ್ಟುತ್ತದೆ. ಕವಿಶಿಷ್ಯರು ಈ ಹಾಡಿನಲ್ಲಿ ಹೊಲೆಯರಾಗಿ ಹೊಲೆಯನ ಕರುಣಾಜನಕವಾದ ಸ್ಥಿತಿಯನ್ನು ಕೂಗಿ ಹೇಳಿಕೊಂಡುದಲ್ಲದೆ,ಸಮಾಜದಲ್ಲಿ ಉಚ್ಚವರ್ಣದವರೆನಿಸಿಕೊಂಡವರಿಗೆ ಎಚ್ಚರಿಕೆ ಸಾರಿದ್ದಾರೆ–

ನೋಡು! ಸ್ವರಾಜ್ಯಕ್ಕೆ ನಾವೂರುಗೋಲು!
ನೋಡಣ್ಣ! ದಮ್ಮಯ್ಯಾ! ಕೊಡು ಸರೀ ಪಾಲು!
ಬೇಡಿದಾಗಲೆ ಬಿಟ್ಟುಕೊಡುವುದೇ ಮೇಲು!
ಬೇಡ ನಾವ್ ಸೆಳೆದುಕೊಂಬೆವು ನಮ್ಮ ಪಾಲು!
ನಂದಿಸು ಕಿಡಿಯಲ್ಲಿ ಹೊಲೆಯನಾ ಹಗೆಯಾ!

ಎಂತಹ ಕಟು ಸತ್ಯವಿದು! ನಲ್ವತ್ತು ಐವತ್ತು ವರ್ಷಗಳ ಹಿಂದೆಯೇ ಹರಿಜನರ ಪರವಾಗಿ ಹಾಡಿದ ಕವಿ ಶಿಷ್ಯರೇ ಧನ್ಯರು! ಅವರ ಈ ಹಾಡು ಆಧುನಿಕ ಕನ್ನಡ ಸಾಹಿತ್ಯದಲ್ಲಿ ನಿರಂತರವಾಗಿ ಉಳಿಯುವ ಗೀತೆಗಳಲ್ಲಿ ಒಂದೆಂಬುದು ನಿಸ್ಸಂಶಯ!

ಕವಿಶಿಷ್ಯರ ಸುಪ್ರಸಿದ್ಧವಾದ ಮತ್ತೊಂದು ಹಾಡೆಂದರೆ 'ಹುತ್ತರಿ ಹಾಡು'. 'ಹುತ್ತರಿ ಹಾಡು' ಮತ್ತೇನಲ್ಲ; ಕೊಡಗು ನಾಡಿನ-ಕೊಡಗರ-ರಾಷ್ಟ್ರ ಗೀತವೇ ಅದು. ಕೊಡಗಿನ ಪ್ರಕೃತಿ ಸೌಂದರ್ಯ, ಐತಿಹಾಸಿಕ ಮಹತ್ವ, ಕೊಡಗರ ಶೌರ್ಯ ಸಾಹಸ, ಸ್ವಾತಂತ್ರ್ಯ ಪ್ರೇಮ ಎಲ್ಲವೂ ಈ ಹಾಡಿನ ಮೂಲಕ ಹೊರಹೊಮ್ಮುತ್ತವೆ. ಈ ಹಾಡು ಕೇಳುವಾಗ ಕನ್ನಡಿಗರ ಕಣ್ಣ ಮುಂದೆ ಕೊಡಗುನಾಡು ನಲಿದಾಡುವುದು; ಕೊಡಗರು ಹುತ್ತರಿ ಕುಣಿತ ಕುಣಿಯುವರು; ಆ ಮಲೆನಾಡಿನ ವಿಷಯ ದಲ್ಲಿ–ನಾಡುಗರ ಕುರಿತಾಗಿ–ಅಭಿಮಾನ ಗೌರವ ಭಾವನೆ ತಲೆ ದೋರುವುದು. ಕವಿಶಿಷ್ಯರ ಭಾವನೆಯಂತೆ ಕೊಡಗೆಂದರೆ 'ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದ' ಪ್ರದೇಶ. ಆಕೆ ಅಲ್ಲಿ 'ಮೋಹನಗಿರಿಯ ಬೆರಗಿನ ರೂಪಿನಿಂದಲಿ' ನಿಂದಿ ರುವಳು. ಕೊಡಗು ನಾಡಿನಲ್ಲಿ 'ಮುಗಿಲು ಮಿಂಚಿನೊಲು ಕಾವೇರಿ ಹೊಳೆ ಹೊಳೆ ಹೊಳೆವಳು; ನೆಲವನು ತಣಿಸಿ ಜನ ಮನ ಹೊಲದ ಕಳೆ ಕಳೆ ಕಳೆವಳು'. ಇದು ಕೊಡಗು ನಾಡಿ ನಲ್ಲಿ ಕವಿಶಿಷ್ಯರು ಕಂಡ ದೈವಸಾನ್ನಿಧ್ಯ; ಪ್ರಕೃತಿ ಸೌಂದರ್ಯ.

ಕವಿಶಿಷ್ಯರ ದೃಷ್ಟಿಯಲ್ಲಿ ಕೊಡಗರೆಂದರೆ ಸಾಮಾನ್ಯ ಸಾಹಸಿಗಳಲ್ಲ; ಪೂರ್ವದಲ್ಲಿ ಹುಲಿಯ ಹಾಲಿನ ಮೇವನ್ನೇ ಮೆದ್ದವರು. ಕವಣೆ ತಿರಿಕಲ್ಲಾಟಕ್ಕೆ ಹೆಬ್ಬಾವನ್ನೇ ಹಗ್ಗವಾಗಿ ಸೆಳೆದವರು; ಆನೆಯ ಕೊಂಬನ್ನೇ ಸವರಿ ರಣಕೊಂಬಾಗಿ ಭೋರ್ಗರೆದವರು; ಸವೆದೂ ಸವೆಯದ ಸಾಹಸದಿಂದ ಕ್ಷಾತ್ರ ಬೇಟೆಗಳಲ್ಲಿ ಮೆರೆದವರು. ಕೊಡಗಿನ ಹಿರಿಯರು ಸಾವು ನೋವು ಏನೆಂದರಿಯರು. ಇನ್ನು ಕವಿಶಿಷ್ಯರೆನ್ನುವಂತೆ ಕೊಡ ಗಿನ ಐತಿಹಾಸಿಕ ಮಹತ್ವವಾದರೂ ಎಂತಹದು ನೋಡಿರಿ–

ಇದು ಅಗಸ್ತ್ಯನ ತಪದ ಮಣೆ; ಕಾವೇರಿತಾಯ ತವರ್ಮನೆ.
ಕದನಸಿರಿಗುಯ್ಯಾಲೆ ತೂಗಿದನಿಲ್ಲಿ ಚಂದರವರ್ಮನೆ!
ಇದಕೊ! ಚೆಂಗಾಳ್ವರಸರಾಡಂಬರವು ಕುಣಿತದ ಶ್ರೀರಂಗವು!
ಇದೊ! ಇದೊ! ಇಲ್ಲುರುಳ್ದ ಹಾಲೇರಿಯರ ಬಲಗಿರಿಶೃಂಗವು!

ಹೆಚ್ಚೇಕೆ? ಈ ಹುತ್ತರಿ ಹಾಡಿನಲ್ಲಿ ಕೊಡಗು ನಾಡಿನ ಸಂಪೂ ರ್ಣ ಚಿತ್ರ ಅಡಕವಾಗಿದೆಯೆಂದರೂ ಅತಿಶಯೋಕ್ತಿಯಾಗ ಲಾರದು. ಹಾಡು ಕೇಳುವಾಗ 'ಅಮ್ಮೆ ಹರಸಿದ' ಆ ಸೀಮೆ ನಮ್ಮ ಕಣ್ಣ ಮುಂದೆ ಕುಣಿದಾಡುವುದು.

ಈ ಎಲ್ಲಾ ಬಾಲಗೀತಗಳಲ್ಲದೆ ಕವಿಶಿಷ್ಯರು ರಚಿಸಿದ ನಕ್ಷತ್ರ, ಜೇನು ಹುಳು, ಉದ್ಯಮ, ಉದಯರಾಗ, ಚಂದ್ರ ನನ್ನು ತಾ, ಸಂಜೆಯ ಹಾಡು, ಸೂರ್ಯ, ಜೇಡನೂ ನೊಳ ವೂ, ಬಾಲ್ಯಸ್ಮರಣೆ ಮುಂತಾದ ಹಾಡುಗಳೂ ಉತ್ತಮ ರಚನೆ ಗಳೇ ಆಗಿವೆ. ಕವಿಶಿಷ್ಯರು ಬಾಲಗೀತಗಳಿಗಿಂತಲೂ ಅವರ ಬಾಲಕಥನ ಕವನಗಳು–ಮಕ್ಕಳ ನೀಳ್ಗವನಗಳು–ಇನ್ನಷ್ಟು ಮಿಗಿಲಾದುವುಗಳೆಂದು ಹೇಳಬಹುದು. ಕನ್ನಡದಲ್ಲಿ ಮಕ್ಕಳಿ ಗಾಗಿಯೇ ಮೊಸಲಾದ ಕಥನಕವನಗಳನ್ನು ಮೊತ್ತ ಮೊದ ಲಾಗಿ ರಚಿಸಿದ ಕವಿಯೆಂದರೆ ಕವಿಶಿಷ್ಯರೇ. ಅವರ ಕಥನ ಕವನಗಳ ಶೈಲಿ, ವಿಷಯ, ಭಾಷೆ, ಕತೆಗಾರಿಕೆ ಮುಂತಾದುವು ಬಾಲಗೀತಗಳಂತೆಯೇ ಮಕ್ಕಳ ಮನಸ್ಸಿಗೆ ಮಾತ್ರವೆಂದೇಕೆ ಹಿರಿಯರ ಹೃದಯವನ್ನೂ ಸೆಳೆಯುವಂತಿದ್ದು ತುಂಬಾ ಸೊಗ ಸಾಗಿವೆ. ಒಮ್ಮೆ ಓದಿದರೆ ಅಥವಾ ಕೇಳಿದರೆ ಎಂದೆಂದಿಗೂ ಮನದಿಂದ ಮಾಸಿ ಹೋಗದ ಆ ಕಥನ ಕವನಗಳು ಆಧುನಿಕ ಕನ್ನಡದಲ್ಲಿ ಉತ್ತಮ ಕೃತಿಗಳು ಮಾತ್ರವಲ್ಲದೆ, ಸಂಪತ್ತುಗಳೇ ಆಗಿವೆ. ನಾಗಣ್ಣನ ಕನ್ನಡಕ, ಕಡೆಕಂಜಿ, ಡೊಂಬರ ಚೆನ್ನೆ, ಅಣ್ಣನ ವಿಲಾಪ ಇವೇ ಕವಿಶಿಷ್ಯರ ಅಮೂಲ್ಯವಾದ ಕಥನ ಕವನಗಳಾಗಿವೆ. ಈಗ ಇವುಗಳಲ್ಲಿ ಒಂದೊಂದನ್ನೇ ಪರಿಶೀ ಲಿಸುವ.

ಮೊದಲಾಗಿ 'ನಾಗಣ್ಣನ ಕನ್ನಡಕ'ವನ್ನು ಕೈಗೆತ್ತಿಕೊ ಳ್ಳುವ. ಓದುಬರೆಹ ಬಾರದ ನಾಗಗೌಡ ಶ್ಯಾಮನ ಕನ್ನಡಕದ ಅಂಗಡಿಗೆ ಹೋಗಿ ಬೇರೆ ಬೇರೆ ಕನ್ನಡಕಗಳನ್ನು ಮೂಗಿಗೇ ರಿಸಿ ನೋಡಿದ. ಯಾವ ಕನ್ನಡಿಯೂ ಆತನಿಗೆ ಸರಿಯಾಗಿ ತೋರದು. ಆತನಿಗೆ ಬೇಕಾದುದೆಂದರೆ 'ತೆಲುಗು ಕನ್ನಡ ಕಲಿಪ ಕನ್ನಡಿ', 'ಚೆಲುವ ಇಂಗ್ಲಿಷ್ ಕನ್ನಡಿ', ಓದುಬರೆಹ ತೋರುವ ಬೂದು ಕನ್ನಡಿ ಬೇಕು ನಾಗಣ್ಣನಿಗೆ. ಕನ್ನಡ ಕಲಿ ಯುವ, ಓದುಬರೆಹ ತಿಳಿಯುವ ಗೌಡನ ಆಸೆ ತಿಳಿದ ಶ್ಯಾಮು ಆತನಿಗೆ ಸರಿದಾರಿ ತೋರುತ್ತಾನೆ; ಹಳ್ಳಿಯ ಸಾಲೆಗೆ ಹೋ ಗಲು ಹೇಳುತ್ತಾನೆ 'ಅಲ್ಲಿ ಕನ್ನಡಿ ದೊರೆಯುವುದಿಲ್ಲವಾ ದರೂ ಕನ್ನಡ ದೊರೆಯುವುದು' ಎನ್ನುತ್ತಾನೆ. ಶ್ಯಾಮನ ಮಾತು ಕೇಳಿದ ನಿರಕ್ಷರ ಕುಕ್ಷಿ ವಯಸ್ಕ ನಾಗ ಗೌಡ ಅಂದಿ ನಿಂದಲೇ ತನ್ನ ಮಕ್ಕಳನ್ನು ಶಾಲೆಗೆ ಕಳುಹಿಸಲು ತೊಡಗು ತ್ತಾನೆ. ಇಷ್ಟೇ ಈ ಕಥನ ಕವನದ ಕಥಾವಸ್ತು. ಇಲ್ಲಿ ಕವಿ ಶಿಷ್ಯರ ಜಾಣ್ಮೆ ನೋಡಬೇಕು: ಕನ್ನಡಿ ನೋಡಲು ಬಂದ ಹಳ್ಳಿಯ ಗೌಡನಿಗೆ ಕನ್ನಡ ಕಲಿಯಲು ಹಚ್ಚುತ್ತಾರೆ ನಮ್ಮ ಕವಿಶಿಷ್ಯರು! ಗೋವಿನ ಕಥೆಯ ಮಟ್ಟಿನಲ್ಲಿ ಈ ಕಥನ ಕವನ ಸಾಗುತ್ತದೆ. ಯಮಕಪೂರ್ಣವಾದ ಶೈಲಿಯಿಂದ ಕೂಡಿ ಬಲು ಸೊಗಸಾಗಿ ಅರ್ಥವತ್ತಾಗಿದೆ. ದೃಷ್ಟಾಂತಕ್ಕಾಗಿ ಶ್ಯಾಮನ ಕನ್ನಡಕದ ವರ್ಣನೆ ಕೇಳಿರಿ–

ಓಡಿ ಬನ್ನಿರಿ, ಕೂಡಿ ಬನ್ನಿರಿ, ನೋಡಿ ಬನ್ನಿರಿ ಗೆಳೆಯರೆ,
ನೋಡಿ ನಮ್ಮಯ ಕನ್ನಡಕವನು ಹಾಡಿ ಹೊಗಳಿರಿ ಗೆಳೆಯರೆ,
ಊರುಗನ್ನಡಿ ಉರುಟುಗನ್ನಡಿ ದೂರ ನೋಟದ ಕನ್ನಡಿ,
ಓರೆಕಣ್ಣಿಗೆ ನೇರುಕನ್ನಡಿ ಮೂರು ಚವಲಕೆ ಕೊಡುವೆನು.

* * * *

ಹಣ್ಣು ಮುದುಕಗೆ ಚಿಣ್ಣ ಮಕ್ಕಳ ಕಣ್ಣು ಕೊಡುವ ಕನ್ನಡಿ.
ಬಣ್ಣ ಬಣ್ಣದ ಕನ್ನಡಕಗಳು ಬೆಣ್ಣೆಯಂದದಿ ತಣ್ಣಗೆ.

ಕವಿಶಿಷ್ಯರ ಮತ್ತೊಂದು ಹೆಸರಾದ ಕಥನ'ಕಡೆಕಂಜಿ.' 'ಕಡೆಕಂಜಿ' ಕರುಣಾ ಜನಕವಾದ ಕಥನ ಕವನ; ಓದುವವರ ಕೇಳುವವರ ಎದೆ ನೀರಾಗಿಸುವ ನೀಳ್ಗವನ. 'ಕಡೆಕಂಜಿ'ಯ ಕಥಾವಸ್ತು ಐತಿಹಾಸಿಕವಾಗಿದ್ದಂತೆ ತೋರುತ್ತದೆ. ಈ ಕವನದ ಕಥೆ ಕನ್ನಡ ಜಿಲ್ಲೆಯ ಚೌಟ ಅರಸರ ಕಾಲದಲ್ಲಿ ನಡೆದಂತೆ ವರ್ಣಿತವಾಗಿದೆ. ಚೌಟರ ಸಹೃದಯತೆ, ಪ್ರಜಾಪಾಲನೆ, ದಾನಶೀಲತೆಗಳನ್ನು ಇದು ಸಾರಿ ಹೇಳುತ್ತದೆ. ತುಳುನಾಡಿನ ಹಳೆಯ ಕಾರ್ಕಳದ ಚೌಟರಸು ಒಂದು ದಿನ ಸಂಜೆ ತಿರುಗಾಡುತ್ತಿದ್ದಾಗ ಒಂದು ಅಚ್ಚರಿ ಕಂಡನು.'ಮರುಕ ತೋರುವ, ಕರೆದು ಚೀರುವ ಬಿರುಮ ಸೆಟ್ಟಿಯು' ಕಂಡನು. 'ಕಂದು ಮೋರೆಯ, ನಾಂದ ಕಣ್ಣಿನ, ಮಿಂದ ಕೆನ್ನೆಯ, ಮಸುಕಿನ, ಬೆಂದು ಹೊರಡುವ ಮೂಗು ಸುಯ್ಲಿನ, ನೊಂದು ನೋಯುವ ಸೆಟ್ಟಿಯು' ಕೈಯಲ್ಲಿ ಪುಟ್ಟ ಕರುವೊಂದನ್ನು ಕಟ್ಟಿಕೊಂಡಿದ್ದನು. 'ಕೆಟ್ಟೆನಯ್ಯೋ! ಕೆಟ್ಟೆನಯ್ಯೋ!' ಎಂದಳುತ್ತಿದ್ದನು. ತಪಿಸುತ್ತಿರುವ ಬಿರುಮನಿಗೆ ದೊರೆಯ ಗುರುತರಿಯದು. ದೊರೆ ಬಿರುಮನ ಈ ಅವಸ್ಥೆಗೆ ಕಾರಣ ಕೇಳಿದಾಗ, ಆತ ತನ್ನ ಕೈಯಲ್ಲಿ ಹೊತ್ತುಕೊಂಡಿದ್ದ ಕಡೆಕಂಜಿಯ ಕತೆಯನ್ನು-ತನ್ನದೇ ಕರುಣ ಕತೆಯನ್ನು-ಕರುಣಾಜನಕವಾಗಿ ಹೇಳುತ್ತಾನೆ. ಬಿರುಮಸೆಟ್ಟಿ ಹಿಂದಕ್ಕೆ ಮಡದಿಯಿಲ್ಲದೆ, ಮಕ್ಕಳಿಲ್ಲದೆ ಏಕಾಂಗಿಯಾಗಿ ಅಲೆಯುತಿದ್ದ ಕಾಲದಲ್ಲಿ ಕರುವೊಂದನ್ನು ತಂದು ಅಕ್ಕರೆಯಿಂದ ಸಾಕಿದನಂತೆ. ಅದೇ ಕರುವಿನಿಂದ ಸೆಟ್ಟಿಯ ಹಟ್ಟಿ ತುಂಬಿತು; ಮಡದಿಮಕ್ಕಳೂ ಆದರು; ಮೂಡುಬೈಲನ್ನು ಬೇಸಾಯಕ್ಕೆ ಮಾಡಿಕೊಂಡನು; ಹುಲ್ಲು ಮಾಡಿಗೆ ಓಡು ಹಚ್ಚಿದನು. ಹೀಗೆ ಬಿರುಮ ಸೆಟ್ಟಿ ಧನಿಕನಾದನು. ಚೌಟರೂ ಮಾನಕೊಟ್ಟರು. ಆದರೇನು? ಆತನ ಹಣೆ ಒಡಕಾಯಿತು! ಗ್ರಹ ಕೆಡುಕಾಯಿತು! ಕುಡಿಕತನ ಸೇರಿತು. ಅದರ ಫಲವೇನು?ಸೆಟ್ಟಿಗೆ ಸಾಲವಾಯಿತು;ಸೋಲವಾಯಿತು. ಶಾಲು ಸೀರೆಗಳನ್ನು ಮಾರಿಯೂ ಆಯಿತು;ಬೈಲು ಗದ್ದೆ ಬಿಟ್ಟದ್ದೂ ಆಯಿತು. ಹೀಗೆ ಸೆಟ್ಟಿ ಕುಡಿಕತನದ ಫಲದಿಂದಾಗಿ ಮೂಲೆ ಕಸದಂತಾದನು. ಈಗ ಬೇಡುವುದೊಂದೇ ಆತನಿಗೆ ಆಸರೆಯೆನಿಸಿತು. ಬೇಡಿದರೂ ಬಿಕ್ಕೆ ಇಕ್ಕುವವರಿಲ್ಲ! 'ಮೂಡುಬೈಲಿನ ಬಿರುಮಸೆಟ್ಟಿಬೇಡುತ್ತಾನೆ!ಕೆಲಸಮಾಡಲು ಮಾರಿ ಇವನಿಗೆ' ಎನ್ನತೊಡಗಿದರು ಜನ. ಈ ರೀತಿಯಾಗಿ ಬಿರುಮನ ಸ್ಥಿತಿ ಕರುಣಾಜನಕವಾಯಿತು.'ನೋವು ಬಾರದು; ಸಾಲ ತೀರದು; ದೈವ ಮುನಿದಂತಾಯಿತು.' ಕಡೆಗೆ ಸೆಟ್ಟಿಗೆ ಉಳಿದುದೆಂದರೆ ಈ ಕಡೆಕಂಜಿಯೊಂದೇ! ಅದರ ತಾಯನ್ನೂ ಮೊಲೆ ಬಿಡುವ ಮೊದಲೇ ಮಾರಿಯಾಗಿತ್ತು. ಸೆಟ್ಟಿ ಈ ಕರುಣ ಕತೆಹೇಳಿ ಮುಗಿಸಿದಾಗ ಚೌಟರಚಂದ್ರನಾಥದೊರೆಗೆ ಕಂಬನಿ ತುಂಬಿತು. ಆತ ಕಂಬನಿ ಸುರಿಸುತ್ತಾ "ಬಿದ್ದುದಿಲ್ಲವು ಗದ್ದೆಗೆಯ ಮೇಲಿದ್ದ ನವಿಲ್ಮೊಕಿವಿಯಲಿ, ಗದ್ದೆ ಉಳುವರ ಉದ್ದಗೋಳಿನ ಸದ್ದು ಸುದ್ದಿ ಈ ತನಕವು" ಎಂದು ತುಂಬಾ ಮರುಗಿದನು. ಕೂಡಲೇ ಮೂಡು ಬೈಲನ್ನು ಸೆಟ್ಟಿಗೆ ಹಿಂದೆ ಕೊಡಿಸುವುದಾಗಿ ಅಭಯದಾನ ಮಾಡಿದನು. ತನ್ನ ಕರುಣ ಕತೆ ಕೇಳುತ್ತಿದ್ದವನು ಸ್ವಂತ: ಚಂದ್ರನಾಥ ದೊರೆ ಎಂದು ಸೆಟ್ಟಿಗೆ ಅರಿವಾದುದು ಆಗ. ಸೆಟ್ಟಿ ಭಯ ವಿಸ್ಮಯಗಳಿಂದ ದೊರೆಯ ಕಾಲಿಗೆ ಬಿದ್ದ. ಆತನ ಕೈಯಲಿದ್ದ ಕರು ಅತ್ತ ನೆಗೆಯಿತು. ದೊರೆ ನೆಗೆದ ಕರುವನ್ನು ಎತ್ತಿ ಬಿರುಮನ ಕೈಗೆ ಕೊಡುತ್ತಾ "ಅರರೆ! ಬಿರುಮನೆ, ಮರೆಯದಿರು ಮನೆ ಮರಿಯ ಮಕ್ಕಳು ಮಡದಿಯಾ; ಬರಿದೆ ಕೊಡುವೆನು, ಬರೆದು ಕೊಡುವೆನು ಸ್ಥಿರ ಚರಾಸ್ತಿಯ ಉಂಬಳಿ" ಎಂದು ಸಾರಿ ಹೇಳಿದನು. ಕಥನ ಕವನದ ಕತೆ ಇಷ್ಟೆ. ಅಧ್ಯಾಪಕನ ಬಾಯಿಯಿಂದ ಈ ಕರುಣ ಕಥೆಯ ವಿವರಣೆ ಕೇಳುವಾಗ ಕಂಬನಿ ಮಿಡಿಯದ ಕನ್ನಡದ ಕಂದನಿಲ್ಲ; ಆವೇಶದಿಂದ ವಿವರಿಸುವಾಗ ಕಣ್ಣೀರು ಸುರಿಸದ ಅಧ್ಯಾಪಕನಿಲ್ಲ. ಅಷ್ಟೊಂದು ಕರುಣಾ ಪೂರ್ಣವಾಗಿದೆ. ಕವಿಶಿಷ್ಯರ ಈ ಕಥನ ಕವನ.

ಕವಿಶಿಷ್ಯರ ಇನ್ನೊಂದು ಕಥನ ಕವನ 'ಡೊಂಬರ ಚೆನ್ನೆ'. ಇದರ ಕತೆಯೂ ಐತಿಹಾಸಿಕವಾಗಿರುವಂತೆ ತೋರುತ್ತದೆ. ನಂದಾವರದ ಬಂಗ ರಾಜ್ಯದಲ್ಲಿ ನಡೆದ ವೃತ್ತಾಂತವಿದು. ಬಂಗರ ಸಂತತಿಗೆ ಡೊಂಬ ಹೆಗ್ಗಡೆ ಎಂಬ ಹೆಸರು ಬರಲು ಕಾರಣವಾದ ಕತೆ. ಕವಿಶಿಷ್ಯರ ಈ ಕಥನ ಕವನವೂ ತುಂಬಾ ಹೆಸರಾದುದು. ಇದರಲ್ಲಿ ಬರುವ ಡೊಂಬರಾಟದ ಕತೆ ಕೇಳುವಾಗ ಡೊಂಬರ ಸೋಜಿಗದ ಆಟ ಕಣ್ಣ ಮುಂದೆಯೇ ನಡೆದಂತಾಗುತ್ತದೆ–

ಆಗ ಬಡೆಯಿತು ಡೋಲು ಬಡಬಡ ಬಾಗಿ ಅರಸಿಗೆ ತಲೆಯನು
ಬೇಗ ತಿರ್ರನೆ ತಿರುಗಿ ಸರ್ರನೆ ಲಾಗ ಹಾಕಿದ ಡೊಂಬನು
ಸೇರಿನೊಂದಿಗೆ ಅರು ಬಿಂದಿಗೆ ಹೇಳಿ ನೆತ್ತಿಯ ಮೇಲಕೆ
ಹಾರಿ ಧಿಕ್ಕಿಟ ಕುಣಿದ ನಕ್ಕಟ ನೀರು ಹೊರಗಡೆ ಚೆಲ್ಲದೆ

ಈ ಕಥನ ಕವನವನ್ನು ಆವೇಶದಿಂದ ಹಾಡಿ ವಿವರಿಸುತ್ತಾ ಡೊಂಬ ಕುಣಿದುದನ್ನು ನಟನೆಮಾಡಿ ಮಕ್ಕಳಿಗೆ ತೋರುತ್ತಿರುವಾಗ ಹಳ್ಳಿಯ ಅಧ್ಯಾಪಕರೊಬ್ಬರು ಕರಿಹಲಿಗೆ ಕಣ್ಣಿಗೆ ತಾಗಿ ಕಣ್ಣು ಕಳೆದುಕೊಂಡರಂತೆ! ಅಧ್ಯಾಪಕರಿಗೂ ಮಕ್ಕಳಿಗೂ ಈ ಕಥನ ಕವನ ಎಷ್ಟೊಂದು ಮೆಚ್ಚಿದೆ ಎಂದು ಇದರಿಂದ ತಿಳಿಯಬಹುದು. ಈ ನೀಳ್ಗವನದಲ್ಲಿ ಬರುವ ಕತೆಯೂ ತುಂಬಾ ಸೋಜಿಗವಾಗಿದೆ. ಸುನಂದೆಯೆಂಬ ಬಂಗರಸು ಕುಟುಂಬದ ಹೆಣ್ಣು ಮಗಳೊಬ್ಬಳು ಡೊಂಬನೊಬ್ಬನ ಆಟಕ್ಕೆ ಮನಸೋತು,ಆತನೊಂದಿಗೆ ಮೊಲೆಯುಣ್ಣುವ ಹೆಣ್ಣು ಮಗುವನ್ನು ಕಟ್ಟಿಕೊಂಡು ಹೇಳದೆ ಕೇಳದೆ ಓಡಿಹೋದಳಂತೆ,

ಮತ್ತೆ ಇಪ್ಪತ್ತು ವರ್ಷದಮೇಲೆ ಅದೇ ಡೊಂಬನು ಅದೇ ಅರ ಮನೆಯಲ್ಲಿ ಅದೇ ಸುನಂದೆಯ ಹೆಣ್ಣುಮಗು ರತ್ನಾವತಿ— ಈಗ ಡೊಂಬರ ಚೆನ್ನೆ—ಯೊಂದಿಗೆ ಬಂದು ಆಟ ವಾಡುವನು. ಈ ಡೊಂಬರ ಚೆನ್ನೆಯ ಆಟಕ್ಕೆ ಬೆಡಗಿಗೆ ಮನಸೋದ ಬಂಗ ರಾಜನು ಅವಳನ್ನು ವರಿಸಲು ಬಯಸುವನು; ಮನದ ಬಯ ಕೆಯನ್ನು ಡೊಂಬನಿಗೆ ಸೂಚಿಸುವನು. ದೊರೆಯ ಮಾತು ಕೇಳಿದ ಡೊಂಬ ತನ್ನ ಗುಟ್ಟು ಬಯಲಾಗುವುದೆಂಬ ಭಯ ದಿಂದ ಆಟವಾಡುತ್ತಿದ್ದಾಗಲೇ ಚೆನ್ನೆಯೊಂದಿಗೆ ಹತ್ತಿರದ ಹೊಳೆಗೆ ಹಾರಿಬಿಡುವನು. ದೊರೆಯ ಅಪ್ಪಣೆಯಂತೆ ಜನರು ಡೊಂಬನನ್ನೂ ಚೆನ್ನೆಯನ್ನೂ ಮೇಲಕ್ಕೆತ್ತಿ ತರುವರು. ಹೊಳೆ ಯಲ್ಲಿ ಬಿದ್ದು ನೀರುಕುಡಿದು ಅರೆಜೀವವಾಗಿದ್ದ ಡೊಂಬನು ಇಪ್ಪತ್ತು ವರ್ಷಗಳ ಹಿಂದೆ ತನ್ನೊಂದಿಗೆ ಓಡಿಹೋದ ಸುನಂ ದೆಯ ಕತೆ ಹೇಳಿ "ಆರಿ ದೂರಕೆ ಅಲೆದ ಕಡಲಿನ ನೀರೆ ಕಡಲನೆ ಕೂಡಿತು" ಎಂದುಸುರಿ ಕಣ್ಮುಚ್ಚುವನು. ಅಳಿದ ಡೊಂಬಗೆ ಉತ್ತರಕ್ರಿಯೆ ಮಾಡಿಸಿದ ಬಂಗರಾಜ ಡೊಂಬರ ಚೆನ್ನೆಯನ್ನು 'ಮದುವಳಿಗ ಕೈಯಲಿ' ಹಿಡಿದರು; ತನ್ನ ರಾಜ್ಯದ ಪಾಲು ಬಳುವಳಿಯನ್ನೂ ಕೊಟ್ಟರು. 'ಅದರಿಂದ ಆ ಚೆನ್ನೆ ಸಂತತಿಗೆ ಡೊಂಬಾ ಹೆಗ್ಡೆ ಎಂಬ ಹೆಸರಾಯಿತು' ಇದೇ ಈ ಕಥನಕವ ನದ ಸೋಜಿಗದ ಕಥಾವಸ್ತು.

ಕವಿಶಿಷ್ಯರ 'ಅಣ್ಣನ ವಿಲಾಪ' ವೆಂಬ ಕವನವನ್ನು ಕಥನಕವನ ವೆನ್ನುವುದಕ್ಕಿಂತಲೂ ನೀಳ್ಗವನ ವೆನ್ನುವುದು ಮೇಲು. ಕೇಳುವವರ ಕರುಳು ಕೊಯ್ಯುವ ಈ ಕವನ ತಾಯಿಮಕ್ಕಳ ಸಂವಾದ ರೂಪದಲ್ಲಿದೆ. ತೀರಿಹೋದ ತಮ್ಮ ನಿಗಾಗಿ ಅಣ್ಣ ವಿಲಾಪ ಮಾಡುತ್ತಾನೆ. ಆ ಅಣ್ಣನ ವಿಲಾಪ ಕೇಳಿದರೆ ಎಂತಹ ಕಲ್ಲೆದೆಯಾದರೂ ಕರಗಬೇಕು. ಇಲ್ಲಿ ಕವಿ ಚಿತ್ರಿಸಿದ ಸೋದರ ಹಾಗೂ ತಾಯ ಹೃದಯ ಪರಿಪೂ ರ್ಣವಾದ ಚಿತ್ರವಾಗಿದೆ. ಆ ಚಿತ್ರ ಓದುಗರ ಹೃದಯದಿಂದ ಮರುಕದ ಹೊನಲು ಹರಿಯಿಸುತ್ತದೆ. ಅಣ್ಣ ಅಳುತ್ತಾ ಅಮ್ಮ ನೊಡನೆ ಕೇಳುತ್ತಾನೆ—

ಎಲ್ಲಿ ಹೋದನು ಅಮ್ಮ, ಪುಟ್ಟಣ್ಣನಮ್ಮಾ?
ನಿಲ್ಲದವನನ್ನು ಹುಡುಕಿ ತರುವೆ ನಾನಮ್ಮಾ!
ಅಲ್ಲಿಲ್ಲ ಇಲ್ಲಿಲ್ಲ ಎಲ್ಲಹನು ತಮ್ಮಾ?
ತಲ್ಲಣಿಸುತಿದೆ ಮನವು ಹೇಳು ನೀನಮ್ಮಾ!

* * * *

ದೀಪಾವಳಿಯ ದಿನ ಬಲೀಂದ್ರ ಮರನೆಡಿಸಿ
ಕೇಪಳಂಬಳ ಕಾಯಿ ಗುಂಡು ಸರ ತೊಡಿಸಿ
ಆ ಪೂಜೆಯಾಗುತಿರೆ ತಮ್ಮನನು ಬಿಟ್ಟು
ಕೈ ಪರಿ ಹೊಡೆವುದೆಂತು ಬರುವುದೇ ಪುಟ್ಟು?

ಇಲ್ಲಿ ಅಣ್ಣನ ವಿಲಾಪ ದುಃಖಾಂತವಾಗಿಯೇ ಕೊನೆಗೊಳ್ಳು ವುದು. ಕವಿಶಿಷ್ಯರ ಇತರ ಕಥನಕವನಗಳೆಲ್ಲಾ ಸುಖಾಂತ ವಾದರೆ ಇದು ದುಃಖಾಂತವಾಗಿದ್ದು ಹಾಡುವವನೂ ಕೇಳು ವವನೂ ಕಂಬನಿ ಮಿಡಿಯುವಂತೆ ಮಾಡುತ್ತದೆ.

ಇಲ್ಲಿಗೀಗ ಕವಿಶಿಷ್ಯರ ಪ್ರಸಿದ್ಧ ಬಾಲಗೀತಗಳ ಹಾಗೂ ಕಥನಕವನಗಳ ಸಿಂಹಾವಲೋಕನವಾಯಿತು. ಇನ್ನವರ ಬಾಲಕಥಾಸಾಹಿತ್ಯದ ಕಡೆಗೆ ದೃಷ್ಟಿ ಹಾಕುವ.

ಕನ್ನಡದ ಸಣ್ಣಕಥೆಯ ಜನಕರಾದ ಕವಿಶಿಷ್ಯರು ಹಿರಿ ಯರಿಗಾಗಿ ಬರೆದುದಕ್ಕಿಂತ ಹೆಚ್ಚಾಗಿ ಕಿರಿಯರಿಗೆ ಬರೆದಿರು ವರು. ಕಿರಿಯರ ಮೇಲೆ ಅವರಿಗಿದ್ದ ಮಮತೆಯೇ ಇದಕ್ಕೆ ಕಾರಣ. ಹಿರಿಯರಿಗಾಗಿ ಎಲ್ಲರೂ ಬರೆಯುತ್ತಾರೆ. ಆದರೆ ಕಿರಿಯರಿಗೆಂದು ಬರೆವವರು ವಿರಳ. ಈ ಕುಂದನ್ನು ನಿವಾರಿ ಸುವುದೇ—ಕಿರಿಯರಿಗಾಗಿ ವಿಪುಲವಾಗಿ ರಚನೆಮಾಡಿ, ಅವ ರಲ್ಲಿ ಓದುವಹಂಬಲ ಹೆಚ್ಚಿಸುವುದೇ ಅವರ ಆಶಯವಾಗಿತ್ತು. ಕನ್ನಡಸಾಹಿತ್ಯದ ಆಧುನಿಕಯುಗದ ಆ ಪ್ರಾರಂಭಿಕ ಕಾಲ ದಲ್ಲಿ ಕವಿಶಿಷ್ಯರ ಪ್ರತಿಭಾಪೂರ್ಣವಾದ ಲೇಖನಿಯಿಂದ ಎಂ ತಹ ಉತ್ತಮ ಮಕ್ಕಳಕತೆಗಳು ಹರಿದು ಬಂದಿವೆ ಎಂಬುದನ್ನು ಆ ಕತೆಗಳನ್ನೆಲ್ಲ ಓದಿಯೇ ತಿಳಿಯಬೇಕಲ್ಲದೆ ಬೇರೆಸಾಧ್ಯವಿಲ್ಲ. ಅಂದಿನ ಅವರ ಚೊಕ್ಕಮಾತಿನ ಚಿಕ್ಕ ಕತೆಗಳನ್ನು ಕನ್ನಡ ನಾಡಿನಲ್ಲಿ ಓದದ ಮಕ್ಕಳಿರಲಿಲ್ಲ; ಕಲಿಸದ ಉಪಾಧ್ಯಾಯನಿರ ಲಿಲ್ಲ. ಕವಿಶಿಷ್ಯರೇ ಕನ್ನಡದ ಮಕ್ಕಳಿಗೆ ಮೊತ್ತಮೊದಲು ಚೊಕ್ಕ ಮಾತಿನಲ್ಲಿ ಚಿಕ್ಕಕತೆ ಹೇಳಿದ ಅಜ್ಜಯ್ಯ. ಅವರ ಕತೆ ಗಳಲ್ಲಿ ಮಕ್ಕಳ ಕತೆಗಳಲ್ಲಿರಬೇಕಾದ ಎಲ್ಲಾ ಗುಣಗಳೂ ಪರಿ ಪೂರ್ಣವಾಗಿವೆ. ಭಾಷೆ, ಶೈಲಿ, ಕಥಾವಸ್ತು, ಕತೆಗಾರಿಕೆಯ ರೀತಿ ಯಾವುದನ್ನು ನೋಡಿದರೂ ಅವು ಮಕ್ಕಳ ಮನಸ್ಸಿಗೆ ಸಂಪೂರ್ಣ ಮೆಚ್ಚುವಂತಿವೆ.

ಇನ್ನೀಗ ಕವಿಶಿಷ್ಯರ ಮಕ್ಕಳ ಕತೆಗಳಲ್ಲಿ ಕೆಲವನ್ನು ಪರಿಶೀಲಿಸುವ. ಆ ಕತೆಗಳಲ್ಲಿ ಹಲವು ಈಗ ತಾನೇ ಓದು ಬರೆಹ ಕಲಿಯತೊಡಗಿದ ಬಲು ಕಿರಿಯ ಮಕ್ಕಳಿಗಾಗಿ ಬರೆ ದವುಗಳು. ಕೆಲವು ತುಸು ದೊಡ್ಡ ಮಕ್ಕಳಿಗಾಗಿ ಬರೆದವು ಗಳು. ಬಲು ಕಿರಿಯರಿಗಾಗಿ ಅವರು ಬರೆದವುಗಳೇ ಹೆಚ್ಚು. ಕವಿಶಿಷ್ಯರ ಈ ಮಕ್ಕಳ ಕತೆಗಳಲ್ಲಿ ಎಲ್ಲವೂ ಸ್ವತಂತ್ರವಾದುವು ಗಳಲ್ಲ. ಇಂಗ್ಲಿಷಿನಿಂದ ಭಾಷಾಂತರಿತವಾದವುಗಳು ಹಲವು. ಹಾಗೆಂದು ಅವು ನೀರಸ ಭಾಷಾಂತರಗಳಲ್ಲ. ಭಾಷಾಂತರ ಗಳಾದರೂ ಆ ಕತೆಗಳು ಕವಿಶಿಷ್ಯರ ಸಮರ್ಥಲೇಖನಿಯಿಂ ದಿಳಿದು ಸಂಪೂರ್ಣವಾಗಿ ಕನ್ನಡತ್ವವನ್ನು ಪಡೆದಿವೆ. ಅವು ಗಳನ್ನು ಓದುವಾಗ ಭಾಷಾಂತರಗಳೆಂಬ ಭಾವನೆಯೇ ಬರ ಲಾರದು. ಕೆಲವಂತೂ ಭಾಷಾಂತರದಲ್ಲಿ ಇಂಗ್ಲಿಷಿನ ಮೂಲ ಕತೆಗಳಿಗಿಂತಲೂ ಮಿಗಿಲಾಗಿ ರೂಪುಗೊಂಡಿವೆ ಎನ್ನಬಹುದು.

ಇದು ಕವಿಶಿಷ್ಯರ ಪ್ರತಿಭಾಶಕ್ತಿಯ ಗುಣ.

ಅರ್ಗಣೆ ಮುದ್ದೆ, ಬಿಟ್ಟೀ ಬಸವಯ್ಯ, ಅಂಗಳದುಗ್ಗು, ಕೊಕ್ಕೊಕೋ ಕೋಳಿ, ಮೆಣಸಿನ ಕಾಳಪ್ಪ, ಮೂರು ಕರಡಿಗಳು, ಗುಡುಗುಡು ಗುಮ್ಮಟ ದೇವರು, ಬೆಕ್ಕಿನ ಬಿಡಾರ ಬೇರೆ, ಇಲಿಗಳ ಥಕ್ಕ ಥೈ, ಹೇನು ಸತ್ತು ಕಾಗೆ ಬಡವಾಯಿತು, ಮಾತಾಡೋ ರಾಮಪ್ಪ, ಗೋಣಿತಟ್ಟಿನ ಪಟ್ಟೆಹುಲಿ, ಏಕ್ ರೋಜ಼್ ಕಾ ಕಲೀಫ಼್, ಬೊಕ್ಕೆ ಬಾಯಿ ಕೊಕ್ಕೆರಾಜ, ಅಜ್ಜಿ ಸಾಕಿದ ಮಗು, ಕೋಟಿ ಚೆನ್ನಯ, ಅಗೋಳಿ ಮಂಜಣ— ಇವೆಲ್ಲಾ ಕವಿಶಿಷ್ಯರು ಬರೆದ ಮಕ್ಕಳ ಕತೆಗಳಾಗಿವೆ.

ಈಗ ಇವುಗಳಲ್ಲಿ ಕೆಲವು ಕತೆಗಳ ಸೊಬಗನ್ನೂ ಬೆಡಗನ್ನೂ ಪರಿಶೀಲಿಸುವ; ಕನ್ನಡ ಸಾಹಿತ್ಯದಲ್ಲಿ ಅವುಗಳ ಸ್ಥಾನವನ್ನು ಗಣಿಸುವ. ಮೂರು ಕರಡಿಗಳು ಎಂಬುದೊಂದು ಕತೆ ಈ ಕತೆಯಲ್ಲಿ ಚೆಲುವಮ್ಮನೆಂಬ ಚಿಕ್ಕ ಹುಡುಗಿ ದಾರಿತಪ್ಪಿ ಮಲೆಗೆ ಹೋಗುವಳು. ಅಲ್ಲೊಂದು ಹೊಳೆಯ ದಡದಲ್ಲಿ ದೊಡ್ಡ ಮನೆ- ಮಾಳಿಗೆಯ ಮನೆ- ಇತ್ತು. ಮೂರು ಕರಡಿಗಳ ಮನೆ ಅದು. ಆ ಮೂರು ಕರಡಿಗಳ ಬಣ್ಣನೆ ಕವಿಶಿಷ್ಯರ ಬಾಯಿಂದಲೇ ಕೇಳಬೇಕು. ಎಷ್ಟೊಂದು ಸೊಗಸಾಗಿ ವಿವರವಾಗಿ ಮಕ್ಕಳ ಮನಸ್ಸಿಗೆ ನಾಟುವಂತೆ ಬಣ್ಣಿಸಿದ್ದಾರೆ ನೋಡಿರಿ–

"ಅವುಗಳಲ್ಲಿ ಒಂದು ದೊಡ್ಡ ಕರಡಿ, ಒಂದು ಹದ ಕರಡಿ, ಒಂದು ಸಣ್ಣ ಕರಡಿ. ದೊಡ್ಡ ಕರಡಿಗೆ ದೊಡ್ಡ ಮೈ, ದೊಡ್ಡ ಮುಸುಡು, ದೊಡ್ಡ ಸ್ವರ. ಹದ ಕರಡಿಗೆ ಹದ ಮೈ, ಹದ ಮುಸುಡು, ಹದ ಸ್ವರ. ಸಣ್ಣ ಕರಡಿಗೆ ಸಣ್ಣ ಮೈ, ಸಣ್ಣ ಮುಸುಡು, ಸಣ್ಣ ಸ್ವರ. ದೊಡ್ಡ ಕರಡಿಗೆ ದೊಡ್ಡ ಬಟ್ಟಲು, ದೊಡ್ಡ ಮಣೆ, ದೊಡ್ಡ ಮಂಚ, ದೊಡ್ಡ ಹಾಸಿಗೆ. ಹದ ಕರಡಿಗೆ ಹದ ಬಟ್ಟಲು, ಹದ ಮಣೆ, ಹದ ಮಂಚ, ಹದ ಹಾಸಿಗೆ. ಸಣ್ಣ ಕರಡಿಗೆ ಸಣ್ಣ ಬಟ್ಟಲು, ಸಣ್ಣ ಮಣೆ, ಸಣ್ಣ ಮಂಚ, ಸಣ್ಣ ಹಾಸಿಗೆ."

ಚಿಕ್ಕ ಮಕ್ಕಳ ಮನಸ್ಸಿಗೆ ನಾಟುವಂತೆ ಎಷ್ಟೊಂದು ಸ್ವಾಭಾವಿಕವಾಗಿದೆ ಈ ವಿವರಣೆ! ಎಷ್ಟೊಂದು ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಮೂರು ಕರಡಿಗಳ ಚಿತ್ರ ಕನ್ನಡದ ಕಂದನ ಕಣ್ಣಿಗೆ ಕಟ್ಟಿಸಿದ್ದಾರೆ ಕವಿಶಿಷ್ಯರು! ಇಲ್ಲಿ ಬರುವ ವಸ್ತುಗಳೂ ಹಾಗೆಯೇ, ಎಲ್ಲಾ ಕಂದನಿಗೆ ಪ್ರೀತಿಯ ಒಡವೆಗಳೇ ಆಗಿವೆ. ಬಟ್ಟಲು, ಮಣೆ, ಮಂಚ, ಹಾಸಿಗೆ ಎಲ್ಲವೂ ಕಂದನಿಗೆ ಬೇಕೇ ಬೇಕು.

ಚಿಕ್ಕ ಹುಡುಗಿ ಚೆಲುವಮ್ಮ ಕರಡಿಗಳ ಮನೆಯೊಳಗೆ ಇಣಿಕಿ ನೋಡುವಳು. ಬಟ್ಟಲುಗಳಲ್ಲಿ ಪಾಯಸ ಕಾಣುವಳು. ಅಲ್ಲಿಯೂ ಅವಳಿಗೆ ಮೆಚ್ಚುಗೆಯಾದುದು ಚಿಕ್ಕ ಬಟ್ಟಲು, ಚಿಕ್ಕ ಮಣೆ. ಮಕ್ಕಳಿಗೆ ಯಾವಾಗಲೂ ಚಿಕ್ಕ ವಸ್ತುಗಳಲ್ಲಿ ಪ್ರೀತಿ ಹೆಚ್ಚು. ಚೆಲುವಮ್ಮ, ಚಿಕ್ಕ ಮಣೆಯಲ್ಲಿ ಕುಳಿತು, ಚಿಕ್ಕ ಬಟ್ಟಲಿನಲ್ಲಿ ಪಾಯಸ ತಿಂದು, ಮಂಚಗಳ ಬಳಿ ಹೋದಳು. ಅಲ್ಲಿಯೂ ಅವಳಿಗೆ ಚಿಕ್ಕ ಮಂಚ, ಚಿಕ್ಕ ಹಾಸಿಗೆ ಬೇಕು. ಈ ರೀತಿಯಾಗಿ ಮಕ್ಕಳ ಮನಸ್ಸನ್ನು ಸೆಳೆದುಕೊಂಡು ಕವಿಶಿಷ್ಯರ ಕತೆ ಸೊಗಸಾಗಿ ಮುಂದೆ ಸಾಗುತ್ತದೆ.

ಮಕ್ಕಳ ಕತೆಗಳ ಒಂದು ಉದ್ದೇಶವೆಂದರೆ ಭಾಷಾ ಮಾರ್ಗದಲ್ಲಿ ಮಕ್ಕಳಿಂದಲೇ ಹಜ್ಜೆ ಇರಿಸಿ, ಅವರಿಗೆ ಬೇಸರ ಆಯಾಸಗಳಾಗದಂತೆ ಮೆಲ್ಲ ಮೆಲ್ಲನೆ ನಡೆಸಿಕೊಂಡು ಹೋಗುವುದು. ಈ ಉದ್ದೇಶ ಸಿದ್ಧಿಸಬೇಕಾದರೆ ಕತೆಗಳಲ್ಲಿ ಒಮ್ಮೆ ಹೇಳಿದುದನ್ನೇ ಮತ್ತೆ ಮತ್ತೆ ಪುನರಾವರ್ತಿಸಬೇಕು. ವಾಕ್ಯಗಳು ಚಿಕ್ಕ ಚಿಕ್ಕವಾಗಿದ್ದು, ಅಲ್ಲಿನ ವಿಷಯಗಳು ಬೇಕೆಂತಲೇ ಉದ್ದುದ್ದವಾಗಿ ಬೆಳೆಸಲ್ಪಡಬೇಕು. ಹೀಗೆ ಮಾಡುವುದರಿಂದ ಮಕ್ಕಳ ಮನಸ್ಸಿಗೆ ಬೇಸರವೂ ಬರುವುದಿಲ್ಲ; ದಣಿವೂ ಆಗಲಾರದು. ಒಟ್ಟಿನಲ್ಲಿ ಹೇಳುವುದಾದರೆ ನಾವು ಬಾಯಲ್ಲಿ ಹೇಳುವ ಶೈಲಿಯಲ್ಲಿಯೇ ಕತೆಗಳು ಬರೆಯಲ್ಪಡಬೇಕು. ಈ ಗುಣ ಕವಿಶಿಷ್ಯರ ಕತೆಗಳಲ್ಲಿ ಎಲ್ಲೆಲ್ಲಿಯೂ ಕಂಡು ಬರುತ್ತದೆ. ಆದುದರಿಂದಲೇ ಅವರ ಮಕ್ಕಳ ಕತೆಗಳು ಮಕ್ಕಳ ಮನಸ್ಸಿಗೆ ಅಷ್ಟೊಂದು ಮೆಚ್ಚುಗೆಯಾಗಲು ಕಾರಣ. "ಕಾಗೆ ಮತ್ತು ಗುಬ್ಬಚ್ಚಿ" ಎಂಬ ಕಥೆಯಲ್ಲಿ ಪ್ರಾರಂಭದಲ್ಲಿ ಕಾಣುವ ಕಾಗೆ ಗುಬ್ಬಚ್ಚಿಯರ ಸಂಭಾಷಣೆಯಲ್ಲಿ ಈ ಮಾತು ಸುಸ್ಪಷ್ಟವಾಗಿ ಕಂಡುಬರುತ್ತದೆ.

ಕಾಗೆ ಹೊರಗಿನಿಂದ-"ಗುಬ್ಬಕ್ಕಾ, ಗುಬ್ಬಕ್ಕಾ, ಬಾಗಿಲು ತೆರೆ" ಎಂದಿತು.

ಗುಬ್ಬಚ್ಚಿ ಒಳಗಿನಿಂದ—"ನಾನು ಮೋರೆ ತೊಳೆಯುತ್ತೇನೆ ಕಾಣೆ" ಎಂದಿತು.

ಕಾಗೆ—"ಗುಬ್ಬಕ್ಕಾ, ಗುಬ್ಬಕ್ಕಾ, ಬಾಗಿಲು ತೆರೆ."
ಗುಬ್ಬಚ್ಚಿ—"ನಾನು ಕಸಗುಡಿಸುತ್ತೇನೆ ಕಾಣೆ"
ಕಾಗೆ—"ಗುಬ್ಬಕ್ಕಾ, ಗುಬ್ಬಕ್ಕಾ, ಬಾಗಿಲು ತೆರೆ"
ಗುಬ್ಬಚ್ಚಿ—"ನಾನು ಸೆಗಣಿ ಬಳಿಯುತ್ತೇನೆ ಕಾಣೆ"
ಕಾಗೆ—"ಗುಬ್ಬಕ್ಕಾ, ಗುಬ್ಬಕ್ಕಾ, ಬಾಗಿಲು ತೆರೆ"
ಗುಬ್ಬಚ್ಚಿ—"ನಾನು ನೀರು ಸೇದುತ್ತೇನೆ ಕಾಣೆ"
ಕಾಗೆ—"ಗುಬ್ಬಕ್ಕಾ, ಗುಬ್ಬಕ್ಕಾ, ಬಾಗಿಲು ತೆರೆ"
ಗುಬ್ಬಚ್ಚಿ—"ನಾನು ಮುಸುರೆ ಬೆಳಗುತ್ತೇನೆ ಕಾಣೆ"
ಕಾಗೆ—"ಗುಬ್ಬಕ್ಕಾ, ಗುಬ್ಬಕ್ಕಾ, ಬಾಗಿಲು ತೆರೆ"
ಗುಬ್ಬಚ್ಚಿ—"ನಾನು ಸ್ನಾನ ಮಾಡುತ್ತೇನೆ ಕಾಣೆ"

ಹೀಗೆ ಒಂದೇ ರೀತಿಯಾದ ವಾಕ್ಯಗಳಿಂದ ವಿಷಯವನ್ನು ಬೇಕೆಂದೇ ಉದ್ದುದ್ದ ಬೆಳೆಸಿಕೊಂಡು ಸಂಭಾಷಣೆ ಮುಂದೆ ಸಾಗುತ್ತದೆ. ಸಂಭಾಷಣೆ ಮುಂದೆ ಮುಂದೆ ಸಾಗಿದಂತೆ

ಓದುವ ಕಂದನ ಕುತೂಹಲ ಕೆರಳುತ್ತಾ ಹೋಗುತ್ತದೆ. ಮುಂದೇನಾಗುತ್ತದೆ, ಮುಂದೇನಾಗುತ್ತದೆ ಎಂದು ತಿಳಿದು ಕೊಳ್ಳಲು ಕಂದ ಆತುರಪಡುತ್ತಾನಲ್ಲದೆ ಸಂಭಾಷಣೆಯೂ ವಿಷಯವೂ ಉದ್ದುದ್ದ ಬೆಳೆದುಕೊಂಡು ಹೋಗುವುದರಿಂದ ಬೇಸರಗೊಳ್ಳುವುದಿಲ್ಲ. ಇದು ಮಕ್ಕಳ ಕತೆಗಾರಿಕೆಯ ಒಂದು ಮರ್ಮ.

ಚಿಕ್ಕ ಮಕ್ಕಳಿಗೆ ಮನುಷ್ಯ ಜೀವನದಲ್ಲಿರುವುದಕ್ಕಿಂತ ಲೂ ಪ್ರಾಣಿ ಜೀವನದಲ್ಲಿ ಅಭಿರುಚಿ ಹೆಚ್ಚು. ಈ ಮರ್ಮ ವನ್ನು ನಮ್ಮ ಪ್ರಾಚೀನ ಕವಿಗಳೂ ಕಂಡುಕೊಂಡಿದ್ದರು. ಪಂಚತಂತ್ರ ಹಿತೋಪದೇಶಗಳೇ ಇದಕ್ಕೆ ಸಾಕ್ಷಿ. ನಮ್ಮ ಕವಿಶಿಷ್ಯರು ಈ ಮರ್ಮವನ್ನು ಚೆನ್ನಾಗಿ ತಿಳಿದಿದ್ದರು. ಮಕ್ಕಳ ಮನಸ್ಸಿಗೆ ಮನುಷ್ಯಜೀವನ ತುಂಬಾ ಗಹನವಾಗಿ ಕಾಣುತ್ತದೆ; ನೀರಸವೆನಿಸುತ್ತದೆ.ಅದು ಅವರ ಮನಸ್ಸನ್ನು ಸೆಳೆಯಲಾರದು; ಅವರ ಎಳೆಯ ಮನಸ್ಸಿಗೆ ಮನುಷ್ಯಜೀವನ ಎಟಕಲಾರದು. ಪ್ರಾಣಿಗಳ ಕೂಗು, ಅವುಗಳ ಚಲನವಲನ, ಹೋರಾಟ ನೆಗೆ ದಾಟ, ಹಾರಾಟ ಕುಣಿದಾಟ ಮುಂತಾದುವನ್ನು ನೋಡುವು ದೆಂದರೆ ಕೇಳುವುದೆಂದರೆ ಮಕ್ಕಳಿಗೆ ಆತುರಅಲ್ಲದೆ ಮೆಚ್ಚುಗೆ. ಆದುದರಿಂದಲೇ ಚಿಕ್ಕ ಮಕ್ಕಳು ಮನುಷ್ಯರ ಕತೆ ಕೇಳುವು ದಕ್ಕಿಂತಲೂ ಪ್ರಾಣಿಗಳ ಕತೆ ಕೇಳುವುದರಲ್ಲಿ ಹೇಳುವುದರಲ್ಲಿ ಅಧಿಕ ಅಭಿರುಚಿ ತೋರುತ್ತಾರೆ. ಮಕ್ಕಳ ಮನಸ್ಸಿಗೆ ಮೆಚ್ಚುಗೆ ಯಾಗುವಂತೆ ಪ್ರಾಣಿಜೀವನವನ್ನು ಕಥಾರೂಪದಲ್ಲಿ ಕವಿ ಶಿಷ್ಯರು ರಚಿಸಿದಷ್ಟು ಸೊಗಸಾಗಿ ಉತ್ತಮವಾಗಿ ಈ ವರೆಗೆ ಯಾರೂ ರಚಿಸಿದವರಿಲ್ಲವೆಂದರೂ ಹೆಚ್ಚಾಗಲಾರದು. "ಅಮ್ಮ ನನ್ನು ಹೇಗೆ ಕೂಗಬೇಕು!" ಎಂಬ ಕತೆಯಲ್ಲಿ ಕವಿಶಿಷ್ಯರು ಪ್ರಾಣಿಜೀವನ ಚಿತ್ರಿಸಿದ ಚಮತ್ಕಾರ ನೋಡಿರಿ. ಹಲವು ಪ್ರಾಣಿಗಳ ಕೂಗಿನ ಪರಿಚಯ ಮಗುವಿಗೆ ಹೇಗೆ ಮಾಡಿಸಿ ದ್ದಾರೆ ನೋಡಿರಿ. ಒಂದು ದನದ ಕರು ತನ್ನ ಅಮ್ಮನನ್ನು ಹುಡುಕುತ್ತಾ ಹೋಯಿತು. ಅದಕ್ಕೆ ದಾರಿಯಲ್ಲಿ ಬೆಕ್ಕು ಎದುರಾಯಿತು. ಕರು ಬೆಕ್ಕನ್ನು ಕಂಡು "ಬೆಕ್ಕೇ, ಬೆಕ್ಕೇ, ನನಗೆ ಅಮ್ಮನನ್ನು ಕರೆಯುವುದಕ್ಕೆ ಗೊತ್ತಿಲ್ಲ; ಅವಳನ್ನು ಹೇಗೆ ಕೂಗಬೇಕು?" ಎಂದು ಕೇಳಿತು. ಅದಕ್ಕೆ ಬೆಕ್ಕು "'ಮಿಯಾಂ, ಮಿಯಾಂ'ಎನ್ನು" ಎಂದು ಹೇಳಿತು. ಬೆಕ್ಕಿನ ಹಾಗೆಯೇ ಕರು 'ಮಿಯಾಂ, ಮಿಯಾಂ' ಎಂದು ಕೂಗಿತು. ಆದರೆ ಅದರ ಅಮ್ಮ ಓಗೊಳ್ಳಲಿಲ್ಲ; ಬರಲೂ ಇಲ್ಲ. ಕರು ಮುಂದೆ ಹೋಯಿತು. ಅಲ್ಲೊಂದು ನಾಯಿ ಸಿಕ್ಕಿತು. ಕರು ನಾಯೊಡನೆ "ಅಮ್ಮನನ್ನು ಹೇಗೆ ಕೂಗಬೇಕು?" ಎಂದು ಕೇಳಿತು. ನಾಯಿ "ಬೌ ಬೌ ಬೌ" ಎಂದು ಕೂಗಬೇಕೆಂದು ಹೇಳಿಕೊಟ್ಟಿತು. ಕರು ನಾಯಿ ಹೇಳಿದಂತೆ ಕೂಗಿದರೂ ಅದ ರಮ್ಮ ಬರಲಿಲ್ಲ. ಮತ್ತೆ ಅದು ಕುದುರೆಯ ಬಳಿ ಹೋಯಿತು. ಕುದುರೆ ಕರುವಿಗೆ "ಹೀ ಹೀ ಹೀ" ಎಂದು ಅಮ್ಮನನ್ನು ಕೂಗ ಬೇಕೆಂದು ಹೇಳಿಕೊಟ್ಟಿತು. ಕರು ಹಾಗೆ ಕೂಗಿದರೂ ಅಮ್ಮ ಬರಲಿಲ್ಲ. ಮತ್ತೆ ಕರುವಿಗೆ ಆಡು ಸಿಕ್ಕಿತು. ಅದು "ಮೇ ಮೇ" ಎಂದು ಅಮ್ಮನನ್ನು ಕೂಗಲು ಹೇಳಿಕೊಟ್ಟಿತು. ಮುಂದೆ ಹಂದಿ, ಕೋಣ, ಕಪ್ಪೆ, ಹಾವು, ಎಲ್ಲಾ ಕರುವಿಗೆ ಎದುರಾದುವು. ಎಲ್ಲವೂ ತಂತಮ್ಮ ಭಾಷೆಗಳಲ್ಲಿ ಅಮ್ಮನನ್ನು ಕೂಗುವ ರೀತಿ ಯನ್ನು ಹೇಳಿಕೊಟ್ಟುವು. ಕರು ಅವೆಲ್ಲಾ ಹೇಳಿಕೊಟ್ಟಂತೆ ಕೂಗಿದರೂ ಅದರಮ್ಮ ಬರಲಿಲ್ಲ. ಕಡೆಗೆ ಎತ್ತುಸಿಕ್ಕಿತು.ಅದು "ಅಂಬಾ ಅಂಬಾ" ಎಂದು ಕೂಗಲು ಹೇಳಿತು. ಕರು "ಅಂಬಾ ಅಂಬಾ" ಕೂಗಿದಾಗ ಅದರಮ್ಮ ಬಂದೇ ಬಂತು

ಎಷ್ಟೊಂದು ಮಾರ್ಮಿಕವಾಗಿದೆ ಈ ಕತೆ! ಒಂದು ಕತೆ ಯಿಂದ ಇಷ್ಟೆಲ್ಲಾ ಪ್ರಾಣಿಗಳು ಹೇಗೆ ಕೂಗುತ್ತವೆ ಎಂಬು ದರ ಸಾಮಾನ್ಯ ಜ್ಞಾನವೂ ಮಗುವಿಗುಂಟಾಗುತ್ತದೆ;ಕತೆಯೂ ಆಗುತ್ತದೆ. ಈ ಕತೆಯಲ್ಲಿ ಕವಿಶಿಷ್ಯರು ಎರಡೆರಡು ಕಾರ್ಯ ಗಳನ್ನು ಸಾಧಿಸಿ ಕೊಂಡಿದ್ದಾರೆ.

ಪ್ರಾಣಿ ಜೀವನದಲ್ಲಾಗಲೀ ಮನುಷ್ಯಜೀವನದಲ್ಲಾ ಗಲೀ ಕ್ರೂರವಾದ ಮೃಗಗಳನ್ನೂ, ಮೋಸಗಾರ ಪ್ರಾಣಿ ಗಳನ್ನೂ, ಹಾಗೆಯೇ ದುರ್ಜನರನ್ನೂ ಮಕ್ಕಳು ಮೆಚ್ಚು ವುದಿಲ್ಲ. ಸಾಧು ಪ್ರಾಣಿಗಳಾದ ಆಡು ಕುರಿ ದನ ಮೊದಲಾ ದುವುಗಳ ಮೇಲೆ ಸ್ವಾಭಾವಿಕವಾಗಿ ಮಕ್ಕಳ ಮಮತೆ ಹೆಚ್ಚು. ಸಿಂಹ ಹುಲಿ ನರಿ ಮೊದಲಾದ ಕ್ರೂರ ಮೋಸಗಾರ ಜಂತು ಗಳಮೇಲೂ, ದುಷ್ಟ ಮನುಷ್ಯರ ಮೇಲೂ ಅವರಿಗೆ ಮಮತೆ ಮೂಡಲಾರದು. ಆದುದರಿಂದ ಮಕ್ಕಳಿಗಾಗಿ ರಚಿತವಾಗುವ ಕತೆಗಳು ಯಾವಾಗಲೂ ಸಾಧು ಸಜ್ಜನರ ಗೆಲವಿನಿಂದ— ಅವರಿಗೆಸುಖಾಂತವಾಗಿ-ಕೊನೆಗೊಳ್ಳುವಂತಿರಬೇಕು.ಅಲ್ಲದೆ ಸಾಧು ಪ್ರಾಣಿಗಳಿಗಾಗಲೀ, ಒಳ್ಳೆಯ ಮನುಷ್ಯರಿಗಾಗಲೀ ಸೋಲು ಕೆಡುಕು ಬರುವಂತಹ ಕತೆಗಳಾಗಿರ ಕೂಡದು. ಮೇಲೆ ಮಕ್ಕಳ ಮನಸ್ಸುಶುಭ್ರವಾದಬಿಳಿಬಟ್ಟೆಯಂತೆ;ಅದಕ್ಕೆ ಕಲೆ ಅಂಟಿಕೊಳ್ಳುವುದು ಬಲುಬೇಗನೆ. ಎಂದರೆ ಮಕ್ಕಳ ಮನಸ್ಸಿನ ಮೇಲೆ ಉಂಟಾಗುವ ಬೇಸರ ಜುಗುಪ್ಸೆ ಹೆದರಿಕೆ ಮುಂತಾದ ಭಾವಗಳು ಬಲುಕೆಡುಕಾದ ಪರಿಣಾಮವನ್ನೇ ಉಂಟುಮಾಡುತ್ತವೆ. ಈ ಮರ್ಮವನ್ನರಿತ ಕವಿಶಿಷ್ಯರು ತಮ್ಮ ಕತೆಗಳನ್ನೆಲ್ಲ ಸಾಧುಸಜ್ಜನರ ಗೆಲವಿನಿಂದಲೇ—ಅವರಿಗೆ ಸುಖಾಂತವಾಗಿಯೇ——ಕೊನೆಗೊಳಿಸುತ್ತಾರೆ. ಅದರಿಂದ ಮಕ್ಕಳ ಮನಸ್ಸಿಗೆ ತೃಪ್ತಿಎಂಬುದು ಅವರಿಗೆ ಗೊತ್ತು. ಉದಾ ಹರಣೆಗಾಗಿ ಕವಿಶಿಷ್ಯರ "ಗುಡು ಗುಡು ಗುಮ್ಮಟ ದೇವರ"ನ್ನು ನೋಡುವ. ನರಿ ಹದ್ದು ಮೊದಲಾದ ಮೋಸಗಾರ ಕ್ರೂರ ಮೃಗಗಳಿಂದ ತಪ್ಪಿಸಿ ಕೊಳ್ಳುವುದಕ್ಕಾಗಿ ಆಡಿನ ಮರಿ ಗುಡುಗುಡು ಗುಮ್ಮಟ ದೇವರಾಗುತ್ತದೆ. ಅದನ್ನು ನುಂಗಿ

ಬಿಡಬೇಕೆಂದು ನರಿ, ಹದ್ದು, ಹುಲಿ, ಸಿಂಹ ಎಲ್ಲವೂ ಕಡೆಗೆ ಮೋಸಹೋಗುತ್ತವೆ. ಅಜ್ಜಿ ಮನೆಯಲ್ಲಿ ತಿಂದುಂಡು ಪುಷ್ಟಿಯಾದ ಆಡಿನ ಮರಿ ಡೋಲಿನೊಳಗೆ ಕುಳಿತು ಗುಡುಗುಡು ಗುಮ್ಮಟದೇವರಾಗಿ ಉರುಳಾಡುತ್ತಾ ತಾನು ಮೊದಲು ಮಾತು ಕೊಟ್ಟ ಕ್ರೂರ ಮೃಗಗಳಿಂದ ದಾರಿ ಬಿಡಿಸಿಕೊಂಡು ಅಮ್ಮನ ಬಳಿ ಸೇರಿತು. ಈ ಕತೆಯಲ್ಲಿ ಮಗುವಿನ ಮೆಚ್ಚುಗೆ ಪಡೆದ ಆಡಿನ ಮರಿ ಎಲ್ಲಾದರೂ ಯಾವುದಾದರೂ ಪ್ರಾಣಿಯ ಬಾಯಿಗೆ ತುತ್ತಾಗುತ್ತಿದ್ದರೆ ಕತೆ ಓದುವ ಮಗುವಿಗೆ ತುಂಬಾ ಮರುಕವಾಗುತಿತ್ತು. ಇಲ್ಲಿ ಆಡಿನ ಮರಿಯ ಗೆಲವೆಂದರೆ ಕತೆ ಓದುವ ಕಂದನ ಗೆಲವೇ ಆಗಿದೆ. ಆಡಿನ ಮರಿಯ ಬುದ್ಧಿವಂತಿಕೆ ಕಂಡ ಮಗು ಅದನ್ನು ತುಂಬಾ ಮೆಚ್ಚುತ್ತಾನೆ; ತನ್ನದಾಗಿಸಿಕೊಳ್ಳುತ್ತಾನೆ. ಆದುದರಿಂದಲೇ ಮರಿಯ ಗೆಲವು ಅವನಿಗೆ ಅಷ್ಟೊಂದು ಹರ್ಷವುಂಟುಮಾಡುತ್ತದೆ. ಮಕ್ಕಳ ಕತೆಗಳು ತುಂಬಾ ಸುಖಾಂತವಾಗಿರಬೇಕೆಂಬ ತತ್ವ ಇಲ್ಲಿ ಅಡಕವಾಗಿದೆ.

ಇನ್ನು ತಮ್ಮ ಮಕ್ಕಳ ಕತೆಗಳಲ್ಲಿ ಕವಿಶಿಷ್ಯರು ಬಣ್ಣಿಸಿದ ಬಣ್ಣನೆಗಳೋ ಅವೂ ತುಂಬಾ ಅಪೂರ್ವವಾದವುಗಳೇ ಆಗಿವೆ. ಆ ಬಣ್ಣನೆಗಳು ಓದುವ ಮಗುವಿನ ಮನಸ್ಸಿಗೆ ತುಸುವಾದರೂ ಬೇಸರ ತಾರದೆ ಹುರುಪು ಹುಟ್ಟಿಸುತ್ತವೆ. "ಕೊಕ್ಕೊಕ್ಕೋ ಕೋಳಿ" ಎಂಬ ಕತೆಯಲ್ಲಿ ಭೈರವರಸು ಮಗ ಗುಮ್ಮಟ ಬೆಟ್ಟಕ್ಕೆ ಹೋಗುವ ವೈಭವ ನೋಡಿರಿ—

"ಅರಸು ಮಗನು ಗುಮ್ಮಟ ಬೆಟ್ಟಕ್ಕೆ ಹೋಗುವಾಗ ಕೊಂಬು ಇತ್ತು, ಕಹಳೆ ಇತ್ತು; ವಾದ್ಯ ಇತ್ತು; ವಾಲಗ ಇತ್ತು; ಛತ್ರ ಇತ್ತು, ಚಾಮರ ಇತ್ತು; ಬಾವುಟ ಇತ್ತು, ದೀವಟಿ ಇತ್ತು, ಕನ್ನಡಿ ಇತ್ತು, ಕಲಶ ಇತ್ತು; ದೊಡ್ಡ ದಂಡಿಗೆ ಇತ್ತು, ಅಡ್ಡ ಪಲ್ಲಕಿ ಇತ್ತು."

ಈ ಬಣ್ಣನೆ ಎಷ್ಟೊಂದು ಸೊಗಸು! ಪದಗಳೂ ವಾಕ್ಯಗಳೂ ಎಷ್ಟೊಂದು ಅಚ್ಚುಕಟ್ಟಾಗಿ ಹೆಣೆದು ಬಂದಿವೆ!

ಇನ್ನೀಗ ಕವಿಶಿಷ್ಯರು ತುಸು ದೊಡ್ಡ ಮಕ್ಕಳಿಗಾಗಿ ರಚಿಸಿದ ದೊಡ್ಡಮಕ್ಕಳ ಕತೆಗಳಲ್ಲಿ ಒಂದೆರಡನ್ನು ನೋಡುವ. ಈ ಕತೆಗಳ ಕಥಾವಸ್ತು, ಶೈಲಿ, ಭಾಷೆ, ಭಾವ ಎಲ್ಲವೂ ಮಕ್ಕಳ ಹರಿಯಕ್ಕೆ, ತುಸು ಬೆಳೆದ ಮನಸ್ಸಿಗೆ ತಕ್ಕಂತೆ ಬಿಗುವಾಗಿಯೆ ಇವೆ. ಆಲಿಬಾಬನ ತತೆ, ಏಕ್ ರೋಜ್ ಕಾ ಕಲೀಫ್, ಅಜ್ಜಿಸಾಕಿದ ಮಗು, ಅಗೋಳಿ ಮಂಜಣ, ಕೋಟಿಚೆನ್ನಯ ಮೊದಲಾದುವುಗಳು ತುಸು ದೊಡ್ಡ ಮಕ್ಕಳಿಗಾಗಿ ರಚಿತವಾದ ನೀಳ್ಗತೆಗಳಾಗಿವೆ. ಈ ಕತೆಗಳಲ್ಲಿ ಕವಿಶಿಷ್ಯರ ಕತೆಗಾರಿಕೆಯ ಗಾರುಡಿಗತನ ಓದುಗರನ್ನು ಮರುಳುಗೊಳಿಸುತ್ತವೆ; ತಲೆದೂಗಿಸುತ್ತವೆ. ಹಾಸ್ಯ ಅದ್ಭುತ ವೀರ ರಸಗಳಿಂದ ತುಂಬಿದ ಈ ಕತೆಗಳು ಮಕ್ಕಳಲ್ಲಿ ಓದುಗಾರಿಕೆಯ ಅಭಿರುಚಿ ಹೆಚ್ಚಿಸುತ್ತವೆ.

"ಅಗೋಳಿ ಮಂಜಣ" ಎಂಬುದು ಇಂತಹ ದೊಡ್ಡ ಮಕ್ಕಳ ಕತೆಗಳಲ್ಲಿ ಹೆಸರಾದುದು. ಕತೆಯ ಭಾಷೆ ನಾಣ್ಣುಡಿಗಳಿಂದಲೂ, ನುಡಿಗಟ್ಟುಗಳಿಂದಲೂ ಹೆಣೆದುಕೊಂಡು ಸೊಗಸಾಗಿ ಎಡೆತಡೆ ಇಲ್ಲದೆ ಹರಿಯುತ್ತದೆ. ಬಲಭೀಮನಾದ ಆಗೋಳಿ ಮಂಜಣನ ಸಾಹಸಗಳು ಈ ಕತೆಯಲ್ಲಿ ಬುಡದಿಂದ ತುದಿಯವರೆಗೆ ವರ್ಣಿತವಾಗಿವೆ. ಮಂಜಣನನ್ನು ಕವಿಶಿಷ್ಯರು ಎಷ್ಟೊಂದು ಸೊಗಸಾಗಿ ಕನ್ನಡದ ಮಕ್ಕಳಿಗೆ ಪರಿಚಯಮಾಡಿ ಕೊಟ್ಟಿದ್ದಾರೆ ನೋಡಿರಿ—

"ಮಂಜಣ ಸೆಟ್ಟಿ ಒಂದು ಸರ್ತಿಗೆ ಎಂಟು ಮಂದಿ ಹುಡುಗರು ಊಟಮಾಡುವಷ್ಟು ಅನ್ನವನ್ನು ಊಟಮಾಡುವನು. ಕೂತಲ್ಲಿಂದ ಏಳುವುದರೊಳಗೆ ಮೂರು ದೊಡ್ಡ ಹಲಸಿನ ಹಣ್ಣುಗಳನ್ನು ಒಬ್ಬನೇ ತಿಂದು ಬಿಡುವನು. ಸುಲಿಯದ ಐವತ್ತು ಬಾಳೆ ಹಣ್ಣುಗಳನ್ನು ಒಬ್ಬನೇ ನುಂಗಿ ಬಿಡುವನು. ಸೀಯಾಳ ಕುಡಿಯಲಿಕ್ಕೆ ತೊಡಗಿದನೆಂದರೆ ಒಂದು ಬಾರಿಗೆ ನೂರು ಎಳನೀರು ಕುಡಿಯುವನು. ಅವನಿಗೆ ಒಪ್ಪೊತ್ತು ಊಟಕ್ಕೆ ಒಂದು ಚೆರಿಗೆ ಅನ್ನ ಎಂದು ಲೆಕ್ಕ. ಈ ಕಾರಣದಿಂದ ಅವನನ್ನು 'ಅಗೋಳಿ ಮಂಜಣ' ಎನ್ನುತಿದ್ದರು. 'ಅಗೋಳಿ' ಎಂದರೆ ತುಳುವಿನಲ್ಲಿ ದೊಡ್ಡ ಚೆರಿಗೆ ಎಂದರ್ಥ. ಇವನ ಊಟವನ್ನು ಕಂಡವರು "ಅಬ್ಬಬ್ಬ! ಇವನು ಯಾರಪ್ಪಾ! ಕಂಡರೆ ಮಾಣಿ! ಉಂಡರೆ ಗೋಣಿ!" ಎನ್ನುತ್ತಿದ್ದರು."

ಕವಿಶಿಷ್ಯರ ಭಾಷೆಯಲ್ಲಿ ನುಡಿಗಟ್ಟುಗಳಿಗೂ ನಾಣ್ಣುಡಿಗಳಿಗೂ ವಿಶೇಷವಾದ ಸ್ಥಾನವಿದೆ. ಅವರು ಅವನ್ನು ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸಬಲ್ಲರು. ಹಾಗೆಂದು ನಾಣ್ಣುಡಿಗಳಿಂದಲೂ ಗಾದೆಗಳಿಂದಲೂ ತುಂಬಿಹೋಗಿ ಮಕ್ಕಳಿಂದ ಅರ್ಥಮಾಡಿಕೊಳ್ಳಲಾರದ ಭಾಷೆಯಲ್ಲ ಅದು. ಅಗೋಳಿ ಮಂಜಣನ ಕತೆ ಓದತೊಡಗಿದರೆ ಮುಗಿಸಿ ಬಿಡದೆ ಪುಸ್ತಕ ಕೆಳಗಿಡಲು ಕಿರಿಯರಿಗಾಗಲೀ ಹಿರಿಯರಿಗಾಗಲೀ ಮನಸ್ಸಾಗದು. ಅಷ್ಟೊಂದು ಸೊಗಸಾಗಿದೆ ಆ ಕತೆ.

ಈಗ ಕಡೆಯದಾಗಿ ಕವಿಶಿಷ್ಯರ ಬಾಲಸಾಹಿತ್ಯದಲ್ಲಿ ಎಲ್ಲಕ್ಕಿಂತಲೂ ಮೇಲಾದ ಕೃತಿಯೆನಿಸಿದ "ಕೋಟಿ ಚೆನ್ನಯ" ಹೇಗಿದೆಯೆಂದು ನೋಡುವ. ಕೋಟಿ ಚೆನ್ನಯವೆಂದರೆ ಕವಿಶಿಷ್ಯರ ಬಾಲಸಾಹಿತ್ಯದ ಒರೆಗಲ್ಲೆಂದೇ ಹೇಳಬಹುದು. 'ಕೋಟಿ ಚೆನ್ನಯ'ದಂತಹ ಉತ್ಕೃಷ್ಟ ಕೃತಿ--ಮಕ್ಕಳಿಗಾಗಿ ಬರೆದ ನೀಳ್ಗತೆ—ಅರ್ಧ ಶತಮಾನದ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಇಂದಿನ ತನಕ ಬೇರೊಂದು ಹುಟ್ಟಲಿಲ್ಲವೆಂದೇ ಹೇಳಬಹುದು. 'ಕೋಟಿ ಚೆನ್ನಯ' ಬಂಗ ಚೌಟರೇ ಮೊದಲಾದ ತುಳು ನಾಡ ಪಾಳೆಯಗಾರರ ಕಾಲದ ವೀರ ಪುರುಷರಿಬ್ಬರ ಸಾಹಸದ ಚರಿತ್ರೆಯಾಗಿದೆ. ಆ ಕತೆಯ ಮುನ್ನುಡಿಯಲ್ಲಿ ಕವಿಶಿಷ್ಯರೇ ಹೇಳುವಂತೆ "ಮಳೆಗಾಲದ ಹಗಲು

ಹೊತ್ತಿನಲ್ಲಿ ತುಳುನಾಡ ಒಕ್ಕಲಿಗನು ನಾಟಿ ಕೆಲಸವನ್ನು ಮುಗಿಸಿ, ಹೊತ್ತು ಮುಳುಗುವುದರೊಳಗೆ ತನ್ನ ಹುಲ್ಲು ಮನೆಯನ್ನು ಸೇರಿಕೊಂಡು, ಬೇಗನೆ ಊಟಮಾಡಿ, ಜೊಯ್ಯೆಂದು ಹೊಯ್ಯುತ್ತಿರುವ ಕಾರ ತಿಂಗಳ ಮಳೆಯಿಂದ ರಾತ್ರಿಯ ಕತ್ತಲು ಭಯಂಕರವಾಗಿ ಕಾಣುತ್ತಿದ್ದಾಗ, ಮಿಣ ಮಿಣನೆ ಉರಿಯುವ ಬೆಳಕಿನ ಬಳಿಯಲ್ಲಿ ಕುಳಿತುಕೊಂಡು, ಆತನು ದುಡಿಯಿಂದ ತಾಳ ಹಾಕಿ ಬಾಯಿಯಿಂದ ರಾಗವೆತ್ತಿ ಹಾಡುವ ಪಾಡ್ದೊನೆ ಕೇಳಿ" ಈ ಕತೆಯನ್ನು ಬರೆದರು. ಹೀಗೆ ಕೋಟಿ ಚೆನ್ನಯರ ಮೂಲಕತೆಯನ್ನು ಅವರು ತುಳು ಪಾಡ್ದೊನೆಯಿಂದ ತೆಗೆದುಕೊಂಡರು. ಕೋಟಿ ಚೆನ್ನರೆಂಬ ವೀರ ಪುರುಷರು ಜಾತಿಯಲ್ಲಿ ಬಿಲ್ಲವರು; 'ಮುರ್ತೆ ಮಾಡುವವರು.' ಇವರು ಹುಟ್ಟಿ ಬಾಳಿ ಅಳಿದುದು ದಕ್ಷಿಣ ಕನ್ನಡದ ಪುತ್ತೂರು ತಾಲೂಕಿನಲ್ಲಿ. ಇಂದಿಗೂ ತುಳುನಾಡ ತುಳು ಜನರು ತಮ್ಮ ನಾಡಿನ ವೀರ ಪುರುಷರಾದ ಕೋಟಿ ಚೆನ್ನಯರನ್ನು 'ಭೂತ'ದ ರೂಪದಲ್ಲಿ ಆರಾಧಿಸುತ್ತಾರೆ. ತುಳುನಾಡಿನಲ್ಲಿ ಗ್ರಾಮಕ್ಕೆ ಒಂದರಂತೆ ಭೂತ ಇದೆ. ಆ ಭೂತದ ಸಲುವಾಗಿ ವರ್ಷಕ್ಕೊಂದು ಜಾತ್ರೆ ನಡೆಯುತ್ತದೆ. ಜಾತ್ರೆಯಲ್ಲಿ ಭೂತದ ವೇಷವನ್ನು ಧರಿಸಿಕೊಂಡು ಆವೇಶದಿಂದ ಕುಣಿಯುವ ಪ್ರತ್ಯೇಕ ಜಾತಿಯ ಜನರಿದ್ದಾರೆ. ಭೂತವು ಮೈತುಂಬಿ ಬರುವವರೆಗೂ ವೇಷಗಾರನು (ಭೂತ ಕಟ್ಟುವವನು) ಎರಡು ಮೂರು ತಾಸುಗಳ ತನಕ ಒಂದೇ ತೆರನಾಗಿ ತುಳು ಹಾಡುಗಳನ್ನು (ಪಾಡ್ದೊನೆ) ಏರು ಸ್ವರದಿಂದ ಹೇಳುವನು. ಇದಕ್ಕೆ 'ಭೂತದ ಸಂಧಿ'ಎಂದೇ ತುಳುನಾಡಿನಲ್ಲಿ ಹೇಳುವರು. ಆಯಾ ಭೂತದ ಚರಿತ್ರೆಯು ಆಯಾ ಭೂತದ ಸಂಧಿಯಲ್ಲಿ ಬಹುಮಟ್ಟಿಗೆ ಅಡಕವಾಗಿದೆ. 'ಕೋಟಿ ಚೆನ್ನಯ' ಎಂಬ ಭೂತಗಳ ಸಂಧಿಯನ್ನು ಅನುಸರಿಸಿ ಈ ಕತೆ ರಚಿತವಾಗಿದೆ. ಕವಿಶಿಷ್ಯರ ಲೇಖನಿಯಿಂದ ಹರಿದು ಬಂದು ಕನ್ನಡ ಸಾಹಿತ್ಯದಲ್ಲಿ ಎಂದೆಂದಿಗೂ ಅಚ್ಚಳಿಯದೆ ಉಳಿಯುವಂತಾಗಿದೆ.

ತುಳು ನಾಡಿನ ಒಂದೊಂದು ಭಾಗವನ್ನು ಚೌಟರು ಬಂಗರು ಅಜಿಲರು ಮೊದಲಾದ ಪಾಳೆಯಗಾರರು ಆಳುತ್ತಿದ್ದ ಕಾಲ. ಈ ಪಾಳೆಯಗಾರರ ಕೈಕೆಳಗಿನ ಒಂದೊಂದು ಸೀಮೆಯ ಅಧಿಕಾರಿಯನ್ನು ಬಲ್ಲಾಳನೆಂದು ಕರೆಯುತ್ತಿದ್ದರು. ಈಗಿನ ಪುತ್ತೂರು ತಾಲೂಕಿಗೆ ಸೇರಿದ ಪಡುಮಲೆ, ಪಂಜ, ಎಣ್ಮೂರು ಎಂಬ ಸೀಮೆಗಳಲ್ಲಿ ಒಬ್ಬೊಬ್ಬ ಬಲ್ಲಾಳರು ಆಳುತ್ತಿದ್ದರು. ಕೋಟಿ ಚೆನ್ನಯರೆಂಬ ಬಿಲ್ಲವರು ಪಡುಮಲೆ ಸೀಮೆಯಲ್ಲಿ ಹುಟ್ಟಿ ಬೆಳೆದು, ಅಲ್ಲಿನ ಬಲ್ಲಾಳನ ವೈರ ಕಟ್ಟಿಕೊಂಡು ಪಡುಮಲೆ ಸೀಮೆಯನ್ನು ಸೇರಿದರು. ಅಲ್ಲಿಯೂ ಬಲ್ಲಾಳನು ಕುಹಕಿಗಳ ಮಾತಿಗೊಳಗಾಗಿ ಆ ವೀರರನ್ನು ಬಂಧಿಸಿದಾಗ ಅವರು ಬಂಧನದಿಂದ ಪಾರಾಗಿ ಎಣ್ಮೂರು ರಾಜ್ಯವನ್ನು ಸೇರುವರು. ಈ ಮೂವರು ಬಲ್ಲಾಳರೊಳಗೆ ಕೋಟಿ ಚೆನ್ನಯರಿಂದಾಗಿಯೇ ಪರಸ್ಪರ ವೈರ ಬೆಳೆದು, ಪಡುಮಲೆ ಮತ್ತು ಪಂಜದ ಬಲ್ಲಾಳರು ಎಣ್ಮೂರು ಬಲ್ಲಾಳನ ಮೇಲೆ ದಂಡೆತ್ತಿ ಬಂದು ಕಾಳಗ ನಡೆಯುವುದು. ಈ ಮೊದಲು ಈ ಮೂರು ಸೀಮೆಗಳಲ್ಲಿಯೂ ಅನೇಕ ವೀರ ಕೃತ್ಯಗಳನ್ನೆಸಗಿದ ಕೋಟಿ ಚೆನ್ನಯರು ಎಣ್ಮೂರು ಬಲ್ಲಾಳನ ಕಡೆಯಿಂದ ಕಾದಾಡಿ ಕಾಯಬಿಟ್ಟು ಕೈಲಾಸಕ್ಕೆ ಸಲ್ಲುವರು. ಇದೇ 'ಕೋಟಿ ಚೆನ್ನಯ'ವೆಂಬ ನೀಳ್ಗತೆಯ ಕಥಾವಸ್ತು. ಈಗ ಈ ಉತ್ತಮ ನೀಳ್ಗತೆಯಲ್ಲಿ ಕತೆಗಾರಿಕೆ, ಭಾಷಾಶೈಲಿ, ರಸಭಾವ ಮುಂತಾದುವು ಹೇಗೆ ಪರಿಪುಷ್ಟವಾಗಿ ಹೊನಲಿನಂತೆ ಹರಿಯುತ್ತಿದೆ ಎಂಬುದನ್ನು ನೋಡುವ. ಕತೆಯ ಕೆಲವು ಭಾಗಗಳನ್ನಷ್ಟೆ ಪರಿಶೀಲಿಸಿದೆ. ಅದರ ಸ್ವಾರಸ್ಯ ತಿಳಿಯಬಹುದು.

ಬೇಟೆಗೆ ಹೋದ ಪೆರುಮಾಳ ಬಲ್ಲಾಳನಿಗೆ ಕಾಲಿಗೆ ಮುಳ್ಳು ತಾಗಿ ಉಂಟಾದ ಬವಣೆಯ ಬಣ್ಣನೆ ಕವಿಶಿಷ್ಯರ ಲೇಖನಿಯಿಂದ ಹೇಗೆ ಹರಿದಿದೆ ನೋಡಿರಿ-"ಮುಳ್ಳು ಕೀಳುವವರು ಬೇಗನೆ ಬಂದು ನೋಡಿದ್ದಾಯಿತು. ಮಂತ್ರ ಹಾಕುವವರು ಹಾಕಿದ್ದಾಯಿತು. ಮದ್ದು ಕೊಡುವವರು ಕೊಟ್ಟಿದ್ದಾಯಿತು. ಬೊಮ್ಮಯ್ಯ ಬಲ್ಲಾಳನ ಬಲಿಯಾಯಿತು; ಅಮ್ಮಣ್ಣ ಬೈದ್ಯನ ಮದ್ದಾಯಿತು. ಆದರೆ ತಾನೇ ಏನು? ಬಲ್ಲಾಳನಿಗೆ ದಿನದಿಂದ ದಿನಕ್ಕೆ ಉರಿ ನೋವು, ಬೀಗು ಬಾವು, ಕೆಂಪು ಕೀವು ಹೆಚ್ಚು ಹೆಚ್ಚಾಯಿತು. ಅನ್ನದಲ್ಲಿ ರುಚಿಯಿಲ್ಲ; ಬಾಯಲ್ಲಿ ರುಚಿಯಿಲ್ಲ; ಹಾಸಿಗೆಯಲ್ಲಿ ಸೌಖ್ಯವಿಲ್ಲ. ಅಂತು ಮನದ ಗೆಲುವಾಗಲೀ, ಇರುಳ ನಿದ್ದೆಯಾಗಲೀ ಯಾವುದೊಂದೂ ಇಲ್ಲದೆ ನೋವಿನಿಂದ ನರಳಿದ ಬಲ್ಲಾಳ ಕಡ್ಡಿಯಂತೆ ಕಂಗಾಲಾದನು." ಈ ಬಣ್ಣನೆ ಎಷ್ಟೊಂದು ಸೊಗಸಾಗಿ ಸ್ವಾಭಾವಿಕವಾಗಿ ಹರಿದಿದೆ!

'ಕೋಟಿ ಚೆನ್ನಯ'ದಲ್ಲಿ ತುಳುನಾಡ ಸಂಸ್ಕೃತಿ, ಅಲ್ಲಿನ ಜೀವನ ಸೌಂದರ್ಯ ಬುಡದಿಂದ ತುದಿಯ ತನಕವೂ ಹೊಳೆ ಹೊಳೆಯಾಗಿ ಹರಿದಿದೆ. ಕತೆಯಲ್ಲಿ ಕಂಡುಬರುವ ಮುದ್ದು ಮಾಟ, ಕಂಬಳ, ಬಲ್ಲಾಳರ ಬೀಡು, ಬೇಟೆ, ಅರವಟ್ಟಿಗೆ ಕಟ್ಟೆ, ಕಾಳಗ, ಪೂಜೆ ಪುನಸ್ಕಾರ ಮುಂತಾದುವುಗಳಲ್ಲಿ ತುಳುನಾಡಿನ ಜನಜೀವನದ ಸುಂದರ ಸುಸ್ಪಷ್ಟ ಚಿತ್ರ ಕಣ್ಣಿಗೆ ಕಟ್ಟುತ್ತದೆ. ಕವಿಶಿಷ್ಯರ ಲೇಖನಿಯಿಂದ ಹರಿದು ಬಂದ ಒಂದು ಬೇಟೆಯ ಬಣ್ಣನೆ ನೋಡುವ-"ಬೇಟೆಗಾರರು ಬಹಳ ಹೊತ್ತಿನ ತನಕ ಕಾಡು ಎಬ್ಬಿದರೂ ಬೂದುಗಣ್ಣಿನ ಮೊಲ, ಪಚ್ಚೆಕಾಲಿನ ಜಿಂಕೆ, ಕೊಬ್ಬಿದ ಹಂದಿ, ಕುಟುರುವ ಕುಡುಮುಲು ಹಕ್ಕಿ, ಯಾವುದೊಂದೂ ಏಳಲಿಲ್ಲ. ತರುವಾಯ ಅವರು ಬಲ್ಲೆ ಇದ್ದಲ್ಲಿ ಕಲ್ಲು,ಕಂಡಿ ಇದ್ದಲ್ಲಿ ಜನ,ಮೈದಾನು ಇದ್ದಲ್ಲಿ ನಾಯಿ-

ಹೀಗೆ ಮೇಳಯಿಸಿಕೊಂಡು ಕಾಡಿಗೆ ಮುತ್ತಿಗೆ ಹಾಕಿದರು. ಸುಮಾರು ಎರಡು ತಾಸುಗಳ ವರೆಗೆ ಸುಮ್ಮನೆ ಕಾದುನಿಂತರು. ಯಾವುದೊಂದಾದರೂ ನೆಲದ ಮೇಲೆ ಓಡಿದಂತೆ, ಇಲ್ಲವೆ ಮರದ ಮೇಲೆ ಹತ್ತಿದಂತೆ, ಇಲ್ಲವೆ ಆಕಾಶದಲ್ಲಿ ಹಾರಿದಂತೆ ತೋರಲಿಲ್ಲ."

ಹೀಗೆಯೇ 'ಕೋಟಿ ಚೆನ್ನಯ'ದಲ್ಲಿ ಬರುವ ಪ್ರತಿಯೊಂದು ವರ್ಣನೆ ಕಥಾ ಪ್ರಸಂಗ, ಸಂಭಾಷಣೆ, ಎಲ್ಲವೂ ಅಷ್ಟೊಂದು ಅಚ್ಚುಕಟ್ಟಾಗಿ ಸೊಗಸಾಗಿ ಸಾಗಿವೆ. ನಾಣ್ಣುಡಿ ನುಡಿಗಟ್ಟುಗಳಿಗಂತೂ ಕವಿಶಿಷ್ಯರ ಈ ಕೃತಿ ತುಂಬಾ ಹೆಸರಾದುದು. ಇದರಲ್ಲಿ ಕಂಡು ಬರುವ ಹಲವಾರು ನುಡಿಗಟ್ಟುಗಳು ತುಳುನಾಡಿನಲ್ಲಿ ಮಾತ್ರ ಬಳಕೆಯಲ್ಲಿದ್ದು, ಹೊರಗಿನವರಿಗೆ ಅರ್ಥಮಾಡಿಕೊಳ್ಳಲು ತುಸು ಕಷ್ಟವಾಗಬಹುದು. ಆ ನುಡಿಗಳಲ್ಲಿ-ನಾಣ್ಣುಡಿಗಳಲ್ಲಿ ತುಳುವರ ಸಂಸ್ಕೃತಿ ಅಡಕವಾಗಿದೆ. ಅವುಗಳಲ್ಲಿ ಕೆಲವನ್ನು ಪರಿಶೀಲಿಸಿದರೆ ಅವು ಹೇಗೆ ತುಳುವರ ಸಂಸ್ಕೃತಿಯ ಗರ್ಭಗಳಾಗಿವೆ ಎಂಬುದನ್ನು ತಿಳಿಯಬಹುದು. ದೃಷ್ಟಾಂತಕ್ಕಾಗಿ ಕೆಲವು ನುಡಿಗಟ್ಟುಗಳನ್ನೂ, ನಾಣ್ಣುಡಿಗಳನ್ನೂ ನೋಡುವ—"ನಿಮ್ಮ ತೊಂಡು ತೊಳಸು ನಮಗೆ ಎಂದಿಗೂ ತಪ್ಪದು." "ಕಾಡಿನ ಕಾಸರ್ಕನ ಮರಕ್ಕೆ ಅಡ್ಡ ಬಿದ್ದರೆ ಹಣ್ಣೆಲೆ ಉದುರುತ್ತಿತ್ತು." "ಏಣಿಲ ಕಾಲದ ಉಪ್ಪನ್ನ, ಸುಗ್ಗಿಯ ಕಾಲದ ಮಳೆ ಬೆಳೆ." "ತಲೆಗೆ ಹೊಯ್ದು ನೀರು ಕಾಲಿಗೆ ಇಳಿಯುತ್ತದೆ." "ಜೀವ ಹೋಕು ಬರ್ಕೆ ಎಂಬಂತಾಯಿತಂತೆ." "ನೀರು ಸೋಕಿದರೆ ಬಿಸಿ,ಗಾಳಿ ಹಾಕಿದರೆ ಉರಿ." "ಅರಸನ ಕಿವಿಗೆ ತರಳೆ ಹಾಳು; ಬಾಗಿಲ ಕಿವಿಗೆ ಒರಲೆ ಹಾಳು" "ಉಂಡ ಉಣಿಸು ಪಿತ್ತವಾಗಿದೆ;ಕುಡಿದ ನೀರು ಕುತ್ತವಾಗಿದೆ." "ದಂಡಿಯು ಕತ್ತಿನಲ್ಲಿ ಕಟ್ಟಲ್ಪಟ್ಟು ಹಗೆಯ ಹಾದಿಯಲ್ಲಿ ಹೋಗಲರಿಯದ ಹೋರಿ." "ನೀತಿಯಲ್ಲಿ ನೂಲು ಹಾಕಿದವರು." "ಕೆಸರು ಗದ್ದೆಯ ಕಂಬ." "ಬಿತ್ತಿದ ಗದ್ದೆಗೆ ತೆವರಿ ಗಟ್ಟಿಯಿರಬೇಕು." "ಒಂದೇ ಹಟ್ಟಿಯಲ್ಲಿ ಹೋರಿದ ಹೋರಿಗಳು." "ಕಿಚ್ಚಿನ ಕಿಡಿ ಎಂದು ಗೊತ್ತಿದ್ದು ಕಚ್ಚೆಯಲ್ಲಿ ಕಟ್ಟಿಕೊಳ್ಳುವುದೇಕೆ?" "ಹೆಂಗಸರಿಗೆ ಮುಂಕುಬೂದಿ, ಗಂಡಸರಿಗೆ ಅರುಳು ಮರುಳು."

ಇನ್ನು ಈ ಕತೆಯಲ್ಲಿ ಕಂಡು ಬರುವ ಕೆಲವು ಪದಗಳನ್ನು ನೋಡುವ. ಅವೂ ತುಳುನಾಡುಗರಿಗೆ ಮಾತ್ರ ಅರ್ಥವಾಗುವವಲ್ಲದೆ ಬೇರೆಯವರಿಗೆ ತುಸು ತೊಡಕೆನಿಸಬಹುದು. ಗದ್ದೆಗೋರು, ಚಾಳಿಸು, ಎಸಳು ಬುಗಡಿ, ಎಣ್ಣೆ ಓಲೆ, ಮುಳ್ಳಿನ ಕೊಪ್ಪು, ಅರೆ, ಕೆಂದಾಳೆ, ಏಣಿಲ ಬೆಳೆ, ಅಡ್ಕ, ಹೊಡೆ, ಮುರ್ತೆ, ಗುಜ್ಜುತಡಮೆ, ಜೋಮು, ಸುಟ್ಟವು, ದೋಟಿ, ಸೆಣಕಲು, ದಂಡಿ, ತಳಿಗೆ, ಅಂಡೆ, ಕುಡಿತೆ, ಕೊಟ್ಟಾರಿ, ಆಯನ, ತರಲೆ, ಬಲಕಾಯಿಸು ಈ ಮೊದಲಾದ ತುಳುನಾಡುಗರಿಗೆ ಮಾತ್ರ ಪರಿಚಿತವಾದ ಮಾತುಗಳನ್ನು ಕವಿಶಿಷ್ಯರು ಸಂದರ್ಭಾನುಸಾರವಾಗಿ ಬೇಕೆಂದೇ ಉಪಯೋಗಿಸಿದ್ದಾರೆ. ಇವುಗಳ ಬದಲಾಗಿ ಬೇರೆ ಪದಗಳನ್ನು ಬಳಸಿದರೆ ಅಲ್ಲಿ ನಿಜವಾಗಿ ಬರಬೇಕಾದ ಅರ್ಥ ಬರಲಾರದು. ಒಟ್ಟಿನಲ್ಲಿ ಹೇಳುವುದಾದರೆ ಕವಿಶಿಷ್ಯರ ಈ ಕೃತಿ ತೌಳವ ಸಂಸ್ಕೃತಿಯ ಭಂಡಾರವೇ ಆಗಿದೆ ಎನ್ನಬಹುದು.

ವೀರ ಅದ್ಭುತ ಕರುಣಾ ರಸಗಳಿಂದ ತುಂಬಿದ ಈ ನೀಳ್ಗತೆ ವಿಷಾದಾಂತವಾಗಿ ಕೊನೆಗೊಳ್ಳುತ್ತದೆ; ತುಳುನಾಡ ಬೀರ ಕುವರರ ಸಾವಿನಿಂದ ತುದಿಮುಟ್ಟುತ್ತದೆ. ಕೋಟಿ ಚೆನ್ನಯರ ಕಡೆಗಾಲ ಕಾಣುವಾಗ ಕಂಬನಿಮಿಡಿಯದ ಓದುಗ ನಿರಲಾರ; ಅವರ ವೀರ ಶೌರ್ಯ ಸಾಹಸ ಧೈರ್ಯಗಳಿಗಾಗಿ ಅಭಿಮಾನ ಪಡದವನಿರಲಾರ. ಓದುಗರ ಮನಸ್ಸಿನಲ್ಲಿ ನಾಡಿನ ಹಿತಕ್ಕಾಗಿ ಕಾದಾಡಿ ಕಾಯ ಬಿಟ್ಟು ಕೈಲಾಸಕ್ಕೆ ಸಂದ ಈ ವೀರ ಪುರುಷನ ನೆನಹು ಅಚ್ಚಳಿಯದೆ ಉಳಿಯುವಂತೆ ಮಾಡಿದ ಕವಿಶಿಷ್ಯರ ಲೇಖನಿಯೇ ಧನ್ಯ!

ಇಲ್ಲಿಗೆ ಸಾಮಾನ್ಯವಾಗಿ ಕವಿಶಿಷ್ಯರ ಬಾಲಸಾಹಿತ್ಯದ ಸಿಂಹಾವಲೋಕನವಾಯಿತು. ಇಷ್ಟರಿಂದಲೇ ಅವರ ಬಾಲಸಾಹಿತ್ಯ ಕೃತಿಗಳು ಎಷ್ಟೊಂದು ಅಮೂಲ್ಯವಾಗಿವೆ, ಎಂಬುದನ್ನು ಕಂಡುಕೊಳ್ಳಬಹುದು. ಇಂದಿನ ಬಾಲಸಾಹಿತ್ಯವನ್ನು ನೋಡುವಾಗ ಅರ್ಧ ಶತಮಾನಗಳ ಹಿಂದೆ ಕವಿಶಿಷ್ಯರು ಅಡಿಗಲ್ಲು ಹಾಕಿದ ಬಾಲಸಾಹಿತ್ಯದ ಅದೇ ಮಟ್ಟದಲ್ಲಿ ಅದು ಮುಂದುವರಿದು ಸಾಗಿಲ್ಲವೆಂಬುದು ಸ್ಪಷ್ಟವಾಗಿ ತೋರಿಬರುತ್ತದೆ. ನಮ್ಮ ಆಧುನಿಕ ಕನ್ನಡ ಸಾಹಿತ್ಯದ ಆ ಪ್ರಾರಂಭಿಕ ಕಾಲದಲ್ಲಿ ಕವಿಶಿಷ್ಯರಿಂದ ಸೃಷ್ಟಿಯಾದಂತಹ ಉತ್ಕೃಷ್ಟ ಕೃತಿಗಳು ಮತ್ತೆ ಯಾವೊಬ್ಬ ಲೇಖಕನ ಲೇಖನಿಯಿಂದಲೂ ಹರಿದು ಬರಲಿಲ್ಲವೆಂದು ಹೇಳಲು ವಿಷಾದವೆನಿಸುತ್ತದೆ. ಮಕ್ಕಳ ನಿಜವಾದ ಮನೋವಿಜ್ಞಾನವನ್ನರಿಯದಿರುವುದು, ಮಕ್ಕಳ ಮನಕ್ಕೆ ಮೆಚ್ಚುಗೆಯಾಗುವಂತೆ ಕತೆ ಹೇಳುವ ಚಮತ್ಕಾರದ ಅಭಾವ, ಮಕ್ಕಳಿಗನುಗುಣವಾದ ಭಾಷಾಶೈಲಿಗಳಲ್ಲಿ ಸರಿಯಾದ ಹಿಡಿತವಿಲ್ಲದಿರುವುದು ಮೊದಲಾದ ಕುಂದು ಕೊರತೆಗಳೇ ಕವಿಶಿಷ್ಯರ ಕೃತಿಗಳಿಗೆ ಸರಿದೂಗುವಂತಹ ಬಾಲ ಕೃತಿಗಳು ಸೃಷ್ಟಿಯಾಗದಿರಲು ಮುಖ್ಯ ಕಾರಣಗಳಾಗಿವೆ. ಕವಿಶಿಷ್ಯರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನನುಸರಿಸಿ, ಅವರ ಆದರ್ಶದಲ್ಲಿ ಮುಂದುವರಿದರೆ ಇಂದಿನ ಬಾಲಸಾಹಿತ್ಯ ರಚಕರು ತಮ್ಮ ಕಾರ್ಯದಲ್ಲಿ ಸಫಲರಾಗುವರೆಂಬುದರಲ್ಲಿ ಸಂಶಯವಿಲ್ಲ.